ಶ್ರೀಮನ್ನಿಜಗುಣ ಶಿವಯೋಗಿಗಳಿಂದ ವಿರಚಿತ

# ಅನುಭವಸಾರ

ಶ್ರೀ ಸದ್ಗುರು ಸಿದ್ಧಾರೂಢ ಸ್ವಾಮಿಗಳ ಶಿಷ್ಯರಾದ
ಶ್ರೀ ಶಿವಪುತ್ರ ಸ್ವಾಮಿಗಳಿಂದ ಟೀಕಾ ತಾತ್ಪರ್ಯ
ಬರೆಯಲ್ಪಟ್ಟಿದೆ.

೧೯೫೩

ಮುದ್ರಣ:
ಆದರ್ಶ ಮುದ್ರಣ
ಮ್ಯು.ಮು.ನಂ. ೪೧೩೪, ಕಿಲ್ಲೆ, ಹುಬ್ಬಳ್ಳಿ

ಮುದ್ರಕರು :
ಶಂ. ಬಾ. ಮನಗೋಳಿ
ಹುಬ್ಬಳ್ಳಿ



ಮೊದಲನೆಯ ಮುದ್ರಣ ೨೦೦೦ ಪ್ರತಿಗಳು.


ಪ್ರಕಾಶನ ಸ್ಥಳ :
ಶಾಂತಾಶ್ರಮ, (ಸಿದ್ಧಾಶ್ರಮದ ಹತ್ತರ)
ಹುಬ್ಬಳ್ಳಿ

ಲೇಖಕರು ಮತ್ತು ಪ್ರಕಾಶಕರು :
ಶ್ರೀ ಶಿವಪುತ್ರಸ್ವಾಮಿ
ಹುಬ್ಬಳ್ಳಿ




# ಮುನ್ನುಡಿ

ಶ್ರೀ ಶಂಭುವೇ ಶಂಭುಲಿಂಗನ ಬೆಟ್ಟದಲ್ಲಿ ಶ್ರೀಮನ್ನಿಜಗುಣ ಶಿವಯೋಗಿ ನಾಮದಿಂದವತರಿಸಿ, ಕರ್ನಾಟಕ ದೇಶದ ಮುಮುಕ್ಷುಗಳನ್ನು ಉದ್ಧರಿಸುವದಕ್ಕಾಗಿ ಬಂದಿರುವನೆಂದು ಹೇಳಿದರೆ ಅತಿಶಯೋಕ್ತಿಯಾಗದು. ಯಾಕೆಂದರೆ, ವೇದಾಗಮಗಳನ್ನು ಬಲ್ಲ ಸರ್ವಜ್ಞ ಮೂರ್ತಿಗಳೇ ಇವರು. ಪರಮ ದಯಾಳುಗಳಾದ್ದರಿಂದ ಆರು ಗ್ರಂಥಗಳನ್ನು ರಚಿಸಿ, ಕನ್ನಡ ದೇಶದ ಮುಮುಕ್ಷುಗಳಿಗೆ ಉಪದೇಶವನ್ನು ಮಾಡಿದ್ದರಿಂದ ಮಹದುಪಕಾರಿಗಳಾಗಿರುವರು. ಇದರಿಂದ (ಪ ೧-೮) ಅನಿಮಿತ್ತ ಬಾಂಧವನೆಂದು ನುಡಿದದ್ದು ನಿಜವಿರುತ್ತದೆ.

ಮತ್ತು ಅನುಭವಸಾರದ ೧-೨-೧೬ ಪದ್ಯದಲ್ಲಿ 'ಪರಾತ್ಪರವಪ್ಪಚಿತ್ತು ತನ್ನಿರವೆಂದು ನಿಜವನರಿದ ನಿಜಗುಣಯೋಗಿ, ಹೀಗೆ ಹೇಳಿದ್ದರಿಂದ ತಮ್ಮ ಅದ್ವೈತ ಸ್ವಸ್ವರೂಪದ ಧೃಡಾಪರೋಕ್ಷ ಜ್ಞಾನವನ್ನು ತಮ್ಮ ಮುಖದಿಂದಲೇ ನುಡಿದಿರುವರು. ಆದರಿಂದ ನಿಜಗುಣರ ನಿಶ್ಚಯ ಜ್ಞಾನ ಬೇರೆಯಿತ್ತೆಂದು ಉಹಾಪೋಹಮಾಡಲಿಕ್ಕೆ ಅವಕಾಶವಿಲ್ಲ. ಇಂಥಾ ಮಹಾನುಭಾವರಾದ ಶ್ರೀ ಮನ್ನಿಜಗುಣರು ಸುಮಾರು ಕ್ರಿ|| (೧೫೦೦)ರಲ್ಲಿ ಇರಬಹುದೆಂದು ಅನೇಕ ವಿದ್ವಾಂಸರ ಅಭಿಪ್ರಾಯವಿರುತ್ತದೆ.

ಇಂಥಾ ಸುಜ್ಞಾನಿ ಮಹಾಪುರುಷರಿಂದ ರಚಿತವಾದ ಈ ಅನುಭವಸಾರ ಗ್ರಂಥವು, ಮುಮುಕ್ಷುಗಳ ಸಂಶಯಗಳನ್ನು ಕಳೆದು, ನಿಶ್ಚಯವಾದ ಸ್ವಸ್ವರೂಪ ಜ್ಞಾನವನ್ನುಂಟು ಮಾಡುತ್ತದೆ. 'ಶಂಭು ತಾನೊಪ್ಪಿ ಸಂತರಿಂಪಾಡಿಸುತಮಿರ್ಕೆ', ಎಂದು ಗ್ರಂಥದ ಅಂತ್ಯದಲ್ಲಿ ಹೇಳಿರುವರು.

ಈ ಗ್ರಂಥಕ್ಕೆ ಅನುಭವಸಾರವೆಂಬ ನಾಮವು ಅನ್ವರ್ಥಕವುಳ್ಳದ್ದಿರುತ್ತದೆ. ಯಾಕಂದರೆ, ಬ್ರಹ್ಮಸೂತ್ರ, ಗೀತಾ, ಉಪನಿಷತ್ತುಗಳೆಂಬ ಪ್ರಸ್ಥಾನತ್ರಯ ಶಾಂಕರಭಾಷ್ಯ ಅನೇಕ ಪ್ರಕರಣ ಗ್ರಂಥಗಳ ಸಾರವನ್ನು ಸಂಗ್ರಹಿಸಿರುವರಲ್ಲದೆ ತಮ್ಮ ಸ್ವಾನುಭವದಿಂದಲೂ ನುಡಿದಿರುವರು. ಆದರಿಂದ ಈ ಗ್ರಂಥವು ಸರ್ವೋತ್ಕೃಷ್ಟವಾಗಿರುವದು.

ಕನ್ನಡ ಭಾಷೆಯಲ್ಲಿ ಇಂಥಾ ವೇದಾಂತ ಗ್ರಂಥವನ್ನು ಹಿಂದೆ ಯಾರೂ ರಚಿಸಿಲ್ಲ. ಇತ್ತೀಚೆಗೆ ರಚಿಸಿದರೂ ಇದಕ್ಕೆ ಸರಿಬರವು. ವಟಬೀಜವು ಚಿಕ್ಕದಾದರೂ

ಮರವು ದೊಡ್ಡದಾಗಿರುವಂತೆ, ಈ ಗ್ರಂಥವು ಚಿಕ್ಕದಾದರೂ ಅರ್ಥದಿಂದ ಮಹತ್ತರವಾಗಿದೆ.

ಈ ಗ್ರಂಥವು ತ್ರಿವಿಡಿ ಛಂದೋಬದ್ಧ ಕವಿತಾ ರೂಪದಿಂದಿರುವದರಿಂದ ಕಠಿಣವೆನಿಸುತ್ತದೆ. ಅದು ಸುಗಮವಾಗಿ ತಿಳಿಯಬೇಕೆಂದು ೧೯೩೩ ರಲ್ಲಿ ಪದ ಪದಾರ್ಥ ಬರೆದು ಅಚ್ಚಾಗಿತ್ತು. ಆದರೆ, ಅನೇಕರು ಇದಕ್ಕೆ ತಾತ್ಪರ್ಯ ಬರೆಯಿರಿ. ಎಂದು ಆಗ್ರಹಪೂರ್ವಕ ತಿಳಿಸಿದರು. ಆದರೂ ಆ ಕಾರ್ಯವು ಕಾರಣಾಂತರಗಳಿಂದ ಆಗದೇ ಉಳಿಯಿತು. ಈಗ ೧೯೫೩ ರಲ್ಲಿ ಸಫಲವಾಗಿದೆ.

ಈ ಗ್ರಂಥದ ಪ್ರತಿಯೊಂದು ಪದ್ಯದ ಆರಂಭಕ್ಕೆ ಶಂಕೆಯನ್ನೆತ್ತಿ ಸಮಾಧಾನವನ್ನು ತೋರಿಸುತ್ತಾ ಪದ್ಯದಲ್ಲಿ ಹೇಳುವ ಅರ್ಥವನ್ನು ಸೂಚಿಸುತ್ತದೆ. ಪದ್ಯದಲ್ಲಿರುವ ತಾತ್ಪರ್ಯವನ್ನು ಹೇಳುವದಲ್ಲದೆ, ಮುಂದೆ ಬರಬಹುದಾದ ಶಂಕಾ ಸಮಾಧಾನಗಳನ್ನು ವಾರ್ತಿಕ ರೂಪದಿಂದ ವಿಸ್ತರಿಸಿದೆ. ಹಿಂದಿನ ಸಂಧಿ, ಸೂತ್ರಗಳ ಅರ್ಥವನ್ನು ಅನುವಾದ ಮಾಡಿ, ಮುಂದಿನ ಸಂಧಿ ಸೂತ್ರಗಳ ಸಾರಭೂತ ಅರ್ಥವನ್ನು ತೋರಿಸಿರುತ್ತದೆ. ಖ್ಯಾತಿಗಳ ಅರ್ಥವು ಹೊಳೆಯುವಂತೆ ಕೋಷ್ಟಕ ಬರೆಯಲ್ಪಟ್ಟಿದೆ. ಈ ಗ್ರಂಥದ ಯಾವತ್ತು ಶ್ರುತಿಗಳ ಅರ್ಥವು, ಶಾಂಕರ ಭಾಷ್ಯಾನುಸಾರ ಬರೆದು, ಶ್ರುತ್ಯರ್ಥ ಪ್ರಕಾಶಿಕೆ ಎಂಬ ಹೆಸರಿನಿಂದ ಗ್ರಂಥದ ಅಂತ್ಯದಲ್ಲಿ ಜೋಡಿಸಿದೆ. ಗ್ರಂಥದ ಪ್ರತಿಯೊಂದು ಸಂಧಿಯ ಸಾರವು ಮನಸ್ಸಿಗೆ ಹೊಳೆಯಬೇಕೆಂದು ಗ್ರಂಥದ ಮೊದಲಲ್ಲಿ ಇರಿಸಿದೆ.

ಆದ್ದರಿಂದ ಈ ಗ್ರಂಥದ ಪುಟಗಳು ೭೨೦ ಸಂಖ್ಯೆಯ ವರೆಗೆ ಹೋಗಿರುತ್ತವೆ ಪ್ರೂಫನ್ನು ತಿದ್ದುವಲ್ಲಿ ದೃಷ್ಟಿದೋಷದಿಂದ ತಪ್ಪುಗಳು ಇರಬಹುದು. ಅವುಗಳನ್ನು ವಾಚಕ ಮಹಾಶಯರು ತಿದ್ದಿಕೊಂಡು ಸರಿಪಡಿಸಬೇಕು.

ಈ ಗ್ರಂಥವು ಅತ್ಯಂತ ದುಃಖನಿವೃತ್ತಿ ಪೂರ್ವಕ ಪರಮಾನಂದ ಪ್ರಾಪ್ತಿ ಲಕ್ಷಣ ಮುಕ್ತಿ ಪ್ರಯೋಜನವುಳ್ಳದ್ದರಿಂದ, ಮುಮುಕ್ಷುಗಳಿಂದ ಸ್ವೀಕರಿಸಲಿಕ್ಕೆ ಯೋಗ್ಯವಾಗಿರುತ್ತದೆ. ಅತ್ಯಾದರದಿಂದ ನೋಡಿ ಹರ್ಷಿತರಾದರೆ, ಶ್ರಮವಹಿಸಿ ಬರೆದ ಪ್ರಯತ್ನವು ಸಫಲವಾಗುವದೆಂದು ನಂಬಿದ್ದೇವೆ.

ಶ್ರೀ ಶಿವಪುತ್ರಸ್ವಾಮಿ, ಶಾಂತಾಶ್ರಮ
(ಸಿದ್ಧಾಶ್ರಮದ ಹತ್ತರ), ಹುಬ್ಬಳ್ಳಿ

# ಅನುಭವಸಾರದ

## ವಿಷಯಾನುಕ್ರಮಣಿಕೆ

### ೧ ಮೊದಲನೆಯ ಸಂಧಿ



### ೨ ಎರಡನೆಯ ಸಂಧಿ



### ೩ ಮೂರನೆಯ ಸಂಧಿ



### ೪ ನಾಲ್ಕನೆಯ ಸಂಧಿ



### ೫ ಐದನೆಯ ಸಂಧಿ



### ೬ ಆರನೆಯ ಸಂಧಿ



### ೭ ಏಳನೆಯ ಸಂಧಿ



### ೮ ಎಂಟನೆಯ ಸಂಧಿ

ಈ ರೀತಿ ಸರ್ಪವಿದೇನೆಂದು ವಿಚಾರಮಾಡಲು ಹಗ್ಗವೇ ಆದಂತೆ, ಜಗತ್ತು ಏನೆಂದು ವಿಚಾರ ಮಾಡುತ್ತಿರಲಿಕ್ಕೆ ಬ್ರಹ್ಮವೇ ಇರುವದು. ಬ್ರಹ್ಮಸ್ವರೂಪದ ಜ್ಞಾನವಾಗುವ ವರೆಗೆ ಜಗತ್ತು ಸತ್ಯದಂತೆ ತೋರುತ್ತದೆ. ವಿಚಾರ ಮಾಡಿದ ಮೇಲೆ ತೋರಲಾರದು.

## ಎರಡನೆಯ ಸಂಧಿ, ಜೀವೇಶ್ವರ ವಿಚಾರ

ಅರಿವೊಂದ ರೊಳಗೊಂದು ಪರಿಯಾಗಿ ಜೀವೇಶ।
ರರಿದಾಗಿ ತೋರುತಿಹರಿಂತು ಪಾಧಿಯನು।
ತೊರೆ ಚಿತ್ತು ವೊಂದೆಯವಿಕಾರಿ ||೨||

ಒಂದೇ ಅಖಂಡವಾದ ಚಿದ್ರೂಪು. ಮಾಯೋಪಾಧಿಯಿಂದ ಸರ್ವಜ್ಞತ್ವಾದಿ ಗುಣಗಳಿಂದ ಕೂಡಿಕೊಂಡು **ಈಶ್ವರನೆಂದೂ,** ಅಹಂಕಾರೋಪಾಧಿಯಿಂದ ಕಿಂಚಿಜ್ಞತ್ವಾದಿ ಗುಣಗಳಿಂದ ಕೂಡಿಕೊಂಡು ಜೀವನೆಂದೂ ತೋರುತ್ತಿರುವದು. ಈ ಜೀವನು ತನ್ನ ಕರ್ಮಫಲದ ಸುಖ ದುಃಖಗಳನ್ನು ಉಣ್ಣುವದಕ್ಕಾಗಿ, ತೋರುವ ಭೂತ ಭೌತಿಕವೇ **ಜಗತ್ತಾಗಿರುವದು.** ನೀರು ತುಂಬಿದ ಕೊಡದಲ್ಲಿ, ಅಲ್ಲಿರುವ ಘಟಾವಚ್ಛಿನ್ನ ಆಕಾಶ ಮತ್ತು ಜಲದಲ್ಲಿ ಪ್ರತಿಬಿಂಬಿಸಿರುವ ಆಕಾಶ ಹೇಗೆ ಎರಡು ಆಕಾಶಗಳಿರುವವೋ; ಹಾಗೇ ಅಂತಃಕರಣ ಸಮೇತವಾದ ಈ ದೇಹದಲ್ಲಿ ಜೀವೇಶ್ವರರು ಇಬ್ಬರು ಇರುವರು. ಬಿಂಬನಾದ ಈಶ್ವರನೂ ಪ್ರತಿಬಿಂಬನಾದ ಜೀವನೂ ಇಬ್ಬರೂ ಇರುವರೆಂಬ ಭಾವವು. ಸರೋವರದಲ್ಲಿ ಆಕಾಶದ ಪ್ರತಿಬಿಂಬದಂತೆ ನಿರಾಕಾರಕ್ಕೆ ಪ್ರತಿಬಿಂಬವು ಸಂಭವಿಸುವದು. ಈ ಹೃದಯ ಕಮಲದಲ್ಲಿರುವ ಜೀವೇಶ್ವರರಿಬ್ಬರಲ್ಲಿ, ಜೀವನು ತನ್ನ ಕರ್ಮಫಲ ಸುಖದುಃಖಗಳನ್ನು ಭೋಗಿಸುತ್ತಾನೆ. ಈಶ್ವರನು ತಾನು ಉಪಭೋಗಿಸದೆ, ಜೀವನಿಗೆ ಕರ್ಮ ಫಲಗಳನ್ನು ಕೊಡುತ್ತಾನೆ. ಜೀವನು ಕರ್ಮವಶದಿಂದ ಕಮಲದ ಎಂಟು ದಳಗಳಲ್ಲಿ ಸಂಚರಿಸಲು ಭಕ್ತಿ ಮೊದಲಾದ ಎಂಟು ಗುಣಗಳೂ ಪ್ರಾಪ್ತಗಳಾಗುತ್ತವೆ. ಆಗ್ಯೆ ಜೀವನು ವಿಶ್ವನೆಂದು ಹೇಳಿಸಿಕೊಂಡು ಜಾಗ್ರದವಸ್ಥೆಯುಳ್ಳವನಾಗುತ್ತಾನೆ. ಆಗ್ಯೆ ಈಶನು ಹರಿರೂಪದಿಂದ ಪ್ರೇರಿಸುತ್ತಾನೆ. ಹೀಗೆ ಆ ಕಮಲದ ಕೇಸರಂಗಳಿಗೆ ಬರಲು ಸಪ್ನ; ಮೂಲಕ್ಕಿಳಿಯಲು ಸುಪ್ತಿ ಅವಸ್ಥೆಗಳು ಬರುತ್ತವೆ. ಅಲ್ಲಲ್ಲಿ ಆಯಾಯ ಹೆಸರುಗಳಿಂದ ಬೇರೆ ಬೇರೆ ದೇಹಸಾಧನ ವಿಷಯಗಳನ್ನು ಉಪಭೋಗಿಸುತ್ತಾನೆ. ಬ್ರಹ್ಮ ವಿಷ್ಣು ರುದ್ರರೂಪಿನಿಂದ ಈಶನು ಪ್ರೇರಿಸುತ್ತಾನೆ.

ಜೀವೇಶರಿಬ್ಬರು ಒಂದೇ ಅಖಂಡ ಚಿದ್ರೂಪರಾಗಿರುವರು. ಹೀಗಿದ್ದು ಒಬ್ಬನಲ್ಲಿ ಪ್ರೇರ್ಯ ಪ್ರೇರಕತ್ವವು ಸಂಭವಿಸಲಾರದು. ಅಂದರೆ, ಏನು ದೋಷವಿಲ್ಲ.

ಹೇಗಂದರೆ– ಒಬ್ಬ ಸೂರ್ಯನು ತನ್ನ ಅನೇಕ ಪ್ರತಿಬಿಂಬಗಳನ್ನು ಪ್ರೇರಿಸಿದಂತೆ ಸಂಭವಿಸುವದು.

ಮತ್ತು ಲೋಕಾದಿಗಳನ್ನುಂಟು ಮಾಡಿ, ಅವುಗಳನ್ನು ರಕ್ಷಿಸಿ, ಪುನಃ ತನ್ನಲ್ಲಿಯೇ ಲಯವನ್ನು ಮಾಡಿಕೊಳ್ಳುತ್ತಿರುವನು. ಹೇಗಂದರೆ, ಜಾಲಕ್ಕೆ ಜೇಡಹುಳದಂತೆ, ನಖ ಕೇಶಾದಿಗಳಿಗೆ ದೇವದತ್ತನಂತೆ, ನವಗುಣಗಳಿಗೆ ಜೀವನಂತೆ, ಪರಮಾತ್ಮನು ಲೋಕಕ್ಕೆ ಅಭಿನ್ನ ನಿಮಿತ್ತೋಪಾದಾನವಾಗಿರುವನು. ಆದರೂ ಈಶನಿಗೆ ವಿಕಾರವಿಲ್ಲ. ಸನ್ನಿಧಾನ ಸತ್ತೆಯಿಂದ ಸೃಷ್ಟಿಯಾಗುವುದು. ಅಥವಾ ಒಬ್ಬ ಸೂರ್ಯನೇ ತನ್ನ ಕಿರಣಗಳಿಂದ ಮಳೆಗಳನ್ನು ಸುರಿಸಿ, ಆ ನೀರಿನಲ್ಲಿ ಪ್ರತಿಬಿಂಬದಿಂದ ಸೇರಿ, ಪ್ರೇರ್ಯಪ್ರೇರಕನಾಗಿದ್ದರೂ ನಿರ್ವಿಕಾರಿಯಾಗಿರುವಂತೆ; ಈಶ್ವರನು ಮಾಯೆಯಿಂದ ಸೃಷ್ಟಿಮಾಡಿ, ಆದರಲ್ಲಿ ಜೀವರೂಪದಿಂದ ಹೊಕ್ಕು ಪ್ರೇರ್ಯಪ್ರೇರಕನಾದರೂ ಅವಿಕಾರಿಯಾಗಿರುವನು. ಆದ್ದರಿಂದ ಈಶ್ವರನಲ್ಲಿ ಇಚ್ಛಾಪೂರ್ವಕವಾಗಲಿ ಕರಣ ಮೂಲಕವಾಗಲಿ ಸೃಷ್ಟಿಯನ್ನು ಹೇಳಬಾರದು. ಹೇಳಿದರೆ; ಅನೇಕ ಪರಂಪರಾ ಅನರ್ಥಗಳು ಬರುತ್ತವೆ. ಸೂರ್ಯೋದಯವಾಗಲು ಕಮಲವರಳುವದೂ ನೈದಿಲೆಯು ಮುಗಿಯುವದೂ ಅನೇಕ ವಿರುದ್ಧ ಕಾರ್ಯಗಳಾಗುವಂತೆ; ಈಶನ ಸನ್ನಿಧಾನಸತ್ತೆಯಿಂದ ಸೃಷ್ಟಿಯು ಒಂದೇ ವಿಧವಾಗದೆ ಅನೇಕ ವಿಧವಾಗಿಯೂ ಆಗುತ್ತದೆ. ಆದ್ದರಿಂದಲೇ ಈಶನು ಅವಿಕಾರಿಯಿದ್ದಂತೆ. ಜೀವನಾದರೂ ಅವಿಕಾರಿಯಾಗಿರುವನು. ಜೀವನು ವಿಕಾರಿಯಂತೆ ಕಾಣುವದು ಉಪಾಧಿಧರ್ಮವೇ ಹೊರತು ಸಹಜವಲ್ಲ. ಹೇಗಂದರೆ; ಸುಡುವ ಕನ್ನಡಿಯಲ್ಲಿದ್ದ ಮುಖವು ಸುಟ್ಟಂತೆ ಕಂಡರೂ, ನಿಜಮುಖವು ಹೇಗೆ ಸುಟ್ಟಿಲ್ಲವೋ; ಮೋಡಗಳು ಓಡಿದರೆ ಚಂದ್ರನು ಓಡಿದನೆಂಬಂತೆ ಕಂಡರೂ, ಹೇಗೆ ಓಡುವದಿಲ್ಲವೋ, ಉಗಿಬಂಡಿ ಓಡಿಹೋಗಲು ಗಿಡಗುಡ್ಡಗಳು ಓಡಿ ಹೋಗುತ್ತವೆಂಬಂತೆ ಕಂಡರೂ ಹೇಗೆ ಗಮನವಿಲ್ಲವೋ, ಹಾಗೆ ಜೀವನಿಗೆ ವಿಕಾರಗಳು ಆದಂತೆ ಕಂಡರೂ ನಿಜವಲ್ಲ. ಕಿಂತು, ಆರೋಪವಾಗಿರುತ್ತವೆ. ಯಥಾರ್ಥವಲ್ಲ. ಆದ್ದರಿಂದ ಜೀವ ಮತ್ತು ಶಿವ ಇವರಿಬ್ಬರು ಅವಿಕಾರಿಗಳಾದ್ದರಿಂದ ಇಬ್ಬರಿಗೂ ಐಕ್ಯವು ಸಂಭವಿಸುತ್ತದೆ. ಈ ರೀತಿ ಜಗತ್ತು ಜೀವೇಶ್ವರಾದಿಗಳನ್ನು ವಿಚಾರಿಸಿ, ಜಗತ್ತು ಜೀವ, ಈಶ್ವರ ಇವರನ್ನು ಬೇರೆ ಬೇರೆಯಾಗಿ ತಿಳಿಯುವನು ಕನಿಷ್ಠನು. ಅವಿದ್ಯೆಯಿಂದಾಗಲಿ ಈಶ್ವರನಿಂದಾಗಲಿ ಸೃಷ್ಟಿಯಾಗಿರುವುದೆಂದು ತಿಳಿಯುವವನು ಮಧ್ಯಮನು. ಎಲ್ಲವೂ ತಾನೆಂದು ತಿಳಿಯುವವನು ಉತ್ತಮನಾಗಿರುವನು.

---

## ಮೂರನೆಯ ಸಂಧಿ, ಭೇದನಿವಾರಣ

**ಭೇದವೆಂಬುದನೆಂತು ವಾದಿಸಲು ಕಾಣೆಸದು**
**ವಾದವಿನ್ನೇಕೆ ಪರಿಪೂರ್ಣ ಬೊಮ್ಮನನೆ।**
**ಸಾದರದಿ ಕಂಡು ಸುಖಿಯಾಗು**

ಒಬ್ಬಾತ್ಮನೇ ಇರುವನೆಂಬುದು ಯಥಾರ್ಥವು. ಇದು ಸಿದ್ಧಾಂತ ಪಕ್ಷವು. ಭೋಗಗಳಿಂದ ಬೇರೆ ಬೇರೆಯಾಗಿ ಅನೇಕಾತ್ಮರು ಪ್ರತ್ಯಕ್ಷವಾಗಿ ಕಾಣುವರು ಎಂಬುದು ಪೂರ್ವಪಕ್ಷವು. ಯಾಕಂದರೆ, ಒಬ್ಬನಿಗೆ ಉಣ್ಣುವ ಇಚ್ಛೆ, ಸಾಕೆಂಬ ಇಚ್ಛೆ ಮತ್ತೊಬ್ಬನಿಗೆ, ಒಬ್ಬನಿಗೆ ಜನನ, ಒಬ್ಬನಿಗೆ ಮರಣ, ಹೀಗೆ ಭಿನ್ನ ಭಿನ್ನ ಆತ್ಮರು ತೋರುವರು. ಒಬ್ಬಾತ್ಮನಿದ್ದರೆ ಹರಿಯು ಎಲ್ಲ ಗೋಪಿಯರ ಮನೆಯಲ್ಲಿದ್ದಂತೆ ಒಬ್ಬನಿಗಾದ ಸುಖ ಅಥವಾ ದುಃಖ ಜನನ ಮರಣಾದಿಗಳು ಎಲ್ಲರಿಗೂ ಆಗುತ್ತಿರಬೇಕು. ಹಾಗೆ ಇಲ್ಲ. ಆದ್ದರಿಂದ ಅನೇಕಾತ್ಮರೆಂದು ಹೇಳಬಹುದು ಆದರೆ ? ಅನೇಕಾತ್ಮಪಕ್ಷವೂ ಸಂಭವಿಸುವದಿಲ್ಲ. ಯಾಕಂದರೆ, ಹಲವಾತ್ಮರು ಪರಿಚ್ಛಿನ್ನರು ಅನಿತ್ಯರಂದರೆ ಪುರುಷಾರ್ಥ ಹಾನಿಯಾಗುತ್ತದೆ. ಆದ್ದರಿಂದ ನಿತ್ಯರೆಂದು ಹೇಳಬೇಕು. ನಿತ್ಯರಂದರೆ ಪೂರ್ಣರಿರುವರೆಂದು ಒಪ್ಪಲೇಬೇಕು. ಎಲ್ಲರೂ ಕೂಡಿ ಒಂದು ದೇಹದೊಳಗಿರುವುದರಿಂದ ಯಾವ ಆತ್ಮನು ಯಾವ ಭೋಗವನ್ನು ಉಪಭೋಗಿಸುವನೆಂದು ಕೇಳಿದರೆ, ಹೇಳಲಿಕ್ಕೆ ಬರುವದಿಲ್ಲ. ಸುಕೃತ ಅಭಿಮಾನ, ನಿಯತಿ ಮೊದಲಾದವುಗಳಿಂದ ವಿಭಾಗಿಸಲಿಕ್ಕೆ ಹೋದರೆ, ಅವು ಎಲ್ಲರಲ್ಲಿಯೂ ಸಮಾನಗಳಾಗಿರುವವು. ಆದ್ದರಿಂದ ಅನೇಕಾತ್ಮರೆಂಬ ಪಕ್ಷದಲ್ಲಿಯೂ ಭೋಗದ ವ್ಯವಸ್ಥೆಯಾಗಲಿಲ್ಲ. ಹೀಗೆ ಏಕಾನೇಕ ಎರಡೂ ಪಕ್ಷಗಳಲ್ಲಿಯೂ ಭೋಗದ ಅವ್ಯವಸ್ಥೆಯಾದ್ದರಿಂದ, ಎರಡೂ ಮತಗಳು ಸಮಾನವಾದವು. ಅಂದರೆ ಅಲ್ಲ. ಯಾಕಂದರೆ, ಸ್ವರೂಪತಃ ಒಬ್ಬಾತ್ಮನಿದ್ದು ಬುದ್ಧಿಗಳ ಉಪಾಧಿಗಳಿಂದ ಅನೇಕಾತ್ಮರನ್ನು ಹೇಳುವದರಿಂದ ಭೋಗದ ವ್ಯವಸ್ಥೆಯು ಏಕಾತ್ಮ ಪಕ್ಷದಲ್ಲಿ ಸಂಭವಿಸುತ್ತದೆ. ಹೇಗಂದರೆ- ಒಬ್ಬ ಸೂರ್ಯನೇ ಸ್ವಚ್ಛಾಸ್ವಚ್ಛ ಜಲಗಳಲ್ಲಿ ಪ್ರತಿಬಿಂಬಿಸಿ ಅನೇಕನಾದಂತೆ, ಸೂರ್ಯನ ಪ್ರಕಾಶ ಅನೇಕ ವರ್ಣದ ರತ್ನಗಳೊಡನೆ ಬೆರೆತು ಅನೇಕ ಬಣ್ಣವಾದಂತೆ, ಒಬ್ಬಾತ್ಮನೇ ಉಪಾಧಿಗಳಿಂದ ಅನೇಕವಾಗಿ ತೋರುವನು. ಒಬ್ಬಾತ್ಮನೇ ಎಲ್ಲ ದೇಹಗಳಲ್ಲಿದ್ದ ಮೇಲೆ, ಎಲ್ಲರಿಗೂ ಭೋಗಗಳು ಸಮಾನಗಳಾಗಬೇಕೆಂಬುದುನಿಯಮವಲ್ಲ. ಎಲ್ಲ ಕೊಡಗಳಲ್ಲಿ ಒಂದೆಬಯಲಿದ್ದರೂ ಒಂದರಲ್ಲಿ ಹೊಗೆ, ಒಂದರಲ್ಲಿ ಅಗ್ನಿ, ಮತ್ತೊಂದರಲ್ಲಿ ಏನೂ ಇಲ್ಲ. ಇದರಂತೆ ಬೇರೆ ಬೇರೆ ಭೋಗಗಳು ಸಂಭವಿಸುತ್ತವೆ. ಒಬ್ಬಾತ್ಮನಿಗೆ ದುಃಖದ ಜ್ಞಾನವಾದರೆ ಆಜ್ಞಾನವು ಎಲ್ಲರಲ್ಲಿಯೂ ಇರಬೇಕೆಂಬ ನಿಯಮವಿಲ್ಲ. ಹೇಗಂದರೆ ದಶೇಂದ್ರಿಯಗಳಲ್ಲಿಯೂ ಒಬ್ಬಾತ್ಮನಿದ್ದಾನೆ. ಆದರೂ ಕಣ್ಣಿಗೆ ರೂಪಜ್ಞಾನವದೆ. ಆ ಜ್ಞಾನವು ಅನ್ಯ ಇಂದ್ರಿಯಗಳಿಗಿಲ್ಲ. ರಾಗದ್ವೇಷಾದಿಗಳಾದರೂ ಸಮುದ್ರದ ತೆರೆಗಳಂತೆ ಸಂಭವಿಸುತ್ತವೆ. ಆದ್ದರಿಂದ ಒಬ್ಬಾತ್ಮನೇ ಯಥಾರ್ಥ; ಅನೇಕಾತ್ಮರೆಂದು ಕಾಣುವದು ಭ್ರಾಂತಿಯಾಗಿರುವದು. ಚೇತನದಲ್ಲಿ ಭೇದವಿಲ್ಲವೆಂಬುವದು ಆಶ್ಚರ್ಯವಲ್ಲ. ಘಟಪಟಾದಿ ಜಡ ಪದಾರ್ಥಗಳಲ್ಲಿಯೂ ಭೇದವಿಲ್ಲ. ಹೇಗೆಂದರೆ, ಭೇದವೆಂದರೆ ಧರ್ಮಿ ಪ್ರತಿಯೋಗಿ ಜ್ಞಾನಾಧೀನವಾಗಿರುವದು. ಅಥವಾ ಅನ್ಯೋನ್ಯಾಭಾವವಾಗಿ

ಶುವದು. ಇಂಥಾ ಭೇದವು ಘಟಾದಿಗಳಲ್ಲಿ (ಅಭೇದ) ಸ್ವರೂಪದಿಂದಿರುತ್ತದೆಂದು ಹೇಳಿದರೆ, ವ್ಯಾಘಾತ್ ದೋಷವು ಬರುತ್ತದೆ. ಘಟಪಟಾದಿಗಳಿಗಿಂತಲೂ ಭೇದವು ಬೇರೆಯಾಗಿ ಆಶ್ರಯಿಸಿಕೊಂಡಿರುತ್ತದೆ ಎಂದು ಹೇಳಬಹುದು. ಹಾಗಾದರೆ, ಧರ್ಮಿಯಾದ ಘಟಕ್ಕೂ ಧರ್ಮವಾದ ಭೇದಕ್ಕೂ ಭೇದವೋ? ಅಭೇದವೋ ? ಎಂದು ಕೇಳಲು, ಭೇದವಾಗಿದೆಯೆಂದು ನೀನು ಹೇಳಬಹುದು. ಈ ಭೇದವನ್ನು ಭೇದ ಮಾಡಿದ್ದು ಇದೇ ಭೇದವೆಂದು ಹೇಳುವೆಯಾದರೆ, ತನಗೆ ತಾನೇ ಭೇದಮಾಡಿದ್ದರಿಂದ ಒಂದರಲ್ಲಿ ಕರ್ಮ ಕರ್ತೃತ್ವ ಬರುವದರಿಂದ ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಿಕಾಪತ್ತಿ, ಅನವಸ್ಥಾದಿ ದೋಷಗಳು ಬರುತ್ತವೆ. ಆದ್ದರಿಂದ ಭೇದವು ಬೇರೆಯಾಗಿಲ್ಲ. ಘಟದ ಸ್ವರೂಪ (ಹಾಲು ಸಕ್ಕರಿಯಂತೆ) ಅಭೇದವಾಗಿರುವುದೆಂದು ಹೇಳಿದರೆ, ಪ್ರತಿಯೋಗಿಯಾದ ಪಟದ ಅಪೇಕ್ಷೆಯನ್ನು ಮಾಡಬಾರದಾಗಿತ್ತು. ಬೇರೆ ಪ್ರತಿಯೋಗಿ ಅಪೇಕ್ಷೆಯನ್ನು ಮಾಡುವದಿಲ್ಲ. ತನ್ನಲ್ಲಿ ತಾನೇ ಭೇದವಾಗಿದೆಯೆಂದು ಹೇಳಿದರೆ, ಭೇದವು ತನ್ನ ನಾಶವನ್ನು ತಾನೇ ಮಾಡಿಕೊಂಡಿತೆಂದು ಒಪ್ಪಬೇಕಾಗುವದು. ಸ್ವಭೇದಿತ ದೂಷಣವು ಸಂಭವಿಸುವದು. ಆದ್ದರಿಂದ ಶ್ರುತಿಯುಕ್ತಿಗಳಿಂದಲೂ ನೋಡಲಾಗಿ ಭೇದವು ಭ್ರಾಂತಿರೂಪಾಗಿರುತ್ತದೆ.

## ನಾಲ್ಕನೆಯ ಸಂಧಿ, ಅನಾತ್ಮನಿರಾಕರಣ

**ತನುಕರಣ ಪ್ರಾಣಾದಿ ಮನಬುದ್ಧಿ ಹಂಕಾರ।**
**ವಿನಿತಾತ್ಮವಲ್ಲ. ವೇದ್ಯಮಪ್ಪದರಿಂದೆ।**
**ಘನಕುಂಭದಂತೆ ತಿಳಿಪುತ್ರ** ॥೪॥

ಭೇದವು ಇಲ್ಲವೇ ಇಲ್ಲ. ಎಲ್ಲವೂ ಆತ್ಮರೂಪವೆಂದು ಹೇಳಿದರೆ, ದೇಹಾದಿಗಳೂ ಆತ್ಮಗಳಾಗಬೇಕಾಯಿತು. ಹಾಗಾದರೆ ಚಾರ್ವಾಕಮತಕ್ಕೂ ನಮಗೂ ಭೇದವೆಯಿಲ್ಲವಾಯಿತು. ದೇಹಾದಿಗಳು ಆತ್ಮಗಳಲ್ಲವೆಂದರೆ ಭೇದವನ್ನು ಒಪ್ಪಿದಂತಾಯಿತು. ಅಂದರೆ? ಹಾಗಲ್ಲ. ಎಲ್ಲಿ ನಾವು ಎಲ್ಲವೂ ಆತ್ಮರೂಪಗಳೆಂದು ಹೇಳಿರುವೆವೋ, ಅಲ್ಲಿ ನೀನು ನಾಮರೂಪುಗಳನ್ನು ಮಿಥ್ಯೆಯೆಂದು ತಿಳಿಯಲಿಕ್ಕೇಬೇಕು. ಹೇಗಂದರೆ; ಸರ್ಪರೂಪದಿಂದ ಹಗ್ಗವು ತೋರುವದು ಅಂದರೆ, ಆ ಸರ್ಪಕ್ಕೆ ಹಗ್ಗದ ಸತ್ಯತ್ವವಿರುವದೇ? ಇಲ್ಲ. ಅದರಂತೆ ಪರಮಾತ್ಮನೇ ಜಗತ್ತಾಗಿರುವನೆಂದು ಹೇಳಲು; ಜಗತ್ತಿಗೆ ಸತ್ಯತ್ವವು ಸಂಭವಿಸುವದೇ? ಇಲ್ಲ. ನಾಮರೂಪು ಜಗತ್ತು ಮಿಥ್ಯೆಯಾಗಿರುತ್ತದೆ. ( **ಪ್ರತಿಜ್ಞಾ** ) ದೃಶ್ಯವಾಗಿ ತೋರುವದರಿಂದ ( **ಹೇತು** ) **ಸ್ವಪ್ನದಂತೆ;** ( **ದೃಷ್ಟಾಂತ** ) ಯಾವದಿರುವದೋ ಅದು ಮಿಥ್ಯೆಯಲ್ಲ ( **ಪ್ರತಿಜ್ಞಾ** )

ಅನನ್ಯವಾದ್ದರಿಂದ (ಹೇತು) ತನ್ನಂತೆ(ದೃಷ್ಟಾಂತ)ಸದ್ರೂಪಾತ್ಮನು ಸತ್ಯನಾಗಿರುತ್ತಾನೆ. ಎಲ್ಲವೂ ಮಿಥ್ಯೆಯಾದರೆ ಮಿಥ್ಯಾಸಾಧನದಿಂದ ಸತ್ಯದೊರಯಲಾರದು. ಅಂದರೆ? ಹಾಗಲ್ಲ. ಕಲ್ಲುದೇವರು ಸುಳ್ಳಾದರೂ ಫಲವು ಸತ್ಯವಾಗುವದು. ಕನಸು ಸುಳ್ಳಾದರೂ ರೇತಃ ಪತನವು ಸತ್ಯವಾಗುವದು. ಇವುಗಳಂತೆ ಹುಸಿಯಾದ ಗುರು ಶಾಸ್ತ್ರಾದಿ ಸಾಧನಗಳಿಂದ ಸತ್ಯವಾದ ಮೋಕ್ಷವು ದೊರೆಯುವದು. ಹೀಗೆ ಸರ್ವವು ಮಿಥ್ಯಾಅನಾತ್ಮಾ ಜಡಗಳಾದರೂ ಈ ದೇಹಾದಿಗಳು ಆತ್ಮನ ಸಮೀಪದಲ್ಲಿದ್ದು, ಅವನ ಚೇತನವನ್ನು ಪಡಕೊಂಡು ತಾವೂ ಚೇತನದಂತೆ ಕಾಣುತ್ತವೆ. ಆದ್ದರಿಂದ ಅವಿವೇಕಿಗಳು ಆತ್ಮನೆಂದು ತಿಳಿಯುವರು. ವಿಚಾರಮಾಡಿದರೆ ಆತ್ಮವಲ್ಲ. ಹೇಗಂದರೆ,- ಪಂಚಭೂತಗಳ ಕಾರ್ಯವಾದ್ದರಿಂದಲೂ, ರೇತೋರಕ್ತಗಳ ವಿಕಾರವಾದ್ದರಿಂದಲೂ, ಘಟದಂತೆ ತಿಳಿಸಿಕೊಳ್ಳುವದರಿಂದಲೂ ಈ ದೇಹವು ಆತ್ಮವಲ್ಲ. ಇದರಂತೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿಯೂ ಆತ್ಮತ್ವವಿಲ್ಲ. ಅಂದಮೇಲೆ; ಅವುಗಳ ವಿಷಯಗಳಲ್ಲಿ ಆತ್ಮತ್ವವೆಲ್ಲಿಂದ ಬಂದೀತು. ಪ್ರಾಣಾದಿ ಪಂಚಕಗಳೂ ಕೂಡಾ ಜಡವಾಗಿರುವದರಿಂದ ಆತ್ಮಗಳಲ್ಲ. ನನ್ನ ಮನಸ್ಸು, ನನ್ನ ಬುದ್ಧಿ, ನನ್ನ; ಚಿತ್ತ, ನನ್ನಅಹಂಕಾರ ಅನ್ನುವದರಿಂದ ಅಂತಃಕರಣ ಚತುಷ್ಟಯವೂ ಆತ್ಮವಲ್ಲ. ಯಾಕಂದರೆ ಇವೆಲ್ಲ ದೃಶ್ಯಗಳಾಗಿ ತೋರುವದರಿಂದ ಆತ್ಮಗಳುಅಲ್ಲ, ಅಜ್ಞಾನದ ಅವಸ್ಥಾತ್ಮಕವಾದ ಮೂಲಾಹಂಕಾರವಾದರೂ ಆತ್ಮರೂಪವಲ್ಲ. ಡೀರೆ ರೂಪದಿಂದ ಪಟವೇ ಗೋಚರವಾದಂತೆ ಮನಬುದ್ಧ್ಯಾದಿ ವೃತ್ತಿಗಳಿಂದ ಮೂಲಾಹಂಕಾರವೇ ಘಟದಂತೆ ಗೋಚರವಾಗುವದು. ಈ ಅಹಂಕಾರವು ತಾನು ಜಡವಾದಾಗ್ಯಾದರೂ ಚಿತ್ತಿನಿಂದ ಚೈತನ್ಯವನ್ನು ಪಡಕೊಂಡು ದೇಹಾದಿಗಳನ್ನು ಅರಿಯುತ್ತಿರುವದು. ಸೂಜಿಗಲ್ಲನ್ನು ಹೊಂದಿದ ಸೂಜಿಯು ಮತ್ತೊಂದು ಸೂಜಿಯನ್ನು ಚಲಿಸುವಂತೆ, ಮತ್ತು ಧರ್ಮಾಧರ್ಮಾದಿ ಒಂಭತ್ತು ಗುಣಗಳಿಂದ ಕೂಡಿ ಗುಣಿಯಾಗಿ ಘಟದಂತೆ ತೋರುವದು. ಮತ್ತು ಕೇಳುತ್ತೇನೆ ನೋಡುತ್ತೇನೆ ಎಂಬಲ್ಲಿ ಆಯಾಯ ಇಂದ್ರಿಯ ವಿಶೇಷಣಗಳೊಡನೆ ನಾನೆಂದು ವಿಶೇಷ್ಯವಾದ ಅಹಂಕಾರವು ನೀಲೋತ್ಪಲದಂತೆ ವೇದ್ಯವಾಗಿರುವದು ಈ ರೀತಿ ಜಡಾಜಡರೂಪಾಗಿ ತಪ್ತಜಲದಂತೆ ವೇದ್ಯ ವೇದಕವಾಗಿ ಜಾಗ್ರಾದಿಗಳಲ್ಲಿ ನಾನೆಂದು ತೋರಿ ಸುಷ್ಪ್ತಿಯಲ್ಲಿ ಅಡಿಗಿ ದೃಶ್ಯವಾಗುತ್ತದೆ. ಆದ್ದರಿಂಧ ಆತ್ಮವಲ್ಲ.

---

ಐದನೆಯ ಸಂಧಿ, ಚಿದಚಿದ್ವಿವೇಕ

**ತನಿನಿದ್ರೆಯೊಳಗರಿವು ತನವಿಲ್ಲವೆಂಬುವದು।**
**ನಿನಗೇನು ಚಂದ ತಾನಿಲ್ಲವೆಂಬಂತೆ।**
**ಜನಕೆಲ್ಲ ಹಾಸ್ಯವೆನಿಸುವದು ॥೫॥**

ಸುಷುಪ್ತಿಯಲ್ಲಿ ಅಹಂಕಾರ ಇಲ್ಲದಿರುವತನವನ್ನು (ಅಭಾವವನ್ನು) ಅರಿಯುತ್ತಾ ಆತ್ಮನು ಇದ್ದಾನೆ. ಆದರೂ ನೈಯಾಯಿಕರು ಆತ್ಮನು ಜ್ಞಾನರೂಪನಲ್ಲ. ಕಿಂತು ಜಡರೂಪನಾಗಿರುವನು ಎಂದು ಹೇಳುವರು. ಜಾಗ್ರತಾದಿಗಳಲ್ಲಿ ಅದೃಷ್ಟವಶಾತ್ ಆತ್ಮ ಮನಸ್ಸುಗಳ ಸಂಯೋಗದಿಂದ ಆತ್ಮನಲ್ಲಿ ಜ್ಞಾನಗುಣವು ಉತ್ಪನ್ನವಾಗುತ್ತದೆ. ಸುಷುಪ್ತಿಯಲ್ಲಿ ಸಂಯೋಗವಿಲ್ಲದ್ದರಿಂದ ಆತ್ಮನು ಜಡರೂಪನಾಗಿದ್ದಾನೆ. ಜ್ಞಾನಗುಣವಿಲ್ಲ. ಇದ್ದರೆ, ಕಳ್ಳನು ಮೈಮೇಲಿನ ಆಭರಣಗಳನ್ನು ತೆಗೆದುಕೊಂಡು ಹೋಗುವದು ಗೊತ್ತಾಗಬೇಕಾಗಿತ್ತು. ಆಗುವದಿಲ್ಲ. ಆದ್ದರಿಂದ ಜ್ಞಾನವಿಲ್ಲ ಎಂದು ಹೇಳುವರು. ಇದು ಯೋಗ್ಯವಲ್ಲ. ಯಾಕಂದರೆ, ನಾನು ಏನೊಂದು ಅರಿಯದೆ ಸುಖವಾಗಿ ಇದ್ದೆನೆಂಬ ಸ್ಮೃತಿಯು ಜಾಗ್ರದಲ್ಲಿ ಇರುವದರಿಂದ ಸುಷುಪ್ತಿಯಲ್ಲಿ ಆತ್ಮನು ಜ್ಞಾನರೂಪನಿದ್ದಾನೆಂಬುದು ನಿಶ್ಚಯವಾಗುತ್ತದೆ. ನಾನು ಏನೊಂದು ಅರಿಯದಿದ್ದೆನೆಂಬಲ್ಲಿ ಜ್ಞಾನದ ಅಭಾವ ಉಟೆಂದು ತಿಳಿದು ಬರುತ್ತದೆ. ಅಂದರೆ, ಹಾಗಲ್ಲ. ಯಾಕಂದರೆ, ದೇವದತ್ತನೇ ! ನೀನು ಇಷ್ಟು ಹೊತ್ತಿನವರೆಗೆ ಮನೆಯಲ್ಲಿ ಏನು ಮಾಡಿದೆ. ಅಂದರೆ ಏನು ಮಾಡಿಲ್ಲವೆಂದು ಹೇಳುತ್ತಾನೆ. ಆಗ್ಗೆ ದೇವದತ್ತನೇ ಇಲ್ಲೆಂದು ಹೇಳಲಿಕ್ಕೆ ಬರುವದೋ ? ಬರಲಾರದು. ಕಿಂತು, ಉದ್ಯೋಗವಿಲ್ಲೆಂದು ಉದ್ಯೋಗದ ಅಭಾವವನ್ನು ಹೇಗೆ ಹೇಳದಂತಾಯಿತೋ, ಹಾಗೆ ಸುಷುಪ್ತಿಯಲ್ಲಿ ಏನೊಂದು ತಿಳಿಯಲಿಲ್ಲೆಂದು ಹೇಳಿದ್ದು ತಿಳಿಸಿಕೊಳ್ಳುವ ಪದಾರ್ಥಗಳ ಅಭಾವವನ್ನು ಹೇಳಿದಂತಾಯಿತೇ ಹೊರತು, ತನ್ನ ಜ್ಞಾನದ ಅಭಾವವನ್ನು ಹೇಳಿದೆ ಎಂಬರ್ಥವಲ್ಲ. ಆದ್ದರಿಂದ ಶ್ರುತಿಯು ದ್ರಷ್ಟನಾದ ಆತ್ಮನ ದೃಷ್ಟಿ ಅಂದರೆ ಜ್ಞಾನಕ್ಕೆ ನಾಶವಿಲ್ಲೆಂದು ಹೇಳುತ್ತದೆ. ಆದ್ದರಿಂದ ಶ್ರುತಿಯುಕ್ತಿ ಅನುಭವಗಳಿಂದ ಜ್ಞಾನವು ಸಿದ್ಧವಾಗಿರಲು, ಇಲ್ಲೆಂಬುದು ಸಂಭವಿಸಲಾರದು. ಇಲ್ಲೆಂದು ಹೇಳಿದರೆ, ಕರಣಗಳ ನಿರಪೇಕ್ಷೆಯಿಂದಿರುವ ಜ್ಞಾನವಿಲ್ಲವೋ ? ಅಥವಾ ಕರಣಗಳ ಸಾಪೇಕ್ಷೆಯಿಂದ ತೋರುವ ಜ್ಞಾನವಿಲ್ಲವೋ? ಮತ್ತು ಸುಷುಪ್ತಿಯಲ್ಲಿ ಜ್ಞಾನದ ಅಭಾವವನ್ನು ನಾನು ಕಂಡೆನೆಂದು ನೀನು ಹೇಳಿದರೆ, ಆ ಅಭಾವವು ಅನುಯೋಗಿ ಪ್ರತಿಯೋಗಿ ಜ್ಞಾನದಿಂದಲೂ ವಿಶೇಷಣ ವಿಶೇಷ್ಯ ಸಂಬಂಧದಿಂದ ಪ್ರತ್ಯಕ್ಷವಾಗುತ್ತದೆ ಭೂತಳದಲ್ಲಿ ಘಟವಿಲ್ಲವಂದರೆ, ವಿಶೇಷ್ಯವಾದ ಘಟದ ಅಭಾವವು ವಿಶೇಷಣವಾದ ಭೂತಳದೊಡನೆ ಸಂಬಂಧವಾಗಿ ತೋರುವದು. ಇದರಂತೆ ಪ್ರತಿಯೊಂದು ಪ್ರತಿಯೋಗಿಗಳ ಅಭಾವ ಜ್ಞಾನವಿರಲಿಕ್ಕೆಬೇಕು. ಆ ಅಭಾವವನ್ನು ತಿಳಿಯಬೇಕಾದರೆ ಮೊದಲು ಘಟವಿಲ್ಲದ ಭೂತಳಕ್ಕೂ ನೇತ್ರಕ್ಕೂ ಸಂಯೋಗವಾಗಬೇಕು. ಆಮೇಲೆ ಮೊದಲು ಇಲ್ಲಿ ಘಟವಿತ್ತು, ಈಗ ಇಲ್ಲೆಂದು ಆ ಪ್ರತಿಯೋಗಿಯಾದ ಘಟದ ಸ್ಮೃತಿಯು ಬೇಕು. ಈ ರೀತಿ ಆತ್ಮ, ಮನಸ್ಸುಗಳ, ನೇತ್ರ, ಭೂತಳ ಇವುಗಳ ಸಂಯೋಗ ಮೂಲಕ ಅಭಾವವು ಪ್ರತ್ಯಕ್ಷವಾಗುತ್ತದೆ. ಈ ಮನಸ್ಸು ನೇತ್ರಾದಿಗಳಿಂದ ಸುಷುಪ್ತಿಯಲ್ಲಿ ಜ್ಞಾನದ ಅಭಾವವನ್ನು ನಾನು

ಕಂಡೆನೆಂದು ಹೇಳಿದರೆ, ಅದು ಸುಷ್ಪ್ತಿಯಾಗಲಿಲ್ಲ. ಜಾಗ್ರದವಸ್ಥಾ ಆಯಿತು. ಕರಣರೂಪ ಸಾಮಗ್ರಿಯನ್ನು ಸ್ವಿಕರಿಸದಿದ್ದರೆ ಅಭಾವದ ಜ್ಞಾನವೇ ಆಗುವದಿಲ್ಲ. ಆದ್ದರಿಂದ ಸುಷ್ಪ್ತಿಯಲ್ಲಿ ಜ್ಞಾನವಿಲ್ಲಎಂದು ಹೇಳಬಾರದು. ಕರಣಗಳ ನಿರಪೇಕ್ಷವಾದ ಜ್ಞಾನವು ಸೂರ್ಯನ ಪ್ರಕಾಶದಂತೆ ಅವನ ಸ್ವರೂಪವೇ ಆಗಿರುವದು. ಆದ್ದರಿಂದ ಆಗಂತುಕವಾದ ಗುಣವಲ್ಲ. ಕಿಂತು ಆತ್ಮನ ರೂಪವೇ ಆಗಿರುವದು. ಕರಣ ಸಾಪೇಕ್ಷೆಯಿಂದ ತೋರುವ ಜ್ಞಾನವು ದರ್ಪಣದಲ್ಲಿದ್ದ ಸೂರ್ಯನ ಪ್ರಕಾಶದಂತೆ ವಿಶೇಷವಾಗಿರುವದು. ದರ್ಪಣವು ನಾಶವಾಗಲು ಅದರಲ್ಲಿರುವ ಪ್ರಕಾಶವು ಇಲ್ಲೆಂದು ಕಂಡರೂ, ಸೂರ್ಯನರೂಪಾಗಿಯೇ ಇರುತ್ತದೆ. ಅದರಂತೆ ಜಾಗ್ರತ್ಸ್ವಪ್ನಗಳಲ್ಲಿ, ಕರಣಗಳ ಮೂಲಕ ತೋರುವ ವಿಶೇಷ ಜ್ಞಾನವು, ಸುಷ್ಪ್ತಿಯಲ್ಲಿ ಕರಣಗಳ ಅವಿದ್ಯೆಯಲ್ಲಿ ಅಡಗಲು ತಾನೂ ನಾಶವಾಯಿತೋ ಏನೋ ಎಂಬಂತೆ ತೋರುತ್ತದೆ. ಆದರೂ ಆ ವಿಶೇಷ ಜ್ಞಾನವು ಪ್ರತ್ಯಗಾತ್ಮಸ್ವರೂಪವಾಗಿಯೇ ಇರುತ್ತದೆ. ವಿಶೇಷ ಜ್ಞಾನದ ಉತ್ಪತ್ತಿ ನಾಶಗಳು ಕರಣಗಳ ಭಾವ ಅಭಾವ ಮೂಲಕ ತೋರಿದ್ದೇ ಹೊರತು ನಿಜವಲ್ಲ. ಈ ರೀತಿ ಉಭಯ ಜ್ಞಾನಗಳು ಉಷ್ಣಪ್ರಕಾಶಗಳೆರಡು ಅಗ್ನಿಯ ಮತ್ತು ಸೂರ್ಯನ ಸ್ವರೂಪವಾಗಿರುವಂತೆ ಪ್ರತ್ಯಗಾತ್ಮನ ಸ್ವರೂಪಗಳಾಗಿವೆ. ಜ್ಞಾನವಿದ್ದಮೇಲೆ ಸುಷ್ಪ್ತಿಯಲ್ಲಿಯೇ ಸ್ಮರಣವಾಗಬೇಕಾಗಿತ್ತು. ಜಾಗ್ರಕ್ಕೆ ಬಂದ ಮೇಲೆ ಯಾಕೆ ಆಗುತ್ತದೆ? ಅಂದರೆ, ಬಾವಿಯಲ್ಲಿ ಮುಳುಗಿದ ಪುರುಷನಂತೆ ಕರಣವಿಲ್ಲದ್ದರಿಂದ ಹೇಳಲಿಕ್ಕೆ ಬರಲಿಲ್ಲ. ಜ್ಞಾನಮಾತ್ರವಿತ್ತು. ಮತ್ತು ಪ್ರಿಯಳನ್ನು ಕೂಡಿದ ಕಾಮಿಯಂತೆ ಜೀವನು ಬ್ರಹ್ಮದೊಡನೆ ಐಕ್ಯನಾದ್ದರಿಂದ ಅನ್ಯವನ್ನು ಏನೂ ತಿಳಿಯುವದಿಲ್ಲ. ಆದ್ದರಿಂದ ಸ್ಮರಿಸುವದಕ್ಕೆ ಬರುವದಿಲ್ಲ. ಸುಷ್ಪ್ತಿಯಲ್ಲಿ ಆತ್ಮನು ಅಹಂಕಾರಾದಿಗಳ ಅಭಾವವನ್ನು ಅರಿಯುತ್ತಾ ಇರುವನೆಂದ ಮೇಲೆ, ಅವನಾದರೂ ಕರಣಗಳ ಸಾಪೇಕ್ಷೆಯಿಂದರಿವನೋ? ನಿರಪೇಕ್ಷೆಯಿಂದರಿವನೋ? ಸಾಪೇಕ್ಷೆಯಿಂದ ಅರಿಯುವನೆಂದು ಹೇಳಿದರೆ ಸುಷ್ಪ್ತಿಯಾಗಲಿಲ್ಲ, ಜಾಗ್ರವಾಯಿತು. ನಿರಪೇಕ್ಷೆಯಿಂದ ಅರಿಯುವನೆಂದು ಹೇಳಿದರೆ, ಸ್ಮರಣವೂ ಕೂಡಾ ಅಲ್ಲಿಯೇ ಆಗಬೇಕು. ಅರಿಯುವ ಮರೆಯುವ ಸ್ವಭಾವುಳ್ಳವನಾಗಿರುವನೆಂದು ಹೇಳಿದರೆ, ಬುದ್ಧ್ಯಾದಿ ಗುಣಗಳುಳ್ಳವನಾದನು. ಗುಣಿತ್ವ ಮೂಲಕ ಜಡತ್ವ ಪ್ರಾಪ್ತಿಯಾಯಿತು. ಅದರಿಂದ ಅನಿತ್ಯತ್ವವಾಯಿತು. ಈ ರೀತಿ ದೋಷಗಳು ಬರುತ್ತವೆ. ಅಂದರೆ, ಯಾವ ದೋಷಗಳೂ ಬರುವದಿಲ್ಲ. ಯಾಕಂದರೆ, ಸುಷ್ಪ್ತಿಯಲ್ಲಿ ಅಹಂಕಾರವು ಕಾರಣವಾದ ಮಾಯೆಯಲ್ಲಿ ಅಡಗಿರುವದು. ಆ ಅಹಂಕಾರದಲ್ಲಿ ಪ್ರತಿಬಿಂಬನಾದ ಜೀವನು ಪ್ರತ್ಯಗಾತ್ಮನಲ್ಲಿ ಐಕ್ಯನಾಗಿರುವನು. ಸವಿದ್ರೂಪನಾದ ಪ್ರತ್ಯಗಾತ್ಮನು ಮಾಯೆಯನ್ನು ಕರಣಮಾಡಿಕೊಂಡು ಅಜ್ಞಾನ ಮತ್ತು ಸುಖ ಇವುಗಳನ್ನು ತಿಳಿಯುತ್ತಾನೆ. ಮರದ ಎಲೆಗಳ ಸಂದುಗಳಲ್ಲಿ ತೋರಿ ಅಡಗುವ ಬೆಳದಿಂಗಳಂತೆ ಕ್ಷಣಿಕಗಳಾದ ಸುಖಗಳನ್ನು ಅರಿಯುವದಕ್ಕೂ

ಮಾಯೆಯೆ ಕರಣವಾಗಿರುವದು. ಪ್ರತ್ಯಗಾತ್ಮನಿಂದ ಅರಿಸಿಕೊಳ್ಳುವದರಿಂದ ಕರ್ಮರೂಪವೂ ಆಗಿರುವದು. ಆ ಕರಣರೂಪವಾದ ಮಾಯೆಯೇ ಜಾಗ್ರದವಸ್ಥೆಯಲ್ಲಿ ಮನವಾಗುತ್ತದೆ. ಆದ್ದರಿಂದ ಆ ಮಾಯಾಕರಣದಲ್ಲಿದ್ದ ಸಂಸ್ಕಾರಗಳು ಯಾವತ್ತು ಮನಸ್ಸಿಗೆ ಬಂದು ಸ್ಮರಣವಾಗುವದು. ಆದ್ದರಿಂದ ಮಾಯಾಕರಣದಿಂದ ಸುಷುಪ್ತಿಯಲ್ಲಿ ಯಾವನು ಸುಖವನ್ನು ಅನುಭವಿಸಿದನೋ, ಅವನೇ ನಾನು ಈಗ ಜಾಗ್ರದಲ್ಲಿ ಮನೋಕರಣದಿಂದ ಸ್ಮರಿಸುತ್ತೇನೆ. ಎನ್ನುವದರಿಂದ ಪ್ರತ್ಯಭಿಜ್ಞೆಯೂ ಸಂಭವಿಸುವದು. ಆದ್ದರಿಂದ ಮೂರು ಅವಸ್ಥೆಗಳಲ್ಲಿ ಇದ್ದು ಬೆಳಗುವದರಿಂದ **ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ, ಸ್ವಯಂಜ್ಯೋತಿರೂಪನು** ತಾನಾಗಿರುವನು. ಆದ್ದರಿಂದ ತನ್ನಲ್ಲಿ ಅವಿದ್ಯೆ ಇಲ್ಲವೆಂಬುವದೇ ಯಥಾರ್ಥವಾಗಿರುವದು.

## ಆರನೆಯ ಸಂಧಿ, ಬಂಧಮುಕ್ತಿಗಳ ಲಕ್ಷಣವು

**ನಿನಗಾದ ಬಂಧನವು ಘನವಾದಧ್ಯಾಸದಿಂ।**
**ದನಿತಲ್ಲವಾತ್ಮ. ಜ್ಞಾನದಿಂದಳಿಯಲ್ಕೆ।**
**ನಿನಗಾಯ್ತು ಮುಕ್ತಿ ಶ್ರುತಿಸಿದ್ಧ** ॥೬॥

ಸ್ವಯಂಪ್ರಕಾಶನಾದ ತನಗೆ ಅವಿದ್ಯೆಯೇ ಇಲ್ಲವೆಂದು ಹೇಳೋಣವಾಯಿತು. ಅವಿದ್ಯೆಯಿಲ್ಲದಿದ್ದರೆ ಗುರುಗಳಿಗೆ ಶರಣಾಗತರು ಯಾರು ಆಗುತ್ತಿದ್ದರು? ಆತ್ಮನಿಗೆ ಇಲ್ಲ. ಅಹಂಕಾರಕ್ಕೆ ಅವಿದ್ಯೆಯುಂಟು. ಬಂಧಮೋಕ್ಷಗಳೂ ಅದಕ್ಕೆ ಇರುವವು. ಎಂದು ಹೇಳಿದರೆ? ಅಹಂಕಾರಕ್ಕೆ ಸತ್ಯವೆನ್ನಬೇಕಾಗುವದು. ಇದಕ್ಕೆ ಒಪ್ಪಿದರೆ, ದೃಶ್ಯವಾದ್ದರಿಂದ ಅಹಂಕಾರವು ಆತ್ಮನಲ್ಲ ಎಂದು ಹೇಳಿದ್ದನ್ನು ಬಿಡಬೇಕಾಗುವದು. ಅಹಂಕಾರಕ್ಕೆ ಬಂಧ,ಮುಕ್ತಿಯು ತನಗೆ ಆಗುವದೆಂದು ಹೇಳಿದರೆ, ವೈಯಧಿಕರಣ್ಯ ಪ್ರಾಪ್ತವಾಗುವದು. ಆದ್ದರಿಂದ ಇದಕ್ಕೆ ಗತಿಯೇನೆಂದು ಕೇಳಿದರೆ? ಆತ್ಮನಲ್ಲಿ (ಬಂಧ) ಸಂಸಾರವು ಅಧ್ಯಾಸ ಮೂಲಕ ತೋರುತ್ತದೆ. ಹೊರತು ನಿಜವಲ್ಲ. ಪರಿಪೂರ್ಣನಾದ ಆತ್ಮನು ಅವಿದ್ಯೋಪಾಧಿಯಿಂದ ಪರಿಚ್ಛಿನ್ನನಂತೆ ಕಾಣುವನು. ನಿರಾಕಾರನಾದರೂ ಉತ್ಪತ್ತಿ ನಾಶರಹಿತನಾದರೂ, ಅಹಂಕಾರದಲ್ಲಿ ಪ್ರತಿಬಿಂಬಿಸಿ ಅಹಂಕಾರದ ರೂಪನಾಗಿಯೇ ತೋರುವನು. ಬಳಿಕ ಅಹಂಕಾರದ ಕರ್ತೃತ್ವಾದಿ ಧರ್ಮಗಳನ್ನು ತನ್ನಲ್ಲಿ ಸ್ವೀಕರಿಸುವದರಿಂದ ಅಧ್ಯಾಸ ಮೂಲಕ ಬಂಧವುಳ್ಳವನಂತೆಯೇ ತೋರುವನು. ದುರ್ಜನರ ಸಂಗದಿಂದೆ ಸಜ್ಜನನಿಗೆ ಬಾಧೆಯಾದಂತೆ, ಆತ್ಮನಿಗೆ ಅಹಂಕಾರಾದಿಗಳ ಸಂಗದಿಂದೆ ಬಂಧ ತೋರುವದು. ಗುರು ಶಾಸ್ತ್ರಗಳಿಂದ ಜನ್ಯವಾದ ಜ್ಞಾನದಿಂದ ಬಂಧವಳಿಯಲು ಮುಕ್ತಿಯು ಆಗುವದು.

ಜ್ಞಾನದಿಂದ ಅಧ್ಯಾಸರೂಪವಾದ ಸಂಸಾರವು ಬಾಧಿಸಿಕೊಳ್ಳುವದರಿಂದ ಮಿಥ್ಯೆಯಾಗಿರಲಿಕ್ಕೇಬೇಕು. ಶುಕ್ತಿ ಜ್ಞಾನದಿಂದ ರಜತವು ನಿವೃತ್ತಿಯಾದ್ದರಿಂದ ರಜತವು ಮಿಥ್ಯೆಯಾಗಿರಲಿಕ್ಕೇಬೇಕು. ಇದರಂತೆ ಉಪಾಧಿಯಾದ ಸಂಸಾರವು ಸತ್ಯವಲ್ಲ. ಉಪಾಧಿಯಾದ ಅಹಂಕಾರವು ಸತ್ಯವು ಅಂದರೆ ಗಮನಾಗಮನಗಳೂ ಸತ್ಯ, ಅದರಿಂದ ಆತ್ಮನಿಗೆ ಪರಿಚ್ಛಿನ್ನತ್ವ ಅದರಿಂದ ವಿಕೃತಿ. ಅದರಿಂದ ಅನಿತ್ಯ. ಅನಿತ್ಯವನ್ನು ಒಪ್ಪುವದರಿಂದ ಶೂನ್ಯವಾದ ಪ್ರಾಪ್ತವಾಗುವದು. ಹಾಗಾದರೆ, ಸ್ಫಟಿಕದಲ್ಲಿ ತೋರುವ ಕೆಂಪು ಬೆಳಕು ಸುಳ್ಳು. ದಾಸವಾಳದ ಹೂವು ಖರೆ. ಇದರಂತೆ ಆತ್ಮನಲ್ಲಿ ಗಮನಾಗಮನಗಳು ಸುಳ್ಳು. ಅಹಂಕಾರವು ನಿಜ ಎಂದು ಹೇಳಿದರೂ ಸಂಭವಿಸುವದಿಲ್ಲ. ಯಾಕಂದರೆ, ಸ್ಫಟಿಕದಲ್ಲಿ ತೋರುವ ಕೆಂಪೇ ಸುಳ್ಳಾದಮೇಲೆ ಸ್ಫಟಿಕದ ಸುತ್ತಲೂ ತೋರುವ ಕೆಂಪುಬೆಳಕು ಹೇಗೆ ಮಿಥ್ಯೆಯೋ; (ಅದರಂತೆ) ಹಾಗೇ ಗಮನ ಮಿಥ್ಯೆಯಾದ ಮೇಲೆ ಅದರಿಂದ ತೋರುವ ಭೋಗಾದಿ ಗಳೆಲ್ಲವೂ ಮಿಥ್ಯೆಯೇ ಆಗಿರುವವು. **'ಅತೋ ಅನ್ಯದಾರ್ತಂ'** ಆತ್ಮನಕಿಂತಲೂ ವ್ಯತಿರಿಕ್ತವಾದದ್ದೆಲ್ಲಾ ಮಿಥ್ಯೆಯೆಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಅಹಂಕಾರಕ್ಕೆ ಸತ್ಯವೆಂದು ಕರೆಯಲಿಕ್ಕೆ ಬರುವದಿಲ್ಲ. ಈ ಅಹಂಕಾರೋಪಾಧಿ ಯಿಂದ ತೋರುವ ಸಂಸಾರವು ಸಮಾಧಿ ಅಭ್ಯಾಸದಿಂದ ನಿವೃತ್ತಿಯಾಗುತ್ತದೆ. ಐಕ್ಯ ಲಕ್ಷಣಾತ್ಮಕವಾದ ಸಮಾಧಿಯು ಸಗುಣ ನಿರ್ಗುಣವೆಂದು ಎರಡು ವಿಧವಾಗಿರುವದು. ಆ ಸಗುಣವು ದೃಶ್ಯಾನುವಿದ್ಧ ಶಬ್ದಾನುವಿದ್ಧವೆಂದು ಎರಡು ರೀತಿಯಾಗಿರುವದು. ಈ ಮೂರೂ ಸಮಾಧಿಗಳು ಒಳಹೊರಗಿನ ಭೇದದಿಂದ ಆರು ಪ್ರಕಾರಗಳಾಗಿರುತ್ತವೆ. ಒಳಗಿನ ಕಾಮಾದಿ ವೃತ್ತಿಗಳನ್ನು ಅರಿಯುವ ಸಾಕ್ಷಿಯೇ ನಾನೆಂದು ತಿಳಿಯಲು ಅಂತರ ದೃಶ್ಯಾನುವಿದ್ಧ ಸವಿಕಲ್ಪ ಸಮಾಧಿಯೆನಿಸುವದು. **ಅತ್ರಾಯಂ 'ಪುರುಷ ಸ್ವಯಂಜ್ಯೋತಿಃ'** ಎಂಬ ಶ್ರುತಿಯನ್ನು ಕೇಳಿ ತಾನು ಸ್ವಯಂಜ್ಯೋತಿ ರೂಪನೆಂದು ತಿಳಿಯುವದರಿಂದ ಆಂತರ ಶಬ್ದಾನುವಿದ್ಧ ಸವಿಕಲ್ಪ ಸಮಾಧಿಯೆನಿಸುವದು. ಈ ಎರಡು ಸಮಾಧಿಗಳ ಅನುಸಂಧಾನವನ್ನು ಬಿಟ್ಟು ವೃತ್ತಿಯು, ಗಾಳಿಯಿಲ್ಲದ ಸ್ಥಳದಲ್ಲಿಟ್ಟ ದೀಪದಂತೆ ಇರಲು ಆಂತರ ನಿರ್ವಿಕಲ್ಪ ಸಮಾಧಿಯೆನಿಸುವದು. ಇದರಂತೆ ಹೊರಗಿನ ನಾಮ ರೂಪುಗಳನ್ನು ಬಿಟ್ಟು ಅಸ್ತಿ ಭಾತಿ, ಪ್ರಿಯಾದಿಗಳನ್ನು ಲಕ್ಷಿಸಲು ಹೊರಗಿನ ದೃಶ್ಯಾನುವಿದ್ಧ ಸವಿಕಲ್ಪ ಸಮಾಧಿ ಯೆನಿಸುವದು. **'ಸತ್ಯಜ್ಞಾನಮನಂತಂಬ್ರಹ್ಮಂ'** ಎಂಬ ಶ್ರುತಿಯನ್ನು ಕೇಳಿ ಬ್ರಹ್ಮಾಕಾರ ವೃತ್ತಿಯನ್ನು ಮಾಡುವದು ಹೊರಗಿನ ಶಬ್ದಾನುವಿದ್ಧ ಸವಿಕಲ್ಪ ಸಮಾಧಿಯೆನಿಸುವದು. ಈ ಎರಡು ಸಮಾಧಿಗಳ ಅಭ್ಯಾಸವನ್ನು ಬಿಟ್ಟು ತೆರೆ ಅಡಗಿದ ಸಮುದ್ರದಂತೆ ವೃತ್ತಿಯು ಪರಬ್ರಹ್ಮದಲ್ಲಿಯೇ ಸ್ಥಿತಿಯಾಗಿರಲು, ಹೊರ ಗಿನ ನಿರ್ವಿಕಲ್ಪ ಸಮಾಧಿಯೆನಿಸುವದು. ಇದರಿಂದ ಅಜ್ಞಾನವು ನಾಶವಾಗು ವದು. ಅದರಿಂದ ಹೃದಯ ಗ್ರಂಥಿಯು, ಅನಂತರ ಸಂಶಯಗಳು, ಸಕಲ

ಸಂಚಿತಾಗಾಮಿ ಕರ್ಮಗಳು ನಾಶವಾಗಲು, ನಿಶ್ಚಿಂತೆಯಿಂದ ಏಕಮೇವಾದ್ವಯ ಸ್ವರೂಪದಿಂದ ತಾನೆಯಿರುವನು.

## ಏಳನೆಯ ಸಂಧಿ, ಜೀವನ್ಮುಕ್ತರ ಚಾರಿತ್ರವು

**ಜ್ಞಾನಸಿದ್ಧಿಯ ಮೇಲೆ ಮುನ್ನಾದ ಕರ್ಮದಿಂ ।**
**ದಾನೆಂದು ದೇಹವಿದ್ದರೇನದರಿಂದ ।**
**ಲೇನೊಂದು ಬಾಧೆ ತನಗಿಲ್ಲ ॥೭॥**

ಜ್ಞಾನವು ಬಂದಮೇಲೆ ದೇಹವೇ ಇಲ್ಲದಿರಬೇಕು. ಅಜ್ಞಾನ ಕಾಲದಲ್ಲಿ ಇದ್ದಂತೆ ಜ್ಞಾನೋತ್ತರದಲ್ಲಿಯೂ ದೇಹದಿಂದ ಕೂಡಿಕೊಂಡಿದ್ದರೆ, ಜ್ಞಾನವಾಗಿದೆಯೆಂದು ನಾವು ಹೇಗೆ ತಿಳಿಯಬೇಕು? ಅಂದರೆ, ಇದೇನೂ ದೋಷವಲ್ಲ. ಹೇಗಂದರೆ— ಕರ್ಮವು ಸಂಚಿತ, ಪ್ರಾರಬ್ಧ, ಆಗಾಮಿಯೆಂದು ಮೂರು ಪ್ರಕಾರವಾಗಿರುವದು. ಅನೇಕ ಜನ್ಮಗಳಲ್ಲಿ ಮಾಡಿರುವ ಸಂಚಿತಕರ್ಮವು, ಅಹಂಕಾರದೊಳಗಿರ್ದು ಅನೇಕ ಶರೀರಗಳ ಉತ್ಪತ್ತಿಗೆ ಹೇತುವಾಗಿರುವದು. ಇದು ತನ್ನ ಸ್ವರೂಪದ ಜ್ಞಾನವಾದ ಕೂಡಲೇ ಸ್ವಪ್ನದಂತೆ ನಾಶವಾಗುತ್ತದೆ. ಹಗ್ಗದ ಅರುಹಾದಮೇಲೆಯೂ ವಾಸನೆಯಿಂದ ಹಾವುಕಂಡಂತೆ, ಯಾವ ಕರ್ಮದಿಂದ ಶರೀರವು ಆರಂಭ ಮಾಡಲ್ಪಟ್ಟಿರುವದೋ, ಆ ಕರ್ಮವು ಪ್ರಾರಬ್ಧವೆನ್ನಲ್ಪಡುವದು. ಅದು ಇಚ್ಛಾ, ಪರೇಚ್ಛಾ, ಅನಿಚ್ಛಾ ಇವುಗಳಿಂದ ಭೋಗವನ್ನು ಕೊಟ್ಟು ನಾಶವಾಗುವದು. ಆಗಾಮಿ ಕರ್ಮವು ಕರ್ತೃತ್ವ ಅಭಿಮಾನವಿಲ್ಲದೆ ಸಂಸ್ಕಾರ ಮೂಲಕವಾಗಿರುವದರಿಂದ ಅದು ತನ್ನಿಂದ ತಾನೇ ನಾಶವಾಗುವದು. ನಿಂದೆವಂದನೆ ಮಾಡಿವವರಿಗೆ ಹಂಚಿಹಾಕಲ್ಪಡುವದು. ಈ ರೀತಿ ದೇಹವಿರುವವರೆಗೂ ಜೀವನ್ಮುಕ್ತ ಸ್ಥಿತಿಯಲ್ಲಿದ್ದು, ದೇಹಪಾತ ಅನಂತರ ವಿದೇಹಮುಕ್ತಿಯನ್ನು ಹೊಂದುವನು. ಪ್ರಾರಬ್ಧದಿಂದ ಜೀವಿಸಿಕೊಂಡಿರುವಾಗ್ಯೆ ಯಾವ ವಿಧಿಯನ್ನು ಹೇಳುವದಕ್ಕೆ ಆಗುವದಿಲ್ಲ. ಯಾಕಂದರೆ, ನೀರಲ್ಲಿದ್ದವನಿಗೆ ನೀರಡಿಕೆ ಆಗದಂತೆ, ಉಂಡವನಿಗೆ ಅನ್ನದಿಚ್ಛೆಯಿಲ್ಲದಂತೆ; ಜ್ಞಾನಾಮೃತದಿಂದ ತೃಪ್ತನಾದ ಜ್ಞಾನಿಗೆ ಧ್ಯಾನ, ಜಪ, ಕರ್ಮತತಿ, ಪೂಜಾ, ಉಪಚಾರ, ವಂದನೆ ಮೊದಲಾದವುಗಳ ಇಚ್ಛೆ ಆಗುವದಿಲ್ಲ. ಯಾಕಂದರೆ, ಅವನಿಗೆ ಭಿನ್ನವಾಗಿ ಯಾವ ದೇವತೆಯೂ ಬೇರೆಯಿಲ್ಲ. ಜ್ಞಾನವೆಂಬ ಪುತ್ರನ ಜನ್ಮವಾದ್ದರಿಂದಲೂ, ಅಜ್ಞಾನವೆಂಬ ತಾಯಿಯು ಸತ್ತಿದ್ದರಿಂದಲೂ, ಜ್ಞಾನಿಯು ಎರಡು ಸೂತಕದಿಂದ ಕೂಡಿರುವ ಕಾರಣ ಕರ್ಮಕ್ಕೆ ಅಧಿಕಾರಿಯಲ್ಲ. ಹೃದಯವೆಂಬ ಆಕಾಶದಲ್ಲಿ ಜ್ಞಾನರೂಪ ಸೂರ್ಯನು ಉದಯ ಅಸ್ತಮಾನಗಳಿಲ್ಲದೆ ಯಾವಾಗಲೂಬೆಳಗುವದರಿಂದ ಸಂಧ್ಯಾವಂದನೆಯೇಇಲ್ಲ ಯಾವದು ಒಪ್ಪಿಗೆಯೋ

ಅದೇ ಪೂಜೆ, ಏನು ನೋಡುವನೋ ಅದೇ ಲಕ್ಷ್ಯವು, ಏನನ್ನು ಮನವು ಕೂಡು ವದೋ ಅದೇ ಯೋಗವು, ಹೀಗಿರಲು ಏನೊಂದು ನಿಯಮವಿಲ್ಲ. ನಡೆಯುವದೇ ಯಾತ್ರೆ, ನಿಂತಿರುವದೇ ಕಾಶಿ, ನುಡಿಯುವದೇ ಮಂತ್ರ ಅನಿಸುವದು. ಉತ್ಪತ್ತಿ ಯಿಲ್ಲ. ಅದರಿಂದ ಜನ್ಮವಿಲ್ಲ, ಅದರಿಂದ ಮನುಜತ್ವವಿಲ್ಲ, ಅದರಿಂದ ಆಶ್ರಮ ಧರ್ಮ ಮೊದಲಾದವುಗಳನ್ನು ಹೇಳಲಿಕ್ಕೆ ಬರುವದಿಲ್ಲ. ಹೀಗಿರಲು ಮರಣದ ಭಯವೇ ಮೊದಲಾದ ವಿಕಾರಗಳನ್ನೂ ಮುಂದೆ ಆಗುವ ಜನ್ಮಾಂತರಗಳನ್ನು ಹೇಳಲಿಕ್ಕೆ ಆದೀತೆ? ಎಂದಿಗೂ ಆಗಲಾರದು. ಯಾವನು ಭೇದಬುದ್ಧಿಯಿಂದ ದೇವತೆಯನ್ನು ಭಜಿಸುವನೋ; ಅವನು ಭವದಲ್ಲಿ ಬರುವನು. ಆತ್ಮನು ಬುದ್ಧಿ ಉಪಾಧಿಯಿಂದ ಧ್ಯಾನಮಾಡುವನಂತೆ ಚಂಚಲನಾದವನಂತೆ ಕಂಡರೂ; ಅದು ಉಪಾಧಿಗಳ ಧರ್ಮವೇ ಹೊರತು ಆತ್ಮನ ಧರ್ಮವಲ್ಲ. ಬಳಿಕ ಕರ್ಮದಿಂದ ಅಂತಃಕರಣ ಶುದ್ಧಿಯಾಗುವದಲ್ಲದೆ ಮುಕ್ತಿಯು ಆಗಲಾರದು. ಅಜ್ಞಾನದಿಂದಾದ ಬಂಧವು ಜ್ಞಾನದಿಂದ ನಿವೃತ್ತಿಯಾಗುತ್ತದೆ. ಹೊರತು ಕರ್ಮದಿಂದ ಆಗಲಾ ರದು. ಆ ಮುಕ್ತಿಯು ತನ್ನ ಸ್ವರೂಪವಾಗಿದೆ. ಆ ಸ್ವರೂಪು ಕರ್ಮ ಮಾಡು ವದಕ್ಕಿಂತ ಮೊದಲೇ ಸಿದ್ಧವದೆ. ಆದ್ಧರಿಂದ ಕರ್ಮದಿಂದ ಏನು ಪ್ರಯೋಜನ ವಿಲ್ಲ. ಕರ್ಮ ಮಾಡಿದ ಮೇಲೆ ತೋರುವುದು. ಅಂದರೆ ಮುಕ್ತಿಯು ವಾಗಬೇಕಾಯಿತು. ಅದರಿಂದ ಉಭಯವಿಧದಿಂದಲೂ ಕರ್ಮವು ಪ್ರಯೋಜನ ವಾದದ್ದಲ್ಲ. ಅಜ್ಞಾನ ನಿವೃತ್ತಿಗಾಗಿ ಕರ್ಮವುಬೇಕೆಂದು ಹೇಳಿದರೆ, ಅದು ಸಂಭ ವಿಸುವದಿಲ್ಲ- ಯಾಕಂದರೆ ಆತ್ಮನಿಗೂ ಅಜ್ಞಾನಕ್ಕೂ ಸಂಬಂಧವು ಸ್ವಭಾವ ವಾಗಿದ್ದರೆ, ಅದು ಕರ್ಮದಿಂದ ಕೆಡುವದಿಲ್ಲ. ಆತ್ಮನು ಸಂಬಂಧರಹಿತ ಸ್ವಭಾವ ವುಳ್ಳವನಾಗಿರುವನೆಂದು ಹೇಳಿದರೆ, ಅಜ್ಞಾನವೇ ಇಲ್ಲ. ಅಂದಮೇಲೆ ಕರ್ಮ ವಾದರೂ ಏತಕ್ಕೆ ಬೇಕು. ಈ ಉಭಯ ರೀತಿಯಿಂದಲೂ ಕರ್ಮವು ಅನವಶ್ಯಕ ವಾಗಿದೆ. ಚಂದ್ರ ಸೂರ್ಯರು ಶೀತೋಷ್ಣವಾಗಿರುವದು ಸ್ವಭಾವವಾಗಿದೆ. ಅದನ್ನು ಬಿಡಿಸುವದು ಯಾವ ಕರ್ಮದಿಂದಲೂ ಆಗುವದಿಲ್ಲ. ಮತ್ತು ಕರ್ಮ ದಿಂದ ಮುಕ್ತಿಯು ಆಗುವದಿಲ್ಲೆಂದು ಶ್ರುತಿಯು ಹೇಳುತ್ತದೆ- ಸಕಲಜ್ಞಾನಿಗಳಲ್ಲಿ ಜ್ಞಾನವು ಒಂದಿದ್ದು. ಅವರವರ ಪ್ರಾರಬ್ಧ ಕರ್ಮಸಂಸ್ಕಾರದ ವೇಗವು ತೀವ್ರ, ಮಧ್ಯ, ಮಂದ, ಸುಪ್ತವೆಂದು ನಾಲ್ಕುವಿಧವಾಗಿರುವದು. ಆದ್ದರಿಂದ ಒಬ್ಬನು ಕೃಷ್ಣನಂತೆ ಭೋಗಿಯಾಗಿಯೂ, ಲೌಕಿಕ ವ್ಯಾಪಾರ ತತ್ಪರನಾಗಿಯೂ ಇರುತ್ತಾನೆ. ಒಬ್ಬನು ಅನ್ಯವ್ಯವಹಾರಗಳನ್ನು ಮಾಡಿದರೂ ಜಿಜ್ಞಾಸಕ್ಕೆ ಅವಕಾಶವನ್ನು ಕೊಟ್ಟು ಜನಕರಾಜದಂತೆ, ಅಲೌಕಿಕ ವ್ಯಾಪಾರವುಳ್ಳವನಾಗಿ ಇರುತ್ತಾನೆ. ಒಬ್ಬನು ಶುಕನಂತೆ ಸವಿಕಲ್ಪ ಸಮಾಧಿಯುಳ್ಳವನಾಗಿಯೂ, ಮತ್ತೊಬ್ಬನು ಸುಪ್ತ ನಂತೆ ವಿದೇಹ ಸ್ಥಿತಿಯುಳ್ಳವನಾಗಿಯೂ, ಬೇರೆ ಬೇರೆ ತೋರುತ್ತಿರುವರು. ಈ ವಿಷಯವನ್ನು ವಾಸನಾಕ್ಷಯ ಮನೋನಾಶದ ಅಭ್ಯಾಸವನ್ನೂ ವಾಸಿಷ್ಠಾದಿ

ಗ್ರಂಥಗಳಲ್ಲಿ ಹೇಳಿರುವರು. ಈ ಜ್ಞಾನಿಯು ಶರೀರೇಂದ್ರಿಯಗಳೊಡನೆ ಕೂಡಿದ್ದರೂ ಕಮಲಪತ್ರದಂತೆ ನಿರ್ಲೇಪನಾಗಿರುವನು. ಆಕಾಶದಂತೆ ನಿರ್ಮಳನಾಗಿರುವನು. ಇವನಿಗೆ ಯಾವ ಕರ್ಮವೂ ಅಂಟದು. ಕಾಶಿ ಹೊಲಗೇರಿಗಳಲ್ಲಿ ದೇಹ ಬಿಟ್ಟರೂ ವಿಧಿ ನಿಷೇಧಗಳಿಲ್ಲ, ಕಾಶಿಯಲ್ಲಾದ ಕರ್ಮಗಳಂತೆ ಪುಣ್ಯ ಪಾಪಗಳಿಲ್ಲ. ಪೂರ್ಣನಾದ್ದರಿಂದ ಅರ್ಚಿರಾದಿ ಮಾರ್ಗಗಳೂ ಇಲ್ಲ. ಪೂರ್ಣಕಾಮನಾದ್ದರಿಂದ ಯಾವದೊಂದು ಸಿದ್ಧಿಯ ಅಪೇಕ್ಷೆಯಿಲ್ಲ. ಅವುಗಳನ್ನು ಮಿಥ್ಯೆಯೆಂದು ತಿಳಿದಿರುವನು. ಸಮುದ್ರಕ್ಕೆ ನದಿಗಳು ಬೆರದಂತೆ ಭೋಗಗಳು ತಾವಾಗಿಯೇ ಬರುವವು. ಭೋಗಗಳಲ್ಲಿದ್ದರೂ ಅಸತಿಯಂತೆ ಉದಾಸೀನದಿಂದಿರುವನು. ಆದ್ದರಿಂದ ಅರಿದವನಿಗೆ ಯಾವದೊಂದು ಬಾಧೆಯಿಲ್ಲೆಂದು ಶ್ರುತಿಯು ಹೇಳುತ್ತದೆ.

---

## ಎಂಟನೆಯ ಸಂಧಿ, ಆನಂದಾವಿರ್ಭಾವವು

**ತನ್ನಿಂದಲೇನೊಂದು ಭಿನ್ನವಿಲ್ಲೆಂದು ಸುರೆ ।**
**ಸನ್ನಿಯಂ ನೀಗಿ ಸುಖಿಯಾದೆ ಸದ್ಗುರುವೆ ।**
**ಬಿನ್ನಪವದಿನ್ನು ತನಗುಂಟೆ ॥೮॥**

ಈ ರೀತಿ ತತ್ತ್ವೋಪದೇಶವನ್ನು ಮಾಡಲು ಶಿಷ್ಯನ ಹೃದಯದಲ್ಲಿದ್ದ ಅಜ್ಞಾನವೆಲ್ಲ ನಾಶವಾಯಿತು. ಬಳಿಕ ಈ ಜ್ಞಾನವು ದೃಢವಾಗುವವರೆಗೂ ಮನನ ನಿಧಿಧ್ಯಾಸನಗಳನ್ನು ಮಾಡುತ್ತಿರಬೇಕು. ಮೊದಲಿಂದ ಕಡೆಯವರೆಗೂ ಈ ಗ್ರಂಥದಲ್ಲಿ ನಾಮರೂಪಗಳ ಪ್ರತೀತಿಮಿಥ್ಯೆ ನೀನೇ ಸತ್ಯವೆಂಬುದನ್ನು ಹೇಳಿರುತ್ತದೆ. ನೀನು ಆ ಬ್ರಹ್ಮವೇ ಆ ಬ್ರಹ್ಮವೇ ನೀನು ಹೀಗೆಂದು ಓತಪ್ರೋತಭಾವದಿಂದ ಅಭೇದವನ್ನು ವೇದವು ಹೇಳುತ್ತದೆ. ಸೂತಕ ವಾಕ್ಯವನ್ನು ನಂಬುವಂತೆ ಮಹಾವಾಕ್ಯವನ್ನು ನಂಬತಕ್ಕದ್ದು. ಇದರಲ್ಲಿ ವಿಪರೀತ ಭಾವನೆಬಂದರೆ, ಉದಂಕನ ತಪದಂತೆ ವ್ಯರ್ಥವಾಗುವದು. ನೀನೇ ಬ್ರಹ್ಮನೆಂಬುದನ್ನು ಶ್ರುತಿಗುರುಗಳಿಂದ ಕೇಳಿಯೂ ನಂಬದಿದ್ದರೆ, ಬೂದಿಯಲ್ಲಿ ಹವಿಯನ್ನು (ಘೃತಾದಿಗಳನ್ನು) ಹಾಕಿದಂತೆ ನಿಷ್ಪ್ರಯೋಜನವಾಗಿರುವದು. ಮಂದರಾದ್ರಿಯ ಮಥನವು ಬಂದಾಗಲು ಸಮುದ್ರವು ಶಾಂತವಾದಂತೆ, ಸಂದೇಹವು ನಾಶವಾಗಲು ಆನಂದವು ಉಕ್ಕೇರುವದು. ದೇಹವೇ ನಾನು ಎಂಬಂತೆ ಪರಮಾತ್ಮನು ನಾನು ಎಂಬ ಜ್ಞಾನವು ದೃಢವಾಗುವವರೆಗೂ ಮನನವನ್ನು ಮಾಡತಕ್ಕದ್ದು. ವಿಷಯಾಕಾರ ಬಹಿರ್ಮುಖ ಚಿತ್ತನಾಗದೆ, ತನ್ನ ನಿಜಾನಂದದಲ್ಲಿರಬೇಕು. ಇದು ಸಾಂಪ್ರದಾಯ ಆಚಾರ್ಯರ ಮತವಾಗಿರುವದು. ತಾನು ಬ್ರಹ್ಮನೆಂಬುವಲ್ಲಿ ಈ ಮಹಾವಾಕ್ಯದರ್ಥವು ಅರ್ಥವಾದವಲ್ಲ. ಮನಜನಂ ದೇವೇಂದ್ರನೆಂಬಂತೆ ಸ್ತುತಿಪರವಲ್ಲ. ಆಳಿಗರಸನೆಂಬಂತೆ ಉಪಚಾರ ಪರವಲ್ಲ. ಪ್ರತಿಮೆಯಂ ದೇವತಾಯೆಂಬಂತೆ ಉಪಾಸನಾ ಪರವಲ್ಲ. ಬ್ರಹ್ಮಚಾರಿಯು ಬೆಂಕಿ

ಯಾಗಿರುವನೆಂಬಂತೆ ಸಾದೃಶ್ಯ ಪರವಲ್ಲ. ಮೃತ್ ಘಟದಂತೆ ಕಾರ್ಯಕಾರಣ ಪರವಲ್ಲ. ನಿಲೋತ್ಪಲದಂತೆ ಗುಣಗುಣಿಯಲ್ಲ. ಗವಯ ಪಿಂಡದಂತೆ ಜ್ಯಾತಿವ್ಯಕ್ತಿ ಪರವಲ್ಲ. ಘಟಾಕಾಶದಂತೆ ಅಂಶಾಂಶಿ ಪರವಲ್ಲ. ಯಾಕೆಂದರೆ ಪರಮಾತ್ಮನೇ ಜೀವರೂಪದಿಂದ ಈ ಶರೀರದಲ್ಲಿ ಪ್ರವೇಶಿಸಿದ್ದರಿಂದ ಉಕ್ತವಿಕಲ್ಪಗಳು ಯಾವೂ ಸರಿಬಾರವು. ಆದ್ದರಿಂದ ತಾನೇ ಬ್ರಹ್ಮನೆಂಬುದು ನಿಶ್ಚಯವು.

ಈ ರೀತಿ ಜ್ಞಾನವನ್ನು ಪಡೆದುಕೊಂಡ ಶಿಷ್ಯನು, ಆನಂದಭರಿತನಾಗಿ ಗುರುಗಳ ಉಪಕಾರವನ್ನು ಸ್ಮರಿಸುತ್ತಾ ಗುರುಗಳನ್ನು ಕೊಂಡಾಡುತ್ತಾನೆ. ನಿನ್ನ ಕರಣಾರೂಪ ಜಲವು ನನ್ನ ಮನಸ್ಸಿನ ಮಲವನ್ನು ತೊಳೆದು ಶುದ್ಧಮಾಡಿತು. ನಿನ್ನ ಪಾದಧೂಳಿಯಿಂದ ನನ್ನ ಅಜ್ಞಾನ ಪಿಶಾಚಿಯು ಓಡಿಹೋಯಿತು. ನಿಮ್ಮ ಪಾದಕಮಲದ ಗಂಧವು ನನ್ನನ್ನು ಸದ್ವಾಸನೆಯನ್ನಾಗಿ ಮಾಡಿತು. ನಿಮ್ಮ ಸ್ಪರ್ಶದಿಂದೆ ದೇಹಾದಿಗಳು ಪರಿಶುದ್ಧವಾದವು. ನಿಮ್ಮ ಸಂಗದಿಂದ ನನ್ನ ಕರಣಗಳಿಗೆ ಮರವೆಯಿಲ್ಲದಾಯಿತು. ನಿಮ್ಮ ಕೃಪೆಯಿಂದಲೂ ಬೋಧದಿಂದಲೂ ಅನರ್ಥಗಳು ನಿವೃತ್ತಿಯಾದವು. ಸಾಗರದಂತೆ ಅಪಾರವಾದ ಆನಂದವನ್ನು ಅನುಭವಿಸುತ್ತಲಿದ್ದೇನೆ. ಪುಣ್ಯ ಪಾಪಗಳಿಲ್ಲದ ಪರಬ್ರಹ್ಮವನ್ನು ನಾನು ಏನೆಂದು ಹೇಳಲಿಕ್ಕೆ ಶಕ್ತನಾಗುವೆನು? ಎಲ್ಲವೂ ತಾನಾದ ಮೇಲೆ ಶತ್ರು ಮಿತ್ರತ್ವವಿಲ್ಲ. ಪರಿಚ್ಛಿನ್ನನಾಗಿರುವ ನನ್ನನ್ನು ಪರಿಪೂರ್ಣ ಮಾಡಿರುವ ಸದ್ಗುರುವೇ ನಿನಗೆ ಪುನಃ ಪುನಃ ನಮಸ್ಕಾರ.

ಈ ಅನುಭವಸಾರವು ನವೀನಗಳಾದ ಯುಕ್ತಿ ಅನುಮಾನಾದಿಗಳಿಂದಲೂ ಅನುಭವದಿಂದಲೂ ಶ್ರುತಿ ಪ್ರಮಾಣಗಳಿಂದಲೂ ಕೂಡಿರುವ ಕಾರಣ ಇದು ಸೂರ್ಯನು ಕತ್ತಲೆಯನ್ನು ಕೆಡಿಸಿದಂತೆ ಅಜ್ಞಾನಾದಿಗಳನ್ನು ನಾಶಮಾಡುವದು. ರನ್ನಗನ್ನಡಿಯಲ್ಲಿ ಮುಖವು ಚನ್ನಾಗಿ ಕಾಣುವಂತೆ ಇದರಲ್ಲಿ ತನ್ನ ಸ್ವರೂಪು ಹೊಳೆದುಕಾಣುವದು. ಅನ್ಯಗ್ರಂಥಗಳನ್ನು ಓದಿ ಬಾಯಾರದೆ ಇದನ್ನು ಪ್ರೀತಿಯಿಂದ ಒಮ್ಮೆ ಕೇಳಿದರೆ ಆನಂದದಲ್ಲಿ ಮಗ್ನರಾಗಿರುವರು. ಆದ್ದರಿಂದ ಇದನ್ನು ಅಧಿಕಾರಿಗಳಿಗೆ ತಿಳಿಸಬೇಕು. ಅನಧಿಕಾರಿಗಳಿಗೆ ಹೇಳಬಾರದು. ಆದ್ದರಿಂದ ಅನಂತ ಮಹಿಮಾಂಬು ನಿಧಿಯಾದ ಶಂಭುಲಿಂಗನು ಸಂತರಿಂದ ಯಾವಾಗಲೂ ಈ ಗ್ರಂಥವನ್ನು ಹೇಳಿಸುತ್ತಾ ಇರಲಿ.

**ರೂಢಿಯೊಳು ಮೆರೆಯುವಾರೂಢ ಗುರುವರ ನಿನ್ನ ।**<br>
**ಜೋಡಪದ ಪದ್ಮಗಳ ನೆನೆದು ಶಿವಪುತ್ರ ।**<br>
**ನಾಡೆ ತಾತ್ಪರ್ಯ ರಚಿಸಿದನು ॥**

**ಹೀಗೆಂದು ಶ್ರೀಮನ್ನಿಜಗುಣ ಶಿವಯೋಗಿಗಳು**<br>
ಗ್ರಂಥವನ್ನು ಮುಗಿಸಿರುವರು.

**ಓಂ ಶಾಂತಿಃ ಶಾಂತಿಃ ಶಾಂತಿಃ**






ಶ್ರೀ ಶಂಭುಲಿಂಗಾಯ ನಮಃ

# ಅನುಭವಸಾರ

## ಮೊದಲನೆಯ ಸಂಧಿ

ನಿರ್ವಿಘ್ನದಿಂದ ಗ್ರಂಥ ಪರಿಸಮಾಪ್ತಿಗಾಗಿಯೂ, ಶಿಷ್ಯಪ್ರಶಿಷ್ಯ ಪ್ರವಾಹ ಪ್ರವರ್ತನಕ್ಕಾಗಿಯೂ, ಕೇಳ್ವರ ಚಿತ್ತಸ್ವಾಸ್ಥ್ಯತೆಗಾಗಿಯೂ, ಗ್ರಂಥಾರಂಭದಲ್ಲಿ ಗ್ರಂಥಕರ್ತರಿಂದ ಇಷ್ಟದೇವತಾರೂಪ ಮಂಗಲವು ಮಾಡಲ್ಪಡುತ್ತದೆ.

ಸೂತ್ರ॥ ಪರತರಾನಂದಮಯ ಗುರುಶಂಭು ಪದವೆನ್ನ ।
ಶಿರದೊಳಿರುತಿರ್ಕೆ ನಿಜಕರುಣದಿಂದೆ ॥

ಮಂಗಲ

ಸಿದ್ಧಗುರುವರ್ಯನೇಬದ್ಧರನು ಕಾಪಾಡು ।
ಶುದ್ಧಮತಿಯಿತ್ತು ಸಿದ್ಧಾಂತವರಪುತ್ತ ।
ಬುದ್ಧರನು ಮಾಡು ಕೃಪೆಯಿಂದ ॥

**ಟೀಕಾ:-** ಪರತರ=ಅತ್ಯಧಿಕವಾದ, ಆನಂದಮಯ=ಆನಂದಸ್ವರೂಪನಾದ, ಗುರುಶಂಭು ಪದವು = ಗುರುಶಂಭುವಿನ ಸ್ವರೂಪವು, ಎನ್ನ = ನನ್ನ ಶಿರದೊಳು= ಮನಸ್ಸಿನಲ್ಲಿ, ನಿಜಕರುಣದಿಂದೆ=ನಿಜವಾದ ಕೃಪೆಯಿಂದೆ, ಇರುತಿರ್ಕೆ=ಇರಲಿ.

**ತಾತ್ಪರ್ಯ:-** ಇಹಲೋಕ ವಿಷಯಾನಂದಗಳು ಅಪರಾನಂದಗಳೆನಿಸುವವು. ಸ್ವರ್ಗಲೋಕ ಬ್ರಹ್ಮಲೋಕಗಳ ವಿಷಯಾನಂದಗಳು ಪರಾನಂದಗಳೆನಿಸುವವು. ಈ ಉಪಾಧಿರೂಪಗಳಾದ ಆನಂದಕ್ಕಿಂತಲೂ ನಿರುಪಾಧಿಕ

ನಿರತಿಶಯವಾದ ಆನಂದಮಯ* ಸ್ವರೂಪವೇ ಗುರು, ಶಂಭು, ಆತ್ಮ ಇವರ ಸ್ವರೂಪ ವಾಗಿರುವದು. ಮತ್ತು ಇಂಥಾ "ಆನಂದವೇ ಸರ್ವರಿಗೂ ಆನಂದವನ್ನುಂಟು ಮಾಡುತ್ತದೆ. ಈ ಆನಂದದ ಲೇಶಾನಂದವನ್ನು ಪಡೆದು ಇಂದ್ರಾದಿಗಳು ಸುಖ ವುಳ್ಳವರಾಗುತ್ತಾರೆ. ಈ ಆನಂದ ಸ್ವರೂಪದಿಂದ ಜಗಜ್ಜೀವರುಗಳ ಉತ್ಪತ್ತಿ, ಸ್ಥಿತಿ, ಲಯಗಳಾಗುತ್ತವೆ. ಹೀಗೆಂದು ಶ್ರುತಿಗಳು ಹೇಳುತ್ತವೆ. ಇಂಥಾ ಆನಂದ ಗುರುರೂಪವಾದ ಸ್ವರೂಪವೇ **ಶಂಭುಲಿಂಗನ** ಸ್ವರೂಪವಾಗಿರುತ್ತದೆ. ಇಂಥಾ ಆನಂದರೂಪ ಗುರುವಿನಕ್ಕಿಂತಲೂ ಶಂಭುಲಿಂಗನು ಬೇರೆಯಾಗಿದ್ದರೆ; ದುಃಖಿ ಯಾಗಬೇಕಾಗಿತ್ತು. ಆಗಿರುವನೆಂದಂಗೀಕರಿಸಿದರೆ, ಆವರಣಯುಕ್ತನೂ ಜೀವಿಯೂ ಆಗಿರುವನೆಂದು ಹೇಳಬೇಕಾಗುವದು. ಈ ಮಾತು ಶ್ರುತಿಯುಕ್ತಿ, ಅನುಭವಗಳಿಗೆ ವಿರೋಧವಾಗಿರುತ್ತದೆ. ಆದ್ದರಿಂದ ಆನಂದಕ್ಕಿಂತಲೂ ಬೇರೆ ಯೆಂಬುವದು ಸಂಭವಿಸುವದಿಲ್ಲ. ಆದ್ದರಿಂದ ಆನಂದ ಸ್ವರೂಪನಾದ ಗುರುವೇ ಶಂಭುಲಿಂಗನು. ಶಂಭುಲಿಂಗನೇ ಗುರುವು. ಹೀಗೆ ಸಾಮಾನಾಧಿಕರಣ್ಯದಿಂದ ಅಭೇದವು ಸಿದ್ಧಿಸುತ್ತದೆ. ಮತ್ತು ಮುಮುಕ್ಷುಗಳ ನಿಷ್ಕಾಮ ಪುಣ್ಯಕರ್ಮಗಳ ಪರಿಪಕ್ವದಿಂದ ಶಂಭುಲಿಂಗನೇ ಗುರುವಾಗಿ ಮನುಷ್ಯ ದೇಹವನ್ನು ಧರಿಸಿ, ಜ್ಞಾನೋಪದೇಶಾರ್ಥ ಬಂದಿರುವೆನೆಂದು ಹೇಳುವದರಿಂದಲೂ, ಮತ್ತು "**ಶಂ**" ಸುಖವನ್ನು "**ಭು**" ಉಂಟುಮಾಡುವದರಿಂದ ಶಂಭುವೆಂಬ ಹೆಸರು ಬಂದಿರುತ್ತದೆ. ಅದರಿಂದ ಎಲ್ಲರಿಗೂ ಆನಂದವನ್ನುಂಟು ಮಾಡುವವನು ತಾನು ಆನಂದರೂಪ ನಾಗುವದಿಲ್ಲವೇ ? ಎಲ್ಲರಿಗೂ ಧನವನ್ನು ಬಡ್ಡಿಕೊಡತಕ್ಕವನು ಧನಿಕನಾಗುವ ದಿಲ್ಲವೇ ? ಅರ್ಥಾತ್ ಆನಂದಮಯನೇ ಇರುವನು. ಮತ್ತು ಇಂಥಾ ಆನಂದ ಸ್ವರೂಪನಾದ್ದರಿಂದಲೇ "ಲಿಂಗ" "ಲ" ಲಯದಿಂದಲೂ, "ಗ" ಉತ್ಪತ್ತಿ ಯಿಂದಲೂ, "ಂ" ಶೂನ್ಯನಾಗಿರುವನು. ಅಂದರೆ ನಿತ್ಯ, ನಿರತಿಶಯ ಆನಂದ ಸ್ವರೂಪವೇ **ಗುರುಶಂಭುಲಿಂಗ**ವಾಗಿರುತ್ತಾನೆ. ಇವುಗಳ ಸ್ವರೂಪವೇ ಆತ್ಮ ಪದವಾದರೂ ಆಗಿರುತ್ತದೆ. ಅಂದರೆ, ಬ್ರಹ್ಮಾಭಿನ್ನ ಪ್ರತ್ಯಗಾತ್ಮ ಸ್ವರೂಪ ವಾಗಿರುತ್ತದೆ. "**ಪದ್ಯತೆ ಗಮ್ಯತೆ ಅನೇಕ ಸರ್ವ ಮಿತಿಪದಂ**" ತನ್ನ ಪ್ರತ್ಯ ಗಾನಂದ ಸ್ವರೂಪವು ಪ್ರಾಪ್ತವಾಗುತ್ತಿರಲಿಕ್ಕೆ ಗುರು, ಈಶ್ವರ, ಸಕಲಾನಂದ ಗಳೆಲ್ಲವು ಪ್ರಾಪ್ತವಾದಂತೇ ಆಯಿತು. ಆದ್ದರಿಂದ **ಪದ**ವೆಂದು ಹೇಳಲ್ಪಡು ತ್ತದೆ. "**ತನ್ನ ನಿಜಾನುಸರಣದಿಂದು|ನ್ನಿಸುವದು ವೇದ, ದೈವ, ಗುರು ಕುಲವದರಿಂ**" ಹೀಗೆ ತನ್ನನ್ನು ತಾನು ತಿಳಿದರೆ, ಸರ್ವವೂ ತಿಳಿದಂತಾಯಿತು. ಇಲ್ಲದಿದ್ದರೆ, ಆಗುವದಿಲ್ಲ. ಆದ್ದರಿಂದ ತನ್ನನ್ನು ತಾನು ಮೊದಲು ಅರಿಯ

* ಮಯ ಶಬ್ದಕ್ಕೆ ವಿಕಾರ, ಪ್ರಾಚುರ್ಯ, ಸ್ವರೂಪಗಳೆಂದು ಮೂರು ಪ್ರಕಾರದ ಅರ್ಥಗಳಾಗುವವು. ಮೊದಲಿನವೆರಡು ಅನುಪಯೋಗಗಳಾದ್ದರಿಂದ ಬಿಟ್ಟು ಮೂರನೆಯ ದೊಂದನ್ನೇ ಗ್ರಹಿಸಿರುತ್ತದೆ.

ಲಿಕ್ಕೆಬೇಕೆಂದು, ಗ್ರಂಥಕರ್ತರೇ ಪರಮಾರ್ಥಗೀತೆಯಲ್ಲಿ ಹೇಳಿದ್ದಾರೆ. ಆದ್ದರಿಂದ **ಗುರು, ದೇವ, ತಾನು** ಈ ಮೂರು ಆನಂದ ಸ್ವರೂಪಗಳಾಗಿರುವವು. ಈ ಮೂರು ವಿಧವಾದ ಭೇದವಾದರೂ ಉಪಾಧಿಯಿಂದಲೇ ಹೊರ್ತು ಸ್ವರೂಪದಿಂದಲ್ಲ. ಸ್ವರೂಪದಿಂದ ಕೇವಲ ಒಂದು ಆನಂದರೂಪವೇ ಉಂಟು. ಅದು ಯಾವಾಗಲೂ ತನ್ನ ಮನಸ್ಸಿನಲ್ಲಿ ಇರಲಿ ಎಂಬದಾಗಿ ಗ್ರಂಥಕರ್ತರು ಆಶೀರ್ವಾದ ರೂಪ ಮಂಗಲವನ್ನು ಮಾಡಿದ್ದಾರೆ.

ಶಿಷ್ಯ:- ಗುರು ಶಂಭು ಸ್ವರೂಪವಾದ ಆನಂದ ಸ್ವರೂಪು. ತ್ರಿವಿಧ ಪರಿಚ್ಛೇದ ರಹಿತ ಪೂರ್ಣವಾದ್ದರಿಂದ ಗ್ರಂಥಕರ್ತರ ಮನಸ್ಸಿನಲ್ಲಿ ಮೊದಲೇ ಉಂಟು. ಹೀಗಿದ್ದು ಪುನಃ ಅದೇ ನನ್ನ ಮನಸ್ಸಿನಲ್ಲಿರಲಿ ಎಂದು ಬೇಡುವದು ಅಸಂಭವವಾಗಿರುವದು. ಎಲ್ಲ ಕಡೆಯಲ್ಲಿಯೂ ಉಂಟು ನನ್ನ ಮನಸ್ಸಿನಲ್ಲಿ ಮಾತ್ರ ಇಲ್ಲವೆಂದು ಹೇಳಿದರೆ; ಪರಿಚ್ಛಿನ್ನತ್ವದಿಂದ ಸಾವಯವತ್ವ, ಕಾರ್ಯತ್ವ, ಅನಿತ್ಯಾದಿ ದೋಷಗಳು ಪ್ರಾಪ್ತಗಳಾಗುತ್ತವೆ. ಆದ್ದರಿಂದ ಈ ಮಂಗಲದಲ್ಲಿ ಬೇಡಿಕೆಯು **ಅಯೋಗ್ಯ**ವಾಗಿರುತ್ತದೆ.

**ಗುರು:**- ಆನಂದವು ತನ್ನ ಸ್ವರೂಪವಾಗಿದ್ದರೂ ವಿಸ್ಮೃತಿಯಿಂದ ಕಂಠಗತ ಆಭರಣದಂತೆ ಇಲ್ಲೆಂದೆನಿಸುವದು. ಸ್ಮೃತಿಯಾದರೆ ಇದ್ದದ್ದೇ ಉಂಟೆನಿಸುವದು ಹೇಗೋ ಹಾಗೆ ಗ್ರಂಥಕರ್ತರಿಗೆ ಆನಂದ ಸ್ವರೂಪು ಪ್ರಾಪ್ತವಿದ್ದರೂ, ಅದು ಯಾವಾಗಲೂ ಗುರುಶಂಭುಲಿಂಗ ಇವರುಗಳ ಕೃಪೆಯಿಂದ ಸ್ಮರಣರೂಪಾಗಿರಲಿ ಎಂಬುದೇ ಗ್ರಂಥಕರ್ತರ ಅಭಿಪ್ರಾಯವಿರುವದು. ಅಂದರೆ, ವಿಸ್ಮೃತಿಯೇ ಬಂಧಸ್ವರೂಪ. ಸ್ಮೃತಿಯೇ ಮೋಕ್ಷವಾಗಿರುತ್ತದೆ. ಎಂಬುದನ್ನು ಹೇಳಿದಂತಾಯಿತು. **"ಸ್ಮೃತಿ ಮಾತ್ರದಿಂದೆ ಸಂಸೃತಿ ಬಂಧವಳಿದು"** ಹೀಗೆಂದು ಪರಮಾನುಭವಬೋಧೆಯಲ್ಲಿ ಮೈತ್ರೇಯಿಯು ಬೇಡಿಕೊಂಡಿರುವಳು. ಈ ಅರ್ಥವನ್ನೇ ಪಂಚದಶಿಕಾರರು **'ಅವಿಚಾರೇಣ ಕೃತೋಬಂಧಃ ವಿಚಾರೇಣೈವ ನಿವರ್ತತೆ' ಅವಿಚಾರದಿಂದ ಬಂದ ಬಂಧವು ವಿಚಾರದಿಂದ ನಿವೃತ್ತಿಯಾಗುತ್ತದೆ.** 'ಮನೆಯೊಳಗೆ ಹುಗಿದಿಟ್ಟ ಧನದ ಮೇಲೆ ಮರವೆಯಿಂದ ತಿರುಗಾಡಿವರೂ ಬಡತನದ ದುಃಖವು ಬಿಡದಂತೆ, ತನ್ನ ಆನಂದ ಸ್ವರೂಪು ಸ್ಮೃತಿಯಿಲ್ಲದಲೇ ಇರೋಣದರಿಂದ ಭವದುಃಖವಾಗಿರುತ್ತದೆ.ಹೀಗೆಂದು ಶ್ರುತಿಯನುದಾಹರಿಸಿ ಹೇಳಿರುತ್ತಾರೆ. ಆದ್ದರಿಂದ ಗ್ರಂಥಕರ್ತರು ಆನಂದಸ್ವರೂಪು. ಯಾವಾಗಲೂ ಸ್ಮರಣ ರೂಪದಿಂದ ಇರಲಿ ಎಂಬುದೇ ಅವರ ಅಭಿಪ್ರಾಯವಿರುತ್ತದೆ. ಹೀಗೆ ಗ್ರಂಥಕರ್ತರು ಮಂಗಲವನ್ನು ಮಾಡೋಣದರಿಂದ; ಜೀವ ಬ್ರಹ್ಮರ ಅಭೇದವೇ ಗ್ರಂಥಕ್ಕೆ **ವಿಷಯವೆಂದೂ,** ಅತ್ಯಂತ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿಯೇ ಗ್ರಂಥಕ್ಕೆ **ಪ್ರಯೋಜನವೆಂದೂ,** ಅರ್ಥಾತ್ ಸೂಚನೆ ಮಾಡಿ

ದಂತಾಯಿತು. ಆದ್ದರಿಂದ ಜಾತ್ಯಾದಿ ನಿರ್ಬಂಧವಿಲ್ಲದೆ ಸಾಧನ ತುಚಷ್ಟಯ ಸಂಪನ್ನನೇ **ಅಧಿಕಾರಿಯೆಂದೂ** ಪ್ರತಿಪಾದ್ಯ ಪ್ರತಿಪಾದಕ ಭಾವವೇ **ಸಂಬಂಧವೆಂದೂ** ಕೂಡಾ ಊಹಿಸಬಹುದು.

ಶಿಷ್ಯ:- ಗ್ರಂಥಕರ್ತರು ಸುಮ್ಮನೆ ಇಷ್ಟದೇವತಾರೂಪ ಮಂಗಲ ಮಾಡುವದನ್ನು ಬಿಟ್ಟು, ವಿಷಯ ಪ್ರಯೋಜನಾದಿಗಳಿಂದ ಗರ್ಭೀಕರಿಸಿದ ಮಂಗಳವನ್ನು ಮಾಡೋಣದರಿಂದ ಪ್ರಯೋಜನವೇನು?

**ಗುರು:**- ಎಂಥಾ ಮಂದಬುದ್ಧಿಯುಳ್ಳ ಪುರುಷನಾದರೂ ವಿಷಯ ಪ್ರಯೋಜನವಿಲ್ಲದೆ ಯಾವ ಕಾರ್ಯದಲ್ಲಿಯೂ ಪ್ರವೃತ್ತಿಯಾಗುವದಿಲ್ಲ ಪ್ರಯೋಜನಾದಿಗಳಿಂದೊಡಗೂಡಿದ ಅನುಬಂಧ ಚತುಷ್ಟಯಜ್ಞಾನವಾದರೆ ಸರ್ವರೂ ಸುಖದಿಂದ ಗ್ರಂಥದಲ್ಲಿ ಪ್ರವೃತ್ತಿಯುಳ್ಳವರಾಗುತ್ತಾರೆಂದು ಹೀಗೆ ಹೇಳಿರುತ್ತಾರೆ. **ವೀರಶೈವ ಖಾನಾವಳಿ** ಎಂಬ ಬೋರ್ಡಿನಂತೆ, ಈ ಮಂಗಲವಿರುತ್ತದೆಂದು ತಿಳಿ. ಏಕಂದರೆ, ಆ ಬೋರ್ಡನ್ನು ಕಂಡೊಡನೆ ಈ ಗೃಹದಲ್ಲಿ ಪ್ರವೇಶಿಸುವದಕ್ಕೆ **ವೀರಶೈವನೇ ಅಧಿಕಾರಿಯೆಂದೂ**,ಎಂಟು ಆಣೆಯನ್ನು ಕೊಡುವದು ತಕ್ಕೊಳ್ಳುವದು ಸಂಬಂಧವೆಂದೂ, ಭೋಜನವೇ ಇಲ್ಲಿ **ವಿಷಯ**ವೆಂದೂ, ಊಟ ಮಾಡುವದರಿಂದ ಹಸಿವೆನಿವೃತ್ತಿ, ಆನಂದ ಪ್ರಾಪ್ತಿಯೇ **ಪ್ರಯೋಜನ**ವೆಂದೂ ಹೇಗೆ ಆ ಬೋರ್ಡು ಸೂಚಿಸುವದೋ, ಅದರಂತೆ ಈ ಅನುಬಂಧ ಚತುಷ್ಟಯವನ್ನು ಮಂಗಳವಾದರೂ ಸೂಚಿಸುತ್ತದೆ. ಆದ್ದರಿಂದ ಈ ಅಭಿಪ್ರಾಯವನ್ನು ಇಟ್ಟುಕೊಂಡು ಗ್ರಂಥಕರ್ತರು ಶ್ರೀಮನ್ನಿಜಗುಣ ಶಿವಯೋಗಿಗಳು ಹೇಳಿರುವದು ಯಥಾರ್ಥವಾಗಿರುತ್ತದ. ಇದರಲ್ಲಿ ಯಾವದೋಷವೂ ಇಲ್ಲ.

ಬಳಿಕ, ಶ್ರೀ ಸದ್ಗುರುಗಳನ್ನು ಕುರಿತು ಆಶೀರ್ವಾದ ರೂಪ ಮಂಗಲವನ್ನು ಮಾಡುತ್ತಾರೆ.

**ಶ್ರೀಗುರುವೆ ನಿಜಸುಖದ ಸಾಗರವೆ ತೆರೆಮಸಗು ।**
**ತಾಗಳುಂ ಬೆಳಗುತಿಹ ನಿನ್ನ ಕಡೆಗಣ್ಣ ।**
**ಳೀಗೆ ಸಂತಸವನಖಿಳರ್ಗೆ** ॥೧॥

**ಟೀಕಾ:**- ಶ್ರೀಗುರುವೆ=ಷಡ್ಗುಣೈಶ್ವರ್ಯದಿಂದ ಕೂಡಿದ ಗುರುವರ್ಯನೇ, ನಿಜ=ಸ್ವಕೀಯವಾದ, ಸುಖದ=ಆನಂದದ, ಸಾಗರವೇ=ಸಮುದ್ರಪ್ರಾಯನೇ, ತೆರೆ=ತರಂಗಗಳು, ಮಸಗುತ=ಒಂದನ್ನೊಂದು ತಿಕ್ಕುತ್ತ, ಆಗಳುಂ=ಯಾವಾಗಲೂ, ಬೆಳಗುತಿಹ=ಪ್ರಕಾಶಮಾನವಾಗಿರುವಂಥಾ, ನಿನ್ನ=ನಿನ್ನ, ಕಡೆಗಣ್ಗಳ್=ಕಟಾಕ್ಷಗಳು, ಅಖಿಳರ್ಗೆ=ಸರ್ವರಿಗೆ, ಸಂತಸವನು=ಸುಖವನ್ನು, ಈಗೆ=ಕೊಡಲಿ.

**ತಾತ್ಪರ್ಯ:**- ಅಣಿಮಾದ್ಯಷ್ಟೈಶ್ವರ್ಯದಿಂದಲೂ ಬ್ರಹ್ಮವಿದ್ಯಾರೂಪ ಸಂಪತ್ತಿನಿಂದಲೂ ಯುಕ್ತನಾದ ಸದ್ಗುರುವೆ! ನಿನ್ನ ಸ್ವಕೀಯ ಆನಂದಮಯ

ವಾದ ಸ್ವರೂಪು ಸಮುದ್ರ ಸದೃಶವಾಗಿರುತ್ತದೆ. ಸಮುದ್ರದಲ್ಲಿ ವಾಯುವಶಾತ್ ತೆರೆಗಳೆದ್ದು, ಒಂದನ್ನೊಂದು ಒತ್ತುತ್ತ ದಂಡಿಗೆ ಬಂದು, ಅಲ್ಲಿ ಸ್ನಾನಮಾಡುತ್ತಿರುವರಿಗೆಲ್ಲರಿಗೂ ಸ್ಪರ್ಶಿಸಿ ಹೇಗೆ ಆನಂದಜನಕವಾಗಿರುವವೋ, ಹಾಗೇ ಬ್ರಹ್ಮಾಕಾರವೃತ್ತಿರೂಪ ವಾಯುವಶದಿಂದ ಆನಂದರೂಪ ತೆರೆಗಳೆದ್ದು ಒಂದಕ್ಕಿಂತ ಒಂದು ಮುಂದೆ ಬಂದು, ನಿನ್ನ ಕೃಪಾಕಟಾಕ್ಷ ರೂಪದಿಂದ ಹೊರಬಿದ್ದು, ನಮ್ಮೆಲ್ಲರನ್ನು ಅವಲೋಕಿಸಿ, ಭವತಾಪವನ್ನು ದೂರಮಾಡಿ ನಿಜಾನಂದವನ್ನುಂಟುಮಾಡಲಿ. ಅಂದರೆ ಆವಿರ್ಭಾವ ಮಾಡಲಿ ಎಂದು ಬೇಡುತ್ತಾರೆ.

**ಶಿಷ್ಯ:**- 'ಶ್ರೀಗುರುವೆ' ಎಂಬ ಪದಕ್ಕೆ ಅಣಿಮಾದ್ಯಷ್ಟೈಶ್ವರ್ಯದಿಂದ ಬ್ರಹ್ಮವಿದ್ಯಾರೂಪ ಸಂಪತ್ತಿನಿಂದಲೂ ಕೂಡಿದವರೆಂದು ಅರ್ಥಮಾಡಿದಿರಿ. ಆದರೆ, ಗುರುಗಳಲ್ಲಿ ಈ ಐಶ್ವರ್ಯವು ತೋರುವದಿಲ್ಲ. ಮತ್ತು ಬ್ರಹ್ಮವಿದ್ಯೆಗೆ ಸಂಪತ್ತು ಎಂಬದಾಗಿಯೂ ನಾನು ಕೇಳಿಲ್ಲ. ತಾವು ಹೀಗೆ ಹೇಳುವದು ನನಗೆ ಆಶ್ಚರ್ಯವಾಗಿ ಕಾಣುತ್ತದೆ.

**ಗುರು:**- ಇದೇನೂ ಆಶ್ಚರ್ಯವಲ್ಲ. ಮತ್ತೇನಂದರೆ, ಗುರುಗಳು ಈಶ್ವರನ ಆತ್ಮರೂಪರಾಗಿರುವದರಿಂದ ಈಶ್ವರನಲ್ಲಿದ್ದ ಅಣಿಮಾದಿಗಳು ಈತನವೇ ಆಗಿರುತ್ತವೆ. **'ಮುಕ್ತಂಗಪ್ಪಣಿಮಾದಿಗಳಿರವ ವ್ಯಕ್ತಂಮಾಡುವೆನರಿಸುತಪರವ'** ಎಂದು ಪರಮಾರ್ಥಗೀತೆಯಲ್ಲಿಯೂ ಹೇಳಿದೆ **'ಜ್ಞಾನಿ ನನ್ನ ಆತ್ಮನೇ ಇದ್ದಾನೆಂದು ತಿಳಿ'** ಹೀಗೆ ಭಗವಂತನ ಗೀತಾವಾಕ್ಯವಿರುತ್ತದೆ. ಈ ರೀತಿ ಗುರುಗಳ ಸ್ವರೂಪ ದೃಷ್ಟಿಯಿಂದ ವಿಚಾರ ಮಾಡಿದರೆ ಸಕಲೈಶ್ವರ್ಯ ಸಂಪನ್ನರಿದ್ದಾರೆ. ಆದ್ದರಿಂದ ಭಕ್ತರ ಅಭೀಷ್ಟವನ್ನು ಪೂರೈಸುವರೆಂಬ ಭಾವವು. ಲೋಕದಲ್ಲಿ ದುಃಖವನ್ನು ಕಳೆದು ಸುಖವನ್ನುಂಟು ಮಾಡಿದ್ದಕ್ಕೆ ಸಂಪತ್ತೆಂದು ಹೇಳುವರು. ಅದರಂತೆ ಬ್ರಹ್ಮವಿದ್ಯೆಯಾದರೂ ಭವದುಃಖವನ್ನು ನಾಶಿಸಿ ಸ್ವರೂಪಸುಖವನ್ನುಂಟು ಮಾಡುವದರಿಂದ ಸಂಪದ್ರೂಪವಾಗಿರುವದು. ಮತ್ತು ವ್ಯಕ್ತಿಶಃ ವಿಚಾರ ಮಾಡಿದರೂ ಸಕಾಮತಪಸ್ಸಿನಿಂದಲೂ ಅವರಲ್ಲಿ ಅಣಿಮಾದಿಗಳು ಇರುತ್ತವೆ. ಆದ್ದರಿಂದ ಶ್ರೀಗಳು ಎಂಬ ಪದವು ಸಾರ್ಥಕ್ಯವಾಗಿರುತ್ತದೆ

**ಶಿಷ್ಯ:**. ಇಂದ್ರಿಯ ಮತ್ತು ವಿಷಯ, ಇವುಗಳ ಸಂಯೋಗದಿಂದ ಜನ್ಯವಾದ ಆನಂದಗಳು ಲೋಕದಲ್ಲಿ ನಮ್ಮ ಅನುಭವಕ್ಕೆ ಬರುತ್ತವೆ. ಹೀಗಿದ್ದು ಗುರುಗಳು ನಿಜಸುಖವುಳ್ಳವರಾಗಿರುವದು: ಹೇಗೆ ?

**ಗುರು:**- ಎಲೋ ಮಗುವೇ ! ಆ ನಿಜಸುಖವು ಈಗಳೇ ನಿನ್ನ ಅನುಭವಕ್ಕೆ ಬರುವದಿಲ್ಲ. ಅದರ ಅನುಭವವಾಗಬೇಕಾದರೆ ನೀನೂ ಗುರುರೂಪನಾಗಬೇಕು. ನೀರಲ್ಲಿ ಮೀನಗಳು ಹೇಗೆ ನಡೆಯುತ್ತವೆಂದು ಕೇಳಿದರೆ ಮೀನರೂಪಾಗಿಯೇ

ತಿಳಿಯಬೇಕಾಗುವದು. ಇರಲಿ, ಪರಂತು ಸುಖವು ವಿಷಯೇಂದ್ರಿಯ ಸಂಯೋಗ ಜನ್ಯದಿಂದಲೇ ತೋರುತ್ತದೆಂಬುದು ನಿಯಮವಲ್ಲ. ಕಿಂತು ದುಃಖವಾದರೂ ತೋರಬಹುದು. ಸುಷುಪ್ತಿಯಲ್ಲಿ ನಿನಗೆ ಯಾವ ಸುಖವುಂಟೋ, ಅದು ಯಾವ ಇಂದ್ರಿಯ ವಿಷಯಗಳಿಂದ ಜನ್ಯವಲ್ಲ. ಅದು ನಿನ್ನ ಸ್ವಕೀಯ ನಿರ್ವಿಷಯವಾದ ಆನಂದವಾಗಿರುವದು. ನೀನು ಸುಷುಪ್ತಿಯಲ್ಲಿ ಆವರಣ ಸಮೇತವಾದ ಸುಖ ರೂಪನು ಹೇಗಿರುವಿಯೋ, ಹಾಗೇ ಗುರುಗಳು ಜಾಗ್ರತದಲ್ಲಿ ನಿರಾವರಣ ನಿಜ ಸುಖರೂಪರಾಗಿರುತ್ತಾರೆಂದು ತಿಳಿಯಬೇಕು.

**ಶಿಷ್ಯ:**- ಹಾಗಾದರೆ, ಗುರುಗಳ ಕೃಪಾಕಟಾಕ್ಷದಲ್ಲಿ ಅನ್ಯರ ದುಃಖವನ್ನು ಕಳೆದು ಸುಖವನ್ನುಂಟು ಮಾಡುವಶಕ್ತಿಯಿರುವದೇ ?

**ಗುರು:**- ದೃಷ್ಟಿಯಲ್ಲಿ ಸಾಮರ್ಥ್ಯವುಂಟು. ಹೇಗಂದರೆ ಊಟಕ್ಕೆ ಕೂತಿರುವ ಸಮಯದಲ್ಲಿ ಆ ಅನ್ನದಮೇಲೆ ತಾಯಿ, ಸದ್ವೈದ್ಯ, ಗುರು, ಇವರುಗಳ ದೃಷ್ಟಿಯು ಬೀಳಬೇಕು. ಅನ್ಯರ ದೃಷ್ಟಿಯು ಬೀಳಬಾರದೆಂದು ನೀತಿವಾಕ್ಯವುಂಟು. ಮತ್ತು ಲೋಕದಲ್ಲಿ ರೂಢಿಯೂ ಉಂಟು. ಸುಂದರ ವಸ್ತುಗಳಿಗೆ ದೃಷ್ಟಿಯಾಗಬಾರದೆಂದು ಅವುಗಳಿಗೆ ದೃಷ್ಟಿಆಕರ್ಷಕ ಅನ್ಯ ಪದಾರ್ಥಗಳನ್ನು ಕಟ್ಟುವದು ರೂಢಿಯಿದೆ. ಒಬ್ಬೊಬ್ಬ ಪುರುಷನ ಕ್ರೂರ ದೃಷ್ಟಿಯಿಂದ ಕಲ್ಲುಗಳು ಒಡೆದು ಹೋಗುವವು. ಬಾಲಕರು ಪಶುಗಳು ಕೂಡಾ ಭಯದಿಂದ ಓಡಿ ಹೋಗುವರು. ಸೌಮ್ಯವಾದ ದೃಷ್ಟಿಯಿಂದ ಅವಲೋಕಿಸಿದರೆ ಪಶುಗಳು ಬಾಲಕರು ಸಮೀಪಕ್ಕೆ ಬರುವರು. ಜನರು ಸಂತೋಷವುಳ್ಳವರಾಗುವರು. ಇದು ಲೋಕಾನುಭವಸಿದ್ಧವಾಗಿರುವದು. ಯೋಗಿಗಳಲ್ಲಿ ದೂರದೃಷ್ಟಿಯು ಅಸಾಧಾರಣ ಸಾಮರ್ಥ್ಯವುಳ್ಳದ್ದಾಗಿರುತ್ತದೆ. ಈ ದೃಷ್ಟಿಯು ಏಕಾಗ್ರತಾ ಅಭ್ಯಾಸವನ್ನು ಬೆಳಿಸಿ ಅದರಿಂದ ವರ್ತಮಾನಕಾಲ ದಲ್ಲಿ ಅನ್ಯರರೋಗಗಳನ್ನು ಕಳೆಯುವದು. ಮೂರ್ಛಿತರನ್ನಾಗಿ ಮಾಡುವದು ಮೆಸ್‌ಮೇರಿಝಮ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಈ ಸಾಮಾನ್ಯದೃಷ್ಟಿ ಗಳಲ್ಲಿಯೇ ಈ ಶಕ್ತಿಯಿದ್ದಮೇಲೆ, ಕೇವಲ ನಿಜಾನಂದ ಆಸ್ವಾದನೆಯನ್ನು ಮಾಡುವಂಥಾ ಅಂತಃಕರಣವೃತ್ತಿಯು ಬಹಿರ್ಮುಖವಾಗಿ, ಆನಂದ ಸಮೇತ ಹೊರಬಿದ್ದು ನೇತ್ರದಿಂದ ಹೊರಟು ಭಕ್ತರನ್ನು ಅವಲೋಕಿಸುತ್ತಿರಲಿಕ್ಕೆ, ತಾಪವನ್ನು ಕಳೆದು ಸುಖವನ್ನುಂಟುಮಾಡುವಲ್ಲಿ ಸಂಶಯವೇನು. ಆದ್ದರಿಂದಲೇ ಆಗಮ ಗ್ರಂಥಗಳಲ್ಲಿ ಇದಕ್ಕೆ ಚಾಕ್ಷುಷದೀಕ್ಷೆಯೆಂದುಕರೆಯುತ್ತಾರೆ. ಗ್ರಂಥ ವಿಸ್ತಾರಭಯದಿಂದ ಬರೆಯುವದನ್ನು ಬಿಟ್ಟಿದ್ದೇವೆ. ಮತ್ತು ಮುಂದೆ ಪ್ರಸಂಗಾ ನುಸಾರ ಪ್ರತಿಪಾದಿಸುತ್ತೇವೆ. ದರ್ಶನ, ಸ್ಪರ್ಶನ, ಸಂಭಾಷಣಾದಿಗಳಿಂದ ಪಾಪಿಗಳ ಪಾಪಕ್ಷಯವಾಗುವದರಿಂದ; ಜೀವನ್ಮುಕ್ತನಿಂದ ಈ ಲೋಕಕ್ಕೆ ಪ್ರಯೋಜನವುಂಟೆಂದು **ವಿವೇಕಚಿಂತಾಮಣಿ**ಯಲ್ಲಿ ಹೇಳಿರುತ್ತದೆ. ಆದ್ದರಿಂದ

ಹೇ ಗುರುನಾಥನೇ! ನಿನ್ನ **ಕೃಪಾಕಟಾಕ್ಷ**ಗಳು ಸರ್ವರಿಗೂ ಆನಂದವನ್ನುಂಟು ಮಾಡಲಿ ಎಂಬದಾಗಿ ಗ್ರಂಥಕರ್ತರು ಮಂಗಲವನ್ನು ಮಾಡಿದ್ದಾರೆ.

ಬಳಿಕ, ಉಕ್ತ ರೀತಿ ಗುರುಗಳ ಮಂಗಲವನ್ನು ಮಾಡಿ ಬಳಿಕ ಇಷ್ಟದೇವತೆಯಾದ **ಶಂಭುಲಿಂಗನನ್ನು** ಕುರಿತು ನಮಸ್ಕಾರರೂಪ ಮಂಗಲವನ್ನು ಮಾಡುತ್ತಾರೆ.

**ಜಗದಾದಿ ಬೀಜಂಗೆ ನಿಗಮಾಂತ ವೇದ್ಯಂಗೆ ।**
**ನಗರಾಜ ಸುತೆಯ ರಮಣಂಗೆ ಶಂಭುವಿಂ ।**
**ಗಗಣಿತೋತ್ಸವದಿ ನತನಪ್ಪೆ** ॥೨॥

**ಟೀಕಾ:-** ಜಗದಾದಿ=ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶಂಗಳಿಗೆ, ಬೀಜಂಗೆ=ಮೂಲಕಾರಣನಾದಂಥಾ, ನಿಗಮಾಂತ=ಉಪನಿಷತ್ತುಗಳಿಂದ, ವೇದ್ಯಂಗೆ=ಗೋಚರನಾದಂಥಾ, ನಗರಾಜ=ಹಿಮವತ್ಪರ್ವತನ, ಸುತೆಯ=ಮಗಳಾದ ಪಾರ್ವತಿಯ, ರಮಣಂಗೆ=ಗಂಡನಾದ, ಶಂಭುವಿಗೆ=ಶಂ=ಸುಖವನ್ನು, ಭು=ಉಂಟು ಮಾಡುವ,ಶಂಕರನಿಗೆ, ಅಗಣಿತ=ಲೆಕ್ಕವಿಲ್ಲದ, ಉತ್ಸವದಿ=ಸಂತೋಷ ದಿಂದ, ನತನು=ನಮಸ್ಕಾರ ಮಾಡುವಾತನು, ಅಪ್ಪೆ=ಆಗುತ್ತೇನೆ.

ತಾತ್ಪರ್ಯ:- **ಹೇ ಶಂಭುಲಿಂಗನೇ!** ನೀನು ಸರ್ವಶಕ್ತನೂ, ಸರ್ವಜ್ಞನೂ ಆಗಿರುವಿ. ಆದ್ದರಿಂದಲೇ ಈ ನಾಮರೂಪಾತ್ಮಕ ವಿಕಾರವಾಗಿಯೂ, ಅನೇಕ ಕರ್ತೃ ಭೋಕ್ತೃಗಳಿಂದ ಕೂಡಿದ್ದಾಗಿಯೂ, ದೇಶ, ಕಾಲ, ನಿಮಿತ್ತ, ಕ್ರಿಯಾಫಲಗಳಿಗೆ ಆಶ್ರಯವಾಗಿಯೂ, ಮನಸ್ಸಿನಿಂದಲಾದರೂ ಚಿಂತಿಸಲಿಕ್ಕೆ ಬಾರದಾಗಿಯೂ, ಇರುವಂಥ ಜಗತ್ತಿಗೆ ನೀನೇ ಕಾರಣನಾಗಿರುವಿ. ಅಂದರೆ ಈ ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶಗಳಿಗೆ ನೀನು ಅಧಿಷ್ಠಾನನಾಗಿರುವಿ ಎಂಬ ಭಾವವು. ಆದ್ದರಿಂದಲೇ ನೀನು ಉಪನಿಷತ್ತುಗಳಿಂದ ತಿಳಿಯಲಿಕ್ಕೆ ಯೋಗ್ಯನಾಗಿರುವಿ. ಪರ್ವತರಾಜನ ಪುತ್ರಿಯಾದ ಪಾರ್ವತಿಗೆ ವಲ್ಲಭನಾಗಿ ಇರುವಂಥಾ ಹೇ ಶಂಭುಲಿಂಗನೇ! ನಿನಗೆ ನಾನು ಅತ್ಯಧಿಕವಾದ ಸಂತೋಷದಿಂದ ಕೂಡಿದವನಾಗಿ ನಮಸ್ಕಾರ ಮಾಡುತ್ತೇನೆ.

ಶಿಷ್ಯ:- ಪ್ರಕೃತಿ, ಪರಮಾಣು ಕಾಲ ಕರ್ಮಾದಿಗಳೇ ಜಗತ್ತಿಗೆ ಕಾರಣಗಳಾಗಿರುತ್ತವೆ. ಬೇರೆ ಯಾವ ಕಾರಣವೂ ಇಲ್ಲೆಂದು ಕ್ರಮವಾಗಿ ಸಾಂಖ್ಯ, ನೈಯಾಯಿಕ, ಕಾಲವಾದಿ, ಪೂರ್ವ ಮೀಮಾಂಸಕ ಮೊದಲಾದವರು ಹೇಳುತ್ತಾರೆ. ಆದ್ದರಿಂದ ತಾವು **ಶಂಭುಲಿಂಗನೇ** ಕಾರಣನೆಂದು ಹೇಗೆ ಹೇಳುವಿರಿ?

**ಗುರು:-** ಎಲೋ ಶಿಷ್ಯನೇ! ಆ ಪ್ರಕೃತಿ ಮೊದಲಾದವುಗಳು ಜಡಗಳಾದ್ದರಿಂದ ಈ ವಿಚಿತ್ರರೂಪ ಸೃಷ್ಟಿಯನ್ನುಂಟುಮಾಡುವ ಸಾಮರ್ಥ್ಯವು

ಅವುಗಳಿಗಿಲ್ಲ. ಜೀವನು ಚೇತನರೂಪನಾದರೂ ಅದೃಷ್ಟಕ್ಕೆ ಪರತಂತ್ರನೂ ಕಿಂಚಿಜ್ಞನೂ ಆಗಿರೋಣದರಿಂದ **ಜೀವನೂ** ಕಾರಣನಾಗನು. ಆದ್ದರಿಂದ ಈಶ್ವರನೇ ಕಾರಣನೆಂದು ಹೇಳಬೇಕಾಗುವದು. ಮತ್ತು ಮಹಿಮ್ನಕಾರರು "**ಅಜನ್ಮಾನೋಲೋಕಾಃ**" ಎಂಬ ಶ್ಲೋಕದಲ್ಲಿಯೂ ಈಶ್ವರನೇ ಕಾರಣ ನೆಂಬುದನ್ನು ತೋರಿಸಿದ್ದಾರೆ. ಹೇಗಂದರೆ, ಚತುರ್ದಶ ಲೋಕಗಳು ಸಾವಯವ ಗಳಾಗಿರುವವರಿಂದ ಉತ್ಪತ್ತಿಯಾಗಿಲ್ಲವೆ? ಉತ್ಪತ್ತಿಗಳಾಗಿರುತ್ತವೆ. ಆ ಉತ್ಪತ್ತಿ ಕ್ರಿಯೆಯಾದರೂ ಅಧಿಷ್ಠಾನ ಪುರಷನಿಲ್ಲದೆ ಆಗುವದೋ? ಎಂದಿಗೂ ಆಗದು.

ಹಾಗಾದರೆ, ಜೀವಪುರುಷದಿಂದ ಜಗದುತ್ಪತ್ತಿಯಾಗಿರುವದೆಂದು ಹೇಳ ಬಹುದು. ಹೀಗೆ ಹೇಳಿದರೆ, ಆ ಜೀವನು ಈ ಜಗತ್ತನ್ನು ಯಾವ ಸಾಮಗ್ರಿ ಯಿಂದ ರಚನೆಮಾಡಿದನು? ಕುಲಾಲನು ದಂಡ, ಚಕ್ರ, ಮೃತ್ತಿಕಾ ಮೊದಲಾದ ಸಾಮಗ್ರಿಗಳಿಂದ ಘಟವನ್ನು ರಚಿಸುವದು ಕಂಡು ಬರುತ್ತದೆ. ಜೀವನಲ್ಲಿ ಯಾವ ಸಾಮಗ್ರಿಯು ಕಂಡು ಬರುವದಿಲ್ಲ. ಮತ್ತು ಇಷ್ಟೇ ಅಲ್ಲ. ಈ ಜೀವನಿಗೆ ತನ್ನ ಶರೀರದ ರಚನೆಯು ಹೇಗಾಯಿತು ಎಂಬುವ ಜ್ಞಾನವಿಲ್ಲ. ಅಂದಮೇಲೆ; ಹದಿನಾಲ್ಕು ಲೋಕಗಳ ರಚನೆಯ ಜ್ಞಾನವೆಲ್ಲಿಂದ ಬಂದೀತು? ಆದ್ದರಿಂದ ಸರ್ವಜ್ಞನಾದ ಈಶ್ವರನೇ ಜಗತ್ತಿಗೆ ಕಾರಣನಾಗಿರುತ್ತಾನೆ.

**ಶಿಷ್ಯ:-** ಸ್ವಾಮಿನ್! ತಾವು ಹೇಳುವದರ ಮೇಲಿಂದ ನನಗೆ ಹೀಗೆ ತೋರು ತ್ತದೆ. ಏನಂದರೆ, ಯಾವ ಯಾವ ಕಾರ್ಯವು ಕಂಡುಬರುವದೋ, ಆ ಕಾರ್ಯವು ಕರ್ತಾಪುರುಷನಿಂದ ಉತ್ಪನ್ನವಾಗಿರಲಿಕ್ಕೇಬೇಕು. ಘಟಪಟಾದಿ ಕಾರ್ಯಗಳನ್ನು ಕಂಡು ಕುಲಾಲಾದಿ ಕರ್ತರನ್ನು ಅನುಮಾನಮಾಡುತ್ತೇವೆ. ಅದರಂತೆ, ಈ ಜಗದ್ರೂಪ ಕಾರ್ಯವನ್ನು ಕಂಡು ಕರ್ತನಾದ ಈಶ್ವರನಿದ್ದಾನೆಂದು ಅನುಮಾನ ಮಾಡೋಣ; ಆದರೆ ಈಶ್ವರನು ಕುಲಾಲಾದಿಗಳಂತೆ ಸಾಮಗ್ರಿಯಿಂದೊಡಗೂಡಿ ಸೃಷ್ಟಿಯನ್ನು ಮಾಡಿದನೆಂದು ಹೇಳಿದರೆ; ಅವನು ಈಶ್ವರನಲ್ಲ. ಯಾಕಂದರೆ, ಸಾವಯವ ಶರೀರವುಳ್ಳವನಾಗಿ ಕುಂಬಾರನಂತೆ ಸಾಮಗ್ರಿಸಹಿತನಾಗಿ ಸೃಷ್ಟಿ ಯನ್ನು ಮಾಡಿದರೆ, ನಮ್ಮಗಳ ಸಮಾನವೇ ಆಗುವನು. ನಮಗಿಂತಲೂ ವಿಲಕ್ಷಣ ನಾಗಲಿಲ್ಲ. ಅನೀಶ್ವರತ್ವವು ಬರುವದು. ದೇಹವಿಲ್ಲ, ಸಾಮಗ್ರಿಯಿಲ್ಲೆಂದು ಹೇಳಿದರೆ, ಜಗತ್ತಿನ ಕರ್ತೃತ್ವವೇ ಸಂಭವಿಸುವದಿಲ್ಲ. ಅಂದಮೇಲೆ ಈಶ್ವರತ್ವವು ಹೇಗೆ?

**ಗುರು:-** ಕಂದನೇ! ನೀನು ಮಾಡಿದ ಈ ಕುತರ್ಕಕ್ಕೆ ಅವಕಾಶವೇ ಇಲ್ಲ. ಯಾಕಂದರೆ, (ಪರ್ವತ ರಾಜನ ಪುತ್ರಿಯಾದ) ವಿಚಿತ್ರ ನಾನಾಶಕ್ತಿಯುಕ್ತವಾದ ಮಾಯಾವಶದಿಂದ ಅಭಿನ್ನ ನಿಮಿತ್ತೋಪಾದಾನನಾಗಿ, ಅನಾಯಾಸದಿಂದ

ಲೀಲಾಮಾತ್ರದಿಂದ ವಿಚಿತ್ರ ಸರ್ವಜಗತ್ತನ್ನು ನಿರ್ಮಾಣವನ್ನು ಮಾಡುವಾತನಾಗಿದ್ದಾನೆ. ಆದ್ದರಿಂದ ಅಂಥಾ ಪರಮಾತ್ಮನನ್ನು ನೀನು ತರ್ಕದಿಂದಲೂ ಅನುಮಾನ ಪ್ರಮಾಣದಿಂದಲೂ ಎಂದೂ ತಿಳಿಯಲಾರಿ. ಯಾಕಂದರೆ, ಅವನು ತರ್ಕಕ್ಕೂ ಪ್ರಮಾಣಕ್ಕೂ ಅಗೋಚರನಾಗಿರುತ್ತಾನೆ.

ಶಿಷ್ಯ:- ಹಾಗಾದರೆ; ಈಶ್ವರನನ್ನು ತಿಳಿಯುವ ಬಗೆಹೇಗೆ?

**ಗುರು:-** ಆ ಪರಮಾತ್ಮನು ಉಪನಿಷತ್ತುಗಳಿಂದ ಮಾತ್ರ ತಿಳಿಯಲಿಕ್ಕೆ ಯೋಗ್ಯನಿರುತ್ತಾನೆ. ಹೇಗಂದರೆ, '**ಯತೋವಾ ಇಮಾನಿ ಭೂತಾನಿ**' ಈ ಭೂತಗಳು ಎಲ್ಲಿಂದ ಹುಟ್ಟುವವೋ, ಎಲ್ಲಿ ಜೀವಿಸುವವೋ, ಎಲ್ಲಿ ನಾಶವಾಗುವವೋ ಆದೇ ಪರಮಾತ್ಮನೆಂದು ತಿಳಿ. ಅಂದರೆ ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶಗಳೆಲ್ಲವು ಯಾವಾತನಿಂದ ಆಗುವವೋ, ಅಂಥಾ ಸರ್ವಜ್ಞ,ಸರ್ವಕರ್ತ, ಸರ್ವಶಕ್ತಿಯುಕ್ತನಾದವನು ಪರಮಾತ್ಮನೆಂದು ತಿಳಿ. ಈ ವಿಷಯವನ್ನು '**ಜನ್ಮಾದ್ಯಸ್ಯ ಯತಃ ಶಾಸ್ತ್ರಯೋನಿತ್ವಾತ್**'ಮೊದಲಾದ ಸೂತ್ರಗಳಲ್ಲಿಯೂ ವಿವೇಕ ಚಿಂತಾಮಣಿಯಲ್ಲಿಯೂ ಹೇಳಿದೆ. ಅಲ್ಲಿ ಅವಲೋಕನ ಮಾಡಬಹುದು. ಶ್ರುತ್ಯರ್ಥಕ್ಕೆ ಅನುಕೂಲವಾದ ಅನುಮಾನ ಪ್ರಮಾಣ ತರ್ಕಾದಿಗಳನ್ನು ಮಾಡಬೇಕೇ ಹೊರ್ತು, ಶ್ರುತಿವ್ಯತಿರಿಕ್ತ ಕೇವಲ ಸ್ವಾತಂತ್ರ್ಯವಾಗಿ ತರ್ಕ ಅನುಮಾನಗಳಿಗೆ ಪ್ರಮಾಣತ್ವವಿಲ್ಲ.

ಶಿಷ್ಯ:- ಪರ್ವತರಾಜನ ಪುತ್ರಿಯಾದ ಪಾರ್ವತಿಗೆ ಮಾಯಾಶಕ್ತಿಯೆಂದು ಅರ್ಥಮಾಡುವದು ಪುರಾಣೋಕ್ತಿಗೆ ವಿರೋಧವಲ್ಲವೆ?

**ಗುರು:-** ಏನೂ ವಿರೋಧವಿಲ್ಲ. ವೇದಾರ್ಥವನ್ನು ಬಲ್ಲಂಥಾ ವೇದವ್ಯಾಸರೇ ಪುರಾಣಗಳಿಗೂ ಕರ್ತರಾದ್ದರಿಂದ ಮಂದಾಧಿಕಾರಿಗಳಿಗೆ ಬೋಧವಾಗುವದಕ್ಕಾಗಿ ಹಾಗೆ ರೂಪಕ ಮಾಡಿ ಹೇಳಿದ್ದು ಯೋಗ್ಯವೆ ಇರುತ್ತದೆ. ಪುರಾಣಗಳಲ್ಲಿಯೂ ಪ್ರಸಂಗಾನುಸಾರ ಭಕ್ತಿ, ಗುಣ, ಮಹಾತ್ಮ, ಲಾಕ್ಷಣಿಕ ಅರ್ಥಗಳನ್ನು ಮಾಡತಕ್ಕದ್ದು. ಅರ್ಥಾತ್ ವೇದಾರ್ಥಕ್ಕೆ ಅನುಸಾರವಾಗಿಯೇ ಅರ್ಥವನ್ನು ಮಾಡತಕ್ಕದ್ದು. 'ನಗರಾಜಸುತೆಯ ರಮಣಂಗೆ,'ನಗಚ್ಛತೀತಿ ನಗಃ' ಗಮನವಿಲ್ಲದ್ದರಿಂದ ನಗವೆಂದು ಹೇಳಲ್ಪಡುತ್ತದೆ. ಅಂದರೆ, ಅಚಲವೆಂಬ ಭಾವವು. ರಾಜವೆಂಬ ಪದವು ಶ್ರೇಷ್ಠವಾಚಕವಿರುತ್ತದೆ. ಪರ್ವತಗಳು ಗಮನಾಗಮನ ಮಾಡುವದಿಲ್ಲವಾದ್ದರಿಂದ ಅಚಲಗಳೆಂದೂ, ಅವುಗಳಲ್ಲಿ ಶ್ರೇಷ್ಠವಾದದ್ದು ಹಿಮವತ್ಪರ್ವತವಾಗಿರುತ್ತದೆ. ಅಂಥಾ ಪರ್ವತನ ಸಂಬಂಧಿ ಪುತ್ರಿಯಾದ್ದರಿಂದ ಪಾರ್ವತಿಯೆಂಬ ಹೆಸರು ಬಂದಿರುವದು. ಈಕೆಗೆ ಪರಮಾತ್ಮನು ಪತಿಯಾಗಿರುತ್ತಾನೆಂದು ಕಥೆಯಿರುತ್ತದೆ.

**ಶಿಷ್ಯ:-** ಪರ್ವತಗಳು ಜಡವಾಗಿರುತ್ತವೆ. ಜಡಗಳಾದ ಹಿಮವತ್ಪರ್ವತ ಹಾಗೂ ಮೇನಕಾ ಇವರಿಂದ ಪಾರ್ವತಿಯು ಉತ್ಪನ್ನಳಾಗುವದು ಶಕ್ಯವೇ ?

**ಗುರು:-** ಹಾಗಲ್ಲ. ಪರ್ವತಗಳು ದೇವತಾತ್ಮಗಳಾಗಿರುತ್ತವೆ. ನಮ್ಮಗಳ ದೇಹದಂತೆ ಹೊರಗೆ ಕಾಣುವ ಪರ್ವತವು ಅವುಗಳ ಸ್ಥೂಲಶರೀರವಾಗಿರುತ್ತದೆ. ಈ ಪರ್ವತಗಳು ಪೂರ್ವದಲ್ಲಿ ಪಕ್ಷಿಗಳಂತೆ ಹಾರಾಡುತ್ತಿದ್ದವು. ಇಂದ್ರನು ಕೋಪಾವಿಷ್ಟನಾಗಿ ವಜ್ರಾಯುಧದಿಂದ ಇವುಗಳ ರೆಕ್ಕೆಗಳನ್ನು ಕಡಿದಿರುವದರಿಂದ ಹಾರುವದಿಲ್ಲ. ಅಂದಿನಿಂದ ಇವು ಅಚಲವೆಂಬ ಹೆಸರನ್ನು ಹೊಂದಿದವು. ಹೀಗೆಂದು ಪುರಾಣೋಕ್ತಿಯುಂಟು. ಆದ್ದರಿಂದ ಈಗಲಾದರೂ ಗಿರಿ, ನದಿ, ಸಮುದ್ರ, ಮೊದಲಾದವುಗಳು ದೇವತಾರೂಪಗಳೆಂದು ತಿಳಿದು ಆಸ್ತಿಕರು ಪೂಜಿಸುತ್ತಾರೆ. ಮತ್ತು ಕಾಳಿದಾಸ ಕವಿಯಾದರೂ " **ಅಸ್ತ್ಯುತ್ತರಸ್ಯಾಂದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ**"ದೇವತಾತ್ಮಾ ಚೈತನ್ಯದಿಂದೊಡಗೂಡಿರುವನೆಂದು ಹೇಳಿದ್ದರಿಂದ, ಮೇನಕೆಯೊಡನೆ ಲಗ್ನವೂ ಪಾರ್ವತಿಯ ಜನನವೂ ವ್ಯವಹಾರ ಯೋಗ್ಯತಾ ಸಿದ್ಧಿಯು ಅರ್ಥಾತ್ ಸಿದ್ಧಿಸುತ್ತದೆ. ಮತ್ತು ಚೇತನದಿಂದಲೇ ಚೇತನ ಪ್ರಾಣಿಗಳು ಉತ್ಪತ್ತಿಯಾಗುವದು ನಿಯಮವಿಲ್ಲ. ಅಚೇತನವಾದ ಶಗಣಿಯಿಂದ ಸಚೇತನವಾದ ಚೇಳು, ಕ್ರಿಮಿ ಮೊದಲಾದವುಗಳು ಉತ್ಪನ್ನಗಳಾಗುತ್ತವೆ. ಆದ್ದರಿಂದ ಈ ಸೃಷ್ಟಿಯು ವಿಚಿತ್ರವಾಗಿರುತ್ತದೆ. " **ಅಚಿಂತ್ಯಾಃ ಖಲುಯೇ ಭಾವಾಃ ನತಾಂಸ್ತರ್ಕೇಣ ಯೋಜಯೇತ್** " ಈ ಭಾವರೂಪ ಕಾರ್ಯಗಳು ಜೀವನ ಬುದ್ಧಿಯಿಂದ ಚಿಂತಿಸಲಿಕ್ಕೆ ಬಾರದವುಗಳು ಆಗಿರುತ್ತವೆ. ಆದ್ದರಿಂದ ಅವುಗಳ ವಿಷಯದಲ್ಲಿ ತರ್ಕವನ್ನುಪಯೋಗಿಸ ಕೂಡದು. ಕಿಂತು ನಾವು ಪೂರ್ವದಲ್ಲಿ ಹೇಳಿದ ಪ್ರಕಾರ ಶ್ರುತಿಗೆ ಶರಣು ಹೋಗತಕ್ಕದ್ದು. ಅದರನುಸಾರವಾಗಿಯೇ ತರ್ಕವನ್ನು ಮಾಡತಕ್ಕದ್ದು.

**ಶಿಷ್ಯ:-** ತಾವು ಹೇಳಿದ ಸಿದ್ಧಾಂತವು ನಿಜ. ಆದರೆ, ನನ್ನ ಅನುಭವಕ್ಕೆ ಮಾತ್ರ ಬರುವದಿಲ್ಲ. ಆದ್ದರಿಂದ ದಯವಿಟ್ಟು ತಿಳಿಸಬೇಕು ?

**ಗುರು:-** ಹಾಗಾದರೆ, 'ನಗ' ಗಮನವಿಲ್ಲದ್ದು ಅಚಲವೆಂದು ಹೇಳಿಸಿಕೊಳ್ಳುತ್ತದೆ. ಕಲ್ಪಿತಗಳಾದ ಗಿರಿ, ಆಕಾಶಾದಿ ಅಚಲ ಪದಾರ್ಥಗಳಿಗಿಂತಲೂ ಅಧಿಷ್ಠಾನವಾದ ಪರಬ್ರಹ್ಮವು (ಪರಶಿವನು) ನಿರಪೇಕ್ಷಕ ಪರಿಪೂರ್ಣವಾದ್ದರಿಂದ ಅಚಲಗಳಲ್ಲಿ ಶ್ರೇಷ್ಠವಾಗಿರುತ್ತದೆ. ಅಂಥಾ ಪರಬ್ರಹ್ಮದ ಚೈತನ್ಯವನ್ನು ಆಶ್ರಯಿಸಿಕೊಂಡು ಅನಿರ್ವಚನೀಯವಾದ ಮಾಯಾ ಶಕ್ತಿಯುಂಟು. ಈ ಮಾಯಾ ಶಕ್ತಿಯು ಸ್ವತಂತ್ರವಿಲ್ಲ. ಕಿಂತು ಚೇತನವನ್ನು ಆಶ್ರಯಿಸಿಕೊಂಡಿರುತ್ತದೆ. "ಆಶ್ರಯ ಮತ್ತು ವಿಷಯವಾದದ್ದು ವಿಭಾಗ ರಹಿತ ಶುದ್ಧ ಚೇತನವಿರುತ್ತದೆ." ಹೀಗೆ ಪ್ರಮಾಣವೂ ಉಂಟು. ಇಂಥಾ ಮಾಯೋಪಾಧಿಯಿಂದಲೇ ಈಶ್ವರತ್ವ

ವಾಯಿತು. ಅದರಿಂದ **ಲಗ್ನ**ವೆಂಬ ಸಂಜ್ಞೆಯನ್ನು ಕೊಟ್ಟಿರುತ್ತಾರೆ. ಇಂಥಾ ಮಾಯೋಪಾಧಿಯಿಂದ ಕೂಡಿದ **ಮಹೇಶ್ವರನು** ಆ ಮಾಯಾಮೋಹಕ್ಕೆ ವಶಗತ ನಾಗದೆ, ಆ ಮಾಯೆಯನ್ನು ತನ್ನ ಆಧೀನದಲ್ಲಿ ಇಟ್ಟುಕೊಂಡದ್ದರಿಂದ **ವಲ್ಲಭ**ನೆಂಬ ಹೆಸರು ಬಂದಿರುವದು. ಆದ್ದರಿಂದ ಇಂಥಾ ನಗರಾಜ ಸುತೆಯ ರಮಣನಾದ ಶಂಭುಲಿಂಗನಿಗೆ ಭಕ್ತಿಯಿಂದ ಯುಕ್ತನಾಗಿ ನಮಸ್ಕಾರ ಮಾಡುತ್ತೇನೆಂದು ಹೇಳಿರುವದು ಯೋಗ್ಯವಾಗಿದೆ.

ಬಳಿಕ, ಉಕ್ತಮಹೇಶ್ವರನ **ಶಕ್ತಿ**ಯನ್ನು ಕುರಿತು ನಮಸ್ಕಾರ ರೂಪ ಮಂಗಲವನ್ನು ಮಾಡುತ್ತಾರೆ.

**ಶರ್ವಂಗೆ ಸರ್ವಜ್ಞ ಸರ್ವೇಶ ಸರ್ವಾತ್ಮ |**
**ಸರ್ವ ಶಕ್ತಿತ್ವ ವಹುದಾರ ಬಲದಿನಾ |**
**ಸರ್ವ ಮಂಗಲೆಗೆ ನತನಪ್ಪೆ** ||೩||

**ಟೀಕಾ:-** ಆರ=ಯಾರ, ಬಲದಿಂ=ಸಹಾಯದಿಂದ, ಶರ್ವಂಗೆ=ಪರಮಾತ್ಮನಿಗೆ, ಸರ್ವಜ್ಞ=ಎಲ್ಲ ಅರಿಯುವತನವು, ಸರ್ವೇಶ=ಎಲ್ಲವನ್ನು ಆಳುವದು, ಸರ್ವಾತ್ಮ=ಎಲ್ಲ ಜೀವರ ಸ್ವರೂಪವಾಗಿರುವದು, ಸರ್ವ ಶಕ್ತಿತ್ವ=ಇಚ್ಛಾದಿ ಶಕ್ತಿಗಳಿಂದ ಕೂಡಿಕೊಂಡಿರುವದು, ಅಹುದು=ಆಯಿತೋ, ಆ=ಅಂಥಾ, ಸರ್ವ ಮಂಗಲೆಗೆ=ಪಾರ್ವತಿ ದೇವಿಗೆ, ನತನು=ನಮಸ್ಕಾರ ಮಾಡುವಾತನು, ಅಪ್ಪೆ= ಆಗುತ್ತೇನೆ.

**ತಾತ್ಪರ್ಯ:-** ಭೂತ, ವರ್ತಮಾನ, ಭವಿಷ್ಯ ಈ ಮೂರು ಕಾಲಗಳಲ್ಲಿ ಆಗುವ ಹೋಗುವ ಸರ್ವ ಪದಾರ್ಥಗಳ ಜ್ಞಾನವು **ಸರ್ವಜ್ಞತ್ವ**ವೆಂದು ಹೇಳಲ್ಪಡುವದು- ಈಶ್ವರನಿಂದ ಹುಟ್ಟಿಸಲ್ಪಟ್ಟ ಆಕಾಶಾದಿ ಭೂಮಿಯೇ ಕಡೆಯಾದ ಈ ಜಗತ್ತನ್ನು ಬೇರೊಂದು ರೀತಿಯಿಂದ ಮಾಡುವದಕ್ಕೆ ಯಾರೂ ಸಮರ್ಥರಲ್ಲ. ಅಂಥಾ ಕಾರ್ಯವನ್ನು ಮಾಡಿದ್ದರಿಂದ ಇದಕ್ಕೆ **ಸರ್ವೇಶ**ವೆಂಬ ಹೆಸರುಂಟು. ಉಪಾಧಿಗಳ ಮೂಲಕ ಅನೇಕಾತ್ಮರು ತೋರುತ್ತಾರೆ. ಅವರುಗಳ ಅಂತರದಲ್ಲಿದ್ದು, ಅಂತರ್ಯಾಮಿ ರೂಪದಿಂದ ಪ್ರೇರಣೆಯನ್ನು ಮಾಡುವದರಿಂದ **ಸರ್ವಾತ್ಮತ್ವ** ಎಂದು ಹೇಳಲ್ಪಡುವದು. ಜಗದುತ್ಪತ್ತಿ, ಸ್ಥಿತಿ, ನಾಶಗಳನ್ನು ಮಾಡುವದರಿಂದ **ಸರ್ವಶಕ್ತಿತ್ವ**ವೆಂದು ಹೇಳಲ್ಪಡುತ್ತದೆ. ಈಗ ಹೇಳಲ್ಪಟ್ಟ ಸರ್ವಜ್ಞತ್ವ, ಸರ್ವೇಶತ್ವ, ಸರ್ವಾತ್ಮತ್ವ, ಸರ್ವಶಕ್ತಿತ್ವಗಳು (ಈ ಉತ್ತಮೋತ್ತಮವಾದ ಗುಣಗಳು) ಭಕ್ತರ ಸಕಲ ಪಾಪಗಳನ್ನು ನಾಶಮಾಡುವಂಥಾ ಶರ್ವನಿಗೆ ಯಾರ ಸಹಾಯದಿಂದ ಪ್ರಾಪ್ತವಾದವೋ, ಅಂಥಾ ಸರ್ವಕ್ಕೂ ಮಂಗಳ ಸ್ವರೂಪಳಾದ **ಪಾರ್ವತಿ**ಗೆ ನಾನು ನಮಸ್ಕಾರ ಮಾಡುತ್ತೇನೆ.

**ಶಿಷ್ಯ:-** ಋಣಕ್ಕೆ ಪರಾಧೀನನಾದ ಬಡವನು ರಾಜನಿಗೆ ಏನು ಸಹಾಯ ಮಾಡುವನು? ಇದರಂತೆ ಪರತಂತ್ರವಾದ ಶಕ್ತಿಯು ಸ್ವತಂತ್ರನಾದ ಈಶ್ವರನಿಗೆ ಏನು ಸಹಾಯ ಮಾಡುವದು?

**ಗುರು:-** ನೀನು ಹೇಳುವದು ನಿಜ. ಆದರೂ ಈಶ್ವರನು ಚೈತನ್ಯ ಸ್ವರೂಪದಿಂದ ಸ್ವತಂತ್ರನೂ, ನಿತ್ಯ, ಶುದ್ಧ, ಬುದ್ಧ, ಮುಕ್ತ, ನಿರ್ಗುಣನೂ ಇದ್ದಾನೆ. ಅವನಲ್ಲಿ ಉಕ್ತ ಸರ್ವಜ್ಞತ್ವಾದಿ ಗುಣಗಳು ಮಾಯಾಶಕ್ತಿ ಉಪಾಧಿ ಮೂಲಕವಾಗಿಯೇ ಬರುತ್ತವೆ. ಶುದ್ಧ ಸತ್ವ ಪ್ರಧಾನವಾದ ಮಾಯೆಯು ಬಹಳ ಸ್ವಚ್ಛವಾಗಿರೋಣದರಿಂದ, ಆ ಮಾಯೋಪಹಿತನಾದ ಈಶ್ವರನಿಗೆ ಸರ್ವಜ್ಞತ್ವಾದಿ ಗುಣಗಳು ಒದಗಿರುತ್ತವೆ. ಆದ್ದರಿಂದ ಗ್ರಂಥಕರ್ತರು ಆ ಶಕ್ತಿಗೂ ನಮಸ್ಕಾರವನ್ನು ಮಾಡಿರುತ್ತಾರೆ.

ಬಳಿಕ, ಆ ಶಿವಶಕ್ತಿಯರ ಸಂಬಂಧದಿಂದ ಉತ್ಪನ್ನರಾದ **ಪುತ್ರರನ್ನೂ**, ಅವರ ವಾಹನವಾದ **ನಂದೀಶ್ವರನನ್ನೂ** ಕುರಿತು ನಮಸ್ಕಾರರೂಪ ಮಂಗಳವನ್ನು ಮಾಡುತ್ತಾರೆ.

> ಒಮ್ಮೆ **ಗಣಪತಿಗೆ** ಮತ್ತೊಮ್ಮೆ ಸೇನಾಧಿಪಂ ।
> **ಗೊಮ್ಮೆ** ವೀರೇಶ **ಗೊಮ್ಮೆ** ನಂದೀಶ್ವರಂ ।
> **ಗೊಮ್ಮೆ** ನಾನೊಲಿದು ನತನಪ್ಪೆ ॥೪॥

**ಟೀಕಾ:-** ನಾನು=ಗ್ರಂಥಕರ್ತನಾದ ನಾನು, ಒಮ್ಮೆ=ಒಂದುಸಾರೆ, ಗಣಪತಿಗೆ=ಗಜಾನನಿಗೆ, ಮತ್ತೊಮ್ಮೆ=ಮತ್ತೊಂದುಸಾರೆ, ಸೇನಾಧಿಪಂಗೆ=ಷಣ್ಮುಖನಿಗೆ, ಒಮ್ಮೆ=ಒಂದುಸಾರೆ, ನಂದೀಶ್ವರಂಗೆ=ನಂದಿಗೆ, ಒಮ್ಮೆ=ಒಂದುಸಾರೆ, ವೀರೇಶಂಗೆ=ವೀರಭದ್ರನಿಗೆ, ಒಮ್ಮೆ=ಒಂದುಸಾರೆ, ನಲಿದು=ಭಕ್ತಿಯುಕ್ತವಾಗಿ, ನತನು=ನಮಸ್ಕಾರ ಮಾಡುವಾತನು, ಅಪ್ಪೆ=ಆಗುತ್ತೇನೆ.

**ತಾತ್ಪರ್ಯ:-** ತಾನು ಮಾಡತಕ್ಕ ಗ್ರಂಥಕ್ಕೆ ಯಾವ ವಿಘ್ನಗಳು ಬರಬಾರದೆಂದು ತಿಳಕೊಂಡು, ವಿಘ್ನನಿವಾರಕನಾದ **ಗಣಪತಿಯನ್ನು** ಕುರಿತು, ಒಂದು ಸಾರೆ ಭಕ್ತಿಯಿಂದ ನಮಸ್ಕಾರ ಮಾಡುತ್ತಾರೆ. ಅನಂತರ ತಾನು ಬರೆಯತಕ್ಕ ಶ್ರುತಿ, ತಾತ್ಪರ್ಯರೂಪ ಗ್ರಂಥಾರ್ಥಕ್ಕೆ; ದೇವಸೇನೆಗೆ ನಾಯಕನಾದ **ಷಣ್ಮುಖನು** ಸಹಾಯಕನಾಗಲೆಂದು ಅವನಿಗೂ ಒಂದು ಸಾರೆ ಭಕ್ತಿಯಿಂದ ನಮಿಸುತ್ತೇನೆ. ಬಳಿಕ ತಾನು ಬರೆಯತಕ್ಕ ಅದ್ವೈತರೂಪ ಅರ್ಥಕ್ಕೆ ಪ್ರತಿಪಕ್ಷವಾದ ದ್ವೈತರೂಪ ಅರ್ಥವು ಬಂದರೆ; ಅವನ್ನು ಸಂಹಾರ ಮಾಡಲೆಂದು **ವೀರಭದ್ರನಿಗೂ** ಒಂದುಸಾರೆ ಭಕ್ತಿಯಿಂದ ನಮಸ್ಕರಿಸುತ್ತೇನೆ. ಮತ್ತೆ ಬರೆಯತಕ್ಕ ಅರ್ಥಗಳನ್ನು ಅಂತಃಕರಣದಲ್ಲಿ ಧರಿಸಿಕೊಂಡಿರುವ ಸಾಮರ್ಥ್ಯವನ್ನು ಕರುಣಿಸಲಿ

ಯೆಂದು, ಆ ಶಿವಶಕ್ತಿಯರನ್ನು ಹೊತ್ತುಕೊಂಡಿರುವ ಧರ್ಮರೂಪ **ನಂದೀಶ್ವರ** ನನ್ನು ಕುರಿತು ಒಂದು ಸಾರೆ ಭಕ್ತಿಯಿಂದ ನಮಿಸುತ್ತೇನೆ.

**ಶಿಷ್ಯ:**- ಈಗ ಹೇಳಲ್ಪಟ್ಟ ಗಣಪತಿ ಮೊದಲಾವರು ಸಾಕಾರವಾಗಿರುವರೋ? ನಿರಾಕಾರವಾಗಿರುವರೋ ? ಸಾಕಾರವಾಗಿದ್ದರೆ; ಪ್ರತ್ಯಕ್ಷವಾಗಿ ನಮಗೆಲ್ಲರಿಗೂ ತೋರಬೇಕು. ನಿರಾಕಾರವಾಗಿದ್ದರೆ ಉಕ್ತ ಸಾಮರ್ಥ್ಯವು ಅವರಲ್ಲಿ ಹೇಗೆ ಉಂಟು?

**ಗುರು:**- ಗಣಪತಿ ಮೊದಲಾದವರು ಸಾಕಾರವಾಗಿಯೂ ಇದ್ದಾರೆ. ನಿರಾಕಾರವಾಗಿಯೂ ಇದ್ದಾರೆ. ಸಾಕಾರವಾಗಿದ್ದರೆ ನಮಗೆ ಏಕೆ ತೋರುವದಿಲ್ಲ? ಅಂದರೆ, ನಿನ್ನಲ್ಲಿ ಅಂಥಾ ಶ್ರದ್ಧಾ ಭಕ್ತಿಗಳಿಲ್ಲದ್ದರಿಂದ ತೋರುವದಿಲ್ಲ. ಯಾರು ಯಾವ ದೇವತೆಯಲ್ಲಿ ಅತ್ಯಧಿಕವಾದ ಶ್ರದ್ಧಾ ಭಕ್ತಿಗಳಿಂದ ಕೂಡಿರುವರೋ, ಅವರಿಗೆ ಆ ಉಪಾಸ್ಯ ದೇವತೆಗಳು ಸ್ವಪ್ನದಲ್ಲಿಯಾಗಲಿ ಅಥವಾ ಜಾಗ್ರತದಲ್ಲಿಯಾಗಲಿ ಸಾಕಾರರೂಪದಿಂದ ಪ್ರತ್ಯಕ್ಷರಾಗುತ್ತಾರೆ. ಅದೇ ಸಮಯದಲ್ಲಿ ಉಪಾಸಕನು ಅನ್ಯರಿಗೆ ತೋರಿಸಿದರೂ, ಆ ಉಪಾಸ್ಯ ದೇವತೆಯು ಅನ್ಯರಿಗೆ ತೋರುವದಿಲ್ಲ. ಯಾಕಂದರೆ ? ಅನ್ಯರಿಗೆ ನೋಡುವ ಸಾಮರ್ಥ್ಯವಿಲ್ಲ. ಹೇಗೆಂದರೆ ? ಮರಣ ಸಮಯದಲ್ಲಿ ಪಾಪಿಗೆ ಯಮದೂತರು ಪ್ರತ್ಯಕ್ಷವಾಗಿ ತೋರುವರು. ಅದರಿಂದ ಭಯಗ್ರಸ್ಥನಾಗಿ ಪಾಪಿಯು ಯಾರೋ ಭಯಂಕರ ರೂಪುಳ್ಳವರು ಬಂದಿರುವರು. ಅವರನ್ನು ಓಡಿಸಿರಿ ಎಂದು ಹೇಳುವನು. ಅನ್ಯರಿಗೆ ಯಮದೂತರು ಹೇಗೆ ಕಾಣಿಸುವದಿಲ್ಲವೋ, ಹಾಗೇ ಉಪಾಸಕನಿಗೆ ಉಪಾಸ್ಯ ದೇವತೆಯು ಕಾಣುತ್ತದೆ. ಅನ್ಯರಿಗಿಲ್ಲ. ಎಲ್ಲರಿಗೂ ಪ್ರತ್ಯಕ್ಷವಾಗಿ ಕಾಣುವಂಥಾ ಉಪಾಸ್ಯ ಮೂರ್ತಿಯನ್ನು ಮಣ್ಣು, ಕಲ್ಲು, ಬೆಳ್ಳಿ, ಬಂಗಾರ ಮೊದಲಾದವುಗಳಿಂದ ಮಾಡಿಸಿ, ಇದಿರಿಟ್ಟು ಉಪಾಸನಾ ಸೌಕರ್ಯಕ್ಕಾಗಿ ಮಾಡುವರು. ಅವರಿಗೆ ಅವಕ್ಕನುಸಾರವಾಗಿ ಫಲವೂ ಪ್ರಾಪ್ತವಾಗುತ್ತದೆ. ಯಾವ ದೋಷವೂ ಇಲ್ಲ. ಉಪಾಸ್ಯ ದೇವತೆಗಳು ಬೇಕಾದ ಕಾಲಕ್ಕೆ ಬೇಕಾದ ರೂಪುಗಳನ್ನು ಧಾರಣ ಮಾಡುವ ಸಾಮರ್ಥ್ಯವುಂಟು. **"ಸುರರ ಬಲಹನೊಂದು ತೃಣದಿಂದೆ ಮುರಿದನೆ ಜಾಣರ ದೇವ"** ಇಂದ್ರಾದಿ ದೇವತೆಗಳಿಗೆ ಗರ್ವಬಂದಿರಲು, ಪರಮಾತ್ಮನು ಯಕ್ಷರೂಪದಿಂದ ಪ್ರತ್ಯಕ್ಷನಾಗಿ, ಒಂದು ಹುಲ್ಲು ಕಡ್ಡಿಯನ್ನು ಅವರ ಮುಂದಿರಿಸಿ, ಇದನ್ನು ಸುಡರಿ. ಹಾರಿಸರಿ ಎಂದು ಹೇಳಲು, ಸುಡಲಿಕ್ಕೂ, ಹಾರಿಸಲಿಕ್ಕೂ, ಅಗ್ನಿ ಮತ್ತು ವಾಯು ದೇವತೆಗಳು ಸಮರ್ಥರಾಗಲಿಲ್ಲ. ಎಂಬ ಕಥೆಯು ಕೇನೋಪನಿಷತ್ತಿನಲ್ಲಿಯುಂಟು. ಅದೇ ಮಾತನ್ನು ಶ್ರೀಮನ್ನಿಜಗುಣ ಶಿವಯೋಗಿಗಳು ಉಕ್ತ ಪದ್ಯದಿಂದ ಹಾಡಿರುವರು. ಇರಲಿ. ಪರಂತು **ಯಕ್ಷರೂಪವು** ಹೇಗೆ ಪ್ರತ್ಯಕ್ಷವಾಯಿತೋ; ಹಾಗೆಂದು ತಿಳಿಯತಕ್ಕದ್ದು. ಮತ್ತು ಆ ಯಕ್ಷರೂಪವು ಏನಾಗಿರಬಹುದೆಂದು ಇಂದ್ರಾದಿಗಳು ತಿಳಿಯಲಿಕ್ಕೆ ಹೋದರೂ ತಿಳಿಯಲಿಲ್ಲ.

ಅಷ್ಟರಲ್ಲಿಯೇ ಅಂತರ್ಧಾನವಾಯಿತು. ಬಳಿಕ ಸರ್ವ ದೇವತೆಗಳು ಭಕ್ತಿಯುಕ್ತ ರಾಗಿ ಧ್ಯಾನಮಾಡುತ್ತಿರಲಿಕ್ಕೆ ಪ್ರತ್ಯಕ್ಷವಾಯಿತೆಂದು ಕಥೆಯಿರುತ್ತದೆ. ವಿಸ್ತಾರ ಭಯದಿಂದ ಬರೆಯುವದನ್ನು ಬಿಟ್ಟಿದ್ದೇನೆ.

ಬಳಿಕ, ಇವರ ನಿರಾಕಾರ ಸ್ವರೂಪು ಹೇಗಿರುವದೆಂಬುದನ್ನು ಕೇಳು. ಮಾಯಾ ಮತ್ತು ಮಾಯೋಪಹಿತವಾದ ಚೇತನರೂಪ ಈಶ್ವರ ಇವರಿಂದ ಕ್ರಮ ವಾಗಿ **ಗಣಪತಿ, ಷಣ್ಮುಖ, ವೀರಭದ್ರ**ರೆಂಬ ಮೂವರು ಪುತ್ರರುತ್ಪನ್ನರಾದರೆಂದು ಹೇಳುವದು ತಾತ್ವಿಕ ರೀತಿಯಿಂದ ಸತ್ಯವಾಗಿರುತ್ತದೆ. ಹೇಗಂದರೆ? ಮಾಯೆಯಲ್ಲಿ ಸತ್ವ, ರಜ, ತಮಗಳೆಂಬ ಮೂರು ಗುಣಗಳಿರುತ್ತವೆ. ಸತ್ವಗುಣೋಪಹಿತವಾದ ಚೈತನ್ಯವೇ **ಗಣಪತಿಯು.** ಆದ್ಧರಿಂದ ಜ್ಞಾನಮೂರ್ತಿಯಾಗಿಯೂ ಅನಾತ್ಮ ಗಣಗಳಿಗೆ ಅಧಿಷ್ಠಾನನಾಗಿಯೂ ವಿಘ್ನನಿವಾರಣಮಾಡುವ ಸಾಮರ್ಥ್ಯವುಳ್ಳವನೂ ಆಗಿರುವನು. ರಜೋಗುಣೋಪಹಿತವಾದ ಚೈತನ್ಯವೇ **ಷಣ್ಮುಖನು.** ಆದ್ದರಿಂದ ಆ ರಜೋಗುಣದಿಂದ ಉತ್ಪನ್ನಗಳಾದ ಅನೇಕ ವೃತ್ತಿರೂಪ ಸೇನೆಗೆ ಒಡೆಯ ನಾದ್ದರಿಂದ ಸೇನಾಧಿಪನೆಂಬ ಹೆಸರು ಬಂದಿರುತ್ತದೆ. ಅದರಂತೆ ತಮೋಗುಣೋಪ ಹಿತವಾದ ಚೈತನ್ಯವೇ **ವೀರಭದ್ರನು,** ಆದ್ದರಿಂದ ಆ ತಮೊಗುಣ ಉಪಾಧಿಯಿಂದ ಸಂಹಾರಮಾಡುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಇಲ್ಲಿ ವೇದಾಗಮೋಕ್ತ ಮೋಕ್ಷ ಧರ್ಮವೇ **ನಂದೀಶ್ವರನೆಂದು** ಹೇಳಬಹುದು. ಯಾಕಂದರೆ ಆ ಧರ್ಮವು ಪ್ರವೃತ್ತಿಯನ್ನು ಬಿಡಿಸಿ ಪರಮಾತ್ಮನ ಕಡೆಗೆ ನಿವೃತ್ತಿಯ ಮುಖ ಚನ್ನಾಗಿ ಮಾಡಿಸುತ್ತದೆ. ಅಥವಾ ಜಗತ್ತನ್ನು ಧರಿಸಿರುವುದರಿಂದ ಧರ್ಮವೆಂಬ ಹೆಸರು ಬಂದಿದೆ. ಧರ್ಮವು ಅಂತಃಕರಣ ಶುದ್ಧಿಯನ್ನು ಮಾಡಿ ಪರಮಾತ್ಮನಲ್ಲಿ ಭಕ್ತಿ ಯನ್ನು ಹುಟ್ಟಿಸುತ್ತದೆ. ಇದೇ ಕಾರಣದಿಂದ ಪ್ರತಿಯೊಂದು ದೇವಾಲಯದಲ್ಲಿ ನಂದಿಯು ಈಶ್ವರನಕಡೆಗೆ ಮುಖವಾಗಿಯೇ ಕೂಡ್ರಿಸುವ ರೂಢಿಯಾದರೂ ಉಂಟು. ಆದ್ದರಿಂದ ಅಂಥಾ ಧರ್ಮರೂಪ **ನಂದಿಯನ್ನು** ಕುರಿತು ಮಂಗಲ ಮಾಡಿರುವರು.

**ಶಿಷ್ಯ:**- ಒಂದೊಂದು ದೇವತೆಯನ್ನು ಕುರಿತು ಒಂದೊಂದು ಸಾರೆ ಯಾಕೆ ನಮಸ್ಕಾರ ಮಾಡಬೇಕು? ಅನೇಕಸಾರೆ ಮಾಡುವದರಿಂದ ಹಾನಿಯೇನು?

**ಗುರು:**- ಒಂದೊಂದು ಸಾರೆ ನಮನ ಮಾಡೋಣದರಿಂದ ಉಕ್ತ ಫಲವನ್ನು ಅವರು ಆಶೀರ್ವಾದ ಕೊಡುವರು. ಅದರಿಂದ ಮಂಗಲಕರ್ತರು ಸಂತುಷ್ಟರಾದ ರಿಂದ ಅನೇಕ ಸಾರೆ ಮಾಡಲಿಲ್ಲ. ಅಥವಾ ಒಮ್ಮೆ ನಮಸ್ಕಾರ ಮಾಡುವದರಿಂದೆ ತಮ್ಮ ಸಾಮರ್ಥ್ಯರೂಪ ಫಲವನ್ನು ಕೊಟ್ಟರು. ಮತ್ತೊಮ್ಮೆ ನಾನು ನಮಸ್ಕಾರ ಮಾಡಿದರೆ, ಈ ಭಕ್ತನಿಗೆ ಇನ್ನೇನು ಕೊಡಬೇಕು, ಎಂಬ ಚಿಂತೆಯುತ್ಪನ್ನವಾಗು ತ್ತದೆ. ಆ ಚಿಂತೆಯನ್ನಾದರೂ ಏಕೆ ಉತ್ಪನ್ನಮಾಡಬೇಕು? ಎಂದು ತಿಳಕೊಂಡ;

ತಿರುಗಿ ಅನೇಕ ನಮಸ್ಕಾರ ಮಾಡುವದನ್ನು ಬಿಟ್ಟಿರುವರು. ಅದರಿಂದ ಯಾವ ದೋಷವೂ ಇಲ್ಲ.

ಬಳಿಕ, ಆ ಪರಮಾತ್ಮನೊಡನಿರುವ **ಪ್ರಮಥಗಣವನ್ನು** ಕುರಿತು ನಮಸ್ಕಾರರೂಪ ಮಂಗಳವನ್ನು ಮಾಡುತ್ತಾರೆ.

**ಅಂದಿಂದು ಮುಂದೆ ಬಿಡದೆಂದೆಂದು ನಿಜಭಕ್ತಿ।**
**ಯಿಂದೀಶನೊಡನೆ ಬೆರೆದು ಸುಖಮಿರ್ಪಗಣ।**
**ವೃಂದಮಂ ಕೂರ್ತು ನತನಪ್ಪೆ** ||೫||

**ಟೀಕಾ:-** ಅಂದು=ಭೂತಕಾಲ, ಇಂದು=ವರ್ತಮಾನಕಾಲ, ಮುಂದೆ=ಭವಿಷ್ಯತ್‌ಕಾಲ, ಎಂದೆಂದು=ಯಾವಾಗಲೂ, ಬಿಡದೆ=ವಿಯೋಗವಾಗದೆ, ನಿಜಭಕ್ತಿಯಿಂದ = ಅನನ್ಯಪ್ರೇಮದಿಂದ, ಈಶನೊಡನೆ = ಪರಮಾತ್ಮನೊಡನೆ, ಬೆರೆತು=ಕೂಡಿಕೊಂಡು, ಸುಖಮಿರ್ಪ = ಆನಂದದಿಂದಿರುವ, ಗಣ = ಪ್ರಮಥರ, ವೃಂದಮಂ=ಸಮೂಹವನ್ನು, ಕೂರ್ತು=ಲಕ್ಷಿಸಿ, ನತನು=ನಮಸ್ಕಾರ ಮಾಡುವಾತನು, ಅಪ್ಪೆ=ಆಗುತ್ತೇನೆ.

**ತಾತ್ಪರ್ಯ:-** ಭೂತ, ವರ್ತಮಾನ, ಭಾವಿ ಈ ಮೂರು ಕಾಲಗಳಲ್ಲಿಯೂ ವಿಯೋಗರಾಗದೆ, ಯಥಾರ್ಥವಾದ ಭಕ್ತಿಯಿಂದ ಪರಮಾತ್ಮನೊಡನೆ ಐಕ್ಯರಾಗಿ, ಸುಖದಿಂದ ಇರುವಂಥಾ ಪ್ರಮಥರ ವೃಂದವು ತಮ್ಮಲ್ಲಿರುವ ಭಕ್ತಿ ಮುಕ್ತಿ ಸುಖಗಳನ್ನು ನನಗೆ ಉಂಟುಮಾಡಲಿಯೆಂದು ಆ ಪ್ರಮಥವೃಂದವನ್ನು ಕುರಿತು ನಮಸ್ಕಾರ ಮಾಡುತ್ತೇನೆ.

**ಶಿಷ್ಯ:-** ಪ್ರಮಥಗಣವು ಯಾವಾಗ್ಯೆ ಪರಮಾತ್ಮ ಸ್ವರೂಪವನ್ನು ತಿಳಿದರೋ ಆಗ್ಯೆ ಈಶನೊಡನೆ ಅಭೇದರಾಗಿರಬಹುದು. ಅದಕ್ಕಿಂತಲೂ ಪೂರ್ವದಲ್ಲಿ ಅವರು ಪರಮಾತ್ಮನಿಗಿಂತ ಭಿನ್ನರಾಗಿಯೇ ಇರಲಿಕ್ಕೆಬೇಕು. ಹೀಗಿದ್ದು ತ್ರಿಕಾಲದಲ್ಲಿಯೂ ಅಭಿನ್ನರಾಗಿರುವರೆಂದು ಹೇಳುವದು ಅಸಂಭವವಾಗಿದೆ.

**ಗುರು:.** ಕಿಂಚಿತ್ತಾದರೂ ಅಸಂಭವವಿಲ್ಲ. ಹೇಗೆಂದರೆ, ಶುಕ್ತಿಯಲ್ಲಿ ರಜತವನ್ನು ಕಂಡು, ಇದೇನೆಂದು ವಿಚಾರಿಸುವಾತಗೆ ಶುಕ್ತಿಗೋಚರವಾಗಲು; ಇದರಲ್ಲಿ ಬೆಳ್ಳಿಯು ಮೊದಲೂ ಇಲ್ಲ, ಈಗಲೂ ಇಲ್ಲ, ಇನ್ನು ಮುಂದೆಯೂ ಇಲ್ಲ ಎಂಬ ನಿಶ್ಚಯಜ್ಞಾನವಾಗುವಂತೆ: ನಾನಾರು, ಪರಮಾತ್ಮನೆಂದರೆ ಯಾರು ಎಂದು ವಿಚಾರ ಮಾಡಲು, ತತ್ತ್ವಮಸಿಯೆಂಬ ವಾಕ್ಯದಿಂದ ಶೋಧಮಾಡುತ್ತಿರಲಿಕ್ಕೆ; ತಾನೇ ಪರಮಾತ್ಮನೆಂಬುದು ಸಾಕ್ಷಾತ್ಕಾರವಾಗುವದು. ಅನಂತರ ನಾನು ಈಗ ಈ ಉಪದೇಶದಿಂದ ಪರಮಾತ್ಮನೊಡನೆ ಅಭಿನ್ನನಲ್ಲ. ಕಿಂತು ಪೂರ್ವ ಅಜ್ಞಾನವಸ್ಥೆಯಲ್ಲಿಯೂ ಅಭಿನ್ನವಾಗಿಯೆ ಇದ್ದೆ, ಈಗಲೂ ಇದ್ದೇನೆ, ಮುಂದೆಯಾದರೂ

ಇರುತ್ತೇನೆ ಎಂದು ಜ್ಞಾನೋತ್ತರದಲ್ಲಿ ನಿಶ್ಚಯಜ್ಞಾನವಾಗುತ್ತದೆ. ಆದ್ದರಿಂದ ತ್ರಿಕಾಲದಲ್ಲಿಯೂ ಪರಮಾತ್ಮನೊಡನೆ ಬೆರತಿರುತ್ತೇವೆಂಬುದು ಜ್ಞಾನಿಗಳಿಗೆ ಅನುಭವಸಿದ್ಧ್ಯವಾಗಿರುತ್ತದೆ.

**ಶಿಷ್ಯ:-** ತಾವು ಜ್ಞಾನದಿಂದ ಪರಮಾತ್ಮನೊಡನೆ ಐಕ್ಯವನ್ನು ಹೇಳುವಿರಿ. ಆದರೆ ಗ್ರಂಥಕಾರರು ಭಕ್ತಿಯಿಂದ ಎಂಬ ಪದವನ್ನು ಪ್ರಯೋಗಿಸಿರುವರು. ಅಂದಮೇಲೆ ವಿರೋಧವಲ್ಲವೆ?

**ಗುರು:-** ಏನೂ ವಿರೋಧವಿಲ್ಲ. ಯಾಕಂದರೆ, **"ಸರ್ವವೆಲ್ಲವನು ಚಿದಾತ್ಮ ಭಾವನೆಗಂಡು | ಸರ್ವಸಮತ್ವದಿಂದಿರೆ ಭಕ್ತಿ"** ಈ ಪದ್ಯವನ್ನು ಗ್ರಂಥಕಾರರು ಪರಮಾನುಭವಬೋಧೆಯಲ್ಲಿ ಹೇಳಿದ್ದಾರೆ. ಅದರಲ್ಲಿ ಸರ್ವಸಮತ್ವಕ್ಕೆ ಭಕ್ತಿ ಯೆಂದು ಹೇಳಿದ್ದಾರೆ. ಆ ಸಮತ್ವವು ತತ್ತ್ವಮಸಿ ಮಹಾವಾಕ್ಯ ವಿಚಾರದಿಂದಾ ಗುತ್ತದೆ ಎಂದು ಸ್ಪಷ್ಟವಾಗಿ ತೋರಿಸಿದ್ದಾರೆ. ಆದ್ದರಿಂದ ಇಲ್ಲಿ ಶಬ್ದಗಳೆರ ಡಾದರೂ ಅರ್ಥವು ಒಂದಾಗಿರುತ್ತದೆ. ಆದ್ದರಿಂದ ಯೋಗ್ಯವಿರುತ್ತದೆ

**ಶಿಷ್ಯ:-** ಮುಖ್ಯನಾದ ಈಶ್ವರನಿಗೆ ನಮನವನ್ನು ಮಾಡಿದರೆ ಸಾಕು- ಅವನ ಅನುಯಾಯಿಗಳಾದ ಪ್ರಮಥರಿಗೆ ನಮಸ್ಕಾರಮಾಡೋಣದರಿಂದ ಪ್ರಯೋ ಜನವೇನು?

**ಗುರು:-** ಪ್ರಯೋಜನವು ಉಂಟು. ಪ್ರಯೋಜನವಿಲ್ಲದಿದ್ದರೆ ಸರ್ವಜ್ಞರಾದ ಗ್ರಂಥಕಾರರು ನಮಸ್ಕಾರವನ್ನು ಮಾಡುತ್ತಿದ್ದಿಲ್ಲ. ಹೇಗಂದರೆ, ದೇವರ ಒಲ ವನ್ನು ಬಯಸುವವನು ಪೂಜಾರಿಯ ಒಲವನ್ನು ಮೊದಲು ಬಯಸುವಂತೆ; ರಾಜನ ದರ್ಶನದ ಅಪೇಕ್ಷೆಯುಳ್ಳವನು ಮೊದಲು ದ್ವಾರಪಾಲಕನ ಸಹವಾಸವನ್ನು ಅವಶ್ಯವಾಗಿ ಮಾಡುವಂತೆ; ಪರಮಾತ್ಮನ ಸಾಕ್ಷಾತ್ಕಾರದ ಅಪೇಕ್ಷೆಯುಳ್ಳವನು ಮೊದಲು ಪ್ರಮಥರ ಕೃಪೆಯನ್ನು ಸಂಪಾದಿಸಲಿಕ್ಕೇಬೇಕು. ಆದ್ದರಿಂದಲೇ ಗ್ರಂಥಕಾರರು ಪ್ರಮಥವೃಂದವನ್ನು ಕುರಿತು ನಮಸ್ಕಾರ ಮಾಡುತ್ತೇನೆಂದು ಹೇಳಿರುವದು ಉಚಿತವಾಗಿರುತ್ತದೆ. ಹೀಗೆ ಹೇಳುವದರಿಂದ ಗ್ರಂಥಕಾರರು ಪ್ರಮಥರ ಆಶೀರ್ವಾದ ದ್ವಾರಾ ಪರಮಾತ್ಮ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಿ ಕೊಳ್ಳುತ್ತಾರೆಂಬರ್ಥವಲ್ಲ. ಮತ್ತೇನಂದರೆ, ಪಾಠಕರು ವಿದ್ಯಾರ್ಥಿಗೋಸುಗ ತಾವೂ ಅಕ್ಷರಗಳನ್ನು ತೀಡುತ್ತಿರುವಂತೆ; ನಮ್ಮೆಲ್ಲರ ಕಲ್ಯಾಣಕ್ಕಾಗಿ ಅವರು ಹಾಗೆ ಮಂಗಳವನ್ನು ಮಾಡಿರುವರು. ಅಥವಾ ಗ್ರಂಥವು ನಿರ್ವಿಘ್ನತೆಯಿಂದ ಪೂರ್ತಿಯಾಗಲೆಂದು ತಿಳಿದು ಪ್ರಮಥರ ಕೃಪೆಯನ್ನು ಬೇಡಿದ್ದಾರೆ. ಆದ್ದರಿಂದ ಮಂಗಲವು ನಿರ್ದೋಷವಾಗಿರುತ್ತದೆ.

ಬಳಿಕ, ಮದುಮಗನನ್ನು ಬಿಟ್ಟು ಮದುವೆಗೆ ಹೋದರೆಂಬ ಗಾದೆಯಂತೆ; ಬ್ರಹ್ಮಾಭಿನ್ನವಾದ ಪ್ರತ್ಯಗಾತ್ಮನನ್ನು ಮರೆತು, ಏನು ಮಾಡಿದರೂ ವ್ಯರ್ಥವೆಂಬ ಅಭಿಪ್ರಾಯವುಳ್ಳವರಾಗಿ ಪ್ರತ್ಯಗಾತ್ಮನ ಮಂಗಳವನ್ನು ಮಾಡುತ್ತಾರೆ.

ಇದಕೆ ಮೇಲಿಲ್ಲವೆಂಬುದು ತಾನದಾವ ಸುಖ ।
ವದನೊಮ್ಮೆ ತನ್ನ ನರಿದೊಡೊಲಿದೀವಾತ್ಮ ।
ಪದವೆನ್ನಮಾನಸದೊಳಿರ್ಕೆ ॥೬॥

ಇದಕೆ=ಈಗ ಹೇಳುವದಕ್ಕಿಂತಲೂ, ಮೇಲು=ಹೆಚ್ಚಿನದು, ಎಂಬುದು= ಅನ್ನುವಂಥಾದ್ದು, ಇಲ್ಲ=ಇರುವದಿಲ್ಲ, ಅದು=ಹಾಗನ್ನುವದು, ತಾನೆ=ಅದೇ, ಆವ ಸುಖವು=ಯಾವ ಬ್ರಹ್ಮಾನಂದವುಂಟೋ, ಅದನು=ಆ ಬ್ರಹ್ಮಾನಂದವನ್ನು, ಒಮ್ಮೆ=ಒಂದುಸಾರೆ, ತನ್ನನ್ನು=ತಾನಾರೆಂಬುದನ್ನು, ಅರಿದೊಡೆ=ತಿಳಿದರೆ, ಒಲಿದು = ಪ್ರೀತಿಯಿಂದ, ಈವ = ಕೊಡುವಂಥಾದ್ದು, ಆತ್ಮಪದವು = ಆತ್ಮನ ಸ್ವರೂಪವು, ಎನ್ನ=ನನ್ನ, ಮಾನಸದೊಳ್=ಮನಸ್ಸಿನಲ್ಲಿ, ಇರ್ಕೆ=ಇರಲಿ.

ತಾತ್ಪರ್ಯ:- ಜಗತ್ತಿನಲ್ಲಿ ಆತ್ಮಲಾಭಕ್ಕಿಂತಲೂ ಶ್ರೇಷ್ಠವಾದದ್ದು ಯಾವ ಲಾಭವೂ ಇಲ್ಲ. ಅಂಥಾ ಬ್ರಹ್ಮಾಭಿನ್ನ ಪ್ರತ್ಯಗಾತ್ಮ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಕೊಂಡರೆ ಅಖಂಡಾನಂದವು ಪ್ರಾಪ್ತವಾಗುತ್ತದೆ. ಆ ಅಖಂಡ ಆನಂದ ದಲ್ಲಿ ಖಂಡಾನಂದಗಳೆಲ್ಲವು ಅಂತರ್ಭೂತಗಳಾಗಿರುತ್ತವೆ. ಆದ್ದರಿಂದ ತನ್ನ ಲಾಭ ಕ್ಕಿಂತಲೂ ಬೇರೊಂದು ಲಾಭವಿಲ್ಲ. ಅಂಥಾ ಆತ್ಮಸ್ವರೂಪು ಯಾವಾಗಲೂ ನನ್ನ ಮನಸ್ಸಿನಲ್ಲಿ ಸ್ಮೃತಿರೂಪದಿಂದ ಇರಲಿ. ಎಂಬದಾಗಿ ಆಶೀರ್ವಾದರೂಪ ಮಂಗಲವನ್ನು ಮಾಡಿದ್ದಾರೆ.

ಶಿಷ್ಯ:- ಎಲ್ಲ ಲಾಭಗಳಿಗಿಂತಲೂ ಆತ್ಮ ಲಾಭವೇ ಶ್ರೇಷ್ಠವೆಂದು ಹೇಳಿದರೆ, ಸರ್ವರು ಆತ್ಮಲಾಭಕ್ಕಾಗಿಯೇ ಯತ್ನವನ್ನು ಮಾಡುತ್ತಿರಬೇಕಾಗಿತ್ತು. ಆದರೆ ಜಗತ್ತಿನಲ್ಲಿ ಒಬ್ಬಿಬ್ಬರು ಮಾತ್ರ ಆತ್ಮಲಾಭದಲ್ಲಿ ಪ್ರವರ್ತಿಸುವದು ಕಂಡು ಬರು ವದು. ಅನೇಕ ಜನರು ಅನ್ಯ ಲಾಭಗಳಲ್ಲಿಯೇ ತೊಡಗಿರುವರು. ಆದ್ದರಿಂದ ಪ್ರತ್ಯಕ್ಷವಾಗಿ ವಿಚಾರಮಾಡಿದರೆ, ಆತ್ಮಲಾಭವೇ ಶ್ರೇಷ್ಠವೆಂಬುವದು ಅಯೋಗ್ಯ ವೆಂದು ತಿಳಿದುಬರುತ್ತದೆ.

ಗುರು:- ಕಣ್ಣಿಗೆ ಕಾಣುವದು ನಿಜವೆಂದು ನಾವು ಹೇಳುವದಿಲ್ಲ. ಅದು ವಿಪರೀತವಾಗಿಯೂ ಇರಬಹುದು. ಆದರೆ ಶ್ರುತಿಗುರುಗಳ ಮಾತು ನಿಜವಾಗಿಯೇ ಇರುತ್ತದೆ. ಹೇಗಂದರೆ, ಇಹಲೋಕ ಪರಲೋಕ ಭೋಗಾದಿಗಳ ಲಾ... ...ವು; ಸಾತಿಶಯ ಅನಿತ್ಯತ್ವಾದಿ ದೋಷಗಳಿಂದ ಕೂಡಿಕೊಂಡಿದೆ. ನಿರತಿ... ...ಯವಾದ

ಆತ್ಮಾನಂದವು ನಿತ್ಯವಾಗಿರುತ್ತದೆ. ಅನಿತ್ಯ ಲಾಭಗಳಿಗಿಂತಲೂ ನಿತ್ಯಾನಂದ ಲಾಭವು ಶ್ರೇಷ್ಠವಲ್ಲವೇ? ಹೀಗಿದ್ದರೂ ಜನರು ನಿತ್ಯಾತ್ಮ ಲಾಭವನ್ನು ತೊರೆದು ಅನಿತ್ಯ ಲಾಭಗಳನ್ನು ಪಡೆಯುವದರಲ್ಲಿ, ಆಯುಷ್ಯವನ್ನು ಕಳೆಯುವರು. ಅವರ ಅಜ್ಞಾನವೇ ಕಾರಣವಲ್ಲದೆ ಬೇರೆ ಏನುಂಟು? ಈ ಅಜ್ಞಾನಿ ಜನರ ಪ್ರವೃತ್ತಿಯನ್ನು ಲಕ್ಷಿಸಿ, ಆತ್ಮ ಲಾಭವು ಶ್ರೇಷ್ಠವಲ್ಲೆಂದು ಹೇಳಲಿಕ್ಕೆ ಆದೀತೆ? ಎಂದಿಗೂ ಆಗದು. ಇದಕ್ಕೆ ಕಾರಣವೇನೆಂದರೆ, 'ಬ್ರಹ್ಮನು ಇಂದ್ರಿಯಗಳನ್ನು ಬಹಿರ್ಮುಖಗಳನ್ನಾಗಿ ರಚಿಸಿದನು' ಎಂಬ ಶ್ರುತಿ ವಾಕ್ಯವುಂಟು. ಅದರಿಂದ ಸಕಲ ಜೀವಿಗಳು ಇಂದ್ರಿಯಗಳಿಗೆ ಗೋಚರವಾದ ವಿಷಯಗಳಲ್ಲಿಯೇ ಸುಖವುಂಟೆಂಬ ಬುದ್ಧಿಯಿಂದ, ಅನಾತ್ಮ ಅನಿತ್ಯಗಳಾದ ಇಹಪರ ಭೋಗಗಳನ್ನು ಬಯಸುತ್ತಾರೆ. ಯಾವನೋ ಒಬ್ಬ ಧೀರನಾದ ಪುರುಷನು, ಈ ನಿತ್ಯಾನಿತ್ಯ ವಿಚಾರವನ್ನು ಮಾಡಿ, ಅನಿತ್ಯ ಭೋಗಗಳಿಂದ ನಿವೃತ್ತನಾಗಿ, ನಿತ್ಯವಾದ ಆತ್ಮಲಾಭವನ್ನು ಮಾಡಿಕೊಂಡು ಕೃತಾರ್ಥನಾಗುತ್ತಾನೆ. ಆದ್ದರಿಂದಲೇ ಗ್ರಂಥಕಾರರು ಕೈವಲ್ಯ ಪದ್ಧತಿಯಲ್ಲಿ **"ಮನುಷ್ಯಕುಲ ಜನನದ ಲಾಭವಾವುದು? ಆನು ಆರೆಂದು ತಿಳಿವುದು"** ಎಂಬುದಾಗಿ ಹೇಳಿದ್ದಾರೆ. 'ಯಾವದು ದೊಡ್ಡದಿರುವದೋ ಅದೇ ಸುಖವಾಗಿರುವದು. ಅಲ್ಪದರಲ್ಲಿ ಸುಖವಿಲ್ಲ' ಹೀಗೆಂದು ಶ್ರುತಿಯೂ ಉಂಟು. ಆದ್ದರಿಂದ ನಿತ್ಯ ನಿರತಿಶಯ ವ್ಯಾಪಕವಾದದ್ದು ಆತ್ಮಸ್ವರೂಪವುಂಟು. ಇದಕ್ಕಿಂತಲೂ ದೊಡ್ಡದಾದದ್ದು ಯಾವದೂ ಇಲ್ಲ. ಆದ್ದರಿಂದ ಆತ್ಮ ಲಾಭಕ್ಕಿಂತಲೂ ಬೇರೆ ಲಾಭವಿಲ್ಲೆಂದು ಹೇಳಿರುವದು ಯೋಗ್ಯವಾಗಿರುತ್ತದೆ. ಮತ್ತು ಬ್ರಹ್ಮವಿದ್ಯೆಗಿಂತಲೂ ಹೆಚ್ಚಿನದಾದ ವಿದ್ಯೆಯಾದರೂ ಜಗತ್ತಿನಲ್ಲಿ ಬೇರೆ ಯಾವದೂ ಇಲ್ಲ. ಈ ಆತ್ಮಸ್ವರೂಪು ಇಂದ್ರಿಯಗಳಿಗೆ ಅವೇದ್ಯವಾಗಿರುವದರಿಂದಲೂ, ಬುದ್ಧಿಯಿಂದಲೂ ಕೂಡಾ ಗ್ರಹಿಸಲಿಕ್ಕೆ ಬಾರದ್ದರಿಂದಲೂ, ಗುರು ಶಾಸ್ತ್ರಗಳು ಉಪದೇಶಮಾಡಿದರೂ ಯಾರೋ ಅಧಿಕಾರಿಗಳಾದ ಒಬ್ಬಿಬ್ಬರು ಆತ್ಮಲಾಭದಲ್ಲಿ ತೊಡಗಿರುವದು ಯೋಗ್ಯವದೆ. ಆದ್ದರಿಂದಲೇ ಅನ್ಯಲಾಭಗಳಿಗಿಂತಲೂ ಆತ್ಮಲಾಭವು ಶ್ರೇಷ್ಠವೆಂದು ಹೇಳಿರುತ್ತದೆ. ಈ ಅರ್ಥಕ್ಕೆ ಶ್ರೀ ಮತ್ಸುರೇಶ್ವರಾಚಾರ್ಯರ ಶ್ಲೋಕವು ಪ್ರಮಾಣವಾಗಿರುತ್ತದೆ.

**" ಆತ್ಮಲಾಭಾತ್ಪರೋ ಲಾಭೋ ನಾಸ್ತೀತಿ ಮುನಯೋ ವಿದುಃ।**
**ತಲ್ಲಾಭಾರ್ಥಂ ಕವಿಸ್ತೌತಿ ಸ್ವಾತ್ಮಾನಂ ಪರಮೇಶ್ವರಂ "**

**ಶಿಷ್ಯ:-** ಯಾವನು ಯಾವ ಆನಂದವನ್ನು ಕುರಿತು ಪ್ರಯತ್ನ ಮಾಡುವನೋ, ಅವನಿಗೆ ಅದೊಂದೇ ದೊರೆಯುತ್ತದೆ. ಮಿಕ್ಕ ಆನಂದಗಳು ದೊರೆಯುವದಿಲ್ಲ. ಹೀಗಿದ್ದು ತಾವು ಆತ್ಮಲಾಭವಾದರೆ ಸರ್ವಾನಂದಗಳು ಪ್ರಾಪ್ತವಾದಂತೆ ಎಂದು ಹೇಗೆ ಹೇಳುತ್ತೀರಿ?

**ಗುರು:-** ಹೇಳಲಿಕ್ಕೆ ಬರುತ್ತದೆ. ಹೇಗಂದರೆ? ಸಹಸ್ರ ಸಂಖ್ಯೆಗಳಲ್ಲಿ ಶತ ಸಂಖ್ಯೆಗಳು ಅಂತರ್ಭೂತಗಳಾದಂತೆ, ಒಂದು ಸಮುದ್ರ ಸ್ನಾನದಲ್ಲಿ ಯಾವತ್ತು ನದಿಗಳ ಸ್ನಾನ ಫಲವು ಅಂತರ್ಭೂತವಾದಂತೆ, ಗಜದ ಹೆಜ್ಜೆಯಲ್ಲಿ ಅನ್ಯ ಹೆಜ್ಜೆಗಳು ಅಂತರ್ಭೂತವಾದಂತೆ, ನಿರತಿಶಯ ಆತ್ಮಾನಂದದಲ್ಲಿ ಅನ್ಯ ಕರ್ಮೋಪಾಸನಾ ಸಂಬಂಧಿ ಯಾವತ್ತು ಆನಂದಗಳು ಅಂತರ್ಭೂತಗಳಾಗಿರುತ್ತವೆ. **ಯಾವಾನರ್ಥ ಉದಪಾನೆ ಸರ್ವತಃ ಸಂಪ್ಲುತೋದಕೇ। ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ** ಎಂದು ಗೀತೆಯಲ್ಲಿ ಭಗವಂತನು ಹೇಳಿದ್ದಾನೆ. ಈ ವಿಷಯವನ್ನು ಮುಂದೆ ನಿನಗೆ ಪ್ರಸಂಗಾನುಸಾರ ವಿಸ್ತರಿಸುತ್ತೇನೆ. ಆದ್ದರಿಂದ ಯಾವತ್ತು ಲಾಭಗಳಿಗಿಂತಲೂ ಆತ್ಮಲಾಭವು ಅಧಿಕವಾಗಿರುತ್ತದೆ. ಅಂಥಾ ಬ್ರಹ್ಮಾಭಿನ್ನವಾದ ಪ್ರತ್ಯಗಾತ್ಮಸ್ವರೂಪವು ಯಾವಾಗಲೂ ನನ್ನ ಮನಸ್ಸಿನಲ್ಲಿ ಸ್ಮೃತಿರೂಪದಿಂದ ಇರಲಿ, ಎಂಬದಾಗಿ ಗ್ರಂಥಕಾರರು ಮಾಡುವ ಮಂಗಲವು ನಿರ್ದೋಷವಿದೆ.

ಶಿಷ್ಯ:- ಅನ್ಯ ಗ್ರಂಥಗಳಲ್ಲಿ ದೇವತಾ ಮಂಗಳವನ್ನು ಮಾತ್ರ ಮಾಡಿರುತ್ತಾರೆ ಆತ್ಮಮಂಗಳವು ಮಾಡಲ್ಪಟ್ಟಿಲ್ಲ. ಇದು ಸಾಂಪ್ರದಾಯಕ್ಕೆ ವಿರೋಧವಲ್ಲವೆ?

**ಗುರು:-** ಅದಕ್ಕಾಗಿಯೇ ನಿನಗೆ ಆತ್ಮಲಾಭಕ್ಕಿಂತಲೂ ಬೇರೆ ಲಾಭವಿಲ್ಲೆಂಬ ಶ್ಲೋಕವನ್ನು ಉದಾಹರಿಸಿದ್ದೇವೆ. ಇಷ್ಟೇ ಅಲ್ಲ, ವಿಚಾರಸಾಗರ ಗ್ರಂಥಾರಂಭದಲ್ಲಿ ಶ್ರೀ ನಿಶ್ಚಲದಾಸರು "ಸಮುದ್ರದಂತೆ ಅಪಾರವಾದ ನನ್ನ ಪ್ರತ್ಯಗಾತ್ಮ ಸ್ವರೂಪದಲ್ಲಿ ಹರಿ, ಹರ, ಬ್ರಹ್ಮಾದಿ ದೇವತೆಗಳೆಲ್ಲರೂ ತೆರೆಗಳೋಪಾದಿಯಲ್ಲಿರುತ್ತಾರೆ. ಆದ್ದರಿಂದ ತನ್ನ ಮಂಗಳವನ್ನು ಮಾಡುವದರಿಂದ ಯಾವತ್ತು ದೇವತೆಗಳ ಮಂಗಳವನ್ನು ಮಾಡಿದಂತಾಯಿತು. ಅದರಿಂದ ತನ್ನ ಮಂಗಳವನ್ನು ಮಾಡುವದು ಯೋಗ್ಯವಾಗಿರುತ್ತದೆಂದು ಹೇಳಿರುವರು. ಮತ್ತು ಅನ್ಯ ದೇವತೆಗಳು ಭಿನ್ನರಲ್ಲದ್ದರಿಂದ ನಾನು ಯಾರಿಗೆ ನಮಸ್ಕಾರವನ್ನು ಮಾಡಲಿ ಎಂಬದಾಗಿಯೂ ನುಡಿದಿರುವರು. ಆದ್ದರಿಂದ ಪ್ರತ್ಯಗಾತ್ಮಮಂಗಳವು ನಿರ್ದೋಷವಿದೆ.

## ಇಷ್ಟ ದೇವತಾ ನಮಸ್ಕಾರ ನಿರೂಪಣೆ

ಬಳಿಕ, ಹಿಂದಿನ ಸೂತ್ರದಲ್ಲಿ ಮಂಗಲವನ್ನುಮಾಡಿ, ಬಳಿಕ ಈ ಸೂತ್ರದಲ್ಲಿ ಗ್ರಂಥದ **ಸಾರ್ಥಕ್ಯವನ್ನೂ ನಿರ್ದೋಷತ್ವವನ್ನೂ** ಪ್ರತಿಪಾದನ ಮಾಡುತ್ತಾರೆ.

ಸೂತ್ರ॥ **ಸಕಲ ವೇದಾಂತ ಸಾರವನೆ ತಿಳಿವಂತೆ ಸಾ।**
**ಧಕರಿಗೀ ಪ್ರಕರಣದೊಳೊಲಿದೊರೆವೆನು ॥**

**ಟೀಕಾಃ-** ಸಾಧಕರಿಗೆ=ಮುಮುಕ್ಷುಗಳಿಗೆ, ಸಕಲ=ಎಲ್ಲ, ವೇದಾಂತ=ಉಪ ನಿಷತ್ತುಗಳ, ಸಾರವನೆ=ಅದ್ವೈತರೂಪ, ತಾತ್ಪರ್ಯವನ್ನೇ, ತಿಳಿವಂತೆ=ಅರಿಯುವ ಹಾಗೆ, ಈ ಪ್ರಕರಣದೊಳ್=ಈ ಗ್ರಂಥದಲ್ಲಿ ಒಲಿದು=ಪ್ರೀತನಾಗಿ, ಒರೆವೆನು= ಹೇಳುತ್ತೇನೆ.

**ತಾತ್ಪರ್ಯ:-** ಸಕಲೋಪನಿಷತ್ತುಗಳಲ್ಲಿ ಹೇಳಲ್ಪಟ್ಟ ಅದ್ವೈತರೂಪ ತಾತ್ಪರ್ಯವನ್ನು ಈ ಗ್ರಂಥದಲ್ಲಿ ಮುಮುಕ್ಷುಗಳು ಚನ್ನಾಗಿ ತಿಳಿಯುವಂತೆ, ಪ್ರೀತಿಯಿಂದ ಹೇಳುತ್ತೇನೆ.

**ಶಂಕಾಃ-** ಉಪನಿಷತ್ತುಗಳಲ್ಲಿ ಸೃಷ್ಟಿಪ್ರಳಯಾದಿ ಪ್ರಕ್ರಿಯೆಗಳು ಹಾಗು ನಿಯಮ್ಯ ನಿಯಾಮಕದಿಂದ ಜೀವೇಶ್ವರರಭೇದವು ಈ ರೀತಿ ದ್ವೈತವು ಹೇಳಲ್ಪಡು ತ್ತಿರಲಿಕ್ಕೆ ಅದ್ವೈತವು ಹೇಗೆ?

**ಸಮಾಧಾನ:-** ಪ್ರತಿಯೊಂದು ಉಪನಿಷತ್ತುಗಳಲ್ಲಿ ಆರು ಲಿಂಗಗಳಿರುತ್ತವೆ. ಅವುಗಳಿಂದ ಅದ್ವೈತರೂಪ ತಾತ್ಪರ್ಯವೇ ಹೊರಡುತ್ತದೆ. ಹೇಗೆಂದರೆ, **ಉಪ ಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪ ಪತ್ತಿ,** ಎಂಬ ಆರುಲಿಂಗಗಳುಂಟು, ಯಾವುದರಿಂದ ಸೃಷ್ಟಿಯು ಹೇಳಲ್ಪಡು ತ್ತದೆಯೋ ಅಲ್ಲಿಯೇ ಲಯವು ಹೇಳಲ್ಪಡುತ್ತದೆ. ಈ ಸೃಷ್ಟಿಯ ಅಧಿಷ್ಠಾನ ವಾದದ್ದೊಂದು ವಸ್ತು ನಿರೂಪಿಸಲ್ಪಡುತ್ತದೆ. ಇದೇ **ಉಪಕ್ರಮೋಪಸಂಹಾರವು.** ಅದೇ ನೀನೆಂದು ಪುನಃ ಪುನಃ ಹೇಳುವದೇ **ಅಭ್ಯಾಸವು.** ಅದುಪ್ರತ್ಯಕ್ಷಾದಿಗಳಿಗೆ ವಿಷಯವಲ್ಲೆಂದು ಹೇಳುವದೇ **ಅಪೂರ್ವತಾ,** ಹೀಗೆ ತಿಳಿಯೋಣದರಿಂದ ಜೀವನ್ಮುಕ್ತಿ ವಿದೇಹಮುಕ್ತಿಗಳೇ **ಫಲವು.** ದ್ವೈತವು ಮಿಥ್ಯೆಯೆಂದು ನಿಂದೆಯನ್ನು ಅದ್ವೈತವು ಸತ್ಯವೆಂದು ಸ್ತುತಿಯನ್ನು ಮಾಡುವದೇ **ಅರ್ಥವಾದವು.** ಇದ್ದೊಂದು ಬ್ರಹ್ಮವೇ ಜಗತ್ತಿಗೆ ಕಾರಣವಾಗಿರುವದೆಂದು ಹೇಳುವದೇ **ಉಪಪತ್ತಿ,** ಹೀಗೆ ಆರು ಲಿಂಗಗಳಿಂದ ಅದ್ವೈತವೇ ತಾತ್ಪರ್ಯರೂಪವಾಗಿದೆ.

**ಶಂಕಾ:-** ವೇದಾಂತ ವಾಕ್ಯಗಳು ಸೃಷ್ಟಿಪ್ರಳಯಾದಿಗಳ ಮೇಲಿಂದ ಅಧಿ ಷ್ಠಾನ ಬ್ರಹ್ಮವನ್ನು ತೋರಿಸುತ್ತವೆಂದು ಹೇಳಿದಮೇಲೆ, ದ್ವೈತ ಸಾಧನದಿಂದಲೇ ಅದ್ವೈತವು ನಿರೂಪಿಸಲ್ಪಟ್ಟಿತು. ಹೀಗಾದ ಮೇಲೆ ದ್ವೈತವು ಮಿಥ್ಯೆ ಹೇಗೆ? ದ್ವೈತವು ಮಿಥ್ಯೆಯಾದರೆ, ಮಿಥ್ಯಾಸಾಧನದಿಂದ ಪ್ರಾಪ್ತವಾದ ಅದ್ವೈತವೂ ಮಿಥ್ಯೆ ಯಾಗಬೇಕಾದೀತು.

**ಸಮಾಧಾನ:-** ಅದ್ವೈತವು ಮೊದಲೇ ಸ್ವತಃ ಸಿದ್ಧವಿರುತ್ತದೆ. ಅದು ಯಾವ ಸಾಧನದಿಂದಲೂ ಕರ್ಮಫಲದಂತೆ, ಸಾಧ್ಯವಾಗಿಲ್ಲ. ಮತ್ತು ಶಾಖಾಗ್ರ

ಚಂದ್ರನಂತೆ ಅದ್ವೈತ ಬ್ರಹ್ಮದಜ್ಞಾನವು ಶಿಷ್ಯನ ಬುದ್ಧಿಯಲ್ಲಿ ಪ್ರವೇಶಿಸುವದಕ್ಕಾಗಿ, ತಟಸ್ಥ ಲಕ್ಷಣದ್ವಾರಾ ವೇದಾಂತವಾಕ್ಯಗಳು ಬೋಧೆ ಮಾಡುತ್ತವೆ ಹೊರ್ತು ಅದ್ವೈತ ಸಿದ್ಧಿಗೋಸ್ಕರವಲ್ಲ. ಆದ್ದರಿಂದ ದ್ವೈತದಿಂದ ಅದ್ವೈತ ಸಿದ್ಧಿಯಲ್ಲ. ಕಿಂತು ಅದ್ವೈತದಿಂದಲೇ ದ್ವೈತದ ಸಿದ್ಧಿಯಾಗಿರುತ್ತದೆ. ಹೇಗಂದರೆ ಅಧಿಷ್ಠಾನವಾದ ಶುಕ್ತಿಯಲ್ಲಿ ಕಲ್ಪಿತ ರಜತವು ಸಿದ್ಧಿಸಿದಂತೆ, ಅಧಿಷ್ಠಾನವಾದ ಅದ್ವೈತದಲ್ಲಿ ಕಲ್ಪಿತ ದ್ವೈತವು ಪ್ರತೀತಿಯಾಗುತ್ತದೆ. ಆದ್ದರಿಂದಲೇ ದ್ವೈತವು ಮಿಥ್ಯಾ ಅದ್ವೈತವೇ ಸತ್ಯವಾಗಿರುತ್ತದೆ.

**ಶಂಕಾ:-** ದ್ವೈತಕ್ಕೆ ವಿರೋಧವಾದದ್ದೇ ಅದ್ವೈತವೆಂದು ಹೇಳುತ್ತಾರೆ. ಎರಡು ಟಗರುಗಳ ಹೋರಾಟದಂತೆ ದ್ವೈತಾದ್ವೈತಗಳು ವಿರುದ್ಧಗಳಾಗಿರುವದರಿಂದ, ಸಮಾನ ಸತ್ತಾವುಳ್ಳವುಗಳಾಗಿರುತ್ತವೆ. ಆದ್ದರಿಂದ ಅದ್ವೈತವು ಹೇಗೆ ಸತ್ಯವೋ ಹಾಗೇ ದ್ವೈತವಾದರೂ ಸತ್ಯವುಂಟು.

**ಸಮಾಧಾನ:-** ಅದ್ವೈತಕ್ಕೆ ದ್ವೈತವು ವಿರೋಧವಾಗಿದ್ದರೆ, ಭೇದರೂಪ ದ್ವೈತವು ಉದಯವೇ ಆಗಬಾರದಾಗಿತ್ತು. ಜಗದ್ರೂಪ ದ್ವೈತಕ್ಕೆ ಅದ್ವೈತವು ವಿರೋಧಿಯಾಗಿದ್ದರೆ, ಚೇತನರೂಪ ಆತ್ಮನೇ ಇರಬಾರದಾಗಿತ್ತು. ಹೀಗೆ ಇಲ್ಲದ್ದರಿಂದ ದ್ವೈತಾದ್ವೈತಗಳಿಗೆ ವಿರೋಧವಿಲ್ಲ. ವಿರೋಧವುಂಟೆಂದು ಹೇಳುವ ನಿನ್ನ ಮಾತೇ ವಿರುದ್ಧವಾಗಿರುತ್ತದೆ. ಕಿಂತು, ಅದ್ವೈತದ ಜ್ಞಾನವು ಮಾತ್ರ ದ್ವೈತಕ್ಕೆ ವಿರೋಧವಾಗಿರುತ್ತದೆ ಹೊರ್ತು ಅದ್ವೈತವಲ್ಲ. ಹೇಗಂದರೆ, ಶುಕ್ತಿಯು ರಜತಕ್ಕೆ ವಿರೋಧಿಯಲ್ಲ. ಕಿಂತು ಶುಕ್ತಿಯ ಜ್ಞಾನವು ರಜತಕ್ಕೆ ವಿರೋಧಿಯಾಗಿರುತ್ತದೆ. ಆದ್ದರಿಂದ ದ್ವೈತಕ್ಕೆ ವಿರೋಧವಾದದ್ದು ಅದ್ವೈತವೆಂದು ಅರ್ಥಮಾಡದೆ, ಯಾವುದರಲ್ಲಿ ದ್ವೈತವಿಲ್ಲವೋ ಅದೇ ಅದ್ವೈತವೆಂದು ಅರ್ಥಮಾಡಬೇಕು. ಈ ಅರ್ಥವನ್ನು ಮಾಡಿದರೆ ಯಾವ ದೋಷವೂ ಇಲ್ಲ. ಆದ್ದರಿಂದಲೇ ಸಮಾನ ಸತ್ತಾವುಳ್ಳವುಗಳು ಅಲ್ಲ. ಅದ್ವೈತವು ಪಾರಮಾರ್ಥಿಕ ಸತ್ತೆಯುಳ್ಳದ್ದಾಗಿರುತ್ತದೆ. ದ್ವೈತವು ಪ್ರಾತಿಭಾಸಿಕ ಅಥವಾ ವ್ಯಾವಹಾರಿಕ ಸತ್ತಾವುಳ್ಳದ್ದಾಗಿರುತ್ತದೆ. ಅದರಿಂದ ದ್ವೈತ ಮಿಥ್ಯೆ, ಅದ್ವೈತ ಸತ್ಯವಾಗಿರುತ್ತದೆ.

**ಶಂಕಾ:-** ಅದ್ವೈತದಂತೆ ದ್ವೈತವಾದರೂ ಪಾರಮಾರ್ಥಿಕ ಸತ್ತಾವುಳ್ಳದ್ದಾಗಿರುತ್ತದೆ. ಯಾಕಂದರೆ, ದ್ವೈತ ಜ್ಞಾನದಿಂದ ಅದ್ವೈತವೂ ತೋರುವದಿಲ್ಲ. ಆದ್ದರಿಂದ ಎರಡೂ ಸಮಾನ ಉಂಟು.

**ಸಮಾಧಾನ:-** ದ್ವೈತವು ಪಾರಮಾರ್ಥಿಕ ಸತ್ತಾವುಳ್ಳದ್ದಾಗಿದ್ದರೆ, ಅದ್ವೈತದಂತೆ ದೃಗ್ರೂಪವಾಗಬೇಕಾಗಿತ್ತು. ದೃಶ್ಯವಾಗಬಾರದು. ದೃಶ್ಯವಾಗಿದೆ ಆದದರಿಂದ ಪಾರಮಾರ್ಥಿಕವಲ್ಲ.

**ಶಂಕಾ:-** ಅದ್ವೈತವು ದೃಗ್ರೂಪದಿಂದ ಪಾರಮಾರ್ಥಿಕವಾಗಿದ್ದರೆ, ದ್ವೈತವು ದೃಶ್ಯರೂಪದಿಂದ ಪಾರಮಾರ್ಥಿಕವಾಗಿದೆ, ದೋಷವೇನು?

**ಸಮಾಧಾನ:-** ಸುಷ್ತಿಯಲ್ಲಿ ದೃಶ್ಯವಾದ ದ್ವೈತವು ಅಭಾವವಾಗಿರುತ್ತದೆ. ದೃಗ್ರೂಪಮಾದ ಅದ್ವೈತವು ಭಾವರೂಪದಿಂದ ಸಿದ್ಧವಿರುತ್ತದೆ. ಆದ್ದರಿಂದ ದ್ವೈತಕ್ಕೆ ಪಾರಮಾರ್ಥಿಕ ಸತ್ತೆಯಿಲ್ಲ.

**ಶಂಕಾ:-** ದ್ವೈತವು ಕಾರ್ಯರೂಪದಿಂದ ಸುಷ್ತಿಯಲ್ಲಿ ಅಭಾವವಾಗಿದ್ದರೂ ಕಾರಣವಾದ ಅಜ್ಞಾನರೂಪದಿಂದ ಭಾವವಾಗಿದೆ. ಆದ್ದರಿಂದ ಪುನರ್ಜಾಗ್ರದಲ್ಲಿ ಪುನಸ್ಸೃಷ್ಟಿಯಲ್ಲಿ ಯಥಾವತ್ ತೋರುತ್ತದೆ. ಆದ್ದರಿಂದ ದ್ವೈತವು ಪಾರಮಾರ್ಥಿಕವಾಗಿದೆ.

**ಸಮಾಧಾನ:-** ಸುಷ್ತಿಯಲ್ಲಿ ದ್ವೈತವು ಬೀಜರೂಪದಿಂದ ಇದ್ದರೂ, ಸಮಾಧಿ!ಅವಸ್ಥೆಯಲ್ಲಿ ಅಭಾವವಾಗಿದೆ. ಇದರಂತೆ ವಿದೇಹಮೋಕ್ಷಾವಸ್ಥೆಯಲ್ಲಿಯೂ ಅಭಾವವಾಗಿದೆ. ಅಂದರೆ, ಕಾರ್ಯಕಾರಣ ಉಭಯರೂಪದಿಂದಲೂ ಅಭಾವವಾಗಿದೆ. ಅದ್ವೈತವು ಎರಡೂ ಅವಸ್ಥೆಗಳಲ್ಲಿ ಸ್ವತಃ ಸಿದ್ಧ ಪ್ರಕಾಶಮಾನವಾಗಿದೆ. ಆದ್ದರಿಂದಲೇ ಪಾರಮಾರ್ಥಿಕ ಸತ್ಯವಾಗಿದೆ. ದ್ವೈತವು ಅಭಾವವಾದ್ದರಿಂದ ಅಪರಮಾರ್ಥಿಕವಾಗಿದೆ. ಅರ್ಥಾತ್ ಮಿಥ್ಯೆಯಾಗಿರುತ್ತದೆ. ಸಮಾಧಿಯಿಂದ ಉತ್ಥಾನನಾದವನಿಗೆ ಹೇಗೆ ಆವರಣವಿಲ್ಲವೋ, ಹಾಗೇ ಮುಕ್ತನಿಗೆ ಪುನರ್ಜನ್ಮವಿಲ್ಲ. ಆದ್ದರಿಂದಲೇ ಶ್ರುತಿ ಸ್ಮೃತಿಗಳು ದ್ವೈತವು ಮಿಥ್ಯೆಯೆಂದು ನೇತಿಗಳೆಯುತ್ತವೆ. ಅದ್ವೈತವನ್ನು ನೇತಿಗಳೆಯುವದಿಲ್ಲ. ಆದ್ದರಿಂದಲೇ ಸೂತ್ರಕಾರರು, ಭಾಷ್ಯಕಾರರು '**ತತ್ತು ಸಮನ್ವಯು**' ಸೂತ್ರದಲ್ಲಿ ಎಲ್ಲ ಉಪನಿಷದ್ವಾಕ್ಯಗಳು; ನದಿಗಳು ಸಮುದ್ರವನ್ನು ಪ್ರವೇಶಿಸಿದಂತೆ, ಅದ್ವೈತರೂಪ ಬ್ರಹ್ಮಸ್ವರೂಪದಲ್ಲಿಯೇ ಪರ್ಯವಸಾನಗಳಾಗಿವೆಯೆಂದು ತೋರಿಸಿದ್ದಾರೆ. "**ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ। ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ**" ಅನೇಕ ಕೋಟ್ಯಾವಧಿ ವೇದಾಂತ ಗ್ರಂಥಗಳು ಬ್ರಹ್ಮಸತ್ಯ ಜಗನ್ಮಿಥ್ಯೆ ಜೀವನು ಬ್ರಹ್ಮನೇ ಎಂದು ಅದ್ವೈತ ತಾತ್ಪರ್ಯವನ್ನೇ ಹೇಳುತ್ತವೆ. ಇದೇ ತಾತ್ಪರ್ಯವನ್ನು ಗ್ರಂಥಕಾರರು ಹೇಳುತ್ತೇವೆಂದು ಪ್ರತಿಜ್ಞೆ ಮಾಡಿರುವದು ಯೋಗ್ಯವಾಗಿದೆ.

**ಶಂಕಾ:-** ಅದ್ವೈತ ಎಂಬ ಹೆಸರು ದ್ವೈತಸಾಪೇಕ್ಷೆಯಿಂದ ಬಂದಿರುವದು ದ್ವೈತವಿಲ್ಲದ ಮೇಲೆ ಅದ್ವೈತವೂ ಇಲ್ಲ.

**ಸಮಾಧಾನ:-** ಹಾಗಲ್ಲ. ಪುತ್ರನೆಂಬ ಹೆಸರಿನ ಸಾಪೇಕ್ಷೆಯಿಂದ ಪಿತಾಯೆಂಬ ಹೆಸರು ಬಂದಿತ್ತು. ಪುತ್ರನು ಮೃತನಾಗೋಣದರಿಂದ ಪಿತನೆಂಬ

ಹೆಸರು ಹೋಯಿತು. ಆದರೆ, ಮನುಷ್ಯನು ಹೋಗಲಿಲ್ಲ. ಇದರಂತೆ, ಅದ್ವೈತ ವೆಂಬ ಹೆಸರು ಹೋದರೂ, ಅಖಂಡೈಕರಸವೇ ಇರುತ್ತದೆ. ಅದುವೇ ತಾನೆಂದು ತಿಳಿದು ಆ ವೃತ್ತಿಯೂ ಕೂಡಾ ತನ್ನಲ್ಲಿ ಲೀನವಾದ ಬಳಿಕ, ಯಾವದಿರುವದೋ ಅದೇ ಸ್ವಯಂವಿರಾಜಮಾನವಾಗಿದೆ. ಅದೇ ಅದ್ವೈತದ ನಿಜವಾದ ರೂಪವಾಗಿದೆ.

**ಬಳಿಕ,** ಈ ಗ್ರಂಥದಲ್ಲಿ ಸಾರಭೂತ ಅದ್ವೈತವನ್ನು ಹೇಳುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ, ಬಳಿಕ ಈ ಪದ್ಯದಲ್ಲಿ ಆ ಅದ್ವೈತವು **ಶ್ರುತಿ ಪ್ರಮಾಣ** ದಿಂದ ತಿಳಿಯಲಿಕ್ಕೆ ಬರುತ್ತದೆ ಹೊರ್ತು, ಅನ್ಯಪ್ರಮಾಣಗಳಿಂದ ಬರುವದಿಲ್ಲೆಂದು ಹೇಳುತ್ತಾರೆ.

**ಶ್ರುತಿಯನೇ ಸ್ಮರಿಸಿ ಪೇಳ್ದತಿಶಯದ ಋಷಿವಾಕ್ಯ ।**
**ಸ್ಮೃತಿಯೆನಿಸಿ ಲೋಕದೊಳು ಸೇವ್ಯವೆನಿಸಲಾ ।**
**ಶ್ರುತಿಯೇ ಪ್ರಮಾಣವಖಿಳರ್ಗೆ ॥೧॥**

**ಟೀಕಾ:-** ಶ್ರುತಿಯನೇ=ವೇದವಾಕ್ಯಗಳನ್ನೇ, ಸ್ಮರಿಸಿ=ನೆನಪು ಮಾಡಿ ಕೊಂಡು, ಪೇಳ್ದ=ಹೇಳಿದ, ಅತಿಶಯದ=ಆಧಿಕ್ಯವಾದ, ಋಷಿವಾಕ್ಯ=ಮುನಿ ಗಳಿಂದಾಡಿದ ವಾಕ್ಯಗಳೇ, ಸ್ಮೃತಿಯೆನಿಸಿ=ಸ್ಮೃತಿಯೆಂದು ಹೇಳಿಸಿಕೊಂಡು, ಲೋಕದೋಳು=ಜಗತ್ತಿನಲ್ಲಿ, ಸೇವ್ಯವೆನಿಸಲ್=ಸ್ವೀಕರಿಸಲಿಕ್ಕೆ ಯೋಗ್ಯಗಳೆಂದು ಹೇಳಲಾಗಿ, ಆ ಶ್ರುತಿಯೇ=ಆ ಶ್ರುತಿಗಳೇ, ಅಖಿಳರ್ಗೆ=ಎಲ್ಲರಿಗೆ, ಪ್ರಮಾಣವು= ಪ್ರಮಾಣಗಳಾಗಿವೆ.

**ತಾತ್ಪರ್ಯ:-** ಅನಿಮಿತ್ತ ಬಂಧು, ದಯಾಳುವಾದ ಸರ್ವಜ್ಞನಾದ ಈಶ್ವರನು, ಪ್ರಾಣಿಗಳ ಕಲ್ಯಾಣಕ್ಕಾಗಿ ಪ್ರಯತ್ನವಿಲ್ಲದೆ ಶ್ವಾಸೋಚ್ಛ್ವಸಗಳಂತೆ, ಅಬಾಧಿತವಾದ ಅಗೋಚರವಾದ ಯಾವ ಅರ್ಥವನ್ನು ತಿಳಿಸುವಂಥಾ ವಾಕ್ಯ ಗಳನ್ನು ನುಡಿದನೋ, ಅವು **ಶ್ರುತಿಗಳೆಂದು** ಹೇಳಲ್ಪಡುತ್ತವೆ. ಅವುಗಳ ಅರ್ಥವು ಜೀವಿಗಳಿಗೆ ತಿಳಿಯದೆ ಹೋಗುತ್ತಿರಲು, ಆ ಶ್ರುತ್ಯರ್ಥವನ್ನು ಬಲ್ಲಂಥಾ ಋಷಿಗಳು ಆ ಶ್ರುತ್ಯರ್ಥವನ್ನೇ ತಮ್ಮ ಸ್ವಪದ ವರ್ಣನೆಗಳಿಂದ ಶ್ಲೋಕರೂಪ ವಾಗಿ ರಚನೆಯನ್ನು ಮಾಡಿದರು. ಆ ಶ್ಲೋಕಗಳೇ ಸ್ಮೃತಿಗಳೆಂದು ಜಗತ್ತಿನಲ್ಲಿ ಪ್ರಸಿದ್ಧಗಳಾಗಿರುವವು. ಆಸ್ತಿಕಮಹಾಶಯರೆಲ್ಲರು ಶ್ರುತಿ ಸ್ಮೃತಿ ಪ್ರಮಾಣ ಗಳಿಂದಲೇ ಯಾವದಾದರೊಂದು ಅರ್ಥವನ್ನು ನಿಶ್ಚಯಿಸುವರು. ಶ್ರುತಿಗೆ ಬಾಹ್ಯ ವಾದ ಅರ್ಥವನ್ನು ಯಾರೂ ಒಪ್ಪುವದಿಲ್ಲ. ಆದ್ದರಿಂದ ಅಂಥಾ ಶ್ರುತಿ ಸ್ಮೃತಿ ಪ್ರಮಾಣಗಳ ಮೂಲಕ ನಾನು ಪ್ರತಿಪಾದಿಸುವ ಅದ್ವೈತವು ನಿರ್ವಿವಾದವಾಗಿ ರುತ್ತದೆಂಬ ಭಾವವು.

**ಶಂಕಾ:-** ಪತಂಜಲಿಯು ಪಾಣಿನಿ ವ್ಯಾಕರಣವನ್ನು ಹೇಗೆ ಮಾಡಿದನೋ, ವ್ಯಾಸರು ಪುರಾಣೇತಿಹಾಸ ಗ್ರಂಥಗಳನ್ನು ಹೇಗೆ ರಚಿಸಿರುವರೋ, ಹಾಗೇ ಯಾವನೋ ಒಬ್ಬ ಮೇಧಾವಿ ಪುರುಷನು ವೇದಗಳನ್ನು ರಚಿಸಿರಬಹುದು. ಈಶ್ವರನೇ ಹೇಳಿರುವದೆಂದು ಹೇಗೆ ಹೇಳಲಿಕ್ಕೆ ಬರುತ್ತದೆ?

**ಸಮಾಧಾನ:-** ವ್ಯಾಸ ಪಾತಂಜಲಿ ಮೊದಲಾದ ಮಹರ್ಷಿಗಳು ಅರ್ಥವನ್ನು ಮೊದಲು ಸ್ಮರಿಸಿ, ಬಳಿಕ ವಾಕ್ಯಗಳನ್ನು ರಚನೆ ಮಾಡಿರುತ್ತಾರೆ. ಈಶ್ವರನು ಹಾಗಲ್ಲ. ಮತ್ತೇನಂದರೆ, ಒಂದೇ ಕಾಲದಲ್ಲಿ ಶ್ವಾಸೋಚ್ಛ್ವಾಸಗಳಂತೆ ಅನಾಯಾಸವಾಗಿ ದೀಪದಂತೆ ಸರ್ವಾರ್ಥ ಪ್ರಕಾಶಿಸುವಂಥಾ, ಅನೇಕ ವಿದ್ಯೆಯಿಂದೊಡಗೂಡಿದ ಋಗಾದಿ ವೇದಗಳನ್ನು, ಸರ್ವಜ್ಞನಾದ ಈಶ್ವರನು ನಿರ್ಮಾಣ ಮಾಡಿರುತ್ತಾನೆ. ಆದ್ದರಿಂದ ವೇದವು ಅಪೌರುಷೇಯವೆಂದು ಹೇಳಲ್ಪಡುತ್ತದೆ. ಪುರುಷ ಕರ್ತೃತ್ವದಿಂದ ಜನ್ಯವಾದದ್ದಲ್ಲ. "**ಅಸ್ಯಮಹತೋಭೂತಸ್ಯ ನಿಶ್ವಸಿತಮೇತದೃಗ್ವೇದಃ**" ಎಂಬ ಶ್ರುತಿಯೂ ಉಂಟು. ಅಂಥಾ ಋಗಾದಿ ವೇದಗಳನ್ನು ಸರ್ವಜ್ಞನಾದ ಈಶ್ವರನು ಚತುರ್ಮುಖ ಬ್ರಹ್ಮನಲ್ಲಿ ಆವಿರ್ಭಾವ ಪಡಿಸಿದನು. ಅವನು ಋಷಿಗಳಿಗೆ, ಅವರಿಂದ ರಾಜರಿಗೆ, ರಾಜರಿಂದ ಪ್ರಜರಿಗೆ, ಈ ರೀತಿ ಪರಂಪರಾ ಪ್ರಾಪ್ತಗಳಾಗಿವೆ. ವೇದವಾಕ್ಯಗಳೇ ಶ್ರುತಿಗಳು. ಭಗವದ್ಗೀತಾ, ವಾಸಿಷ್ಠ ಮೊದಲಾದ ಗ್ರಂಥಗಳೇ ಸ್ಮೃತಿಗಳೆಂದು ಹೇಳಿಸಿಕೊಳ್ಳುವವು. ಅವು ಜೀವಿಗಳಿಗೆ ಅಜ್ಞಾತವಾದ ಪಾರಮಾರ್ಥಿಕ ಅದ್ವೈತ ವಸ್ತುವನ್ನು ತಿಳಿಸೋಣವದರಿಂದ ಪ್ರಮಾಣಗಳೆಂದು ಹೇಳಿಸಿಕೊಳ್ಳುತ್ತವೆ. "**ಅಜ್ಞಾತಜ್ಞಾಪಕ ವಾಕ್ಯಂ ಹಿ ಪ್ರಮಾಣಂ**".

**ಶಂಕಾ:-** ಶ್ರುತಿ ಪ್ರಮಾಣದಿಂದಲೇ ಯಾಕೆ ತಿಳಿಯಬೇಕು? ಅನ್ಯ ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯಲಿಕ್ಕೆ ಬರುವದಿಲ್ಲವೆ? ಬೌದ್ಧರು ಶ್ರುತಿ ಪ್ರಮಾಣವನ್ನು ಸ್ವೀಕರಿಸದೆ ಅನುಮಾನಾದಿ ಪ್ರಮಾಣಗಳಿಂದ ತಿಳಿಯುತ್ತಾರೆ.

**ಸಮಾಧಾನ:-** ಬೌದ್ಧರು ಮೋಹವಶಾತ್ ಶ್ರುತಿಯನ್ನು ತ್ಯಜಿಸಿ, ಅನುಮಾನ ದೃಷ್ಟಿಯುಳ್ಳವರಾಗಿ ಶೂನ್ಯವಾದವನ್ನು ಅವಲಂಬಿಸಿದರು. ಅದರಿಂದ ಅನರ್ಥಕ್ಕೆ ಒಳಗಾದರು. ಹಾಗೆ ಆಗುವದು ಯೋಗ್ಯವಲ್ಲ. ಯಾಕಂದರೆ, ಶ್ರುತಿಯು ನಿರ್ದೋಷವಾದ ಅರ್ಥವನ್ನು ಹೇಳುತ್ತದೆ. ಹೇಗಂದರೆ., ಅನ್ಯ ಪ್ರಮಾಣಗಳಿಂದ ಗೋಚರವಾದ ವಿಷಯವನ್ನು ತಿಳಿಸುವದಿಲ್ಲ. ವಿಪರೀತವಾಗಿಯೂ ತಿಳಿಸುವದಿಲ್ಲ. ಸಂಶಯಯುಕ್ತವಾಗಿಯೂ ಹೇಳುವದಿಲ್ಲ. ಆದ್ದರಿಂದ ಶ್ರುತ್ಯರ್ಥವು ನಿರ್ದೋಷ ಪ್ರಮಾಣವಾಗಿರುವದು. ಇಂಥಾ ಶ್ರುತಿಪ್ರಮಾಣದಿಂದಲೇ ಅದ್ವೈತವು ಪ್ರತಿಪಾದಿಸಲ್ಪಡುತ್ತದೆ ಹೊರ್ತು ಪ್ರತ್ಯಕ್ಷಾದಿಗಳಿಂದ

ಹೇಳುವದಿಲ್ಲ. ಯಾಕಂದರೆ; ಅದ್ವೈತರೂಪ ಬ್ರಹ್ಮಕ್ಕೆ ರೂಪವಿಲ್ಲದ್ದರಿಂದ ಪ್ರತ್ಯಕ್ಷಪ್ರಮಾಣಕ್ಕೆ ಗೋಚರವಾಗುವದಿಲ್ಲ. ಯಾವದೊಂದು ಚಿನ್ಹವಿಲ್ಲದ್ದರಿಂದ ಅನುಮಾನಪ್ರಮಾಣಕ್ಕೂ ಗೋಚರವಲ್ಲ. ಸಜಾತೀಯವಸ್ತುವಿಲ್ಲದ್ದರಿಂದ ಉಪಮಾನಕ್ಕೂ ವಿಷಯವಲ್ಲ. "**ಅಪ್ರಮೇಯಂ ಹೇತುದೃಷ್ಟಾಂತವರ್ಜಿತಂ**" ಎಂಬುದಾಗಿ ಶ್ರುತಿಯೇ ಹೇಳುತ್ತದೆ. ಆದ್ದರಿಂದ ಶ್ರುತಿ ಪ್ರಮಾಣವು ಅವಶ್ಯಬೇಕು.

**ಶಂಕಾ:-** ಶ್ರುತಿ ಪ್ರಮಾಣದಿಂದ ಅದ್ವೈತ ಸ್ವರೂಪವು ಗೋಚರವಾಗುತ್ತದೆಂದು ಹೇಳಿದರೆ; ಶ್ರುತಿ ಪ್ರಮಾಣದಿಂದ ಜನ್ಯವಾದ ಜ್ಞಾನದಿಂದ ಅರಿಸಿಕೊಳ್ಳುತ್ತಿದೆಯೋ? ಇಲ್ಲವೋ? ಅರಿಸಿಕೊಳ್ಳುತ್ತದೆಂದು ಹೇಳಿದರೆ, ಘಟದಂತೆ ಜಡತ್ವ ಅನಾತ್ಮತ್ವ ಬರುವದು. ಇಲ್ಲವೆಂದು ಹೇಳಿದರೆ, ಶ್ರುತಿ ಪ್ರಮಾಣವು ವ್ಯರ್ಥವಾಯಿತು. ಶ್ರುತಿ ಪ್ರಮಾಣದಿಂದ ಜನ್ಯವಾದ ಜ್ಞಾನದಿಂದ ನಿವೃತ್ತಿಯಾಗಲಿಕ್ಕೆ ಯೋಗ್ಯವಾದ ಅಜ್ಞಾನದಿಂದ ವಿಷಯವಾಗುತ್ತದೆಂದು ಹೇಳಿದರೆ, ಸ್ವಯಂ ಪ್ರಕಾಶಾತ್ಮನಲ್ಲಿ ಅಜ್ಞಾನ ವಿಷಯುವೇ ಸಂಭವಿಸುವದಿಲ್ಲ. ಯಾವ ಪ್ರಮಾಣಕ್ಕೂ ವಿಷಯವಾಗುವದಿಲ್ಲೆಂದು ಹೇಳಿದರೆ, ವಂಧ್ಯಾ ಪುತ್ರನಂತೆ ಅಸತ್ತಾಗಬೇಕಾಯಿತು.

**ಸಮಾಧಾನ:-** ಅದ್ವೈತವು ಪಾರಮಾರ್ಥಿಕವಾದ್ದರಿಂದ ಅಸತ್ ವಂಧ್ಯಾ ಪುತ್ರನಂತೆ ಅಲ್ಲ. ಸಾಮಾನ್ಯ ಚೈತನ್ಯ ಸ್ವರೂಪದಿಂದ ಅಜ್ಞಾನಕ್ಕೆ ವಿಷಯವಾಗಿದೆ. ಆದರೂ ಹಾನಿಯಿಲ್ಲ. ವಿಶೇಷ ಚೈತನ್ಯದಿಂದ ವಿರೋಧಿಯಾಗಿದೆ. ಶ್ರುತಿಜನ್ಯ ಜ್ಞಾನದಿಂದ ಅದ್ವೈತ ಸ್ವರೂಪವು ವಿಷಯವಾಗಿದೆ. ಆದರೂ, ಜಡತ್ವಾದಿ ದೋಷಗಳು ಬರುವದಿಲ್ಲ. ಹೇಗಂದರೆ; ಶ್ರುತಿಜನ್ಯ ಜ್ಞಾನದಿಂದ ಆತ್ಮನು ವಿಷಯನಾಗುವನು. ಅಂದರೆ, ಅಹಂ ಬ್ರಹ್ಮಾಸ್ಮಿಯೆಂಬ ಜ್ಞಾನದಿಂದ ಬ್ರಹ್ಮಾಕಾರವಾದ ಅಂತಃಕರಣ ವೃತ್ತಿ ವ್ಯಾಪ್ತಿಯಿಂದ ಆವರಣಭಂಗವೆಂಬ ಅರ್ಥವನ್ನು ಮಾಡಬೇಕೇ ಹೊರ್ತು, ಘಟದಂತೆ ಅದ್ವೈತ ಸ್ವರೂಪು ವೇದ್ಯವೆಂಬರ್ಥವಲ್ಲ. ಆವರಣವನ್ನು ಭಂಗಮಾಡುವದರಿಂದಲೇ ಶ್ರುತಿ ವಿಷಯುವೆಂದು ಹೇಳಲ್ಪಡುತ್ತದೆ. ವಸ್ತು ಮಾತ್ರ ಅವೇದ್ಯವಾಗಿಯೂ ಅಪರೋಕ್ಷವಾಗಿರುತ್ತದೆ. ಆದ್ದರಿಂದ ಯಾವ ದೋಷವೂ ಇಲ್ಲ.

ಬಳಿಕ, ಆ ಶ್ರುತಿ ಪ್ರಮಾಣದಲ್ಲಿ ಪೂರ್ವಭಾಗ ಉತ್ತರಭಾಗವೆಂದು ಎರಡು ಪ್ರಕಾರವಾಗಿರುವವು. ಉತ್ತರ ಭಾಗವೇ ಶ್ರೇಷ್ಠವೆಂದು ಹೇಳುತ್ತಾರೆ.

**ಅದರೊಳುತ್ತರ ಭಾಗೆಯುದು ತಾನೆಯುಪನಿಷ |**
**ತ್ತದರಿಂದೆ ಮುಕ್ತಿಯುಹುದು ವಿದ್ಯಾತತ್ವ |**
**ವದರೊಳಿಹುದಾದ ಕಥದಿಂದೆ ||೨||**

**ಟೀಕಾ:-** ಅದರೋಳ್=ಆ ವೇದದಲ್ಲಿ, ಉತ್ತರ ಭಾಗೆಯದು=ಕಡೆಯ ಭಾಗವೇ, ತಾನೆಯುಪನಿಷತ್ತು=ಅದೇ ಉಪನಿಷತ್ತಾಗಿದೆ, ಅದರೊಳು=ಆ ಉಪ ನಿಷತ್ತಿನಲ್ಲಿ, ವಿದ್ಯಾತತ್ವವು=ಜ್ಞಾನವು, ಇಹುದಾದ ಕಥದಿಂದೆ=ಇರುವ ಕಾರಣ ದಿಂದೆ, ಅದರಿಂದೆ=ಆ ಉಪನಿಷತ್ತುಗಳಿಂದೆ, ಮುಕ್ತಿಯು=ಮೋಕ್ಷವು, ಅಹುದು= ಆಗುವದು.

**ತಾತ್ಪರ್ಯ:-** ವೇದದಲ್ಲಿರುವ ಪೂರ್ವಭಾಗವು ಕರ್ಮೋಪಾಸನಾ ಪ್ರತಿ ಪಾದಕವಾಗಿರುವದು. ಉತ್ತರಭಾಗವು ಬ್ರಹ್ಮ ಬೋಧಕವಾಗಿರುವದರಿಂದ ಅದಕ್ಕೆ **ಉಪನಿಷತ್ತು**ಯೆಂದು ಹೇಳುವರು. ಅದರಲ್ಲಿ ಜ್ಞಾನವಿರುತ್ತದೆ. ಆ ಜ್ಞಾನದಿಂದ ಮೋಕ್ಷವು ಸಿದ್ಧಿಸುತ್ತದೆ. ಈ ವೇದದ ಪೂರ್ವೋತ್ತರ ವಿಭಾಗ ವಿಷಯವು ವಿವೇಕ ಚಿಂತಾಮಣಿ ಮೀಮಾಂಸಾ ವಿಚಾರಯೆಂಬಲ್ಲಿ ಸ್ಪಷ್ಟವಾಗಿರುತ್ತದೆ.

**ಶಂಕಾ:-** ಕರ್ಮೋಪಾಸನೆಗಳಿಂದ ಮೋಕ್ಷವು ಸಂಭವಿಸುವದಿಲ್ಲ. ಬ್ರಹ್ಮ ಜ್ಞಾನದಿಂದಲೇ ಮೋಕ್ಷವು ಸಂಭವಿಸುತ್ತದೆಂದು ಹೇಳುವಲ್ಲಿ ಕಾರಣವೇನು?

**ಸಮಾಧಾನ:-** ಸ್ವಭಾವತಃ ಸರ್ವ ಜೀವಿಗಳು ದುಃಖದ ನಿವೃತ್ತಿಯಲ್ಲಿಯೂ, ಸುಖದ ಪ್ರಾಪ್ತಿಯಲ್ಲಿಯೂ ಪ್ರವೃತ್ತರಾಗಿದ್ದಾರೆ. ಆ ದುಃಖವು ದೇಹದ ಮೂಲಕ ಬರುತ್ತದೆ. ದೇಹವು ಪೂರ್ವ ಜನ್ಮದಲ್ಲಿ ಮಾಡಲ್ಪಟ್ಟ ಧರ್ಮಾಧರ್ಮಗಳ ಮೂಲಕ ಬರುತ್ತದೆ. ಅವು ವಿಹಿತ ನಿಷಿದ್ಧ ಕರ್ಮಗಳಿಂದ ಪ್ರಾಪ್ತಗಳಾಗುತ್ತವೆ. ಆ ವಿಹಿತ ನಿಷಿದ್ಧ ಕರ್ಮಗಳು ರಾಗದ್ವೇಷಗಳಿಂದ ಆಗುತ್ತವೆ. ಆ ರಾಗದ್ವೇಷಗಳು ಇಷ್ಟಾನಿಷ್ಟ ಅಧ್ಯಾಸ ಮೂಲಕ ಆಗುತ್ತವೆ. ಆ ಅಧ್ಯಾಸವು ಅವಿಚಾರದಿಂದ ಸಿದ್ಧ ವಾದ ದ್ವೈತ ನಿಮಿತ್ತ ಮೂಲಕವಾಗಿರುತ್ತದೆ. ಆ ದ್ವೈತವು ಅವಿಚಾರದಿಂದ ಸಿದ್ಧವಾದ ದ್ವೈತನಿಮಿತ್ತಮೂಲಕವಾಗಿರುತ್ತದೆ. ಆ ದ್ವೈತವು ಶುಕ್ತಿರಜತದಂತೆ, ಸ್ವತಃ ಸಿದ್ಧ ಅದ್ವಿತೀಯ ಅಜ್ಞಾನ ಮೂಲಕವಾಗಿರುತ್ತದೆ. ಆದ್ದರಿಂದ ಈ ಸರ್ವ ಅನರ್ಥಕ್ಕೂ ಮೂಲಕಾರಣವಾದದ್ದು ಅಜ್ಞಾನವಾಗಿರುವದು. ಸುಖವು ಉತ್ಪತ್ತಿ ನಾಶರಹಿತವಾಗಿ ಆತ್ಮನ ಸ್ವರೂಪ ಭೂತವಾಗಿರುತ್ತದೆ. ಇಂಥಾ ಸುಖವನ್ನು ಉಕ್ತ ಅಜ್ಞಾನವು ಆವರಿಸಲ್ಪಟ್ಟದೆ. ಈ ಅಜ್ಞಾನದ ನಾಶವೂ ಸುಖದ ಅವಿರ್ಭಾ ವವೂ ಆಗಬೇಕಾದರೆ ಸಮ್ಯಕ್ ಜ್ಞಾನದಿಂದಾಗುತ್ತದೆ ಹೊರ್ತು, ಕರ್ಮೋಪಾಸನೆ ಗಳಿಂದಲೂ ಸಮುಚ್ಚಯದಿಂದಲೂ ಆಗುವದಿಲ್ಲ. ಎಂಬ ಈ ವಿಷಯವನ್ನು ಪರಮಾನುಭವ ಬೋಧೆ, ನೈಷ್ಕರ್ಮ್ಯಸಿದ್ಧಿ ಮೊದಲಾದ ಗ್ರಂಥಗಳಲ್ಲಿ ಅವಲೋಕಿಸ ಬಹುದು. ಆದ್ದರಿಂದ ಕೇವಲ ಜ್ಞಾನದಿಂದಲೇ ಮೋಕ್ಷವಾಗುತ್ತದೆ. '**ಜ್ಞಾನಾ ದೇವತು ಕೈವಲ್ಯಂ**' '**ನಾನ್ಯಃ ಪಂಥಾ ವಿದ್ಯತೆ**'ಈ ಜ್ಞಾನವನ್ನು ಬಿಟ್ಟರೆ ಬೇರೆ

ಮೋಕ್ಷಕ್ಕೆ ಮಾರ್ಗವೇ ಇಲ್ಲ. ಎಂಬುದಾಗಿ ಶ್ರುತಿಗಳುಂಟು. ಆದರಿಂದ ಜ್ಞಾನವೇ ಬೇಕಾಗುತ್ತದೆ.

ಬಳಿಕ, ಜ್ಞಾನವು ಅಂದರೆ ಉಪನಿಷತ್ತು, ಉಪನಿಷತ್ತು ಅಂದರೆ ಜ್ಞಾನ ಎಂಬದಾಗಿ ಹೇಳುತ್ತಾರೆ.

**ತನ್ನನಾದಿಯವಿದ್ಯೆಯಂ ನಾಡೆ ಕೆಡಿಸಿ ಪರ |**
**ಮೋನ್ನತಿಯನೈದಿಸುವ ಕಾರಣಂ ವಿದ್ಯೆ |**
**ಗನ್ಯವೇಸೂಪನಿಷದರ್ಥ || ೩ ||**

**ಟೀಕಾ:-** ತನ್ನ=ಜೀವನ, ಅನಾದಿ=ಉತ್ಪತ್ತಿ ರಹಿತವಾದ, ಅವಿದ್ಯೆಯಂ= ಅಜ್ಞಾನವನ್ನು, ನಾಡೆ=ಚನ್ನಾಗಿ, ಕೆಡಿಸಿ=ನಾಶಮಾಡಿ, ಪರಮೋನ್ನತಿಯನು= ಪರಬ್ರಹ್ಮ ಸ್ಥಿತಿಯನ್ನು, ಐದಿಸುವ ಕಾರಣಂ = ಹೊಂದಿಸುವದರಿಂದಲೇ, ಉಪನಿಷತ್=ಉಪನಿಷತ್ತೆಂಬ, ಅರ್ಥ=ಅರ್ಥವು, ವಿದ್ಯೆಗೆ=ಜ್ಞಾನಕ್ಕೆ, ಅನ್ಯವೇ= ಬೇರೆಯಾಗಿರುವದೇ ? (ಇಲ್ಲ.)

ತಾತ್ಪರ್ಯ:- ಸರ್ವಾನರ್ಥಕ್ಕೆ ಕಾರಣವಾದ ಅನಾದಿ ಅಜ್ಞಾನವನ್ನು ಅತ್ಯಂತ ನಿವೃತ್ತಿಪಡಿಸಿ, ನಿಜಸ್ವರೂಪವನ್ನು ಅಭಿವ್ಯಕ್ತಪಡಿಸುವಂಥಾ ಬ್ರಹ್ಮ ವಿದ್ಯೆಗೆ ಉಪನಿಷತ್ ಶಬ್ದಾರ್ಥವು ಬೇರೆಯಿಲ್ಲ. ಹೇಗಂದರೆ, 'ಉಪ' ಮತ್ತು 'ನಿ' ಎಂಬ ಎರಡು ಉಪಸರ್ಗಗಳ ಮೂಲಕ 'ಷತ್' ಎಂಬ ಧಾತು ಆರನೇ ಗಣ ಪರಸ್ಮೈಪದವಾಗಿರುತ್ತದೆ. ಇದಕ್ಕೆ **ವಿಶರಣ, ಗತಿ, ಅವಸಾದನ**ಗಳೆಂಬ ಮೂರು ಅರ್ಥಗಳಾಗುತ್ತವೆ. ಹೇಗಂದರೆ, ಯಾರು ಮಂದರಾದ ಬ್ರಹ್ಮವಿತ್ತ ಉಂಟೋ, ಅವರುಗಳ ಗರ್ಭಜನ್ಮಜರಾದಿ ಸಂಸಾರವನ್ನು "**ಉಪನಿಷಾದಯತಿ-ಶಿಥಿಲೀಕರೋತಿ**" ಜೀರ್ಣ ಮಾಡುತ್ತದೆಂಬುದು ಒಂದು ಅರ್ಥವು. ಬಳಿಕ 'ಉಪ-ಸಮೀಪೆ, ನಿ-ನಿಶ್ಚಯೇನ, ಬ್ರಹ್ಮಗಮಯತೀತಿ, ಉಪನಿಷತ್, ಜಿಜ್ಞಾಸು ಗಳನ್ನು ಬ್ರಹ್ಮದ ಸಮೀಪಕ್ಕೆ ಒಯ್ದು ನಿಶ್ಚಯವಾಗಿ ಬ್ರಹ್ಮವನ್ನು ಹೊಂದಿಸುವದ ರಿಂದ ಉಪನಿಷತ್‌ಯೆಂದು ಹೇಳಲ್ಪಡುತ್ತದೆ. ಇದು ಎರಡನೇ ಅರ್ಥವು. ಬಳಿಕ ತತ್ವಜ್ಞಾನಿಗಳ ಗರ್ಭಾದಿ ಸಕಲ ದುಃಖಗಳನ್ನು ಅತ್ಯಂತ ನಿವೃತ್ತಿಮಾಡುವದ ರಿಂದ 'ಅವಸಾದನ' ಎಂಬ ಮೂರನೇ ಅರ್ಥವಾಗುವದು. ಆದ್ದರಿಂದ ಉಪನಿಷತ್ ಮತ್ತು ಜ್ಞಾನ ಈ ಎರಡು ಪದಗಳಿಗೆ ಏಕಾರ್ಥವೇ ಆಗುತ್ತದೆ. ಭಿನ್ನಾರ್ಥವಲ್ಲ.

ಈ ರೀತಿ ಉಪನಿಷತ್ತುಗಳಲ್ಲಿ ಜ್ಞಾನವುಂಟೆಂದು ಅರಿತಮೇಲೆ, **ಉಪನಿಷ ತ್ತನ್ನೇ** ತಿಳಿದು ಮುಕ್ತಿಯನ್ನು ಹೊಂದತಕ್ಕದೆಂದು ಹೇಳುತ್ತಾರೆ.

**ಇಂತಾಗಲುಪನಿಷತ್ತಂ ತಿಳಿದು ಮುಕ್ತಿಯಂ।**
**ಸಂತರ್ಕೈದುವುದು. ವೇದಾಂತ ವಿಜ್ಞಾನ।**
**ಮುಂತಾದ ವಾಕ್ಯವಿಹವಾಗಿ॥೪॥**

**ಟೀಕಾ:-** ಇಂತಾಗಲ್ = ಹೀಗಾದ್ದರಿಂದಲೇ, ಉಪನಿಷತ್ತಂ = ಉಪನಿಷತ್ತನ್ನು, ತಿಳಿದು=ಅರಿದು, ಮುಕ್ತಿಯಂ=ಮುಕ್ತಿಯನ್ನು, ಐದುವದು=ಹೊಂದುವದು, ವೇದಾಂತ=ಉಪನಿಷದ್ವಾಕ್ಯಗಳಿಂದ ಆದ, ವಿಜ್ಞಾನ=ಅಪರೋಕ್ಷ ಜ್ಞಾನದಿಂದ, ಮುಕ್ತಿಯಾಗುತ್ತದೆಂಬ, ಮುಂತಾದ=ಮೊದಲಾದ, ವಾಕ್ಯವಿಹವಾಗಿ= ವಾಕ್ಯಗಳಿರುವದರಿಂದ.

**ತಾತ್ಪರ್ಯ:-** ಆದ್ದರಿಂದಲೇ ಉಪನಿಷತ್ತುಗಳನ್ನು : ಗುರುಮುಖದಿಂದ ಶ್ರವಣಾದಿಗಳನ್ನು ಮಾಡಿ, ಯಥಾರ್ಥ ಅನುಭವವನ್ನು ಮಾಡಿಕೊಂಡು, ಸಂಶಯ, ವಿಪರೀತ ಭಾವನೆಗಳನ್ನು ದೂರೀಕರಿಸಿ,ಮುಮುಕ್ಷುಗಳು ಮೋಕ್ಷವನ್ನು ಹೊಂದತಕ್ಕದ್ದು. ಯಾಕಂದರೆ * **'ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ'** ಉಪನಿಷತ್ತುಗಳಿಂದ ಜನ್ಯವಾದ ಅಹಂ ಬ್ರಹ್ಮಾಸ್ಮಿಯೆಂಬ ಜ್ಞಾನದಿಂದ ಮುಕ್ತರಾದರೆಂಬ ವೇದವಾಕ್ಯಗಳಿರುತ್ತವೆ. ಆದ್ದರಿಂದ ಮೋಕ್ಷಾಪೇಕ್ಷಿಗಳೆಲ್ಲರೂ ಅತ್ಯಾದರದಿಂದ ಉಪನಿಷತ್ತನ್ನು ಶ್ರವಣಮಾಡಬೇಕೆಂಬ ಭಾವವು.

**ಶಂಕಾ:-** ಮುಕ್ತಿಯು ಜ್ಞಾನಸಮಕಾಲದಲ್ಲಿ ಪ್ರಾಪ್ತವಾಗುವದೋ ? ಕ್ರಮಕಾಲದಿಂದ ಪ್ರಾಪ್ತವಾಗುವದೋ ? ಕ್ರಮದಿಂದ ಎಂದು ಹೇಳಿದರೆ ಕರ್ಮಫಲದಂತೆ ಅನಿತ್ಯವಾಗಬೇಕು. ಸಮಕಾಲದಲ್ಲಿ ಆಗುವದು ಅಂದರೆ, ನಮ್ಮ ಅನುಭವಕ್ಕೆ ಯಾಕೆ ತೋರುವದಿಲ್ಲ ?

**ಸಮಾಧಾನ:-** ಜ್ಞಾನಫಲವಾದ ಮೋಕ್ಷವು ಕರ್ಮಫಲದಂತೆ ಕಾಲಾಂತರದಲ್ಲಿ ಆಗುವದಿಲ್ಲ. ಕಿಂತು ಭೋಜನಸಮಕಾಲದಲ್ಲಿಯೇ ತೃಪ್ತಿಯಾಗುವಂತೆ ಜ್ಞಾನ ಸಮಕಾಲದಲ್ಲಿಯೇ ಮೋಕ್ಷವಾಗುತ್ತದೆ. **'ಸ್ವಸ್ವರೂಪಾವಸ್ಥಿತಿರ್ಮುಕ್ತಿ'** ಅನಾತ್ಮದೇಹಾದಿಗಳ ಅಧ್ಯಾಸವನ್ನು ತೊರೆದು, ನಿಜವಾದ ತನ್ನ ಸ್ವರೂಪದಲ್ಲಿರುವದೇ ಮುಕ್ತಿಯು. ಮುಕ್ತಿ ಅಂದರೆ ತನಗಿಂತ ಬೇರೆಯಾದದ್ದೊಂದು ಫಲವಲ್ಲ. ಅದನ್ನು ಲೋಕಾಂತರದಲ್ಲಿ ಹೋಗಿ ಪಡೆಯುವದೂ ಬೇಕಾಗಿಲ್ಲ. ಅದು ತನ್ನ ಸ್ವರೂಪಾಗಿಯೇ ಇರುತ್ತದೆ. ಆದ್ದರಿಂದ ನಿನಗೆ ಅನುಭವಿಸುವದಕ್ಕೆ ಬರುವದಿಲ್ಲ. ಅನುಭವರೂಪವಾಗಿದೆಯೆಂಬ ಭಾವವು.

---

* ಗ್ರಂಥದ ಕಡೆಯಲ್ಲಿರುವ, ಪ್ರತಿಯೊಂದು ಶ್ರುತ್ಯರ್ಥವನ್ನು ನಮ್ಮಿಂದ ಉಕ್ತ ಶ್ರುತ್ಯರ್ಥ ಪ್ರಕಾಶಿಕೆಯಲ್ಲಿ ಅವಲೋಕನ ಮಾಡಬಹುದು.

**ಬಳಿಕ:-** ಆ ಉಪನಿಷತ್ತಿನಲ್ಲಿ ಹೇಳಿದ ಅರ್ಥವನ್ನೇ ಈ ಗ್ರಂಥದಲ್ಲಿ ಹೇಳುತ್ತೇನೆಂದು ಹೇಳುತ್ತಾರೆ.

**ವೇದಾಂತದೊಳು ಗೋಪ್ಯವಾದರ್ಥವುಂ ತ್ರಿವಿಧಿ**
**ಯಾದೀಪ್ರಕರಣ ವನೆ ವಾಳ್ಪೆನಾತ್ಮಜ್ಞ ।**
**ರಾದರದೊಳಾಲಿಸುವ ಪಾಂಗು ॥೫॥**

**ಟೀಕಾ:-** ವೇದಾಂತದೊಳು=ಉಪನಿಷತ್ತುಗಳಲ್ಲಿ, ಗೋಪ್ಯವಾದ=ಗೂಢವಾಗಿರುವ, ಅರ್ಥವುಂ=ಅರ್ಥವನ್ನು, ತ್ರಿವಿಧಿಯಾದ=ಮೂರು ಚರಣಗಳಿಂದ ಕೂಡಿದ ಕವಿತಾರೂಪವಾದ, ಈ ಪ್ರಕರಣವನೆ=ಈ ಗಂಥವನ್ನು, ವಾಳ್ಪೆನು=ಮಾಡುತ್ತೇನೆ, ಆತ್ಮಜ್ಞರು=ಆತ್ಮಜ್ಞಾನಿಗಳು, ಆದರದೊಳು=ಪ್ರೀತಿಯಿಂದ, ಆಲಿಸುವಪಾಂಗು=ಕೇಳುವ ಹಾಗೆ.

**ಕುಂದದನುಭವಸಾರವೆಂದಿದಕೆ ಪೆಸರನಾ ।**
**ನಂದದಿಂದಾತ್ಮವಿದರಿಡಲು ಪೇಳ್ಪೆನೊಲ ।**
**ವಿಂದೆ ಸಾಧಕರು ತಿಳಿವಂತೆ ॥ ೬ ॥**

**ಟೀಕಾ:-** ಆತ್ಮವಿದರ್=ಆತ್ಮಬಲ್ಲವರು, ಕುಂದದೆ=ಕೊರತೆ ವಡೆಯದೆ, ಇದಕೆ=ಈ ಗ್ರಂಥಕ್ಕೆ, ಅನುಭವಸಾರವೆಂದು=ಅನುಭವಸಾರವೆಂಬ, ಪೆಸರನು=ಹೆಸರನ್ನು, ಆನಂದದಿಂದ=ಸಂತೋಷದಿಂದ. ಇಡಲ್=ಇಡುವ ಹಾಗೆ, ಸಾಧಕರು=ಮುಮುಕ್ಷುಗಳು, ಒಲವಿಂದೆ=ಪ್ರೀತಿಯಿಂದೆ, ತಿಳಿವಂತೆ=ಅರಿಯುವ ಹಾಗೆ ಪೇಳ್ಪೆನು=ಹೇಳುತ್ತೇನೆ.

ಉಪನಿಷತ್ತುಗಳಲ್ಲಿ (ಗೂಢವಾಗಿರುವ) ತಿಳಿಯದಿರುವಂಥಾ ಅತಿ ಮನೋಹರವಾದ ವಿಷಯುವನ್ನು ಸಂಗ್ರಹಿಸಿ, ಮೂರು ಚರಣಗಳಿಂದ ಯುಕ್ತ ತ್ರಿಪದಿ ರೂಪ ಕವಿತೆಯಿಂದ * **ಪ್ರಕರಣ** ನಾಮಕ ಈ ಗ್ರಂಥವನ್ನು ರಚಿಸುತ್ತೇನೆ. ಅದನ್ನು ಆತ್ಮಜ್ಞಾನಿಗಳೂ ಕೂಡಾ ಪ್ರೀತಿಯಿಂದ ಕೇಳಬೇಕೆನ್ನುವ ಹಾಗೆ ರಚಿಸುತ್ತೇನೆ. ಅಂದರೆ ಸರ್ವರಿಂದ ಸೇವ್ಯವಾಗಿದೆ ಎಂಬ ಭಾವವು.

**ಶಂಕಾ:-** ಉಪನಿಷತ್ತನ್ನೇ ತಿಳಿದು ಸಂತರು ಮುಕ್ತಿಯನ್ನು ಹೊಂದುತ್ತಾರೆ. ನೀವು ಕಷ್ಟಪಟ್ಟು ಗ್ರಂಥವನ್ನು ರಚಿಸುವ ಕಾರಣವೇನು?

---

* ಶಾಸ್ತ್ರಕ್ಕೆ ಏಕದೇಶ ಸಂಬಂಧವಾಗಿದ್ದು, ಯುಕ್ತಿ, ಅನುಭವಗಳಿಂದ ಜೊತೆಯಾಗಿ ನವೀನವೆನ್ನುವಹಾಗೆ ತೋರುವದಕ್ಕೆ ಪ್ರಕರಣವೆಂದು ಕರೆಯುತ್ತಾರೆ.

ಶಾಸ್ತ್ರೈಕ ದೇಶ ಸಂಬಂಧೇ ಶಾಸ್ತ್ರಕಾರ್ಯಾಂತರೇ ಸ್ಥಿತಂ।
ಪ್ರಾಹುಃ ಪ್ರಕರಣಂ ನಾಮ ಗ್ರಂಥ ಭೇದಂ ವಿಪಶ್ಚಿತಃ ॥

**ಸಮಾಧಾನ:**- ಆ ಉಪನಿಷತ್ತುಗಳಲ್ಲಿಯೂ ಕೆಲಕೆಲವು ಅರ್ಥಗಳು ಗೂಢವಾಗಿರುವದರಿಂದ ಬುದ್ಧಿಯಿಂದಲೂ ಕೂಡಾ ತಿಳಿಯುವದಕ್ಕೆ ಬಾರದವುಗಳು ಆಗಿರುತ್ತವೆ. ಅವುಗಳನ್ನು ನಾನು ಇದರಲ್ಲಿ ಸ್ಪಷ್ಟೀಕರಿಸಿದ್ದೇನೆ. ಇದಲ್ಲದೆ, ಸಂಸ್ಕೃತ ಭಾಷಾಜ್ಞಾನವಿಲ್ಲದ ಮುಮುಕ್ಷುಗಳಿಗೆ ಅವುಗಳನ್ನು ತಿಳಿಯುವದು ಸಾಧ್ಯವಿಲ್ಲದ್ದರಿಂದಲೂ, ನಾನು ಮಾಡಿರುವ ಈ ಗ್ರಂಥವು ಉಪಯೋಗವುಳ್ಳದ್ದಾಗಿದೆ.

**ಶಂಕಾ:**- ತಾವು ಮಾಡಿರುವ ಗ್ರಂಥವು ಶುದ್ಧವೋ ಅಶುದ್ಧವೋ ಎಂಬುದನ್ನು ಸಾಧಕರು ತಿಳಿಯಲಾರರು. ಒಂದು ವೇಳೆ ಅಶುದ್ಧಾರ್ಥವನ್ನು ತಿಳಕೊಂಡು ಅನರ್ಥಕ್ಕಾದರೂ ಒಳಗಾಗಬಹುದು.

**ಸಮಾಧಾನ:**- ಹಾಗಲ್ಲ. ಆತ್ಮಜ್ಞಾನಿಗಳು ಕೂಡಾ ನಾನು ಹೇಳುವ ಅರ್ಥವನ್ನು ನೋಡಿ, ನಿಜವೆಂದು ಒಡಂಬಟ್ಟರೆ ಪ್ರೀತಿಯಿಂದ ಕೇಳುವ ಹಾಗೆ ಹೇಳುತ್ತೇನೆ. ಅಂದಮೇಲೆ, ಸಾಧಕರು ಆತಂಕವಿಲ್ಲದೆ ಈ ಗ್ರಂಥದಲ್ಲಿ ಪ್ರವರ್ತಿಸುತ್ತಾರೆ. ಮತ್ತು ಪುರುಷಾರ್ಥವನ್ನು ಪಡೆಯುತ್ತಾರೆ. ಮತ್ತು ಆತ್ಮಜ್ಞಾನಿಗಳು ಈ ಗ್ರಂಥವನ್ನು ಸಂಪೂರ್ಣ ಕೇಳಿ, ತಲೆದೂಗಿ ಆನಂದದೊಳಗೆ ಲೋಲಾಡಿ, ಎಚ್ಚರಿಕೆಯುಳ್ಳವರಾಗಿ, ಅವರೇ **ಅನುಭವಸಾರ**ವೆಂಬ ಹೆಸರನ್ನು ಇಡುವಲ್ಲಿ ಅನುಮಾನಿಸದೆ ಒಪ್ಪುವ ಹಾಗೆ ಹೇಳಿದ್ದೇನೆ. ಅದರಿಂದ ಸಾಧಕರು ಅನಾಯಾಸದಿಂದ ಸ್ವರೂಪಜ್ಞಾನವುಳ್ಳವರಾಗುತ್ತಾರೆ. ಆದ್ದರಿಂದ ನಾನು ಮಾಡಿರುವ ಗ್ರಂಥವು ಪ್ರಯೋಜನವುಳ್ಳದ್ದಾಗಿದೆ.

**ಬಳಿಕ**, ಈ ಪದದಿಂದ ಪೂರ್ವಸಾಧನಗಳನ್ನು ಹೇಳದೆ, **ಉತ್ತರ ಸಾಧನವಾದ ಜ್ಞಾನವನ್ನೇ** ಹೇಳುತ್ತೇನೆಂದು ತೋರಿಸುತ್ತಾರೆ.

**ಬಾಧೆಗೊಳಿಸುವ ಪೂರ್ವಸಾಧನಂಗಳನಿಲ್ಲಿ ।**
**ಬೋಧಿಪುದನುಳಿದೆನವು ಮುನ್ನವೇ ಮರಸ ।**
**ದೀಧರೆಯೊಳೊಪ್ಪುತಿಹವಾಗಿ** ॥೭॥

**ಟೀಕಾ:**- ಬಾಧೆಗೊಳಿಸುವ=(ಮಲವಿಕ್ಷೇಪಗಳನ್ನು) ನಾಶಮಾಡುವಂಥಾ, ಪೂರ್ವಸಾಧನಂಗಳನು=ಕರ್ಮೋಪಾಸನೆಗಳನ್ನು, ಇಲ್ಲಿ ಈ ಗ್ರಂಥದಲ್ಲಿ, ಬೋಧಿಪುವನು=ಹೇಳುವದನ್ನು, ಉಳಿದೆನು=ಬಿಟ್ಟಿರುವೆನು,(ಯಾಕಂದರೆ)ಅವು=ಕರ್ಮೋಪಾಸನೆಗಳು, ಮುನ್ನವೇ=ಮೊದಲೇ, ಮರಸದೆ=ಮರೆಯಾಗದೆ, ಈ ಧರೆಯೊಳ್=ಈ ಜಗತ್ತಿನಲ್ಲಿ, ಒಪ್ಪುತಿಹವಾಗಿ=ಶೋಭಿಸುತ್ತಿರುವದರಿಂದ, ( ಇಲ್ಲಿ ಉತ್ತರಸಾಧನವಾದ ಮುಖ್ಯಜ್ಞಾನವನ್ನೇ ಹೇಳುತ್ತೇನೆಂಬ ಭಾವವು. )

**ತಾತ್ಪರ್ಯ:-** ಮಲವಿಕ್ಷೇಪ ದೋಷಗಳನ್ನು ದೂರೀಕರಿಸುವಂಥಾ, ಕರ್ಮೋಪಾಸನೆಗಳು ಜಗತ್ತಿನಲ್ಲಿ ಪ್ರಸಿದ್ಧವಾಗಿರುವದರಿಂದ ಅವುಗಳ ವಿಷಯಕ್ಕೆ ಹೇಳುವದನ್ನು ಬಿಟ್ಟು, ಇಲ್ಲಿ ಕೇವಲ ಸ್ವರೂಪ ಆವರಣವನ್ನು ಭಂಗಮಾಡುವಂಥಾ ಜ್ಞಾನವನ್ನೇ ಹೇಳುತ್ತೇನೆ.

**ಶಂಕಾ:-** ಕರ್ಮೋಪಾಸನೆಗಳು ಜಗತ್ತಿನಲ್ಲಿ ಪ್ರಸಿದ್ಧವಾಗಿರುವಂತೆ ಜ್ಞಾನವಾದರೂ ಪ್ರಸಿದ್ಧವದೆ. ಆದ್ದರಿಂದ ಜ್ಞಾನೋಪದೇಶವನ್ನಾದರೂ ಏಕೆ ಮಾಡಬೇಕು?

**ಸಮಾಧಾನ:-** ಕರ್ಮ, ಉಪಾಸನಾ, ಜ್ಞಾನ ಈ ಮೂರೂ ಕಾಂಡಗಳು ವೇದದಲ್ಲಿ ಪ್ರಸಿದ್ಧಗಳಾಗಿವೆ. ಆದರೂ ಜನರಲ್ಲಿ ಮಾತ್ರ ಕರ್ಮೋಪಾಸನೆಗಳು ಪ್ರಸಿದ್ಧವಿದ್ದಂತೆ ಜ್ಞಾನವು ಪ್ರಸಿದ್ಧವಿಲ್ಲ. ಯಾಕಂದರೆ, ದುರ್ವಿಜ್ಞೇಯವಾಗಿರುತ್ತದೆ. **"ದೇವೈರತ್ರಾಪಿ ವಿಚಿಕಿತ್ಸಿತಂ"** ಸತ್ವಗುಣಶಾಲಿಗಳಾದ ಇಂದ್ರಾದಿ ದೇವತೆಗಳಾದರೂ ಆತ್ಮವಿಷಯದಲ್ಲಿ ಉಂಟು, ಇಲ್ಲೆಂದು ವಿವಾದವನ್ನು ಮಾಡುವವರಾಗಿದ್ದಾರೆ. **"ಮನುಷ್ಯಾಣಾಂ ಸಹಸ್ರೇಷು ಕಶ್ಚಿತ್ ಯತತಿ"** ಸಾವಿರ ಜನರಲ್ಲಿ ಒಬ್ಬನು ತಾನಾರೆಂದು ತಿಳಿಯುವದಕ್ಕೆ ಯತ್ನಮಾಡುವನು. ಹೀಗೆಂದು ಭಗವಂತನು ಹೇಳಿದ್ದಾನೆ. ಅದ್ದರಿಂದ ಆತ್ಮಜ್ಞಾನವು ಅಪ್ರಸಿದ್ಧವದೆ. ಅದನ್ನು ನನ್ನ ಪ್ರಯತ್ನಕ್ಕೆ ಸಾಧ್ಯವಾದ ಮಟ್ಟಿಗೆ ಸ್ವಾನುಭವಕ್ಕೆ ತಂದುಕೊಡಬೇಕೆಂಬ ಉದ್ದೇಶದಿಂದಲೇ, ನಾನು ಇಲ್ಲಿ ಮುಖ್ಯವಾಗಿ ಉತ್ತರಸಾಧನವಾದ **ಜ್ಞಾನವನ್ನೇ** ಹೇಳುತ್ತೇನೆಂಬ ಭಾವವು.

ಬಳಿಕ, ಎರಡು ಪದಗಳಿಂದ **ಅನುಬಂಧ** ಚತುಷ್ಟಯವನ್ನು ಹೇಳುತ್ತಾರೆ.

**ಇಲ್ಲಿಹ ಪ್ರಯೋಜನಂ ಸಲ್ಲಲಿತದಾತ್ಮಸುಖ।**
**ವಿಲ್ಲಿಜೀವೇಶರೇಕತ್ವವದು ವಿಷಯ।**
**ವಿಲ್ಲಿ ಸಚ್ಛಿಷ್ಯನಧಿಕಾರಿ** ॥೮॥

**ಟೀಕಾ:-** ಇಲ್ಲಿಹ=ಇಲ್ಲಿ ಇರತಕ್ಕ, ಪ್ರಯೋಜನಂ=ಫಲವು, **ಸತ್**=ನಿತ್ಯವಾದ, ಲಲಿತ=ಮನೋಹರವಾದ, ಆತ್ಮಸುಖವು=ನಿಜಸುಖವು, ಇಲ್ಲಿ=ಈ ಗ್ರಂಥದಲ್ಲಿ, ಜೀವೇಶರ=ಜೀವ ಮತ್ತು ಈಶ ಇವರುಗಳ, ಏಕತ್ವವದು=ಐಕ್ಯವು, ವಿಷಯ=ವಿಷಯವಾಗಿರುವದು, ಇಲ್ಲಿ=ಇದರಲ್ಲಿ, ಸಚ್ಛಿಷ್ಯನು=ತೀವ್ರ ಮುಮುಕ್ಷುವಾದವನು, ಅಧಿಕಾರಿ=ಅಧಿಕಾರಿಯಾಗಿರುವನು.

**ಪ್ರತಿಪಾದ್ಯವೇ ಬ್ರಹ್ಮ ಪ್ರತಿಪಾದಕವದಿಲ್ಲಿ।**
**ಪ್ರತಿಪಾದಕವನು ಪ್ರತಿಪಾದ್ಯದೊಡನೆ ಸಂ।**
**ಗತಿಸೆ ಸಂಬಂಧವದು ತಾನೆ** ॥೯॥

**ಟೀಕಾ:-** ಇಲ್ಲಿ=ಇದರಲ್ಲಿ, ಪ್ರತಿಪಾದ್ಯವೆ=ಹೇಳುವದಕ್ಕೆಯೋಗ್ಯವಾದದ್ದು, ಬ್ರಹ್ಮ=ಪರಬ್ರಹ್ಮವಾಗಿರುವದು, ಪ್ರತಿಪಾದಕವು=ಹೇಳುವಂಥಾದ್ದು, ಇದು=ಈ ಗ್ರಂಥವು, ಪ್ರತಿಪಾದಕವನು=ಗ್ರಂಥವನ್ನು, ಪ್ರತಿಪಾದ್ಯದೊಡನೆ=ಪೂರ್ಣ ಪರಬ್ರಹ್ಮದೊಡನೆ, ಸಂಗತಿಸೆ=ಕೂಡಿಸಲು, ಅದುತಾನೆ ಸಂಬಂಧವು=ಅದೇ ಸಂಬಂಧವೆನಿಸುವದು.

**ತಾತ್ಪರ್ಯ:-** ಈ ಗ್ರಂಥಕ್ಕೆ ಸಾಧನ ಚತುಷ್ಟಯ ಸಂಪನ್ನನೇ **ಅಧಿಕಾರಿಯು**, ಗ್ರಂಥವು ಪ್ರತಿಪಾದನ ಮಾಡುವದಾಗಿಯೂ ಬ್ರಹ್ಮವು ಮಾಡಿಸಿಕೊಳ್ಳುವದಾಗಿಯೂ ಇರುವದೇ **ಸಂಬಂಧವು**, ಜೀವೇಶ್ವರರ ಐಕ್ಯವೇ **ವಿಷಯವು**, ಅತ್ಯಂತ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿಯೇ **ಪ್ರಯೋಜನವು**, ಈ ನಾಲ್ಕಕ್ಕೂ ಅನುಬಂಧ ಚತುಷ್ಟಯವೆಂದು ಕರೆಯುತ್ತಾರೆ. ಈ ನಾಲ್ಕು ಒಂದಕ್ಕೊಂದು ಅಗಲದಿರುವದರಿಂದ ಅನುಬಂಧವೆಂಬ ಹೆಸರು ಬಂದಿರುವದು. ಇದಕ್ಕೆ ಮಂಗಳದಲ್ಲಿ ಹೇಳಿದ ವೀರಶೈವ ಭೋಜನಶಾಲೆಯ ಬೋರ್ಡಿನ ದೃಷ್ಟಾಂತವನ್ನು ನೆನಪಿಗೆ ತಂದುಕೊಳ್ಳತಕ್ಕದ್ದು.

ಈ ಅನುಬಂಧ ಚತುಷ್ಟಯದ ವಿವೇಚನವು ವಿಚಾರಸಾಗರ ಗ್ರಂಥದ, ಒಂದು ಮತ್ತು ಎರಡು ತರಂಗಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಅಲ್ಲಿ ಅವಲೋಕನ ಮಾಡಬಹುದು.

ಬಳಿಕ, ವ್ಯಾಕರಣ ಮತ್ತು ಛಂದಸ್ಸು ಶಾಸ್ತ್ರಗಳ ಅನುಸಾರವಿಲ್ಲದ್ದರಿಂದ ಈ ಗ್ರಂಥವು ಗ್ರಹಿಸಲಿಕ್ಕೆ ಅಯೋಗ್ಯವಾದದ್ದೆಂದು ಶಂಕೆಯನ್ನು ಮಾಡಿದರೆ, ದೋಷವಿದ್ದರೂ ಈ ಗ್ರಂಥವು ಸೇವ್ಯವೆಂಬದಾಗಿ ಹೇಳುತ್ತಾರೆ.

**ಇಲ್ಲಿ ಸಂಧಿ ಸಮಾಸ ಪಲ್ಲಟಂ ಮೊದಲಾದ |**
**ವೆಲ್ಲಮಂ ನೋಡದಿರಿ ನೀರ್ವೆರದ ಪಾಲ |**
**ನೊಲ್ಲದೇ ಹಂಸ ಬಿಡುತಿಹುದೆ ||೧೦||**

**ಟೀಕಾ:-** ಇಲ್ಲಿ=ಇದರಲ್ಲಿ, ಸಂಧಿ=ಸವರ್ಣದೀರ್ಘಾದಿ ಸಂಧಿಗಳು, ಸಮಾಸ=ತತ್ಪುರುಷಾದಿ ಸಮಾಸಗಳು, ಪಲ್ಲಟಂ=ವ್ಯತ್ಯಾಸವೇ, ಮೊದಲಾದವೆಲ್ಲಮಂ=ಮುಂತಾದ ದೋಷಗಳನ್ನು, ನೋಡದಿರಿ=ಅವಲೋಕನ ಮಾಡಬೇಡಿರಿ, ನೀರ್ವೆರದ=ನೀರಿನಿಂದ ಕೂಡಿದ, ಪಾಲನು=ಹಾಲನ್ನು, ಒಲ್ಲದೆ=ಇಚ್ಛಿಸದೆ, ಹಂಸ=ಹಂಸಪಕ್ಷಿಯು, ಬಿಡುತಿಹುದೇ=ಬಿಡುತ್ತಿರುವದೇನು ? (ಬಿಡುವದಿಲ್ಲೆಂಬ ಭಾವವು.)

ಇದರೊಳರ್ಥವೆ ಲೇಸು ಪದಬಂಧದೋಳ್ಪ್ರಾಸು ।
ಮೊದಲಾದವಿಲ್ಲದಿರೆ ತೊಡವನುಳಿದು ಕೂ ।
ಡಿದ ಕಾಂತೆಯಂತೆ ಸೊಗಸಕ್ಕು ॥೧೧॥

**ಟೀಕಾ:-** ಪದಬಂಧದೋಳ್=ಪದ್ಯಗಳ ರಚನೆಯಲ್ಲಿ, ಪ್ರಾಸು=ಚರಣದ ಎರಡನೇ ಅಕ್ಷರವು ಬಂದ ಒಂದೇ ಬಳ್ಳಿಯಿಂದಾಗಿರೋಣವು, ಮೊದಲಾದವಿಲ್ಲದಿರೆ= ಸಿಂಹಾದಿ ಪ್ರಾಸುಗಳು ಇಲ್ಲದಿದ್ದರೂ, ಇದರೊಳ್ = ಈ ಗ್ರಂಥದಲ್ಲಿರುವ, ಅರ್ಥವೇ=ಅರ್ಥವೇ, ಲೇಸು=ಒಳ್ಳೇದು, ತೊಡವನು=ಆಭರಣಗಳನ್ನು, ಉಳಿದು= ಬಿಟ್ಟು, ಕೂಡಿದ=ಸಂಯೋಗವಾದ, ಕಾಂತೆಯಂತೆ=ಸತಿಯಳಂತೆ, ಸೊಗಸು= ಸಂತೋಷವು, ಅಕ್ಕು=ಅಗುವದು.

**ತಾತ್ಪರ್ಯ:-** ವ್ಯಾಕರಣ ಶಾಸ್ತ್ರದಲ್ಲಿ ಹೇಳಲ್ಪಟ್ಟ ಪ್ರಕಾರ ಸವರ್ಣ ದೀರ್ಘವೇ ಮೊದಲಾದ ಸಂಧಿಗಳೂ, ತತ್ಪುರುಷಾದಿ ಸಮಾಸಗಳೂ ಈ ಗ್ರಂಥ ದಲ್ಲಿ ಇಲ್ಲದಿದ್ದರೂ, ಈ ಗ್ರಂಥವು ಗ್ರಹಿಸಲಿಕ್ಕೆ ಯೋಗ್ಯವಾಗಿರುತ್ತದೆ. ಹೇಗಂದರೆ; ಹಾಲಿನಲ್ಲಿ ನೀರು ಬೆರೆತಿದ್ದರೂ, ಹಂಸ ಪಕ್ಷಿಯು ನೀರು ಮಾತ್ರ ಬಿಟ್ಟು ಹಾಲನ್ನೇ ಹೇಗೆ ಗ್ರಹಿಸುವದೋ, ಹಾಗೆ ಸಾರಗ್ರಾಹಿಗಳು ಈ ಗ್ರಂಥದಲ್ಲಿರುವ ದೋಷ ಗಳನ್ನು ಬಿಟ್ಟು, ಗುಣವನ್ನು ಗ್ರಹಿಸತಕ್ಕದ್ದು. ಮತ್ತು ಛಂದಶ್ಶಾಸ್ತ್ರದ ಪ್ರಕಾರ, ತ್ರಿಪದಿ ಕವಿತೆಯ ಚರಣಗಳನ್ನು ನಿರ್ಮಾಣ ಮಾಡುವ ಕಾಲಕ್ಕೆ ಕೆಲವು ನಿಯಮ ಗಳುಂಟು. ಅವು ಯಾವವು? ಅಂದರೆ; "ಮೊದಲನೇ ಎರಡನೇ ಚರಣಗಳಲ್ಲಿ ನಾಲ್ಕು ಗಣಗಳೂ, ಮೂರನೆಯ ಚರಣದಲ್ಲಿ ಮೂರು ಗಣಗಳೂ ಇರಬೇಕು. ಎರಡನೇ ಮೂರನೇ ಚರಣಗಳ ಎರಡನೆಯ ಗಣಗಳಿಗೆ ಮೂರು ಮಾತ್ರೆಗಳಿರ ಬೇಕು. ಉಳಿದ ಗಣಗಳಿಗೆಲ್ಲಾ ಐದು ಮಾತ್ರೆಗಳಿರುತ್ತವೆ. ಪ್ರಥಮ ಚರಣದಲ್ಲಿ ಮೂರನೆಯ ಗಣಕ್ಕೆ-ಪ್ರಾಸು ಎರಡನೇ ಚರಣದ ಎರಡನೇ ಗಣಕ್ಕೆ ಯತಿಯು. ಪ್ರತಿಯೊಂದು ಚರಣಗಳ ದ್ವಿತೀಯಾಕ್ಷರಗಳು ಒಂದೇ ಬಳ್ಳಿಯೊಳಗಿನವು ಇರ ಬೇಕು. ಅಂದರೆ, ಪ್ರಾಸವಿರಬೇಕು ಹೀಗಿದ್ದರೆ ತ್ರಿಪದಿಯಾಗುತ್ತದೆ'' ಚರಣ ಗಳನ್ನು ನಿರ್ಮಾಣ ಮಾಡುವ ಕಾಲಕ್ಕೆ ಸಿಂಹಾದಿ ಪ್ರಾಸಗಳೂ, ಗಣಗಳೂ, ಯತಿ ಮೊದಲಾದವುಗಳು ವ್ಯತ್ಯಾಸವಾದಾಗ್ಯಾದರೂ ಚಿಂತೆಯಿಲ್ಲ. ಆ ಪದದಲ್ಲಿರುವ ಅರ್ಥವನ್ನು ಅವಶ್ಯ ಅಂಗೀಕರಿಸಲಿಕ್ಕೇಬೇಕು. ಹೇಗಂದರೆ; ಕೆಲವು ಸ್ತ್ರೀಯರು ಸ್ವಭಾವತಃ ಸೌಂದರ್ಯವುಳ್ಳವರಾಗಿರುತ್ತಾರೆ. ಅವರು ಅಲಂಕಾರ ತೊಟ್ಟರೆ ಮತ್ತಷ್ಟು ವಿಶೇಷ ಸುಂದರವುಳ್ಳವರಾಗಿ ತೋರುತ್ತಾರೆ. ಆದರೆ ಬಾಹ್ಯ ಅಲಂಕಾರ ಗಳೇನೊಂದು ಇಲ್ಲದಿದ್ದರೂ,ಸುಂದರಿಯಾದ ಸ್ತ್ರೀಯಳೊಡನೆ ಕೂಡಿದವನು ಹೇಗೆ ಸುಖವುಳ್ಳವನು ಆಗುತ್ತಾನೋ, ಹಾಗೆ ಈ ಕವಿತಾರೂಪ ಸ್ತ್ರೀಯಳು ಅರ್ಥರೂಪ

ಚಲ್ವಿಕೆಯಿಂದ ಮೊದಲೇ ಸುಂದರಿಯಾಗಿದ್ದಾಳೆ. ಈಕೆಗೆ ಪ್ರಾಸು, ಗಣ, ಯತಿ ಮೊದಲಾದವುಗಳು ನತ್ತು ಮೊದಲಾದ ಬಾಹ್ಯ ಅಲಂಕಾರಗಳಂತೆ ಆಭರಣಗಳಾಗಿ ರುತ್ತವೆ. ಇವು ಒಂದು ವೇಳೆ ಇಲ್ಲದಿದ್ದರೂ ಚಿಂತೆಯಿಲ್ಲ. "ಇದರೊಳರ್ಥವೇ ಲೇಸು" ಈ ಕವಿತೆಯಲ್ಲಿರುವ ಅರ್ಥವನ್ನು ಮಾತ್ರ ಸ್ವೀಕಾರ ಮಾಡಿದರೆ ಸಾಕು. ಅದರಿಂದ ದುಃಖದ ನಿವೃತ್ತಿಯೂ ಸುಖದ ಆವಿರ್ಭಾವವೂ ಆಗುತ್ತದೆ. ಆದ್ದರಿಂದ ತಾನು ಮಾಡಿದ ಈ ಗ್ರಂಥವು ಉಕ್ತ ಶಾಸ್ತ್ರಗಳಿಗೆ ಸರಿಯಾಗಿದ್ದರೂ ಇಲ್ಲದಿದ್ದರೂ ಸ್ವೀಕರಿಸಲಿಕ್ಕೆ ಯೋಗ್ಯವಿದೆ. ಎಂದು ಚಾತುರ್ಯದಿಂದ ಒಡಂಬಡಿಸಿದ್ದಾರೆ. ಗ್ರಂಥಕಾರರು ಹೀಗೆ ಹೇಳಿದಾಗ್ಯಾದರೂ, ಈ ಗ್ರಂಥವಲ್ಲಿ ವ್ಯಾಕರಣ ಮತ್ತು ಛಂದಸ್ಸು ಶಾಸ್ತ್ರಾನುಸಾರವಾಗಿಯೇ ಹೇಳಿದ್ದಾರೆ. ಎಳ್ಳಷ್ಟೂ ತಪ್ಪಿಲ್ಲ. ಈ ಶಾಸ್ತ್ರದ ಆಧಾರದ ಮೇಲಿಂದ ಉಕ್ತ ಶಾಸ್ತ್ರಗಳನ್ನು ಸರಿಪಡಿಸಿಕೊಂಡರೂ ಏನೂ ವಿರೋಧ ವಾಗಲಾರದು. ಆದ್ದರಿಂದ ಈ ಗ್ರಂಥವು ನಿರ್ದೋಷವದೆಯೆಂಬ ಭಾವವು.

ಬಳಿಕ, ಈ ಗ್ರಂಥವಲ್ಲಿ ಉಕ್ತಶಾಸ್ತ್ರಗಳ ಸಂಬಂಧಿ ದೋಷವಿಲ್ಲದಿದ್ದರೂ, ಅನುಭವ ಸಂಬಂಧಿ ದೋಷವುಂಟು. ಅದರಿಂದ ಈ ಗ್ರಂಥವು ಯೋಗ್ಯವಲ್ಲೆಂದು ಶಂಕೆಯನ್ನು ಮಾಡಿದರೆ, ಸಮಾಧಾನವನ್ನು ಹೇಳುತ್ತಾರೆ.

> ಏನಾನುದೋಷಂ ನಿಜಾನುಭವದೊಳಗಿರ್ದೊ ।
> ಡೇನದಂ ತಿದ್ದಿ ತಿಳಹುವದು ಶಾಂಭವ ।
> ಜ್ಞಾನಸಂಪನ್ನರಿದರಲ್ಲಿ ॥ ೧೨ ॥

ಟೀಕಾ:- ನಿಜಾನುಭವದೊಳಗೆ = ಆತ್ಮಸ್ವರೂಪದ ಜ್ಞಾನದಲ್ಲಿ, ಏನಾನು ದೋಷಂ=ಯಾವದಾದರೊಂದು ದೋಷವು, ಇರ್ದೊಡೇನು=ಇದ್ದರೆ ಏನಾಯಿತು, ಅದಂ=ಆ ದೋಷವನ್ನು, ಶಾಂಭವ ಜ್ಞಾನಸಂಪನ್ನರು=ಶಂಭುವಿನ ಸಂಬಂಧವಾದ ಜ್ಞಾನವುಳ್ಳವರು, ಇವರಲ್ಲಿ=ಈ ಗ್ರಂಥದಲ್ಲಿ, ತಿದ್ದಿ=ಪರಿಶೋಧಿಸಿ, ತಿಳಹುವದು= ತಿಳಿಸತಕ್ಕದ್ದು.

> ತೊದಲಿಂದೆ ನುಡಿಯೆ ಶಿಶುವದರಲ್ಲಿ ತಪ್ಪುತ ।
> ಜ್ಜ್ಞದುರರಾರೈಯದಂತಾವ ದೋಷವಿರ ।
> ಲಿದರೊಳೊಲಿದೊಪ್ಪುದು ಸುಖಿಗಳು ॥ ೧೩ ॥

**ಟೀಕಾ:-** ಶಿಶುವು=ಬಾಲಕನು, ತೊದಲಿಂದೆ=ಅಪಶಬ್ದಗಳಿಂದೆ, ನುಡಿಯೆ= ಮಾತಾಡಿದರೂ, ಅದರಲ್ಲಿ=ಆ ನುಡಿಯಲ್ಲಿ, ತಜ್ಜ್ಞದುರರ್=ಅದನ್ನು ಬಲ್ಲವರು, ತಪ್ಪು=ಅಶುದ್ಧತ್ವವನ್ನು, ಆರೈಯ್ಯದಂತೆ=ವಿಚಾರಮಾಡದ ಹಾಗೆ, ಇದರಲ್ಲಿ=

ಈ ಗ್ರಂಥದಲ್ಲಿ, ಆವ=ಯಾವ, ದೋಷವಿರಲ್=ದೋಷಗಳಿದ್ದಾಗ್ಯೂ, ಸುಖಿಗಳು=ಬಲ್ಲವರು. ಒಲಿದು=ಪ್ರೀತಿಯಿಂದ, ಒಪ್ಪುದು=ಅಂಗೀಕರಿಸತಕ್ಕದ್ದು.

**ತಾತ್ಪರ್ಯ:-** ಯಾವದಾದರೊಂದು ದೋಷವು ಆತ್ಮನ ಅನುಭವ ವಿಷಯದಲ್ಲಿ ಇದ್ದಾಗ್ಯಾದರೂ, ಏನಾಯಿತು? ಅಂದರೆ, ಒಂದು ದೋಷ ನಿಮಿತ್ತ ಮೂಲಕ ಉಳಿದ ನಿರ್ದೋಷವಾದ ಸಮಗ್ರ ಗ್ರಂಥವನ್ನೇ ತ್ಯಾಗಮಾಡುವದು ಅಯೋಗ್ಯವಾಗಿರುತ್ತದೆ. ಶುಭ್ರವಾದ ಬಹುಬೆಲೆಯ ವಸ್ತ್ರಕ್ಕೆ ಕಿಂಚಿತ್ ಮಲಿನತ್ವದ ನಿಮಿತ್ತ ಆ ವಸ್ತ್ರವನ್ನೇ ತ್ಯಜಿಸಬೇಕಾಗುವದೋ? ಇಲ್ಲ. ಆ ಮಲಿನವನ್ನು ಕಳೆದು ವಸ್ತ್ರವನ್ನು ಹೇಗೆ ಗ್ರಹಿಸುವರೋ, ಹಾಗೇ ಯಾವದೆಂದು ಅನುಭವ ವಿಷಯದಲ್ಲಿ ದೋಷವಿದ್ದರೂ, ಶಂಭುವಿನ ಸಂಬಂಧಿ ಜ್ಞಾನಯುಕ್ತರಾದವರು ಆ ದೋಷವನ್ನು ಹೋಗಲಾಡಿಸಿ, ನಿರ್ದೋಷವಾದ ಸಿದ್ಧಾಂತವನ್ನು ಸಾಧಕರಿಗೆ ಹೇಳಬಹುದು. ಆದ್ದರಿಂದ ಗ್ರಂಥವು ಯೋಗ್ಯವದೆ.

ಮತ್ತು ಕೂಸು ತಾಯಿ ತಂದೆಗಳನ್ನು ಕುರಿತು ತೊದಲು ನುಡಿಯಿಂದ ನುಡಿದಾಗ್ಯಾದರೂ, ಅಂದರೆ ಮಗುವು ಅಶುದ್ಧ ನುಡಿಯುತ್ತದೆಂದು ತಿಳದಾಗ್ಯಾದರೂ, ಪುತ್ರಪ್ರೇಮದಿಂದ ಆ ವಾಕ್ಯದೋಷಗಳನ್ನು ಎಣಿಸದೆ, ಆ ವಾಕ್ಯಗಳನ್ನೇ ಕೇಳಿ ಉಲ್ಲಾಸಗೊಂಡು ಕೂಸನ್ನು ಎತ್ತಿ ಮುದ್ದಾಡಿ ಹೇಗೆ ಪ್ರೀತಿಸುವರೋ, ಹಾಗೆ ನಿಜಾನುಭವಿಗಳಾದ ಜ್ಞಾನಿಗಳಿಗೆ ನಾನೊಬ್ಬನು ಮಗನು ಆಗಿದ್ದೇನೆ. ಆದ್ದರಿಂದ ಈ ಗ್ರಂಥವಲ್ಲಿ ಅಶುದ್ಧ ವಾಕ್ಯಗಳನ್ನು ನುಡಿವರೂ ನುಡಿದಿರಬಹುದು. ಅವುಗಳನ್ನೇ ಕೇಳಿ,ನನ್ನನ್ನೂ ನನ್ನ ಗ್ರಂಥವನ್ನೂ ಕೊಂಡಾಡದೆ ಇರಲಾರರೆಂದು ನಾನು ತಿಳಿಯುತ್ತೇನೆ. ಅಂದರೆ, ಬಲ್ಲವರು ಈ ಗ್ರಂಥವನ್ನು ನೋಡಿ ಒಪ್ಪಬೇಕೇ ಹೊರ್ತು ತಿರಸ್ಕಾರ ಮಾಡತಕ್ಕದ್ದಲ್ಲೆಂಬ ಭಾವವು.

ಬಳಿಕ, ಪೂರ್ವಿಕರಿಂದ ಮಾಡಲ್ಪಟ್ಟ ಗ್ರಂಥಗಳು ಚನ್ನಾಗಿ ಜ್ಞಾನವನ್ನುಂಟು ಮಾಡಿಕೊಡುತ್ತಿರಲಿಕ್ಕೆ, ನಿನ್ನ ಗ್ರಂಥವನ್ನು ಯಾರೂ ಗ್ರಹಿಸುವದಿಲ್ಲ. ಅದರಿಂದ ನಿಷ್ಪ್ರಯೋಜನವಾಗಿದೆಯೆಂದು ಶಂಕೆಯನ್ನು ಮಾಡಿದರೆ, ಅವರೂ ಪ್ರಯೋಜನವಾಗಿರುವದೆಂದು ಹೇಳುತ್ತಾರೆ.

**ಮುನ್ನಿನ ತ್ರಿವಿದಿ ಸೊಗಸಂ ನೀಡುತಿರಲಿದೇ ।**
**ನೆನ್ನದಾಲಿಪುದು ಸಂಜೆಯೊಳು ಶಶಿಯ ಬೆಳು ।**
**ಜೊನ್ನವಿರಲು ಸೊಡರಿಗೇಳಸರಿ** || ೧೪ ||

**ಟೀಕಾ:-** ಮುನ್ನಿನ=ಮೊದಲಿನ, ತ್ರಿವಿದಿ=ಗ್ರಂಥಗಳು, ಸೊಗಸಂ=ಆನಂದವನ್ನು, ನೀಡುತಿರಲ್=ಕೊಡುತ್ತಿರಲಾಗಿ, ಇದೇನು=ಈ ಗ್ರಂಥವು ಏತಕ್ಕೆಂದು,

ಎನ್ನದೆ=ನುಡಿಯದೆ, ಆಲಿಪುದು=ಕೇಳತಕ್ಕದ್ದು, ಸಂಜೆಯೊಳು=ರಾತ್ರಿಯಲ್ಲಿ, ಶಶಿಯ=ಚಂದ್ರನ, ಬೆಳುಜೊನ್ನವಿರಲು=ಬೆಳದಿಂಗಳು ಇದ್ದಾಗ್ಯಾದರೂ, ಸೊಡರಿಗೆ=ದೀಪಕ್ಕೆ, ಎಳಸರೆ-ಇಚ್ಛೆಯನ್ನು ಮಾಡುವದಿಲ್ಲವೇನು? (ಮಾಡುತ್ತಾರೆ).

**ತಾತ್ಪರ್ಯ:-** ಪೂರ್ವಾಚಾರ್ಯರಿಂದ ಅಪರೋಕ್ಷ ಜ್ಞಾನವನ್ನುಂಟು ಮಾಡಿಕೊಡುವಂಥಾ ಉತ್ತಮೋತ್ತಮವಾದ ಅನೇಕ ಗ್ರಂಥಗಳು ಉಂಟು. ಅವುಗಳನ್ನು ಕೇಳಿಯೇ ಧನ್ಯರಾಗುವರು. ಆದರೂ ನಾನು ಮಾಡಿರುವ ಈ ಗ್ರಂಥವನ್ನು ಅವರಾದರೂ ಅವಶ್ಯ ಗ್ರಹಿಸಲಿಕ್ಕೇಬೇಕು. ಹೇಗಂದರೆ, ರಾತ್ರಿಯಲ್ಲಿ ಚಂದ್ರನ ಬೆಳಕು ಎಲ್ಲ ಕಡೆಯಲ್ಲಿ ಇದ್ದಾಗ್ಯಾದರೂ, ಸೂಕ್ಷ್ಮವಸ್ತುಗಳನ್ನು ಹುಡುಕುವದಕ್ಕಾಗಿ ದೀಪವನ್ನು ಅಪೇಕ್ಷಿಸುವದಿಲ್ಲವೇ? ಅವಶ್ಯ ಅಪೇಕ್ಷೆಯನ್ನು ಮಾಡುತ್ತಾರೆ. ಅದರಂತೆ ಪ್ರಾಚೀನ ಗ್ರಂಥಗಳು ಬೆಳದಿಂಗಳಂತೆ ಇದ್ದರೂ, ದೀಪದ ಬೆಳಕಿನಂತಿರುವ ಈ ಗ್ರಂಥವು ಅವಶ್ಯಬೇಕಾಗಿದೆ. ಸೂಕ್ಷ್ಮಕ್ಕೂ ಸೂಕ್ಷ್ಮತರವಾದ ಆತ್ಮವನ್ನು ತಿಳಿಯುವದಕ್ಕಾಗಿ ಈ ಗ್ರಂಥವು ಉಪಯೋಗವಾದ್ದರಿಂದ ಸಾರ್ಥಕ್ಯವಾಗಿರುತ್ತದೆ.

ಬಳಿಕ, ಈ ಗ್ರಂಥವು ಅರ್ಥದಿಂದ ಸಾರ್ಥಕ್ಯವಾಗಿದ್ದರೂ ನೀನು ಹೇಳಿರುವದರಿಂದ ಇದನ್ನು ಎಲ್ಲರು ತಿರಸ್ಕರಿಸುತ್ತಾರೆ. ಆದ್ದರಿಂದ ವ್ಯರ್ಥವಾಗಿದೆಯೆಂದು ಶಂಕಾಮಾಡಿದರೆ, ಸಮಾಧಾನವನ್ನು ಹೇಳುತ್ತಾರೆ.

**ಶ್ರುತಿಯ ಸಂಸ್ಮೃತಿಯ ಸಮ್ಮತವಾದ ಕಥದಿನಿದ ।**
**ನತಿಶಯಿಸಿ ಕೇಳ್ವುದರಸಿನೊಪ್ಪದೊಳು ಸಂ ।**
**ಗತವಾದ ರಾಯಸದ ವೋಲು** ॥೧೫॥

**ಟೀಕಾ:-** ಶ್ರುತಿಯ=ಉಪನಿಷತ್ತುಗಳ, ಸಂಸ್ಮೃತಿಯ=ಗೀತಾದಿಸ್ಮೃತಿಗ್ರಂಥಗಳ, ಸಂಮತವಾದ=ಪ್ರಮಾಣಕ್ಕೆ ಅನುಸರಿಸಿರುವ, ಕಥದಿಂ=ಕಾರಣದಿಂದ, ಇದನು=ಈ ಗ್ರಂಥವನ್ನು, ಅತಿಶಯಿಸಿ=ಅತ್ಯಾದರದಿಂದ, ಕೇಳ್ವುದು=ಶ್ರವಣವನ್ನು ಮಾಡತಕ್ಕದ್ದು, ಅರಸಿನ=ರಾಜನ, ಒಪ್ಪದೊಳು=ಸಭೆಯಿಂದ, ಸಂಗತವಾದ=ಹೊರಡಿಸಿದ ರಾಯಸದವೋಲು=ಪತ್ರದಹಾಗೆ,(ರಾಜನ ಹುಕುಮಿನಂತೆ)

**ತಾತ್ಪರ್ಯ:-** ರಾಜನು ಪ್ರಜರಿಗೆ ಯಾವದೊಂದು ವಿಷಯವನ್ನು ತಿಳಿಸುವದಕ್ಕಾಗಿ, ತನ್ನ ಸೇವಕನಿಂದ ಕಾಯಿದೆ ಪತ್ರವನ್ನು ಕೊಟ್ಟು ಕಳುಹಿಸುತ್ತಾನೆ. ಆ ಸೇವಕನು ಪತ್ರವನ್ನು ಪ್ರಜೆರಿಗೆ ಕೊಡುತ್ತಾನೆ. ಪ್ರಜರು ಪೂಜ್ಯಬುದ್ಧಿಯಿಂದ ಆ ಪತ್ರಕ್ಕೂ ಸೇವಕನಿಗೂ ಮಾನ್ಯಮಾಡದೆ ಹೋದರೆ, ರಾಜನಿಂದ ದಂಡಕ್ಕೂ,

ಶಿಕ್ಷೆಗೂ ಪ್ರಜರು ಹೇಗೆ ಪಾತ್ರರಾಗುವರೋ, ಅದರಂತೆ ಪರಮಾತ್ಮನೆಂಬ ರಾಜನಿಂದ ಶ್ರುತಿ ಸ್ಮೃತಿ ಕಾಯಿದೆ ಪ್ರಕಾರ ಈ ಗ್ರಂಥವೆಂಬ ಪತ್ರವು ನನ್ನ ಮೂಲಕ ಕಳುಹಿಸಲ್ಪಟ್ಟಿದೆ. ಇದಕ್ಕೆ ಯಾವತ್ತರೂ ಮಾನ್ಯಮಾಡತಕ್ಕದ್ದು. ಮತ್ತು ಪೂಜ್ಯಬುದ್ಧಿಯಿಂದ ಶ್ರವಣಮಾಡತಕ್ಕದ್ದು. ಮಾಡದೆ ಹೋದಪಕ್ಷದಲ್ಲಿ ಎಂಭತ್ತು ನಾಲ್ಕುಲಕ್ಷ ಯೋನಿರೂಪ ಕಾರಾಗ್ರಹದಲ್ಲಿ ವಾಸವಾಗುವ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಆದ್ದರಿಂದ ನಾನು ಮಾಡಿರುವ ಈ ಗ್ರಂಥವನ್ನು ತಿರಸ್ಕರಿಸಿದರೆ ಭವ ದುಃಖಿಗಳಾಗುವರೆಂಬ ಭಾವವು-

ಬಳಿಕ, ತಾವು ಮಾಡಿದ ಗ್ರಂಥವು ಸಾರ್ಥಕ್ಯವೇ. ಆದರೂ ತಾವು ಗುರು ಪರಂಪರಾ ಸಾಂಪ್ರದಾಯಕರಲ್ಲದ್ದರಿಂದ ಯೋಗ್ಯವಲ್ಲೆಂದು ಶಂಕೆಯನ್ನು ಮಾಡಿದರೆ, ಹೇಳುತ್ತಾರೆ.

**ಗುರುಬೋಧೆಯಿಂ ಪರಾತ್ಪರವಪ್ಪ ಚಿತ್ತು ತ ।**
**ನ್ನಿರವೆಂದು ನಿಜವನರಿದ ನಿಜಗುಣಯೋಗಿ ।**
**ವಿರಚಿಸಿದನೀಕೃತಿಯನಿಲ್ಲಿ** ॥೧೬॥

**ಟೀಕಾ:-** ಗುರುಬೋಧೆಯಿಂ=ಶ್ರೀ ಸದ್ಗುರುಗಳ ಉಪದೇಶದಿಂದ, ಪರಾತ್ಪರವಪ್ಪ-ಎಲ್ಲಕ್ಕೂ ಬೇರೆಯಾಗಿ ಶ್ರೇಷ್ಠವಾಗಿರುವಂಥಾ, ಚಿತ್ತು=ಚಿದ್ರೂಪವೇ, ತನ್ನಿರವೆಂದು ತನ್ನ ಸ್ವರೂಪವಾಗಿರುತ್ತದೆಂದು, ನಿಜವನರಿದ=ತನ್ನ ನಿಜವನ್ನು ಬಲ್ಲಂಥಾ, ನಿಜಗುಣಯೋಗಿ=ಶ್ರೀಮನ್ನಿಜಗುಣಯೋಗಿಯು, ಇಲ್ಲಿ=ಈ ಲೋಕದಲ್ಲಿ, ಈ ಕೃತಿಯನು=ಈ ಕಾವ್ಯವನ್ನು, ವಿರಚಿಸಿದನು=ಮಾಡಿದನು.

**ತಾತ್ಪರ್ಯ:-**ನಿರಾಭಾರಿ ಸದ್ಗುರುವಿನ ಉಪದೇಶದಿಂದ ದೇಹ, ಇಂದ್ರಿಯ, ವಿಷಯ, ಮನಸ್ಸು, ಬುದ್ಧಿ, ಮಹತ್, ಅವ್ಯಕ್ತ, ಪುರುಷ ಇವುಗಳು ಒಂದಕ್ಕಿಂತ ಒಂದು ಪರ ಅಂದರೆ ಶ್ರೇಷ್ಠಗಳಾಗಿವೆ. ಎಲ್ಲಕ್ಕೂ ಪರಾತ್ಪರನಾದವನು ಪುರುಷನು ಅಂದರೆ ಶರೀರರೂಪ ಪುರಗಳಲ್ಲಿ ವಾಸಮಾಡುವವರಿಂದ ನಿರ್ವಿಕಾರ ಕೂಟಸ್ಥಾತ್ಮನೇ ಪುರಷನೆಂದು ಹೇಳಲ್ಪಡುತ್ತಾನೆ. **"ಪುರುಷಾನ್ನಪರಂ ಕಿಂಚಿತ್ ಸಾಕಾಷ್ಠಾ ಸಾಪರಾಗತಿ''** ಈ ಪುರುಷನು ಎಲ್ಲಕ್ಕೂ (ಕಡೆಯುವನೂ) ಅಧಿಷ್ಠಾನನೂ ಶ್ರೇಷ್ಠನೂ ಆಗಿದ್ದಾನೆ. ಇವನಿಗಿಂತ ಹೆಚ್ಚಿನದು ಯಾವದೂ ಇಲ್ಲ. ಇಂಥಾ ಚಿದ್ರೂಪವೇ ತಾನೆಂದು ಅಪರೋಕ್ಷ ಜ್ಞಾನವುಳ್ಳಂಥಾ **ಶ್ರೀಮನ್ನಿಜಗುಣ ಶಿವಯೋಗಿಗಳು** ಈ ಕಾವ್ಯವನ್ನು ರಚಿಸಿರುತ್ತಾರೆ. ಆದ್ದರಿಂದ ಈ ಗ್ರಂಥವು ಗ್ರಹಿಸಲಿಕ್ಕೆ ಯೋಗ್ಯವಾಗಿದೆ. ಅಂದರೆ ಗುರು ಸಾಂಪ್ರದಾಯ ಪ್ರಕಾರ ಬಂದವರೆಂದೂ ಅನುಭವಿಗಳೆಂದೂ ಹೇಳಿದ್ದರಿಂದ; ಈ ಗ್ರಂಥವನ್ನು ಸಂಶಯವಿಲ್ಲದೆ

ಸರ್ವರು ಗ್ರಹಿಸಿ ಮೋಕ್ಷಭಾಗಿಗಳು ಆಗಬೇಕೆಂಬುವದೇ ಗ್ರಂಥಕರ್ತರ ಉದ್ದೇಶ ವಿರುತ್ತದೆ.

**ಶಂಕಾ:-** "ನಿಜಪನರಿದ ನಿಜಗುಣಂಪೋಗಿ" ಎಂಬ ಪದದಿಂದ ಗ್ರಂಥ ಕರ್ತರಲ್ಲಿ ನಾನು ಜ್ಞಾನಿಯೆಂಬ ಅಭಿಮಾನವು ತೋರುತ್ತದೆ. ಇಂಥಾ ಅಭಿಮಾನ ದಿಂದ ಯುಕ್ತರಾದವರ ಗ್ರಂಥವು ಸೇವ್ಯವಾಗುವದೇ ?

**ಸಮಾಧಾನ:-** ಅಭಿಮಾನದಿಂದ ಹೇಳಿದ್ದಲ್ಲ. ಅದು ಗ್ರಂಥದಲ್ಲಿ ವಿಶ್ವಾಸ ಹುಟ್ಟುವದಕ್ಕಾಗಿಯೂ ಸಾಂಪ್ರದಾಯ ಸೂಚನೆಗಾಗಿಯೂ ಹೇಳಿದ್ದಾರೆ. ಅಥವಾ ಅಂಥಾ ಪೂರ್ಣ ಚೈತನ್ಯಸ್ವರೂಪದ ಅಭಿಮಾನವಿದ್ದರೂ ಯೋಗ್ಯವೇ. ಯಾಕಂದರೆ ಅದು ಪರಿಚ್ಛಿನ್ನ ಅಭಿಮಾನವನ್ನು ಕಳೆಯುತ್ತದೆ. ಅದರಿಂದ ಬಂಧ ನಿವೃತ್ತಿಯಾಗುತ್ತದೆ. ಆದ್ದರಿಂದ ಅಂಥಾ ಪೂರ್ಣಸ್ವರೂಪದ ಅಭಿಮಾನವು ನಮಗೂ ಬರಲಿ ಎಂಬದಾಗಿ ತಿಳಿದು ಹೇಳಿದ್ದಾರೆ. ಪುನಃ ಅದು ಕೂಡಾ ಹೋಗಿ ಸಹಜಾವಸ್ಥೆ ಬರುತ್ತದೆ. ಇರಲಿ, ಪರಂತು ಹೀಗೆ ಹೇಳಿದ್ದು ಏನೂ ದೋಷವಲ್ಲ. ಆದ್ದರಿಂದ ಈ ಗ್ರಂಥವು ಸರ್ವರಿಂದ ಗ್ರಹಿಸಲಿಕ್ಕೆ ಯೋಗ್ಯವಾಗಿರುತ್ತದೆ

**ಪ್ರಕರಣಸ್ಥಿತಿ ನಿರೂಪಣೆ ಸೂ. ೨, ಪ. ೨೨**

---

ಬಳಿಕ, ಹಿಂದಿನ ಸೂತ್ರದಲ್ಲಿ ಗ್ರಂಥವು ಪ್ರಯೋಜನವಾಗಿರುವದೆಂಬುದನ್ನು ತೋರಿಸಿ, ಈ ಸೂತ್ರದಲ್ಲಿ ಗುರು ಮತ್ತು ಶಿಷ್ಯ ಇವರುಗಳ ಲಕ್ಷಣವನ್ನೂ ಜಗದ್ವಿಷಯಕ ಪ್ರಶ್ನೆಯನ್ನೂ ತೋರಿಸುತ್ತಾರೆ.

ಸೂತ್ರ || **ಗುರು ಸರ್ವ ಸುಖದೊಳೊಪ್ಪಿರಲೋರ್ವ ಶಿಷ್ಯನಾ |**
**ದರದಿಂದ ಬಂದೆರಗಿ ಬೆಸಗೊಂಡನು ||**

**ಟೀಕಾ:-** ಗುರು=ಶ್ರೋತ್ರಿಯ ಬ್ರಹ್ಮನಿಷ್ಠರಾದ ಗುರುಗಳು, ಸರ್ವ ಸುಖ ದೊಳು = ಬ್ರಹಾನಂದದಲ್ಲಿ, ಒಪ್ಪಿರಲ್ = ಶೋಭಾಯಮಾನರಾಗಿರಲು, ಓರ್ವ = ಒಬ್ಬಾನೊಬ್ಬ, ಶಿಷ್ಯನು = ಮುಮುಕ್ಷು, ಆದರದಿಂದೆ = ಭಕ್ತಿಯಿಂದೆ, ಬಂದು = ಪ್ರಾಪ್ತನಾಗಿ, ಎರಗಿ = ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ, ಬೆಸ ಗೊಂಡನು = ಕೇಳಿಕೊಂಡನು.

**ತಾತ್ಪರ್ಯ:-** ಒಂದಾನೊಂದು ದಿವಸ ಗುರುಗಳು ಸರ್ವ ಸುಖದಿಂದ ಕೂಡಿ ಕೊಂಡು ಶೋಭಾಯಮಾನರಾಗಿರಲು; ಒಬ್ಬ ಶಿಷ್ಯನು, ಬಂದು ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಪ್ರಶ್ನೆಯನ್ನು ಮಾಡುವಂಥವನಾದನು.

ಶಂಕಾ:- ಪ್ರತಿಯೊಬ್ಬನು ಪ್ರತಿಯೊಂದು ಸುಖದಿಂದ ಕೂಡಿರಲಿಕ್ಕೆ ಬರುತ್ತದೆ. ಹೇಗಂದರೆ, ಪುತ್ರಲಾಭ ಸುಖದಿಂದ ಕೂಡಿರಲು, ಧನಲಾಭ ಸುಖದಿಂದ ಕೂಡಿರಲಿಕ್ಕೆ ಬರುವದಿಲ್ಲ. ಒಂದು ಕರ್ಮಫಲದ ಸುಖವನ್ನು ಉಪಭೋಗಿಸುವಾಗ್ಯೆ; ಮತ್ತೊಂದು ಕರ್ಮಫಲದ ಸುಖವನ್ನು ಉಪಭೋಗಿಸಲಿಕ್ಕೆ ಬರುವದಿಲ್ಲ. ಒಂದು ಇಂದ್ರಿಯದಿಂದ ಒಂದು ವಿಷಯ ಸುಖವನ್ನುಪಭೋಗಿಸುವಾಗ್ಯೆ, ಮತ್ತೊಂದು ವಿಷಯ ಸುಖದಿಂದ ಕೂಡಿರಲಿಕ್ಕೆ ಬರುವದಿಲ್ಲ. ಹೀಗಿದ್ದು ತಾವು ಸರ್ವ ಸುಖದಿಂದ ಗುರುಗಳು ಕೂಡಿಕೊಂಡಿರುವರು ಎಂದು ಹೇಳುವದು ಆಶ್ಚರ್ಯವಲ್ಲವೆ ?

**ಸಮಾಧಾನ:-** ಗುರುಗಳು ಸರ್ವಸುಖದಿಂದ ಕೂಡಿರುತ್ತಾರೆಂದು ಹೇಳಿರುವದು ಬಾಹ್ಯ ಪರಿಚ್ಛಿನ್ನದೃಷ್ಟಿಯಿಂದ ಹೇಳಿದ್ದಲ್ಲ. ಮತ್ತೇನಂದರೆ— ಪರಿಪೂರ್ಣವಾದ ಆತ್ಮದೃಷ್ಟಿಯಿಂದ ಹೇಳಿದುತ್ತದೆ. ಹೇಗಂದರೆ— ಜ್ಞಾನಿಯು ಪರಿಪೂರ್ಣ ಚೈತನ್ಯವೇ ತಾನಾಗಿರುವದರಿಂದ, ಸಕಲ ಶರೀರಗಳಲ್ಲಿಯೂ ಸಾಕ್ಷಿರೂಪದಿಂದಿರುತ್ತೇನೆಂದು ತಿಳಿದಿರುವನು. ಆದ್ದರಿಂದ ಸಾರ್ವಭೌಮ ರಾಜನೇ ಮೊದಲುಗೊಂಡು; ಗಂಧರ್ವ, ದೇವಗಂಧರ್ವ, ಪಿತೃಗಳು, ಅಜಾನಜ ದೇವತೆಗಳು, ಕರ್ಮದೇವತಾ, ದೇವತಾ, ಇಂದ್ರ, ಬೃಹಸ್ಪತಿ, ಪ್ರಜಾಪತಿವರೆಗೂ; ಕ್ರಮದಿಂದ ಒಬ್ಬರಿಗಿಂತಲೂ ಒಬ್ಬರ ಆನಂದವು ನೂರುಪಾಲು ಹೆಚ್ಚಾಗಿರುತ್ತದೆ. ಇವರುಗಳ ಆತ್ಮರೂಪ ಬ್ರಹ್ಮನೇ ತಾನಾಗಿರುವದರಿಂದ ಜ್ಞಾನಿಯು ಈ ಸರ್ವರ ಸುಖವನ್ನು ಅನುಭೋಗಿಸುತ್ತಾನೆ. **“ಅಕಾಮಹತಸ್ಯ ಶ್ರೋತ್ರಿಯಸ್ಯ, ಸೋಽಶ್ನುತೆ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ”** ವಿಷಯ ಕಾಮನಾರಹಿತನಾದ ಶ್ರೋತ್ರಿಯ ಬ್ರಹ್ಮನಿಷ್ಠನು; ಪರಬ್ರಹ್ಮಸ್ವರೂಪದಿಂದ ಧರ್ಮಾದಿ ನಿಮಿತ್ತವಿಲ್ಲದೆ, ಕರಣಗಳ ಅಪೇಕ್ಷೆಯಿಲ್ಲದೆ, ಸೂರ್ಯಪ್ರಕಾಶದಂತೆ ಸರ್ವಸುಖಗಳನ್ನು ಉಪಭೋಗಿಸುತ್ತಾನೆ. ಅಂದರೆ ನಮ್ಮಗಳಂತೆ ದೇಹಾತ್ಮಬುದ್ಧಿಯುಳ್ಳವನಾಗಿ ಧರ್ಮನಿಮಿತ್ತದಿಂದ ಪ್ರಾಪ್ತವಾದ, ಪುತ್ರವಿತ್ತಾದಿ ಸುಖವನ್ನು ಕರಣಗಳದ್ವಾರಾ ಅನುಭವಿಸುವದಿಲ್ಲೆಂಬ ಭಾವವು. ಆದ್ದರಿಂದಲೇ ಶ್ರೋತ್ರಿಯ ಬ್ರಹ್ಮನಿಷ್ಠನಾದ ಗುರು, ಸರ್ವಸುಖದಿಂದ ಶೋಭಾಯಮಾನರಾಗಿದ್ದರೆಂದು ಹೇಳುವದು ಯೋಗ್ಯವದೆ.

ಶಂಕಾ:- ಜ್ಞಾನಿಯು ಪರಬ್ರಹ್ಮರೂಪದಿಂದ ಸಕಲ ಶರೀರಗಳಲ್ಲಿ ಸಾಕ್ಷಿರೂಪದಿಂದಿದ್ದು, ಸರ್ವರ ವಿಷಯಸುಖವನ್ನು ಹೊಂದುತ್ತಾನೆಂಬುದು ಲೋಕಾನುಭವಕ್ಕೆ ವಿರೋಧವಾಗಿರುತ್ತದೆ.

ಸಮಾಧಾನ:- ಲೋಕದಲ್ಲಿ ಒಬ್ಬ ಧನಿಕನಿಗೆ ಹತ್ತುಮಂದಿ ಪುತ್ರರಿದ್ದರು. ಅವರು ಬುದ್ಧಿವಂತರಾಗಿ ಪರದೇಶಗಳಿಗೆ ಹೋಗಿ ವ್ಯಾಪಾರವನ್ನು ಮಾಡತೊಡಗಿ

ದರು. ಅವರು ಸ್ವಲ್ಪ ದಿವಸಗಳಲ್ಲಿಯೇ ಕೋಟ್ಯಾಧೀಶರಾಗಿ, ಅಲ್ಲಿಯೇ ಮನೆಯನ್ನು ಕಟ್ಟಿಕೊಂಡು ಸುಖವಾಗಿ ವಾಸವಮಾಡಹತ್ತಿದರು. ಪುತ್ರರು 'ನಾವು ಸುಖವಾಗಿ ಇದ್ದೇವೆ. ಕೋಟ್ಯಾವಧಿ ರೂಪಾಯಿಗಳನ್ನು ಸಂಪಾದಿಸಿದ್ದೇವೆ' ಎಂದು ತಂದೆಗೆ ತಿಳಿಸುತ್ತಿದ್ದರು. ಪುತ್ರರು ಸುಖವಾಗಿರುವದನ್ನು ತಂದೆಯು ಪತ್ರದ್ವಾರಾ ತಿಳಿದು, ನಾನು ನೂರಾರು ಕೋಟಿ ರೂಪಾಯಿ ಧನಿಕನಾಗಿರುವೆನೆಂದು, ತನ್ನ ಮನದಲ್ಲಿ ತಾನೇ ಸಂತೋಷಪಡುತ್ತಿದ್ದನು. ಪುತ್ರರು ಸುಖಿಗಳಾಗಿರುವದರಿಂದ ನಾನೂ ಸುಖಿಯೆಂದು ಉಲ್ಲಾಸದಿಂದ ಇದ್ದನು. ಅಂದರೆ; ಪುತ್ರರಿಗೂ ತನಗೂ **ದೇಹಸಂಬಂಧ**ವಿದ್ದದರಿಂದ ಪುತ್ರರ ಧನ ಮತ್ತು ಸುಖ ಇವುಗಳು ನನ್ನವು ಎಂದು ತಂದೆಯು ಹೇಗೆ ಲೋಕದಲ್ಲಿ ಸುಖವುಳ್ಳವನಾಗಿರುವನೋ; ಅದರಂತೆ ಜ್ಞಾನಿಯು ಪ್ರತಿ ಶರೀರದಲ್ಲಿಯೂ ಸಾಕ್ಷಿಚೈತನ್ಯ ರೂಪದಿಂದ **ಅಭೇದರೂಪ ಸಂಬಂಧ**ವುಳ್ಳವನಾಗಿರುತ್ತಾನೆ. ಅದರಿಂದ ಸಾರ್ವಭೌಮಾದಿ ಸುಖಗಳೆಲ್ಲವು ತನ್ನ ಸುಖಗಳೆಂದು ತಿಳಿದು ಸರ್ವ ಸುಖದಿಂದ ಇರುವದು ಯೋಗ್ಯವಾಗಿದೆ. ಈ ಅರ್ಥವು ತೈತ್ತಿರೀಯ ಬ್ರಹ್ಮವಲ್ಲಿಯಲ್ಲಿ ಹೇಳಿದೆ. ಆದ್ದರಿಂದ ಲೋಕಾನುಭವಕ್ಕೆ ವಿರೋಧವಲ್ಲ.

**ಶಂಕಾ**:- ತಂದೆಯು ಪುತ್ರರ ಸುಖವನ್ನು ಅಭಿಮಾನಿಸಿದಂತೆ, ದುಃಖಗಳನ್ನು ಅಭಿಮಾನಿಸುತ್ತಾನೆ. ಅದರಂತೆ ಜ್ಞಾನಿಯು ಪ್ರತಿಯೊಂದು ಶರೀರವಲ್ಲಿ ಆಗುವ ದುಃಖವನ್ನು ಅನುಭವಿಸುತ್ತಾನೆಂದು ಹೇಳಬೇಕಾಗುವದು. ಹೀಗೆ ಹೇಳಿದರೆ ಜಗತ್ತಿನ ಸರ್ವ ದುಃಖಗಳನ್ನು ಈತನೇ ಉಪಭೋಗಿಸುವನು. ತನ್ನ ದುಃಖದ ನಿವೃತ್ತಿ ದೆಶೆಯಿಂದ ಜ್ಞಾನಿಯಾಗಿ ಪುನಃ ಅನ್ಯರ ದುಃಖಗಳನ್ನು ತಾನು ಅನುಭವಿಸುವದು. ಅನರ್ಥವಲ್ಲವೆ? ಹೀಗಾದಮೇಲೆ; ಪುರುಷಾರ್ಥವೇ ಇಲ್ಲವೆಂದು ಹೇಳಬೇಕಾಗುವದು. ಇದಕ್ಕೆ ಗತಿಯೇನು?

**ಸಮಾಧಾನ**:-ದೃಷ್ಟಾಂತದಲ್ಲಿ ಸರ್ವಾಂಶಗಳನ್ನು ಗ್ರಹಣಮಾಡಬಾರದು. ಏಕಾಂಶವನ್ನು ಗ್ರಹಿಸಲಿಕ್ಕೆಬೇಕು. ಆದರೂ ಚಿಂತೆಯಿಲ್ಲ. ಅದೇ ದೃಷ್ಟಾಂತದಿಂದ ನಿನಗೆ ಉತ್ತರವನ್ನು ಹೇಳುತ್ತೇನೆ. ಹೇಗಂದರೆ, ತಂದೆಯು ಪುತ್ರರ ಸುಖ ದುಃಖಗಳನ್ನು ಅಭಿಮಾನಿಸಿ, ತಾನು ಸುಖಿ ದುಃಖಿಯಾಗುವಂತೆ; ಅನ್ಯರ ಸುಖ ದುಃಖಗಳನ್ನು ಯಾಕೆ ಅಭಿಮಾನಿಸುವದಿಲ್ಲ? ದೇಹ ಸಂಬಂಧವಿಲ್ಲದ್ದರಿಂದ ಅಭಿಮಾನಿಸಲಿಲ್ಲೆಂದು ನೀನು ಹೇಳಲಿಕ್ಕೇಬೇಕು. ಹೇಗೋ ಹಾಗೆ, ಜ್ಞಾನಿಯು ಚೈತನ್ಯ ಸಂಬಂಧವಾದ ಸುಖವನ್ನು ಮಾತ್ರ ಅಭಿಮಾನಿಸುತ್ತಾನೆ. ದುಃಖವು ಮಾಯಾ ಸಂಬಂಧವಾದ್ದರಿಂದ ಅನುಭವಿಸುವದಿಲ್ಲ. ಮತ್ತು ಅಜ್ಞಾನ ಕಾಲದಲ್ಲಿ ಈ ದೇಹದೊಡನೆ ತಾದಾತ್ಮ್ಯ ಅಧ್ಯಾಸಯುಕ್ತನಾದ್ದರಿಂದ ದುಃಖಿಯಾಗಿದ್ದನು. ಜ್ಞಾನ ಕಾಲದಲ್ಲಿ ಇದೇ ದೇಹದಲ್ಲಿ ದುಃಖವಾದರೂ ಆ ದುಃಖವನ್ನು ಸಾಕ್ಷಿರೂಪದಿಂದ

ನೋಡುತ್ತಾನೆ ಹೊರ್ತು; ನಾನು ದುಃಖಿಯೆಂದು ದುಃಖದಲ್ಲಿ ತಾದಾತ್ಮ್ಯವುಳ್ಳವ ನಾಗುವದಿಲ್ಲ. ಅಂದಮೇಲೆ: ಅನ್ಯ ದೇಹಾದಿಗಳಲ್ಲಿರುವ ದುಃಖಗಳೊಡನೆ ಹೇಗೆ ತಾದಾತ್ಮ್ಯವುಳ್ಳವನಾದಾನು? ಎಂದಿಗೂ ಆಗಲಾರನು. ಆದ್ದರಿಂದ ಜ್ಞಾನಿಯು ಸುಖವನ್ನು ಮಾತ್ರ ಗ್ರಹಿಸುತ್ತಾನೆ; ದುಃಖವನ್ನು ಗ್ರಹಿಸುವದಿಲ್ಲ. ಜೇನಹುಳವು ಹೂವಿನಲ್ಲಿರುವ ರಸವನ್ನು ಮಾತ್ರ ಗ್ರಹಿಸುತ್ತದೆ ಹೊರ್ತು ಬೇರೊಂದನ್ನು ಹೇಗೆ ಗ್ರಹಿಸುವದಿಲ್ಲವೋ; ಯತಿಯು ಭಿಕ್ಷೆಯನ್ನು ಮಾತ್ರ ಗ್ರಹಿಸುತ್ತಾನೆ ಹೊರ್ತು ಗೃಹಸಂಬಂಧಿ ಅಶುದ್ಧ ದ್ರವ್ಯಗಳನ್ನು ಹೇಗೆ ಗ್ರಹಿಸುವದಿಲ್ಲವೋ, ಹಾಗೆ ಶ್ರೋತ್ರಿಯ ಬ್ರಹ್ಮನಿಷ್ಠ ಗುರುವು **ಸರ್ವಾತ್ಮ ಸಾಕ್ಷಿರೂಪದಿಂದ** ಸುಖವನ್ನು ಮಾತ್ರ ಗ್ರಹಿಸುತ್ತಾನೆ. ಅನ್ಯವನ್ನು ಗ್ರಹಿಸುವದಿಲ್ಲ.

**ಶಂಕಾ:-** ಜ್ಞಾನಿಯು ಮಾಯಾ ಸಂಬಂಧಿ ದುಃಖವನ್ನು ಗ್ರಹಿಸದಿದ್ದರೂ, ಸಾಕ್ಷಿರೂಪದಿಂದ ಆಯಾಶರೀರಗಳಲ್ಲಿರುವದರಿಂದ ತತ್ತದ್ದೇಹ ಸಂಬಂಧಗಳಾದ ಪುಣ್ಯಪಾಪಗಳೂ, ಮನೋಸಂಬಂಧಗಳಾದ ಕಾಮಾದಿ ಗುಣಗಳೂ ತಾವೇ ಸ್ಪರ್ಶಮಾಡಬಹುದು. ಅದರಿಂದ ದೋಷವು ಪ್ರಾಪ್ತವಾಗುವದಿಲ್ಲವೇ ?

**ಸಮಾಧಾನ:-** ತತ್ವಜ್ಞಾನಿಯು ಸಕಲ ಶರೀರಗಳಲ್ಲಿ ಅಸಂಗನಾಗಿಯೇ ಇರುತ್ತಾನೆ ಹೊರ್ತು, ಸಂಗವುಳ್ಳವನಾಗುವದಿಲ್ಲ. ಅದರಿಂದ ದೋಷ ಗ್ರಸ್ತನೂ ಆಗುವದಿಲ್ಲ. (§) **"ಅವಬಾಧೆಯುಂಟು ಮಾಡಬಹುದ ಖಿಳಭೋ। ಗಾವ ಲಂಬನದೊಳಿರೆ ಶಿವಯೋಗಿಗೆ ||ಪಲ್ಲ|| ರವಿಸರ್ವ ಸಾರ ವನು ಸವಿದು ನಾನಾವಸ್ತು। ನಿವಹವನು ನಲಿದುಂಡು ವಾಯುಸಖನು || ಪವನನೆಲ್ಲವನು ಮೈಸೋಂಕಿ ಶುಚಿಯೆನಿಸಿದು।** ತವಿಬೇಧರೂಪ **ತತ್ವ ಜ್ಞಾನಿಗೆ ||೧||** ರವಿ, ಅಗ್ನಿ, ವಾಯು ಸಕಲ ಪದಾರ್ಥಗಳನ್ನು ಸವಿದು ಉಂಡು ಸ್ಪರ್ಶಮಾಡಿದರೂ ಹೇಗೆ ನಿರ್ಲೇಪರಾಗಿರುವರೋ; ಹಾಗೇ ತತ್ವಜ್ಞಾನಿಯು ನಿರ್ಲೇಪಕನಾಗಿರುವನು. ಯಾವ ದೋಷವೂ ಇಲ್ಲ. ಆದ್ದರಿಂದ ಗುರು ಸರ್ವ ಸುಖದಿಂದ ಶೋಭಾಯರಾಗಿರುವರೆಂಬುದು ಸರಿಯಾಗಿದೆ. ಮತ್ತು ಅಜ್ಞರು ಇಷ್ಟವಾದ ವಿಷಯೇಂದ್ರಿಯ ಸಂಯೋಗಜನ್ಯವಾದ ಸುಖವನ್ನು ಅನುಭವಿಸು ತ್ತಾರೆ. ಧನಿಕರು ರಾಜರು ಧನದ ಅಭಿಮಾನ ಸಂಬಂಧವಾದ ಸುಖವನ್ನು ಅನುಭವಿಸುತ್ತಾರೆ. ಯೋಗಿಗಳು ಮನೋಲಯದಿಂದ ಜನ್ಯವಾದ ಸುಖವನ್ನು ಅನುಭವಿಸುತ್ತಾರೆ. ಉಪಾಸಕರು ಧ್ಯೇಯವಸ್ತುವಿನೊಡನೆ ಚಿತ್ತೈಕಾಗ್ರತೆಯಿಂದ

(§) ಕೈವಲ್ಯಪದ್ಧತಿ ಜ್ಞಾನ ಪ್ರತಿಪಾದನ ಸ್ಥಳದ ೫೭ನೇ ಪದವಿರುತ್ತದೆ. **ಇದಕ್ಕೂ** ಪರಿಪೂರ್ಣ ಸಾಕ್ಷಿ ಚೈತನ್ಯರೂಪದಿಂದ ಯೋಗಿಯು ಅಖಿಳಭೋಗದಲ್ಲಿರುವನೆಂದು ಅರ್ಥಮಾಡಬೇಕು. ಇಲ್ಲದಿದ್ದರೆ, ದೇಹ ದೃಷ್ಟಿಯಿಂದ ಅರ್ಥಮಾಡಿದರೆ, **ಶ್ರುತ್ಯರ್ಥಕ್ಕೆ** ವಿರೋಧವಾಗುವದು.

ಜನ್ಯವಾದ ಸುಖವನ್ನು ಅನುಭವಿಸುತ್ತಾರೆ. ಬ್ರಹ್ಮನಿಷ್ಠರು ನಿತ್ಯನಿರತಿಶಯ ಆನಂದ ಸ್ವರೂಪರಾಗಿರುತ್ತಾರೆ. ಮತ್ತು ವಿದ್ಯಾವೃತ್ತಿಯಲ್ಲಿ ಪ್ರತಿಬಿಂಬಿತ ಆನಂದವನ್ನು ಅನುಭವ ಮಾಡುತ್ತಾ ನಿಜಾನಂದವನ್ನು ಸ್ಮರಿಸುತ್ತಾರೆ. ಇವರು ಆನಂದವೇ ನಾವೆಂದು ಅಭೇದ ಬುದ್ಧಿಯುಳ್ಳವರಾದ್ದರಿಂದ ಸರ್ವಸುಖವುಳ್ಳವರು ಆಗಿರುತ್ತಾರೆ. ಅನ್ಯರು ಭೇದಬುದ್ಧಿಯುಳ್ಳವರು ಆಗಿರುತ್ತಾರೆ. ಕಿಂತು, ಆನಂದ ಸ್ವರೂಪರಾಗಿರುತ್ತಾರೆಂಬ ಭಾವವು. ಆದ್ದರಿಂದಲೇ ಇಂಥಾ ಬ್ರಹ್ಮಾನಂದದಲ್ಲಿ ಇತರಾನಂದಗಳು ಅಂತರ್ಭೂತಗಳಾಗಿರುತ್ತವೆ. ಸಮುದ್ರದಲ್ಲಿ ನದಿಗಳಂತರ್ಭೂತಗಳಾದಂತೆ, ಆದರಿಂದ ಗುರುಗಳು ಸರ್ವಸುಖದಿಂದ ಶೋಭಾಯಮಾನರಾಗಿರಲು, ಒಬ್ಬಾನೊಬ್ಬ ಶಿಷ್ಯನು ಗುರುಗಳ ಸಮೀಪಕ್ಕೆ ಬಂದು ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ ಪ್ರಶ್ನೆಯನ್ನು ಮಾಡುವಂಥವನಾದನು.

ಬಳಿಕ, ಗುರುಗಳು ಯಾರು? ಅವರ ಲಕ್ಷಣವೇನು? ಗುರುಗಳನ್ನು ನಾವು ಹೇಗೆ ತಿಳಿಯೋಣವೆಂದು ಕೇಳಿದರೆ, ಉತ್ತರವನ್ನು ಹೇಳುತ್ತಾರೆ.

**ಶ್ರೀ॥ ಕರುಣ ಸತ್ಕಲೆ ಶಾಸ್ತ್ರಪರಿಣತೆ ನಿರಾಶೆ ಸೌಂ।**
**ದರತೆ ಸುಮುಖತ್ವ ಸುಗುಣ ಸುಜ್ಞಾನಂಗ।**
**ಳಿರಲವನೆ ಸೇವ್ಯ ಗುರುವಕ್ಕು ॥೧॥**

**ಟೀಕಾ:–** ಕರುಣ=ದುಃಖಿಗಳಲ್ಲಿ ಕನಿಕರಭಾವವು, ಸತ್ಕಲೆ=ಬ್ರಹ್ಮನಿಷ್ಠತ್ವವು, ಶಾಸ್ತ್ರಪರಿಣತೆ=ಶ್ರೋತ್ರಿಯತ್ವವು, ನಿರಾಶೆ=ಆಶೆಯಿಲ್ಲದಿರುವಿಕೆಯು, ಸೌಂದರತೆ=ಪುಣ್ಯಮಯಶರೀರ, ಸುಮುಖತ್ವ=ಮುಖಪ್ರಸನ್ನತೆಯು, ಸುಗುಣ=ಮೈತ್ರ್ಯಾದಿಗುಣಗಳು, ಸುಜ್ಞಾನಂಗಳ್=ಅಪರೋಕ್ಷಜ್ಞಾನಾದಿಗಳು, ಇರಲ್=ಇರಲಾಗಿ, ಅವನೆ=ಅಂಥವನೆ, ಸೇವ್ಯ=ಶರಣುಹೊಕ್ಕು ಪೂಜಿಸಲಿಕ್ಕೆ ಯೋಗ್ಯನಾದ, ಗುರುವಕ್ಕು=ಗುರುವಾಗಿರುವನು.

ತಾತ್ಪರ್ಯ:- ಮುಂದೆ ಹೇಳಲ್ಪಡುವ ಗುಣಗಳಿಂದ ಕೂಡಿರುವವನೇ ಸದ್ಗುರುವೆಂದು ತಿಳಿದು, ಭಕ್ತಿಯಿಂದ ಶರಣು ಹೋಗತಕ್ಕದ್ದೆಂದು ಹೇಳುತ್ತಾರೆ. ಹೇಗಂದರೆ, ದುಃಖದಲ್ಲಿ ಬಳಲುವ ಜೀವಿಗಳನ್ನು ಕಂಡು, ಈ ಭವದುಃಖದಿಂದ ಬಿಡುಗಡೆಯಾಗಲಿ ಎಂಬ ಭಾವನೆಯೇ **ಕರುಣ**ವೆನಿಸುವದು. ಸಂಶಯಾದಿ ಭಾವನೆಗಳಿಲ್ಲದೆ ನಾನೇ ಬ್ರಹ್ಮನೆಂಬ ದೃಢನಿಶ್ಚಯಾತ್ಮಕ ಭಾವನೆಯೇ ಬ್ರಹ್ಮ**ನಿಷ್ಠತೆ (ಸತ್ಕಲೆ)** ಯೆಂದು ಹೇಳಲ್ಪಡುವದು. ಅಂಗೋಪಾಂಗ ಸಹಿತ ಸಕಲ ಉಪನಿಷತ್ತುಗಳ ಜ್ಞಾನದಿಂದ ಕೂಡಿರುವಿಕೆಯೇ **ಶಾಸ್ತ್ರಪರಿಣತೆಯು,** ಅರ್ಥಾತ್ ಶಾಸ್ತ್ರಸಂಬಂಧಿ ಸಂಶಯಗಳನ್ನು ಕೂಡಾ ಕಳೆದು ಶಿಷ್ಯರಿಗೆ ಬ್ರಹ್ಮಾನು-

ಭವವನ್ನು ಮಾಡಿಕೊಡತಕ್ಕವನೇ ಗುರುವೆಂಬ ಭಾವವು. ಹೀಗೆ ಹೇಳುವದರಿಂದ **ಶ್ರೋತ್ರಿಯ ಬ್ರಹ್ಮನಿಷ್ಠನೇ** ಸದ್ಗುರುವೆಂದು ತಿಳಿಯತಕ್ಕದ್ದು. ಯಾಕಂದರೆ, ಬ್ರಹ್ಮನಿಷ್ಠನು ಬ್ರಹ್ಮಾನುಭವವನ್ನು ಮಾಡಿಕೊಟ್ಟರೂ, ಶಾಸ್ತ್ರಸಂಬಂಧಿ ಸಂಶಯವನ್ನು ಕಳೆಯಲಾರನು. ಶ್ರೋತ್ರಿಯನು ಶಾಸ್ತ್ರಸಂಬಂಧಿ ಸಂಶಯಗಳನ್ನು ಕಳೆದರೂ, ಬ್ರಹ್ಮಾನುಭವವನ್ನು ಮಾಡಿಕೊಡಲಾರನು. ಶ್ರೋತ್ರಿಯ ಬ್ರಹ್ಮನಿಷ್ಠನಾದರೆ, ಬ್ರಹ್ಮಾಪರೋಕ್ಷವನ್ನು ಮಾಡಿಕೊಡುವದಲ್ಲದೆ, ಶಾಸ್ತ್ರ ಪ್ರಮಾಣದಿಂದ ಸಂಶಯಗಳನ್ನು ದೂರಮಾಡುತ್ತಾನೆ. ಆದ್ದರಿಂದ ಈ ಲಕ್ಷಣವೇ ಯೋಗ್ಯವಾಗಿರುತ್ತದೆ. ಹೇಗಂದರೆ; ನದಿಯನ್ನು ಕುಂಟನೂ ಮತ್ತು ಕುರುಡನೂ ಇವರಿಬ್ಬರು ದಾಟಿಸುತ್ತೇವೆಂದು ಹೇಳಿದರೂ ಅವರಲ್ಲಿ ನಂಬಿಗೆಯಾಗದು. (*) ಕಾಲು ಕಣ್ಣುಗಳಿದ್ದವನಲ್ಲಿ ಮಾತ್ರ ನಂಬಿಗೆಯಾಗುತ್ತದೆ. ಅದರಂತೆ ಎಂದು ತಿಳಿಯತಕ್ಕದ್ದು. ಮತ್ತು ಶಿಷ್ಯನು ಏನಾದರೂ ತನಗೆ ದ್ರವ್ಯವನ್ನು ಕೊಡಲಿ ಎಂಬ ಆಶೆಯಿಂದ ಕೂಡಿಕೊಂಡು ಬೋಧೆಯನ್ನು ಮಾಡತಕ್ಕವನಾಗಬಾರದು. ಯಾಕಂದರೆ ಆ ಆಶೆಯೇ ದುಃಖಕ್ಕೆ ಕಾರಣವಾಗಿರುತ್ತದೆ. ಅಂದರೆ ನಿರಪೇಕ್ಷ ಬುದ್ಧಿಯಿಂದ ಪರ್ಜನ್ಯವತ್ ಶಿಷ್ಯರಿಗೆ ಬೋಧೆಯನ್ನು ಮಾಡಬೇಕೆಂಬ ಭಾವವೇ ನಿರಾಶೆ. ಸುಂದರತ್ವ ಎಂಬ ಉಪಲಕ್ಷಣದಿಂದ ಪುಣ್ಯಮಯ ಶರೀರವೆಂದು ತಿಳಿಯಲ್ಪಡುತ್ತದೆ ಹೊರ್ತು, ಶರೀರ ಸುಂದರವಿರುವದೆಂಬರ್ಥವಲ್ಲ. ಯಾಕಂದರೆ, ಅಷ್ಟಾವಕ್ರಮುನಿಗಳು ಎಂಟು ಕಡೆಗೆ ಡೊಂಕಾಗಿ ಕುರೂಪಿಗಳಾಗಿದ್ದರೂ, ಜನಕ ಮಹಾರಾಜನಿಗೆ ಗುರುಗಳಾಗಿರುವರು. ಆದ್ದರಿಂದ ಶರೀರ ಸುಂದರವೆಂಬರ್ಥವಲ್ಲ. ಕಿಂತು, ಪುಣ್ಯಮಯ ಶರೀರವೇ **ಸುಂದರತೆಯು** ಇತ್ತೆಂದೂ ಪೂಜ್ಯವಾಗಿರುತ್ತದೆಂದೂ ಅರ್ಥ ಮಾಡಬೇಕು. ಸುಮುಖತ್ವ ಅಂದರೆ ಯಾವಾಗಲೂ ಮುಖವು ಪ್ರಸನ್ನವಾಗಿರುವಿಕೆ; ಮುಖವು ಪ್ರಸನ್ನವಾಗಿರಬೇಕಾದರೆ, ಮನಸ್ಸು ಸಂತೋಷವಾಗಿರಲಿಕ್ಕೆಬೇಕು. (§) ಮನಸ್ಸು ಸಂತೋಷವಾಗಿರಬೇಕಾದರೆ, ಅಮಾನಿತ್ವ ಅದಂಭಿತ್ವ ಮೊದಲಾದ ದೈವೀ ಸಂಪತ್ ಗುಣಗಳಿಂದ ಕೂಡಿರಬೇಕು. ಈ ದೈವೀಗುಣಗಳು ಸ್ವಭಾವಸಿದ್ಧವಾಗಿರಬೇಕಾದರೆ ಅಪರೋಕ್ಷ ಜ್ಞಾನಸಿದ್ಧನಾಗಿರಬೇಕು. ಇವೇ ಮೊದಲಾದ ಗುಣಗಳಿಂದ ಕೂಡಿರುವವನೇ ಯೋಗ್ಯ ಗುರುವೆಂದು ತಿಳಿಯತಕ್ಕದ್ದು. ಮತ್ತು

---

(÷) ಪಂಚೀಕರಣದಲ್ಲಿ ಗುರು ಲಕ್ಷಣ ಹೇಳುವಾಗ್ಯೆ ಈ ಕಥೆಯನ್ನು ಉದಾಹರಿಸಿದ್ದಾರೆ. ಅಲ್ಲಿ ವಿಸ್ತಾರವಾಗಿರುವದು. ಅವಲೋಕನ ಮಾಡಿರಿ.

(§) ಮೈತ್ರಿ, ಕರುಣಾ, ಮುದಿತಾ, ಉಪೇಕ್ಷೆ ಈ ನಾಲ್ಕು ಗುಣಗಳು ಕ್ರಮವಾಗಿ ಸುಖಿ, ದುಃಖಿ, ಪುಣ್ಯ, ಪಾಪಿಗಳಲ್ಲಿರಬೇಕು. ಈ ಗುಣಗಳಿಂದ ಅಂತಃಕರಣವು ಶಾಂತವಾಗಿರುತ್ತದೆಂದು ಪಾತಂಜಲಿಕಾರರು ಹೇಳಿದ್ದಾರೆ. ವಿವೇಕಚಿಂತಾಮಣಿಯಲ್ಲಿ ಹೇಳಿದೆ. ಅಮಾನಿತ್ವಾದಿ ಗುಣಗಳು ದೈವೀಸಂಪತ್ ರೂಪಗಳೆಂದು ಭಗವದ್ಗೀತೆಯಲ್ಲಿ ಹೇಳಿದೆ. ಅಲ್ಲಿ ನೋಡಬಹುದು.

"ಶಾಸ್ತ್ರಪರಿಣತಿ, ಸುಜ್ಞಾನ" ಎಂಬ ಎರಡು ಪದಗಳಿಂದ ಎರಡು ಜ್ಞಾನಗಳಿರ ಬೇಕೆಂದು ತೋರುತ್ತದೆ. ಆದ್ದರಿಂದ 'ಶಾಸ್ತ್ರಪರಿಣತಿ ಎಂಬಲ್ಲಿ ಶಬ್ದಜ್ಞಾನವೆಂದೂ ಪರೋಕ್ಷಜ್ಞಾನವೆಂದೂ ಅರ್ಥಮಾಡಬೇಕು. 'ಸುಜ್ಞಾನ' ಎಂಬಲ್ಲಿ ಅಪರೋಕ್ಷ ಜ್ಞಾನವೆಂದು ಅರ್ಥಮಾಡಬೇಕು. ಹೀಗೆ ಮಾಡಿದರೆ ಯಾವ ದೋಷವೂ ಇಲ್ಲ. ಯಾಕಂದರೆ; '**ತೆ ಜ್ಞಾನಂ ಉಪದೇಕ್ಷ್ಯಂತಿ ಜ್ಞಾನಿನ: ತತ್ವದರ್ಶಿನಃ**' ಎಂಬ ಗೀತಾವಾಕ್ಯದಲ್ಲಿಯೂ '**ಜ್ಞಾನಿ**, '**ತತ್ವದರ್ಶಿ**' ಯೆಂದು ಎರಡುಸಾರಿ ಶಬ್ದ ಪ್ರಯೋಗಮಾಡಿರುತ್ತಾರೆ. ಇವುಗಳಿಗೂ ಉಕ್ತಾರ್ಥವೇ ಮಾಡಲ್ಪಟ್ಟಿದೆ. ಆದ್ದರಿಂದ ಹೀಗಿದ್ದರೇ ಗುರುಗಳೆಂದೂ, ಇವರಿಂದಲೇ ನಾವು ಜ್ಞಾನಪ್ರಾಪ್ತಿದ್ವಾರಾ ಕೃತಾರ್ಥರಾಗುತ್ತೇವೆಂದೂ, ತಿಳಕೊಂಡು, ಮುಮುಕ್ಷುಗಳು ಶರಣು ಹೋಗ ತಕ್ಕದ್ದು. ಇಲ್ಲದಿದ್ದರೆ '**ಬಳ್ಳಿ ಗುರುಶರು ಕೂಡಿ ಹಳ್ಳವನು ಬಿದ್ದಂತೆ**' ಎಂಬ ಸರ್ವಜ್ಞನ ವಚನದಂತೆ ಅನರ್ಥಕ್ಕೆ ಒಳಗಾಗಬೇಕಾಗುವದು. ಸರ್ವಜ್ಞ ವಚನಗ್ರಂಥದಲ್ಲಿರುವ 'ಗುರುಪದ್ಧತಿ' ಎಂಬ ಪ್ರಕರಣವನ್ನು ಅವಲೋಕನ ಮಾಡಿರಿ. ಪರಮಾನಂಭವ ಬೋಧೆಯಲ್ಲಿಯೂ ಮುಖ್ಯವಾಗಿ '**ಪರತತ್ವ ವಿಷಯ ದರಿಕೆಯುಳ್ಳ ಗುರುವನ್ನು**' ಕುರಿತು ಶರಣು ಹೋಗತಕ್ಕದ್ದು. ಇವನು 'ಹಿರಿಯನು, ಕಿರಿಯನು, ಕುಲಜನು, ಕುಲರಹಿತನು, ಎಂದು ವಿಚಾರಮಾಡತಕ್ಕ ದ್ದಲ್ಲೆಂದೂ; '**ಗುರು ಶಿಷ್ಯರೊಳು ಪರಮ ವಿರಕ್ತಿಯೊಂದನೆ ಪರೀಕ್ಷಿಸುವನು ಜಾತಿ ಕುಲ ವಿದ್ಯಾವರಗುಣ ಗಣವನಾರೈವನೆ,** ಎಂಬದಾಗಿ ಶಿಷ್ಯನಲ್ಲಿ ಮುಖ್ಯ ವಾಗಿ ವಿರಕ್ತಿಯಿರಬೇಕೆಂದೂ, ಹೀಗೆ ಗುರು ಶಿಷ್ಯರ ಲಕ್ಷಣವನ್ನು ಗ್ರಂಥಕಾರರೇ ಹೇಳಿರುವರು. ಮತ್ತು ಶ್ರೀಮಚ್ಛಂಕರಾಚಾರ್ಯರು ಸ್ವರೂಪ ಬಲ್ಲವನು ಬ್ರಾಹ್ಮಣ ನಿರಲಿ ಚಾಂಡಾಲನಿರಲಿ ಅವನು ನನಗೆ ಗುರುವೆಂದು ಮನೀಷಾ ಪಂಚಕದಲ್ಲಿ ಹೇಳಿರುವರು '**ಊರಿಂಗೆ ದಾರಿಯನು ಯಾರು ತೋರಿದಡೇನು,** ತನ್ನ ಸ್ವರೂಪ ಜ್ಞಾನವನ್ನುಂಟುಮಾಡತಕ್ಕ ಗುರುಗಳು ಯಾವ ಜಾತಿ, ಕುಲ, ವಯಸ್ಸಿನವರಾದರೂ ಚಿಂತೆಯಿಲ್ಲ. ಹೀಗೆಂದು ಸರ್ವಜ್ಞಕವಿಯು ಹೇಳಿರುವನು. ವಿಚಾರ ಸಾಗರದ ಮೂರನೇ ತರಂಗದಲ್ಲಿಯೂ ಗುರುಗೀತೆಯಲ್ಲಿಯೂ ಈ ವಿಷಯವನ್ನು ಅವಲೋಕನ ಮಾಡಿರಿ. ವಿಸ್ತಾರ ಭಯದಿಂದ ಬರೆಯುವದನ್ನು ಬಿಟ್ಟಿದ್ದೇವೆ.

**ಬಳಿಕ, ಸಚ್ಛಿಷ್ಯನ ಲಕ್ಷಣವನ್ನು ಹೇಳುತ್ತಾರೆ.**

**ಗುರು ದೇವತಾ ಭಕ್ತಿ ವರವೇದ ವಿಧಿನಿಷ್ಠೆ ।**
**ವಿರತಿ ಮುಂತಾದ ನವ ಸುಚಾರಿತ್ರಂಗ ।**
**ಳಿರಲವನೆ ಶಿಷ್ಯನೆನಿಸುವನು ॥೨॥**

**ಟೀಕಾ:-** ಗುರುದೇವತಾಭಕ್ತಿ=ಗುರು ಮತ್ತು ಇಷ್ಟದೇವತಾ ಇವರುಗಳಲ್ಲಿ ಒಂದೇ ವಿಧವಾದ ಭಕ್ತಿಯುಳ್ಳವನಾಗಿ, ವರವೇದ ವಿಧಿನಿಷ್ಠೆ-ವೇದದಲ್ಲಿ ಹೇಳಿ ರುವ ವಿಧಿರೂಪ ನಿಷ್ಕಾಮ ಕರ್ಮಗಳಲ್ಲಿ ಶ್ರದ್ಧಾವಂತನಾಗಿ, ವಿರತಿ=ಇಹ ಪರ ಭೋಗ ವಿಷಯಂಗಳಲ್ಲಿ ನಿಸ್ಪೃಹನಾಗಿ, ಮುಂತಾದ=ಮೊದಲಾದ, ನವ= ಒಂಭತ್ತು, (ನೂತನ) ಸುಚಾರಿತ್ರ್ಯಂಗಳಿರಲ್=ಒಳ್ಳೇ ಗುಣಗಳಿಂದ ಕೂಡಿರಲು, ಅವನೆ=ಆತನೇ ಶಿಷ್ಯನೆನಿಸುವನು=ಶಿಷ್ಯನಾಗುವನು.

**ತಾತ್ಪರ್ಯ:-** ಗುರು ಮತ್ತು ಇಷ್ಟದೇವತಾ ಇವರುಗಳಲ್ಲಿ ಪ್ರೇಮಲಕ್ಷಣ ಭಕ್ತಿಯಿಂದ ಕೂಡಿಕೊಂಡಿರಬೇಕು. "ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೆ ತಥಾ ಗುರೌ || ತಸ್ಯೈತೆ ಕಥಿತಾ ಹ್ಯರ್ಥಾಃ ಪ್ರಕಾಶಂತೆ ಮಹಾತ್ಮನಃ" ಗುರುವಿಗೆ ಶರಣು ಹೋಗುವದಕ್ಕಿಂತಲೂ ಮೊದಲು ಉಪಾಸ್ಯದೇವತೆಯಲ್ಲಿ ಯಾವ ಪ್ರಕಾರ ಉತ್ಕಟಪ್ರೇಮರೂಪ ಭಕ್ತಿಯನ್ನು ಹೇಗೆ ಇಟ್ಟಿದ್ದನೋ, ಹಾಗೇ ಗುರುವಿನಲ್ಲಿಯೂ ಇಟ್ಟಿದ್ದಾದರೆ, ಅವನಿಗೆ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಯಾವತ್ತು ಅರ್ಥಗಳು ತನ್ನಷ್ಟಕ್ಕೆ ತಾವೇ ಹೊಳೆಯುತ್ತವೆಂದು ಹೇಳಿರುತ್ತದೆ. ಮತ್ತು ಗುರು, ದೈವವನ್ನು ತೋರಿಸುತ್ತಾನೆ ದೈವವು ಗುರುವನ್ನು ತೋರಿಸ ಲಾರನು. ಗುರು ದೃಷ್ಟಾದೃಷ್ಟ ಎರಡು ಫಲಗಳನ್ನು ಕೊಡುತ್ತಾನೆ. ದೇವರು ಕೇವಲ ಅದೃಷ್ಟ ಫಲವನ್ನು ಕೊಡುತ್ತಾನೆ. ಕ್ರಮವಾಗಿ ಸರ್ವಜ್ಞ ಕವಿ ವಿಚಾರ ಸಾಗರಕಾರರು, ದೈವಕ್ಕಿಂತಲೂ ಗುರುವೇ ಶ್ರೇಷ್ಠನೆಂದೂ ಗುರುಭಕ್ತಿ ಮಾಡು ವದರಿಂದ ದೈವಭಕ್ತಿಯೂ ಅಂತರ್ಭೂತವಾಗಿರುವದೆಂಬ ಅಭಿಪ್ರಾಯವನ್ನು ತೋರಿಸುವರು. ಅರ್ಥಾತ್ ಶಿಷ್ಯನು ಗುರು ದೇವತೆಗಳಲ್ಲಿ ಭಕ್ತಿಯುಳ್ಳನಾಗಿರ ಬೇಕು. ವೇದದಲ್ಲಿ ಹೇಳಲ್ಪಟ್ಟ ಪ್ರಕಾರ ಚಿತ್ತಶುದ್ಧಿಗೋಸ್ಕರ ನಿಷ್ಕಾಮಕರ್ಮ ಗಳನ್ನು ಮಾಡಬೇಕು. ಇಹಪರ ಭೋಗ ವಿಷಯಗಳಲ್ಲಿ ದೋಷದರ್ಶನರೂಪ ವಿರತಿಯಿರಬೇಕು, ಅನ್ವಯ ವ್ಯತಿರೇಕ ಮೂಲಕ ಆತ್ಮ ಅನಾತ್ಮಗಳನ್ನು ಬೇರ್ಪಡಿಸುವಂಥಾ ವಿವೇಕಿಯಾಗಬೇಕು. ಅಗ್ನಿ, ಜಲಗಳಲ್ಲಿ ಬಿದ್ದ ಪುರುಷನು ಕಡೆಗೆ ಬರಬೇಕೆಂಬ ಉತ್ಕಟ ಇಚ್ಛೆಯಂತೆ, ಮೋಕ್ಷವನ್ನು ಪಡೆಯಬೇಕೆಂಬ ಇಚ್ಛಾರೂಪ ಮುಮುಕ್ಷುವಾಗಬೇಕು. ಶಮ, ದಮ, ಉಪರತಿ, ತಿತಿಕ್ಷು ಶ್ರದ್ಧಾ, ಸಮಾಧಾನಗಳೆಂಬ ಷಟ್ ಸಂಪತ್ತಿನಿಂದ ಕೂಡಬೇಕು. ಈ ಒಂಭತ್ತು ಗುಣ ಗಳಿಂದ ಕೂಡಿಕೊಂಡು ಇದ್ದರೆ, ಅವನೇ ಶಿಷ್ಯನೆಂದು ಹೇಳಿಸಿಕೊಳ್ಳುವನು. ಅಥವಾ ವಿರಕ್ತಿ ಮೊದಲಾದ ನೂತನ ಮನೋಹರಗಳಾದ ವರ್ತನೆಗಳಿಂದ ಕೂಡಿದ್ದರೂ ಶಿಷ್ಯನೆನಿಸುವನು. ಈ ಶಿಷ್ಯ ಲಕ್ಷಣ ವಿಷಯವನ್ನು ಪರಮಾನುಭವ ಬೋಧೆಯ ಆರನೇ ಸಂಧಿ ಮೂರು ನಾಲ್ಕು ಸೂತ್ರಗಳನ್ನು ವಿಚಾರಮಾಡಿರಿ.

ಬಳಿಕ, ಶಿಷ್ಯನು ಗುರುಗಳನ್ನು ಕುರಿತು ಹೇಗೆ ಶರಣು ಹೋಗತಕ್ಕದ್ದು ? ಅವರ ಕೃಪೆಗೆ ಹೇಗೆ ಪಾತ್ರನಾಗಬೇಕು ? ಎಂಬುದನ್ನು ಹೇಳುತ್ತಾರೆ.

**ಒಂದು ದಿನದೊಳು ಯೋಗಿವೃಂದದೊಡಗೂಡಿ ಸುಖ ।**
**ದಿಂದೊಪ್ಪುತಿರ್ದೊಡಾ ಗುರುವರೇಣ್ಯನಂ ।**
**ಬಂದು ಕಂಡಾ ತನುಜನಲ್ಲಿ ॥೩॥**

ಟೀಕಾ:- ಒಂದು ದಿನದೊಳು=ಒಂದು ದಿವಸದಲ್ಲಿ, ಯೋಗಿವೃಂದದೊಡಗೂಡಿ=ಮುಮುಕ್ಷು ಮೊದಲಾದವರಿಂದ ಕೂಡಿಕೊಂಡು, ಸುಖದಿಂದ=ಸಂತೋಷದಿಂದ, ಒಪ್ಪುತಿರ್ದೊಡೆ=ಶೋಭಾಯಮಾನರಾಗಿರಲು, ಆ ಗುರುವರೇಣ್ಯನಂ=ಆ ಗುರು ಶ್ರೇಷ್ಠನನ್ನು, ಆ ತನುಜನು=ಉಕ್ತ ಶಿಷ್ಯನು, ಅಲ್ಲಿ=ಸಭೆಯಲ್ಲಿ, ಬಂದು=ನಡೆತಂದು, ಕಂಡ=ನೋಡಿದನು.

**ಎರಡು ಪದವೆರಡು ಕರವೆರಡು ಭುಜವೆದೆನೊಸಲು ।**
**ವೆರಡು ನೆಲ ಸೋಂಕಲಷ್ಟಾಂಗದಿಂ ನಮಿಸಿ ।**
**ಗುರುವರ್ಯ ಕರುಣಿಸೆನೆಗೆಂದ ॥೪॥**

ಟೀಕಾ:- ಎರಡು ಪದವು=ಎರಡು ಪಾದಗಳು, ಎರಡು ಕರವು=ಎರಡು ಕೈಗಳು, ಎರಡು ಭುಜವು=ಎರಡು ಭುಜಗಳು, ಎದೆ=ಹೃದಯ, ನೊಸಲು=ಹಣೆ, ಎರಡು=ಇವೆರಡು, ನೆಲ=ಭೂಮಿಯನ್ನು, ಸೋಂಕಲ್=ಮುಟ್ಟಲು, ಅಷ್ಟಾಂಗದಿಂ=ಎಂಟು ಅವಯವಗಳಿಂದ, ನಮಿಸಿ=ನಮಸ್ಕಾರಮಾಡಿ, ಗುರುವರ್ಯ=ದೇಶಿಕೋತ್ತಮನೇ, ಎನಗೆ=ನನಗೆ, ಕರುಣಿಸು=ಕೃಪೆಮಾಡು, ಎಂದ=ನುಡಿದನು.

**ಮತ್ತೆ ಗುರುಪಾದಮಂ ಪೊತ್ತು ಶಿರದೊಳು ಸುಖಂ ।**
**ಬೆತ್ತು ಕೈಮುಗಿದು ನುತಿಸಿ ನೂರ್ಮಡಿಸಿ ನಲ ।**
**ವೆತ್ತು ಬೆಸಗೊಂಡ ನವನಂದು ॥೫॥**

ಟೀಕಾ:- ಮತ್ತೆ=ಅನಂತರ, ಗುರುಪಾದಮಂ=ಗುರುಚರಣಗಳನ್ನು, ಶಿರದೊಳು=ಮಸ್ತಕದಲ್ಲಿ, ಪೊತ್ತು=ಹೊತ್ತು, ಸುಖಂ=ಸಂತೋಷವನ್ನು, ಬೆತ್ತು=ಹೊಂದಿ, ಕೈಮುಗಿದು=ಎರಡೂ ಕೈಗಳನ್ನು ಜೋಡಿಸಿ, ನುತಿಸಿ=ಸ್ತೋತ್ರಮಾಡಿ, ನೂರ್ಮಡಿಸಿ=ನೂರು ಪಾಲು ಹೆಚ್ಚಿ, ನಲವೆತ್ತು=ಸಂತೋಷವನ್ನು ಹೊಂದಿ, ಅಂದು=ಆ ಕಾಲದಲ್ಲಿ, ಬೆಸಗೊಂಡನು=ಕೇಳಿದನು.

ತಾತ್ಪರ್ಯ:- ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ ಮೊದಲಾದವರಿಂದ ಕೂಡಿಕೊಂಡು, ಉಕ್ತ ಸದ್ಗುರು ಬ್ರಹ್ಮಜಿಜ್ಞಾಸವನ್ನು ಮಾಡುತ್ತಿದ್ದರು. ಒಬ್ಬಾನೊಬ್ಬ ಶಿಷ್ಯನು ತಾಪತ್ರಯಾಗ್ನಿಯಿಂದ ಬೆಂದು, ತನಗೆ ನಿತ್ಯ ಸುಖರೂಪವಾದ ಮೋಕ್ಷವನ್ನು ಕೊಡುವವರು ಎಲ್ಲಿ ದೊರೆಯುವರು. ಯಾರಿರೆ

ಬಹುದೆಂದು ಗುರುಗಳನ್ನು ಶೋಧಮಾಡುತ್ತಾ, ಆ ಬ್ರಹ್ಮಜಿಜ್ಞಾಸವನ್ನು ನಾಡು ವಲ್ಲಿಗೆ ಬಂದನು. ಗುರುಗಳನ್ನು ಕಂಡು; ಎರಡು ಪಾದ, ಎರಡು ಕೈ, ಎರಡು ಭುಜ, ಎದೆ, ಹಣೆ ಈ ಎಂಟು ಅಂಗಗಳು ನೆಲಕ್ಕೆ ಮುಟ್ಟುವಂತೆ, ಸಾಷ್ಟಾಂಗ ನಮಸ್ಕಾರಮಾಡಿದನು. ಹೇ ಗುರುವರ್ಯನೇ! ನನ್ನ ಮೇಲೆ ಕೃಪೆಮಾಡ ಬೇಕೆಂದು ಬೇಡುತ್ತಾ, ಗುರುಗಳ ಪಾದಕಮಲಗಳನ್ನು ತನ್ನ ಶಿರಸ್ಸಿನಲ್ಲಿ ಹೊತ್ತು ಕೊಂಡನು. ಭಕ್ತಿ ಭರದಿಂದ ಕೂಡಿ, ಕೈಗಳನ್ನು ಮುಗಿದು, "ಚೈತನ್ಯ ಶಾಶ್ವತಂ ಶಾಂತಂ" ಎಂಬದಾಗಿ ಗುರುಸ್ತುತಿಯನ್ನು ಮಾಡಿದನು. ನೂರಾರು ಪಾಲು ಹೆಚ್ಚು ಸುಖದಿಂದ ಕೂಡಿ, ಗುರುಗಳನ್ನು ಕುರಿತು ಪ್ರಶ್ನೆಯನ್ನು ಮಾಡು ವಂಥವನಾದನು.

**ಬಳಿಕ,** ಶಿಷ್ಯನು ಗುರುಗಳನ್ನು ಕುರಿತು ಜಗತ್ತಿದು ಏನು? ಎಲ್ಲಿಂದ ಹೇಗೆ ಹುಟ್ಟಿರುತ್ತದೆ? ಹಲವರು ಈ ಜಗತ್ತಿನ ವಿಷಯಕ್ಕೆ ಭಿನ್ನಭಿನ್ನ ಅಭಿಪ್ರಾಯ ಗಳುಳ್ಳವರು ಯಾಕೆ ಆಗಿರುವರು? ಎಂಬದಾಗಿ ಈ ಸೂತ್ರದ ಅಂತ್ಯದವರೆಗೂ ಪ್ರಶ್ನೆಯನ್ನು ಮಾಡುತ್ತಾನೆ.

**ಗುರುವೆ ಬಿನ್ನಪವನವಧರಿಸು ಪಲವಂದದಿಂ ।**
**ದಿರುತಿರ್ಪ ಜಗವಿದೇನೆಲ್ಲಿ ಪುಟ್ಟಿ ಬಂ ।**
**ಧುರವಾಗಿ ತೋರುತಿಹುದೆಂತು ॥೬॥**

**ಟೀಕಾ:-** ಗುರುವೇ=ಸದ್ಗುರುನಾಥನೇ, ಬಿನ್ನಪವನು=ನಾನು ಕೇಳುವ ದನ್ನು, ಅವಧರಿಸು=ಲಕ್ಷಕ್ಕೆ ತಂದುಕೊಳ್ಳಿರಿ, ಪಲವಂದದಿಂದ=ಹಲವು ಪ್ರಕಾರ ವಾಗಿ, ಇರುತಿರ್ಪ=ಇರುತ್ತಿರುವ, ಜಗವಿದೇನು=ಈ ಜಗತ್ತು ಏನಾಗಿರುವದು? ಎಂತು=ಹೇಗೆ, ಎಲ್ಲಿಪುಟ್ಟಿ=ಎಲ್ಲಿಂದ ಹುಟ್ಟಿ, ಬಂಧುರವಾಗಿ=ಸ್ಥಿರವಾಗಿ, ತೋರು ತಿಹುದು=ಕಾಣಿಸುತ್ತಿರುವದು.

**ಕೆಲರಿದಂ ಪುಸಿಯೆಂದು ಕೆಲರಿದಂ ಧಿಟವೆಂದು ।**
**ಕೆಲರಿದಂ ಮೊದಲೊಳಿಹುದರಿದೊಡಿಲ್ಲೆಂದು ।**
**ಕೆಲರಿದಂ ನುಡಿಯುಲರಿದೆಂದು ॥೭॥**

**ಟೀಕಾ:-** ಇದಂ=ಈ ಜಗತ್ತನ್ನು ಕುರಿತು, ಕೆಲರು=ಅಸತ್ಖ್ಯಾತಿಗಳು (ಶೂನ್ಯವಾದಿಗಳು) ಪುಸಿಯೆಂದು=ಸುಳ್ಳಾಗಿರುವುದೆಂದು, ಇದಂ= ಈ ಜಗತ್ತನ್ನು ಕುರಿತು, ಕೆಲರು=ಸತ್ಖ್ಯಾತಿಗಳು (ದ್ವೈತಿಗಳು) ಧಿಟವೆಂದು=ಸತ್ಯವೆಂದು, ಇದಂ= ಜಗತ್ತನ್ನು ಕುರಿತು, ಕೆಲರು=ಅಖ್ಯಾತಿ ಅನ್ಯಥಾ ಖ್ಯಾತಿಗಳು, (ಪೂರ್ವ ಮೀಮಾಂಸಕ ನೈಯಾಯಿಕರು) ಮೊದಲೊಳು=ಅರಿಯುವ ಪೂರ್ವದಲ್ಲಿ,

ಇಹುದು=ಇರುವದು, ಅರಿದೊಡೆ=ತಿಳಿದ ನಂತರ, ಇಲ್ಲೆಂದು=ತೋರುವದಿಲ್ಲೆಂದು, ಇದಂ=ಜಗತ್ತನ್ನು ಲಕ್ಷಿಸಿ, ಕೆಲರು=ಅನಿರ್ವಚನೀಯಖ್ಯಾತಿಗಳು (ವೇದಾಂತಿಗಳು) ನುಡಿಯಲರಿದೆಂದು=ಹೇಳಲಿಕ್ಕೆ ಬಾರದ್ದೆಂದು.

ಬೇರೆ ಬೇರನುಮಾನ ಬೇರೆ ಬೇರೆ ತರ್ಕಂ ।
ಬೇರೆ ಬೇರಾದ ಶಾಸ್ತ್ರಯುಕ್ತಿಗಳಿಂದೆ ।
ಸಾರಿ ಸಂಪಾದಿಸುವರಿಲ್ಲಿ ॥೮॥

ಟೀಕಾ:. ಬೇರೆ ಬೇರೆ=ಭಿನ್ನಗಳಾದ, ಅನುಮಾನ=ಅನುಮಾನ ಪ್ರಮಾಣಗಳಿಂದಲೂ, ಬೇರೆಬೇರೆ=ಭಿನ್ನ ಭಿನ್ನ, ತರ್ಕಂ=ತರ್ಕಗಳಿಂದಲೂ, ಬೇರೆಬೇರಾದ=ಭಿನ್ನಭಿನ್ನಗಳಾದ, ಶಾಸ್ತ್ರಯುಕ್ತಿಗಳಿಂದೆ=ಶಾಸ್ತ್ರಯುಕ್ತಿಗಳಿಂದಲೂ, ಸಾರಿ=ಪ್ರಸಿದ್ಧವಾಗಿ, ಇಲ್ಲಿ=ಈ ಸ್ಥಳದಲ್ಲಿ, ಸಂಪಾದಿಸುವರು=ಪ್ರತಿಪಾದಿಸುತ್ತಿರುವರು.

ಏನೆಂದು ತಿಳಿವೆ ನಾನೇನೆಂದು ನಂಬಿ ಸಂ ।
ಧಾನವಂ ಮಾಳ್ಪೆನಿದನೆ ಸತ್ಯಾರ್ಥನಿಧಿ ।
ನೀನೆ ಗುರುವರ್ಯ ಕರುಣಿಪುದು ॥೯॥

ಟೀಕಾ:- ಆನು=ನಾನು, ಏನೆಂದು=ಯಾವದು ಸತ್ಯವೆಂದು, ತಿಳಿವೆನು=ಅರಿಯಲಿ, ಏನೆಂದು=ಯಾವದೆಂದು, ನಂಬಿ=ವಿಶ್ವಾಸವಿಟ್ಟು, ಸಂಧಾನವಂ=ಚಿಂತನವನ್ನು, ಮಾಳ್ಪೆನು=ಮಾಡಲಿ, ಇದನೆ=ಈ ವಿಷಯವನ್ನೇ, ಸತ್ಯಾರ್ಥನಿಧಿ=ಸತ್ಯವಾದ ಅರ್ಥಗಳಿಗೆ ಸಮುದ್ರಪ್ರಾಯನಾದ, ಗುರುವರ್ಯ=ಗುರುಶ್ರೇಷ್ಠನೇ, ನೀನೇ=ನೀನೆ, ಕರುಣಿಪುದು=ಅನುಗ್ರಹಿಸಬೇಕು.

ತಾತ್ಪರ್ಯ!- ಸದ್ಗುರುನಾಥನೇ! ನಾನು ಮಾಡುವ ಪ್ರಶ್ನೆಗಳನ್ನು ಏಕಾಗ್ರದಿಂದ ಆಲಿಸರಿ. ಏನಂದರೆ? ಈ ದೃಶ್ಯಮಾನವಾಗಿ ತೋರುವಂಥಾ ಜಗತ್ತು ವಿಚಿತ್ರವಾಗಿರುವದು. ಇದೇನು ಬ್ರಹ್ಮರೂಪವೋ ಅಥವಾ ಮಾಯಾಮಯವೊ? ಅಥವಾ ಉಭಯ ರೂಪಾಗಿರುವದೋ? ಮತ್ತು ಈ ಜಗತ್ತು ಪೂರ್ವ ಮೀಮಾಂಸಕರನ್ನುವ ಹಾಗೆ ಕರ್ಮಗಳಿಂದ ಆಗಿರುವದೋ? ನೈಯಾಯಿಕ ವೈಶೇಷಿಕರನ್ನುವಂತೆ ಪರಮಾಣುಗಳಿಂದ ಆಗಿರುವದೋ? ಸಾಂಖ್ಯರು ಹೇಳುವಹಾಗೆ ತ್ರಿಗುಣಾತ್ಮಕ ಪ್ರಕೃತಿಯಿಂದ ಆಗಿರುವದೋ? ಬ್ರಹ್ಮದಿಂದಾಗಿರುವದೋ? ಮಾಯೆಯಿಂದಾಗಿರುವದೋ? ಅಥವಾ ಬ್ರಹ್ಮ ಮಾಯೆ ಎರಡರಗಳ ಸಂಬಂಧದಿಂದ ಆಗಿರುವದೋ? ತನ್ನಿಂದ ತಾನೇ ಆಗಿರುವದೋ? ಅಥವಾ ಯಾರಾದರೂ ಮಾಡಿದರೋ? ಇದರ ಉತ್ಪತ್ತಿಗೆ ಏನಾದರೊಂದು ನಿಮಿತ್ತವುಂಟೋ? ಅಥವಾ ನಿಮಿತ್ತವಿಲ್ಲದಲೆ ಆಗಿರುವದೋ? ಆ

ಜಗತ್ಕರ್ತನು ಸಾವಯುವನೋ, ನಿರವಯುವನೋ? ನಿರವಯುವನಿದ್ದು ಕಾರ್ಯಕ್ಕೆ ಕರ್ತನು ಹೇಗೆ ಆದನು? ಸಾವಯುವನು ಅಂದರೆ? ಯಾವ ಸಾಮಗ್ರಿಗಳಿಂದ ಹೇಗೆ ಮಾಡಿದನು? ಎಂಬದಾಗಿ ಅನೇಕ **ಸಂಶಯುಗಳು** ಉಂಟು.

ಯಾಕಂದರೆ? ಜಗತ್ತು ಬ್ರಹ್ಮರೂಪವು ಅಂದರೆ? ಪ್ರಳಯಾದಿಗಳಲ್ಲಿ ನಾಶವಾಗುತ್ತದೆ. ಆದ್ದರಿಂದ ಬ್ರಹ್ಮರೂಪವಲ್ಲ. ಮಾಯಾಮಯುವಾದರೆ? ಸತ್ಯಬುದ್ಧಿಗೆ ವಿಷಯುವಾದ್ದರಿಂದ ಮಾಯಾಮಯುವೆಂದು ಹೇಳಲಿಕ್ಕೆ ಬರುವದಿಲ್ಲ. ವಿರೋಧಗಳಾದ್ದರಿಂದ ಉಭಯುರೂಪಗಳೆಂದು ಹೇಳಲಿಕ್ಕೆ ಬರುವದಿಲ್ಲ. **ಕರ್ಮ, ಪರಮಾಣು,** ಪ್ರಕೃತಿಗಳು ಜಡವಾದ್ದರಿಂದ ಅವುಗಳಿಂದ ಜಗತ್ತಾಗಲಾರದು. ಚೇತನರೂಪ ಬ್ರಹ್ಮದಿಂದ ಆಗಿರುವದು ಅಂದರೆ? ಅದು ನಿರ್ವಿಕಾರವಾಗಿರುವದು. ಮಾಯೆಯಿಂದ ಅಂದರೆ ಅದು ಸುಳ್ಳಾಗಿರುವದು. ತಮಃ ಪ್ರಕಾಶದಂತೆ ಬ್ರಹ್ಮಮಾಯೆಗಳೆರಡು ವಿರೋಧ ಸ್ವಭಾವವುಳ್ಳವುಗಳಾದ್ದರಿಂದ ಎರಡರಿಂದಲೂ ಜಗತ್ತಾಗಿಲ್ಲ. ಜಗತ್ತು ಕರ್ತನಿಲ್ಲದೆ ಉಪಾದಾನಕಾರಣವಿಲ್ಲದೆ ತನ್ನಿಂದ ತಾನೆ ಉತ್ಪನ್ನವಾಗಲಾರದು. ಮತ್ತು ಹಾಗೆ ಆಗುವದು ಲೋಕಾನುಭವವಿಲ್ಲ. ಯಾವನಾದರೂ ಒಬ್ಬ ಕರ್ತನು ಮಾಡಿರುವನು ಅಂದರೆ? ಆ ಕರ್ತನು ಜೀವನೋ? ಅಥವಾ ಈಶ್ವರನೋ? ಜೀವನು ಅಂದರೆ? ಅವನು ಕಿಂಚಿಜ್ಞನು ಕಿಂಚಿತ್ಕರ್ತನು ಆದ್ದರಿಂದ ಜಗತ್ಕರ್ತನಾಗಲಾರನು. ಈಶ್ವರನು ಅಂದರೆ? ಅವನು ಸಾವಯುವನಾದರೆ ನಮ್ಮಂತೆ ಅನಿತ್ಯನಾಗಬೇಕು. ನಿರವಯುವನಾದರೆ ಅವಯುವಗಳಿಲ್ಲದ್ದರಿಂದ ಕರ್ತನಾಗಲಾರನು. ಒಂದುವೇಳೆ ಕರ್ತನಾದರೂ ನಿಮಿತ್ತಮೂಲಕವಾಗಿರುವನೋ? ಇಲ್ಲವೊ? ನಿಮಿತ್ತದಿಂದ ಕರ್ತನು ಅಂದರೆ? ಈಶ್ವರನಿಗೆ ಸಂಸಾರವು ಪ್ರಾಪ್ತವಾಯಿತು. ನಿಮಿತ್ತ ಇಲ್ಲದಲೆ ಕರ್ತನು ಅಂದರೆ? ರಾಗದ್ವೇಷಾದಿಗಳಿಂದ ದೂಷಿತನಾಗಬೇಕಾಗುವದು. ಹೀಗೆ ನನ್ನಲ್ಲಿ ಅನೇಕ ಸಂಶಯುಗಳು ಬರುವದರಿಂದ ಈ ಜಗತ್ತಿನ ಸ್ವರೂಪವೇನು? ಎಲ್ಲಿಂದ ಹೇಗೆ ಹುಟ್ಟಿರುವದು? ಮತ್ತು ಸ್ಥಿರವಾಗಿರುವದಕ್ಕೆ ಕಾರಣವೇನು? ಅನೇಕರು ಈ ಜಗತ್ತನ್ನು ಕುರಿತು ಭಿನ್ನಾಭಿಪ್ರಾಯುವುಳ್ಳವರಾಗಲಿಕ್ಕೆ ಕಾರಣವೇನು? ಹೇಗಂದರೆ; **ಅಸತ್ಖ್ಯಾತಿಗಳು** ಜಗವು 'ಪುಸಿ' ಸುಳ್ಳು (ಅಸತ್ತು) ಯೆಂದು ಹೇಳುತ್ತಾರೆ. **ಸತ್ಖ್ಯಾತಿಗಳು** ಬ್ರಹ್ಮದಂತೆ ತ್ರಿಕಾಲ ಆಬಾಧ್ಯ ಸತ್ಯವೆಂದು ಹೇಳುತ್ತಾರೆ. **ಆತ್ಮಖ್ಯಾತಿಗಳು** ಜಗತ್ತು ಒಳಗೆ ಬುದ್ಧಿಯುರೂಪಾಗಿದೆ. ಹೊರಗೆ ತೋರುತ್ತದೆಂದು ಹೇಳುವರು. **ಅನ್ಯಥಾ ಖ್ಯಾತಿಗಳು** ಜಗತ್ತು ಸತ್ಯವಾಗಿ ಬೇರೆಯಿದ್ದು ದೋಷದಿಂದ ಪ್ರತ್ಯಕ್ಷವಾಗಿ ತೋರುತ್ತದೆ. ವಿಚಾರ ಮಾಡಿದರೆ ತೋರುವದಿಲ್ಲೆಂದು ಹೇಳುತ್ತಾರೆ. **ಅಖ್ಯಾತಿಗಳು** ಜಗತ್ತು ಸತ್ಯವದೆ. ಎರಡೂ ಜ್ಞಾನಗಳ ವಿವೇಕ ಅಭಾವವಾಗಿದೆ. ಆದ್ದರಿಂದ ಭ್ರಮವೆಂದು ಹೇಳುವರು- ವೇದಾಂತಿಗಳು

ಅನಿರ್ವಚನೀಯವೆಂದು ಹೇಳುತ್ತಾರೆ. ಇಷ್ಟೇ ಅಲ್ಲ, ಅವರು ತಾವು ಹೇಳುವ ಮಾತು ನಿಜವೆಂದು ತೋರಿಸುವದಕ್ಕಾಗಿ, ಬೇರೆ ಬೇರೆ **ಅನುಮಾನ, ಯುಕ್ತಿ, ತರ್ಕ, ಶಾಸ್ತ್ರಗಳಿಂದಲೂ** ಪ್ರಸಿದ್ಧವಾಗಿ ಪ್ರತಿಪಾದಿಸುರು. ಈ ವಿಷಯುವನ್ನು ನಾನು ಹೇಗೆ ತಿಳಿದುಕೊಂಡು ನಿಶ್ಚಯಮಾಡಲಿ. ಸರ್ವಜ್ಞರಾದ ತಾವೇ ಈ ಅರ್ಥವನ್ನು ತಿಳುಹಿಸಬೇಕೆಂದು ಬೇಡಿಕೊಳ್ಳುತ್ತೇನೆ.

## ವಾಚಕರಿಗೆ ಸೂಚನೆ

ವಕ್ಷ್ಯಮಾಣ ಪ್ರಕಾರ ಈ ಖ್ಯಾತಿಗಳ ಮಂಡನ ಖಂಡನ ವಿಷಯಗಳನ್ನು ನೋಡಿದ ಮೇಲೆ, ಅವರ ಪ್ರತಿಯೊಂದು ಮತಗಳಲ್ಲಿ ಹೇಳಿದ ಅನುಮಾನ, ಯುಕ್ತಿ ತರ್ಕಗಳು ಚನ್ನಾಗಿ ಬುದ್ಧಿಯಲ್ಲಿ ಪ್ರವೇಶವಾಗುವ ಪುಟ್ಟಿಗೆ ಷಟ್ ಖ್ಯಾತಿ ವಿಷಯ ಪ್ರದರ್ಶನ ಪತ್ರಿಕೆಯನ್ನು ಕಡೆಯಲ್ಲಿ ಕೊಟ್ಟಿರುತ್ತೇವೆ. ಸುಜ್ಞರು ಅವಲೋಕನವನ್ನು ಮಾಡತಕ್ಕದ್ದು.

## ಶೂನ್ಯವಾದಿಯ ರೀತಿ, ತಾಂತ್ರಿಕ ರೀತಿ, ನ್ಯಾಯವಾಚಸ್ಪತ್ಯಕಾರನ ರೀತಿ ಅಸತ್ಖ್ಯಾತಿಯು ಸಂಕ್ಷೇಪವಾಗಿ ಹೇಳಲ್ಪಡುತ್ತದೆ.

(೧) **ಶೂನ್ಯವಾದಿಯು** ನಾಸ್ತಿಕನಾಗಿದ್ದು ಅಸತ್ಖ್ಯಾತಿಯನ್ನು ಅಂಗೀಕಾರ ಮಾಡಿದ್ದಾನೆ. ಇವನ ಮತದಲ್ಲಿ ಅಸತ್ ಅಧಿಷ್ಠಾನದಲ್ಲಿ ರಜತವು ಅಸತ್ತಾಗಿರುತ್ತದೆ. ನಿರಧಿಷ್ಠಾನದಲ್ಲಿ ಭ್ರಮವನ್ನು ಸ್ವೀಕಾರ ಮಾಡಿದ್ದಾನೆ. ಆದ್ದರಿಂದ ಜ್ಞಾತಾಜ್ಞಾನಗಳಾದರೂ ಅಸತ್ತಾಗಿವೆ. ಇವನ ಹೇಳುವಿಕೆಯು ಶಾಸ್ತ್ರಕ್ಕೂ ಅನುಭವಕ್ಕೂ ವಿರೋಧವಾಗಿರುತ್ತದೆ. ಒಂದು ಶೂನ್ಯವುಂಟು. ಬೇರೆಯೇನೂ ಇಲ್ಲವೆಂದು ಹೇಳಿದರೆ, ಯಾವದೊಂದು ವ್ಯವಹಾರವು ನಡಿಯ ಬಾರದಾಗಿತ್ತು. ಶೂನ್ಯಕ್ಕೆ ವಿಲಕ್ಷಣವಾಗಿ ಬೇರೊಂದು ವಿಶೇಷವನ್ನು ಅಂಗೀ ಕರಿಸಿದರೆ, ಶೂನ್ಯವಾದವು ಹಾನಿಯಾಗುವದು. ಅಂಗೀಕರಿಸದಿದ್ದರೆ ವ್ಯವಹಾರ ಲೋಪವಾಗುತ್ತದೆ. ಅದ್ದರಿಂದ **ಶೂನ್ಯವಾದ** ಸಂಭವಿಸುವದಿಲ್ಲ.

(೨) ಯಾವನೋ ಒಬ್ಬ ತಾಂತ್ರಿಕನ ರೀತಿ ಅಸತ್ಖ್ಯಾತಿಯು ಹೀಗುಂಟು. ಹೇಗಂದರೆ, ವ್ಯಾವಹಾರಿಕ ಶುಕ್ತಿ ದೇಶದಲ್ಲಿ ಅಸತ್ ರಜತದ ಪ್ರತೀತಿಯು ಆಗುತ್ತದೆ. ಇದು ಸರ್ವ ಮತವಾದಿಗಳ ಅಭಿಪ್ರಾಯಕ್ಕೆ ವಿಲಕ್ಷಣ ವಾಗಿದೆ. ಹೇಗಂದರೆ, ವ್ಯಾವಹಾರಿಕ ರಜತವು ಈ ಶುಕ್ತಿ ದೇಶದಲ್ಲಿ ಸಂಬಂಧವಿಲ್ಲ. ಅನ್ಯಥಾ ಅಖ್ಯಾತಿ ರೀತಿಯಂತೆ ರಜತತ್ವದ ಪ್ರತೀತಿಯಾಗಿಲ್ಲ. ಅನಿರ್ವಚನೀಯ ಖ್ಯಾತಿಯಂತೆ ರಜತ ಉತ್ಪತ್ತಿಯಾಗಿಲ್ಲ. ಅಖ್ಯಾತಿಯಂತೆ ಎರಡು ಜ್ಞಾನಗಳಿಲ್ಲ. **ಶೂನ್ಯವಾದಿಯಂತೆ** ಶುಕ್ತಿ, ಜ್ಞಾತಾ, ಜ್ಞಾನಗಳು ಅಸತ್ತಲ್ಲ. **ಕಿಂತು;**

ಶುಕ್ತಿಜ್ಞಾನ ಮತ್ತು ಜ್ಞಾತಾ ಇವೆರಡು ಸತ್ಯಗಳಾಗಿರುತ್ತವೆ. ದೋಷ ಸಹಿತವಾದ ನೇತ್ರವು ಶುಕ್ತಿಗೆ ಸಂಬಂಧವಾದ್ದರಿಂದ ಅಸತ್ ರಜತದ ಪ್ರತೀತಿಯು ಭ್ರಮ ಆಗಿದೆ. ಈ ಭ್ರಮಜ್ಞಾನಕ್ಕೆ ವಿಷಯವು ಶುಕ್ತಿಯಾಗಿಲ್ಲ. ಆಗಿದ್ದರೆ 'ಇದು ಶುಕ್ತಿಯೆಂಬಜ್ಞಾನವಾಗಬೇಕಾಗಿತ್ತು. ಯಾವ ಶುಕ್ತಿತ್ವರೂಪ ವಿಶೇಷ ಧರ್ಮವು ಪ್ರತೀತಿಯಾಗಿಲ್ಲ. ಆಗಿದ್ದರೆ, ಸಾಮಾನ್ಯ ಅಂಶದ 'ಇದು' ಎಂಬ ಇಷ್ಟೇ ಜ್ಞಾನ ವಾಗಬೇಕಾಗಿತ್ತು. ಆದ್ದರಿಂದ ಭ್ರಮಜ್ಞಾನಕ್ಕೆ ವಿಷಯವು ಶುಕ್ತಿಯಲ್ಲ. ಅದರಂತೆ ಭ್ರಮಜ್ಞಾನಕ್ಕೆ ವಿಷಯವು ರಜತವೂ ಅಲ್ಲ. ಯಾಕಂದರೆ ಸಮ್ಮುಖ ದೇಶದಲ್ಲಿ ರಜತವು ಇಲ್ಲವೇ ಇಲ್ಲ. ಶುಕ್ತಿ ಜ್ಞಾನೋತ್ತರ ಕಾಲದಲ್ಲಿ ಕಾಲತ್ರಯದಲ್ಲಿಯೂ ರಜತವಿಲ್ಲೆಂದು ಪ್ರತೀತಿಯಾಗುತ್ತದೆ. ಅದರಿಂದ ರಜತ ಭ್ರಮವು ನಿರ್ವಿಷಯಕ ವಾದ್ದರಿಂದ ಅಸದ್ಗೋಚರವಾಗಿರುತ್ತದೆ. ಅದರಿಂದ ಅಸತ್ಖ್ಯಾತಿಯೆಂದು ಹೇಳಲ್ಪಡುತ್ತದೆ.

(೩) **ನ್ಯಾಯವಾಚಸ್ಪತ್ಯಕಾರನ** ರೀತಿ:-ಅಸತ್ಖ್ಯಾತಿವಾದವು ವಕ್ಷ್ಯಮಾಣ ರೀತಿಯಿರುತ್ತದೆ. ಹೇಗಂದರೆ, ಶುಕ್ತಿಗೂ ನೇತ್ರಕ್ಕೂ ಸಂಬಂಧವಾಗುವದರಿಂದ ರಜತ ಭ್ರಮವಾಗುತ್ತದೆ. ಆದ್ದರಿಂದ ರಜತ ಭ್ರಮಕ್ಕೆ ವಿಷಯವು ಶುಕ್ತಿಯಾಗಿರು ತ್ತದೆ. ಪರಂತು ಶುಕ್ತಿಯಲ್ಲಿ ಶುಕ್ತಿತ್ವ ಮತ್ತು ಶುಕ್ತಿತ್ವದ ಸಮವಾಯ ಇವೆರಡೂ ತೋರುವದಿಲ್ಲ. ಕಿಂತು ಶುಕ್ತಿಯಲ್ಲಿ ರಜತತ್ವದ ಸಮವಾಯವು ತೋರುತ್ತದೆ. ರಜತತ್ವದ ಸಮವಾಯುವು ಶುಕ್ತಿಯಲ್ಲಿ ಇಲ್ಲವೇ ಇಲ್ಲ ಅಸತ್ತಾಗಿರುತ್ತದೆ. ಅಂದರೆ, ರಜತತ್ವ ಪ್ರತಿಯೋಗಿಯ ಶುಕ್ತಿಯ ಅನುಯೋಗಿಯ **ಸಂಬಂಧವು** ಅಸತ್ಖ್ಯಾತಿಯೆಂದು ಹೇಳಲ್ಪಡುತ್ತದೆ. ಅರ್ಥಾತ್ ಇವನು ಎರಡು ರೀತಿ ಅಸತ್ಖ್ಯಾತಿಯನ್ನು ಹೇಳಿದ್ದಾನೆ. ಶುಕ್ತಿ ಅಧಿಷ್ಠಾನದಲ್ಲಿ ಅಸತ್ ರಜತದ ಪ್ರತೀತಿಯೊಂದು. ಎರಡನೆಯದು ಶುಕ್ತಿಯಲ್ಲಿ ಅಸತ್ ರಜತತ್ವ ಸಮವಾಯದ ಪ್ರತೀತಿಯಾಗಿರುವಿಕೆಯು.

## ಎರಡು ಅಸತ್ಖ್ಯಾತಿವಾದಿಗಳ ಖಂಡನವು.

ಮೊದಲನೇ ಶೂನ್ಯವಾದಿಯ ಅಸತ್ಖ್ಯಾತಿಯು ಆವನ ಮತ ಪ್ರತಿಪಾದನ ದಲ್ಲಿಯೇ **ಖಂಡಿಸಲ್ಪಟ್ಟಿರುತ್ತದೆ.** ಎರಡು ಮೂರು ನಂಬರಿನ ಅಸತ್ಖ್ಯಾತಿ ಗಳಾದರೂ ಅಸಂಗತಗಳಾಗಿರುತ್ತವೆ. ಯಾವನು ಅಸತ್ಖ್ಯಾತಿಯನ್ನು ಅಂಗೀ ಕರಿಸಿರುವನೋ ಅವನನ್ನು ಕುರಿತು ಹೀಗೆ ಕೇಳತಕ್ಕದ್ದು. ಏನಂದರೆ? ಅಸತ್ಖ್ಯಾತಿ ಅಂದರೆ ಅಬಾಧ್ಯ ವಿಲಕ್ಷಣವಾದದ್ದು ಅಸತ್ ಶಬ್ದಕ್ಕೆ ಅರ್ಥವೋ? ಅಥವಾ ಅಸತ್ ಶಬ್ದದ ಅರ್ಥವು ನಿಃಸ್ವರೂಪವಾಗಿರುವದೋ? ಎರಡನೇ ಪಕ್ಷವನ್ನಂಗೀಕರಿಸಿದರೆ, ನನ್ನ ಮುಖದಲ್ಲಿ ನಾಲಿಗಿಲ್ಲೆಂಬ ವಾಕ್ಯದಂತೆ, ಅಸತ್





ಖ್ಯಾತಿಯ ವಾದದ ಅಂಗೀಕಾರವು ನಿರ್ಲಜ್ಜತನವಾಗಿರುತ್ತದೆ. ಯಾಕಂದರೆ, ಸತ್ತಾ ಸ್ಫೂರ್ತಿ ರಹಿತವಾದದ್ದಕ್ಕೆ ನಿಃಸ್ವರೂಪವೆಂದು ಹೇಳುತ್ತಾರೆ. ಸತ್ತಾ ಸ್ಫೂರ್ತಿಶೂನ್ಯವಾಗಿಯೂ ಪ್ರತೀತಿಯಾಗುತ್ತದೆಂದು ಹೇಳುವದು ವಿರುದ್ಧ ವಾಗಿರುತ್ತದೆ. ಮೊದಲನೇ ಪಕ್ಷವನ್ನು ಅಂಗೀಕರಿಸಿದರೆ, ಅಬಾಧ್ಯ ವಿಲಕ್ಷಣ ವಾದದ್ದು ಬಾಧ್ಯವಾಗಿರುತ್ತದೆ. ಬಾಧಾ ಹೊಂದಲಿಕ್ಕೆ ಯೋಗ್ಯವಾದದ್ದಕ್ಕೆ ಬಾಧ್ಯವೆಂದು ಹೇಳುತ್ತಾರೆ. ಈ ರೀತಿಯಿಂದ ಬಾಧಾ ಹೊಂದಲಿಕ್ಕೆ ಯೋಗ್ಯ ವಾದದ್ದಕ್ಕೆ ಅಸತ್ಖ್ಯಾತಿಯೆಂದು ಹೇಳಿದರೆ, ಅದು ಸಿದ್ಧಾಂತಿಯ ಮತವೇ ಆಯಿತು. ಯಾಕಂದರೆ, ಅನಿರ್ವಚನೀಯ ಸಿದ್ಧಾಂತದಲ್ಲಿ ಬಾಧಾ ಯೋಗ್ಯ ವಾದದ್ದು ಅನಿರ್ವಚನೀಯವೆಂದು ಹೇಳಿದ್ದಾರೆ. ಆದ್ದರಿಂದ ಸಿದ್ಧಾಂತಕ್ಕಿಂತಲೂ ವಿಲಕ್ಷಣವಾದದ್ದು ಅಸತ್ಖ್ಯಾತಿಯೆಂದು ಹೇಳುವದು ಸಂಭವಿಸುವದಿಲ್ಲ. ಆದ್ದ ರಿಂದ ಅಸತ್ಖ್ಯಾತಿಯ ವಾದವು ಅಯೋಗ್ಯವಾಗಿರುತ್ತದೆ.

## ವಿಜ್ಞಾನವಾದಿ ಆತ್ಮಖ್ಯಾತಿಯ ರೀತಿಯು ಹೇಳಲ್ಪಡುತ್ತದೆ.

(೧) ಕ್ಷಣಿಕ ವಿಜ್ಞಾನವೇ ಆತ್ಮನೆಂದು ಹೇಳುವ ವಿಜ್ಞಾನವಾದಿ ಮತದಲ್ಲಿ ರಜತವು ಆತ್ಮನ ಧರ್ಮವಾಗಿ ಅಂತರದಲ್ಲಿರುತ್ತದೆ. ಅದು ದೋಷ ಮೂಲಕವಾಗಿ ಹೊರಗೆ ತೋರುತ್ತದೆ. ಅದಕ್ಕೆ ಅಧಿಷ್ಠಾನನು ವಿಜ್ಞಾನರೂಪ ಆತ್ಮನಾಗಿರು ವನು. ಜ್ಞಾನದಿಂದ ರಜತವು ಸ್ವರೂಪತಃ ನಾಶವಾಗುವದಿಲ್ಲ. ಕಿಂತು ರಜತದ ಹೊರಗಿರುವತನವು ನಾಶವಾಗುತ್ತದೆ. ಈ ಮತದಲ್ಲಿ ರಜತವು ಅಂತರದಲ್ಲಿ ಸತ್ಯ ವಾಗಿರುತ್ತದೆ. ಬಾಹ್ಯ ದೇಶದಲ್ಲಿ ಪ್ರತೀತಿಯು ಭ್ರಮವಾಗಿರುತ್ತದೆ.

ಈ ಪ್ರಕಾರ ಈ ದೃಶ್ಯವಾಗಿ ಕಾಣುವ ಜಗತ್ತೂ ಅಂತರದಲ್ಲಿರುವ ವಿಜ್ಞಾ ನಾತ್ಮನ ರೂಪಾಗಿರುತ್ತದೆ. ಒಳಗಿರುವ ಜಗತ್ತು ದೋಷ ಮೂಲಕ ಹೊರಗೆ ತೋರುತ್ತದೆ. ಇದಕ್ಕೆ ಅಧಿಷ್ಠಾನನು ವಿಜ್ಞಾನ ರೂಪ ಆತ್ಮನೇ ಆಗಿರುವನು. ಈ ಆತ್ಮನ ಜ್ಞಾನದಿಂದ ಜಗತ್ತು ಅತ್ಯಂತ ನಿವೃತ್ತಿಯಾಗುವದಿಲ್ಲ. ಕಿಂತು ಹೊರಗೆ ಪ್ರತೀತಿಯಾಗಿ ತೋರುವದು ಮಾತ್ರ ನಿವೃತ್ತಿಯಾಗುತ್ತದೆ ಜಗತ್ತು ಅಂತರದಲ್ಲಿರುವ ವಿಜ್ಞಾನಾತ್ಮನ ರೂಪಾಗಿ ಸತ್ಯವಾಗಿರುತ್ತದೆ. ಹೊರಗೆ ಪ್ರತೀತಿ ಯಾಗಿ ಕಾಣುವದು ಮಾತ್ರ ಭ್ರಮವಾಗಿರುತ್ತದೆಂದು ಹೇಳುವನು.

## ಉಕ್ತ ಆತ್ಮಖ್ಯಾತಿ ಮತಖಂಡನ.

ರಜತವು ಒಳಗಿರುವದೆಂದು ಯಾರಿಗೂ ಅನುಭವವಿಲ್ಲದ್ದರಿಂದ ಈ ಮತವು ಸಮೀಚೀನವಲ್ಲ. ಸುಖಾದಿಗಳು ಒಳಗುಂಟು. ರಜತಾದಿಗಳು ಹೊರಗುಂಟು. ಎಂಬುದು ಸರ್ವಾನುಭವಸಿದ್ಧವದೆ. ರಜತವು ಒಳಗುಂಟೆಂಬುದು ಯಾವ

ಪ್ರಮಾಣ ಯುಕ್ತಿ ಅನುಭವಗಳು ಇಲ್ಲ. ಆದ್ದರಿಂದ ಆಂತರ ರಜತವು ಹೊರಗೆ ತೋರುತ್ತದೆಂಬುದು ಅಸಂಗತವಾಗಿರುತ್ತದೆ. ಇಷ್ಟೇ ಇಲ್ಲ. ಅನೇಕ ದೋಷ ಗಳೂ ಉಂಟು. ತನ್ನ ಬುದ್ಧಿಯಲ್ಲಿಯೇ ರಜತವಿದ್ದರೆ ಹೊರಗೆ ಯಾರೂ ಪ್ರಯತ್ನ ಮಾಡಬಾರದಾಗಿತ್ತು. ಗುಲಗಂಜಿ ಗುಂಪಿನಲ್ಲಿ ಅಗ್ನಿ ಬುದ್ಧಿಯಾಗಲು ದೇಹವು ಸುಟ್ಟುಹೋಗಬೇಕಾದೀತು. ಹೀಗೆ ಎಲ್ಲಿಯೂ ಆಗದ್ದರಿಂದ ಈ ಮತವು ಲೋಕಾನುಭವಕ್ಕೆ ವಿರೋಧವಾದ್ದರಿಂದ ತ್ಯಾಗಮಾಡಲಿಕ್ಕೆ ಯೋಗ್ಯವಾಗಿದೆ.

## ಬಾಹ್ಯ ಪದಾರ್ಥವಾದಿಗಳಾದ ಸೌಗತರಿಬ್ಬರ ಆತ್ಮಖ್ಯಾತಿಯು ಹೇಳಲ್ಪಡುತ್ತದೆ.

ಒಬ್ಬನು ಬಾಹ್ಯಪದಾರ್ಥವು **ಅನುಮೇಯವೆಂದು** ಹೇಳುತ್ತಾನೆ. ಮತ್ತೊಬ್ಬನು ಪ್ರತ್ಯಕ್ಷವೆಂದು ಹೇಳುತ್ತಾನೆ. ಭ್ರಮಸ್ಥಳದಲ್ಲಿ ಬಾಹ್ಯ ರಜತವನ್ನು ಅಂಗೀಕರಿಸುವದರಿಂದ ಪ್ರಯೋಜನವಿಲ್ಲ. ಯಾಕಂದರೆ, ಅದರಿಂದ ಕಟಕಾದಿ ಆಭರಣಗಳ ಸಿದ್ಧಿಯು ಆಗುವದಿಲ್ಲ. ಕೇವಲ ಪ್ರತೀತಿ ಮಾತ್ರವಾಗಿರುತ್ತದೆ. ವಿಷಯವಿಲ್ಲದೆ ಪ್ರತೀತಿಯಾಗಲಾರದು. ಭ್ರಮ ಪ್ರತೀತಿಗೆ ವಿಷಯವಾದ ರಜತವೇ ಫಲವಾಗಿರುತ್ತದೆ. ಯಥಾರ್ಥ ಜ್ಞಾನಕ್ಕೆ ವಿಷಯವಾದ ರಜತವು ಸಮ್ಮುಖದಲ್ಲಿ ರುತ್ತದೆ. ಭ್ರಮಜ್ಞಾನಕ್ಕೆ ವಿಷಯವಾದ ರಜತವು ಅಂತರದಲ್ಲಿರುತ್ತದೆ. ಈ ರೀತಿ ಬಾಹ್ಯತ್ವ ಆಂತರತ್ವ ವಿಷಯದ ವಿಲಕ್ಷಣತೆಯಿಂದ ಯಥಾರ್ಥ ಅಯಥಾರ್ಥಗಳ ಭೇದ ಜ್ಞಾನವಾಗುತ್ತದೆ.

## ಉಕ್ತ ಆತ್ಮಖ್ಯಾತಿಮತ ಖಂಡನ

**ಅಂದರೆ,** ಇವರು ಹೊರಗೆ ಜಗತ್ತನ್ನು ಒಪ್ಪಿರುತ್ತಾರೆ. ಆದರೆ ಭ್ರಮಸ್ಥಳ ಗಳಲ್ಲಿ ಮಾತ್ರ ರಜತವು ಅಂತರದಲ್ಲಿರುತ್ತದೆಂದು ಅಂಗೀಕರಿಸಿದ್ದಾರೆ. ಆದ್ದರಿಂದ ಈ ಆತ್ಮಖ್ಯಾತಿ ವಾದವು **ಅಸಂಗತವಾಗಿದೆ,** ಯಾಕಂದರೆ, ರಜತಾದಿ ಪದಾರ್ಥ ಗಳು ಸ್ವಪ್ನದ ವ್ಯತಿರಿಕ್ತ ಜಾಗ್ರತದಲ್ಲಿ ಅಂತರವಿರುವದು ಅಪ್ರಸಿದ್ಧವಿರುತ್ತದೆ. ಅಂತರದಲ್ಲಿದ್ದರೆ, **'ಮಯಿರಜತಂ'** **'ಅಹಂರಜತಂ'** ನನ್ನಲ್ಲಿ ರಜತವುಂಟು. ನಾನು ರಜತನು. ಹೀಗೆ ಪ್ರತೀತಿಯಾಗಬೇಕಾಗಿತ್ತು. ಮತ್ತು ಶುಕ್ತಿಜ್ಞಾನೋತ್ತರ ಕಾಲದಲ್ಲಿ ಮಿಥ್ಯಾರಜತವು ನನಗೆ ಪ್ರತೀತಿಯಾಗಿತ್ತೆಂದು ಸರ್ವರಿಗೂ ಅನುಭವ ವಾಗುವದು. ಆತ್ಮಖ್ಯಾತಿಯ ಮತಾನುಸಾರ ರಜತದಲ್ಲಿ ಮಿಥ್ಯಾ ಬಾಹ್ಯತ್ವ ಪ್ರತೀತಿಯಾಯಿತು ಎಂದು ಅನುಭವವಾಗಬೇಕು. ಮತ್ತು ಆಪ್ತ ಪುರುಷನಾದರೂ ಆತ್ಮ ಖ್ಯಾತಿಯ ರೀತಿಪ್ರಕಾರ **"ನಾತ್ರರಜತಂ ಕಿಂತು ತೆ ಆತ್ಮನಿ ರಜತಂ"** ಇಲ್ಲಿ ರಜತವಿಲ್ಲ. ಕಿಂತು ನಿನ್ನಾತ್ಮದಲ್ಲಿ ರಜತವಿರುತ್ತದೆಂದು ಹೇಳಬೇಕು. ಹೇಳುವದಿಲ್ಲ.

ಮತ್ತು ಸರ್ವ ಬಾಹ್ಯ ಆಂತರ ಪದಾರ್ಥಗಳು ವಿಜ್ಞಾನಾತ್ಮನರೂಪಾಗಿರುತ್ತ ವೆಂದು ಹೇಳುವನು. ಆ ವಿಜ್ಞಾನವು ಕ್ಷಣಿಕವಾಗಿರುವುದೆಂದು ಹೇಳುವನು. ಅದ ರಿಂದ ಪ್ರತ್ಯಭಿಜ್ಞಾ ಅಸಂಭವಾದಿಕ ಅನಂತ ದೋಷಗಳು ಬರುತ್ತವೆ. ಆದ್ದರಿಂದ ಈ ಮತವಾದರೂ ಅಸಂಗತವಾಗಿದೆ.

## ದ್ವೈತವಾದಿಯ ಸತ್ಖ್ಯಾತಿ ರೀತಿಯು ಸಂಕ್ಷೇಪವಾಗಿ ಹೇಳಲ್ಪಡುತ್ತದೆ.

(೧) ಶುಕ್ತಿಯ ಅವಯವಗಳೊಡನೆ ರಜತದ ಅವಯವಗಳು ಯಾವಾಗಲೂ ಉಂಟು. ದೋಷಸಹಿತ ನೇತ್ರಸಂಬಂಧದಿಂದ ಸತ್ಯ ರಜತವು ಉತ್ಪನ್ನವಾಗು ತ್ತದೆ. ಶುಕ್ತಿ ಜ್ಞಾನದಿಂದ ಸತ್ಯರಜತವು ತನ್ನ ಅವಯವಗಳಲ್ಲಿ ನಾಶವಾಗುತ್ತದೆ.

(೨) ಶುಕ್ತಿಯಲ್ಲಿ ರಜತದ ಅವಯವಗಳು ಮಹತ್ ಪರಿಣಾಮ ಶೂನ್ಯ ಗಳಾದ್ದರಿಂದ ಇದ್ದರೂ ಪ್ರತ್ಯಕ್ಷವಾಗಿ ತೋರುವದಿಲ್ಲ.

(೩) ರಜತದ ನಿವೃತ್ತಿಯಲ್ಲಿ ಶುಕ್ತಿಜ್ಞಾನವೇ ಬೇಕೆಂಬ ನಿಯಮವಿಲ್ಲ. ಅನ್ಯ ವಸ್ತುಗಳ ಜ್ಞಾನದಿಂದಲೂ ಅಥವಾ ರಜತಜ್ಞಾನದ ಅಭಾವದಿಂದಲೂ ರಜತದ ನಿವೃತ್ತಿಯು ಸಂಭವಿಸುತ್ತದೆ. ಆದ್ದರಿಂದ ರಜತಜ್ಞಾನದ ಸಮಕಾಲದಲ್ಲಿ ಸತ್ಯ ವಾದ ವ್ಯಾವಹಾರಿಕ ರಜತವು ತೋರುತ್ತದೆ.

ಈ ಪ್ರಕಾರ ಪರಮಾತ್ಮನಲ್ಲಿ ಜಗತ್ತು ಯಾವಾಗಲೂ ಸತ್ಯವುಂಟು. ಅಂದರೆ ಪರಮಾತ್ಮನು ಹೇಗೆ ಪಾರಮಾರ್ಥಿಕನಾಗಿರುವನೋ, ಹಾಗೇ ಜಗತ್ತಾದರೂ ಪಾರಮಾರ್ಥಿಕವಾಗಿರುತ್ತದೆ. ಆದರೂ ಪರಮಾತ್ಮನು ಮಾಯಾಶಕ್ತಿಯಿಂದ ಆವಿರ್ಭಾವ ತಿರೋಭಾವ ಅಂದರೆ ಸೃಷ್ಟಿ ಪ್ರಳಯಾದಿಗಳನ್ನು ಮಾಡುತ್ತಾನೆ. ಈ ಜಗತ್ತು ಪ್ರಳಯಕಾಲಕ್ಕೆ ಮಾಯೆಯಲ್ಲಿ ಸಂಸ್ಕಾರದಿಂದಿದ್ದು, ಪುನಸ್ಸೃಷ್ಟಿಯಲ್ಲಿ ಪ್ರಕಟವಾಗುತ್ತದೆ. ಆದ್ದರಿಂದ **ಸತ್ಯವಾಗಿದೆ.** ಇದರ ನಾಶಕ್ಕೆ ಪರಮಾತ್ಮನ ಜ್ಞಾನವೇ ಬೇಕೆಂಬ ನಿಯಮವಿಲ್ಲ. ಕಿಂತು ಭಕ್ತಿಯಿಂದ ಪರಮಾತ್ಮನಲ್ಲಿ ಚಿತ್ತೈಕಾಗ್ರತೆಯನ್ನು ಮಾಡಿದರೆ ಸಾಕು. ಜಗತ್ತು ಅಭಾವವಾಗುತ್ತದೆ. ಅಥವಾ ಬೇರೊಂದು ವಸ್ತುವಿನ ಜ್ಞಾನದಿಂದಾಗಲಿ ಜಗತ್ತಿನ ಜ್ಞಾನದ ಅಭಾವದಿಂದಾದರೂ ಆಗಬಹುದು. ಜಗತ್ತಿನ ಜ್ಞಾನದ ನಿವೃತ್ತಿ ಉತ್ತರ ಕ್ಷಣದಲ್ಲಿ ಜಗತ್ತು ನಿವೃತ್ತಿ ಯಾಗುತ್ತದೆ. ಆದರೂ ಜ್ಞಾನಸಮಕಾಲದಲ್ಲಿ ತೋರುವದರಿಂದ ಸತ್ಯವದೆ.

## ದ್ವೈತವಾದಿ ಸತ್ಖ್ಯಾತಿ ರೀತಿಯ ಖಂಡನವು

(೧) ಶುಕ್ತಿಯಲ್ಲಿ ವ್ಯಾವಹಾರಿಕ ರಜತದ ಉತ್ಪತ್ತಿಯು ಪ್ರಸಿದ್ಧ ವ್ಯಾವ ಹಾರಿಕ ಸಾಮಗ್ರಿಯಿಲ್ಲದ ವಿನಾ ಸಂಭವಿಸಲಾರದು. ಶುಕ್ತಿ ದೇಶದಲ್ಲಿ ಪ್ರಸಿದ್ಧ

ರಜತೋತ್ಪತ್ತಿಯು ಸಾಮಗ್ರಿಯು ಇಲ್ಲವೇ ಇಲ್ಲ. ಆದ್ದರಿಂದ ಸತ್ಯವಾದ ರಜತದ ಉತ್ಪತ್ತಿಯು ಸಂಭವಿಸುವದಿಲ್ಲ. ಸಂಭವಿಸುತ್ತದೆಂದು ಹೇಳಿದರೆ? ರಜತ ಭ್ರಮ ಕಾಲದಲ್ಲಿ ಅಗ್ನಿಯ ಸಂಯೋಗವನ್ನು ಮಾಡಲು, ಶುಕ್ತಿಯು ಬೂದಿಯಾಗಿ ಅದರಲ್ಲಿ ಬೆಳ್ಳಿಯು ದೊರೆಯಬೇಕು. ಬೆಳ್ಳಿಯು ತೈಜಸ ದ್ರವ್ಯವಿದ್ದದರಿಂದ ಬೆಂಕಿಯಿಂದ ನಾಶವಾಗುವದಿಲ್ಲ. ಕಿಂತು ಗಂಧಕಾದಿ ದ್ರವ್ಯಗಳಿಂದ ನಾಶವಾಗುತ್ತದೆ. ಭ್ರಮಸ್ಥಳದಲ್ಲಿ ತೋರುವ ಪದಾರ್ಥವು ಸತ್ಯವೆಂದೊಪ್ಪಿದರೆ; ಬೆಂಕಿಯಿಂದ ಕೂಡಿದ ಸೌಳುಭೂಮಿಯಲ್ಲಿ ಜಲಭ್ರಾಂತಿಯಾಗಲು, ಆ ಬೆಂಕಿಯು ಶಾಂತವಾಗಬೇಕು. ಅರಳಿ ಅಂಡಿಗಿಯಮೇಲೆ ಇರುವ ಗುಲಗಂಜಿ ಗುಂಪಿನಲ್ಲಿ ಅಗ್ನಿ ಭ್ರಮವಾಗಲು; ಅರಳೆಯು ಸುಟ್ಟು ಹೋಗಬೇಕು. ಹೀಗೆ ಲೋಕಾನುಭವವು ಎಲ್ಲಿಯೂ ಇಲ್ಲದ್ದರಿಂದ, ಹೀಗೆ ಭ್ರಮ ಸ್ಥಳಗಳಗಲ್ಲಿ ಸತ್ಯ ಪದಾರ್ಥಗಳನ್ನು ಹೇಳುವದು **ಹಾಸ್ಯಕ್ಕೆ** ಕಾರಣವಾಗಿರುತ್ತದೆ. ಆದ್ದರಿಂದ **ಸತ್ಖ್ಯಾತಿವಾದವು** ಅಸಂಗತವಾಗಿದೆ.

(೨) ರಜತ ಅವಯವಗಳಲ್ಲಿ ಮಹತ್ ಪರಿಣಾಮದ ಅಭಾವವನ್ನು ಹೇಳಿದರೆ, ಅದೊಂದು ರೀತಿಯಿಂದ ಸಂಭವಿಸಬಹುದು. ಪರಂತು ಹುತ್ತಿನಲ್ಲಿ ಘಟದ ಭ್ರಮವಾದರೆ, ಅಲ್ಲಿ ಘಟದ ಅವಯವಗಳಾದ ಕಪಾಲಗಳು ಇರಲಿಕ್ಕೇಬೇಕು. ಸ್ಥಾಣುವಿನಲ್ಲಿ ಪುರುಷಭ್ರಮವಾದರೆ; ಅಲ್ಲಿ ಪುರುಷನ ಅವಯವಗಳಾದ ಕೈಕಾಲುಗಳು ಇರಲಿಕ್ಕೇಬೇಕು. ಕಪಾಲ ಮತ್ತು ಹಸ್ತಪಾದಾದಿಗಳು **ಮಹತ್ವಶೂನ್ಯಗಳೆಂದು** ಹೇಳಲಿಕ್ಕೆ ಬರುವದಿಲ್ಲ.

ರಜತತ್ವ ಜಾತಿಯು ಅಣುಸಾಧಾರಣವದೆ. ಆದ್ದರಿಂದ ಸೂಕ್ಷ್ಮ ಅವಯವಗಳಲ್ಲಿಯಾದರೂ ರಜತ ವ್ಯವಹಾರವು ಸಂಭವಿಸುತ್ತದೆ. ಘಟತ್ವ, ಕಪಾಲತ್ವ, ಹಸ್ತಪಾದತ್ವ, ಪುರುಷತ್ವಾದಿ ಜಾತಿಗಳು ಮಹಾನ್ ಅವಯವಗಳಲ್ಲಿರುತ್ತವೆ. ಸೂಕ್ಷ್ಮ ಅವಯವಗಳಲ್ಲಿ ಕಪಾಲತ್ವಾದಿಕ ಜಾತಿಗಳು ಸಂಭವಿಸುವದಿಲ್ಲ. ಆದ್ದರಿಂದ ಭ್ರಮದ ಅಧಿಷ್ಠಾನ ದೇಶದಲ್ಲಿ ಆರೋಪಿತ ವ್ಯಾವಹಾರಿಕ ಅವಯವಗಳು ಇದ್ದರೆ, ಅವುಗಳ ಪ್ರತೀತಿಯಾಗಬೇಕಾಗಿತ್ತು ಆದ್ದರಿಂದ ವ್ಯಾವಹಾರಿಕ ಅವಯವಗಳಲ್ಲಿ ರಜತಾದಿಗಳ ಉತ್ಪತ್ತಿಯನ್ನು ಹೇಳುವದು **ಅಸಂಗತ**ವಾಗಿರುತ್ತದೆ.

(೩) ಭ್ರಮಸ್ಥಳದಲ್ಲಿ ವ್ಯಾವಹಾರಿಕ ಅವಯವಗಳುಂಟು. ಅವು ಅಧಿಷ್ಠಾನದ ವಿಶೇಷರೂಪ ಪ್ರತೀತಿಯ ಪ್ರತಿಬಂಧಕದಿಂದ ತೋರುವದಿಲ್ಲೆಂದು ಹೇಳಿದರೂ, ಇದು ಸಮೀಚೀನವಲ್ಲ. ಯಾಕಂದರೆ, ಶುಕ್ತಿಸ್ಥಾನದಲ್ಲಿ ವ್ಯಾವಹಾರಿಕ ರಜತೋತ್ಪತ್ತಿಯನ್ನು ಅಂಗೀಕರಿಸಿದರೂ, ಅನುಭವಕ್ಕ ಅನುಸಾರವಾಗಿ ರಜತದ

ನಿವೃತ್ತಿಯು ಶುಕ್ತಿಜ್ಞಾನದಿಂದಲೇ ಎಂದು ಅಂಗೀಕರಿಸಲಿಕ್ಕೇಬೇಕು. ಅಂಗೀಕರಿಸದಿದ್ದರೆ, ಲೋಕಾನುಭವಕ್ಕೂ ಶಾಸ್ತ್ರಕ್ಕೂ ಯುಕ್ತಿಗೂ ವಿರೋಧವಾಗುವದಲ್ಲದೆ, ಸಿದ್ಧಾಂತವನ್ನು ತ್ಯಾಗಮಾಡಬೇಕಾಗುತ್ತದೆ. ಶುಕ್ತಿಜ್ಞಾನದಿಂದ ರಜತದ ನಿವೃತ್ತಿಯು ಲೋಕ ಮತ್ತು ಶಾಸ್ತ್ರ ಇವುಗಳಲ್ಲಿ ಪ್ರಸಿದ್ಧವಾಗಿರುತ್ತದೆ. ಮತ್ತು ಸತ್ಖ್ಯಾತಿಯಾದರೂ ಶುಕ್ತಿಯ ಜ್ಞಾನವು ರಜತಾವಯವ ಜ್ಞಾನಕ್ಕೆ ಪ್ರತಿಬಂಧಕವಾಗಿರುತ್ತದೆಂದು ಒಪ್ಪಿ; ಈಗ ಇಲ್ಲೆಂದು ಹೇಳುವದು ದೋಷವಾಗಿರುತ್ತದೆ. ಆದ್ದರಿಂದ ಶುಕ್ತಿಜ್ಞಾನದಿಂದಲೇ ರಜತದ ನಿವೃತ್ತಿಯನ್ನು ಅಂಗೀಕರಿಸುವದು ಯೋಗ್ಯವಾಗಿದೆ. ಆದ್ದರಿಂದ ಸತ್ಖ್ಯಾತಿ ಮತವು ಯುಕ್ತಿಶೂನ್ಯವಿದ್ದದರಿಂದ ಅಸಂಗತವಾಗಿರುತ್ತದೆ.

## ಸಾಂಖ್ಯ ಪ್ರಭಾಕರರ ಅಖ್ಯಾತಿವಾದದ ರೀತಿಯು

ಅನೇಕ ಶಾಸ್ತ್ರಕಾರರು ಯಥಾರ್ಥ ಅಯಥಾರ್ಥ ಭೇದದಿಂದ ಎರಡು ಜ್ಞಾನಗಳುಂಟೆಂದು ಹೇಳುತ್ತಾರೆ. ಇದು ಸರಿಯಲ್ಲ. ಕಿಂತು ಎಲ್ಲ ಜ್ಞಾನಗಳು ಯಥಾರ್ಥಗಳಾಗಿಯೇ ಇರುತ್ತವೆ. ಆದ್ದರಿಂದ ಭ್ರಮಜ್ಞಾನವು ಅಪ್ರಸಿದ್ಧವಾಗಿದೆ. ಹೇಗಂದರೆ, ಶುಕ್ತಿಯಲ್ಲಿ ರಜತಾರ್ಥಿ ಪುರುಷನ ಪ್ರವೃತ್ತಿಯಾಗುತ್ತದೆ. ಅಲ್ಲಿಯಾದರೂ ರಜತದ ಪ್ರತ್ಯಕ್ಷ ಜ್ಞಾನವಿಲ್ಲ. ಇದ್ದರೆ; ಯಥಾರ್ಥವು ಸಂಭವಿಸುವದಿಲ್ಲ. ಆದ್ದರಿಂದ ಅಯಥಾರ್ಥಜ್ಞಾನವಿರುವುದು ಅಂದರೆ ಅದು (ಅಲೀಕ) ಮಿಥ್ಯೆಯಾಗಿರುತ್ತದೆ. ಆದ್ದರಿಂದ ಶುಕ್ತಿಯಲ್ಲಿ ರಜತದ ಪ್ರತ್ಯಕ್ಷಜ್ಞಾನವಿಲ್ಲ. ಕಿಂತು, ರಜತದ ಸ್ಮೃತಿಜ್ಞಾನವಿರುತ್ತದೆ. ಮತ್ತು ಶುಕ್ತಿಯ ಇದಂ ರೂಪದ ಸಾಮಾನ್ಯಜ್ಞಾನವು ಪ್ರತ್ಯಕ್ಷವಾಗಿರುತ್ತದೆ. ದೋಷಸಹಿತವಾದ ನೇತ್ರವು ಶುಕ್ತಿಯೊಡನೆ ಸಂಬಂಧವಾಗಲು ಶುಕ್ತಿಯ ವಿಶೇಷರೂಪವು ತೋರದೆ, ಶುಕ್ತಿಯ ಇದಂತಾ ಸಾಮಾನ್ಯ ರೂಪು ತೋರುತ್ತದೆ. ಶುಕ್ತಿಗೂ ನೇತ್ರಕ್ಕೂ ಸಂಬಂಧ ಜನ್ಯಜ್ಞಾನವಾದ ಮೇಲೆ, ರಜತದ ಸಂಸ್ಕಾರವು ಉದ್ಬುದ್ಧವಾಗುತ್ತದೆ.: ಶುಕ್ತಿಯ ಸಾಮಾನ್ಯ ಜ್ಞಾನದ ಉತ್ತರ ಕ್ಷಣದಲ್ಲಿ ರಜತದ ಸ್ಮೃತಿಯು ಆಗುತ್ತದೆ. ಸಕಲ ಸ್ಮೃತಿಜ್ಞಾನದಲ್ಲಿ ಪದಾರ್ಥದ ಅದೆಯೆಂಬ ಅಂಶವು ತೋರುತ್ತದೆ. ಆದರೂ ದೋಷಸಹಿತ ನೇತ್ರದ ಸಂಬಂಧದಿಂದ ಸಂಸ್ಕಾರವು ಉದ್ಬುದ್ಧವಾಗಿರುತ್ತದೆ ಆ ದೋಷದ ಮಹಾತ್ಮ್ಯೆಯಿಂದ (**ತತ್ತಾ ಅಂಶದ**) ಅದೆಯೆಂಬ ಅಂಶದಜ್ಞಾನವು ನಾಶವಾಗುತ್ತದೆ. ಆದ್ದರಿಂದ ಅದೆಯೆಂಬ ಅಂಶದ ಜ್ಞಾನದ ನಾಶರೂಪ ಸ್ಮೃತಿಯಾಗುತ್ತದೆ. ಆದ್ದರಿಂದ **'ಇದಂ ರಜತಂ'** ಎಂಬಲ್ಲಿ ಎರಡು ಜ್ಞಾನಗಳು ಇರುತ್ತವೆ. ಅದರಲ್ಲಿ ಶುಕ್ತಿಯ ಇದಂ ರೂಪ ಸಾಮಾನ್ಯಜ್ಞಾನವು ಪ್ರತ್ಯಕ್ಷವಾಗಿರುತ್ತದೆ ರಜತದ ಸ್ಮೃತಿ ಜ್ಞಾನವಾದ ಮಾಯಥಾರ್ಥವಾಗಿರುತ್ತದೆ. ಆದರೂ ಶುಕ್ತಿಯ ವಿಶೇಷ .ಅಂಶ ತ್ಯಾಗಮಾಡಿ ಪ್ರತ್ಯಕ್ಷ ಜ್ಞಾನವಾಗಿದೆ. ಮತ್ತು

ಅದೆಯೆಂಬ ಭಾಗವಿಲ್ಲದ ಸ್ಮೃತಿಜ್ಞಾನವಿರುತ್ತದೆ. ಒಂದು ಭಾಗ ತ್ಯಾಗ ಮಾಡುವದರಿಂದ ಜ್ಞಾನವು ಅಯಥಾರ್ಥವಾಗುವದಿಲ್ಲ. ಕಿಂತು ಅನ್ಯರೂಪದ ಜ್ಞಾನಕ್ಕೆ ಅಯಥಾರ್ಥವೆಂದು ಹೇಳಿರುವರು. ಆದ್ದರಿಂದ ಶುಕ್ತಿ ರಜತ ಜ್ಞಾನವು ಯಥಾರ್ಥವದೆ. ಭ್ರಮಜ್ಞಾನವಿಲ್ಲ. ಎರಡು ಜ್ಞಾನಗಳ ಅಥವಾ ಎರಡು ವಿಷಯಗಳ **ವಿವೇಕ ಅಭಾವಕ್ಕೆ ಅಖ್ಯಾತಿಯೆಂದು** (ಭ್ರಮವೆಂದು) ಹೇಳು ತ್ತಾರೆ. ಎರಡು ವಿಷಯಗಳ ಜ್ಞಾನ ಭೇದವಿಲ್ಲದ್ದರಿಂದ ಪ್ರವೃತ್ತಿ ಸಂಭವಿಸುತ್ತದೆ. ಜ್ಞಾನ ಭೇದವಾದರೆ ನಿವೃತ್ತಿಯು ಸಂಭವಿಸುತ್ತದೆ.

## ಅಖ್ಯಾತಿವಾದ ಖಂಡನ.

ಈ ಮತವಾದರೂ ಸಮೀಚೀನವಲ್ಲ. ಯಾಕಂದರೆ, ಶುಕ್ತಿಯಲ್ಲಿ ರಜತ ಭ್ರಮದಿಂದ ಪ್ರವೃತ್ತನಾದ ಪುರುಷನಿಗೆ ರಜತದ ಲಾಭವಾಗದಿದ್ದರೆ, ಆಗ ಪುರು ಷನು ಹೀಗೆ ಹೇಳುತ್ತಾನೆ. ಏನಂದರೆ, ರಜತ ಶೂನ್ಯದೇಶದಲ್ಲಿ ರಜತ ಜ್ಞಾನ ದಿಂದ ನನಗೆ ನಿಷ್ಫಲ ಪ್ರವೃತ್ತಿಯಾಯಿತು. ಈ ರೀತಿ ಭ್ರಮಜ್ಞಾನವು **ಅನುಭವ ಸಿದ್ಧ**ವಾಗಿರುತ್ತದೆ. ಅದರ ಲೋಪವು ಸಂಭವಿಸುವದಿಲ್ಲ. ಅಖ್ಯಾತಿವಾದದ ರೀತಿಯಂತೆ, ರಜತದ ಸ್ಮೃತಿ ಮತ್ತು ಶುಕ್ತಿ ಜ್ಞಾನ ಈ ಭೇದವನ್ನು ಗ್ರಹಣ ಮಾಡದೆ ಇರೋಣದರಿಂದ, ನನಗೆ ಶುಕ್ತಿಯಲ್ಲಿ ಪ್ರವೃತ್ತಿಯು ಸಂಭವಿಸಿತು. ಎಂದು **ಬಾಧ**ವಾಗಬೇಕಾಗಿತ್ತು. ಮತ್ತು ವಿಷಯ ಮತ್ತು ಭ್ರಮಜ್ಞಾನ ಇವೆ ರಡನ್ನು ತ್ಯಾಗಮಾಡಿ ಅನೇಕ ಪ್ರಕಾರದ ವಿರುದ್ಧ ಕಲ್ಪನೆಯನ್ನು ಮಾಡುವ ದೊಂದು ದೋಷವು ಅಖ್ಯಾತಿ ವಾದವಲ್ಲಿ ಸಂಭವಿಸುತ್ತದೆ. ಮತ್ತು ನೇತ್ರವು ಸಂಯೋಗವಾದ ಬಳಿಕ ದೋಷದ ಮಹಾತ್ಮ್ಯೆಯಿಂದ ಶುಕ್ತಿಯ ವಿಶೇಷ ರೂಪದ ಜ್ಞಾನವಾಗಲಿಲ್ಲೆಂದು ಹೇಳುವ ಈ ಕಲ್ಪನೆಯಾದರೂ **ವಿರುದ್ಧ**ವಾಗಿರುತ್ತದೆ. ಹಾಗೇ (ತತ್ತಾ ಅಂಶದ) ಅದೇ ಯೆಂಬ ಭಾಗದ ನಾಶದಿಂದ ಸ್ಮೃತಿ ಕಲ್ಪನೆ ಯಾದರೂ **ವಿರುದ್ಧ**ವಾಗಿರುತ್ತದೆ. ಮತ್ತು ವಿಷಯಗಳು ಭೇದವಾಗಿವೆ. ಪರಂತು ತೋರುವದಿಲ್ಲ. ಹಾಗೇ ಜ್ಞಾನಗಳಾದರೂ ಭಿನ್ನಅವೆ ತೋರುವದಿಲ್ಲ. ಎಂಬ ಈ ಕಲ್ಪನೆಯಾದರೂ **ವಿರುದ್ಧ**ವದೆ. ರಜತದ ಪ್ರತೀತಿ ಕಾಲದಲ್ಲಿ ಅಭಿಮುಖ ದೇಶವಲ್ಲಿ ರಜತದ ಪ್ರತೀತಿಯು ಆಗಿದೆ. ಆದ್ದರಿಂದ ಅಖ್ಯಾತಿವಾದವು ಅನುಭವ ವಿರುದ್ಧವಾಗಿದೆ. ಮತ್ತು ಅಖ್ಯಾತಿವಾದಿ ಮತದಲ್ಲಿ ರಜತದ ಭೇದಗ್ರಹವು ಪ್ರವೃತ್ತಿಯ ಪ್ರತಿಬಂಧಕವಾದ್ದರಿಂದ ರಜತದ ಭೇದಗ್ರಹದ ಅಭಾವವೇ ರಜ ತಾರ್ಥಿಯ ಪ್ರವೃತ್ತಿಗೆ ಹೇಗೆ ಹೇತುವಾಗಿರುವುದೆಂದು ಅಂಗೀಕರಿಸಿರುವನೋ, ಅದರಂತೆ ಸತ್ಯ ರಜತ ಸ್ಥಳದಲ್ಲಿ ರಜತದ ಅಭೇದ ಗ್ರಹವು ನಿವೃತ್ತಿಯ ಪ್ರತಿ ಬಂಧಕವಾಗಿರುವದು ಅನುಭವಸಿದ್ಧವಾಗಿರುತ್ತದೆ. ಆದ್ದರಿಂದ ರಜತದ ಅಭೇದ ಗ್ರಹದ ಅಭಾವವು ನಿವೃತ್ತಿಗೆ ಹೇತುವಾಗಿರುತ್ತದೆ. ಈ ರೀತಿಯಿಂದ ರಜತದ

ಭೇದ ಜ್ಞಾನದ ಅಭಾವವು ರಜತಾರ್ಥಿಯ ಪ್ರವೃತ್ತಿಗೆ ಹೇತುವಾಗಿರುವದು. ಮತ್ತು ರಜತದ ಅಭೇದ ಜ್ಞಾನದ ಅಭಾವವು ರಜತಾರ್ಥಿಯ ನಿವೃತ್ತಿಗೆ ಹೇತುವಾಗಿದೆ. ಶುಕ್ತಿ ದೇಶದಲ್ಲಿ ''ಇದಂ ರಜತಂ'' ಇದು ಬೆಳ್ಳಿ ಎಂಬ ಎರಡು ಜ್ಞಾನಗಳಿರುತ್ತವೆ. ಅಲ್ಲಿ ಅಖ್ಯಾತಿವಾದಿ ಮತದಲ್ಲಿ ಎರಡೂ ಉಂಟು. ಯಾಕಂದರೆ, ಶುಕ್ತಿಯಲ್ಲಿ ರಜತದ ಭೇದವೇನೋ ಉಂಟು. ಪರಂತು ದೋಷಬಲದಿಂದ ರಜತದ ಬೇದ ಜ್ಞಾನವು ಶುಕ್ತಿಯಲ್ಲಿ ಆಗಲಿಲ್ಲ. ಆದ್ದರಿಂದ ಪ್ರವೃತ್ತಿಗೆ ಹೇತು ರಜತದ ಭೇದಜ್ಞಾನದ ಅಭಾವವಾಗಿರುತ್ತದೆ. ಮತ್ತು ಶುಕ್ತಿಯಲ್ಲಿ ರಜತದ ಅಭೇದವು ಇಲ್ಲವೇ ಇಲ್ಲ. ಮತ್ತು ಅಖ್ಯಾತಿ ವಾದದಲ್ಲಿ ಭ್ರಮದ ಅಂಗೀಕಾರವಿಲ್ಲ. ಆದ್ದರಿಂದ ಶುಕ್ತಿಯಲ್ಲಿ ರಜತದ ಅಭೇದ ಜ್ಞಾನವು ಸಂಭವಿಸುವದಿಲ್ಲ. ಈ ರೀತಿಯಾಗಿ ಶುಕ್ತಿಯಿಂದ ರಜತಾರ್ಥಿಯ ನಿವೃತ್ತಿಗೆ ಹೇತು ರಜತದ ಅಭೇದ ಜ್ಞಾನದ ಅಭಾವವಾಗಿರುತ್ತದೆ. ರಜತಾರ್ಥಿ ಪ್ರವೃತ್ತಿಯ ಸಾಮಗ್ರಿಯು ಮತ್ತು ನಿವೃತ್ತಿ ಸಾಮಗ್ರಿಯು ಎರಡೂ ಉಂಟು. ಮತ್ತು ಪ್ರವೃತ್ತಿ ನಿವೃತ್ತಿಗಳೆರಡು ಪರಸ್ಪರ ವಿರೋಧಿಗಳಾಗಿವೆ. ಒಂದೇಕಾಲದಲ್ಲಿ ಎರಡೂ ಸಂಭವಿಸುವದಿಲ್ಲ. ಮತ್ತು ಎರಡರ ಅಸಂಭವದಿಂದ ಎರಡನ್ನೂ ತ್ಯಾಗಮಾಡುವದು ಸಂಭವಿಸುವದಿಲ್ಲ. ಯಾಕಂದರೆ, ಪ್ರವೃತ್ತಿಯ ಅಭಾವವೇ ಈ ಸ್ಥಳದಲ್ಲಿ ನಿವೃತ್ತಿ ಪದಾರ್ಥವಾಗಿರುತ್ತವೆ. ಆದ್ದರಿಂದ ಪ್ರವೃತ್ತಿಯನ್ನು ತ್ಯಾಗಮಾಡಿದರೆ, ನಿವೃತ್ತಿಪ್ರಾಪ್ತವಾಗುತ್ತದೆ. ನಿವೃತ್ತಿಯನ್ನು ತ್ಯಾಗಮಾಡಿದರೆ, ಪ್ರವೃತ್ತಿಪ್ರಾಪ್ತವಾಗುತ್ತದೆ. ಈ ರೀತಿ ಉಭಯ ತ್ಯಾಗದಲ್ಲಿ ಮತ್ತು ಉಭಯ ಸ್ವೀಕಾರದಲ್ಲಿ ಅಶಕ್ತನಾದ ಅಖ್ಯಾತಿವಾದಿಯು ವ್ಯಾಕುಲನಾಗಿ ಲಜ್ಜೆಯಿಂದ ಪ್ರಾಣತ್ಯಾಗಮಾಡಬಹುದು. ಆದ್ದರಿಂದ ಅಖ್ಯಾತಿವಾದವು ಮರಣಕ್ಕೆ ಕಾರಣವಾಗಿರುತ್ತದೆ. ಈ ಅರ್ಥದಲ್ಲಿ ಅನೇಕ ಶಂಕಾ ಸಮಾಧಾನಗಳು ಉಂಟು. ಆದರೆ ಆ ಅರ್ಥವು ಬುದ್ಧಿಯಲ್ಲಿ ಪ್ರವೇಶವಾಗುವದು ಕಷ್ಟವೆಂದು ಬರೆಯುವದನ್ನು ಬಿಟ್ಟಿರುತ್ತೇವೆಂದು ಶ್ರೀಮನ್ನಿಶ್ಚಲದಾಸರೇ ವೃತ್ತಿ ಪ್ರಭಾಕರದಲ್ಲಿ ಹೇಳಿದ್ದಾರೆ. ಮತ್ತು ಬ್ರಹ್ಮಾನಂದ ಕೃತ ಅನಿರ್ವಚನೀಯ ಖ್ಯಾತಿಯಲ್ಲಿಯೂ, ಸ್ವರಾಜ್ಯ ಸಿದ್ಧಿಗ್ರಂಥಗಳಲ್ಲಿಯೂ, ಖ್ಯಾತಿಗಳ ಮಂಡನ ಖಂಡನ ವಿಷಯವು ಕಠಿಣ ವಿದ್ದದರಿಂದ ಬಿಟ್ಟದ್ದೇನೆಂದು ಹೇಳಿ, ಬ್ರಹ್ಮವಿದ್ಯಾಭರಣದಲ್ಲಿ ಹೇಳಿದ ಪ್ರಕಾರ ಸುಗಮ ರೀತಿ ಹೇಳಿದ್ದೇನೆಂದು ಹೇಳಿರುವರು. ಅವರು ಸುಗಮವೆಂದು ಹೇಳಿದ್ದು ನಮಗೆ ಕಠಿಣವಾಗಿ ಹೋಗಿದೆ. ಆದ್ದರಿಂದ ವೃತ್ತಿ ಪ್ರಭಾಕರದಲ್ಲಿ ಹೇಳಿದ ಖ್ಯಾತಿಗಳ ಅರ್ಥವನ್ನು ಸಂಕ್ಷೇಪವಾಗಿ ಎತ್ತಿಕೊಂಡು ಇದರಲ್ಲಿ ಹೇಳಿದೆ. ವಿಸ್ತಾರ ನೋಡಲಪೇಕ್ಷೆಯುಳ್ಳವರು ವೃತ್ತಿ ಪ್ರಭಾಕರವನ್ನು ನೋಡಿರಿ. ಮತ್ತೆ ಬ್ರಹ್ಮಸೂತ್ರದ ಅಧ್ಯಾಸಭಾಷ್ಯವನ್ನೂ ಅದರ ಭಾಷ್ಯಗಳಾದ ಭಾಮತೀ, ಕಲ್ಪತರು, ಪರಿಮಳ ಮೊದಲಾದ ಭಾಷ್ಯಗಳಲ್ಲಿಯೂ ಉಂಟು. ಇಷ್ಟ ವಿದ್ದರೆ ನೋಡಬಹುದು.

## ನವೀನ ನೈಯಾಯಿಕರ ಅನ್ಯಥಾ ಖ್ಯಾತಿಯ ರೀತಿಯು

(೧) ಯಾವ ಪುರುಷನಿಗೆ ಸತ್ಯಪದಾರ್ಥವ ಅನುಭವ ಜನ್ಯ ಸಂಸ್ಕಾರವಾಗಲಿ, ದೋಷಸಹಿತ ನೇತ್ರಕ್ಕೆ ಪೂರ್ವದೃಷ್ಟ ಸದೃಶ ಪದಾರ್ಥದೊಡನೆ ಸಂಬಂಧವಾಗಲಿ, ಆದದ್ದಾದರೆ; ಅಲ್ಲಿ ಪುರೋವರ್ತಿ ಸದೃಶಪದಾರ್ಥದ ಸಾಮಾನ್ಯ ಜ್ಞಾನದಿಂದ ಸಂಸ್ಕಾರವು ಉದ್ಭೂತವಾಗುತ್ತದೆ. ಯಾವ ಪದಾರ್ಥದ ಸ್ಮೃತಿಯಾಗುತ್ತದೆಯೋ, ಅಥವಾ ಯಾವುದರ ಉದ್ಭೂತ ಸಂಸ್ಕಾರವಾಗುತ್ತದೆಯೋ, ಆ ಪದಾರ್ಥದ ಧರ್ಮವು ಪುರೋವರ್ತಿ ಪದಾರ್ಥದಲ್ಲಿ ಪ್ರತೀತಿಯಾಗುತ್ತದೆ. ಹೇಗಂದರೆ; ಸತ್ಯರಜತದ ಅನುಭವಜನ್ಯ ಸಂಸ್ಕಾರಸಹಿತ ಪುರುಷನಿಗೆ, ರಜತ ಸದೃಶ ಶುಕ್ತಿಯೊಂದು ದೋಷಸಹಿತ ನೇತ್ರದ ಸಂಬಂಧವಾಗಲು ರಜತದ ಸ್ಮೃತಿಯು ಆಗುತ್ತದೆ. ಅದರ ಸ್ಮರಣವನ್ನು ಮಾಡಲು ರಜತವ ರಜತತ್ವ ಧರ್ಮವು ಶುಕ್ತಿಯಲ್ಲಿ ತೋರುತ್ತದೆ. ಅಥವಾ ನೇತ್ರಕ್ಕೆ ಸಂಬಂಧವಾದ ರಜತ ಭ್ರಮದಲ್ಲಿ ವಿಲಂಬವಾಗುವದಿಲ್ಲ. ಕಿಂತು ರಜತಾನುಭವದ ಸಂಸ್ಕಾದವು ಉದ್ಭೂತವಾಗಿ ಸ್ಮೃತಿಗೆ ವಿಲಂಬವಿರದೆ, ಶೀಘ್ರವಾಗಿಯೇ ಶುಕ್ತಿಯಲ್ಲಿ ರಜತತ್ವಧರ್ಮದ ಪತ್ಯಕ್ಷವಾಗುತ್ತದೆ. ಹೇಗೆ ಸ್ಮೃತಿಸ್ಥಳದಲ್ಲಿ ಪೂರ್ವದೃಷ್ಟ ಸದೃಶಜ್ಞಾನದಿಂದ ಸಂಸ್ಕಾರವು ಉದ್ಭೂತವಾಗುತ್ತದೆಯೋ, ಹಾಗೆ ಭ್ರಮಸ್ಥಳದಲ್ಲಿಯಾದರೂ ಪೂರ್ವದೃಷ್ಟ ಸದೃಶ ಪದಾರ್ಥದೊಡನೆ ಸಂಬಂಧವಾದೊಡನೆ, ಸಂಸ್ಕಾರವು ಉದ್ಬೋಧವಾಗಿ, ಸಂಸ್ಕಾರಗೋಚರ ಧರ್ಮವು ಸಮ್ಮುಖದಲ್ಲಿ ತೋರುತ್ತದೆ. ಇದಕ್ಕೆ **ಅನ್ಯಥಾಖ್ಯಾತಿ**ಯೆಂದು ಹೇಳುತ್ತಾರೆ. ಶುಕ್ತಿಪದಾರ್ಥದಲ್ಲಿ ಶುಕ್ತಿತ್ವ ಧರ್ಮವುಂಟು. ರಜತತ್ವವಿಲ್ಲ. ಮತ್ತು ಶುಕ್ತಿಸಂಬಂಧವು ರಜತತ್ವರೂಪದಿಂದ ಪ್ರತೀತಿಯಾಗುತ್ತದೆ. ಆದ್ದರಿಂದ ಅನ್ಯರೂಪದಿಂದ ಪ್ರತೀತಿಯಾಗುತ್ತದೆ. ಆದರಿಂದ **ಅನ್ಯಥಾ ಖ್ಯಾತಿ**ಯೆಂದು ಹೇಳುತ್ತಾರೆ.

## ಉಕ್ತ ಅನ್ಯಥಾ ಖ್ಯಾತಿಯ ಖಂಡನವು

(೧) ಶುಕ್ತಿಯಲ್ಲಿ ಯಾವ ರಜತತ್ವ ಧರ್ಮದ ಪ್ರತೀತಿಯುಂಟೋ, ಆದಕ್ಕೆ ಅನ್ಯಥಾ ಖ್ಯಾತಿಯೆಂದು ಅನೇಕ ಗ್ರಂಥಗಳಲ್ಲಿ **ನೈಯಾಯಿಕರು** ಬರೆದಿರುವರು. ಆದರೂ ಅವರ ಲೇಖವು **ಶ್ರುತಿ ಸ್ಮೃತಿ** ವಿರುದ್ಧವಾಗಿರುತ್ತದೆ. ಆದ್ದರಿಂದ ಶ್ರದ್ಧಾ ಯೋಗ್ಯವಲ್ಲ. ಸ್ವಪ್ನ ಜ್ಞಾನಕ್ಕೆ ನೈಯಾಯಿಕನು ಮಾನಸ ವಿಪರ್ಯಯವೆಂದು ಹೇಳಿದ್ದಾನೆ. ಮತ್ತು ಅನ್ಯಥಾ ಖ್ಯಾತಿಯನ್ನು ವಿಪರ್ಯಯವೆಂದು ಹೇಳಿದ್ದಾನೆ. ಮತ್ತು ಶ್ರುತಿಯಲ್ಲಿ ಸ್ವಪ್ನ ಪದಾರ್ಥಗಳ ಉತ್ಪತ್ತಿಯು ಹೇಳಲ್ಪಟ್ಟಿದೆ. "**ನತತ್ರರಥಾ ನರಥಯೋಗಾ ನಪಂಥಾನೋಭವಂತ್ಯಥ ರಥಾನ್ನ್ರಥಯೋಗಾನ್ಪಥಃ ಸೃಜತೆ**" ಎಂಬ ಶ್ರುತಿಯುಂಟು. ಅದರಲ್ಲಿ

ವ್ಯಾವಹಾರಿಕ ರಥ, ಅಶ್ವ, ಮಾರ್ಗಗಳನ್ನು ಸ್ವಪ್ನದಲ್ಲಿ ನಿಷೇಧಮಾಡಿ, ಅನಿರ್ವಚನೀಯ ರಥ, ಅಶ್ವ, ಮಾರ್ಗಗಳ ಉತ್ಪತ್ತಿಯು ಹೇಳಿದೆ. ಹಾಗೇ "ಸಂಧ್ಯೇಸೃಷ್ಟಿ ರಾಹಹಿ" ಎಂಬ ವ್ಯಾಸಸೂತ್ರವುಂಟು. ಅದರಲ್ಲಿಯಾದರೂ ಸ್ವಪ್ನದಲ್ಲಿ ಅನಿರ್ವಚನೀಯ ಪದಾರ್ಥದ ಸೃಷ್ಟಿಯು ಹೇಳಲ್ಪಟ್ಟಿದೆ. ವ್ಯಾಸಕೃತ ಸೂತ್ರವು ಸ್ಮೃತಿರೂಪವಾಗಿರುತ್ತದೆ. ಈ ರೀತಿ ನೈಯಾಯಿಕನ ಅನ್ಯಥಾ ಖ್ಯಾತಿಯು ಶ್ರುತಿ ಸ್ಮೃತಿಗಳ ವಿರುದ್ಧವಾಗಿರುತ್ತದೆ. ಮತ್ತೂ ನೇತ್ರಕ್ಕೆ ವ್ಯವಹಿತವಾದ ರಜತತ್ವದ ಜ್ಞಾನವು ಶುಕ್ತಿಯಲ್ಲಿ ಸಂಭವಿಸುವದಿಲ್ಲ. ಯಾವ ಶುಕ್ತಿ ಸಮೀಪದಲ್ಲಿ ರಜತವಿದ್ದರೆ, ಅವೆರಡೂ ನೇತ್ರಕ್ಕೆ ಸಂಯೋಗವಾಗಿ ರಜತವೃತ್ತಿ ರಜತತ್ವವು ಶುಕ್ತಿಯಲ್ಲ. ನೇತ್ರಜನ್ಯ ಭ್ರಮ ಪ್ರತೀತಿಯು ಸಂಭವವಾದರೆ, ಎಲ್ಲ ಶುಕ್ತಿ ಸಮೀಪ ರಜತವಿಲ್ಲವೋ ಅಲ್ಲಿ ಶುಕ್ತಿಯಲ್ಲಿ ರಜತತ್ವಭ್ರಮವು ನೇತ್ರಜನ್ಯ ಸಂಭವಿಸುವದಿಲ್ಲ. ಯಾಕಂದರೆ, ವಿಶೇಷಣ ವಿಶೇಷ್ಯಗಳಿಗೆ ಇಂದ್ರಿಯ ಸಂಬಂಧವಾದರೆ, ಇಂದ್ರಿಯಜನ್ಯ ವಿಶಿಷ್ಟ ಜ್ಞಾನವಾಗುತ್ತದೆ. ಎಲ್ಲ ಸತ್ಯ ರಜತವುಂಟೋ ಅಲ್ಲಿ ವಿಶೇಷಣ ರಜತತ್ವವಿರುತ್ತದೆ. ವಿಶೇಷ್ಯರಜತ ವ್ಯಕ್ತಿಯಿರುತ್ತದೆ. ರಜತ ವ್ಯಕ್ತಿಯೊಡನೆ ನೇತ್ರದ ಸಂಯೋಗ ಸಂಬಂಧವು ಆಗಿರುತ್ತದೆ. ಮತ್ತೂ ರಜತತ್ವದೊಡನೆ ನೇತ್ರದ ಸಂಯುಕ್ತ ಸಮವಾಯ ಸಂಬಂಧವಾಗಿರುತ್ತದೆ. ಆದ್ದರಿಂದ 'ಇದಂ ರಜತಂ' ಈ ರಜತವೆಂದು ಈ ರೀತಿಯಿಂದ ರಜತತ್ವ ವಿಶಿಷ್ಟದ ನೇತ್ರಜನ್ಯಜ್ಞಾನವಾಗಿದೆ. ಮತ್ತು ಯಾವ ಶುಕ್ತಿಯಲ್ಲಿ ರಜತತ್ವ ವಿಶಿಷ್ಟ ಭ್ರಮವಾಗಿರುವದೋ, ಅಲ್ಲಿ ವಿಶೇಷ್ಯವಾದ ಶುಕ್ತಿಯೊಡನೆ ನೇತ್ರದ ಸಂಯೊಗ ಸಂಬಂಧವಿರುತ್ತದೆ. ರಜತತ್ವ ವಿಶೇಷಣದೊಡನೆ ಸಂಯುಕ್ತ ಸಮವಾಯವು ಇಲ್ಲವೇ ಇಲ್ಲ. ಯಾವ ರಜತ ವ್ಯಕ್ತಿಯೊಡನೆ ಸಂಯೋಗವಾದರೆ, ರಜತತ್ವದಿಂದ ಸಂಯುಕ್ತ ಸಮವಾಯುವುಂಟು. ರಜತ ವ್ಯಕ್ತಿಯೊಡನೆ ಸಂಯೋಗವಿಲ್ಲದ್ದರಿಂದ ರಜತತ್ವಕ್ಕೆ ಸಂಯುಕ್ತ ಸಮವಾಯವಿಲ್ಲ. ಆದ್ದರಿಂದ ರಜತತ್ವ ವಿಶಿಷ್ಟ ಶುಕ್ತಿಯ ಜ್ಞಾನವು ಸಂಭವಿಸುವದಿಲ್ಲ. ಆದ್ದರಿಂದ ನಮಗೆ ನೈಯಾಯಿಕರ ಈ **ಅನ್ಯಥಾ ಖ್ಯಾತಿಯು** ವಾದವು ಅಸಂಗತವಾಗಿದೆ.

## ಪ್ರಾಚೀನ ನೈಯಾಯಿಕರ ಅನ್ಯಥಾ ಖ್ಯಾತಿಯ ರೀತಿಯು ಹೇಳಲ್ಪಡುತ್ತದೆ.

ಎಲ್ಲಿ ರಜತ ಭ್ರಮವಾಗುವುದೋ ಅಲ್ಲಿ. ಕಾಂತಾಕರದಲ್ಲಿದ್ದ ರಜತಕ್ಕೂ ನೇತ್ರಕ್ಕೂ ಸಂಬಂಧವಾಗಿ ಆ ರಜತದ ಪ್ರತ್ಯಕ್ಷಜ್ಞಾನವಾಗುತ್ತದೆ. ಆದ್ದರಿಂದ ಸ್ತ್ರೀಯಳ ಕೈಯಲ್ಲಿರುವ ಅಥವಾ ಚಿನಿವಾಲಗಟ್ಟಿಯಲ್ಲಿರುವ ರಜತವು ಪುರೋವರ್ತಿದೇಶದಲ್ಲಿ ಪ್ರತೀತಿಯಾಗುತ್ತದೆ. ಆದ್ದರಿಂದ ಇದಕ್ಕೆ **ಅನ್ಯಥಾಖ್ಯಾತಿ**

ಯೆಂದು ಹೇಳುತ್ತಾರೆ. ಈ ಮತದಲ್ಲಿ ಧರ್ಮಧರ್ಮಿ ಅಂಶದಲ್ಲಿ ರಜತದ ಜ್ಞಾನವು ಯಥಾರ್ಥವಾಗಿರುತ್ತದೆ. ಪರಂತು ದೇಶ ಅಂಶದಲ್ಲಿ ಅನ್ಯಥಾಜ್ಞಾನ ವಿರುತ್ತದೆ. ಯದ್ಯಪಿ ಪೇಟಿಯೊಳಗಿನ ರಜತವು ದೂರವಿರುತ್ತದೆ. ಅದರೊಡನೆ ನೇತ್ರದ ಸಂಬಂಧವು ಆಗುವದಿಲ್ಲ. ತಥಾಪಿ ದೋಷ ಸಹಿತವಾದ ನೇತ್ರವು ದೂರದಲ್ಲಿದ್ದ ರಜತದೊಡನೆ ಸಂಬಧವಾಗಿ ಜ್ಞಾನವಾಗುತ್ತದೆ. ಇದು ದೋಷದ ಮಹಾತ್ಮ್ಯವುಂಟು.

## ಉಕ್ತಮತ ಖಂಡನ.

ಯಾವ ದೇಶಾಂತರದಲ್ಲಿದ್ದ ರಜತಕ್ಕೂ ನೇತ್ರಕ್ಕೂ ಸಂಬಂಧವಾದರೆ, ಚಿನಿವಾಲ ಗಟ್ಟಿಯಲ್ಲಿರುವ ಅನ್ಯ ಪದಾರ್ಥಗಳ ಪ್ರತ್ಯಕ್ಷವಾದರೂ ಆಗಬೇಕು. ಕಾಂತಾ ಕರದಲ್ಲಿರುವ ರಜತವೇ ಪ್ರತ್ಯಕ್ಷವಾದ ಮೇಲೆ ಕಾಂತೆಯ ಕೈಯಲ್ಲಿರುವ ಪಾತ್ರೆಯಾದರೂ ಪ್ರತ್ಯಕ್ಷವಾಗಲಿಕ್ಕೇ ಬೇಕು. ಒಂದು ವೇಳೆ ವಾದಿಯು– "ಅನ್ಯಥಾ ಖ್ಯಾತಿಯು ಕೇವಲ ಇಂದ್ರಿಯದಿಂದ ಉತ್ಪನ್ನವಾಗಿಲ್ಲ. ಕಿಂತು ಪೂರ್ವಾನುಭವ ಜನ್ಯ ಸಂಸ್ಕಾರ ಸಹಿತ ಸದೋಷನೇತ್ರದಿಂದ ಅನ್ಯಥಾ ಖ್ಯಾತಿಯ ಜ್ಞಾನವು ಉತ್ಪನ್ನವಾಗುತ್ತದೆ. ಆದ್ದರಿಂದ ಉದ್ಭೂತ ಸಂಸ್ಕಾರವು ನೇತ್ರಕ್ಕೆ ಸಹಕಾರಿ ಯಾಗಿರುತ್ತದೆ. ರಜತಗೋಚರ ಉದ್ಭೂತ ಸಂಸ್ಕಾರಸಹಿತ ನೇತ್ರದಿಂದ ರಜತದ ಜ್ಞಾನವೇ ಆಗುತ್ತದೆ· ಅನ್ಯ ಪದಾರ್ಥಗೋಚರ ಸಂಸ್ಕಾರಗಳಾದರೂ ಉಂಟು. ಪರಂತು ಉದ್ಭೂತಗಳಾಗಿಲ್ಲ. ಆದ್ದರಿಂದ ಅನ್ಯವಸ್ತುಗಳ ಜ್ಞಾನವಾಗುವದಿಲ್ಲ. ಸಂಸ್ಕಾರದ ಉದ್ಭೂತ ಅನದ್ಭೂತಗಳು ಕಾರ್ಯಾನುಮೇಯಗಳಾಗಿರುತ್ತವೆ. ಆದ್ದರಿಂದ ದೋಷವಿಲ್ಲ. ತಥಾಪಿ ಎಲ್ಲಿ ಶುಕ್ತಿಯಲ್ಲಿ ರಜತ ಭ್ರಮವಾಗುವದೋ ಅಲ್ಲಿ ಶುಕ್ತಿಯ ಸಮಾನ ಆರೋಪಿತ ರಜತದ ಪರಿಣಾಮವು ಪ್ರತೀತಿಯಾಗುತ್ತದೆ. ಲಘುಶುಕ್ತಿಯಲ್ಲಿ ರಜತಭ್ರಮವು ಲಘುವಾಗಿಯೇ ತೋರುತ್ತದೆ. ಮಹತ್ ಶುಕ್ತಿಯಲ್ಲಿ ರಜತ ಭ್ರಮವಾದರೆ, ಅದರಲ್ಲಿ ಮಹತ್ ಪರಿಣಾಮವು ತೋರುತ್ತದೆ. ಈರೀತಿ ಆರೋಪಿತ ಪದಾರ್ಥದಲ್ಲಿ ಅಧಿಷ್ಠಾನ ಪರಿಣಾಮದ ನಿಯಮವು ಇರುವದರಿಂದ ಶುಕ್ತಿಯಲ್ಲಿ ರಜತತ್ವಧರ್ಮದ ಪ್ರತೀತಿಯು ಆಗುತ್ತದೆ. ಅನ್ಯ ದೇಶದ ರಜತವು ಪ್ರತೀತಿಯಾಗಿದ್ದರೆ, ಆರೋಪಿತದಲ್ಲಿ ಅಧಿಷ್ಠಾನ ಪರಿಣಾಮದ ನಿಯಮವಿರಬಾರದಾಗಿತ್ತು. ಲಘು ಹಾಗು ಮಹತ್ ಪರಿಣಾಮ ಶುಕ್ತಿಸಂಬಂಧಿ ಭಾಸವಾಗಿವೆ. ಆದ್ದರಿಂದ ದೇಶಾಂತರ ರಜತದ ಪ್ರತೀತಿಯಾಗುವದಿಲ್ಲ. ರಜತ ಸಂಸ್ಕಾರದವನಿಗೆ ಅನ್ಯ ಪದಾರ್ಥಗಳು ಗೋಚರವಾಗುವದಿಲ್ಲ. ಖರೆ. ಆದರೆ ಜಗತ್ತಿನಲ್ಲಿರುವ ಯಾವತ್ತು ರಜತವು ಗೋಚರವಾಗಬೇಕಾಗಿತ್ತು. ಈ ರೀತಿ **ಅನಂತ ದೂಷಣಗ್ರಸ್ತ ಪಕ್ಷವಾಗಿದೆ** ಆದ್ದರಿಂದ ನಿರಾಕರಿಸಲಿಕ್ಕೆ ಯೋಗ್ಯ ವಾಗಿದೆ.

## ವೇದಾಂತ ಮತದ ಅನಿರ್ವಚನೀಯ ಖ್ಯಾತಿಸ್ವರೂಪ

ರಜತ ಮತ್ತು ರಜತಜ್ಞಾನ ಇವುಗಳಿಗೆ ಅಧಿಷ್ಠಾನವು ಒಂದು ಸಾಕ್ಷಿಯೇ ಆಗಿರುತ್ತದೆ.

ಹೊರಗಿರುವ ಶುಕ್ತಿ ಚೇತನವೇ ರಜತಕ್ಕೂ ಅದರ ಜ್ಞಾನಕ್ಕೂ ಅಧಿಷ್ಠಾನ ವಾಗಿರುವದೆಂದು ಹೇಳಿದರೆ, ಅದು ಸಂಭವಿಸುವದಿಲ್ಲ. ಯಾಕಂದರೆ? ಎಷ್ಟು ಜ್ಞಾನಗಳುಂಟೋ ಅವೆಲ್ಲಾ ಪ್ರಮಾತಾ ಅಥವಾ ಸಾಕ್ಷಿ ಚೇತನ ಆಶ್ರಿತವಾಗಿರುತ್ತವೆ ಬಾಹ್ಯದಲ್ಲಿರುವ ಶುಕ್ತಿಚೇತನವನ್ನು ಆಶ್ರಯಮಾಡಿಕೊಂಡಿಲ್ಲ. ಹೇಗೋ ಹಾಗೇ, ರಜತ ಮತ್ತು ರಜತಜ್ಞಾನ ಇವುಗಳಿಗೆ ಅಂತಃಕರಣ ಉಪಹಿತ ಸಾಕ್ಷಿ ಚೇತನ ಅಧಿಷ್ಠಾನವೆಂದು ಹೇಳಿದರೆ, ಶರೀರದ ಒಳಗಿರುವ ಅಂತಃಕರಣ ದೇಶ ದಲ್ಲಿ ರಜತ ಪ್ರತೀತಿಯಾಗಬೇಕಾಗಿತ್ತು. ಶುಕ್ತಿದೇಶದಲ್ಲಿ ಪ್ರತೀತಿ ಯಾಗಬಾರ ದಾಗಿತ್ತು. ಒಳಗೆ ಉತ್ಪನ್ನವಾದ ರಜತವು ಮಾಯಾಬಲದಿಂದ ಹೊರಗೆ ತೋರುವದೆಂದು ಹೇಳಿದರೆ, ಆತ್ಮಖ್ಯಾತಿಮತವನ್ನು ಅಂಗೀಕಾರ ಮಾಡ ಬೇಕಾದೀತು. ಆದ್ದರಿಂದ ರಜತಜ್ಞಾನಕ್ಕೆ ಶುಕ್ತಿ ಅವಚ್ಛಿನ್ನ ಚೇತನವು ಅಧಿಷ್ಠಾನವಾಗುವದಿಲ್ಲ. ರಜತಕ್ಕೆ ಅಂತಃಕರಣ ಉಪಹಿತ ಸಾಕ್ಷಿಚೇತನವು ಅಧಿಷ್ಠಾನವಾಗುವದಿಲ್ಲ. ಆದ್ದರಿಂದ ರಜತ ಮತ್ತು ರಜತದಜ್ಞಾನಕ್ಕೆ ಒಂದೇ ಅಧಿಷ್ಠಾನವು ಸಂಭವಿಸುವದಿಲ್ಲ. ತಥಾಪಿ ಶುಕ್ತಿಯ ಸಮೀಪಕ್ಕೆ ಹೋದ ಅಂತಃಕರಣದ ಇದಮಾಕಾರ ವೃತ್ತಿಯಲ್ಲಿದ್ದ ಚೇತನದ ಆಶ್ರಿತವಾದ ಅವಿದ್ಯೆ ರಜತಾಕಾರವಾಗಿಯೂ ಜ್ಞಾನಾಕಾರವಾಗಿಯೂ ಪರಿಣಾಮವನ್ನು ಹೊಂದಿರು ತ್ತದೆ. ಅಂದರೆ, ವೃತ್ತಿಉಪಹಿತ ಚೇತನದಲ್ಲಿದ್ದ ಅವಿದ್ಯೆಯ ತಮೋಗುಣ **ಅಂಶವು** ರಜತಕ್ಕೆ ಉಪಾದಾನಕಾರಣವಾಗಿರುತ್ತದೆ. ಅದೇ ಅವಿದ್ಯೆಯಲ್ಲಿದ್ದ **ಸತ್ವ ಗುಣದ ಅಂಶವು** ರಜತದ ಜ್ಞಾನಕ್ಕೆ ಉಪಾದಾನಕಾರಣವಾಗಿರುತ್ತದೆ. ರಜತ ಹಾಗು ರಜತದಜ್ಞಾನ ಇವೆರಡಕ್ಕೂ ವೃತ್ತಿಉಪಹಿತ ಚೇತನವೇ ಅಧಿಷ್ಠಾನವಾಗಿರುತ್ತದೆ. ವೃತ್ತಿಯು ಶುಕ್ತಿದೇಶದಲ್ಲಿ ಹೊರಗೆ ಹೋಗಿರುತ್ತದೆ. ಆದ್ದರಿಂದ ವೃತ್ತಿಉಪಹಿತ ಚೇತನವೂ ಹೊರಗೆ ಇರುತ್ತದೆ. ಆದ್ದರಿಂದ ರಜತಕ್ಕೆ ಆಶ್ರಯವಾಗಿರುತ್ತದೆ. ಎಷ್ಟು ಅಂತಃಕರಣದ ಸ್ವರೂಪವುಂಟೋ, **ಅಷ್ಟೇ ಸಾಕ್ಷಿಯ** ಸ್ವರೂಪವಿರುತ್ತದೆ. ಶರೀರದ ಒಳಗಿರುವ ಯಾವ ಅಂತಃಕರಣವೇ ವೃತ್ತಿಸ್ವರೂಪ ಪರಿಣಾಮವನ್ನುಹೊಂದಿರುತ್ತದೆ. ಆದ್ದರಿಂದ ವೃತ್ತಿಉಪಹಿತ ಚೇತನವು ಸಾಕ್ಷಿಯಾಗಿದೆ. ಅದರಿಂದ ರಜತಜ್ಞಾನಕ್ಕೆ ಆಶ್ರಯವಾಗಿದೆ. ಯಾವಾಗ್ಯೆ ಶುಕ್ತಿಯಜ್ಞಾನವಾಯಿತೋ, ಆಗ್ಯೆ ಶುಕ್ತಿಚೇತನ ವೃತ್ತಿ ಚೇತನ ಗಳೆರಡು ಏಕವಾಗುತ್ತವೆ. ಆದ್ದರಿಂದ ಶುಕ್ತಿಜ್ಞಾನದಿಂದ ರಜತ ಹಾಗು ರಜ

ತದಜ್ಞಾನ ಇವೆರಡರ ನಿವೃತ್ತಿಯು ಸಂಭವಿಸುತ್ತದೆ. ಈ ರೀತಿ ಹೊರಗೆ ರಜತ ಹಾಗು ಆದರಜ್ಞಾನ ಇವುಗಳಿಗೆ **ವೃತ್ತಿ ಉಪಹಿತಸಾಕ್ಷಿಯೇ** ಅಧಿಷ್ಠಾನ ವಾಗಿದೆ. ಸ್ವಪ್ನ ಹಾಗು ಆದರಜ್ಞಾನ ಇವುಗಳಿಗಾದರೂ ಅಂತಃಕರಣೋಪಹಿತ ಸಾಕ್ಷಿಯೇ ಅಧಿಷ್ಠಾನವಾಗಿರುತ್ತದೆ. ಆದ್ದರಿಂದ ಅನಿರ್ವಚನೀಯಗಳಾದ ರಜತ ಸ್ವಪ್ನಗಳು ಉತ್ಪತ್ತಿನಾಶಗಳಾಗಿರುತ್ತವೆ.

ವಂಧ್ಯಾಪುತ್ರ ಶಶವಿಷಾಣಗಳು ಸ್ವರೂಪಹೀನಗಳಾದ್ದರಿಂದ **ಅಸತ್ತೆಂದು** ಹೇಳಿಸಿಕೊಳ್ಳುತ್ತವೆ. ರಜತಾದಿಗಳು ಹೀಗಿಲ್ಲ. ಅದರಿಂದ ಅಸತ್ತಕ್ಕೆ ವಿಲಕ್ಷಣ ಗಳಾಗಿವೆ.

ತ್ರಿಕಾಲ ಅಬಾಧ್ಯವಾದ ಬ್ರಹ್ಮವು **ಸತ್ತೆಂದು** ಹೇಳಿಸಿಕೊಳ್ಳುತ್ತದೆ. ಹೀಗಿಲ್ಲ, ಕಿಂತು ಅಧಿಷ್ಠಾನ ಜ್ಞಾನದಿಂದ ನಾಶವಾಗುತ್ತವೆ. ಆದ್ದರಿಂದ ಸತ್ತಕ್ಕೆ ವಿಲಕ್ಷಣಗಳಾಗಿವೆ. ಅಂದರೆ **ಸ್ವರೂಪವುಳ್ಳವುಗಳಾಗಿ ಬಾಧಾಹೊಂದಲಿಕ್ಕೆ** ಯೋಗ್ಯಗಳಾಗಿವೆಯೆಂಬ ಭಾವವು. ಆದ್ದರಿಂದ ಸತ್, ಅಸತ್, ವಿಲಕ್ಷಣ ಅವಿದ್ಯೆಯ ಪರಿಣಾಮ ಅನಿರ್ವಚನೀಯ ರಜತಾದಿಗಳ **ಪ್ರತೀತಿಗೆ** ಅಥವಾ **ಹೇಳುವದಕ್ಕೆ** ಅನಿರ್ವಚನೀಯ ಖ್ಯಾತಿಯೆಂದು ಹೇಳುತ್ತಾರೆ.

ಅನಿರ್ವಚನೀಯವಾದ ರಜತವು ಉತ್ಪನ್ನವಾಗಿದ್ದು; ಉತ್ಪನ್ನವಾದದ್ದು ಗೋಚರವಾಗುವದಿಲ್ಲ. ಯಾಕಂದರೆ; ಶುಕ್ತಿಯಲ್ಲಿರುವ ಇದಂತಾ ಧರ್ಮವು ರಜತದಲ್ಲಿ ಹೇಗೆ ಅಧ್ಯಾಸವಾಗಿರುವದೋ, ಹಾಗೆ ಶುಕ್ತಿಯಲ್ಲಿರುವ ಪ್ರಾಕ್ ಸಿದ್ಧತ್ವ ಧರ್ಮವೂ ಅಧ್ಯಾಸವಾಗಿದೆ. ಆದ್ದರಿಂದ ಆ ಪ್ರಾಕ್‌ಸಿದ್ಧತ್ವಧರ್ಮವು ರಜತೋತ್ಪತ್ತಿಗೋಚರಕ್ಕೆ ಪ್ರತಿಬಂಧಕ ಮಾಡಿರುತ್ತದೆ. ಆದ್ದರಿಂದ ರಜತವು ಉತ್ಪತ್ತಿಯಾದರೂ ನಮಗೆ **ಉತ್ಪನ್ನವಾದದ್ದು** ತಿಳಿಯುವದಿಲ್ಲ.

ಇದರಂತೆ ರಜತದ ನಾಶವಾದರೂ ಪ್ರತೀತಿಯಾಗುವದಿಲ್ಲ. ಯಾಕಂದರೆ? ಅಧಿಷ್ಠಾನದ ಜ್ಞಾನದಿಂದ ರಜತದ ಬಾಧೆವು ನಿಶ್ಚಯಿಸಲ್ಪಡುತ್ತದೆ. ಶುಕ್ತಿಯಲ್ಲಿ ಕಾಲತ್ರಯದಲ್ಲಿಯೂ ರಜತವಿಲ್ಲೆಂಬ ನಿಶ್ಚಯಕ್ಕೆ ಬಾಧವೆನ್ನುತ್ತಾರೆ. ಇಂಥಾ ನಿಶ್ಚಯವು ರಜತನಾಶದ ಪ್ರತೀತಿಗೆ ವಿರೋಧಿಯಾಗಿರುತ್ತದೆ. ಯಾಕಂದರೆ? ನಾಶದಲ್ಲಿ ಪ್ರತಿಯೋಗಿ ಕಾರಣವಾಗಿರುತ್ತದೆ. ಮತ್ತು ಬಾಧದಲ್ಲಿ ಪ್ರತಿಯೋಗಿಯು ಸರ್ವದಾ ಅಭಾವವಾಗಿರುತ್ತದೆ. ಆದ್ದರಿಂದ ರಜತದ **ನಾಶಬುದ್ಧಿಯು** ತೋರುವದಿಲ್ಲ.

**ಪ್ರಥಮ** ಕ್ಷಣದಲ್ಲಿ ಸರ್ಪಾದಿ ಸಂಸ್ಕಾರ ಸಹಿತ, ಪುರುಷನ ತಿಮಿರಾದಿ ದೋಷಸಹಿತ ನೇತ್ರವು, ರಜ್ಜುವೊದಲಾದವುಗಳಿಗೆ ಸಂಬಂಧವಾಗಲು; ರಜ್ಜುವಿನ ವಿಶೇಷಧರ್ಮ ರಜ್ಜುತ್ವವು ತೋರುವದಿಲ್ಲ. ಮತ್ತು ರಜ್ಜುವಿನಲ್ಲಿರುವ ಗುಂಜಾ ಪುಂಜರೂಪ ಅವಯವಗಳೂ ತೋರುವದಿಲ್ಲ.

ಎರಡನೇ ಕ್ಷಣದಲ್ಲಿ ರಜ್ಜುವಿನಲ್ಲಿ ಇದಂತಾರೂಪ ಸಾಮಾನ್ಯ ಧರ್ಮವು ತೋರುತ್ತದೆ. ವರ್ತಮಾನಕಾಲ ಮತ್ತು ಸಂಮುಖದೇಶ ಸಂಬಂಧಕ್ಕೆ ಇದಂತಾ ಯೆಂದು ಹೇಳುತ್ತಾರೆ. ಅದಕ್ಕೆ ಸಾಮಾನ್ಯ ಅಂಶವೆಂದೂ ಆಧಾರ ವೆಂದೂ ಹೇಳುತ್ತಾರೆ.

ಗುಂಜರೂಪಕ್ಕೂ ತ್ರಿವಲಯಾಕಾರ ಮೂರು ನುತ್ತುವಿಕೆಗೂ ರಜ್ಜುತ್ವ ಧರ್ಮದಿಂದ ಕೂಡಿದ ರಜ್ಜುವಿಗೂ ವಿಶೇಷಾಂಶವೆಂದೂ ಅಧಿಷ್ಠಾನವೆಂದೂ ಹೇಳುತ್ತಾರೆ.

ಅಧಿಷ್ಠಾನದ ಸಾಮಾನ್ಯಜ್ಞಾನವಾದರೂ ಭ್ರಮಕ್ಕೆ ಸಾಧನವಾಗಿರುತ್ತದೆ. ಆ ಸಾಮಾನ್ಯಜ್ಞಾನವು ದೋಷಸಹಿತ ನೇತ್ರರೂಪ ಪ್ರಮಾಣದಿಂದ ಉತ್ಪನ್ನ ವಾಗಿರುತ್ತದೆ ಆದ್ದರಿಂದ ಪ್ರಮಾದ ಉಂಟು. ಆದ್ದರಿಂದ ಅಂತಃಕರಣವು ನೇತ್ರ ದ್ವಾರಾ ರಜ್ಜುವಿಗೆ ಸಂಬಂಧವಾಗಿ ಇದಮಾಕಾರ ಪರಿಣಾಮವನ್ನು ಹೊಂದುತ್ತದೆ.

**ತೃತೀಯ** ಕ್ಷಣದಲ್ಲಿ ಆ ದೋಷಜನ್ಯ ಇದಮಾಕಾರವೃತ್ತಿ ಉಪಹಿತ ಚೇತನದಲ್ಲಿದ್ದ ಅವಿದ್ಯೆಯಲ್ಲಿ ಕ್ಷೋಭವಾಗುತ್ತದೆ. ಉಪಾದಾನಕಾರಣವು ಕಾರ್ಯಾಭಿಮುಖವಾಗುವದಕ್ಕೆ ಕ್ಷೋಭವೆನ್ನುತ್ತಾರೆ.

**ಚತುರ್ಥ** ಕ್ಷಣದಲ್ಲಿ ಆ ಅವಿದ್ಯೆಯು ತಮೋಗುಣದಂಶ ಹಾಗು ಸತ್ವಗುಣದಂಶ ಗಳೆರಡು ಸರ್ಪಾಕಾರ ಹಾಗು ಜ್ಞಾನಾಕಾರ ಪರಿಣಾಮವನ್ನು ಹೊಂದುತ್ತವೆ. ಆ ಸರ್ಪ ಮತ್ತು ಅದರ ಜ್ಞಾನ ಇವೆರಡು ಅವಿದ್ಯೆಯ ಪರಿಣಾಮವಾಗಿಯೂ ಚೇತನದ ವಿವರ್ತವಾಗಿಯೂ ಇರುತ್ತವೆ. ಒಬ್ಬ ಪುರುಷರೂಪ ಧರ್ಮಿಯಲ್ಲಿ ಪಿತಾ ಪಿತಾಮಹರ ಸಂಬಂಧದಿಂದ ಪುತ್ರ ಮತ್ತು ಪೌತ್ರ ಎರಡು ಧರ್ಮಗಳಿ ದ್ದಂತೆ, ಸರ್ಪಾದಿ ಧರ್ಮಿಯಲ್ಲಿ ಅಥವಾ ಆಕಾಶಾದಿ ಪ್ರಪಂಚರೂಪ ಧರ್ಮಿಯಲ್ಲಿ ಅವಿದ್ಯೆಯ ಅಪೇಕ್ಷೆಯಿಂದ ಪರಿಣಾಮತ್ವವೂ ಅಧಿಷ್ಠಾನ ಚೇತನದ ಅಪೇಕ್ಷೆಯಿಂದ ವಿವರ್ತವೂ ಎರಡು ಧರ್ಮಗಳು ಇರುತ್ತವೆ.

ಉಪಾದಾನದ ಸಮಾನ ಸತ್ತೆವುಳ್ಳದ್ದಾಗಿಯೂ ಮತ್ತು ಅನ್ಯಥಾ ಸ್ವರೂಪ ವಾಗಿರುವದೇ ಪರಿಣಾಮವೆಂದು ಹೇಳಲ್ಪಡುವದು. ಹೇಗಂದರೆ, ಮೊಸರು ತನಗೆ ಉಪಾದಾನವಾದ ಹಾಲಿನ ವ್ಯಾವಹಾರಿಕ ಸಮಾನ ಸತ್ತಾವುಳ್ಳದ್ದಾಗಿಯೂ, ಮಧುರವಾದ ಹಾಲಿಗಿಂತಲೂ ತಾನು ಹುಳಿಯಾಗಿರುವದರಿಂದ (ಅನ್ಯಥಾ) ಬೇರೆ ಸ್ವರೂಪವುಳ್ಳದ್ದಾಗಿಯೂ, ಹಾಲಿನ ಪರಿಣಾಮವಾಗಿರುತ್ತದೆ. ಇದರಂತೆ ಉಕ್ತ ಆಕಾಶಾದಿ ಪ್ರಪಂಚವಾದರೂ, ಅವಿದ್ಯೆಯ ಸಮಾನ ಪ್ರಾತಿಭಾಸಿಕ ಅಥವಾ ವ್ಯಾವಹಾರಿಕ ಸತ್ತಾವುಳ್ಳದ್ದಾಗಿಯೂ, ಮತ್ತು ಅರೂಪ ಅವಿದ್ಯೆಯಗಿಂತಲೂ

ರೂಪವುಳ್ಳದ್ದಾಗಿಇರುವದರಿಂದ ಬೇರೆ ಸ್ವರೂಪವುಳ್ಳದ್ದಾಗಿದೆ., ಆದರಿಂದ **ಅವಿದ್ಯೆಯು ಪರಿಣಾಮವಾಗಿರುತ್ತದೆ.**

ಅಧಿಷ್ಠಾನದಿಂದ ವಿಷಮಸತ್ತಾವುಳ್ಳದ್ದಾಗಿಯೂ ಅನ್ಯಥಾ ಸ್ವರೂಪ ವಾಗಿರುವದೇ **ವಿವರ್ತವೆನ್ನಲ್ಪಡುವದು.** ಹೇಗಂದರೆ, ವ್ಯಾವಹಾರಿಕ ಮತ್ತು ಪಾರಮಾರ್ಥಿಕ ಸತ್ತಾವುಳ್ಳದ್ದು ರಜ್ಜು ಉಪಹಿತ ಮತ್ತು ಮಾಯೋಪಹಿತ ಚೇತನಗಳಿರುತ್ತವೆ. ಅವುಗಳಿಗಿಂತಲೂ ವಿಲಕ್ಷಣವಾಗಿರುವ ಪ್ರಾತಿಭಾಸಿಕ ವ್ಯವಹಾರಿಕ ಸತ್ತಾವುಳ್ಳ, ಮತ್ತು ಸಂಸಾರ ಅವಸ್ಥೆಯಲ್ಲಿ ಅಬಾಧಿತವಾಗಿಯೂ, ಉಭಯಚೈತನ್ಯಗಳಿಂದ ಬಾಧಿತವಾಗಲಿಕ್ಕೆ ಯೋಗ್ಯವಾದ, ಬೇರೆ ಸ್ವರೂಪ ವಿರುವದರಿಂದ ಸರ್ಪಾದಿ ಪ್ರಪಂಚವು ಚೇತನದ **ವಿವರ್ತವಾಗಿರುತ್ತದೆ.**

ಈ ರೀತಿ ಸರ್ಪ, ದಂಡ, ಮಾಲಾ, ಜಲಧಾರಾ, ಭೂಮಿಬಿರಕು ಮೊದ ಲಾದ ಹತ್ತು ಪದಾರ್ಥಗಳ ಸಂಸ್ಕಾರವುಳ್ಳ, ಹತ್ತು ಜನರ ದೋಷಸಹಿತ ನೇತ್ರ ಗಳು ರಜ್ಜುವಿಗೆ ಸಂಬಂಧವಾಗಲು,ಇದಮಾಕಾರವೃತ್ತಿಯು ಉತ್ಪನ್ನ ವಾಗುತ್ತದೆ. ಆವೃತ್ತಿ ಉಪಹಿತ ಚೇತನದಲ್ಲಿದ್ದ ಅವಿದ್ಯೆಯೇ ಆಯಾಯ ಪದಾರ್ಥಗಳ ರೂಪಾಗಿಯೂ, ಜ್ಞಾನಾಕಾರವಾಗಿಯೂ, ಪರಿಣಾಮವನ್ನು ಹೊಂದುತ್ತದೆ. ಒಂದೇ ರಜ್ಜುವಿನಲ್ಲಿ ಹತ್ತು ಜನರಿಗೆ ಸದೋಷನೇತ್ರವು ರಜ್ಜುದೊಡನೆ ಸಂಬಂಧ ವಾಗಲು; ಸರ್ಪದಂಡಾದಿ ಭ್ರಮಗಳಾಗುತ್ತವೆ. ಅಲ್ಲಿ ಯಾವಾತನ ವೃತ್ತಿಉಪಹಿತ ಚೇತನದಲ್ಲಿ ಯಾವ ವಿಷಯವು ಉತ್ಪನ್ನವಾಗಿರುವದೋ, ಅದು ಅವನಿಗೆ ಪ್ರತೀತಿ ಯಾಗುತ್ತದೆ. ಅನ್ಯನಿಗೆ ಆಗುವದಿಲ್ಲ.

ಆದ್ದರಿಂದ ಈ ರೀತಿ ಉಕ್ತ ಭ್ರಮಜ್ಞಾನವು ಇಂದ್ರಿಯ ಜನ್ಯವಲ್ಲ. ಕಿಂತು ಅವಿದ್ಯೆಯ ವೃತ್ತಿ ರೂಪವಿರುತ್ತದೆ. ಪರಂತು, ಯಾವ ವೃತ್ತಿ ಉಪಹಿತ ಚೇತನ ದಲ್ಲಿದ್ದ ಅವಿದ್ಯೆಯ ಪರಿಣಾಮ ಭ್ರಮವಿರುವದೋ ಅದು ಇದಮಾಕಾರವೃತ್ತಿ ನೇತ್ರದಿಂದ ರಜ್ಜು ಮೊದಲಾದವುಗಳಿಗೆ ಸಂಬಂಧವಾಗಿರುತ್ತದೆ. ಆದ್ದರಿಂದ ಭ್ರಮಜ್ಞಾನದಲ್ಲಿ ಇಂದ್ರಿಯಜನ್ಯದ ಪ್ರತೀತಿಯಾಗುವದರಿಂದ, ನೈಯಾಯಿಕ ನಿಗೆ ಇಂದ್ರಿಯಜನ್ಯದ ಭ್ರಾಂತಿಯಾಗಿರುತ್ತದೆ. ಮತ್ತು ಯಾವನೋ ಒಬ್ಬ ವೇದಾಂತಿಯಾದರೂ ಹೀಗೆ ಅಂಗೀಕರಿಸಿದ್ದಾನೆ. ಪರಂತು; ಆ ಉಕ್ತಿಯು ಯುಕ್ತಿ ಅನುಭವಗಳಿಗೆ ವಿರೋಧವಾಗುವದರಿಂದ ಸಮೀಚೀನವಲ್ಲ.

ಈ ರೀತಿ ಸಿದ್ಧಾಂತದಲ್ಲಿ ಅಂಗೀಕರಿಸಲ್ಪಟ್ಟ **ಅನಿರ್ವಚನೀಯ ಖ್ಯಾತಿಯು** ಸಂಕ್ಷೇಪವಾಗಿ ನಿರೂಪಿಸಲ್ಪಟ್ಟಿದೆ. ವೃತ್ತಿ ಪ್ರಭಾಕರದಲ್ಲಿ ವಿಸ್ತಾರವಾಗಿ ಹೇಳಿದೆ. ಖಂಡನ ಮಂಡನ ದೂಷಣ ಭೂಷಣಗಳು ಅನೇಕವುಂಟು. ಪ್ರೇಮವಿದ್ದರೆ ಅಲ್ಲಿ ಅವಲೋಕನ ಮಾಡಬಹುದು.

# ಷಟ್‌ಖ್ಯಾತಿ ವಿಷಯ ಪ್ರದರ್ಶನ ಪತ್ರಿಕೆ

| | ಮತಗಳು | ಶಾಸ್ತ್ರ | ಜಗತ್ತು | ಭ್ರಮ | ಪ್ರತಿಜ್ಞಾ | ಹೇತು | ದೃಷ್ಟಾಂತ | ಯುಕ್ತಿ | ತರ್ಕ |
|---|---|---|---|---|---|---|---|---|---|
| ಅಸತ್‌ಖ್ಯಾತಿಗಳು | ಶೂನ್ಯವಾದಿ | ಬೌದ್ಧ ಶಾಸ್ತ್ರ | ಇಲ್ಲ | ಇಲ್ಲದ್ದು ತೋರುವದು | ಅಸತ್ತಿನಲ್ಲಿ ಅಸತ್‌ಜಗತ್ತು ತೋರಿದೆ | ಅಸತ್ತಾದ್ದರಿಂದ | ಅಸತ್ತ ಶುಕ್ತಿಯಲ್ಲಿ ಅಸತ್ ರಜತ್ ತೋರಿದಂತೆ | ಅಸತ್ತಿನಿಂದ ತೋರಿದ ಜಗತ್ತು ಅಸತ್ತಾಗಿದೆ | ಸತ್ಯವಾಗಿದ್ದರೆ ಉತ್ಪತ್ತಿ ಪೂರ್ವದಲ್ಲಿ ಸುಪ್ತಿ ಪ್ರಳಯಾದಿಗಳಲ್ಲಿ ತೋರಬೇಕಾಗಿತ್ತು |
| | ತಾಂತ್ರಿಕ | ತಂತ್ರ ಶಾಸ್ತ್ರ | ನಿರ್ವಿಷಯ ಜ್ಞಾನ ಮಾತ್ರ | ಜ್ಞಾನಕ್ಕೆ ವಿಷಯವಲ್ಲ | ಅಧಿಷ್ಠಾನದಲ್ಲಿ ಅಸತ್‌ಜಗತ್ತು ತೋರಿದೆ | ಅಸತ್ ಪ್ರತೀತಿಯಾದ್ದರಿಂದ | ಶುಕ್ತಿಯಲ್ಲಿ ಅಸತ್ ರಜತ ಪ್ರತೀತಿಯಾದಂತೆ | ಅಸತ್ ಪ್ರತೀತಿಯಾದ್ದರಿಂದ ಜಗತ್ತು ಅಸತ್ತಾಗಿದೆ | ಸತ್ಯವಾಗಿದ್ದರೆ ಜ್ಞಾನಕ್ಕೆ ವಿಷಯವಾಗಬೇಕಾಗಿತ್ತೆಂಬುದೇ |
| | ನ್ಯಾಯ ವಾಚಸ್ಪತಿ | ನ್ಯಾಯ ಶಾಸ್ತ್ರ | ಅಸತ್ತಾಗಿದೆ | ಅಧಿಷ್ಠಾನದಲ್ಲಿ ಇಲ್ಲ | ಈಶ್ವರನಲ್ಲಿ ಅಸತ್‌ಜಗತ್ತು ತೋರಿದೆ | ಪ್ರತೀತಿಯಾದ್ದರಿಂದ | ಶುಕ್ತಿಯಲ್ಲಿ ರಜತತ್ವದ ಸಮವಾಯವು ತೋರಿದಂತೆ | ತನ್ನ ಅಭಾವದಲ್ಲಿ ತಾನು ತೋರಿದ್ದರಿಂದ ಅಸತ್ತಾಗಿದೆಯೆಂಬುದೆ | ಸತ್ಯವಾಗಿದ್ದರೆ ಜ್ಞಾನೋತ್ತರ ಕಾಲದಲ್ಲಿ ತೋರಬೇಕಾಗಿತ್ತೆಂಬುದೇ. |

# ಷಟ್‌ಖ್ಯಾತಿ ವಿಷಯ ಪ್ರದರ್ಶನ ಪತ್ರಿಕೆ

| | ಮತಗಳು | ಶಾಸ್ತ್ರ | ಜಗತ್ತು | ಭ್ರಮ | ಪ್ರತಿಜ್ಞಾ | ಹೇತು | ದೃಷ್ಟಾಂತ | ಯುಕ್ತಿ | ತರ್ಕ |
|---|---|---|---|---|---|---|---|---|---|
| ಆತ್ಮಖ್ಯಾತಿಗಳು | ವಿಜ್ಞಾನವಾದಿ | ಬೌದ್ಧ ಶಾಸ್ತ್ರ | ಒಳಗುಂಟು | ಒಳಗಿದ್ದು ಹೊರಗೆ ತೋರುವದು | ಬುದ್ಧಿಯಲ್ಲಿ ಜಗತ್ತುಂಟು | ದೋಷ ಮೂಲಕ ಹೊರಗೆ ಕಾಣುವದರಿಂದ | ಶುಕ್ತಿ ರಜತದಂತೆ | ದೋಷ ಮೂಲಕ ಹೊರಗೆ ಕಾಣುವದರಿಂದ ಜಗತ್ತು ಬುದ್ಧಿಯಲ್ಲಿ ಉಂಟು | ಇಲ್ಲದಿದ್ದರೆ ಹೊರಗೆ ತೋರಬಾರದಾಗಿತ್ತೆಂಬುದೇ ತರ್ಕ |
| | ಬಾಹ್ಯಪ್ರತ್ಯಕ್ಷವಾದಿ | ಭೌದ್ಧ | ಹೊರಗೆ ಪ್ರತ್ಯಕ್ಷವದೆ | ಹೊರಗಿದ್ದು ಒಳಗೆ ತೋರುವದು | ಹೊರಗೆ ಜಗತ್ತು ಉಂಟು | ಪ್ರತ್ಯಕ್ಷವಾದ್ದರಿಂದ | ಅಂತರದಲ್ಲಿ ರಜತ ಪ್ರತ್ಯಕ್ಷವಾದಂತೆ | ಜಗತ್ತು ಪ್ರತ್ಯಕ್ಷ ತೋರುವದರಿಂದ ವಿಜ್ಞಾನಮಯವಾಗಿದೆ | ಇಲ್ಲದಿದ್ದರೆ ಪ್ರತ್ಯಕ್ಷ ತೋರಬಾರದಾಗಿತ್ತು |
| | ಪರೋಕ್ಷವಾದಿ | ಭೌದ್ಧ | ಪರೋಕ್ಷವದೆ | ಅನುಮಾನಕ್ಕೆ ವಿಷಯವಾಗಿದೆ | ಜಗತ್ತು ಅನುಮೇಯವಾಗಿದೆ | ವ್ಯವಹಾರಕ್ಕೆ ಆಸ್ಪದವಾದ್ದರಿಂದ | ಪ್ರವೃತ್ತಿ ಮೂಲಕ ರಜತಾನುಮಾನದಂತೆ | ವ್ಯವಹಾರ ಮೂಲಕ ಜಗತ್ತು ಅನುಮೇಯವಾಗಿದೆ | ಇಲ್ಲದಿದ್ದರೆ ವ್ಯವಹಾರವೇ ನಡೆಯಬಾರದಾಗಿತ್ತು |

# ಷಟ್‌ಖ್ಯಾತಿ ವಿಷಯ ಪ್ರದರ್ಶನ ಪತ್ರಿಕೆ

| | ಮತಗಳು | :ಶಾಸ್ತ್ರ | ಜಗತ್ತು | ಭ್ರಮ | ಪ್ರತಿಜ್ಞಾ | ಹೇತು | ದೃಷ್ಟಾಂತ | ಯುಕ್ತಿ | ತರ್ಕ |
|---|---|---|---|---|---|---|---|---|---|
| ಸತ್‌ಖ್ಯಾತಿ | ದ್ವೈತ | ದ್ವೈತ ಗ್ರಂಥಗಳು | ಸತ್ಯವದೆ | ಪ್ರತ್ಯಕ್ಷವದೆ | ಪರಮಾತ್ಮನಲ್ಲಿ ಜಗತ್ತು ಸತ್ಯವಾಗಿದೆ | ತೋರಿಯಡ ಗುವದರಿಂದ | ಶುಕ್ತಿ ರಜತ ದಂತೆ | ತೋರಿಯಡಗುವದ ರಿಂದ ಜಗತ್ತು ಸತ್ಯ ವಾಗಿದೆ | ಅಸತ್ತಾಗಿದ್ದರೆ ಪ್ರತ್ಯಕ್ಷ ತೋರಬಾರ ದಾಗಿತ್ತು |
| ಅಖ್ಯಾತಿ | ಸಾಂಖ್ಯ ಪ್ರಭಾಕರರು | ಸಾಂಖ್ಯ ಸೂತ್ರ ಪೂರ್ವ ಮೀಮಾಂಸಕ | ಸತ್ಯ | ಎರಡು ವಿಷಯ ಅಥವಾ ಎರಡು ಜ್ಞಾನಗಳ ವಿವೇಕ ಅಭಾವ ರೂಪವದೆ | ಜೀವನಲ್ಲಿ ಜಗತ್ತು ವಿವೇಕ ಅಭಾವದಿಂದ ಪ್ರತ್ಯಕ್ಷ ತೋರಿದೆ | ದೋಷ ಸಹಿತ ವಾದ್ದರಿಂದ | ಶುಕ್ತಿ ರಜತ ದಂತೆ | ದೋಷವಿರುವದರಿಂದ ಪ್ರತ್ಯಕ್ಷ ಪ್ರತೀತಿ ಯಾಗಿದೆ | ದೋಷವಿಲ್ಲದಿದ್ದರೆ ತೋರಬಾರದಾಗಿತ್ತು |

# ಷಟ್ಖ್ಯಾತಿ ವಿಷಯ ಪ್ರದರ್ಶನ ಪತ್ರಿಕೆ

| | ಮತಗಳು | ಶಾಸ್ತ್ರ | ಜಗತ್ತು | ಭ್ರಮ | ಪ್ರತಿಜ್ಞಾ | ಹೇತು | ದೃಷ್ಟಾಂತ | ಯುಕ್ತಿ | ತರ್ಕ |
|---|---|---|---|---|---|---|---|---|---|
| ಅನ್ಯಥಾ ಖ್ಯಾತಿ | ನವೀನ ನೈಯಾಯಿಕರು | ನ್ಯಾಯ | ಸತ್ಯ | ಅನ್ಯದರಲ್ಲಿ ಅನ್ಯ ಧರ್ಮ ಪ್ರತೀತಿ | ಈಶ್ವರನಲ್ಲಿ ಜಗತ್ತು ತೋರುವದು ಭ್ರಮವಾಗಿದೆ | ದೋಷಮತ್ತು ಸಂಸ್ಕಾರ ಸಹಿತವಾದ್ದರಿಂದ | ಶುಕ್ತಿಯಲ್ಲಿ ರಜತತ್ವ ಧರ್ಮ ಪ್ರತೀತಿಯಂತೆ | ದೋಷದಿಂದ ಜಗತ್ತು ತೋರಿದೆ | ಇಲ್ಲದಿದ್ದರೆ ತೋರಬಾರದಾಗಿತ್ತೆಂಬುದೇ ತರ್ಕ |
| | ಪ್ರಾಚೀನ ನೈಯಾಯಿಕರು | ನ್ಯಾಯ | ಸತ್ಯ | ಅನ್ಯದಲ್ಲಿ ಅನ್ಯ ತೋರುವದು | ಈಶ್ವರನಲ್ಲಿ ಜಗತ್ತು ತೋರಿದೆ | ದೋಷಮಹಾತ್ಮ್ಯೆಯಿಂದ | ಅನ್ಯದೇಶದಲ್ಲಿದ್ದ ರಜತವು ಸಮ್ಮುಖ ಶುಕ್ತಿಯಲ್ಲಿ ತೋರಿದಂತೆ | ದೋಷವಿರುವದರಿಂದಲೇ ಜಗತ್ತು ತೋರಿದ್ದೈ | ಇಲ್ಲದಿದ್ದರೆ ತೋರಬಾರದಾಗಿತ್ತು |
| ಅನಿರ್ವಚನೀಯ ಖ್ಯಾತಿ | ವೇದಾಂತ | ಬ್ರಹ್ಮಸೂತ್ರ | ಮಿಥ್ಯಾ | ಸದಸದ್ವಿಲಕ್ಷಣವಾಗಿರುವದು | ಬ್ರಹ್ಮದಲ್ಲಿ ಜಗತ್ತು ಮಿಥ್ಯಾ ಆಗಲಿಕ್ಕೆಯೋಗ್ಯವಾಗಿದೆ | ಅನಿರ್ವಚನೀಯವಾದ್ದರಿಂದ | ಶುಕ್ತಿ ರಜತದಂತೆ | ಅನಿರ್ವಚನೀಯವಾದ್ದರಿಂದ ಜಗತ್ತು ಮಿಥ್ಯೆಯಾಗಿದೆ | ಇಲ್ಲದಿದ್ದರೆ ಅನಿರ್ವಚನೀಯವಾಗಬಾರದಾಗಿತ್ತೆಂಬುದೇ |

ಖ್ಯಾತಿಗಳ ವಿಷಯಂಗಳೋತು ಸುರಲಿಲ್ಲಾರು। ಖ್ಯಾತಿಗೊಂಡಿರ್ಪ ಭಾಷಾದಿ ಗ್ರಂಥದೊಳು। ಪ್ರೊತನಿಜ ನಿಶ್ಚಲದ ಹಾಗೆ॥

**ಬಳಿಕ,** ಬ್ರಹ್ಮದಲ್ಲಿ ಜಗತ್ತು ಕಲ್ಪಿತವಾಗಿರುವದೆಂದೂ, ಅದರಿಂದ ಬ್ರಹ್ಮಕ್ಕೆ ಯಾವ ಹಾನಿಯೂ ಇಲ್ಲೆಂದೂ, ಬ್ರಹ್ಮವನ್ನು ಅರಿಯುವ ಪರ್ಯಂತರ ಜಗತ್ತು ಸತ್ಯದಂತೆ ತೋರುವದೆಂದೂ ಹೇಳುತ್ತಾರೆ.

**ಸೂತ್ರ ಏಕಮೇವಾದ್ವಿತಿಯಾತ್ಮನಲ್ಲೀ ತೋರ್ಪ|**
**ಲೋಕರಂಜನೆಯು ಕಾಲ್ಪನಿಕವೈಸೆ||**

**ಟೀಕಾ:-** ಏಕಂ, ಏವ ಅದ್ವಿತಿಯ=ಕ್ರಮದಿಂದ ಸ್ವಗತ, ಸಜಾತಿ, ವಿಜಾತಿ ಭೇದವಿಲ್ಲದ, ಆತ್ಮನಲ್ಲಿ=ಸಚ್ಚಿದಾನಂದ ಬ್ರಹ್ಮದಲ್ಲಿ, ಈ ತೋರ್ಪ=ಪ್ರತ್ಯಕ್ಷವಾಗಿ ಕಾಣಿಸುವ, ಲೋಕರಂಜನೆಯು=ನಾಮರೂಪಾತ್ಮಕ ಜಗತ್ತಿನ ಪ್ರತೀತಿಯು, ಕಾಲ್ಪನಿಕವೈಸೆ= ಕಲ್ಪಿತವಾಗಿರುತ್ತದೆ.

**ತಾತ್ಪರ್ಯ:-** * ಸ್ವಗತ, ಸಜಾತಿ, ವಿಜಾತಿ ಶೂನ್ಯವಾದ ಬ್ರಹ್ಮದಲ್ಲಿ, ಈ ತೋರುವ ವಿಚಿತ್ರ ಜಗತ್ತೆಲ್ಲವು ಶುಕ್ತಿ ರಜತದಂತೆ ಕಲ್ಪಿತವಾಗಿರುತ್ತದೆ. ಯಾಕಂದರೆ, ವ್ಯಾವಹಾರಿಕ ಶುಕ್ತಿಯಲ್ಲಿ ಪ್ರಾತಿಭಾಸಿಕ ರಜತವು ಅಭಾವವಾಗಿರುತ್ತದೆ. ರಜತವು ತನ್ನ ಅಭಾವ ಅಧಿಕರಣದಲ್ಲಿ ತೋರಿದ್ದರಿಂದ ಹೇಗೆ ಕಲ್ಪಿತವಾಗಿರುವದೋ, ಹಾಗೇ ಪಾರಮಾರ್ಥಿಕ ಬ್ರಹ್ಮದಲ್ಲಿ ವ್ಯಾವಹಾರಿಕ ಜಗತ್ತು ಅಭಾವವಾಗಿರುತ್ತದೆ. ಜಗತ್ತು ತನ್ನ ಅಭಾವ ಅಧಿಕರಣದಲ್ಲಿ ತೋರಿದ್ದರಿಂದ ಕಲ್ಪಿತವಾಗಿರುತ್ತದೆ. **ಏಕ, ಏವ, ಅದ್ವಿತೀಯ**ಗಳೆಂಬ ಈ ಮೂರು ಶ್ರುತಿ ಪದಗಳು; ಕ್ರಮವಾಗಿ ಉಕ್ತ ಸ್ವಗತಾದಿ ಭೇದತ್ರಯವನ್ನು ನಿರಾಕರಿಸುತ್ತವೆ. ಆದ್ದರಿಂದ ತ್ರಿವಿಧ ಭೇದ ರಹಿತವಾದ್ದರಿಂದ **ಬ್ರಹ್ಮವು** ಸತ್ಯವೆಂತಲೂ, ತ್ರಿವಿಧ ಭೇದಗಳಿಂದ ಕೂಡಿದ್ದರಿಂದ **ಜಗತ್ತು** ಮಿಥ್ಯೆಯೆಂಬದಾಗಿಯೂ ಹೇಳಿದ್ದಾಯಿತು.

**ಶಿಷ್ಯ:-** ಸತ್, ಚಿತ್, ಆನಂದಾದಿ ಧರ್ಮಭೇದಗಳಿಂದ ಬ್ರಹ್ಮವು ಕೂಡಿರುವದರಿಂದ **ಸ್ವಗತ** ಭೇದವುಳ್ಳದ್ದಾಗಿರುತ್ತದೆ. ಅನೇಕ ಜೀವ ಮತ್ತು ಈಶ್ವರ ಇವರುಗಳ ಭೇದವು **ಸಜಾತೀಯ**ವಾಗಿರುತ್ತದೆ. ಜಡಾದಿ ಭೇದವು **ವಿಜಾತೀಯ**ವಾಗಿರುತ್ತದೆ. ಈ ರೀತಿ ತ್ರಿವಿಧ ಭೇದದಿಂದ ಬ್ರಹ್ಮವು ಕೂಡಿರಲಿಕ್ಕೆ ಒಂದೇ ಹೇಗೆ?

**ಗುರು:-** ಹಾಲಿನಲ್ಲಿರುವ ಶುಭ್ರ, ಮಧುರ ದ್ರವಗಳು ಹಾಲಿನ ಸ್ವರೂಪಗಳಾಗಿರುವಂತೆ, ಸಚ್ಚಿದಾನಂದಗಳು ಬ್ರಹ್ಮದ ಸ್ವರೂಪಗಳಾಗಿವೆ.( ಧರ್ಮಗಳಲ್ಲ. )

---

* ಪತ್ರ ಪುಷ್ಪಾದಿಗಳಿಂದಕೂಡಿ ಗಿಡವು ಒಂದಾಗಿರುವದರಿಂದ ಸ್ವಗತ ಭೇದವು. ಗಿಡದಂತೆ ಮತ್ತೊಂದು ಗಿಡವು ತೋರುತ್ತಿರುವದೇ ಸಜಾತೀಯ ಭೇದವು. ಗಿಡಕ್ಕೆ ವಿಲಕ್ಷಣವಾಗಿ ಕಲ್ಲು ಮೊದಲಾದವುಗಳ ತೋರಿಕೆಯೇ ವಿಜಾತೀಯ ಭೇದವು.

ಗುಣಗಳಿಲ್ಲ. ಆದ್ದರಿಂದ **ಸ್ವಗತ** ಭೇದವಿಲ್ಲ. ಒಬ್ಬ ಸೂರ್ಯನೇ ಅನೇಕವಾಗಿ ತೋರಿದಂತೆ, ಒಬ್ಬ ಆತ್ಮನೇ ಉಪಾಧಿಗಳ ಮೂಲಕ ಜೀವೇಶಾದಿ ಭೇದವಾಗಿ ತೋರಿದ್ದರಿಂದ **ಸಜಾತೀಯ** ಭೇದವಿಲ್ಲ. ತನ್ನಲ್ಲಿ ಕಲ್ಪಿತ ಸ್ವಪ್ನಪ್ರಪಂಚದಿಂದ ತನಗೆ ಹೇಗೆ ವಿಜಾತೀಯ ಭೇದವಿಲ್ಲವೊ, ಹಾಗೆ ಪಾರಮಾರ್ಥಿಕ ಬ್ರಹ್ಮದಲ್ಲಿ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಜಡ ಪ್ರಪಂಚ ತೋರಿದರೂ **ವಿಜಾತೀಯ** ಭೇದವಿಲ್ಲ. ಆದ್ದರಿಂದ ಬ್ರಹ್ಮವು ಒಂದೇ.

**ಶಿಷ್ಯ:-** **"ಸದೇವ ಸೋಮ್ಯ ಇದಂ ಅಗ್ರೇ ಆಸೀತ್"** ಇದಂ ಶಬ್ದದಿಂದ ತೋರಿಸಲ್ಪಟ್ಟ ಜಗತ್ತು ಪೂರ್ವದಲ್ಲಿ ಸದ್ರೂಪವಾಗಿತ್ತು ಅಂದರೆ? ಸತ್ತಿ ನೊಡನೆ ಅಭಿನ್ನವಾಗಿತ್ತೆಂದು ಹೇಳಿ; ಈಗ ಅದ್ವಿತೀಯ ಪದದಿಂದ ಇಲ್ಲೆಂದು ನಿರಾಕರಿಸಿದರೆ, ವ್ಯಾಘಾತ ದೋಷ ಬರುವದಿಲ್ಲವೇ ?

**ಗುರು:-** **'ಸದೇವ ಆಸೀತ್'** ಅವಧಾರಣದಿಂದ ಸದ್ರೂಪವೇ ಇತ್ತು. ಬೇರೆ ಏನೂ ಇಲ್ಲ ಎಂಬ ಈ ಅರ್ಥವನ್ನೇ ಹೇಳುತ್ತದೆ. ಆದರೂ ನಿನಗೆ ಬಂದ ಈ ವಿಕಲ್ಪವು ಬರಬಹುದೆಂದು, ತಿಳಿದು ಶ್ರುತಿಯು ಪುನಃ ಅದ್ವಿತೀಯ ಎಂಬ ಪದ ದಿಂದ ನಿರಾಕರಿಸಿದೆ. ಅರ್ಥವನ್ನು ದೃಢಮಾಡುವದಕ್ಕಾಗಿ ಹೇಳಿದ್ದರಿಂದ ವ್ಯಾಘಾತ ದೋಷಕ್ಕೆ ಅವಕಾಶವಿಲ್ಲ. ಮತ್ತು ವಿವೇಕ ಚಿಂತಾಮಣಿಯಲ್ಲಿ ಹೇಳಿದ **"ಭೇದ ನಿರಾಕರಣ' 'ಸಿದ್ಧಾಂತ ಶ್ರುತಿ'** ಎಂಬ ಪ್ರಕರಣಗಳನ್ನು ಅವಲೋಕನಮಾಡು. ಇದೇ ಅರ್ಥವೇ ಅಲ್ಲಿಯೂ ಉಂಟು.

**ಶಿಷ್ಯ:-** **"ಅಸ್ಮಿನ್ ಗ್ರಾಮೇ ಏಕಮೇವಾದ್ವಿತೀಯೋ ರಾಜಾ ವರ್ತತೆ"** ಈ ಊರಲ್ಲಿ ಒಬ್ಬ ರಾಜನೇ ಇರುತ್ತಾನೆಂದು ಹೇಳಿದರೂ, ಅನ್ಯ ಪ್ರಜೆಗಳು ಹೇಗಿರುವರೋ, ಹಾಗೇ 'ಏಕಮೇವಾದ್ವಿತೀಯಂ ಬ್ರಹ್ಮ' ಸೃಷ್ಟಿಪೂರ್ವದಲ್ಲಿ ಒಂದು ಬ್ರಹ್ಮವೇ ಉಂಟೆಂದು ಹೇಳಿದರೂ, **ವಿಜಾತೀಯ** ಭೇದವೇನಾದಗೂ ಇರಬಹುದು.

**ಗುರು:-** ಹೀಗೆ ಊಹೆಯನ್ನು ಮಾಡುವದು ಯೋಗ್ಯವಲ್ಲ. ಯಾಕಂದರೆ, **'ಏಕವಿಜ್ಞಾತೆ ಸರ್ವಂವಿಜ್ಞಾತಂ'** ಒಂದು ತಿಳಿಯುತ್ತಿರಲಿಕ್ಕೆ ಸರ್ವವೂ ತಿಳಿ ದಂತಾಯಿತು. ಎಂಬ ಪ್ರತಿಜ್ಞೆಮಾಡಿ **'ಸದೇವ'** ಎಂದು ಉಪದೇಶಕ್ಕೆ ಆರಂಭ ಮಾಡಿರುವರು. ಆದ್ದರಿಂದ ನೀನು ಹೇಳಿದ ರೀತಿ ಅರ್ಥಮಾಡಿದರೆ, ಪ್ರತಿಜ್ಞಾ ಭಂಗವಾಗುವದು. ಮತ್ತು ಏಕಜ್ಞಾನವಾಗದೆ ಅನೇಕದ ಜ್ಞಾನವಾದೀತು. ಪೂರ್ವಾ ಪರ ಗ್ರಂಥ ತಾತ್ಪರ್ಯಕ್ಕೂ ವಿರೋಧವಾಗುತ್ತದೆ. ಆದರಿಂದ ಹಾಗಲ್ಲ.

ಬಳಿಕ, ಈ ರೀತಿ ಸೂತ್ರಾರ್ಥವನ್ನು ಸೂಚಿಸಿ; ಬಳಿಕ ಶಿಷ್ಯನ ಪ್ರಶ್ನೆಯನ್ನು ಸ್ವೀಕಾರಮಾಡುತ್ತಾರೆ.

**ಕಂದ ಕೇಳಹುದು ನೀನಿಂದು ಮಾಡಿದ ಚೋದ್ಯ ।**
**ಅಂದವಾಗಿರ್ಪುದೀಗಳಿಂತಿದ ನಿನ್ನ ।**
**ಸಂದೇಹ ವಳಿಯ ಲೊರೆಯುವೆನು ॥೧॥**

**ಟೀಕಾ:—** ಕಂದ=ಹೇಮಗನೇ! ಕೇಳು=ಏಕಾಗ್ರಚಿತ್ತದಿಂದಾಲಿಸು, ನೀನು=ನೀನು, ಇಂದು= ಈ ಹೊತ್ತು, ಮಾಡಿದ=ಮಾಡಿರುವ, ಚೋದ್ಯವು= ಪ್ರಶ್ನೆಯು, ಅಹುದು=ಯೋಗ್ಯವಾಗಿರುವದು, ಅಂದವಾಗಿರ್ಪುದು=ಮನೋಹರ ವಾಗಿರುವದು, ಈಗಳ್=ತಕ್ಷಣವೇ, ಇಂತು=ಈ ಪ್ರಕಾರ, ಇದನಿನ್ನ ಸಂದೇಹವು= ಈ ನಿನ್ನ ಸಂಶಯವು, ಅಳಿಯಲ್ = ನಾಶವಾಗುವಹಾಗೆ, ಒರೆಯುವೆನು= ತಿಳಿಸುತ್ತೇನೆ.

**ತಾತ್ಪರ್ಯ:-** ಎಲೋ ಬಾಲಕನೇ! ನೀನು ಮಾಡಿರುವ ಪ್ರಶ್ನೆಯು ಮನೋಹರವಾಗಿರುತ್ತದೆ. ಅಂದರೆ? ಯೋಗ್ಯವಾದ ಪ್ರಶ್ನೆಯನ್ನು ಮಾಡಿರುವಿ. ಆದ್ದರಿಂದ ನಿನ್ನ ಈ ಸಂಶಯವು ನಾಶವಾಗುವ ಹಾಗೆ ಹೇಳುತ್ತೇನೆ. ಅಂದರೆ, ಶೃತಿ, ಯುಕ್ತಿ, ಅನುಭವಗಳಿಂದ ನೀನು ಒಡಂಬಡುವ ಹಾಗೆ ಹೇಳುತ್ತೇನೆ. ಏಕಾಗ್ರದಿಂದ ಆಲಿಸು.

**ಬಳಿಕ,** ಮುಂದೆ ಹೇಳುವ ಉತ್ತರವನ್ನು ಯಾವ ಪುರುಷನು, ಅರಿಯು ವನೋ, ಅವನು ಪುರುಷಾರ್ಥವನ್ನು ಹೊಂದುತ್ತಾನೆಂದು ಹೇಳುತ್ತಾರೆ.

**ಇದನಾವನರಿದೊಡವ ನೊದಿದು ಸಂಸಾರವಂ ।**
**ಮುದದಿಂದ ಪಡೆವ ನಕಲಂಕವಾದ ನಿಜ ।**
**ಪದವನಂತದನೆ ತಿಳಿ ಪೇಳ್ವೆ ॥೨॥**

**ಟೀಕಾ:=** ಆವನು=ಯಾವಾತನು, ಇದನು=ಈಗ ಹೇಳುವದನ್ನು, ಅರಿ ದೊಡೆ=ತಿಳದದ್ದು ಆದರೆ, ಅವನು=ಆತನು, ಸಂಸಾರವಂ=ಜನನ ಮರಣಾದಿ ರೂಪ ಸಂಸಾರವನ್ನು, ಒದೆದು=ತಿರಸ್ಕರಿಸಿ, ಮುದದಿಂದೆ ಸಂತೋಷದಿಂದೆ, ಅಕಲಂಕವಾದ=ನಿರ್ದೋಷವಾದ, ನಿಜಪದವನು=ತನ್ನ ಸ್ವರೂಪವನ್ನು, ಪಡೆ ವನು=ಹೊಂದುವನು, ಅಂತದನೆ=ಅಂಥಾ ವಸ್ತುವನ್ನೇ, ಪೇಳ್ವೆ=ಹೇಳುತ್ತೇನೆ, ತಿಳಿ=ಅರಿ

**ತಾತ್ಪರ್ಯ:-** ಈಗ ನಾವು ಹೇಳತಕ್ಕ ದ್ವೈತಾದ್ವೈತ ವಿವೇಕವನ್ನು ಯಾವಾತನು ಚನ್ನಾಗಿ ತಿಳಿಯುವನೋ, ಅವನು ಈ ಕಲ್ಪಿತ ದ್ವೈತ ಪ್ರಪಂಚವು ಮಿಥ್ಯೆಯೆಂಬ ನಿಶ್ಚಯದಿಂದ (ಒದೆದು) ತಿರಸ್ಕರಿಸಿ; ಕಲಂಕರೂಪಭೇದದ ಗಂಧ

ವಾದರೂ ಕೂಡಾ ಇಲ್ಲದ, ಅಭೇದ ರೂಪ ಬ್ರಹ್ಮವೇ ನಾನೆಂಬ ಅಪರೋಕ್ಷ ಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾನೆ. ಅಂದರೆ ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿರೂಪ ಮೋಕ್ಷವನ್ನು ಹೊಂದುತ್ತಾನೆಂಬ ಭಾವವು.

ಬಳಿಕ, ಎಲ್ಲಕ್ಕೂ ಮೊದಲು ಒಂದು ಬ್ರಹ್ಮವೇ ಇತ್ತೆಂದು ಈ ಪದದಿಂದ ಹೇಳುತ್ತಾರೆ.

**ವರಸಚ್ಚಿದಾನಂದ ಪರಿಪೂರ್ಣ ನಿತ್ಯ ನಿಜ ।**
**ನಿರತಿಶಯ ನಿರ್ವಿಕಲ್ಪ ನಿರುಪಾಧಿಯಾ ।**
**ಗಿರುತಿರ್ಪುದೊಂದು ಪರಬೊಮ್ಮ** ॥೩॥

**ಟೀಕಾಃ—** ವರ=ಶ್ರೇಷ್ಠವಾದ, ಸತ್=ತ್ರಿಕಾಲಾಬಾಧ್ಯವಾದ, ಚಿತ್=ಜ್ಞಾನ ಸ್ವರೂಪವಾದ, ಆನಂದ=ಪರಮ ಪ್ರೇಮಾಸ್ಪದಮಾದ, ನಿತ್ಯ=ನಾಲ್ಕು ಅಭಾವಗಳಿಲ್ಲದ, ಪರಿಪೂರ್ಣ=ಮೂರು ಪರಿಚ್ಛೇದಗಳಿಲ್ಲದ, ನಿಜ=ಸತ್ಯವಾದ, ನಿರತಿಶಯ= ಅತ್ಯಧಿಕವಾದ, ನಿರ್ವಿಕಲ್ಪ = ಕಲ್ಪನೆಗಳಿಲ್ಲದ, ನಿರುಪಾಧಿಯಾಗಿ= ಉಪಾಧಿಯಿಲ್ಲದ್ದಾಗಿ, ಒಂದು=ಅದ್ವಯವಾದ, ಪರಬೊಮ್ಮ=ಪರಬ್ರಹ್ಮವು, ಇರುತಿರ್ಪುದು=ಇರುವದು.

**ತಾತ್ಪರ್ಯ:-** ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ, ನಿಜ, ನಿರತಿಶಯ, ನಿರ್ವಿಕಲ್ಪ, ನಿರುಪಾಧಿಯಾದ ಒಂದು ಬ್ರಹ್ಮವು ಸೃಷ್ಟಿಪೂರ್ವದಲ್ಲಿ ಉಂಟು. ಪ್ರಕೃಷ್ಟ ಪ್ರಕಾಶನು ಚಂದ್ರನೆಂಬಂತೆ, ಸ್ವರೂಪ ಲಕ್ಷಣದಿಂದ ಸಚ್ಚಿದಾನಂದವೇ ಬ್ರಹ್ಮವೆಂದು ಬೋಧಿಸಲ್ಪಡುತ್ತಿದೆ. ಅಥವಾ ಸತ್ತಿಗೆ ಬ್ರಹ್ಮವು ಅಂದರೆ, ನೈಯಾಯಿಕರು ಅಂಗೀಕರಿಸಿದ **ಸತ್ತಾ ಜಾತಿಯಲ್ಲಿಯೂ,** ಸಾಂಖ್ಯರು ಒಡಂಬಟ್ಟ **ಪ್ರಕೃತಿಯಲ್ಲಿಯೂ** § ಅತಿವ್ಯಾಪ್ತಿ ದೋಷವು ಸಂಭವಿಸುತ್ತದೆ. ಅದರ ನಿವೃತ್ತ್ಯರ್ಥವಾಗಿ '**ಚಿತ್**' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಯಾಕಂದರೆ, ಸತ್ತಾ ಜಾತಿಗೂ ಪ್ರಕೃತಿಗೂ ಜ್ಞಾನವಿಲ್ಲ. ಕಿಂತು ಜಡಗಳಾಗಿವೆ. '**ಚಿತ್ತು**' ಬ್ರಹ್ಮವು ಅಂದರೆ, ವಿಜ್ಞಾನ ವಾದಿಯು ಬುದ್ಧಿಯೇ ಆತ್ಮನೆಂದು ಹೇಳುವನು. ಆದ್ದರಿಂದ ಬ್ರಹ್ಮ ಲಕ್ಷಣವು **ಬುದ್ಧಿಯಲ್ಲಿ** ಹೋಗುವದರಿಂದ ಅತಿ ವ್ಯಾಪ್ತಿ ಬರುತ್ತದೆ. ಅದರ ನಿವೃತ್ತಿಗಾಗಿ **ಆನಂದ**ವೆಂಬ ಪದವನ್ನು ಪ್ರಯೋಗಿಸಿದ್ದಾರೆ. ಯಾಕಂದರೆ, ಆ ಬುದ್ಧಿಯು ಕ್ಷಣಿಕವಾಗಿ ಚಂಚಲವಾಗಿ ವಿಕ್ಷೇಪರೂಪ ದುಃಖಕ್ಕೆ ಕಾರಣವಾಗಿದೆ. ಅದರಿಂದ ಅದು ಆನಂದರೂಪವಲ್ಲ. ಆದ್ದರಿಂದ ಬ್ರಹ್ಮರೂಪವಲ್ಲ.

---

§ ಅಲಕ್ಷ್ಯದಲ್ಲಿ ಲಕ್ಷಣದಿರುವಿಕೆಯೇ ಅತಿವ್ಯಾಪ್ತಿ ದೋಷವು. ಲಕ್ಷ್ಯದ ಏಕ ದೇಶದಲ್ಲಿ ಲಕ್ಷಣದ ಇರುವಿಕೆಯೇ ಅವ್ಯಾಪ್ತಿ ದೋಷವು. ಲಕ್ಷ್ಯದಲ್ಲಿ ಲಕ್ಷಣವಿಲ್ಲದಿರುವದೇ ಅಸಂಭವದೋಷವು.

ಭಿನ್ನಗಳೆರಡು ವಿರೋಧಗಳಾದ್ದರಿಂದ ಐಕ್ಯವು ಸಂಭವಿಸುವದಿಲ್ಲ. ಮತ್ತು ಮಾಯಾ **ಸಾವಯುವ**ವಲ್ಲ. ಯಾಕಂದರೆ? ಸಾದಿತ್ವ ಪ್ರಸಂಗ ಬರುವದರಿಂದ; ಮಾಯೆಯು ಸಾದಿ ಅಂದರೆ, ಉತ್ಪತ್ತಿಯಾಗಿರುವುದೆಂದು ಹೇಳಿದರೆ, ಅವಕ್ಕೊಂದು ಕಾರಣವನ್ನು ಹೇಳಬೇಕು. ಕಾರಣ ಮಾತ್ರ ಯಾವದೂ ಇಲ್ಲ. ಅದಕ್ಕೆ ಅದೇ ಕಾರಣವೆಂದು ಹೇಳಿದರೆ, ಅನವಸ್ಥಾ ಪ್ರಸಂಗವು ಬರುತ್ತದೆ. ಆದ್ದರಿಂದ ಸಾವಯುವವಲ್ಲ. ಮತ್ತು ಮಾಯಾ **ನಿರವಯು**ವವೂ ಅಲ್ಲ. ಯಾಕಂದರೆ? ಪ್ರಕೃತಿತ್ವ ಅಂದರೆ ಕಾರಣತ್ವವು ಅಭಾವವಾಗುವದರಿಂದ; ಸಾವಯುವ ಪದಾರ್ಥಗಳೇ ಲೋಕದಲ್ಲಿ ಕಾರಣಗಳಾಗಿರುವದು ಕಂಡುಬರುವದರಿಂದ; ಹಾಗೂ **ಸಾವಯುವ ನಿರವಯುವವೂ** ಅಲ್ಲ. ಯಾಕಂದರೆ? ಸಾವಯುವ ನಿರವಯುವಗಳೆರಡು ವಿರೋಧಗಳಾದ್ದರಿಂದ ಒಂದು ಸ್ಥಳದಲ್ಲಿ ಇರಲಾರವು. ಆದ್ದರಿಂದ ಒಂಭತ್ತು (೯) ರೀತಿಯಿಂದಲೂ ಹೇಳಲಿಕ್ಕೆ ಬಾರದ್ದರಿಂದ ಅನಿರ್ವಾಚ್ಯವೆಂದು ಕರೆಯುತ್ತಾರೆ. ಮತ್ತು ಶುಕ್ತಿಯಲ್ಲಿ ತೋರುವ ರಜತವು ಸತ್ ಆಗಿದ್ದರೆ ಶುಕ್ತಿ ಜ್ಞಾನದಿಂದ ನಾಶವಾಗಬಾರದಾಗಿತ್ತು. ಅಸತ್ತು ಆಗಿದ್ದರೆ ವಂಧ್ಯಾಪುತ್ರನಂತೆ ಪ್ರತೀತಿಯಾಗಬಾರದಾಗಿತ್ತು. ಆದ್ದರಿಂದ ಬಾಧಾಯೋಗ್ಯ ಪ್ರತೀತಿಯಾಗಿರುತ್ತದೆ. ಅದರಂತೆ ಅವಿದ್ಯಾ ತತ್ಕಾರ್ಯ ಪ್ರಪಂಚವು ಬಾಧಾಯೋಗ್ಯ ಪ್ರತೀತಿಯಾದ್ದರಿಂದ ಅನಿರ್ವಚನೀಯವಾಗಿರುತ್ತದೆ. ಜಗದ್ರೂಪಕಾರ್ಯಕ್ಕೆ ಕಾರಣವಾದ್ದರಿಂದ **ಮಾಯೆಯೆಂತಲೂ**, ವಿದ್ಯೆಯಿಂದ ನಾಶವಾಗುತ್ತದೆ. ಅದರಿಂದ **ಅವಿದ್ಯೆಯೆಂದೂ** ಹೇಳಿದ್ದಾರೆ. ಆದ್ದರಿಂದ ಮಾಯಾ ಅವಿದ್ಯಾ ಈ ನಾಮಗಳು ಪರ್ಯಾಯಗಳಾಗಿರುತ್ತವೆ. ಆದ್ದರಿಂದ ಮುಂದಿನ ಪದದಲ್ಲಿ 'ಆಧೇಯವೀಮಾಯೆ' ಎಂದು ಹೇಳಿದ್ದಾರೆ. ಇಂಥಾ ಲಕ್ಷಣಾತ್ಮಕ ಅವಿದ್ಯೆಯು ಸ್ವತಂತ್ರವಿರದೆ, ಬ್ರಹ್ಮದ ಸತ್ತೆಯನ್ನು ಆಶ್ರಯ ಮಾಡಿಕೊಂಡಿರುತ್ತದೆ.

**ಶಿಷ್ಯ:-** ಬೆಳಕು ಕತ್ತಲೆಗಳಂತೆ ಬ್ರಹ್ಮಮಾಯೆಗಳೆರಡು ವಿರೋಧ ಸ್ವಭಾವವುಳ್ಳವುಗಳಾಗಿರುತ್ತವೆ. ಆದ್ದರಿಂದ ಅವಿದ್ಯೆಯು ಶುದ್ಧ ಚೈತನ್ಯವನ್ನು ಆಶ್ರಯ ಮಾಡಲಾರದು.

**ಗುರು:-** ಅಜ್ಞಾನಕ್ಕೆ ವಿರೋಧಿಯಾದದ್ದು ಜ್ಞಾನವೇ ಹೊರ್ತು ಶುದ್ಧ ಚೈತನ್ಯವಲ್ಲ. ಕಿಂತು ವೃತ್ತಿ ಪ್ರತಿಬಿಂಬಿತ ಚೈತನ್ಯ ವಿರೋಧಿಯಾಗಿರುತ್ತದೆ. ಅದು ಅಜ್ಞಾನಕ್ಕೆ ಆಶ್ರಯವಾಗಿಲ್ಲ. ಯಾವ ಶುದ್ಧ ಚೈತನ್ಯವು ಅಜ್ಞಾನಕ್ಕೆ ಆಶ್ರಯವಾಗಿದೆಯೋ, ಅದು ಅಜ್ಞಾನಕ್ಕೆ ವಿರೋಧಿಯಾಗಿಲ್ಲ.

**ಶಿಷ್ಯ:-** ಶುದ್ಧ ಚೇತನವು ಅಜ್ಞಾನಕ್ಕೆ ವಿರೋಧಿಯಲ್ಲ. ಅಂದಮೇಲೆ ಅದು ಘಟಾದಿಗಳಂತೆ ಅಪ್ರಕಾಶವಾಗಬೇಕಾಯಿತು. ಅದು ನಮಗೆ ಇಷ್ಟ

ವಂದರೆ? ಸ್ವಯಂಪ್ರಕಾಶವನ್ನು ಹೇಳುವ ಶ್ರುತಿಗೆ ವಿರೋಧ ಬರುವದು. ಇದಕ್ಕೆ ಏನುಗತಿ?

**ಗುರು:-** ಸೂರ್ಯನು ಪ್ರಕಾಶಮಾನನಾಗಿರುವನು. ಮತ್ತು ಹುಲ್ಲು ಹತ್ತಿ ಮೊದಲಾದ ವಸ್ತುಗಳನ್ನು ಬೆಳಗುತ್ತಾನೆ. ಅವನೇ ಪುನಃ ಸೂರ್ಯಕಾಂತ ಶಿಲೆಯಲ್ಲಿ ಪ್ರತಿಬಿಂಬಿಸಿ ಹುಲ್ಲು ಅರಳೆಗಳನ್ನು ಸುಟ್ಟು ಬೂದಿ ಮಾಡುತ್ತಾನೆ. ಅಂದರೆ ಸೂರ್ಯನು ಸಾಮಾನ್ಯ ಪ್ರಕಾಶದಿಂದ ತೃಣಾದಿಗಳನ್ನು ಬೆಳಗುತ್ತಾನೆ. ವಿಶೇಷಪ್ರಕಾಶದಿಂದ ಅವುಗಳನ್ನೇ ಸುಡುತ್ತಾನೆ. ಹೇಗೋ ಹಾಗೇ ಶುದ್ಧ ಚೈತನ್ಯರೂಪ ಬ್ರಹ್ಮವು ಸಾಮಾನ್ಯರೂಪದಿಂದ ಅವಿದ್ಯೆಗೆ ಆಶ್ರಯವಾಗಿರುತ್ತದೆ. ಅದೇ ಚೈತನ್ಯವು ವೃತ್ತಿ ಪ್ರತಿಬಿಂಬಿತ ರೂಪದಿಂದ ವಿಶೇಷವಾಗಲು ಅವಿದ್ಯೆಯನ್ನು ನಾಶಮಾಡುತ್ತದೆ. ಆದ್ದರಿಂದ ಬ್ರಹ್ಮವು **ಸಾಮಾನ್ಯ ರೂಪದಿಂದ** ಅವಿದ್ಯೆಗೆ ಸಹಾಯವಾಗಿದೆ. **ವಿಶೇಷರೂಪದಿಂದ** ವಿರೋಧಿಯಾಗಿದೆ. ಮತ್ತು ಸ್ವಯಂ ಪ್ರಕಾಶರೂಪವಾಗಿದೆ. ಆದ್ದರಿಂದ ಯಾವ ದೋಷವೂ ಇಲ್ಲ.

**ಶಿಷ್ಯ:-** ಚಿನ್ಮಾತ್ರ ಬ್ರಹ್ಮದಲ್ಲಿ ಅಜ್ಞಾನವಿರುವದು ಸ್ವಭಾವಿಕವೋ? ಅಥವಾ ಉಪಾಧಿಸಂಬಂಧವಾಗಿಯೋ? ಸ್ವಭಾವಿಕವೆಂದು ಹೇಳಿದರೆ; ಆತ್ಮನಂತೆ ನಿವೃತ್ತಿಯೇ ಸಂಭವಿಸುವದಿಲ್ಲ. ಉಪಾಧಿಮೂಲಕವೆಂದು ಹೇಳಿದರೆ; ಅಜ್ಞಾನಕ್ಕೆ ಅಜ್ಞಾನವೇ ಉಪಾಧಿಯಾಗಬೇಕಾಯಿತು. ಹೀಗಾದರೆ, ಆತ್ಮಾಶ್ರಯ ದೋಷವು ಬರುವದು. ಎರಡನೇ ಅಜ್ಞಾನವನ್ನು ಅಪೇಕ್ಷಿಸಿದರೆ; ಅನ್ಯೋನ್ಯಾಶ್ರಯ ದೋಷಬರುವದು. ಅದು ಬೇರೊಂದನ್ನು ಅಪೇಕ್ಷಿಸಿದರೆ; ಚಕ್ರಿಕಾಪತ್ತಿ ಅನವಸ್ಥಾದಿ ದೋಷಗಳು ಬರುತ್ತವೆ.

**ಗುರು:-** ಅವಿದ್ಯೆಯು ತನಗೆ ತಾನೇ ಉಪಾಧಿಯಾಗಿರುವದು. ಅನಾದಿಯಾಗಿರುವದರಿಂದ ಆತ್ಮಾಶ್ರಯಾದಿ ದೋಷಗಳು ಬರುವದಿಲ್ಲ. ಯಾಕಂದರೆ, ಅದು ಅಂಥಾ ಅನಿರ್ವಚನೀಯ ಶಕ್ತಿಯುಳ್ಳದ್ದಿರುತ್ತದೆ. ಹಾಗಿರುವದು ಅದಕ್ಕೆ ಭೂಷಣವೆ. ಸ್ವಭಾವಿಕವಾಗಿದ್ದರೂ ನಿವೃತ್ತಿಯೂ ಸಂಭವಿಸುತ್ತದೆ. ಹೇಗಂದರೆ ಘಟದಲ್ಲಿ ರೂಪವು ಸ್ವಭಾವಿಕವಿದ್ದರೂ ಹೇಗೆ ನಿವೃತ್ತಿಯಾಗುತ್ತದೆಯೋ, ಅಥವಾ ಘಟದ ಪ್ರಾಗಭಾವವು ಕಪಾಲಗಳಲ್ಲಿ ಸ್ವಭಾವಸಿದ್ಧವಿದ್ದರೂ ಘಟೋತ್ಪತ್ತಿಯಾದಕೂಡಲೇ ಹೇಗೆ ನಿವೃತ್ತಿಯಾಗುತ್ತದೆಯೋ; ಹಾಗೆ ಬ್ರಹ್ಮಾಶ್ರಯದಲ್ಲಿ ಅಜ್ಞಾನವು ಸ್ವಭಾವವಾಗಿದ್ದರೂ ಜ್ಞಾನದಿಂದ ನಿವೃತ್ತಿಯಾಗುತ್ತದೆ.

**ಶಿಷ್ಯ:-**ಶುದ್ಧ ಚಿನ್ಮಾತ್ರ ಬ್ರಹ್ಮದಲ್ಲಿ ಅಜ್ಞಾನವನ್ನು ಅಂಗೀಕರಿಸಿದರೆ, ಆ ಶುದ್ಧ ಬ್ರಹ್ಮಕ್ಕೆ ಸಂಸಾರವನ್ನು ಹೇಳಬೇಕಾಯಿತಲ್ಲವೆ?

**ಗುರು:-** ಮುಖಕ್ಕೂ ಕನ್ನಡಿಗೂ ಸಂಬಂಧವಾಗಲು ದರ್ಪಣ ಸಂಬಂಧಿ ಮಲಿನತ್ವವು ಪ್ರತಿಬಿಂಬದಲ್ಲಿ ತೋರುವದೇ ಹೊರ್ತು, ಬಿಂಬವಾದ ಮುಖದಲ್ಲಿ ತೋರುವದಿಲ್ಲ. ಅದರಂತೆ ಶುದ್ಧ ಬ್ರಹ್ಮಕ್ಕೂ ಅಜ್ಞಾನಕ್ಕೂ ಸಂಬಂಧವಾಗಲು, ಅಜ್ಞಾನಸಂಬಂಧಿ ಸಂಸಾರವು ಪ್ರತಿಬಿಂಬವಾದ ಜೀವನಲ್ಲಿ ತೋರುತ್ತದೆ ಹೊರ್ತು, ಬಿಂಬಭೂತ ಚಿನ್ಮಾತ್ರ ಬ್ರಹ್ಮದಲ್ಲಿ ಇಲ್ಲ.

**ಆಶ್ರಯತ್ವ ವಿಷಯತ್ವ ಭಾಗಿನೀ ನಿರ್ವಿಭಾಗ ಚಿತಿರೇವ ಕೇವಲಾ"** ಮಾಯೆಗೆ ಆಶ್ರಯ ಮತ್ತು ವಿಷಯುವಾದದ್ದು ಕೇವಲ ಶುದ್ಧ ಚೈತನ್ಯವೇ ಆಗಿರ ತ್ತದೆಂದು ಸಂಕ್ಷೇಪ ಶಾರೀರಕಾಗರು ಹೇಳಿರುತ್ತಾರೆ **"ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ"** ಪರಬ್ರಹ್ಮದೊಡನೆ ಕೂಡಿದ ಮಾಯೆಯು ಪ್ರಕೃತಿಯೆಂದು ತಿಳಿಯತಕ್ಕದ್ದು. ಹೀಗೆಂಬ ಶ್ರುತಿಯೂ ಉಂಟು.

**ಶಿಷ್ಯ:-**ಜಲದಲ್ಲಿ ಬಿದ್ದ ತೈಲಬಿಂದುವಿನಂತೆ, ಮಾಯೆಯು ಬ್ರಹ್ಮದ ಸರ್ವಾಂಶದಲ್ಲಿ ಉಂಟೋ? ಅಥವಾ ಪಕ್ಷಿಯು ವೃಕ್ಷದ ತುದಿಯಲ್ಲಿ ಕೂತಂತೆ, ಏಕಾಂಶದಲ್ಲಿ ಉಂಟೋ ? ಮೊದಲನೇ ಪಕ್ಷವನ್ನು ಅಂಗೀಕರಿಸಿದರೆ ಬ್ರಹ್ಮದಂತೆ ಮಾಯೆಯೂ ವಸ್ತುವಾಗುವದರಿಂದ ದ್ವೈತಾಪತ್ತಿ ಬರುವದು. ಎರಡನೇ ಪಕ್ಷ ವನ್ನು ಅಂಗೀಕರಿಸಿದರೆ, ನಿರವಯುವ **(ನಿರಂಶ)** ವಾದ ಬ್ರಹ್ಮದಲ್ಲಿ ಪಾದ **(ಅಂಶ)** ಕಲ್ಪನೆಯನ್ನು ಮಾಡುವದು ಯೋಗ್ಯವಲ್ಲ. ಮಾಡಿದರೆ ಅನಿತ್ಯ ದೋಷ ಬರುವದು.

**ಗುರು:-** ಬ್ರಹ್ಮದ ಸಂಪೂರ್ಣ ದೇಶದಲ್ಲಿ ಮಾಯೆಯನ್ನು ನಾವು ಒಪ್ಪುವ ದಿಲ್ಲ. ಆದ್ದರಿಂದ ದ್ವೈತವು ಸಂಭವಿಸುವದಿಲ್ಲ. **"ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ"** ಬ್ರಹ್ಮದ ಒಂದು ಪಾದಭಾಗದಲ್ಲಿ ಮಾಯಾ ತತ್ಕಾರ್ಯ ಜಗತ್ತುಂಟು. ಮೂರುಪಾದವು ಸ್ವಯಂಪ್ರಕಾಶವಾಗಿದೆ. ಅದರಲ್ಲಿ ಏನೂ ಇಲ್ಲ. ಹೀಗೆಂಬ ಶ್ರುತಿಯುಂಟು. ಹೇಗಂದರೆ ಆಕಾಶದ ಯಾವದೋ ಒಂದುಭಾಗದಲ್ಲಿ ಮೇಘಮಂಡಲವಿರುವಂತೆ, ಬ್ರಹ್ಮದ ಪಾದಭಾಗದಲ್ಲಿ ಮಾಯೆಯುಂಟು. ಪಾದವಿಭಾಗರಹಿತವಾದ ಬ್ರಹ್ಮದಲ್ಲಿ ಶ್ರುತಿಯು ವಿಭಾಗವನ್ನು ಹೇಳಿರುವದಾದರೂ, ಅಜ್ಞಜನರ ದೃಷ್ಟಿಯನ್ನು ಅನುವಾದ ಮಾಡಿರುತ್ತದೆ. ಹೊರ್ತು ಯಥಾರ್ಥವಲ್ಲ. ಹೇಗಂದರೆ ? ಬೇಸಿಗೆಯ ಮಧ್ಯಾಹ್ನಕಾಲದ ಸೂರ್ಯ ಮಂಡಲದಲ್ಲಿ, ಗೂಗಿಯ ದೃಷ್ಟಿಯಿಂದ ಆರೋಪಿತವಾದ ಅಂಧಕಾರವು ಇರುತ್ತ ದೆಂದು ಹೇಳಿದಂತೆ; ಬ್ರಹ್ಮದಲ್ಲಿ ಮಾಯೆಯುಂಟೆಂದು ಹೇಳಿರುವದಾದರೂ ಹೀಗೆಯೇ ಉಂಟು. ಕಾಗಿಯು ಕೂತದ್ದೇ ದೇವದತ್ತನ ಮನೆಯೆಂಬಂತೆ,

ಮಾಯಾ ಉಪಲಕ್ಷಣದಿಂದ ಉಪಲಕ್ಷಿತವಾದ ಬ್ರಹ್ಮವನ್ನು ಅಪರೋಕ್ಷಮಾಡಿ ಕೊಡುವದಕ್ಕಾಗಿ ಮಾಯೆಯನ್ನು ಶ್ರುತಿಯು ಸ್ವೀಕಾರ ಮಾಡಿರುತ್ತದೆ. ವಾಸ್ತವಿಕ ಪಾರಮಾರ್ಥಿಕ ದೃಷ್ಟಿಯಿಂದ ಏನೂ ಇಲ್ಲೆಂದು ಹೇಳುತ್ತಾರೆ. ಆದ್ದರಿಂದ ಉಕ್ತ ಶಂಕೆಗಳಿಗೆ ಅವಕಾಶವೇ ಇಲ್ಲ.

ಸೂರ್ಯನ ದೃಷ್ಟಿಯಿಂದ ಮೃಗಜಲವು ಅತ್ಯಂತ ಅಭಾವವಾಗಿರುತ್ತದೆ. ನಮ್ಮಗಳ ದೃಷ್ಟಿಯಿಂದ ಅನಿರ್ವಚನೀಯವಾಗಿದೆ, ಮೃಗಗಳ ದೃಷ್ಟಿಯಿಂದ ಸತ್ಯವಾಗಿದೆ. ಹೇಗೋ ಹಾಗೇ ಶ್ರುತಿದೃಷ್ಟಿಯಿಂದ ಮಾಯಾತತ್ಕಾರ್ಯ ಪ್ರಪಂಚವು. ಗಗನ ಕುಸುಮದಂತೆ ಅತ್ಯಂತ ಅಸತ್ತಾಗಿರುತ್ತದೆ. ಯುಕ್ತಿದೃಷ್ಟಿಯಿಂದ ಶುಕ್ತಿ ರಜತದಂತೆ ಅನಿರ್ವಚನೀಯವಾಗಿದೆ. ಲೌಕಿಕ ದೃಷ್ಟಿಯಿಂದ ಆತ್ಮನಂತೆ ಸತ್ಯವಾಗಿದೆ. ಆದ್ದರಿಂದ ಮಾಯೆಯು ಕಾರ್ಯಾನುಮೇಯವಾಗಿರುತ್ತದೆ. ಅದರಿಂದ ಇಲ್ಲಿ ಹೇಳುವ ಮುಂದಿನ ಶ್ರುತಿಯಾದರೂ ಕಾರ್ಯವನ್ನಾಗಲಿ ಅಥವಾ ಅಜ್ಞಜನರ ದೃಷ್ಟಿಯನ್ನಾಗಲಿ ಸ್ವೀಕರಿಸಿ ಮಾಯೆಯುಂಟೆಂದು ಹೇಳುತ್ತದೆ. ಆದ್ದರಿಂದ ಯಾವ ದೋಷವೂ ಇಲ್ಲ.

ಬಳಿಕ, ಬ್ರಹ್ಮದ ಏಕಾಂಶದಲ್ಲಿರುವ ಮಾಯೆಯು ಬ್ರಹ್ಮದಲ್ಲಿ ಅಭಿನ್ನವಾಗಿರುವದೋ ? ಭಿನ್ನವಾಗಿರುವದೋ ? ಅಭಿನ್ನವೆಂದು ಹೇಳಿದರೆ, ನಾಶವಾಗಲಾರದು ಭಿನ್ನವೆಂದು ಹೇಳಿದರೆ, ದ್ವೈತ ಸಂಭವಿಸುವದು ಎಂದು ಶಂಕೆಯನ್ನು ಮಾಡಿದರೆ, ಸಮಾಧಾನವನ್ನು ಹೇಳುತ್ತಾರೆ.

**ಆಧಾರವಾಬ್ರಹ್ಮವಾಧೇಯಮೀಮಾಯೆ ।**
**ಯಾಧಾರದಲ್ಲಿ ಬೆರಸಿ ಬೇರಿಲ್ಲದಂ ।**
**ತಾಧೇಯಮಿರ್ಪುದೆಲೆ ಪುತ್ರ ॥ ೫ ॥**

**ಟೀಕಾ:-** ಎಲೆ ಪುತ್ರ = ಎಲೈ ಮಗನೇ, ಆ ಬ್ರಹ್ಮವು = ಸಾಮಾನ್ಯರೂಪ ಸದ್ರೂಪ ಬ್ರಹ್ಮವು, ಆಧಾರವು=ಆಶ್ರಯವಾಗಿರುವದು, ಈ ಮಾಯೆಯು = ಈಗ ಹೇಳಿದ ಮಾಯೆಯು, ಆಧೇಯವು=ಆಶ್ರಿತವಾಗಿರುವದು, (ಮತ್ತು) ಆಧಾರದಲ್ಲಿ= ಸಾಮಾನ್ಯರೂಪ ಸದ್ರೂಪ ಬ್ರಹ್ಮದಲ್ಲಿ, 'ಬೆರಸಿಬೇರಿಲ್ಲದಂತೆ' ಬೆರಸಿಲ್ಲ=ಕೂಡಿಲ್ಲ, ಬೇರಿಲ್ಲ=ಭಿನ್ನವಾಗಿಯೂ ಇಲ್ಲ, ಬೆರಸಿಬೇರಿಲ್ಲ = ಭಿನ್ನಾಭಿನ್ನವೂ ಇಲ್ಲದ ಹಾಗೆ, ಆಧೇಯವು=ಮಾಯೆಯು, ಇರ್ಪುದು=ಇರುವದು.

**ದೇವಾತ್ಮ ಶಕ್ತಿಯೆಂಬ ವಾಕ್ಯದಿಂ ಸಾರು ।**
**ವಾವೇದದಲ್ಲಿ ತಿಳಿ ಮಾಯೆ ತತ್ತ್ವದೋ ।**
**ಳೋವಿ ಬೇರಿಲ್ಲದಿಹುದೆಂದು ॥ ೬ ॥**

**ಟೀಕಾ:-** ಮಾಯೆ=ಮಾಯೆಯು, ತತ್ತ್ವದೊಳು = ಬ್ರಹ್ಮದಲ್ಲಿ, ಓವಿ= ಚನ್ನಾಗಿ, ಬೇರಿಲ್ಲದಿಹುದೆಂದು=ಬೇರೆಯಾಗದೆ ಇರುವದೆಂದು, ದೇವಾತ್ಮಶಕ್ತಿ ಯೆಂಬ=ಸದ್ರೂಪಬ್ರಹ್ಮದಲ್ಲಿ ಅನಿರ್ವಚನೀಯವಾದ ಒಂದು ಶಕ್ತಿಯು ಇರುತ್ತ ದೆಂಬುವದನ್ನು, ಆ ವಾಕ್ಯದಿಂ= ಶ್ರುತಿವಾಕ್ಯದಿಂದ, ಸಾರುವ = ಪ್ರಸಿದ್ಧವಾಗಿ ಹೇಳುವ, ಆ ವೇದದಲ್ಲಿ=ಶ್ವೇತಾಶ್ವೇತರೋಪನಿಷತ್ತಿನಲ್ಲಿ, ತಿಳಿ=ಅರಿ

**ತಾತ್ಪರ್ಯ:-** ಬ್ರಹ್ಮವು ಮಾಯೆಗೆ ಆಶ್ರಯವಾಗಿರುವದರಿಂದ † ಆಧಾರ ವಾಗಿರುತ್ತದೆ. ಮಾಯೆಯು ಆಶ್ರಿತವಾಗಿರುವದರಿಂದ **ಆಧೇಯ**ವೆನಿಸುತ್ತದೆ. ಆಧೇಯವಾದ ಮಾಯೆಯು ಬ್ರಹ್ಮದಲ್ಲಿ ಅಭಿನ್ನವಾಗಿಯೂ ಇಲ್ಲ. ಭಿನ್ನ ವಾಗಿಯೂ ಇಲ್ಲ. ಭಿನ್ನಾಭಿನ್ನವಾಗಿಯೂ ಇಲ್ಲ. ಇದಕ್ಕೆ ಅನೀರ್ವಚನೀಯ ದಲ್ಲಿ ಉತ್ತರವನ್ನು ಕೊಟ್ಟಿದೆ. ಇಲ್ಲಿಯಾದರೂ ಬೆರಸಿಲ್ಲ. ಬೇರೆಯಿಲ್ಲ. ಬೆರಸಿ ಬೇರಿಲ್ಲದಂತೆ ಉಂಟೆಂದು ಉತ್ತರವನ್ನು ಕೊಡುತ್ತಾರೆ. ಪರಮಾನುಭವ ಬೋಧೆಯಲ್ಲಿ ಕೇರಹಣ್ಣಿನ ಬೀಜದಂತೆ ಉಂಟೆಂದು ಹೇಳಿದ್ದಾರೆ. ಇದರ ವಿಶೇಷವಾದ ಅರ್ಥವನ್ನು ವಿವೇಕ ಚಿಂತಾಮಣಿಯಲ್ಲಿಯ (೭೯) ಮಾಯಾ ಸ್ವರೂಪ ವಿವೇಕವನ್ನು ಅವಲೋಕನಮಾಡಬಹುದು. ಮತ್ತು ಸ್ವಯಂಪ್ರಕಾ ಶಾತ್ಮನಲ್ಲಿ ಕಾರ್ಯವನ್ನುಂಟು ಮಾಡುವಂಥಾ ಮಾಯಾಶಕ್ತಿಯುಂಟೆಂದು ಶ್ರುತಿಯು ಹೇಳುತ್ತದೆ. ಈ ಅರ್ಥವನ್ನು ಶ್ರುತ್ಯರ್ಥಪ್ರಕಾಶಿಕೆಯಲ್ಲಿ ನೋಡ ತಕ್ಕದ್ದು. **"ಅನೃತೇನ ಪ್ರತ್ಯೂಢಾಃ" "ನೀಹಾರೇಣ ಪ್ರಾವೃತಾಃ" "ತಮ ಆಸೀತ" "ಮಾಯಾಂತು ಪ್ರಕೃತಿಂ ವಿದ್ಯಾತ್" ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ "ಅವಿದ್ಯಾಯಮಂತರೇ ವರ್ತಮಾನಾಃ" ಭೂಯ ಶ್ಚಾಂತೇ ವಿಶ್ವಮಾಯಾ ನಿವೃತ್ತಿ:" "ಅಜ್ಞಾನೇನಾವೃತಂ ಜ್ಞಾನಂ"** ಇವೇ ಮೊದಲಾದ ಶ್ರುತಿ ಸ್ಮೃತಿ ಪ್ರಮಾಣಗಳುಂಟು.

**ಬಳಿಕ,** ಬ್ರಹ್ಮ ಮಾಯೆಗಳೆರಡರಿಂದ ಸರ್ವ ಪ್ರಪಂಚವು ಆಗುವದು. ಅಂದರೆ, ಏನಾದರೊಂದು ನಿಮಿತ್ತದಿಂದ ಅಗುವದೋ? ನಿಮಿತ್ತವಿಲ್ಲದೆ ಅಗು ವದೋ! ನಿಮಿತ್ತವುಂಟೆಂದು ಹೇಳಿದರೆ, ಅಂಥಾ ನಿಮಿತ್ತವು ಯಾವದು ಪೂರ್ವ

---

† ಬ್ರಹ್ಮದ ಸತ್ತು ಸಾಮಾನ್ಯವೆಂದು ಹೇಳಲ್ಪಡುತ್ತದೆ. ಈ ಸಾಮಾನ್ಯ ಚೇತನಕ್ಕೆ ಆಧಾರವೆಂಬ ಹೆಸರುಂಟು. ಇದು ಅವಿದ್ಯೆಗೆ ಸಹಾಯವಾಗಿದೆ. ವಿರೋಧಿಯಾಗಿಲ್ಲ. ಚಿತ್ತು ಆನಂದ ಅದ್ವಯಾದಿಗಳು ವಿಶೇಷ ಅಂಶವೆಂದು ಹೇಳಲ್ಪಡುತ್ತವೆ. ಈ ವಿಶೇ ಷಾಂಶಕ್ಕೆ ಅಧಿಷ್ಠಾನವೆಂಬ ಹೆಸರುಂಟು. ಅಧಿಷ್ಠಾನದ ಜ್ಞಾನವಾದ ಕೂಡಲೆ ಅಜ್ಞಾನವು ನಿವೃತ್ತಿಯಾಗುತ್ತದೆ. ಆದ್ದರಿಂದ ಬ್ರಹ್ಮದ ವಿಶೇಷಾಂಶವು ಅವಿದ್ಯೆಗೆ ವಿರೋಧಿಯಾಗಿ ರುತ್ತದೆ. ಆದ್ದರಿಂದ ಮಾಯೆಯು ಬ್ರಹ್ಮದ ಸತ್ ಸಾಮಾನ್ಯ ಅಂಶವಾದ ಆಧಾರದಲ್ಲಿ ಕೂಡಿದೆಯೆಂದು ಹೇಳುತ್ತಾರೆ.

ದಲ್ಲಿ ತೋರುವದಿಲ್ಲ. ಇಲ್ಲವೆ ಆಗುವದೆಂದು ಹೇಳಿದರೆ, ಅನಾದಿ ಭಾವರೂಪ ಗಳಾದ ಬ್ರಹ್ಮಮಾಯೆಗಳಿಂದ ಸರ್ವಪ್ರಪಂಚವು ಸರ್ವದಾ ಆಗುತ್ತಿರಬೇಕಾ ಯಿತು. ಎಂದು ಶಂಕೆಯನ್ನು ಮಾಡಿದರೆ, ಸಮಾಧಾನವನ್ನು ಹೇಳುತ್ತಾರೆ.

ಅವಿರಳತ್ವದೊಳೊಪ್ಪ ಇವರೊಳೇನಾನೊಂದು ।
ನೆವಮಿಲ್ಲದಖಿಳವಹುದು ತಿಳಿ ನಿರ್ನಿಮಿ ।
ತ್ತವೆ ತೋರ್ಪ ಕನಸಿಗೆಣೆಯಾಗಿ ॥೭॥

**ಟೀಕಾ:-** ಅವಿರಳತ್ವದೊಳು=ಬೇರೆಯಾಗದೆ ಕೂಡಿಕೊಂಡು, ಒಪ್ಪುವ= ಶೋಭಾಯಮಾನವಾಗಿರುವ, ಇವರೊಳ್=ಈ ಬ್ರಹ್ಮ ಮಾಯೆಗಳಲ್ಲಿ, ಏನಾ ನೊಂದು=ಯಾವದೊಂದು, ನೆವಮಿಲ್ಲದೆ=ನಿಮಿತ್ತವಿಲ್ಲದಿದ್ದರೂ, ನಿರ್ನಿತ್ತವೆ= ಏನೊಂದು ಕಾರಣವಿಲ್ಲದಿದ್ದರೂ, ತೋರ್ಪ=ತೋರುವ, ಕನಸಿಗೆ=ಸ್ವಪ್ನಕ್ಕೆ, ಎಣೆಯಾಗಿ=ಸರಿಯಾಗಿ, ಅಖಿಳವು=ಸರ್ವವು, ಅಹುದು=ಆಗುವದೆಂದು, ತಿಳಿ=ಅರಿ.

**ತಾತ್ಪರ್ಯ:-** ತನ್ನಲ್ಲಿ ಸ್ವಪ್ನ ಪ್ರಪಂಚವು ಏನೊಂದು ನಿಮಿತ್ತವಿಲ್ಲದೆ ಹೇಗೆ ತೋರುವದೋ, ಹಾಗೆ ಬ್ರಹ್ಮದಲ್ಲಿ ಯಾವ ನಿಮಿತ್ತವಿಲ್ಲದಿದ್ದರೂ ಸರ್ವ ಪ್ರಪಂಚವು ತೋರುತ್ತದೆ. ಅಂದರೆ, ಸ್ವಪ್ನದಲ್ಲಿ ಸಾಕ್ಷಿ ಚೈತನ್ಯ, ಮತ್ತು ಅದರ ಆಶ್ರಿತವಾದ ಅವಿದ್ಯೆ, ಇವುಗಳಿಂದ ವಿಚಿತ್ರವಾದ ಸ್ವಪ್ನಪ್ರಪಂಚವು, ಸಂಸ್ಕಾರ ಮೊದಲಾದ ಯಾವ ನಿಮಿತ್ತವಿಲ್ಲದೆ ಹೇಗೆ ತೋರುತ್ತದೆಯೋ, ಹಾಗೇ ಬ್ರಹ್ಮ ಮಾಯೆಗಳಿಂದ ಯಾವ ನಿಮಿತ್ತವಿಲ್ಲದೆ ವಿಚಿತ್ರ ಸರ್ವ ಪ್ರಪಂಚವು ತೋರುತ್ತ ದೆಂಬ ಭಾವವು. ವಿಚಾರಸಾಗರದ ಎರಡನೇ ತರಂಗದ ಅಧ್ಯಾಸ ವಿಚಾರ ಪ್ರಕರಣ ದಲ್ಲಿ; ಅಧ್ಯಾಸಕ್ಕೆ ಯಾವ ಸಾಮುಗ್ರಿಗಳು ಇಲ್ಲದಿದ್ದರೂ, ಆತ್ಮನಲ್ಲಿ ಅಧ್ಯಾಸ ಸಂಭ ವಿಸುತ್ತದೆಂದು ಹೇಳಿರುವರು. ಈ ವಿಷಯವನ್ನು ಅಲ್ಲಿ ಅವಲೋಕನ ಮಾಡಿರಿ. ವಿಸ್ತಾರಭಯದಿಂದ ಬರೆಯುವದನ್ನು ಬಿಟ್ಟಿದ್ದೇವೆ. ಯಾವ ದೋಷವಿಲ್ಲದಿದ್ದರೂ ಅವಿದ್ಯೆಯೊಂದು ದೋಷ ಉಂಟು. ಆದರ ಮೂಲಕ ಅಧ್ಯಾಸ ಸಂಭವಿಸುತ್ತ ದೆಂದು ಟಿಪ್ಪಣಿಕಾರರು, ಅದ್ವೈತ ಸಿದ್ಧಿ ಪ್ರಮಾಣವನ್ನು ಕೊಟ್ಟು ಹೇಳಿರುವರು. ಅದರಂತೆ ಇಲ್ಲಿಯಾದರೂ ಬೇರೆ ಅನ್ಯ ನಿಮಿತ್ತಗಳು ಯಾವೂ ಇಲ್ಲದಿದ್ದರೂ, ಒಂದು ಅಘಟಿತ ಘಟನಾರೂಪ ಸಾಮರ್ಥ್ಯವುಳ್ಳ ಮಾಯಾಶಕ್ತಿ ಮೂಲಕ ಸರ್ವವು ಸಂಭವಿಸುತ್ತದೆ. ಇದರ ವ್ಯತಿರಿಕ್ತ ಬೇರೊಂದು ನಿಮಿತ್ತವು ಬೇಕಾಗಿಲ್ಲ. ಎಂಬುದಕ್ಕೆ "ಮಹಾಯೋಗೀವ ಯಃ ಸ್ವೇಚ್ಛಯಾ" ಈ ವಾಕ್ಯವೇ ಪ್ರಮಾಣ ಉಂಟು.

ವಿಶ್ವಾಮಿತ್ರಾದಯೋ ಪೂರ್ವೇ ಪರಿಪಕ್ವ ಸಮಾಧಯಃ ।
ಉಪಾದಾನೋಪಕರಣ ಪ್ರಯೋಜನ ವಿವರ್ಜಿತಾಃ ॥

**ಸ್ವೇಚ್ಛಯಾ ಸಸೃಜು ಸ್ಸರ್ಗಂ ಸರ್ವಭೋಗೋಪಬೃಂಹಿತಂ।**
**ಯಯಾ ಕರ್ತುಂ ನವಾ ಕರ್ತುಮನ್ಯಥಾ ಕರ್ತುಮರ್ಹತಿ।**
**ಸ್ವತಂತ್ರಾಮೀಶ್ವರೇಚ್ಛಾಂ ಕೇ ಪರಿಚ್ಛೇತ್ತುಮಹೇಶತೆ ||**

ಪೂರ್ವದಲ್ಲಿ ವಿಶ್ವಾಮಿತ್ರಾದಿ ಮಹರ್ಷಿಗಳು, ತಮ್ಮ ತಪಃಪ್ರಭಾವದಿಂದ ಸ್ವೇಚ್ಛಾಮೂಲಕ ಸರ್ವ ಉಪಭೋಗಗಳಿಂದ ಯುಕ್ತವಾದ ಸೃಷ್ಟಿಯನ್ನು ನಿರ್ಮಾಣಮಾಡಿದರು. ಆದರೆ, ಉಪಾದಾನಕಾರಣ ನಿಮಿತ್ತಕಾರಣ ಮೊದಲಾದವುಗಳನ್ನು ಏನೊಂದು ಸ್ವೀಕರಿಸಲಿಲ್ಲ. ತಪೋಶಕ್ತಿಯುಕ್ತನಾದ ಮಹಾಯೋಗಿಯಲ್ಲಿಯೇ ಇಷ್ಟು ಸಾಮರ್ಥ್ಯವಿದ್ದ ಮೇಲೆ, ಅನಂತಶಕ್ತಿಯಿಂದ ಯುಕ್ತವಾದದ್ದು ಮಾಯೆಯಿರುತ್ತದೆ. ಆ ಮಾಯೆಯಿಂದ ಕೂಡಿದ ಬ್ರಹ್ಮವು ಸರ್ವ ಪ್ರಪಂಚವನ್ನು ಏನೊಂದು ನಿಮಿತ್ತವಿಲ್ಲದೆ ಮಾಡುವದು ಏನು ಆಶ್ಚರ್ಯ? ಅಂದರೆ ಮಾಯೆಯಲ್ಲಿ ಅಸಂಭವವೇನೂ ಇಲ್ಲ. ಸರ್ವವೂ ಸಂಭವವಾಗುತ್ತದೆಂಬ ಭಾವವು. ಆದ್ದರಿಂದಲೇ ಸರ್ವದಾ ಸೃಷ್ಟಿಯಾಗಬೇಕೆಂಬ ನೇಮವೂ ಇಲ್ಲ. ಯಾಕಂದರೆ, ಮಾಡುವದಕ್ಕೂ ಬಿಡುವದಕ್ಕೂ ಬೇರೊಂದು ಪ್ರಕಾರ ಮಾಡುವದಕ್ಕೂ ಯೋಗ್ಯವಾದ ಶಕ್ತಿಯಿಂದ ಸಹಿತನಾಗಿದ್ದಾನೆ. ಆದ್ದರಿಂದ ಉಕ್ತ ಶಂಕೆಗೆ ಅವಕಾಶವಿಲ್ಲಯೆಂಬ ಭಾವವು. ಮತ್ತು ಒಂದು ಅಕ್ಕಿಯಿಂದ ಅಂಕುರೋತ್ಪತ್ತಿಯಾಗುವದಿಲ್ಲ. ಹಾಗೆ ಮೇಲಿರುವ ಗೋಳಲಿಯಿಂದಲೂ ಆಗುವದಿಲ್ಲ. ಕಿಂತು ಅಕ್ಕಿ ಮತ್ತು ಗೋಳಲಿ ಎರಡು ಕೂಡಿರುವ ಭತ್ತದಿಂದ ಅಂಕುರೋತ್ಪತ್ತಿಯಾಗುವಂತೆ, ಕೇವಲ ಬ್ರಹ್ಮದಿಂದಲೂ ಇಲ್ಲ. ಕೇವಲ ಮಾಯೆಯಿಂದಲೂ ಇಲ್ಲ. ಕಿಂತು ಬ್ರಹ್ಮಮಾಯೆಗಳಿಂದ ಸರ್ವ ಪ್ರಪಂಚವು ಉತ್ಪನ್ನವಾಗುವದೆಂದು ತಿಳಿಯತಕ್ಕದ್ದು.

ಬಳಿಕ, ಜಗತ್ತು, ಜೀವ, ಈಶಾದಿ ಭೇದದಿಂದ ಪ್ರಪಂಚವು ಅನೇಕವಾಗಿದೆ. ಬ್ರಹ್ಮವು ಏಕವಾಗಿದೆ. ಏಕವಾದ ಬ್ರಹ್ಮವು ಅನೇಕವಾಗುವದೆಂದು ಹೇಳಿದರೆ, ವಿಕಾರತ್ವಬರುವದು. ಇಲ್ಲೆಂದು ಹೇಳಿದರೆ, ಪ್ರಪಂಚವೇ ಉಪಪತ್ತಿಯಾಗುವದಿಲ್ಲೆಂದು ಶಂಕೆಯನ್ನು ಮಾಡಿದರೆ, ಸಮಾಧಾನವನ್ನು ಹೇಳುತ್ತಾರೆ.

**ತಿಳಿಯಲಾಧಾರವಪ್ಪುಳಿಮೆಯೊಂದಾಧೇಯ।**
**ದೊಳು ತೋರ್ಪುಪಾಧಿಯಿಂ ಜಗಜ್ಜೀವೇಶ।**
**ಕುಳವಾದುದೆನಿಸಿ ಮೆರೆಯುವದು ||೮||**

**ಟೀಕಾ:-** ತಿಳಿಯಲ್=ವಿಚಾರ ಮಾಡಲು, ಆಧಾರವಪ್ಪ=ಆಶ್ರಯವಾಗಿದ್ದ, ಉಳಿಮೆಯೊಂದು=ನಾಶರಹಿತವಾಗಿದ್ದ ಒಂದು ಬ್ರಹ್ಮವೇ, ಆಧೇಯದೊಳು=

ಮಾಯೆಯಲ್ಲಿ, ತೋರ್ಪ=ತೋರುವ, ಉಪಾಧಿಯಿಂ=ಸತ್ವ, ರಜ, ತಮ ಗುಣ ಗಳ ಉಪಾಧಿಗಳಿಂದ, ಜಗಜ್ಜೀವೇಶ ಕುಳವು=ಈಶ, ಜೀವ, ಜಗತ್ತುಗಳೆಂಬ ಸಮೂಹವು, ಆದುದೆನಿಸಿ=ಉತ್ಪನ್ನವಾಗಿರುವದೆಂದು ಹೇಳಿಸಿಕೊಂಡು; ಮೆರೆಯು ವದು=ಶೋಭಾಯಮಾನವಾಗಿದೆ.

ತಾತ್ಪರ್ಯ:- ಆಧೇಯವಾದ ಮಾಯೆಯು; ವಿಶುದ್ಧ ಸತ್ವಸ್ವರೂಪವಾದ ಮಾಯೆಯೆಂತಲೂ' ಮಲಿನ ಸತ್ವ ಸ್ವರೂಪವಾದ ಅವಿದ್ಯೆಯೆಂತಲೂ, ತಮಃ ಪ್ರಧಾನರೂಪವಾದ ಪ್ರಕೃತಿಯೆಂತಲೂ, ಮೂರು ವಿಧದಿಂದ ಬೇರೆ ಬೇರೆಯಾಗಿ ತೋರುತ್ತದೆ. ಆಧಾರವಾದ ಬ್ರಹ್ಮವು ಆ ವಿಶುದ್ಧ ಸತ್ವ ಸ್ವರೂಪವಾದ ಮಾಯೆ ಯಲ್ಲಿ ಪ್ರತಿಬಿಂಬಿಸಿ, ಸರ್ವಜ್ಞತ್ವಾದಿ ಗುಣಗಳಿಂದ ಕೂಡಿಕೊಂಡು, ಈಶ್ವರನೆನಿಸಿ ತತ್‌ಪದಾರ್ಥ ರೂಪವಾಗಿರುತ್ತದೆ.

ಬಳಿಕ, ಉಕ್ತ ಬ್ರಹ್ಮವೇ; ಮಲಿನ ಸತ್ವ ಸ್ವರೂಪವಾದ ಅವಿದ್ಯೆಯಲ್ಲಿ ಪ್ರತಿಬಿಂಬಿಸಿ, ಕಿಂಚಿಜ್ಞತ್ವಾದಿಗಳಿಂದ ಒಡಗೂಡಿ ಜೀವನೆನಿಸಿ, ತ್ವಂ ಪದಾರ್ಥ ರೂಪವಾಗಿರುತ್ತದೆ.

ಅನಂತರ ಆ ಬ್ರಹ್ಮವೇ ತಮಃ ಪ್ರಧಾನರೂಪವಾದ ಪ್ರಕೃತಿಯಲ್ಲಿ (ಸದ್ರೂಪದಿಂದ) ಪ್ರತಿಫಲಿಸಿ ಜಗದ್ರೂಪವಾಗಿರುವದು- ಅಂದರೆ, ಉಪಾಧಿಗಳ ತಾರತಮ್ಯದಿಂದ ಬ್ರಹ್ಮದ ಸತ್' ಚಿತ್, ಆನಂದ ಈ ಮೂರಕ್ಕೆ ವಿಶುದ್ಧ ಮಾಯೆಯು ಪಾತ್ರವಾಗಿದೆ. ಸತ್, ಚಿತ್ತಗಳೆರಡಕ್ಕೆ ಮಲಿನಸತ್ವ ಅವಿದ್ಯೆಯು ಪಾತ್ರವಾಗಿದೆ. ಸದ್ರೂಪಕ್ಕೆಮಾತ್ರ ಪ್ರಕೃತಿಪಾತ್ರವಾಗಿದೆ. ಅಮುಖ್ಯತ್ವದಿಂದ ನೋಡಿದರೆ ಎಲ್ಲ ಲಕ್ಷಣಗಳೂ ಎಲ್ಲದರಲ್ಲಿ ಉಂಟು.

ಈ ರೀತಿ ಮಾಯೋಪಾಧಿ ಮೂಲಕ ಬ್ರಹ್ಮವು; ಜೀವ, ಈಶ್ವರ, ಜಗತ್ತು, ಆಯಿತೋ ಏನೋ ಎಂಬುವಂತೆ ತೋರುವದು. ಇದಕ್ಕೆ ಸಂಕ್ಷೇಪ ಶಾರೀರಕ ಕಾರರ ವಾಕ್ಯವು ಪ್ರಮಾಣವಾಗಿದೆ. "ಸ್ವಾಜ್ಞಾನ ಕಲ್ಪಿತ ಜಗತ್ಪರಮೇಶರತ್ವ ಜೀವತ್ವ ಭೇದಕಲುಷೀಕೃತ ಭೂಮ ಭಾವಾ। ಸ್ವಾಭಾವಿಕ ಸ್ವಮಹಿಮ ಸ್ಥಿತಿರಸ್ತ ಮೋಹಾ ಪ್ರತ್ಯಕ್ಚಿತೆ ರ್ವಿಜಯತೆ ಭುವನ್ಯೈಕಯೋನಿಃ" ||೨|| ೨೨ ತ್ವಂಪದ ಲಕ್ಷ್ಯನಾದ ಪ್ರತ್ಯಗಾತ್ಮನು ತತ್ಪದ ಲಕ್ಷ್ಯವಾದ ಬ್ರಹ್ಮದೊಡನೆ ಅಭೇದ ವಾಗಿಯೇ ಉಂಟು. ಯಾಕಂದರೆ, ತನ್ನ ಆಶ್ರಿತವಾದ ಅಜ್ಞಾನದಿಂದ ಜೀವತ್ವ ಈಶ್ವರತ್ವ ಜಗತ್ತು ಈ ಮೂರು ಕಲ್ಪಿಸಲ್ಪಟ್ಟಿರುತ್ತವೆ. ಅದರಿಂದ ವ್ಯಾಪಕವಾದ ಬ್ರಹ್ಮವು ಪರಿಚ್ಛಿನ್ನವಾಗಿದೆಯೋ ಏನೋ ಎಂಬಂತೆ ತೋರುವದು. ಆದರೆ ವಾಸ್ತವಿಕ ವಿಚಾರಮಾಡಿದರೆ, ಬ್ರಹ್ಮವು ಸ್ವಾಭಾವಿಕ ತನ್ನ ಮಹಿಮೆಯಲ್ಲಿಯೇ

ತಾನಿರುವದು. ಅಂದರೆ ಕಲ್ಪಿತ ಭೇದರೂಪ ಅಪರಮಾರ್ಥಿಕ ಸಂಸಾರದಿಂದ ಪಾರಮಾರ್ಥಿಕವಾದ ಬ್ರಹ್ಮಕ್ಕೆ ಯಾವಹಾನಿಯೂ ಇಲ್ಲ. ಅಜ್ಞಾನವು ಅನಾದಿ ಭಾವರೂಪವಾಗಿದ್ದರೂ ಜ್ಞಾನದಿಂದೆ ನಾಶವಾಗುತ್ತದೆ. ಆದ್ದರಿಂದ ಯಾವ ದೋಷವೂ ಇಲ್ಲ. ಎಂಬದಾಗಿ ಹೇಳಿರುವರು. ಆದ್ದರಿಂದ ಒಂದು ಬ್ರಹ್ಮವೇ ಉಪಾಧಿಯಿಂದ ಅನೇಕವಾದಂತೆ ತೋರುವದು. ಆದರೂ ಅದರ ಸ್ವರೂಪಕ್ಕೆ ಹಾನಿಯಿಲ್ಲ. ಹೇಗಂದರೆ; ಸ್ವಪ್ನದಲ್ಲಿ ಸಾಕ್ಷಿರೂಪನಾದ ತಾನು ಅನೇಕ ವಿಧವಾದ ಸ್ವಪ್ನಪ್ರಪಂಚವಾಗಿ ತೋರಿದರೂ, ಅನೇಕತ್ವವು ಸಿದ್ಧಿಸಲಿಲ್ಲ. ಸಾಕ್ಷಿಸ್ವರೂಪಕ್ಕೆ ಹಾನಿಯೂ ಇಲ್ಲ. ಇದರಂತೆ ತಿಳಿಯತಕ್ಕದ್ದು.

ಬಳಿಕ, ಆಧೇಯವಾದ ರೂಪಕ್ಕೆ ಹಾನಿ ಬಂದ ಮೇಲೆ, ಆಧಾರವಾದ ಘಟಕ್ಕೂ ಹೇಗೆ ಹಾನಿಯು ಬರುವದೋ, ಹಾಗೆ ಆಧೇಯವಾದ ಮಾಯಾ ವಿಕಾರದಿಂದ ಆಧಾರವಾದ ಬ್ರಹ್ಮಕ್ಕೂ ವಿಕಾರವು ಬರುತ್ತದೆಂದು ಶಂಕೆಯನ್ನು ಮಾಡಿದರೆ, ಸಮಾಧಾನವನ್ನು ಹೇಳುತ್ತಾರೆ.

**ಎಂದೊಡಾಧೇಯಕ್ಕೆ ಬಂದ ವಿಕೃತಿಯ ಬಾಧೆ।**
**ಯಿಂದಲಾಧಾರವಹ ನಿಜಕ್ಕಂ ಬಾಧೆ।**
**ಯೆಂದೆಂಬೆಯಾದೊಡದ ಕೇಳು ॥ ೯ ॥**

**ಟೀಕಾ:-** ಎಂದೊಡೆ=(ಗುರುಗಳು) ಹೀಗನ್ನಲಾಗಿ, ಆಧೇಯಕ್ಕೆ=ಆಶ್ರಿತ ವಾದ ಮಾಯೆಗೆ, ಬಂದ=ಪ್ರಾಪ್ತವಾದ, ವಿಕೃತಿಯ=ವಿಕಾರವಾದ, ಬಾಧೆ ಯಿಂದಲೆ=ಉಪದ್ರವದಿಂದಲೇ, ಆಧಾರವಹ=ಆಶ್ರಯವಾದ, ನಿಜಕ್ಕಂ=ಸದ್ರೂಪ ಬ್ರಹ್ಮಕ್ಕಾದರೂ, ಬಾಧೆಯೆಂದೆಂಬೆಯಾದೊಡೆ=(ಶಿಷ್ಯ) ವಿಕಾರಾದಿ ದೋಷಗಳು ಬರುತ್ತವೆಂದು (ನೀನು) ಹೇಳಿದರೆ, ಅದಕೇಳು = ಆ ವಿಷಯವನ್ನು ಏಕಾಗ್ರ ಚಿತ್ತದಿಂದ ಕೇಳು.

**ತನ್ನೊಳಾಧೇಯರೂಪಿಂ ನೆಗಳೆ ಪರಿವ ತೊರೆ।**
**ಯಿಂ ನೆನೆದು ಶೀತವೆನಿಸಿ ಕೆಡದಾಧಾರ।**
**ದಿಂ ನೆಲಸಿ ತೋರ್ಪ ಬಿಸಿಲಂತೆ ॥ ೧೦ ॥**

**ಟೀಕಾ:-** ತನ್ನೊಳು=ಬಿಸಲಿನಲ್ಲಿ, ಆಧೇಯರೂಪಿಂ = ಆಶ್ರಿತರೂಪದಿಂದ, ನೆಗಳೆ=ಉಂಟಾಗಿ, ಪರಿವ=ಹರಿಯುವ, ತೊರೆಯಿಂ = ನದಿಯ ಪ್ರವಾಹದಿಂದ, ನೆನೆದು=ಆದ್ರವಾಗಿ, ಶೀತವೆನಿಸಿ=ತಂಪಾಗಿ, ಕೆಡದೆ=ನಾಶವಾಗದೆ, ಆಧಾರದಿಂ= ಆಶ್ರಯದಿಂದ, ನೆಲಸಿತೋರ್ಪ = ಇದ್ದುಕೊಂಡು ತೋರುವ, ಬಿಸಿಲಂತೆ = ಬಿಸಿಲಿನ ಹಾಗೆ.

**ಚಿತ್ತು ತನ್ನೊಳಗಿರ್ಪ ಸತ್ತಾದ ಮಾಯೆ ಬಹು ।**
**ವೃತ್ತಿಗಳನೈದಲದರಿಂದೆ ಬಾಧೆ ವಡೆ ।**
**ಯುತ್ತಿರದು ತಾನುಳುವೆಯಾಗಿ ॥ ೧೧ ॥**

**ಟೀಕಾ:-** ಚಿತ್ತು ತನ್ನೊಳಗಿರ್ಪ=ಚಿದ್ರೂಪಾತ್ಮನಲ್ಲಿರುವಂಥಾ, ಅಸತ್ತಾದ ಮಾಯೆ=ಅಸತ್ ಲಕ್ಷಣಾತ್ಮಕವಾದ ಮಾಯೆಯು, ಬಹು ವೃತ್ತಿಗಳನು=ಅನೇಕ ಉಪಾಧಿರೂಪ ಭೇದಗಳನ್ನು, ಐದಲ್=ಹೊಂದಿದರೂ, ಅದರಿಂದ=ಮಾಯೋಪಾಧಿಯಿಂದ, ಬಾಧೆವಡೆಯುತ್ತಿರದು = ವಿಕಾರವಾಗಲಾರದು, ತಾನು=ಚಿದ್ರೂಪಾತ್ಮನು, ಉಳಿವೆಯಾಗಿ=ಇರುವವನಾದ್ದರಿಂದ.

**ತಾತ್ಪರ್ಯ:-** ಸೂರ್ಯನ ಕಿರಣಗಳು ಬೇಸಿಗೆಯ ಮಧ್ಯಾಹ್ನ ಕಾಲದಲ್ಲಿ ಮರುಭೂಮಿಯಲ್ಲಿ ವ್ಯಾಪಿಸುತ್ತವೆ. ಆ ಪ್ರಖರ ಕಿರಣಗಳಿಂದ ಭೂಮಿಯು ಕಾಯ್ದು ಉಷ್ಣವು ಮೇಲಕ್ಕೆ ಹೋಗುತ್ತದೆ. ಅದು ದೂರದಲ್ಲಿ ನೋಡುವವರಿಗೆ ಜಲದಂತೆ ತೋರುತ್ತದೆ. ಇದಕ್ಕೆ **ಮೃಗಜಲ**ವೆಂಬ ಹೆಸರುಂಟು. ಯಾಕಂದರೆ, ಮೃಗಗಳು ಕಂಡು ಸತ್ಯ ಜಲವೆಂದು ನಂಬಿ ಧಾವಿಸುತ್ತವೆ. ಆದ್ದರಿಂದ ಮೃಗಜಲವೆಂದು ಕರೆಯುತ್ತಾರೆ. ಇಂಥಾ ಮೃಗಜಲವು ಆ ಬಿಸಿಲಿನ ಅಧಾರದ ಮೇಲಿಂದ ತೋರುತ್ತದೆ. ಆದ್ದರಿಂದ **ಆಧೇಯ**ವಾದ ಮೃಗಜಲವು ಹುಟ್ಟಿ, ಪ್ರವಾಹರೂಪದಿಂದ ಹರಿದು ಹೋದರೂ, ಆಧಾರವಾದ ಬಿಸಿಲು ನೆನದು ಶೀತವಾಗಿ ಏನಾದರೂ ಕೆಟ್ಟುಹೋಗಿರುವದೇನು ? ಎಂದೂ ಹೋಗಿಲ್ಲ. ಇದರಂತೆ, ಸಚ್ಚಿದಾನಂದ ಪರಬ್ರಹ್ಮಸ್ವರೂಪದಲ್ಲಿ, ಭಾವರೂಪವಾದ ಮಾಯೆಯು, ಅನೇಕ ವಿಧ ಭೇದರೂಪವಾಗಿ ತೋರಿದರೂ ಅಡಗಿದರೂ, ಅಂದರೆ ಸುಪ್ತಿ ಪ್ರಳಯಾದಿಗಳಲ್ಲಿ ಐಕ್ಯಾಧ್ಯಾಸವಾಗಿದ್ದರೂ, ಅಧಿಷ್ಠಾನ ಸ್ವರೂಪವಾದ ಬ್ರಹ್ಮಕ್ಕೆ ಯಾವ ಹಾನಿಯೂ ಇಲ್ಲ.

ವ್ಯಾವಹಾರಿಕ ಸತ್ತಾತ್ಮಕವಾದ ಬಿಸಿಲಿನ ಆಧಾರದಲ್ಲಿ, ಪ್ರಾತಿಭಾಸಿಕವಾದ ಮೃಗಜಲವು ಆಧೇಯವಾಗಿದೆ. ಆದ್ದರಿಂದ ಪ್ರಾತಿಭಾಸಿಕ ಸತ್ತೆಯಾದ ಮೃಗಜಲದಿಂದ, ವ್ಯಾವಹಾರಿಕ ಸತ್ತೆಯಾದ ಬಿಸಿಲಿಗೆ ಹೇಗೆ ಬಾಧೆಯಿಲ್ಲವೋ, ಹಾಗೆ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಸತ್ತೆಯಾದ ಕಲ್ಪಿತ ಪದಾರ್ಥಗಳಿಂದ ಪಾರಮಾರ್ಥಿಕವಾದ ಪರಬ್ರಹ್ಮ ಚೈತನ್ಯಕ್ಕೆ ಯಾವ ಹಾನಿಯೂ ಇಲ್ಲೆಂಬ ಭಾವವು. ಯಾಕಂದರೆ, ಕಲ್ಪಿತ ಪದಾರ್ಥಗಳು ಅಧಿಷ್ಠಾನ ಜ್ಞಾನವಾಗುವದರಿಂದ ನಾಶವಾಗುತ್ತವೆ. ಅಧಿಷ್ಠಾನವು ನಾಶವಾಗದೆ ಅವಶೇಷವಾಗಿರುವದು. ಆದ್ದರಿಂದ ಯಾವ ಹಾನಿ ಇಲ್ಲ.

ಬಳಿಕ, ಶಿಷ್ಯನು ಉಕ್ತ ಅರ್ಥವನ್ನು ಕೇಳಿ ಆಶ್ಚರ್ಯವುಳ್ಳವನಾಗಿ ಪ್ರಶ್ನೆಯನ್ನು ಮಾಡುತ್ತಾನೆ.

ಚಿತ್ತು ತಾನೆ ವಿಕರಿಸುತ್ತಿರದು ತಿಳಿವಡೆಯು ।
ಸತ್ತು ವಿಕರಿಸುವ ತೆರನಾವುದೆನಲಿದಂ ।
ಬಿತ್ತರಿಪೆ ನಾತ್ಮಜನೆ ಕೇಳು ॥೧೨॥

**ಟೀಕಾ:-** ಚಿತ್ತು=ಚಿದ್ರೂಪಾತ್ಮನು, ತಾನೆ=ಸ್ವಯಮೇವ, ವಿಕರಿಸುತ್ತಿರದು=ವಿಕಾರಹೊಂದದು, (ರೂಪಾಂತರವಾಗುವದಿಲ್ಲ) ತಿಳಿವಡೆ=ವಿಚಾರ ಮಾಡುತ್ತಿರಲು, ಅಸತ್ತು=ಆ ಮಾಯೆಯು, ವಿಕರಿಸುವ=ರೂಪಾಂತರಹೊಂದುವ, ತೆರನಾವುದು=ಬಗೆಯಾವುದು ?, ಎನಲ್=ಅನ್ನಲಾಗಿ, ಆತ್ಮಜನೆ=ಹೇ ಪುತ್ರನೇ ! ಅದಂ=ಅದನ್ನು. ಬಿತ್ತರಿಪೆನು=ವಿಸ್ತಾರವಾಗಿ ಹೇಳುವೆನು, ಕೇಳು=ಆಲಿಸು.

ಇಲ್ಲಿ ಹನ್ನೊಂದು ಮತ್ತು ಹನ್ನೆರಡು ಪದ್ಯಗಳಲ್ಲಿ ಮಾಯೆಗೆ ಕ್ರಮವಾಗಿ ಸತ್ ಮತ್ತು ಅಸತ್ ಎಂಬ ಎರಡು ಪದಗಳು ವಿಶೇಷಣಗಳಾಗಿವೆ. ಎಂದು ಕಂಡುಬರುತ್ತದೆ. 'ಸತ್ತಾದ' ಎಂಬದಾಗಿ ಪದಚ್ಛೇದ ಮಾಡಿದರೆ, ಭಾವರೂಪ ಮಾಯೆಯೆಂದು ಅರ್ಥವನ್ನು ಮಾಡಬೇಕಾಗುತ್ತದೆ. ಯಾಕಂದರೆ, ಅನಾದಿ, ಏಕ, ಭಾವ, ಸಾಂತ ಎಂದು ಮಾಯೆಗೆ ಲಕ್ಷಣಗಳಿರುತ್ತವೆ. 'ಅಸತ್ತು' ಅಂದರೆ, ಅಸತ್ತು, ಜಡ, ದುಃಖ, ಅನಿತ್ಯ ಪರಿಚ್ಛಿನ್ನ ಲಕ್ಷಣವುಳ್ಳದ್ದು ಮಾಯೆಯೆಂಬದಾಗಿಯೂ ಇರುತ್ತದೆ.

ವಾಚಕರಿಗೆ ವಿಕಲ್ಪವು ಬರಬಾರದೆಂದು ಎರಡೂ ಪದ್ಯಗಳಲ್ಲಿಯೂ ಅಸತ್ತೆಂದೇ ಪದವನ್ನು ಬಿಡಿಸಿ ಮಾಯೆಯೆಂಬದಾಗಿ ಅರ್ಥವನ್ನು ಮಾಡಿರುತ್ತದೆ. ಯಾರಿಗೆ ಯಾವ ಅರ್ಥವು ರುಚಿಸುವದೋ ಅದನ್ನು ಅರ್ಥಮಾಡಿಕೊಳ್ಳಬಹುದು.

**ತಾತ್ಪರ್ಯ;-** ಅನಾದಿ ಭಾವರೂಪವಾದ ಚಿತ್ತು ವಿಕಾರವಾಗುವದಿಲ್ಲ. ಅಂದಮೇಲೆ; ಅನಾದಿ ಭಾವರೂಪವಾದ ಮಾಯೆಯಾದರೂ ಯಾಕೆ ವಿಕಾರವಾದೀತು ? ಆಗುವದು, ಅಂದರೆ ಏನು ಕಾರಣ ? ಎಂದು ಶಿಷ್ಯನು ಪ್ರಶ್ನೆಯನ್ನು ಮಾಡಿದ್ದಾನೆ.

**ಬಳಿಕ,** ಕೇವಲ ಚಿದ್ರೂಪು ವಿಕಾರವಾಗಿಲ್ಲ. ಕೇವಲ ಮಾಯೆಯಾದರೂ ವಿಕಾರವಾಗಿಲ್ಲ. ಕಿಂತು, ಮಾಯೋಪಾಧಿಯಾದ ಬ್ರಹ್ಮವು ಜಗತ್ತಿಗೆ ವಿವರ್ತೋಪಾದಾನ ಕಾರಣವಾಗಿರುತ್ತದೆಂದು ಉತ್ತರವನ್ನು ಹೇಳುತ್ತಾರೆ.

ಹಾನಿ ತನಗಿನಿತಿಲ್ಲದೀನಿಖಿಳ ಜಗವಾಗಿ ।
ತಾನೆ ತೋರುವನನಿರ್ವಾಚ್ಯಮಾಯೋಪ ।
ದಾನನಾಗಿರ್ಪ ಪರಮಾತ್ಮ ॥ ೧೩ ॥

ಟೀಕಾ:- ಅನಿರ್ವಾಚ್ಯ = ಒಂಭತ್ತು ರೀತಿಯಿಂದ ಹೇಳಲಿಕ್ಕೆ ಬಾರದ, ಮಾಯೋಪವಾಸನಾಗಿರ್ಪ = ಮಾಯೋಪಾಧಿಯುಳ್ಳಂಥಾ, ಪರಮಾತ್ಮ= ಪರಮಾತ್ಮನು, ತನಗೆ=ಸ್ವರೂಪಕ್ಕೆ, ಹಾನಿ = ಕೇಡು, ಇನಿತು = ಎಳ್ಳಷ್ಟಾದರೂ, ಇಲ್ಲದೆ=ಇಲ್ಲದಲೆ, ಈ ನಿಖಿಳ ಜಗವಾಗಿ=ಈ ಸರ್ವ ಕಾಣುವ ಜಗತ್ತಾಗಿ, ತಾನೆ ತೋರುವನು=ತಾನೇ ಕಾಣುವನು.

ಅದು ತಾಂ ವಿವರ್ತವಹುದಿದು ಸರ್ವಮಾತ್ಮೇತಿ ।
ವಿದಿತ ವೇದಾರ್ಥವರಿರಜ್ಜು ಸರ್ಪನೆಂ ।
ಬುದರ ದೃಷ್ಟಾಂತ ಮುಖದಿಂದ ॥ ೧೪ ॥

ಟೀಕಾ- ಅದು ತಾಂ=ಹಾಗೆ ಹೇಳಿದ್ದು, ವಿವರ್ತವಹುದು = ವಿಶೇಷವಾಗಿ ತೋರುವದಾಗಿದೆ, (ಸ್ವರೂಪಕ್ಕೆ ಹಾನಿ ಬರದೆ ಬೇರೆಯಾಗಿ ತೋರುವದು ವಿವರ್ತವಾಗಿರುತ್ತದೆ.) ಇದು=ಈಗ ಹೇಳಿದ್ದು, ಸರ್ವ=ನಾಮರೂಪಗಳು, ಆತ್ಮೇತಿ= ಪರಮಾತ್ಮನ ಸ್ವರೂಪಗಳೇ ಆಗಿರುವವು ಎಂಬುದು, ವಿದಿತ=ಪ್ರಸಿದ್ಧವಾದ, ವೇದಾರ್ಥವು = ಶ್ರುತ್ಯರ್ಥವು, ರಜ್ಜು ಸರ್ಪನೆಂಬುದರ = ಹಗ್ಗವೇ ಹಾವಾಗಿದೆಯೆಂದು ಹೇಳುವ, ದೃಷ್ಟಾಂತ ಮುಖದಿಂದ=ದೃಷ್ಟಾಂತದ ಮೂಲಕ, ಅರಿ=ತಿಳಿ.

ಇನ್ನು ಕೇಳಾ ಹೊನ್ನು ತನ್ನ ನಿಜಮಂ ಬಿಡದೆ ।
ಭಿನ್ನ ಕಟಕಾದಿ ರೂಪೆನಿಸಲದು ವಿವ ।
ರ್ತಂ ನೋಡಿ ತಿಳಿಯುದಿದನಿಲ್ಲಿ ॥ ೧೫ ॥

ಟೀಕಾ:- ಇನ್ನು ಕೇಳು=ಮತ್ತೂ ವಿಚಾರಿಸು, ಆ ಹೊನ್ನು=ಬಂಗಾರವು, ತನ್ನ=ಸ್ವಕೀಯವಾದ, ನಿಜಮಂ = ಸ್ವರೂಪವನ್ನು, ಬಿಡದೆ =ತ್ಯಾಗಮಾಡದೆ, ಭಿನ್ನ=ಬೇರೆಯಾದ, ಕಟಕಾದಿರೂಪೆನಿಸಲ್=ಅನೇಕ ಆಭರಣಗಳ ರೂಪಾಗಿರಲು, ಅದು ವಿವರ್ತಂ=ಅದು ವಿವರ್ತವೆನಿಸುತ್ತದೆ, ಇದನು=ಇದನ್ನು, ಇಲ್ಲಿ=ಇದರಲ್ಲಿ, ನೋಡಿ=ವಿಚಾರಮಾಡಿ, ತಿಳಿಯುವದು=ಅರಿಯುವದು.

ಇಂತಾದ ಕಥದಿನೋರಂತೀ ಜಗಂ ಬ್ರಹ್ಮ ।
ದಿಂ ತೋರುತಿಹುದು ಪಲತೆರನಿದು ನೈಗ ।
ಮಾಂತಸಿದ್ಧಾರ್ಥವೆಲೆಪುತ್ರ ॥ ೧೬

ಟೀಕಾ:- ಇಂತಾದ ಕಥದಿ=ಹೀಗಾದ ಕಾರಣದಿಂದ, ಓರಂತೆ=ಚನ್ನಾಗಿ, ಈ ಜಗಂ = ಈ ಜಗತ್ತು, ಬ್ರಹ್ಮದಿಂ = ಬ್ರಹ್ಮದಿಂದಲೇ, ಪಲತೆರದಿಂ = ಹಲವು ಪ್ರಕಾರದಿಂದ, ತೋರುತಿಹುದು=ಕಾಣಿಸುವದು, ಇದು=ಈಗ ಹೇಳಿದ್ದು, ಎಲೆ

ಪುತ್ರ=ಹೇ ಶಿಷ್ಯನೇ!, ನೈಗಮಾಂತ=ಉಪನಿಷತ್ತುಗಳಲ್ಲಿ ಹೇಳಿದ, ಸಿದ್ಧಾರ್ಥವು= ನಿಶ್ಚಯವಾಗಿ ಹೇಳಲ್ಪಟ್ಟ ಅರ್ಥವು.

ತಾತ್ಪರ್ಯ:- ಇದೇ ಸೂತ್ರದ ನಾಲ್ಕನೇ ಪದದಲ್ಲಿ ಹೇಳಲ್ಪಟ್ಟ ಪ್ರಕಾರ ಅನಿರ್ವಚನೀಯವಾದ, ಮಾಯೋಪಾಧಿಯಿಂದ ಯುಕ್ತವಾದ ಬ್ರಹ್ಮವು ತಾನು ವಿಕಾರವಾಗದೆ, ಈ ಸಮಸ್ತ ಪ್ರಪಂಚವಾಗಿ ತೋರುವದು. ಅಂದರೆ, ಮಾಯೆಯು ಜಡವಾದ್ದರಿಂದ ಬ್ರಹ್ಮವನ್ನೇ ಬಿಟ್ಟು ಸ್ವತಃ ತಾನು ಇದ್ದುಕೊಂಡು ಯಾವ ಕಾರ್ಯವನ್ನು ಮಾಡಲಿಕ್ಕೆ ಶಕ್ತಿಯುಳ್ಳದ್ದಾಗುವದಿಲ್ಲ. ಆದ್ದರಿಂದ ಕೇವಲ ಮಾಯೆಯಿಂದ ಜಗತ್ತಾಗಿಲ್ಲ. ಬ್ರಹ್ಮವು ನಿರ್ವಿಕಾರವಾಗಿರುವದರಿಂದ ಮಾಯೋಪಾಧಿಯಿಲ್ಲದೆ, ಯಾವ ಕಾರ್ಯಕ್ಕೂ ಕಾರಣವಾಗಲಾರದು. ಈ ಅಭಿಪ್ರಾಯವನ್ನು ಗುರುಗಳು ತಮ್ಮ ಮನಸ್ಸಿನಲ್ಲಿ ಇಟ್ಟುಕೊಂಡು, ಮಾಯೋಪಾಧಿಯಾದ, ಬ್ರಹ್ಮವು ಜಗತ್ತಿಗೆ, ವಿವರ್ತೋಪಾದಾನವಾಗಿರುವದೆಂದು ಹೇಳಿದ್ದಾರೆ.

ಯಾಕಂದರೆ, "**ಯತೋವಾ ಇಮಾನಿ ಭೂತಾನಿ**" "**ಜನ್ಮಾದಸ್ಯ ಯತಃ**'' ಮೊದಲಾದ ಶ್ರುತಿ ಸೂತ್ರಗಳ ಮೂಲಕ ಬ್ರಹ್ಮವೇ ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನವಾಗಿರುವದೆಂದು ಕಂಡುಬರುತ್ತದೆ. ಆದರೆ, ಆ ಬ್ರಹ್ಮವು ಅದ್ವಿತೀಯವಾಗಿರುವದರಿಂದ **ನೈಯಾಯಿಕರ** ಪರಮಾಣುಗಳಂತೆ **ಆರಂಭವಾದ** ರೀತಿಯಾಗಿಲ್ಲ. ಕೂಟಸ್ಥರೂಪವಾಗಿರುವದರಿಂದ **ಸಾಂಖ್ಯರ ಪ್ರಕೃತಿಯಂತೆ ಪರಿಣಾಮವಾದ** ರೀತಿಯಾಗಿಲ್ಲ. ಕಿಂತು ಬ್ರಹ್ಮವು ಅವಿದ್ಯೆಯಮೂಲಕ ವಿಯದಾದಿ ಪ್ರಪಂಚ ರೂಪದಿಂದ ವಿವರ್ತ ಲಕ್ಷಣ ಉಪಾದಾನ ಕಾರಣವಾಗಿರುತ್ತದೆ. ಈ ಕಾರಣ ವಿಚಾರದಲ್ಲಿ ವೃತ್ತಿವಾದ ಮೊದಲಾಗಿ ನಾಲ್ಕು ಕಾರಣವಾದಗಳುಂಟು. ಅವುಗಳನ್ನು ವೇದಾಂತ ಚಂದ್ರಿಕೆಯಲ್ಲಿ ನೋಡಬಹುದು.

ಬ್ರಹ್ಮವು ಪರಿಣಾಮವಾಗಿಲ್ಲ, ವಿವರ್ತವಾಗಿದೆಂದು ಹೇಳಿದ್ದಾಯಿತು. ಆದರೆ ಪರಿಣಾಮದ ಲಕ್ಷಣವೇನು ? ವಿವರ್ತದ ಲಕ್ಷಣವೇನು ? ಎಂದು ಕೇಳಿದರೆ; ಅವುಗಳ ಲಕ್ಷಣವನ್ನು ಹೇಳುತ್ತಾರೆ.( ಅದು ತಾಂ ವಿವರ್ತವಹುದು ) ಉಪಾದಾನವೆಂದು ಅಂಗೀಕರಿಸಿದ **ವಸ್ತುವಿನ ಸತ್ತೆಯು ಸಮಾನ ಸತ್ತೆಯುಳ್ಳದ್ದಾಗಿರಲು ಅದರ‡ ಅವಸ್ಥಾ ವಿಶೇಷ ರೂಪತ್ವವೇ ಪರಿಣಾಮ ಲಕ್ಷಣ**ವಾಗಿರುತ್ತದೆ. ಅದರ ಅವಸ್ಥಾ ವಿಶೇಷ ರೂಪತ್ವವೇ ಪರಿಣಾಮವೆಂದು ಹೇಳಿದರೆ ವಿವರ್ತದಲ್ಲಿ ಈ ಲಕ್ಷಣದ ಅತಿವ್ಯಾಪ್ತಿ ದೋಷವು ಆಗುತ್ತದೆ. ಅದನ್ನು ಕಳೆಯುವದಕ್ಕಾಗಿ

---

‡ ಪೂರ್ವ ರೂಪಕ್ಕಿಂತಲೂ ರೂಪಾಂತರವಾಗಿರುವದಕ್ಕೆ ಅನ್ಯಥಾ ರೂಪವೆಂದೂ ಅವಸ್ಥಾ ವಿಶೇಷವೆಂದೂ ಹೇಳುತ್ತಾರೆ.

**ವಸ್ತುವಿನ ಸತ್ತಾಸಮಾನ ಸತ್ತೆಯಾಗಿರಬೇಕೆಂದು** ಹೇಳಿರುವರು. ಮತ್ತು ಉಪಾದಾನ ವಸ್ತುವಿನ ಸತ್ತಾ ಸಮಾನಸತ್ತೆಯಾಗಿದ್ದರೆ ಪರಿಣಾಮವೆಂದು ಹೇಳಿದರೆ; ತಂತುಗಳ ಪರಿಣಾಮ ಘಟವೇಕೆ ಆಗಬಾರದು ? ಯಾಕಂದರೆ, ತಂತು; ಮತ್ತು ಘಟ, ಇವೆರಡರಲ್ಲಿ ಸಮಾನಸತ್ತಾ ಇರುತ್ತದೆ. ಅವುಗಳಲ್ಲಿ ಅತಿವ್ಯಾಪ್ತಿ ಬರಲಾಗಿ; ಅದನ್ನು ತೊರೆಯುವದಕ್ಕಾಗಿ; **ಅದರ ಅವಸ್ಥಾ ವಿಶೇಷ ರೂಪ ವಾಗಿರಬೇಕೆಂದು** ಹೇಳಿರುವರು. ಮತ್ತು ಉಪಾದಾನವೆಂದು ಅಂಗೀಕರಿಸಲ್ಪಟ್ಟ **ವಸ್ತುವಿನ ಸತ್ತೆಯು ವಿಷಮಸತ್ತೆಯುಳ್ಳದ್ದಾಗಿರಲು, ಅದರ ಅವಸ್ಥಾ ವಿಶೇಷರೂಪತ್ವವೇ ವಿವರ್ತದ ಲಕ್ಷಣವು.** ವಿಷಮ ಸತ್ತೆಯುಳ್ಳದ್ದೇ ವಿವರ್ತ ವೆಂದು ಹೇಳಿದರೆ, ಮೃದ್ವಸ್ತುವಿನ ಸತ್ತೆಗೆ ವಿಷಮ ಸತ್ತಾವುಳ್ಳದ್ದು ಚೈತನ್ಯವಾದರೂ ಉಂಟು. ಮಣ್ಣಿನ ವಿವರ್ತವು ಚೈತನ್ಯವಾಗಿರುವದೆಂದು ಹೇಳಬೇಕಾಗುವದು. ಈ ಅತಿವ್ಯಾಪ್ತಿ ದೋಷನಿವಾರಣಕ್ಕಾಗಿ, **ಅದರ ಅವಸ್ಥಾ ವಿಶೇಷ ರೂಪವಾಗಿರ ಬೇಕೆಂದು ಹೇಳಿರುವರು.** ಇನ್ನು ಅದರ ಅವಸ್ಥಾ ವಿಶೇಷರೂಪವೇ ವಿವರ್ತ ವೆಂದು ಹೇಳಿದರೆ, ಪರಿಣಾಮದಲ್ಲಿ ಅತಿವ್ಯಾಪ್ತಿ ಬರುವದು. ಅದನ್ನು ಕಳೆಯುವದ ಕ್ಕಾಗಿ **ವಿಷಮ ಸತ್ತಾವುಳ್ಳದ್ದಾಗಿರಬೇಕೆಂದು ಹೇಳಿರುವರು.** ಉಕ್ತ ಲಕ್ಷಣವು ತ್ರಿವಿಧ ಸತ್ತಾ ಅಂಗೀಕಾರ ಮಾಡಿರುವವರ ರೀತಿಯಂತೆ ಹೇಳಿದೆ. ಮುಂದೆ ಹೇಳುವ ಲಕ್ಷಣವು ಸರ್ವತ್ರ ಒಂದೇ ಸತ್ತೆಯನ್ನು ಅಂಗೀಕರಿಸಿದವರ ಮತ ಪ್ರಕಾರ ಹೇಳಲ್ಪಡುತ್ತದೆ.

## ( ಪರಿಣಾಮ ಲಕ್ಷಣ )

ಉಪಾದಾನ ಕಾರಣವೆಂದು ಅಂಗೀಕರಿಸಲ್ಪಟ್ಟ **ವಸ್ತುವಿನ ಸಲಕ್ಷಣ ವಾಗಿದ್ದು, ಅದರ ಅವಸ್ಥಾ ವಿಶೇಷ ರೂಪಾಗಿರುವದು ಪರಿಣಾಮ ಲಕ್ಷಣವು** ಇಲ್ಲಿ ಪರಿಣಾಮ ಪರಿಣಾಮಿಗಳು ಜಡರೂಪವಾಗಿರುವದೇ ಸಲಕ್ಷಣವಾಗಿರುವದು. ಸಲಕ್ಷಣವಾಗಿರುವದೇ ಪರಿಣಾಮವೆಂದು ಹೇಳಿದರೆ ಮಣ್ಣು ಮತ್ತು ಕೊಡ ಇವೆರಡು ಜಡಲಕ್ಷಣ ಸಮಾನವಾಗಿರುವದರಿಂದ ಇಲ್ಲಿ ಅತಿವ್ಯಾಪ್ತಿ ದೋಷ ಬರುವದು. ಅದಕ್ಕಾಗಿ ಅದರ ಅವಸ್ಥೆ ವಿಶೇಷವಾಗಿರಬೇಕೆಂದು ಹೇಳಿರುವರು. ಮತ್ತು ಅದರ ಅವಸ್ಥಾ ವಿಶೇಷವಾಗಿರುವದೇ ಪರಿಣಾಮವೆಂದು ಹೇಳಿದರೆ; ಸಂವಿತ್ತಿನ ವಿಶೇಷ ರೂಪ ಪ್ರಪಂಚವಾಗಿರುತ್ತದೆ. ಇದರಲ್ಲಿ ದೋಷ ಬರುವದು. ಆದರಿಂದ ಸಲಕ್ಷಣವಾಗಿರಬೇಕೆಂದು ಹೇಳಿರುವರು.

## ( ವಿವರ್ತ ಲಕ್ಷಣ )

ಬಳಿಕ, ಉಪಾದಾನವೆಂದು ಅಂಗೀಕರಿಸಲ್ಪಟ್ಟ **ವಸ್ತುವಿಗೆ ವಿಲಕ್ಷಣ ವಾಗಿದ್ದು, ಅದರ ಅವಸ್ಥಾ ವಿಶೇಷವಾಗಿರುವದೇ ವಿವರ್ತ ಲಕ್ಷಣವು.** ( ಇಲ್ಲಿ

ಜಡಚೇತನರೂಪ ವೈಲಕ್ಷಣ್ಯವು ಹೇಳಲ್ಪಡುತ್ತದೆ.)ಉಪಾದಾನಕ್ಕೆ ವಿಲಕ್ಷಣವಾಗಿ ರುವದೇ ವಿವರ್ತವೆಂದು ಹೇಳಿದರೆ;(ಉಪಾದಾನವಾದ ಜಡಕ್ಕೆ ವಿಲಕ್ಷಣವಾದದ್ದು ಚೈತನ್ಯವುಂಟು. ಜಡದ ವಿವರ್ತ ಚೈತನ್ಯವೆಂದು ಚೈತನ್ಯದಲ್ಲಿ ಅತಿವ್ಯಾಪ್ತಿ ಬರು ವದು. ಅದರ ನಿವೃತ್ತಿಗಾಗಿ ಅದರ ಅವಸ್ಥಾ ವಿಶೇಷವಾಗಿರಬೇಕೆಂದು ಹೇಳಿ ರುತ್ತದೆ. ಮತ್ತು ಅದರ ಅವಸ್ಥಾ ವಿಶೇಷವಾಗಿರುವದೇ ವಿವರ್ತವೆಂದು ಹೇಳಿದರೆ; ಮಣ್ಣಿನ ಅವಸ್ಥಾ ವಿಶೇಷವಾದದ್ದು ಘಟವಾದರೂ ಉಂಟು. ಮಣ್ಣಿನ ವಿವರ್ತ ಘಟವೆಂದು ಹೇಳಬೇಕಾಗುವದು. ಈ ದೋಷ ನಿವೃತ್ಯರ್ಥವಾಗಿ ಉಪಾದಾನ ವಸ್ತುವಿಗೆ ವಿಲಕ್ಷಣವಾಗಿರಬೇಕೆಂದು ಹೇಳಿರುತ್ತದೆ. ಮತ್ತು ಕಾರಣಕ್ಕೆ ಅಭಿನ್ನವಾಗಿರುವ ಕಾರ್ಯವು ಪರಿಣಾಮ ಲಕ್ಷಣವು ಕಾರಣದೊಡನೆ ಅಭಿನ್ನವಾಗದೆ ಅದಕ್ಕೆ ಭಿನ್ನವಾಗದೆ. ವಚಿಸಲಿಕ್ಕೆ ಬಾರದ ಕಾರ್ಯವೇ ವಿವರ್ತಲಕ್ಷಣವೆನಿಸುವದು. ಈ ಲಕ್ಷಣದ ವಿಚಾರವು ವಿಸ್ತಾರವಿರುವದರಿಂದಲೂ ಕ್ಲಿಷ್ಟವಿರುವದರಿಂದ ಬರೆಯುವದನ್ನು ಬಿಟ್ಟಿದ್ದೇವೆ. ಈ ರೀತಿ ಪರಿಣಾಮ ಮತ್ತು ವಿವರ್ತ ಇವುಗಳ ಲಕ್ಷಣಗಳು ಇರುತ್ತವೆ. ರಜ್ಜು ಸರ್ಪದ ದೃಷ್ಟಾಂತ ವಿವೇಚನ ವನ್ನು ಅನಿರ್ವಚನೀಯ ಖ್ಯಾತಿಯಲ್ಲಿ ಹೇಳಿದ್ದೇವೆ. ಅಲ್ಲಿನೋಡತಕ್ಕದ್ದು. ಜಗತ್ತಿಗೆ ಬ್ರಹ್ಮವೇ ವಿವರ್ತ ಉಪಾದಾನ ಕಾರಣದಿಂದ, ಕಾಣುವ ಸರ್ವ ಪ್ರಪಂಚವೆಲ್ಲವು ಬಾಧಾಸಾಮಾನಾಧಿಕರಣ್ಯದಿಂದ ಆತ್ಮರೂಪವಾಗಿರುತ್ತದೆಂದು ಶ್ರುತಿಯು ಹೇಳುತ್ತದೆ. ಹಾಲಿನ ವಿಕಾರ ಮೊಸರಾದಂತೆ, ಆತ್ಮದ ವಿಕಾರವು ಜಗತ್ತಾಗಿದೆ. ಯೆಂದು ಹೇಳಿದರೆ; ಬ್ರಹ್ಮಕ್ಕೆ ವಿಕಾರಿತ್ವ ಅನಿತ್ಯತ್ವಾದಿ ಪ್ರಸಂಗಗಳು ಬರುವದ ರಿಂದ ಪರಿಣಾಮವಾದವನ್ನು ಸ್ವೀಕಾರಮಾಡಿಲ್ಲ. ಸ್ವಸ್ವರೂಪವನ್ನು ಪರಿತ್ಯಾಗ ಮಾಡದಲೆ, ಸ್ವರೂಪಕ್ಕಿಂತ ಭಿನ್ನವಾಗಿ ಮಿಥ್ಯಾ ಪ್ರತೀತಿಯಾಗುವದೇ ವಿವರ್ತ ಶಬ್ದದ ಅರ್ಥವಾಗಿದೆ. ಹೇಗಂದರೆ; ರಜ್ಜು ತನ್ನ ಸ್ವರೂಪವನ್ನು ತ್ಯಾಗಮಾಡದೆ ಮಿಥ್ಯಾ ಸರ್ಪಾಕಾರ ಹೇಗೆ ಪ್ರತೀತಿಯಾಗುವದೋ; ಅಥವಾ ಭಂಗಾರವು ತನ್ನ ನಿಜಸ್ವರೂಪಗಳಾದ ಗುರುತ್ವಕಾಂತಿಗಳನ್ನು ತ್ಯಾಗಮಾಡದೆ, ರೂಪಾಂತರ ಆಭ ರಣಗಳಾಗಿ ಹೇಗೆ ತೋರುವದೋ; ಹಾಗೆ ಬ್ರಹ್ಮವು ತನ್ನ ನಿಜ ಸಚ್ಚಿದಾನಂದ ಸ್ವರೂಪಕ್ಕೆ ಹಾನಿಯಿಲ್ಲದೆ, ರೂಪಾಂತರ ಜಗದ್ರೂಪವಾಗಿ ಪ್ರತೀತಿಯಾಗುತ್ತದೆ. ಅಂದರೆ; ಹಗ್ಗದಲ್ಲಿ ಹಾವಿನ ನಾಮರೂಪುಗಳು, ಭಂಗಾರದಲ್ಲಿ ದಾಗೀನುಗಳ ನಾಮರೂಪುಗಳು, ಹೇಗೆ ಕಲ್ಪಿತಗಳಾಗಿ ಅಧಿಷ್ಠಾನದಲ್ಲಿ ನಾಶವಾಗಿ ಹೋಗು ವವೋ; ಹಾಗೆ ಬ್ರಹ್ಮದಲ್ಲಿ ಕಲ್ಪಿತವಾಗಿ ತೋರಿದ ನಾಮರೂಪ ಪ್ರಪಂಚವು, ಬ್ರಹ್ಮದಲ್ಲಿ ನಾಶವಾಗುತ್ತದೆಂಬ ಭಾವವು.

ಈ ರೀತಿ ಶ್ರುತಿ, ಯುಕ್ತಿ, ಅನುಭವಗಳಿಂದ ವಿಚಾರ ಮಾಡಿ ನೋಡಲು, ಬ್ರಹ್ಮದಿಂದ ಅನೇಕ ರೂಪವಾದ ಈ ಜಗತ್ತು ತೋರುತ್ತದೆಂಬುದು ಯಥಾರ್ಥ ವಾಗಿರುತ್ತದೆ.

**ಬಳಿಕ,** ಬ್ರಹ್ಮದಲ್ಲಿ ತೋರಿದ ಜಗತ್ತು ಎಷ್ಟು ದಿವಸಗಳವರಿಗೆ ಇರುತ್ತದೆಂದು ಶಿಷ್ಯನು ಕೇಳಲು; ಬಹ್ಮ ವಿಚಾರ ಮಾಡುವ ಪರ್ಯಂತರ ವಿರುತ್ತದೆಂದು ಉತ್ತರವನ್ನು ಹೇಳುತ್ತಾರೆ.

**ಪರಮಾರ್ಥವಲ್ಲದೀಪರಿ ಸತ್ಯದಂತಿರುವ।**
**ಪರಿಯಂತ ಮಿಹುದು ಜಗವಿದಾರೈಯಲಾ।**
**ಪರಮಾತ್ಮನಲ್ಲ ದೆರಡುಂಟೆ ||೧೭||**

**ಟೀಕಾ:–** ಪರಮಾರ್ಥವಲ್ಲದ=ನಿಜವಲ್ಲದ, ಜಗವಿದು=ಈ ಜಗತ್ತು, ಈ ಪರಿ=ಈ ರೀತಿ, ಸತ್ಯದಂತೆ=ನಿಜವೆನ್ನುವಹಾಗೆ, ಅರಿವಪರ್ಯಂತ=ಸರಿಯಾಗಿ ತಿಳಿಯುವವರೆಗೂ, ಇಹುದು=ಇರುವದು, ಆರೈಯಲ್=ವಿಚಾರಮಾಡಲು, ಆ ಪರಮಾತ್ಮನಲ್ಲದೆ=ಆ ಬ್ರಹ್ಮವಲ್ಲದೆ, ಎರಡುಂಟೇ=ಬೇರೊಂದಿರುವದೇ, (ಇಲ್ಲವೆಂಬರ್ಥವು)

**ತಾತ್ಪರ್ಯ:-** ತ್ರಿಕಾಲ ಅಬಾಧ್ಯವಲ್ಲದ ಈ ಜಗತ್ತು ಶ್ರುತಿಗುರುಸ್ವಾನುಭವದಿಂದ, ಪಾರಮಾರ್ಥಿಕ ಬ್ರಹ್ಮಸ್ವರೂಪವನ್ನು ಎಲ್ಲಿಯವರೆಗೆ ತಿಳಿಯುವದಿಲ್ಲವೋ; ಅಲ್ಲಿಯತನಕ ಪ್ರತೀತಿಯಾಗುತ್ತಿರುವದು. ಪರಬ್ರಹ್ಮಸ್ವರೂಪವನ್ನು ಚನ್ನಾಗಿ ತಿಳಿದ ಬಳಿಕ ಇದು ತೋರದು. ಕಿಂತು ಒಂದು ಬ್ರಹ್ಮವೇ ಇರುವದು. ಹೇಗಂದರೆ, ರಜ್ಜುವಿನ ಜ್ಞಾನೋತ್ತರ ಸರ್ಪವು ಹೇಗೆ ತೋರುವದಿಲ್ಲವೋ; ಜಾಗ್ರದವಸ್ಥೆಯಲ್ಲಿ ಸ್ವಪ್ನಪ್ರಪಂಚವು ಹೇಗೆ ತೋರುವದಿಲ್ಲವೋ; ಹಾಗೆ ಬ್ರಹ್ಮವನ್ನರಿಯಲು ಜಗತ್ತು ಏನೂ ಕಾಣಿಸುವದಿಲ್ಲ. ಹೀಗೆಂದು ಶ್ರೀ ಶುಚ್ಛಂಕರಾಚಾರ್ಯರು ಹೇಳಿದ್ದಾರೆ. **“ವಿಶ್ವಂ ದರ್ಪಣ ದೃಶಮಾನ ನಗರೀ ತುಲ್ಯಂ”** ಕನ್ನಡಿಯಲ್ಲಿ ತೋರುವ ಪಟ್ಟಣದಂತೆ ಈ ಜಗತ್ತು ತನ್ನಲ್ಲಿಯೇ ತೋರುವದು. ಆದರೂ ಮಾಯಾಮೂಲಕ ಹೊರಗೆ ಇದ್ದಂತೆ ತೋರುವದು. ಹೇಗಂದರೆ, ಸ್ವಪ್ನವು ತನ್ನಲ್ಲಿ ತೋರಿದರೂ, ಸ್ವಪ್ನಕಾಲದಲ್ಲಿ ಸ್ವಪ್ನವು ತನಗಿಂತ ಭಿನ್ನವಾಗಿ ಕಾಣುವಂತೆ, ಎಚ್ಚರಿಕೆಯಾಗಿ ನೋಡಿದರೆ ಸ್ವಪ್ನವೇನೂ ತೋರದೆ, ತಾನೊಬ್ಬನೇ ಹೇಗೆ ತೋರುವನೋ; ಹಾಗೆ ಸ್ವರೂಪ ಜ್ಞಾನೋದಯವಾಗಲು ಅಖಂಡಾನಂದ ಅದ್ವಯವಾದ ಬ್ರಹ್ಮವೇ ತೋರುವದು ಎಂಬ ಭಾವವು.

## ಚಿದ್ವಿವರ್ತ ನಿರೂಪಣೆ ಸೂ-೪-ತ್ರಿ ೪೮

**ಬಳಿಕ,** ಶಿಷ್ಯನು ಪೂರ್ವೋಕ್ತ ಅರ್ಥವನ್ನು ಶ್ರವಣಮಾಡಿ ಕಾರ್ಯಕಾರಣಗಳು ಸಲಕ್ಷಣವಾಗಿರಬೇಕು. ಆದರೆ, ಬ್ರಹ್ಮ ಮತ್ತು ಜಗತ್ತು ವಿಲಕ್ಷಣಗಳಾಗಿವೆ. ಆದರಿಂದ ಬ್ರಹ್ಮದ ವಿವರ್ತ ಜಗತ್ತು ಅಲ್ಲ. ಕಿಂತು ಕೇವಲ ಮಾಯೆಯೇ ಜಗತ್ತಿಗೆ ಕಾರಣವಾಗಿರುವದೆಂದು ಶಂಕೆಯನ್ನು ಈ ಸೂತ್ರದಲ್ಲಿ ಮಾಡುತ್ತಾನೆ.

**ಸೂತ್ರ || ಚಿತ್ತಿನ ವಿವರ್ತವೆಂದೆನಲೇಕೆ ಜಗವಿದಂ ।**
**ಮತ್ತೆ ಮಾಯಾ ಮಾತ್ರ ವೆನಲಾಗದೆ ||**

**ಟೀಕಾ:-** ಜಗವಿದಂ=ಈ ಜಗತ್ತು, ಚಿತ್ತಿನ=ಚಿದ್ರೂಪದ, ವಿವರ್ತವೆಂದು=ವಿಶೇಷವಾದ ಅವಸ್ಥಾರೂಪವೆಂದು, ಎನಲೇಕೆ=ಯಾಕೆ ಅನ್ನಬೇಕು, ? ಮತ್ತೆ=ಅನಂತರ, ಮಾಯಾಮಾತ್ರವೆನಲ್=ಕೇವಲ ಮಾಯೆಯೇ ಈ ರೂಪವಾಗಿದೆಯೆಂದು ಹೇಳಿದರೆ, ಆಗದೆ=ಬರುವದಿಲ್ಲವೇ ?

**ತಾತ್ಪರ್ಯ:-** ಈ ಜಗತ್ತಿಗೆ ಮಾಯೋಪಾಧಿಯಿಂದ ಬ್ರಹ್ಮವು ವಿವರ್ತೋಪಾದಾನ ಕಾರಣವಾಗಿರುತ್ತದೆಂದು ಹೇಳುವದಕ್ಕಿಂತಲೂ; ಬ್ರಹ್ಮ ವ್ಯತಿರಿಕ್ತವಾದ ಕೇವಲ ಮಾಯೆಯೇ ಪರಿಣಾಮ ಉಪಾದಾನ ಕಾರಣವಾಗಿರುವದೆಂದು ಹೇಳಿದರೆ ಬರುವದಿಲ್ಲವೇ ?

ಬಳಿಕ, ಉಕ್ತ ಅಭಿಪ್ರಾಯವುಳ್ಳವನಾಗಿ ಶಿಷ್ಯನು ಗುರುಗಳನ್ನು ಕುರಿತು ನಮಸ್ಕರಿಸುತ್ತಾನೆ.

**ತ್ರಿ|| ಶ್ರೀಗುರು ಪದಾಂಬುಜ ಪರಾಗರಸ ರೋಲಂಬ ।**
**ನಾಗಿ ಕಡು ನೇಹದಿಂದೆರಗಿ ಮತ್ತೆ ಸೊಗ ।**
**ಸಾಗಿ ಬಿನ್ನೈಸಿದನು ಬೋಧ್ಯ ||೧||**

**ಟೀಕಾ:—** ಶ್ರೀಗುರು=ಸದ್ಗುರುಗಳ, ಪದಾಂಬುಜ=ಪಾದಕಮಲಗಳ, ಪರಾಗ=ಧೂಳಿನಲ್ಲಿರುವ, ರಸ=ಸ್ವಾದವನ್ನು ಗ್ರಹಿಸೋಣದರಲ್ಲಿ, ರೋಲಂಬನಾಗಿ=ಭೃಂಗಾಯಮಾನನಾಗಿ, ಕಡು=ಬಹಳವಾದ ನೇಹದಿಂದ=ಪ್ರೀತಿಯಿಂದ, ಎರಗಿ=ನಮಸ್ಕರಿಸಿ, ಮತ್ತೆ=ಅನಂತರ, ಬೋಧ್ಯ=ಶಿಷ್ಯನು, ಸೊಗಸಾಗಿ=ಸಂತೋಷವುಳ್ಳವನಾಗಿ, ಬಿನ್ನೈಸಿದನು=ಪ್ರಶ್ನೆಯನ್ನು ಮಾಡಿದನು.

**ತಾತ್ಪರ್ಯ:-** ಶಿಷ್ಯನು ಶ್ರೀಗುರುಗಳ ಪಾದಕಮಲದಲ್ಲಿರುವ ಮಕರಂದವನ್ನು ಆಸ್ವಾದನ ಮಾಡುವಲ್ಲಿ ಭೃಂಗಾಯಮಾನನಾಗಿ, ಅತ್ಯಂತ ಪ್ರೇಮ ಲಕ್ಷಣ ಭಕ್ತಿಯಿಂದ ನಮಸ್ಕಾರವನ್ನು ಮಾಡಿ, ಎದ್ದು ನಿಂತು ಸ್ತುತಿಸಿ ಪ್ರಶ್ನೆಯನ್ನು ಮಾಡುವಂಥವನಾದನು.

ಬಳಿಕ, ಬ್ರಹ್ಮಕ್ಕೂ ಜಗತ್ತಿಗೂ ವೈಲಕ್ಷಣ್ಯವನ್ನು ತೋರಿಸುತ್ತಾನೆ.

**ಗುರುವರ್ಯ ಚಿತ್ತೈಸು ನಿರುಪಾಧಿಕ ಜ್ಯೋತಿ ।**
**ನಿರತಿಶಯ ನಿತ್ಯನಿಜ ನಿರಾವರಣವಹ ।**
**ಪರಮ ನೆನಲೇಕೆ ಜಗವನ್ನು ||೨||**

**ಟೀಕಾ:—** ಗುರುವರ್ಯ=ಭೋ ಗುರೂತ್ತಮನೇ, ಚಿತ್ತೈಸು=ಏಕಾಗ್ರತೆಯಿಂದ ಆಲಿಸು, ನಿರುಪಾಧಿಕ=ಉಪಾಧಿಯಿಲ್ಲದ, ಜ್ಯೋತಿ=ಸ್ವಯಂಪ್ರಕಾಶಮಾದ, ನಿರತಿಶಯ=ಅತ್ಯಧಿಕವಾದ, ನಿತ್ಯ=ನಾಶವಿಲ್ಲದ, ನಿಜ=ಸತ್ಯವಾದ, ನಿರಾವರಣವಹ=ಆವರಣವಿಲ್ಲದ, ಪರಮನೇ=ಪರಮಾತ್ಮನೇ, ಜಗವನು = ಜಗದ್ರೂಪನಾಗಿರುವನೆಂದು, ಎನಲೇಕೆ=ಏಕೆ ಹೇಳಬೇಕು.?

**ತಾತ್ಪರ್ಯ:-** ಗುರುನಾಥನೇ ಏಕಾಗ್ರದಿಂದ ನಾನು ಹೇಳುವದನ್ನು ಕೇಳಿರಿ. ಏನೆಂದರೆ, ಬ್ರಹ್ಮವು ಉಪಾಧಿ ರಹಿತವಾಗಿಯೂ, ಸ್ವಯಂ ಪ್ರಕಾಶವಾಗಿಯೂ, ಅತ್ಯಂತ ಶ್ರೇಷ್ಠವಾಗಿಯೂ, ತ್ರಿಕಾಲ ಅಭಾಧ್ಯವಾಗಿಯೂ, ಯಥಾರ್ಥವಾಗಿಯೂ, ಆವರಣರಹಿತವಾಗಿಯೂ ಉಂಟು.

ಜಗತ್ತು ಉಕ್ತ ಬ್ರಹ್ಮಕ್ಕೆ ವಿಲಕ್ಷಣವಾಗಿರುತ್ತದೆ. ಅಂದರೆ; ಉಪಾಧಿಯಿಂದ ಕೂಡಿದ್ದಾಗಿಯೂ ಜಡವಾಗಿಯೂ ಸಾತಿಶಯವಾಗಿಯೂ, ನಾಶವುಳ್ಳದ್ದಾಗಿಯೂ, ಮಿಥ್ಯೆಯಾಗಿಯೂ, ಆವರಣ ಸಹಿತವಾಗಿಯೂ ಉಂಟು.ಹೀಗಿದ್ದು ಈ ಜಗತ್ತಿಗೆ ಬ್ರಹ್ಮವೇ ಕಾರಣವೆಂದು ಯಾಕೆ ಹೇಳಬೇಕು ?

**ಬಳಿಕ:-** ಜಗತ್ತಿಗೆ ಮಾಯಾಕಾರಣವಾಗಿರುತ್ತದೆಂಬುದನ್ನು ಈ ಪದದಿಂದ ಹೇಳುತ್ತಾನೆ.

> **ಮಾಯೆ ಸದ್ರೂಪಿಣಿಯದೀ ನಿಖಿಳ ಜಗವಾಗಿ।**
> **ಸಾಯಸಂ ಗೊಳುತ ಮಿಹುದೆಂದೊಡೇನು ಗುರು।**
> **ರಾಯ ಚಿತ್ತೈಸು ಬಳಿಕೊಂದ ॥೩॥**

**ಟೀಕಾ:-** ಅದೆ=ಆ, ಸದ್ರೂಪಿಣಿ=ಸತ್ಯವಾದ( ಸಾಂಖ್ಯರು ಮಾಯೆಗೆ ನಿತ್ಯವೆಂದು ಹೇಳುವರು. ಆ ಮತಾನುಸಾರ ) ಮಾಯೆ=ಮಾಯೆಯೇ, ಈ ನಿಖಿಳ ಜಗವಾಗಿ=ತೋರುವ ಸರ್ವಜಗತ್ತಾಗಿ, ಸಾಯಸಂ=ಕಷ್ಟವನ್ನು, ಗೊಳುತಮಿಹುದು=ಹೊಂದುತಿರುವದು, ಎಂದೊಡೇನು=ಹೀಗೆ ಹೇಳಿದರೆ ಹಾನಿಯೇನು? ಗುರುರಾಯ=ಗುರುವರ್ಯನೇ, ಬಳಿಕ=ಅನಂತರ, ಒಂದು = ಮತ್ತೊಂದನ್ನು, ಚಿತ್ತೈಸು=ಕೇಳು;

**ತಾತ್ಪರ್ಯ:–** ಅನಾದಿ ಭಾವರೂಪಮಾದ ಮಾಯೆಯೇ ಈ ಸಕಲ ಜಗದ್ರೂಪವಾಗಿ ಪರಿಣಾಮವಾಗಿರುತ್ತದೆ. ಜಡೋಘಟ ಎಂಬಅನುಭವದಿಂದಲೂ ಹಾಲುಕೆಟ್ಟು ಮೊಸರಾಗಿರುವಂತೆ, ಮಾಯಾ ಜಗದ್ರೂಪ ವಿಕಾರವಾಗಿರುತ್ತದೆಂದು ಹೇಳಿದರೆ; ಬ್ರಹ್ಮಕ್ಕೆ ಅರ್ಥಾತ್ ನಿರ್ವಿಕಾರತ್ವವು ಸಂಭವಿಸುತ್ತದೆ. ಆದ್ದರಿಂದ ಹೀಗೆ ಹೇಳುವದರಿಂದ ಆಗುವ ಅನರ್ಥವೇನು ?

**ಬಳಿಕ;**:- ಬ್ರಹ್ಮವೇ ಜಗದ್ರೂಪವಾಗಿರುವದೆಂದು ಹೇಳಿದರೆ, ಅನರ್ಥವನ್ನು ತೋರಿಸುತ್ತಾನೆ.

**ಕೇಡು ಜಡ ದುಃಖದೊಡಗೂಡಿರ್ಪ ಜಗವಿದಂ ।**
**ನೋಡಲಾ ಸಚ್ಚಿದಾನಂದವೆಂದು ನೀ**
**ನಾಡಲೇನಘಟಿತವದಲ್ತೆ ॥೪॥**

ಟೀಕಾ:— ಕೇಡು=ಅನಿತ್ಯ, ಜಡ=ಜ್ಞಾನವಿಲ್ಲದ್ದು, ದುಃಖದೊಡಗೂಡಿರ್ಪ=ದುಃಖಾದಿಗಳಿಂದ ಕೂಡಿದ, ಜಗವಿದಂ=ಈ ಜಗತ್ತನ್ನು ಕುರಿತು, ನೋಡಲ್=ವಿಚಾರಿಸಲಾಗಿ, ಆ ಸಚ್ಚಿದಾನಂದವೆಂದು=ಸತ್, ಚಿತ್, ಆನಂದ ರೂಪ ಬ್ರಹ್ಮವೆಂದು, ನೀವು ಆಡಲ್=ತಾವು ಹೇಳಿದರೆ, ಅಘಟಿತವದಲ್ತೆ=ಇದು ಆಶ್ಚರ್ಯವಲ್ಲವೇ?

**ನೀವೆಂದ ತೆರನಾದೊಡಾವಾವ ವಿಕೃತಿ ಮ ।**
**ತ್ತಾವಾವ ಹಾನಿಯುನು ಚಿತ್ತಿಗೆನಬೇಹು ।**
**ದೋವಿ ಗುರುವರ್ಯ ಕರುಣಿಪುದು ॥ ೫ ॥**

ಟೀಕಾ:- ನೀವೆಂದತೆರನಾದೊಡೆ=ತಾವು ಹೇಳಿದ ಪ್ರಕಾರವಾದರೆ, ಆವಾವ=ಯಾವ ಯಾವ, ವಿಕೃತಿ=ವಿಕಾರಗಳನ್ನು, ಮತ್ತು=ಬಳಿಕ, ಆವಾವ=ಯಾವ ಯಾವ, ಹಾನಿಯುನು=ನಾಶವನ್ನು, ಚಿತ್ತಿಗೆ=ಚಿದ್ರೂಪಕ್ಕೆ, ಎನಬೇಹುದು=ಹೇಳಬಹುದು, ಗುರುವರ್ಯ=ಗುರುಶ್ರೇಷ್ಠನೇ, ಓವಿ=ಚನ್ನಾಗಿ, ಕರುಣಿಪುದು=ತಿಳಿಸುವದು;

**ತಾತ್ಪರ್ಯ**:- ಸತ್, ಚಿತ್, ಆನಂದ ಸ್ವರೂಪವಾಗಿ ಬ್ರಹ್ಮವಿರುತ್ತದೆ. ಜಗತ್ತು ಅಸತ್, ಜಡ, ದುಃಖರೂಪವಾಗಿರುತ್ತದೆ. ಹೀಗಿದ್ದು ಈ ಜಗದ್ರೂಪವು ಬ್ರಹ್ಮವೇ ಆಗಿರುವದೆಂದು ಹೇಳುವದು ಆಶ್ಚರ್ಯವಲ್ಲವೇ? ಒಂದು ವೇಳೆ ತಾವು ಹೀಗೆ ಹೇಳಿದರೆ; ಆ ಬ್ರಹ್ಮವು ಯಾವ ಯಾವ ವಿಕಾರಗಳನ್ನು ಯಾವ ಯಾವ ಹಾನಿಯನ್ನು ಹೊಂದಬೇಕಾಯಿತು.? ಈ ವಿಷಯವನ್ನು ತಾವು ನನಗೆ ತಿಳಿಸಿ, ನನ್ನ ಸಂಶಯುವನ್ನು ಪರಿಹರಿಸಬೇಕು. ಎಂದು ಶಿಷ್ಯನು ಪ್ರಶ್ನೆಯನ್ನು ಮಾಡಿದನು.

## ಪ್ರಶ್ನೆ ನಿರೂಪಣೆ ಸೂ. ೫. ತ್ರಿ. ೫೩

**ಬಳಿಕ**:- ಸೃಷ್ಟಿ ಪೂರ್ವದಲ್ಲಿ ಒಂದು ಸದ್ವಸ್ತು ಉಂಟು. ಅದಕೆ ಭಿನ್ನವಾಗಿ ಏನೂ ಇಲ್ಲ. ಅದೇ ಜಗತ್ತಿಗೆ ಕಾರಣವಾಗಿದ್ದರೂ, ಅದಕ್ಕೊಂದು ವಿಕಾರವಿಲ್ಲ. ಆ ಬ್ರಹ್ಮದಲ್ಲಿ ಈ ಜಗತ್ತು ಕಲ್ಪಿತವಾಗಿರುತ್ತದೆಂದು ಈ ಸೂತ್ರದಲ್ಲಿ ನಿರೂಪಣಮಾಡುತ್ತಾರೆ.

ಸೂತ್ರ ಸತ್ತೆನಿಸಿ ಜಗದುಪಾದಾನ ವೊಂದಿಲ್ಲಾಗಿ।
ಚಿತ್ತಿನ ವಿವರ್ತವೆಂದೆನಬೇಹುದು ॥ ॥೬॥

ಟೀಕಾ:- ಸತ್ತೆನಿಸಿ=ಇದ್ದದ್ದೆನಿಸಿ,(ಸದ್ರೂಪಾತ್ಮನಿಗಿಂತ ಭಿನ್ನವಾಗಿ) ಜಗದುಪಾದಾನಂ=ಜಗತ್ತಿಗೆ ಉಪಾದಾನ ಕಾರಣವಾದದ್ದು ಒಂದಿಲ್ಲಾಗಿ=ಒಂದೂಇಲ್ಲದ್ದರಿಂದ, ಚಿತ್ತಿನ=ಚಿದ್ರೂಪಾತ್ಮನ, ವಿವರ್ತವೆಂದು=ವಿಶೇಷಾವಸ್ಥಾ ಸ್ಥಿತಿಯಾಗಿರುವದೆಂದು, ಎನಬೇಹುದು=ಹೇಳಬಹುದು.

ಎಲೆ ಮಗನೇ ಕೇಳ್ನಿನ್ನ ಚೆಲುವ ಚೋದ್ಯಕ್ಕೆ ನಾ।
ನೊಲಿದು ಪರಿಹಾರ ವರಪುವೆನೆನುತೆ ಸರ್ವ।
ಸುಲಭ ಗುರುವಿಂತು ಬೆಸಸಿದನು. ॥೧॥

ಟೀಕಾ:- ಎಲೆ ಮಗನೇ=ಎಲೈ ಶಿಷ್ಯನೇ, ಕೇಳು=ಆಲಿಸು, ನಿನ್ನ ಚೆಲುವ ಚೋದ್ಯಕ್ಕೆ=ನಿನ್ನ ಸುಂದರವಾದ ಪ್ರಶ್ನೆಗೆ, ನಾನು ಒಲಿದು=ನಾನು ಸಂತುಷ್ಟನಾಗಿ, ಪರಿಹಾರವನು=ಉತ್ತರವನ್ನು, ಅರಪುವೆನು=ತಿಳಿಸುತ್ತೇನೆ, ಎನುತೆ=ಹೀಗೆ ನುಡಿಯುತ್ತಾ, ಸರ್ವ ಸುಲಭ ಗುರುವು=ಸರ್ವವನ್ನು ಅನಾಯಾಸದಿಂದ ಪ್ರಾಪ್ತಿ ಮಾಡಿಕೊಡುವ ಗುರುನಾಥನು, ಇಂತು=ಈ ರೀತಿ, ಬೆಸಸಿದನು=ಹೇಳಿದನು.

ಪರಮಾತ್ಮನಿಂದನ್ಯ ಪರಮಾರ್ಥವಾಗಿ ಸು।
ಸ್ಥಿರ ಮಿರ್ಪುದೊಂದ ನರಿಯಲಿಲ್ಲಾಗಿ ಯಾ।
ಪರಮಾತ್ಮನಖಿಳವೆನಬೇಕು ॥೨॥

ಟೀಕಾ:- ಪರಮಾತ್ಮನಿಂದ=ಸದ್ರೂಪಾತ್ಮನಿಗಿಂತಲೂ, ಅನ್ಯ=ಬೇರೆಯಾದ ಪರಮಾರ್ಥವಾಗಿ=ತ್ರಿಕಾಲ ಅಬಾಧ್ಯವಾಗಿ, ಸುಸ್ಥಿರಮಿರ್ಪುದು=ನಿತ್ಯವಾಗಿರವದು, ಒಂದನ್ನು=ಒಂದನ್ನಾದರೂ, ಅರಿಯಲಿಲ್ಲಾಗಿ=ತಿಳಿಯದ್ದರಿಂದ, ಆ ಪರಮಾತ್ಮನೆ ಆ ಇದ್ದೊಬ್ಬ ಪರಮಾತ್ಮನೇ, ಅಖಿಳವು=ಸರ್ವವು, ಎನಬೇಕು=ಆಗಿರುವನೆಂದು ಹೇಳಬೇಕು.

ಬೇರೊಂದು ಸತ್ತಾಗಿ ತೋರುತಿಹುದೆನೆ ವೇದ।
ಸಾರುವದ್ವೈತ ಸಂಪಾದನಕ್ಕೆ ಬಲು।
ದೂರಪ್ಪುದಾಗಿ ಪೆರತಿಲ್ಲ ॥೩॥

ಟೀಕಾ:- ಬೇರೊಂದು=ಬ್ರಹ್ಮಕ್ಕೆ ಭಿನ್ನವಾಗಿ ಮತ್ತೊಂದು, ಸತ್ತಾಗಿ=ಸದ್ರೂಪವಾಗಿ, ತೋರುತಿಹುದೆನೆ=ತೋರುವದೆಂದು ಹೇಳಿದರೆ, ವೇದಸಾರುವ=ವೇದದಲ್ಲಿ ಹೇಳುವ, ಅದ್ವೈತ ಸಂಪಾದನಕ್ಕೆ=ಅದ್ವೈತ ಪ್ರಾಪ್ತಿಗೆ, ಬಲು=ಬಹಳ, ದೂರಪ್ಪುದಾಗಿ=ದೂರವಾಗೋಣದರಿಂದ, ಪೆರತಿಲ್ಲ= ಬೇರೆ ಯಾವದೂ ಇಲ್ಲ.

**ತಾತ್ಪರ್ಯ**:- ಎಲೈ ಪುತ್ರನೇ! ಕೇಳು. ನೀನು ಮಾಡಿರುವ ಪ್ರಶ್ನೆಯು ಅತಿ ಮನೋಹರವಾಗಿರುವದು. ಇದಕ್ಕೆ ಸರಿಯಾಗಿ ಉತ್ತರವನ್ನು ಕೊಡುತ್ತೇನೆ. ಏಕಾಗ್ರ ಚಿತ್ತದಿಂದ ಕೇಳು. ಏನಂದರೆ?

**"ಸದೇವ ಸೋಮ್ಯೇದ ಮಗ್ರ ಆಸೀತ್"** ಎಂಬ ಶ್ರುತಿಯು ಸೃಷ್ಟಿ ಪೂರ್ವದಲ್ಲಿ ಒಂದು ಸತ್ತುಮಾತ್ರ ಉಂಟು. ಅದಕ್ಕೆ ಭಿನ್ನವಾಗಿ ಏನೂ ಇಲ್ಲೆಂದು ಹೇಳುವದು. ಆದ್ದರಿಂದ ಇದ್ದೊಂದು ಬ್ರಹ್ಮವೇ ಜಗತ್ತಿಗೆ ಉಪಾದಾನಕಾರಣವಾಗಿರುತ್ತದೆ ಹೊರ್ತು ಬೇರೊಂದಿಲ್ಲ. ಉಪಾದಾನವೆಂದರೆ, **ಯಾವದು ಕಾರ್ಯಕ್ಕೆ ಆಧಾರವಾಗಿದ್ದೂ ಕಾರ್ಯೋತ್ಪತ್ತಿಗೆ ಹೇತುವಾಗಿರುವದೋ ಅದು ಉಪಾದಾನವೆನ್ನಲ್ಪಡುವದು.** ಕಾರ್ಯೋತ್ಪತ್ತಿಗೆ ಹೇತುವಾಗಿರುವದು. ಉಪಾದಾನ ಕಾರಣವೆಂದು ಹೇಳಿದರೆ, ನಿಮಿತ್ತ ಕಾರಣದಲ್ಲಿ ಅತಿವ್ಯಾಪ್ತಿ ಬರುವದು ಅದರಿಂದ ಕಾರ್ಯಕ್ಕೆ ಆಧಾರವಾಗಿರಬೇಕೆಂದು ಹೇಳಿದ್ದಾರೆ. ಮತ್ತು ಕಾರ್ಯಕ್ಕೆ ಆಧಾರವಾದದ್ದೇ ಉಪದಾನವೆಂದು ಇಷ್ಟೇ ಹೇಳಿದರೆ; ಭೂತಳವಾದರೂ ಆಧಾರವಾಗಿದೆ. ಅದರಲ್ಲಿ ಅತಿ ವ್ಯಾಪ್ತಿ ದೋಷ ಬರುವದು. ಅದರ ನಿವೃತ್ತಿಗಾಗಿ ಕಾರ್ಯೋತ್ಪತ್ತಿಗೆ ಹೇತುವಾಗಿರಬೇಕೆಂದು ಹೇಳಿರುವರು.

ಈ ಪ್ರಕಾರ ಉಪಾದಾನವಾದದ್ದು ಸದ್ರೂಪ ಬ್ರಹ್ಮವಾಗಿರುವದು. ಯಾಕಂದರೆ, ಸದ್ರೂಪವಾದ ಬ್ರಹ್ಮವು ಜಗದ್ರೂಪ ಕಾರ್ಯಕ್ಕೆ ಆಧಾರವೂ ಆಗಿದೆ. ಮತ್ತು ಕಾರ್ಯೋತ್ಪತ್ತಿಗೆ ಹೇತುವಾಗಿಯೂ ಉಂಟು. ಆದರಿಂದ ಜಗತ್ತಿಗೆ ಸದ್ರೂಪವು ವಿವರ್ತ ಉಪಾದಾನ ಕಾರಣವೆಂದು ಹೇಳಲ್ಪಡುತ್ತದೆ. ಸದ್ರೂಪ ಬ್ರಹ್ಮಕ್ಕೆ ಭಿನ್ನವಾಗಿ ಯಾವದೋ ಒಂದು ಸದ್ವಸ್ತುವು ಬೇರೆಯಾಗಿರುವದೆಂದು ಹೇಳಿದರೆ; **"ಏಕಮೇವಾದ್ವಿತೀಯಂ ಬ್ರಹ್ಮ"** ಹೀಗೆಂದು ಅದ್ವೈತ ಪ್ರತಿಪಾದನ ಮಾಡುವ ಶ್ರುತಿಗೆ ವಿರೋಧವಾಗುತ್ತದೆ. ಅದರಿಂದ ಬೇರೆ ಸದ್ವಸ್ತು ಯಾವದೂ ಇಲ್ಲ.

**ಶಿಷ್ಯ**:— ಸತ್ಯವಾದ ಬ್ರಹ್ಮವು ಜಗತ್ತಿಗೆ ಉಪಾದಾನ ಕಾರಣವಾದರೆ; ಕಾರ್ಯವಾದ ಜಗತ್ತಾದರೂ ಸತ್ಯವಾಗಬೇಕಾಯಿತಲ್ಲವೇ ?

**ಗುರು**:— ಇದೇನು ನಿಯಮವಲ್ಲ. ಹೇಗಂದರೆ; ಸತ್ಯವಾದ ಮೃತ್ ಮತ್ತು ಸುವರ್ಣ ಇವುಗಳ ಕಾರ್ಯಗಳಾದ ಘಟಕುಂಡಲಾದಿಗಳಿಗೆ ಪರಿಣಾಮ್ಯುಪಾದಾನ ಕಾರಣವಾಗಿದ್ದರೂ, ಕಾರ್ಯಗಳಲ್ಲಿ ಅನುಸ್ಯೂತವಾಗಿದ್ದರೂ, ಕಾರ್ಯಗಳಾದ ಘಟಕುಂಡಲಗಳು ಸತ್ಯವಾಗಿಲ್ಲ. ಕಿಂತು; ಮಿಥ್ಯೆಗಳೇ ಆಗಿರುತ್ತವೆ.

**ಶಿಷ್ಯ**:- ಕಾರಣವಾದ ಮೃತ್ತಿಕೆಯು ಕಾರ್ಯವಾದ ಘಟದಲ್ಲಿ ಅನುಸ್ಯೂತವಿರುವದರಿಂದ **'ಮೃದೋಘಟಃ'** ಮಣ್ಣಿನಕೊಡವೆಂದು ಅನುಭವಕ್ಕೆ ಬರುತ್ತದೆ.

ಸದ್ರೂಪವಾದ ಬ್ರಹ್ಮವೇ ಜಗತ್ತಿಗೆ ಕಾರಣವಾಗಿದ್ದರೆ, ನಮ್ಮ ಅನುಭವಕ್ಕೆ ಅದು ಜಗತ್ತು ಬ್ರಹ್ಮವೆಂಬ ಅನುಭವವಾಗಬೇಕು. ಅದು ಯಾಕೆ ಆಗುವದಿಲ್ಲ?

**ಗುರು:**- ಮೃದೋಘಟವೆಂದು ಅನುಭವಕ್ಕೆ ಬರುವಂತೆ, 'ಸನ್‌ಘಟಃ' 'ಸನ್‌ಪಟ' ಅಂದರೆ ಘಟವುಂಟು .ಪಟವದೆ. ಹೀಗೆಂದು ಅದೆ, ಅದೆ, ಯೆಂಬುದು ಸರ್ವ ಪದಾರ್ಥಗಳಲ್ಲಿಯೂ ಅನುಸ್ಯೂತವಾಗಿರುತ್ತದೆ. ಆದ್ದರಿಂದ ಬ್ರಹ್ಮದ ಸದ್ರೂಪು ಎಲ್ಲಕಡೆಗೂ ತೋರುತ್ತದೆ. ಅದರಿಂದ ಸದ್ರೂಪ ಬ್ರಹ್ಮವೇ ಜಗತ್ತಿಗೆ ವಿವರ್ತೋಪಾದಾನ ಕಾರಣವಾಗಿದೆ.

**ಶಿಷ್ಯ:**- 'ಸನ್‌ಘಟ' ವೆಂದು ತೋರುವಂತೆ, 'ಜಡೋಘಟಃ' ಘಟವು ಜಡವಾಗಿಯೂ ತೋರುವದು. **'ಜಡಂ ಮೋಹಾತ್ಮಾಕಂ ವಿದ್ಧಿ,** ಜಡ ಮತ್ತು ಮೋಹ ಲಕ್ಷಣವಾದದ್ದೇ ಮಾಯಾ ಸ್ವರೂಪವಿರುವದು. ಅಂದಮೇಲೆ, ಘಟ ಪಟಾದಿ ಸಕಲ ಪ್ರಪಂಚವು ಮಾಯಾ ಪರಿಣಾಮವಾಗಿಯೂ ಉಂಟು ಆದ್ದರಿಂದ ಮಾಯಮಯವಾದದ್ದು ಪ್ರಪಂಚ ಅಂದರೆ ಯೋಗ್ಯವಲ್ಲವೇ? **'ಮಾಯಾಂತು ಪ್ರಕೃತಿಂ ವಿದ್ಯಾತ್'** ಮಾಯೆಯು ಜಗತ್ತಿಗೆ ಕಾರಣವಾಗಿರುವದೆಂದು ತಿಳಿಯ ತಕ್ಕದ್ದು. ಹೀಗೆಂಬ ಶ್ರುತಿಯೂ ಉಂಟು. ಆದ್ದರಿಂದ ಜಗತ್ತು ಚೇತನದ ವಿವರ್ತ ವಲ್ಲ. ಮಾಯಾ ಪರಿಣಾಮವೆಂದು ಹೇಳಬಹುದು.

**ಗುರು:**- ಹಾಗಲ್ಲ. ಇದ್ದದ್ದು ಉಪಾದಾನಕಾರಣವಾಗುವದು. ಲೋಕದಲ್ಲಿ ಪ್ರಸಿದ್ಧವದೆ. ಇಲ್ಲದ್ದು ಎಲ್ಲಿಯೂ ಯಾವದಕ್ಕೂ ಉಪಾದಾನವಾಗಲಾರದು. ಇಲ್ಲದ್ದು ಅಂದರೆ ಅಭಾವ, ಇದ್ದದ್ದು ಅಂದರೆ ಭಾವ, ಅಭಾವದಿಂದ ಭಾವೋತ್ಪತ್ತಿ ಯನ್ನು ಅಂಗೀಕರಿಸಿದರೆ; ಅಭಾವವು ಸರ್ವತ್ರವಿರುವದರಿಂದ ಸರ್ವವನ್ನೂ ಪಡೆಯಬೇಕಾಗುವದು. ಇದು ಅಸಂಭವ ಇರಲಿ. ಆದ್ದರಿಂದ ಶ್ರುತಿಯು ಸೃಷ್ಟಿ ಪೂರ್ವದಲ್ಲಿ ಸದ್ರೂಪ ಒಂದೇಉಂಟು. ಬೇರೆ ಯಾವದೂ ಇಲ್ಲೆಂದು ಹೇಳುತ್ತದೆ. ಅಂದರೆ ಎರಡನೇ ವಸ್ತುವಿನ ಅಭಾವವನ್ನು ಹೇಳಿದೆ. ಆದ್ದರಿಂದ ಸದ್ರೂಪ ಬ್ರಹ್ಮವೇ ಜಗತ್ತಿಗೆ ವಿವರ್ತೋಪಾದಾನ ಕಾರಣವಾಗಿರುತ್ತದೆ 'ಭಾವೇಚೋಪ ಲಬ್ಧೇ, ಎಂಬ ಸೂತ್ರವೂ ಉಂಟು. ಇದರ ಆಶ್ರಯದಲ್ಲಿ ಮಾಯಾ ಇರುವದರಿಂದ ಅದೂ ಉಪಾದಾನವಾಗಿರುವದೋ ಏನೋ ಎಂಬಂತೆ ತೋರುವದು ರಾಜನ ಸನ್ನಿಧಿಯಲ್ಲಿದ್ದ ಮಂತ್ರಿಯು ರಾಜನಂತೆ ತೋರುವಹಾಗೆಂದು ತಿಳಿಯತಕ್ಕದ್ದು, ಆದ್ದರಿಂದ ಚಿತ್ತಿನವಿವರ್ತಜಗತ್ತೆಂದು ಹೇಳಬೇಕೇ ಹೊರ್ತು ಮಾಯಾ ಪರಿ ಣಾಮವೆಂದು ಹೇಳಕೂಡದು,

**ಶಿಷ್ಯ:**- ಮಾಯೆಯು ಇದೇನು ಅಭಾವ ರೂಪವಲ್ಲ. ಕಿಂತು, ಭಾವರೂಪ ವೆಂದು ತಾವೇ ಹೇಳಿದ್ದೀರಿ. ಮತ್ತು **'ದೇವಾತ್ಮ ಶಕ್ತಿಂ ಸ್ವಗುಣೈರ್ನಿಗೂಢಾಂ'**

ಎಂಬ ಶ್ರುತಿಯಿಂದಲೂ, 'ಅವಿದ್ಯೆಯುಂಟಾತ್ಮ ಸತ್ಯಯೊಡಗೂಡಿ, ಹೀಗೆ ಕಾರ್ಯಾನುಮೇಯವೆಂದೂ ತಾವೇ ಭಾವರೂಪವನ್ನು ಅಂಗೀಕರಿಸಿ, ಈಗ ಅಭಾವ ವೆಂದು ಹೇಳುವದು ನ್ಯಾಯವಲ್ಲ. ಹೇಳಿದರೆ, ಪೂರ್ವೋತ್ತರ ವಾಕ್ಯಗಳಿಗೆ ವಿರೋಧ ಬರುತ್ತದೆ. ಭಾವರೂಪ ಅನಾದಿಯಾಗಿರುವದೆಂದು ಅಂಗೀಕರಿಸಿದರೆ, ದ್ವೈತಾಪತ್ತಿ ಪ್ರಾಪ್ತವಾಗುವದು. ಇದಕ್ಕೇನು ಗತಿ?

**ಗುರು:-** ನಾವು ಹೇಳಿದ ವಾಕ್ಯದ ತಾತ್ಪರ್ಯ ಜ್ಞಾನವು ಇಲ್ಲದ್ದರಿಂದ, ಹೀಗೆ ಪ್ರಶ್ನೆಯನ್ನು ಮಾಡುವಿ. ಆದರೂ ಚಿಂತೆಯಿಲ್ಲ. ಉತ್ತರವನ್ನು ಹೇಳುತ್ತೇನೆ ಕೇಳು. ಏನಂದರೆ, ಬ್ರಹ್ಮವು ಹೇಗೆ ಪಾರಮಾರ್ಥಿಕ ಸತ್ತೆಯಾಗಿರುವದೋ, ಹಾಗೆ ಮಾಯೆಯು ಪಾರಮಾರ್ಥಿಕ ಸತ್ತೆಯಾಗಿರುವದಿಲ್ಲ. ಆಗಿದ್ದರೆ; ನೀನು ಹೇಳಿ ದಂತೆ ದ್ವೈತಾಪತ್ತಿ ಬರುತ್ತಿತ್ತು. ಸಮಾನಸತ್ತಾವುಳ್ಳದ್ದು ಅಲ್ಲ. ಅದರಿಂದ ದ್ವೈತಾ ಪತ್ತಿಯೂ ಇಲ್ಲ. 'ಏಕಮೇವಾದ್ವಿತೀಯಂ' ಎಂಬ ಶ್ರುತಿಗೆ ವಿರೋಧವೂ ಆಗ ಲಿಲ್ಲ. ಪಾರಮಾರ್ಥಿಕ ಸತ್ತಾ ಈ ದೃಷ್ಟಿಯಿಂದಲೇ ನಾವು ಮಾಯಾ ಇಲ್ಲವೆಂದು ಹೇಳಿದ್ದೇವೆ ಹೊರ್ತು, ವ್ಯಾವಹಾರಿಕ ದೃಷ್ಟಿಯಿಂದ ಇಲ್ಲೆಂದು ಹೇಳಿಲ್ಲ. ಕಿಂತು, ಉಂಟೆಂದು ಹೇಳಿದ್ದೇವೆ. ಇದೇ ಅಭಿಪ್ರಾಯದಿಂದಲೇ ನೀನು ಉದಾಹರಿಸಿದ ಶ್ರುತಿಸ್ಮೃತಿ ವಾಕ್ಯಗಳಿಂದಲೂ ಮಾಯಾ ಉಂಟೆಂದು ಹೇಳುತ್ತವೆ. ಆದ್ದರಿಂದಲೇ ಇದ್ದದ್ದು ಉಪಾದಾನವಾಗುವದು. ಇಲ್ಲದ್ದು ಆಗುವದಿಲ್ಲೆಂದು ಹೇಳಿದ್ದೇವೆ. ಆದ್ದ ರಿಂದ ಯಾವ ದೋಷವೂ ಇಲ್ಲ.

**ಶಿಷ್ಯ:-** ಪಾರಮಾರ್ಥಿಕ ಸತ್ತೆಯಾದ ಸದ್ರೂಪ ಬ್ರಹ್ಮದಿಂದಲೇ ಜಗದುತ್ಪ ತ್ಯಾದಿಗಳನ್ನೂ ಹೇಳಿದ ಮೇಲೆ, ವ್ಯಾವಹಾರಿಕ ಸತ್ತೆಯಾದ ಮಾಯಾಶಕ್ತಿ ಯನ್ನಾದರೂ ಶ್ರುತಿಯು ಯಾಕೆ ಗ್ರಹಿಸಬೇಕು? ಗ್ರಹಿಸುವದರಿಂದ ಪ್ರಯೋ ಜನವೇನು? ಬಿಡೋಣದರಿಂದ ಹಾನಿಯೇನು?

**ಗುರು:-** ಎಲೈ ಶಿಷ್ಯನೆ! ನೀನು ಪ್ರಶ್ನೆಗಳನ್ನು ಮಾಡುವದರಲ್ಲಿ ಚತುರ ನಿರುವಿ. ನಿನ್ನ ಕುಶಲವಾದ ಪ್ರಶ್ನೆಗಳು ವೃತ್ತಿಯನ್ನು ಅಂತರ್ಮುಖ ಮಾಡು ವಂಥವುಗಳಾಗಿರುತ್ತವೆ. ಉತ್ತರವನ್ನು ಹೇಳುತ್ತೇನೆ ಕೇಳು. ಏನಂದರೆ, **ಯಕ್ಷಾನುರೂಪೋಬಲಿಯೆಂಬ ನ್ಯಾಯದಂತೆ** ಗುರು ಮತ್ತು ಶಾಸ್ತ್ರ ಶ್ರುತಿ ಸ್ಮೃತಿಗಳು ಅಧಿಕಾರಕ್ಕನುಗುಣವಾಗಿ ಉಪದೇಶವನ್ನು ಮಾಡುತ್ತವೆ. ಸದ್ವೈದ್ಯನು ರೋಗಕ್ಕನುಗುಣವಾಗಿ ಔಷಧವನ್ನು ಪ್ರಯೋಗಿಸಿದಂತೆ, ಹೇಗಂದರೆ; ಶಿಷ್ಯನಾದ ನೀನು ವ್ಯಾವಹಾರಿಕ ಜಗದೃಷ್ಟಿಯುಳ್ಳವನಾಗಿ, ಈ ಜಗತ್ತು ಏನು? ಎಲ್ಲಿಂದ ಹುಟ್ಟಿತು? ಹೇಗಾಯಿತು? ಎಂದು ಪ್ರಶ್ನೆಯನ್ನು ಮಾಡಿದಿ. ಆದ್ದರಿಂದಲೇ ನಾವು ಪಾರಮಾರ್ಥಿಕ ಬ್ರಹ್ಮದಲ್ಲಿ ಅನಿರ್ವಚನೀಯ ವ್ಯಾವಹಾರಿಕ ಮಾಯೆ

ಯನ್ನು ಸ್ವೀಕರಿಸಿ, ಸದ್ರೂಪ ಚೈತನ್ಯದ ವಿವರ್ತರೂಪ ಜಗತ್ತೆಂದು ನಾಲ್ಕನೇ ಸೂತ್ರದಲ್ಲಿ ತ್ರಿಸತ್ತಾಮೂಲಕ ಉತ್ತರವನ್ನು ಹೇಳಿದೆವು.

ಈಗ ಈ ಆರನೇ ಸೂತ್ರದಲ್ಲಿಯಾದರೂ ನಿನಗೆ ಈ ಜಗತ್ತಿನ ಸಂಬಂಧಿ ಸತ್ಯಜ್ಞಾನವು ಹೋಗುವದಕ್ಕಾಗಿಯೂ, ಮಿಥ್ಯಾಜ್ಞಾನವು ನೆಲೆಗೊಳ್ಳುವದಕ್ಕಾಗಿಯೂ, ಪಾರಮಾರ್ಥಿಕ ಚಿದ್ರೂಪ ಬ್ರಹ್ಮದಲ್ಲಿ ಮಾಯಾ ಮತ್ತು ಪ್ರಪಂಚ ಇದೆಲ್ಲವು ಪ್ರಾತಿಭಾಸಿಕವಾಗಿರುವದೆಂದು ದೃಷ್ಟಿರೇವ ಸೃಷ್ಟಿಯೆಂಬ ವಾದದಿಂದ ದ್ವಿಸತ್ತಾಮೂಲಕ ಉತ್ತರವನ್ನು ಹೇಳುತ್ತೇವೆ.

ಮುಂದೆ ಎಂಟನೇ ಸೂತ್ರದಲ್ಲಿ ಕೇವಲ ಒಂದು ಪಾರಮಾರ್ಥಿಕ ಸತ್ತೆಯುಂಟು. ಬೇರೆ ಏನೂ ಇಲ್ಲ. ಇರುವದೆಂದು ಹೇಳಿದರೆ, ಅದು ನಿನ್ನ ಅವಿವೇಕದಿಂದ ತೋರುವದು. 'ಜಳಹತ್ತಿಬರಲು ಎಂಬ ದೃಷ್ಟಾಂತಗಳಿಂದ ಪ್ರತಿಪಾದಿಸುವರಿದ್ದೇವೆ.

ಅರ್ಥಾತ್ ಶ್ರುತಿಗುರುಗಳು ಮಾಯೆಯನ್ನಾಗಲಿ ಜಗತ್ತನ್ನಾಗಲಿ ಕುರಿತು, ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ, ಸತ್ತಾವುಳ್ಳವುಗಳೆಂದು ಸ್ವೀಕಾರಮಾಡಿ ಹೇಳುವಲ್ಲಿ ತಾತ್ಪರ್ಯವಿಲ್ಲ. ! ಕಿಂತು; ಶಿಷ್ಯನಿಗೆ ಪಾರಮಾರ್ಥಿಕ ಪರಬ್ರಹ್ಮ ಸ್ವರೂಪದ ಜ್ಞಾನವಾಗಬೇಕಾಗಿದೆ. ಏಕಕಾಲಕ್ಕೆ ಏನೂ ಇಲ್ಲ. ಒಂದು ಬ್ರಹ್ಮವೇ ಉಂಟು ಎಂದು ಹೇಳಿದರೆ; ಉಪದೇಶವನ್ನು ಕೇಳಿ ಭಯಗ್ರಸ್ಥನಾಗುತ್ತಾನೆ. ಆದ್ದರಿಂದ ಅವನ ಸಲುವಾಗಿ ಸ್ಥೂಲ ಅರುಂಧತಿ ನ್ಯಾಯದಂತೆ, ಉತ್ತರೋತ್ತರ ಉಪದೇಶವನ್ನು ಮಾಡುತ್ತಾ ಹೋಗಬೇಕಾಗಿದೆ. ಆದ್ದರಿಂದಲೇ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಮಾಯೆಯನ್ನು ಕ್ರಮವಾಗಿ ತ್ರಿಸತ್ತಾ, ದ್ವಿಸತ್ತಾ, ಪ್ರತಿಪಾದಿಸುವಲ್ಲಿ ಸ್ವೀಕಾರಮಾಡಿರುತ್ತಾರೆ. ಉತ್ತಮಾಧಿಕಾರಿಯಿದ್ದರೆ,ಒಂದೇ ಪಾರಮಾರ್ಥಿಕ ಸತ್ತೆಯುಂಟು ಬೇರೆಯೇನೂ ಇಲ್ಲೆಂದು ಹೇಳುತ್ತಾರೆ. ಆದ್ದರಿಂದ ನಿನ್ನ ಅಧಿಕಾರಕ್ಕನುಗುಣವಾಗಿ ಈ ಸೂತ್ರದಲ್ಲಿ ನಾವು ಪ್ರಾತಿಭಾಸಿಕ ಸತ್ತೆಯಾದ ಮಾಯೆಯನ್ನು ಸ್ವೀಕಾರ ಮಾಡಿದ್ದೇವೆ. ಆದ್ದರಿಂದ ಯಾವ ದೋಷವೂ ಇಲ್ಲ. ಅಂದರೆ; ಶಿಷ್ಯನ ಪ್ರಶ್ನದ ಅಪೇಕ್ಷೆಯಿಂದ ಮಾಯೆಯನ್ನು ಸ್ವೀಕಾರ ಮಾಡಿದ್ದರಿಂದ ಆ ಮಾಯಾ ದೋಷ ಮೂಲಕವಾಗಿ ಬ್ರಹ್ಮದ ವಿವರ್ತರೂಪ ಜಗತ್ತು ತೋರುವದು. ಆದರಿಂದ ಶಿಷ್ಯನಿಗೆ ಸಮಾಧಾನವಾಗಿ ಪಾರಮಾರ್ಥಿಕ ಸ್ವರೂಪಜ್ಞಾನವಾಗುವದೇ ಪ್ರಯೋಜನವು. ಭಿನ್ನಸತ್ತಾವುಳ್ಳದ್ದಾಗಿ ಸ್ವೀಕಾರ ಮಾಡಿದ್ದರಿಂದ ದ್ವೈತಾಪತ್ತಿಯೂ ಇಲ್ಲ. ಬಿಡೋಣದರಿಂದ ನಮಗೇನೂ ಯಾವ ಹಾನಿಯೂ ಇಲ್ಲ. ಕಿಂತು; ಬಿಡೋಣದರಿಂದ ಒಂದು ಪಾರಮಾರ್ಥಿಕ ಚೈತನ್ಯ ವ್ಯತಿರಿಕ್ತ ಏನೂ ಯಿಲ್ಲೆಂಬ ಜ್ಞಾನವಾಗುತ್ತದೆ. ಚಿತ್ತನ್ನು ಕಂಡು ಜಗತ್ತೆಂದು ಅವಿವೇಕದಿಂದ

ಹೇಳುವಿ. ಎಂಬದಾಗಿ ಎಂಟನೇ ಸೂತ್ರದಲ್ಲಿ ಹೇಳುವದರಿಂದ ಮಹತ್ಪ್ರಯೋಜನವೇ ಉಂಟಲ್ಲದೆ ಹಾನಿ ಏನೂ ಇಲ್ಲ.

ಆದ್ದರಿಂದ ಬ್ರಹ್ಮವು ಜಗತ್ತಿಗೆ ಕಾರಣವಾಗಿರುತ್ತದೆ. ಅದರಿಂದ ಸತ್ತಾ ಲಕ್ಷಣ ಬ್ರಹ್ಮಸ್ವಭಾವವು. ಆಕಾಶಾದಿ ಸರ್ವ ಪ್ರಪಂಚದಲ್ಲಿ ಅನುವರ್ತಿಸುತ್ತಿರುತ್ತದೆ. **'ತದೈಕ್ಷತ್'** **'ಸೋಽಕಾಮಯತ್'** ಅವನು ಬಹಳ ಪ್ರಜೆಗಳಾಗಬೇಕೆಂದು ಸಂಕಲ್ಪಮಾಡಿದನೆಂಬ ಮೊದಲಾದ ಶ್ರುತಿಗಳುಂಟು.

**ಶಿಷ್ಯ:-** ಸಚ್ಚಿದಾನಂದ ಬ್ರಹ್ಮಕ್ಕೆ ವಿಲಕ್ಷಣವಾಗಿ ಅಸಜ್ಜಡದುಃಖಮಯ ಜಗತ್ತಿರುವದರಿಂದ ಜಗತ್ತಿಗೆ ಬ್ರಹ್ಮವು ಕಾರಣವಾಗಲಾರದು.

**ಗುರು:-** ಇದೇನು ನಿಯಮವಲ್ಲ. ಯಾಕಂದರೆ, ಚೇತನಪುರುಷರಿಂದ ಅಚೇತನಗಳಾದ ಕೇಶನಖಾದಿಗಳುತ್ಪನ್ನಗಳಾಗುತ್ತವೆ. ಹಾಗು ಅಚೇತನವಾದ ಗೋಮಯದಿಂದ ಸಚೇತನ ಚೇಳುಗಳು ಉತ್ಪನ್ನಗಳಾಗುತ್ತವೆ. ಅದರಿಂದ ಜಗತ್ತಿಗೆ ಬ್ರಹ್ಮವೇ ಕಾರಣವು.

**ಶಿಷ್ಯ:-** ಪುರುಷನ ಅಚೇತನವಾದ ಶರೀರವೇ ಅಚೇತನ ಕೇಶನಖಾದಿಗಳಿಗೆ ಕಾರಣವಾಗಿರುತ್ತದೆ, ಚೇಳುಗಳ ಅಚೇತನ ಶರೀರಗಳಿಗೆ ಅಚೇತನವಾದ ಗೋಮಯವೇ ಕಾರಣವಾಗಿದೆ. ಆದ್ದರಿಂದ ವಿಲಕ್ಷಣವಿಲ್ಲ, ಸಲಕ್ಷಣಗಳಾಗಿವೆ

**ಗುರು:-** ಉಕ್ತಶರೀರಗಳಲ್ಲಿ ಚೇತನವನ್ನು ಅಂಗೀಕರಿಸುವಿಯೋ? ಅಥವಾ ಇಲ್ಲೋ? ಇಲ್ಲೆಂದು ಹೇಳಲಿಕ್ಕೆ ಆಗುವದಿಲ್ಲ. ಕಿಂತು; ಚೇಳುಗಳ ಶರೀರಗಳಲ್ಲಿ ಚೇತನವನ್ನು ಅಂಗೀಕರಿಸಲಿಕ್ಕೇ ಬೇಕು. ಹಾಗು ಚೇತನಪುರುಷರಿಗಿಂತಲೂ ಕೇಶನಖಾದಿಗಳು ಜಡಗಳಾಗಿ ಸ್ವರೂಪತಃ ಭಿನ್ನವಾಗಿರುವದು ಪ್ರತ್ಯಕ್ಷವದೆ. ಆದ್ದರಿಂದ ಕಿಂಚಿತ್ ವೈಲಕ್ಷಣ್ಯವನ್ನು ಸ್ವೀಕಾರ ಮಾಡಲಿಕ್ಕೆ ಬೇಕು. ಮತ್ತು ದೃಷ್ಟಾಂತವು ಸರ್ವಾಂಶವಾಗಿರಬೇಕೆಂಬ ನಿಯಮವಿಲ್ಲ. ಅತ್ಯಂತ ಸಾರೂಪ್ಯಗಳಾಗಿದ್ದರೆ ಕಾರ್ಯಕಾರಣ ಭಾವವೇ ಘಟಿಸಲಿಕ್ಕಿಲ್ಲ. ಆದ್ದರಿಂದ ಬ್ರಹ್ಮ ಮತ್ತು ಜಗತ್ತು ವೈಲಕ್ಷಣ್ಯವಿರುವದರಿಂದಲೇ ಕಾರ್ಯಕಾರಣ ಭಾವವು ಸಂಭವಿಸುತ್ತದೆ. ಈ ಮಾತನ್ನು ನಾವೇ ಹೇಳುವದಿಲ್ಲ. ಶ್ರುತಿಯೇ ಹೇಳುತ್ತದೆ. ಒಡಂಬಡದಿದ್ದರೆ ಶ್ರುತಿಗೆ ವಿರೋಧವಾಗುತ್ತದೆ. ಬ್ರಹ್ಮಕ್ಕೆ ರೂಪಾದಿಗಳಿಲ್ಲದ್ದರಿಂದ ಪ್ರತ್ಯಕ್ಷವಾಗಿ ತಿಳಿಯಲಿಕ್ಕೆ ಬರುವದಿಲ್ಲ. ಲಿಂಗವಿಲ್ಲದ್ದರಿಂದ ಅನುಮಾನಕ್ಕೆ ವಿಷಯವಲ್ಲ. **'ನೈಷಾ ತರ್ಕೇಣ ಮತಿರಾಪನೇಯಾ'** ತರ್ಕಕ್ಕೆ ಅದು ವಿಷಯವಾಗುವದಲ್ಲ. ಆದ್ದರಿಂದ ಶ್ರುತಿಹೇಳಿದಂತೆ ತಿಳಿಯುವದು ಉತ್ತಮವು. **'ದೃಶ್ಯತೇತು'** ಎಂಬ ಬ್ರಹ್ಮಸೂತ್ರವನ್ನು ಅವಲೋಕನಮಾಡಿರಿ.

ಬಳಿಕ, ಕಾರ್ಯರೂಪವಾದ ಜಗತ್ತು ಸ್ಥೂಲ, ಸಾವಯವ, ಅಚೇತನ, ಪರಿಚ್ಛಿನ್ನ, ಅಶುದ್ಧಾದಿ ಧರ್ಮವುಳ್ಳದ್ದು. ಪ್ರಳಯಕಾಲದಲ್ಲಿ ಬ್ರಹ್ಮದೊಡನೆ ಏಕೀಭೂತವಾಗಲು, ಆ ಸ್ಥೂಲಾದಿ ಧರ್ಮಗಳಿಂದ ಬ್ರಹ್ಮವು ದೂಷಿತವಾಗುವದಿಲ್ಲವೆ? ಎಂದು ಶಿಷ್ಯನು ಪ್ರಶ್ನೆಯನ್ನು ಮಾಡುತ್ತಾನೆ.

**ಆದೊಡೀ ಸಕಲದೊಳಗಾದ ವಿಕೃತಿಗಳಿಂದ।**
**ನಾದಿ ಚಿತ್ತಿಂಗೆ ಬಾಧೆಯಿಲ್ಲೆಂದು ನೀ।**
**ನಾದರಿಸಿ ಕೇಳಲೊರೆಯುವೆನು ॥೪॥**

**ಟೀಕಾ:-** ಆದೊಡೆ=ಹೀಗೆ ಆದಾಗ್ಯಾದರೂ, ಈ ಸಕಲದೊಳಗಾದ=ಈ ಪ್ರಪಂಚದಲ್ಲಿ ಆಗುವ, ವಿಕೃತಿಗಳಿಂದ ವಿಕಾರಗಳಿಂದ, ಅನಾದಿ ಚಿತ್ತಿಂಗೆ= ಉತ್ಪತ್ತಿರಹಿತವಾದ ಬ್ರಹ್ಮಕ್ಕೆ, ಬಾಧೆಯಿಲ್ಲೆಂದು=ಹಾನಿಯಿಲ್ಲವೆಂಬುವದನ್ನು, ನೀನು ಆದರಿಸಿ ಕೇಳಲ್=ನೀನು ಪ್ರೀತಿಯಿಂದ ಕೇಳುವ ಹಾಗೆ, ಒರೆಯುವೆನು= ತಿಳಿಸುತ್ತೇನೆ.

**ಹಾವಿನುದಯಾಸ್ತವಾ ಲೇವಣಕ್ಕಿಲ್ಲವಾ।**
**ಲೇವಣದೊಳಾದ ತೆರನಂತೆ ಲೋಕಂ ಚಿ।**
**ದಾವಲಂಬನದೊಳಿಹುದೈಸೆ ॥೫॥**

**ಟೀಕಾ:-** ಹಾವಿನ=ಸರ್ಪದ, ಉದಯಾಸ್ತವು=ಉತ್ಪತ್ತಿ ನಾಶಗಳು, ಆ ಲೇವಣಕ್ಕಿಲ್ಲವು=ಆ ಹಗ್ಗಕ್ಕೆ ಇರುವದಿಲ್ಲ, ಆ ಲೇವಣದೊಳು=ಆ ಹಗ್ಗದಲ್ಲಿ, ಆದ ತೆರನಂತೆ ಆದ ರೀತಿಯ ಹಾಗೆ, ಲೋಕಂ=ಜಗತ್ತು, ಚಿದಾವಲಂಬನದೊಳು=ಚಿದ್ರೂಪವಾದ ಬ್ರಹ್ಮದಾಶ್ರಯದಲ್ಲಿಯೇ, ಐಸೆ=ಹಾಗೆ, ಇಹುದು= ಇರುವದು.

**ತಾತ್ಪರ್ಯ:-** ಕಿಂಚಿತ್ತಾದರೂ ದೂಷಿತವಿಲ್ಲ. ಕಿಂತು ಭೂಷಣವೇ ಆಗಿರುತ್ತದೆ. ಹೇಗಂದರೆ; ಮಣ್ಣಿನ ಕಾರ್ಯಗಳಾದ ಘಟಾದಿಗಳು ಲಯವಾಗಿ ಮಣ್ಣು ರೂಪಾಗಿರಲಿಕ್ಕೆ, ತಮ್ಮ ಧರ್ಮಗಳಿಂದ ಮಣ್ಣನ್ನು ಮುಚ್ಚಿರುವವೋ? ಇಲ್ಲ. ಹಾಗು ಭಂಗಾರದ ಕಾರ್ಯಗಳಾದ ಆಭರಣಗಳು ಕರಗಿ ಘಟ್ಟಿಯಾದ ಮೇಲೆ, ತಮ್ಮ ಧರ್ಮಗಳಿಂದ ಆ ಭಂಗಾರವನ್ನು ದೂಷಿತಮಾಡಿರುವವೆ? ಇಲ್ಲ. ಇಷ್ಟೇ ಅಲ್ಲ. **'ಆತ್ಮೈವೇದಂ ಸರ್ವಂ' 'ಸರ್ವಂಖಲ್ವಿದಂಬ್ರಹ್ಮ'** ಎಂಬ ಶ್ರುತಿಗಳು ಮೂರು ಕಾಲಗಳಲ್ಲಿಯೂ ಕಾರ್ಯವು ಕಾರಣದೊಡನೆ ಬಾಧಾಸಾಮಾನಾಧಿಕರಣದಿಂದ ಅನನ್ಯವೆಂದು ಹೇಳುತ್ತವೆ. ಅಂದರೆ, ಅವಿದ್ಯಾ ಅಧ್ಯಾರೋಪಿತಗಳಾದ ಜಗತ್ತಿನ ಧರ್ಮಗಳು ಕಾರಣವನ್ನು ದೂಷಿತ ಮಾಡಲಾರವು. ಆದ್ದರಿಂದ ಜಗತ್ತಿನ

ಸಂಬಂಧಿ ವಿಕಾರಗಳಿಂದ ಅನಾದಿಯಾದ ಚಿದ್ರೂಪ ಬ್ರಹ್ಮಕ್ಕೆ ಯಾವ ಹಾನಿಯೂ ಇಲ್ಲ. ಹೇಗಂದರೆ, (ಮಾಯಾವೀ ಪುರುಷನು) ಇಂದ್ರಜಾಲ ಆಟಗಾರನು ಮಾಯಾವಿದ್ಯೆಯಿಂದ ವಿಚಿತ್ರವಾದ ಆಟವನ್ನು ಮಾಡಿ ತೋರಿಸಿದಾಗ್ಯಾದರೂ, ಯಾವ ಕಾಲದಲ್ಲಿಯೂ ಆ ಪದಾರ್ಥಗಳಿಂದ ದೂಷಿತನಾಗಿರುವದಿಲ್ಲ. ಯಾಕಂದರೆ, ಅವು ಮಿಥ್ಯೆಗಳಾಗುವದರಿಂದ; ಅದರಂತೆ, ಪರಮಾತ್ಮನಾದರೂ ತನ್ನ ಮಾಯೆಯಿಂದ ಅನೇಕ ವಿಧ ವಿಚಿತ್ರ ಸೃಷ್ಟಿಯನ್ನು ಮಾಡಿದರೂ, ಅದರಿಂದ ದೂಷಿತನಾಗುವದಿಲ್ಲ. ಅಥವಾ ಸ್ವಪ್ನ ಸಾಕ್ಷಿಯು ಕಲ್ಪಿತ ಸ್ವಪ್ನಪ್ರಪಂಚದಿಂದ ಹೇಗೆ ಲೋಪಾಯಮಾನನಾಗುವದಿಲ್ಲವೋ, ಅದರಂತೆ ತಿಳಿ. ಅಥವಾ ಅವಸ್ಥಾತ್ರಯಗಳ ಸಾಕ್ಷಿಯು, ಅವಸ್ಥಾತ್ರಯಗಳಲ್ಲಿರುವ ವ್ಯಭಿಚಾರಿಗಳಿಂದ ದೂಷಿತವಾಗದೆ, ಹೇಗೆ ಅವ್ಯಭಿಚಾರಿಯಾಗಿರುವನೋ; ರಜ್ಜುವಿನಲ್ಲಿ ಕಲ್ಪಿತವಾದ ಸರ್ಪವಿಕಾರದಿಂದ ರಜ್ಜು ದೂಷಿತವಾಗದೆ, ಹೇಗೆ ನಿರ್ವಿಕಾರದಿಂದಿರುವದೋ; ಅದರಂತೆ, ಬ್ರಹ್ಮವು ತನ್ನಲ್ಲಿ ಮಾಯಾ ಕಲ್ಪಿತಕಾರ್ಯರೂಪ ಪ್ರಪಂಚ ಧರ್ಮಗಳಿಂದ ವಿಕಾರವಾಗುವದಿಲ್ಲ. ಕಿಂತು, ಮೂರು ಕಾಲಗಳಲ್ಲಿ ನಿರ್ದೋಷ ನಿರ್ವಿಕಾರವಾಗಿರುತ್ತದೆ. ಈ ವಿಷಯವನ್ನು **'ನತು ದೃಷ್ಟಾಂತ ಭಾವಾತ್'** ಎಂಬ ಬ್ರಹ್ಮಸೂತ್ರದಲ್ಲಿ ಅವಲೋಕನ ಮಾಡಬಹುದು.

ಈ ಅರ್ಥವು ಕೇವಲ ತರ್ಕದಿಂದ ನಿಶ್ಚಯ ಮಾಡತಕ್ಕದ್ದಲ್ಲ. ಯಾಕಂದರೆ ಒಬ್ಬ ತಾರ್ಕಿನು ಇದೇ ಯಥಾರ್ಥವೆಂದು ಹೇಳಿದರೆ, ಮತ್ತೊಬ್ಬನು ಅಲ್ಲೆಂದು ಖಂಡಿಸುತ್ತಾನೆ. ಅತೀತ ವರ್ತಮಾನ ಭಾವೀ ತಾರ್ಕಿಕರು ಒಂದೇ ಕಾಲಕ್ಕೆ ಒಂದೇ ದೇಶದಲ್ಲಿ ಕೂಡಿ, ಇದೇ ಅರ್ಥವೇ ನಿಜವೆಂದು ಹೇಳಲಿಕ್ಕೆ ಶಕ್ಯವಿಲ್ಲ. ಆದ್ದರಿಂದ ವೇದದಲ್ಲಿ ಹೇಳಿದ ಜ್ಞಾನವು ನಿಜವಿರುತ್ತದೆ. ಇದನ್ನು ಸರ್ವ ತಾರ್ಕಿಕರು ಕೂಡಿ ನಿರಾಕರಿಸಲಿಕ್ಕೆ ಶಕ್ಯರಾಗರು. ಆದ್ದರಿಂದ ಉಪನಿಷತ್ತಿನಲ್ಲಿ ಹೇಳಿದ ಜ್ಞಾನವೇ ನಿಜವಿರುತ್ತದೆ. ಅದು ಹೇಳಿದ ಪ್ರಕಾರ ಜಗತ್ತಿಗೆ ಬ್ರಹ್ಮವೇ ಕಾರಣವಾಗಿರುವದೆಂದು ನಿಶ್ಚಯಮಾಡತಕ್ಕದ್ದು.

**ಶಿಷ್ಯ:**- ಮೃತ್ಸುವರ್ಣಾದಿಗಳಂತೆ, ಕಾರಣವಾದ ಬ್ರಹ್ಮಕ್ಕೂ ಕಾರ್ಯವಾದ ಜಗತ್ತಿಗೂ ಅಭೇದವನ್ನು ಹೇಳಿದರೆ, ಭೋಕ್ತೃಭೋಗ್ಯ ಲಕ್ಷಣ ಭೇದ ವ್ಯವಹಾರವು ಇರಬಾರದಾಯಿತು. ಇರುತ್ತದೆ, ಆದ್ದರಿಂದ ಕಾರಣ ಬ್ರಹ್ಮ, ಕಾರ್ಯ ಜಗತ್ತೆಂದು ಹೇಳುವದೇ ಅಯೋಗ್ಯವಲ್ಲವೆ?

**ಗುರು:**- ಸಮುದ್ರವು ಜಲರೂಪದಿಂದ ಅಭೇದವಿದ್ದರೂ ಫೇನ ತರಂಗ, ಬುದ್ಬುದಾದಿಗಳ ಅಗಲುವಿಕೆ ಕೂಡುವಿಕೆ, ಭೇದ ವ್ಯವಹಾರವು ಸಂಭವಿಸುತ್ತದೆ. ಹೀಗೆ ತರಂಗಾದಿಗಳು ತಮ್ಮತಮ್ಮೊಳಗೆ ಭೇದವಾಗಿ ತೋರಿದರೂ, ಸಮುದ್ರ

ಕ್ಕಿಂತಲೂ ಭಿನ್ನವಲ್ಲ. ಇದರಂತೆ ಬ್ರಹ್ಮದಲ್ಲಿ ಭೋಕ್ತೃಭೋಗ್ಯಾದಿ ಭೇದ ವ್ಯವಹಾರ ತೋರಿದರೂ ಬ್ರಹ್ಮಕ್ಕೆ ಅನ್ಯವಲ್ಲ. 'ಭೋಕ್ತ್ರಾಪತ್ತೇರವಿಭಾಗ ಶ್ಚೇತ್ಸ್ಯಾಲ್ಲೋಕವತ್' ಎಂಬ ಸೂತ್ರವನ್ನು ನೋಡಬಹುದು. ಮತ್ತು ಈ ವ್ಯಾವಹಾರಿಕ ಭೇದವು ಪಾರಮಾರ್ಥಿಕ ಬ್ರಹ್ಮದಲ್ಲಿ ಇಲ್ಲ. ಅನನ್ಯವಾಗಿದೆ. ಅಂದರೆ, ಬ್ರಹ್ಮವನ್ನು ಬಿಟ್ಟು ನಾಮರೂಪಾತ್ಮಕ ಜಗತ್ತು ಅಭಾವವಾಗಿದೆಯೆಂಬ ಭಾವವು. ಯಾಕಂದರೆ, "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೆತ್ಯೇವ ಸತ್ಯಂ" ಎಂಬ ಶ್ರುತಿಯೂ "ತದನನ್ಯತ್ವಮಾರಂಭಣ ಶಬ್ದಾದಿಭ್ಯಃ" ಎಂಬ ಸೂತ್ರವೂ ನಾಮರೂಪಕ್ಕೆ ಮಿಥ್ಯಾತ್ವವನ್ನು ಬ್ರಹ್ಮಕ್ಕೆ ಸತ್ಯತ್ವವನ್ನು ಹೇಳುವಂಥವುಗಳಾಗಿವೆ. ಮತ್ತು ರಜ್ಜುವಿನಲ್ಲಿ ಸರ್ಪಾಧ್ಯಾಸ ವಾಗಿದೆ. ಆದರೂ ಆ ಸರ್ಪದಿಂದ ಅಧಿಷ್ಠಾನವಾದ ರಜ್ಜುವಿಗೆ ಸರ್ಪದ ಉತ್ಪತ್ತಿ ನಾಶಾದಿಗಳು ಹೇಗೆ ಇಲ್ಲವೋ, ಹಾಗೆ ಬ್ರಹ್ಮಕ್ಕೆ ಯಾವ ವಿಕಾರಗಳೂ ಇಲ್ಲ.

> ಎಂದೊಡೆರಡಿಲ್ಲ ಚಿತ್ತೊಂದೆಯದು ನಿರ್ವಿಕೃತಿ ।
> ಯಿಂದಿರ್ಪುದಾಗಿ ಸವಿಕಲ್ಪಕಜ್ಞಾನ ।
> ವಂದಾದುದಾರ್ಗೆನಲು ಕೇಳು ॥೬॥

**ಟೀಕಾ:–** ಎಂದೊಡೆ=ಹೀಗೆ ಹೇಳಿದರೆ, ಎರಡು ಇಲ್ಲ=ಎರಡು ವಸ್ತುಗಳು ಇರುವದಿಲ್ಲ, ಚಿತ್ತೊಂದೆ=ಒಂದೇ ಚಿದ್ರೂಪು ಇರುವದು, ಅದು=ಆ ಚಿದ್ರೂಪು, ನಿರ್ವಿಕೃತಿಯಿಂದ=ನಿರ್ವಿಕಾರದಿಂದ, ಇರ್ಪುದಾಗಿ=ಇರುವದರಿಂದ, ಅಂದು=ಆ ಕಾಲದಲ್ಲಿ, ಸವಿಕಲ್ಪಕ ಜ್ಞಾನವು=ಜಗತ್ತಿನ ಸಂಬಂಧವಾದ ಜ್ಞಾನವು, ಆರ್ಗೆ= ಯಾರಿಗೆ, ಆದುದು=ಆಯಿತು, ಎನಲು=ಹೀಗೆ ಶಿಷ್ಯನು ಕೇಳಲು, ಕೇಳು=ಏಕಾಗ್ರ ಚಿತ್ತದಿಂದಾಲಿಸು.

ಶಿಷ್ಯ:- ಹಗ್ಗದಲ್ಲಿ ಹಾವಿನ ಉತ್ಪತ್ತಿ ನಾಶಗಳಾದರೂ ಹಗ್ಗಕ್ಕೆ ಬಾಧೆಯಿಲ್ಲ ದಂತೆ, ಬ್ರಹ್ಮದಲ್ಲಿ ಜಗದುತ್ಪತ್ತಿ ನಾಶವಾದರೂ ಬ್ರಹ್ಮಕ್ಕೆ ನಾಶವಿಲ್ಲೆಂದು ಹೇಳಿದಿರಿ. ಆದರೆ ದೃಷ್ಟಾಂತದಲ್ಲಿ ಹಗ್ಗದಲ್ಲಿ ಹಾವು ಉಂಟೆಂಬ ಸವಿಕಲ್ಪಕ ಜ್ಞಾನವುಳ್ಳ ದ್ರಷ್ಟಾಪುರುಷನು ಹಗ್ಗಕ್ಕೆ ಭಿನ್ನನಾಗಿದ್ದಾನೆ. ದ್ರಷ್ಟಾಂತದಲ್ಲಿ ಎರಡು ಚಿತ್ತಗಳನ್ನು ಅಂಗೀಕರಿಸಿಲ್ಲ. ಒಂದೇ ಚಿತ್ತಿರುವದೆಂದು. ಅದು ನಿರ್ವಿಕಾರ ವಾಗಿರುತ್ತದೆಂದೂ ಹೇಳಿರುವಿರಿ. ಅಂಥಾ ನಿರ್ವಿಕಾರ ಚಿದ್ರೂಪ ಬ್ರಹ್ಮದಲ್ಲಿ ಜಗತ್ತು ತೋರುವದು. ಅಂದಮೇಲೆ ಆ ಜಗತ್ತಿನ ಸವಿಕಲ್ಪಜ್ಞಾನವು ಆಗ್ಯೆ ಯಾರಿಗೆ ಆಯಿತು? ಭ್ರಮರೂಪ ಜಗತ್ತಿನ ಸವಿಕಲ್ಪಜ್ಞಾನ ಬ್ರಹ್ಮಕ್ಕೆ ಆಗಿರುವದು. ಅಂದರೆ, ಬ್ರಹ್ಮವು ನಿರ್ವಿಕಾರವಲ್ಲ. ಸವಿಕಾರಿಯೆನಬೇಕಾಗುವದು. ಎರಡನೇ ಚಿತ್ತನ್ನು ಅಂಗೀಕರಿಸಿದರೆ, ಅದ್ವೈತಕ್ಕೆ ಹಾನಿ ಬರುವದು. ದ್ರಷ್ಟನಿಗೆ ಸರ್ಪ ಜ್ಞಾನವಾದಂತೆ ಜಗತ್ತಿನ ಜ್ಞಾನವು ಯಾರಿಗೆ ಆಯಿತು?

ಯತಿಗೆ ಕನಿಸಿನೊಳೋರ್ಮೆ ಸತಿಪತಿಗಳೆನಿಸಿ ತ।
ಪ್ರತಿಕಾಂಕ್ಷೆದೋರಲವನಿಗಾ ಮೋಹದುಪ।
ಹತಿಯಿಲ್ಲದಂತೆ ನಿಜದಲ್ಲಿ ||೭||

ಟೀಕಾ:- ಯತಿಗೆ=ಯೋಗಿಗೆ, ಕನಸಿನೊಳು=ಸ್ವಪ್ನದಲ್ಲಿ, ಓರ್ಮೆ=ಒಂದು ಕಾಲಕ್ಕೆ, ಸತಿ ಪತಿಗಳೆನಿಸಿ=ಗಂಡಹೆಂಡರೆಂದು ಹೇಳಿಸಿಕೊಂಡು, ತದ್ರತಿ=ಒಬ್ಬರಲ್ಲಿ ಒಬ್ಬರಪ್ರೇಮದ, ಕಾಂಕ್ಷೆದೋರಲ್=ಇಚ್ಛೆಯುತೋರಿದಾಗ್ಯಾದರೂ, ಅವನಿಗೆ= ಯತಿಗೆ, ಆ ಮೋಹದುಪಹತಿಯು= ಆ ಮೋಹದ ಹೊಡತವು, ನಿಜದಲ್ಲಿ=ಜಾಗ್ರದವಸ್ಥೆಯಲ್ಲಿ, ಇಲ್ಲದಂತೆ=ಇಲ್ಲದಹಾಗೆ

ಅರಿಯುದರುಹಿಸಿಕೊಂಬುದರಿವ ಕರಣಂ ಮಿಥ್ಯೆ।
ಯರಿವಿಂತಿವೇಕ ಕಾಲದೋಳ್ತೋರೆ ನಿಜ।
ದರಿವಿಗಾಭ್ರಾಂತಿ ಯಣುವಿಲ್ಲ ||೮||

**ಟೀಕಾ:-** ಅರಿಯುವದು= ಜ್ಞಾತೃ, ಅರುಹಿಸಿಕೊಂಬುದು= ಜ್ಞೇಯ, ಅರಿವಕರಣಂ=ಜ್ಞಾನ, ಮಿಥ್ಯೆ=ಸುಳ್ಳಾಗಿರುವವು, ಇಂತು=ಈಪ್ರಕಾರ, ಇವು= ಈ ಮೂರು, ಏಕಕಾಲದೊಳು=ಒಂದೇಸಮಯದಲ್ಲಿ, ತೋರೆ=ಪ್ರತೀತಿಯಾದರೂ, ಆ ಭ್ರಾಂತಿಯು=ಆ ಮೋಹವು, ನಿಜದರಿವಿಗೆ=ಪರಬ್ರಹ್ಮಸ್ವರೂಪಕ್ಕೆ, ಅಣುವಿಲ್ಲ= ಸ್ವಲ್ಪಾದರೂ ಇರುವದಿಲ್ಲ, ಅರಿ=ತಿಳಿ;

ನೀನರಿವುದು ಜ್ಞಾತೃ ಜ್ಞಾನ ವಿಜ್ಞೇಯ ಸುವಿ।
ಹೀನತ್ತದೇತ ದೋಮಿತಿಯೆನುತೆ ವೇದ।
ತಾನೊರೆವುತಿರ್ದ ಕಥದಿಂದ ||೯||

**ಟೀಕಾ:-** ಜ್ಞಾತೃ=ಅಂತಃಕರಣ ವಿಶಿಷ್ಟಚೇತನ, ಜ್ಞಾನ=ವೃತ್ತ್ಯವಚ್ಛಿನ್ನ ಚೇತನ, ವಿಜ್ಞೇಯ=ವಿಷಯಾವಚ್ಛಿನ್ನಚೇತನ, ಸುವಿಹೀನಃ=ಇವುಗಳಿಂದ ರಹಿತ ವಾದದ್ದು, ತತ್=ಅದು, ಏತತ್=ಇದು' ಓಮಿತಿ=ಓಂಕಾರರೂಪ ಪರಬ್ರಹ್ಮವೆಂದು ಎನುತೆ=ಹೀಗನ್ನುತ್ತಾ, ವೇದ=ಶ್ರುತಿಯು, ತಾನೊರೆವುತಿರ್ದಕಥದಿಂದ=ತಾನೇ ಪ್ರತಿಪಾದಿಸುತ್ತಿರುವದರಿಂದ, ನೀನರಿವುದು=ನೀನು ತಿಳಿಯುವದು.

ಗುರು:- ಹಾಗಾದರೆ, ನೀನು ರಜ್ಜುಸರ್ಪ ದೃಷ್ಟಾಂತವನ್ನು ಬಿಡು. ಸ್ವಪ್ನ ದೃಷ್ಟಾಂತ ಮೂಲಕ ತಿಳಿ. ಹೇಗಂದರೆ; ಸ್ವಪ್ನಕ್ಕೆ ಅಧಿಷ್ಠಾನ ಹಾಗು ದ್ರಷ್ಟನು ಒಬ್ಬನೇ ಆಗಿರುತ್ತಾನೆ. ಅಧಿಷ್ಠಾನವೊಂದು ದ್ರಷ್ಟಾ ಒಂದು ಬೇರೆಯಿಲ್ಲ. ವ್ಯಾವಹಾರಿಕ ಯತೀಶ್ವರನಿಗೆ ನಿದ್ರಾದೋಷಮೂಲಕ ಸ್ವಪ್ನದಲ್ಲಿ ಪ್ರಾತಿಭಾಸಿಕ

ಸತಿ, ಪತಿ, ರತಿ, ಈ ಮೂರು ಏಕಕಾಲಕ್ಕೆ ತೋರಿದರೂ, ಜಾಗ್ರತ್ಕಾಲದಲ್ಲಿ ಎದ್ದು ನೋಡಲು ಸತಿ, ಪತಿ, ರತಿಗಳು ಒಂದೂ ತೋರಲಿಲ್ಲ, ಮತ್ತು ವ್ಯಾವಹಾರಿಕ ಯತೀಶ್ವರತ್ವಕ್ಕೆ, ಪ್ರಾತಿಭಾಸಿಕ ಗಾರ್ಹಸ್ಥ್ಯಧರ್ಮದಿಂದ ಹಾನಿಯೂ ಬರಲಿಲ್ಲ. ಯಾವಾತನಲ್ಲಿ ಗಾರ್ಹಸ್ಥ್ಯ ಸ್ವಪ್ನವು ತೋರಿದೆಯೋ,ಅವನೇ ದ್ರಷ್ಟನು ಆಗಿರುತ್ತಾನೆ. ಹೇಗೋ ಹಾಗೇ ನಿಜವಾದ ಚಿದ್ರೂಪ ಬ್ರಹ್ಮದಲ್ಲಿ, ಮಾಯಾದೋಷ ಮೂಲಕ ಏಕಕಾಲಕ್ಕೆ ಜ್ಞಾತೃ, ಜ್ಞಾನ, ಜ್ಞೇಯಗಳು ತೋರಿದರೂ, ಇವುಗಳಿಗೆ ದ್ರಷ್ಟನು ಆಗಿದ್ದರೂ, ಈ ತ್ರಿಪುಟಿಯು ಸವಿಕಲ್ಪ ಜ್ಞಾನವುಳ್ಳವನಾದರೂ ಆ ಬ್ರಹ್ಮಕ್ಕೆ ಯಾವ ಭ್ರಾಂತಿಯೂ ಇಲ್ಲ. ಅಂದರೆ, ಪಾರಮಾರ್ಥಿಕ ಬ್ರಹ್ಮದಲ್ಲಿ ಪ್ರಾತಿಭಾಸಿಕ ತ್ರಿಪುಟಿಯು ಏಕಕಾಲಕ್ಕೆ ತೋರಿದರೂ ಅಡಗಿದರೂ,ಏತತ್ಸಂಬಂಧ ಜ್ಞಾನವಾದರೂ, ಚಿದ್ರೂಪ ಬ್ರಹ್ಮಕ್ಕೆ ಯಾವ ಭ್ರಾಂತಿ ಮತ್ತು ವಿಕಾರಗಳು ಆಗುವದಿಲ್ಲೆಂಬ ಭಾವವು.

ಶಿಷ್ಯಃ- ತ್ರಿಪುಟಿ ಪ್ರಪಂಚವು ಪ್ರಾತಿಭಾಸಿಕವಲ್ಲ. ಅದರಿಂದ ಮಿಥ್ಯೆಯಲ್ಲ. ಕಿಂತು. ಸತ್ಯಗಳಾಗಿರುತ್ತವೆ. ಅದರಿಂದ ಅಧಿಷ್ಠಾನ ಮತ್ತು ದ್ರಷ್ಟಾ ಆದ ಬ್ರಹ್ಮಕ್ಕೆ ವಿಕಾರವು ಅವಶ್ಯ ಬರಲಿಕ್ಕೇ ಬೇಕು.

**ಗುರು**:- ಹೇ ಶಿಷ್ಯನೇ ! ಕೇಳು ಜ್ಞಾತೃ, ಜ್ಞಾನ, ಜ್ಞೇಯಾತ್ಮಕ ಪ್ರಪಂಚವು ಸತ್ಯವಾಗಿದ್ದರೆ,ಶೃತಿಯು '**ಪುಟಿಹೀನಃ**' ಎಂದು ನಿರಾಕರಣೆಯನ್ನು ಮಾಡುತ್ತಿದ್ದಿಲ್ಲ. ಓಂಕಾರರೂಪ ಪೂರ್ಣ ಪರಬ್ರಹ್ಮದಲ್ಲಿ ತ್ರಿಪುಟಿಯು ಇಲ್ಲೆಂದು ಶ್ರುತಿಯು ನೇತಿಗೆಳೆಯುವದರಿಂದ; ಅರ್ಥಾಪತ್ತಿ ಪ್ರಮಾಣ ಮೂಲಕ ತ್ರಿಪುಟಿ ಪ್ರಪಂಚವು ಮಿಥ್ಯೆಯಾಗಿರಲಿಕ್ಕೇಬೇಕೆಂದು ನಿಶ್ಚಯಿಸಲ್ಪಡುತ್ತದೆ. ಆದ್ದರಿಂದ ಸತ್ಯವೆಂದು ಹೇಳಲಾಗದು.

ಶಿಷ್ಯ:- ಸ್ವಾಮಿನ್ ! ತಾವು ಈ ತ್ರಿಪುಟಿ ಪ್ರಪಂಚವು (ಮಿಥ್ಯೆ) ಪುಸಿಯೆಂದು ಹೇಳಿದರೆ, ನಮ್ಮ ಅನುಭವದಿಂದ ವಿಚಾರಮಾಡಿ ನೋಡಲು, ಅನೇಕ ದಿವಸಗಳಿಂದ ಇದ್ದದ್ದಾಗಿ ಸತ್ಯವಾಗಿಯೇ ತೋರುತ್ತದೆ. ಹೀಗೆ ಸರ್ವಾನುಭವದಿಂದ ಅನಾದಿ ಸಿದ್ಧವಾದ ಪ್ರಪಂಚಕ್ಕೆ, ಶ್ರುತಿ ಪ್ರಮಾಣದಿಂದ ಪ್ರತೀತಿ ಮಾತ್ರ ಸುಳ್ಳೆಂದು ಹೇಳುವದು ಯೋಗ್ಯವೇ ?

**ಎಂದೊಡೀ ಪುಸಿಯ ರೂಪಿಂದಾದ ಜಗಮಿಂತು ।**
**ನಿಂದು ಪಲಕಾಲ ಮಿಹುದೆಂತೆನೆಲು ಕೇಳಿ ।**
**ದಂದೃಷ್ಟಿ ಸೃಷ್ಟಿಯೊಳು ಪೇಳ್ವೆ ॥೧೦॥**

**ಟೀಕಾ**:- ಎಂದೊಡೆ= ಹೀಗನ್ನಲಾಗಿ, ಈಪುಸಿಯರೂಪಿಂದಾದ= ಈ ಮಿಥ್ಯಾರೂಪವಾದ, ಜಗಂ=ಜಗತ್ತು, ಇಂತು=ಇದೇರೀತಿ, ನಿಂದು=ಇದ್ದು, ಪಲ

ಕಾಲವಿಹುದು=ಬಹಳದಿವಸಗಳ ವರೆಗೆ ಇರುವದೋ? ಎಂತೆನಲ್=ಹೀಗೆನಲಾಗಿ, ಇದಂ=ಈ ವಿಷಯವನ್ನು ದೃಷ್ಟಿ=ಅವಿದ್ಯಾವೃತ್ತಿರೂಪಜ್ಞಾನವೇ, ಸೃಷ್ಟಿಯೊಳು= ಜಗತ್ತಾಗಿರುವದೆಂದು, ಪೇಳ್ವೆ=ಹೇಳುತ್ತೇನೆ, ಕೇಳು=ಆಲಿಸು.

ನಿಮಿಷವಹ ಕನಸಿನೊಳಗಮಿತ ಯುಗಮಿರ್ಪ ಸಂ ।
ಭ್ರಮವೆಂತು ತೋರುತಿಹುದಂತೆ ಜಗವಿದಾ ।
ವಿಮಲಾತ್ಮನಲ್ಲಿ ಚಿರಮಿರ್ಕುಂ ॥೧೧॥

ಟೀಕಾ:- ನಿಮಿಷವಹ=ಕಿಂಚಿತ್ ಕಾಲದ, ಕನಸಿನೊಳಗೆ=ಸ್ವಪ್ನದಲ್ಲಿ, ಅಮಿತ=ಲೆಕ್ಕವಿಲ್ಲದ, ಯುಗಮಿರ್ಪ=ಯುಗಗಳವರೆಗಿರುವ, ಸಂಭ್ರಮವು=ಉತ್ಸವವು, ಎಂತು=ಹೇಗೆ, ತೋರುತಿಹುದು=ತೋರುತ್ತಿರುವದೋ, ಅಂತೆ=ಹಾಗೆ, ಆ ವಿಮಲಾತ್ಮನಲ್ಲಿ=ಆ ಪರಮಾತ್ಮನಲ್ಲಿ, ಜಗವಿದು=ಈ ಜಗತ್ತು, ಚಿರಮಿರ್ಕುಂ= ಬಹಳ ದಿವಸವಿರುವದು.

ಗುರು:- ಹೇ ಬಾಲಕ! ನಿನ್ನ ಅನುಭವಕ್ಕೆ ಬರುವ ಹಾಗೆ ದೃಷ್ಟಿ ಸೃಷ್ಟಿ ಮೂಲಕ ಹೇಳುತ್ತೇನೆ. ಕೇಳು. ಹೇಗಂದರೆ; * ನಿಮಿಷಾತ್ಮಕ ಸ್ವಪ್ನದಲ್ಲಿ ಸ್ವಪ್ನ ಪ್ರಪಂಚವು ಸ್ವಪ್ನಜ್ಞಾನ ಸಮಕಾಲದಲ್ಲಿಯೇ ಜ್ಞೇಯ ಪ್ರಪಂಚವು ಕಲ್ಪಿತವಾಗಿ ತೋರಿದರೂ, ಅನೇಕ ಯುಗಗಳವರೆಗೆ ಆ ಸ್ವಪ್ನ ಪ್ರಪಂಚವಿದ್ದಂತೆ ತೋರುವದು. ಹೇಗೋ ಹಾಗೆ ನಿರ್ವಿಕಾರ ಚಿನ್ಮಾತ್ರ ಸ್ವರೂಪದಲ್ಲಿ ಪ್ರಪಂಚವು ಕಲ್ಪಿತವಾಗಿದ್ದರೂ, ಬಹಳ ದಿವಸಗಳಿಂದ ಇದ್ದಂತೆ ತೋರುವದು. ಇದು ವಿಪರೀತ ಜ್ಞಾನವಲ್ಲದೆ ಯಥಾರ್ಥವಲ್ಲ. ಆದ್ದರಿಂದ ಪ್ರಪಂಚವು ಮಿಥ್ಯೆಯಾಗಿರುತ್ತದೆ.

ಶಿಷ್ಯ:— ದೃಷ್ಟಿ ಸೃಷ್ಟಿ ಅಂದರೆ ಏನು? ಆ ದೃಷ್ಟಿಯು ವೃತ್ತಿರೂಪವಾಗಿರುವದೋ? ಚೈತನ್ಯ ರೂಪವಾಗಿರುವದೋ? ವೃತ್ತಿರೂಪವೇ ದೃಷ್ಟಿಯೆಂದು ಹೇಳಿದರೆ, ಚರಮವೃತ್ತಿ ವ್ಯಾಪ್ಯತ್ವದಿಂದ ಬ್ರಹ್ಮವು ವಿಷಯವಾಗುತ್ತದೆ. ಆ ಬ್ರಹ್ಮವಾದರೂ ದೃಷ್ಟಿ ಸೃಷ್ಟಿಯಾಗಬೇಕಾಯಿತು. ಇದನ್ನು ಅಂಗೀಕರಿಸಿದರೆ ಬ್ರಹ್ಮಕ್ಕೆ ಅನಿತ್ಯ ದೋಷವು ಬರುವದು. ಇದು ಸಿದ್ಧಾಂತಕ್ಕೆ ವಿರೋಧವಾಗಿರುತ್ತದೆ. ಇನ್ನು ಚೈತನ್ಯರೂಪವೇ ದೃಷ್ಟಿಯೆಂದು ಹೇಳಿದರೆ, ಸೃಷ್ಟಿಯು ಸರ್ವದಾ ಇರಬೇಕಾಯಿತು. ಯಾಕಂದರೆ, ಚೈತನ್ಯದೃಷ್ಟಿ ನಿತ್ಯವಾದ್ದರಿಂದ; ಹೀಗೆ ಅಂಗೀಕರಿಸಿದರೆ, ಪ್ರತೀತಿ ಸಮಕಾಲ ಸೃಷ್ಟಿಯೆಂಬುವದು ಬಾಧಿಸುತ್ತದೆ. ಆದ್ದರಿಂದ ದೃಷ್ಟಿ ಸೃಷ್ಟಿ ಅಂದರೇನು?

* ಈ ಸ್ವಪ್ನ ದೃಷ್ಟಾಂತಕ್ಕೆ ಯೋಗವಾಸಿಷ್ಠ ಉಪಶಮ ಪ್ರಕರಣವಲ್ಲಿರುವ ಗಾಧಿ ಬ್ರಾಹ್ಮಣನ ಆಖ್ಯಾನವನ್ನು ನೋಡಿರಿ.

**ಗುರು:-** ನೀನು ಮಾಡಿರುವ ವಿಕಲ್ಪವು ಒಂದು ಸರಿಯಲ್ಲ. ಯಾಕಂದರೆ ಅವಿದ್ಯಾ ವೃತ್ತ್ಯುಪಹಿತ ಚೈತನ್ಯವೇ ದೃಷ್ಟಿ ಶಬ್ದಾರ್ಥವು. ಹೇಗೆಂದರೆ, ರಜ್ಜು ಸರ್ಪಾದಿ ಸ್ಥಳಗಳಲ್ಲಿ ಸಾಕ್ಷಿ ಚೈತನ್ಯ ಆಶ್ರಿತವಾದ ಅವಿದ್ಯೆಯು ಸತ್ವಭಾಗವೇ ಜ್ಞಾನಾಕಾರವಾಗಿಯೂ, ತಮೋಭಾಗವೇ ಸರ್ಪಾಕಾರವಾಗಿಯೂ ಇರುತ್ತದೆ. ಅವೆರಡು ಅವಿದ್ಯಾವೃತ್ತಿಗಳೇ. ಆದರೆ ಅದರಲ್ಲಿ ಜ್ಞಾನಾಕಾರವೃತ್ತಿಯೂ ದೃಷ್ಟಿ ಯಾಗಿದೆ. ಜ್ಞೇಯಾಕಾರವೃತ್ತಿಯು ಸೃಷ್ಟಿಯಾಗಿದೆ. ಇದರಂತೆ ಅವಿದ್ಯಾ ವೃತ್ತಿಯಲ್ಲಿರುವ ಜ್ಞಾನವೇ ದೃಷ್ಟಿಯು. ಇದರಿಂದ ತೋರಿದ ಜ್ಞೇಯವೇ ಸೃಷ್ಟಿ ಯಾಗಿರುತ್ತದೆ. ಈ ದೃಷ್ಟಿ ಸೃಷ್ಟಿಯು ಸಾಕ್ಷಿ ಸ್ವರೂಪದಲ್ಲಿ ಕಲ್ಪಿತನಾಗಿರುತ್ತದೆ. ಆದ್ದರಿಂದ ಪ್ರತೀತಿ ಸಮಕಾಲ ಸತ್ವವುಳ್ಳದ್ದಾಗಿರುತ್ತದೆ.

**ಶಿಷ್ಯ:-** ದೋಷ, ಅಜ್ಞಾನ, ಅದೃಷ್ಟ, ದೇಹ, ಇಂದ್ರಿಯ ಇವುಗಳ ಮೂಲಕ, ದೃಷ್ಟಿಯು ಆಯಿತು. ಅದರಿಂದ ಭ್ರಮರೂಪ ಸೃಷ್ಟಿಯು ತೋರು ವದು. ಅಂದಮೇಲೆ ದೇಹೇಂದ್ರಿಯ ವ್ಯತಿರಕ್ತ ದೃಷ್ಟಿ ಸೃಷ್ಟಿಯನ್ನು ಸ್ವೀಕರಿ ಸಿದರೆ, ದೇಹೇಂದ್ರಿಯಗಳಿಗೆ ನಿತ್ಯತ್ವ ಹೇಳಬೇಕಾಗುವದು. ದೇಹೇಂದ್ರಿಯ ಗಳಾದರೂ ಸೃಷ್ಟಿರೂಪಗಳೆಂದು ಹೇಳಿದರೆ, ದೃಷ್ಟಿಗೆ ದೃಷ್ಟಿಯೆ ಕಾರಣವಾಗುವ ದೆಂದು ಹೇಳಬೇಕಾಗುವದು. ಹೀಗೆ ಹೇಳುವದರಿಂದ ಆತ್ಮಾಶ್ರಯಾದಿ ದೋಷ ಗಳು ಬರುತ್ತವೆ. ಇದಕ್ಕೇನು ಗತಿ ?

**ಗುರು–** ದೇಹೇಂದ್ರಿಯಾದಿಗಳಿಲ್ಲದಿದ್ದರೂ ದೃಷ್ಟಿ ಸೃಷ್ಟಿಯು ಉಪಪತ್ತಿ ಯಾಗುತ್ತದೆ. ಹೇಗಂದರೆ, ಸ್ವಪ್ನ ಭ್ರಮದಂತೆ; ಸ್ವಪ್ನದಲ್ಲಿ ದೇಹೇಂದ್ರಿಯಗಳಿಲ್ಲ ದಿದ್ದರೂ ಅವಿದ್ಯಾ ವೃತ್ಯಾತ್ಮಕ ದೃಷ್ಟಿ ಸೃಷ್ಟಿಯು ಸಂಭವಿಸುತ್ತದೆ.

**ಶಿಷ್ಯ:-** **ಅಜ್ಞಾತ ಸತ್ವಂ ನೇಷ್ಟಂ ಚೇದ್ವ್ಯವಹಾರಃ ಕಥಂ ಭವೇತ್ ।**
**ನಹ್ಯದರ್ಶನ ಮಾತ್ರೇಣ ವಿಷಯೋ ನಾಶ ನಿಶ್ಚಯಾತ್ ॥**

ವ್ಯಾವಹಾರಿಕ ಸತ್ವವೇ ಇಲ್ಲದಿದ್ದರೆ, ವ್ಯವಹಾರವು ಹೇಗೆ ಆಗುತ್ತದೆ? ಪ್ರತೀತಿಯಾಗದೇ ಇರುವದರಿಂದ ನಾಶ ನಿಶ್ಚಯವಾಗುತ್ತದೆ. ಅಂದಮೇಲೆ, ವಿಷ ಯವೇ ಇಲ್ಲೆಂದು ಹೇಳಬೇಕಾಗುವದು. ಅನುಭವಿಸಲ್ಪಡುವಂಥಾ ದ್ವೈತವು ಇಲ್ಲೆಂದು ಹೇಳಲಿಕ್ಕೆ ಆದೀತೆ? ಎಂದಿಗೂ ಆಗಲಾರದು. ಅದರಿಂದ ವಿವರಣಾ ಚಾರ್ಯರೇ ಮೊದಲಾದವರು ತ್ರಿವಿಧ ಸತ್ತೆಯನ್ನು ಅಂಗೀಕಾರ ಮಾಡಿರುವರು. ಇಲ್ಲೆಂದು ಹೇಳಿದರೆ, ಪಾರಮಾರ್ಥಿಕ ಸತ್ತೆ ಪ್ರಾತಿಭಾಸಿಕ ಎರಡೇ ಸತ್ತೆಗಳಿ ರುತ್ತವೆಂದು ಹೇಳಬೇಕಾಗುವದು. ಹೀಗೆ ಹೇಳಿದರೆ,ಮನೆಯಿಂದ ಪರಗ್ರಾಮಕ್ಕೆ ಹೋದವನು ಪುತ್ರಪಶ್ವಾದಿ ಸಕಲ ಸಾಧನಗಳನ್ನು ನೋಡದಿರುವನು. ಅವನು ಅವುಗಳ ಅಭಾವನಿಶ್ಚಯದಿಂದ, ಶೋಕಾಗ್ನಿಯಿಂದ ದಹಿಸಲ್ಪಟ್ಟವನಾಗಿ, ಅಳು ವಂಥವನಾಗಲು ಮರಣ ಪ್ರಸಂಗ ಬರಬಹುದಲ್ಲವೆ?

**ಗುರು**- ಸ್ವಪ್ನದಂತೆ, ಜಾಗರಣದಲ್ಲಿಯೂ ಪ್ರಾತೀತಿಕ ಸತ್ವವಿರೋಣ ದರಿಂದ ದ್ವೈತ ವ್ಯವಹಾರವಾದರೂ ಯಾಕೆ ಇರುವದಿಲ್ಲ? ಕಿಂತು, ಸರ್ವ ವ್ಯವ ಹಾರವು ಸಂಭವಿಸುತ್ತದೆ.

ಶಿಷ್ಯ:- ಹಾಗೆ ಸಂಭವಿಸುವದಿಲ್ಲ. ಯಾಕಂದರೆ, ಜಾಗ್ರಕ್ಕೂ ಸ್ವಪ್ನಕ್ಕೂ ವೈಷಮ್ಯವಿರುತ್ತದೆ. ಜಾಗರಣ ಜ್ಞಾನದಿಂದ ಸ್ವಪ್ನವು ನಾಶವಾಗುತ್ತದೆ. ಜಾಗ್ರ ತ್ಪ್ರಪಂಚವು ತೋರುವದಕ್ಕಿಂತಲೂ ಪೂರ್ವದಲ್ಲಿ ಭಾವರೂಪವಾಗಿರುತ್ತದೆ. ಆದ್ದ ರಿಂದ ಜಾಗ್ರತ್ಸ್ವಪ್ನಗಳಿಗೆ ಸಾಮ್ಯವು ಸರಿಯಲ್ಲ.

**ಗುರು:- ಸತ್ವತ್ರಯಂ ವದನ್ ವಾದೀಪ್ರಷ್ಟವ್ಯೋಽತ್ರಾಧುನಾ ಮಯಾ।**
**ಸತ್ಯಂ ದ್ವೈತಮಸತ್ಯಂ ವಾ ನಾಸತ್ಯೈತ್ರಿವಿಧಂ ಕುತಃ ॥**

ಪಾರಮಾರ್ಥಿಕ, ವ್ಯಾವಹಾರಿಕ, ಪ್ರಾತಿಭಾಸಿಕಗಳೆಂಬ ಮೂರು ಸತ್ವ ಗಳುಂಟೆಂದು ಹೇಳಿದರೆ; ದ್ವೈತವು ಸತ್ಯವುಂಟೋ? ಅಸತ್ಯವುಂಟೋ? ಸತ್ಯವೂ ಅಲ್ಲ; ಅಸತ್ಯವೂ ಅಲ್ಲ. ಸತ್ ಅಸತ್‌ಗಳಿಗೆ ವಿಲಕ್ಷಣವೆಂದು ಹೇಳಿದರೆ, ಮೂರು ಸತ್ತ್ವಗಳು ಎಲ್ಲಿರುವವು? ಹೇಳು.

ಮತ್ತು ಪಾರಮಾರ್ಥಿಕ ಸತ್ತೆಯನ್ನು ಆಶ್ರಯಿಸಿ ದ್ವೈತವು † ಅಜ್ಞಾತ ಸತ್ವವಾಗಿರುವದೋ? ಅಥವಾ ಅನಿರ್ವಚನೀಯವನ್ನು ಆಶ್ರಯಿಸಿ ಆಗಿರು ವದೋ? ಪ್ರತ್ಯಕ್ಷ ಪ್ರಮಾಣವನ್ನು ತಿರಸ್ಕಾರ ಮಾಡಿರುವದರಿಂದ ಮೊದಲನೇ ಪಕ್ಷವು ಸಂಭವಿಸುವದಿಲ್ಲ. ಅನಿರ್ವಚನೀಯವು ಅಂದರೆ; ಅದು ಮೊದಲು ಎಲ್ಲಾಯ ದರೂ ಇದ್ದದ್ದೋ? ಅಥವಾ ಇಲ್ಲದ್ದೋ? ಇಲ್ಲದ್ದೆಂದು ಹೇಳಿದರೆ, ಹಾಗಾದರೆ, ದೃಷ್ಟಾಂತವೇ ಇಲ್ಲದ ಮೇಲೆ ಆಕಾಶಾದಿ ಪ್ರಪಂಚಕ್ಕೆ ಅನಿರ್ವಚನೀಯವು ಹೇಗೆ ಸಾಧಿಸಲ್ಪಡುತ್ತದೆ? ರಜ್ಜು ಸರ್ಪಾದಿ ದೃಷ್ಟಾಂತಗಳುಂಟೆಂದು ಹೇಳಿದರೆ, ಅವು ಗಳಲ್ಲಿ ಯಾವ ಪ್ರಕಾರದ ಸತ್ವವುಂಟೋ ಅಂಥಾ ಸತ್ವವೇ ಆಕಾಶಾದಿ ಪ್ರಪಂ ಚಕ್ಕೆ ಉಂಟೆಂದು ಹೇಳಬೇಕಾಗುವದು. ಹೀಗೆ ಹೇಳಿದರೆ, ದ್ವೈತಕ್ಕೆ ಅಜ್ಞಾತ ಸತ್ವವುಂಟೋ? ಪ್ರಾತಿಭಾಸಿಕವುಂಟೋ? ನೀನೇ ವಿವೇಚನವನ್ನು ಮಾಡು. ಒಂದುವೇಳೆ ಆಕಾಶಾದಿ ಪ್ರಪಂಚಕ್ಕೆ ಅಜ್ಞಾತಸತ್ವವನ್ನು ಅಂಗೀಕರಿಸಿದರೆ; ದೃಷ್ಟಾಂತ ದಾರ್ಷ್ಟಾಂತಗಳು ಸರಿಹೋಗುವದಿಲ್ಲ; ಯಾಕಂದರೆ, ವಿರೋಧವಾಗು ವದರಿಂದ ಇದಕ್ಕೇನು ಹೇಳುವಿ?

ಮತ್ತು ಮನೆಯಿಂದ ಹೊರಟು ಹೋದವನಿಗೆ ಗೃಹ ಪುತ್ರಾದಿ ಅಸತ್ವ ನಿಶ್ಚಯದಿಂದ ರೋದನ ಪ್ರಸಂಗವೂ ಬರುವದಿಲ್ಲ. ಯಾಕಂದರೆ, ಪ್ರಪಂಚ

---

† ಅಜ್ಞಾತ ಸತ್ವವು ಅಂದರೆ ವ್ಯಾವಹಾರಿಕ ಸತ್ತೆಯು ಜ್ಞಾತಸತ್ವ ಅಂದರೆ ಪ್ರಾತಿ ಭಾಸಿಕ ಸತ್ತೆಯಾಗಿರುವದು.

ಮಿಥ್ಯೆಯೆಂಬ ಜ್ಞಾನವಿಲ್ಲದ್ದರಿಂದ ಗೃಹಪುತ್ರಾದಿಗಳು ಇಲ್ಲೆಂಬ ನಿಶ್ಚಯವಿಲ್ಲ. ಕಿಂತು ಸ್ವಪ್ನದಂತೆ ಸರ್ವ ವ್ಯವಹಾರವು ಸಂಭವಿಸುತ್ತದೆ. ಜಾಗ್ರಕ್ಕೂ ಸ್ವಪ್ನಕ್ಕೂ ಏನೂ ವೈಷಮ್ಯವಿಲ್ಲ. ಭ್ರಮಾವಸ್ಥೆಯಲ್ಲಿ ಬಾಧಕಜ್ಞಾನವಿಲ್ಲದ್ದರಿಂದ ಸರ್ವವೂ ಸಂಭವಿಸುತ್ತದೆ. ಒಂದುವೇಳೆ ಬಾಧಕ ಜ್ಞಾನವು ಸಂಭವಿಸಿದರೂ ಏನೂ ದೋಷವಿಲ್ಲ. ಯಾಕಂದರೆ, ವ್ಯವಹಾರವು ಆ ಕಾಲದಲ್ಲಿ ಅಂಗೀಕರಿಸಲ್ಪಡುವದಿಲ್ಲ.

ಶಿಷ್ಯ- ಅನೇಕ ವೇದಾಂತ ಗ್ರಂಥಗಳಲ್ಲಿ ಪೂರ್ವಾಚಾರ್ಯರು ಮೂರು ಸತ್ತೆಗಳನ್ನು ಅಂಗೀಕರಿಸಿರುವರು. ಅವರು ಹಾಗೆ ಅಂಗೀಕರಿಸಿದ್ದು ವಿರೋಧವಲ್ಲವೆ?

**ಗುರು:-** ಸತ್ತಾತ್ರಯವನ್ನು ಅಂಗೀಕರಿಸಿದ್ದು ಏನೂ ವಿರೋಧವಿಲ್ಲ. ಸಮಸ್ತ ದ್ವೈತ ಪ್ರಪಂಚಕ್ಕೆ ಪ್ರಾತಿಭಾಸಿಕ ಸತ್ತೆಯನ್ನು ಪರಿತ್ಯಾಗ ಮಾಡದಲೆ, ಭ್ರಾಂತ ಜನರ ಸಂತೋಷ ಮಾತ್ರಕ್ಕಾಗಿ ಅವರು ಅಂಗೀಕರಿಸಿರುವರು. ಪ್ರಪಂಚಕ್ಕೆ ಪ್ರಾತಿಭಾಸಿಕ ಸತ್ವವಿದ್ದರೂ, ಭ್ರಾಂತಿ ಬುದ್ಧಿ ಸಿದ್ಧವಾದ ಕಿಂಚಿತ್ ಭಿನ್ನ ವೈಷಮ್ಯವನ್ನು ಆಶ್ರಯಿಸಿ, ವ್ಯಾವಹಾರಿಕ ಸತ್ತೆಂದು ಹೇಳಿರುವರು, ಹೀಗೆ ಹೇಳಿದ್ದು ಏನೂ ವಿರೋಧವಲ್ಲ. ಈ ವಿಷಯವನ್ನೆ ಹಿಂದಕ್ಕೆ ನಿನಗೆ ಹೇಳಿಯೇ ಇದ್ದೇವೆ.

**ದ್ವೈತಭೇದೆ ಪ್ರತಿಜ್ಞಾನಂ ಪ್ರತ್ಯಭಿಜ್ಞಾ ಕಥಂ ವದ |**
**ದಶಾನಾಂ ಯುಗಪತ್ ಸರ್ಪಭ್ರಮೋ ತದ್ವತ್ತಥೈವ ಸಾ ||**

**ಶಿಷ್ಯ:-** ಅಜ್ಞಾತ ಸತ್ವವನ್ನು ಅಂಗೀಕರಿಸದಿದ್ದರೆ, ನಿದ್ರೆಯಿಂದ ಎಚ್ಚತ್ತವನಿಗೆ ಅದೇ ಈ ಪ್ರಪಂಚವೆಂದು ಪ್ರತ್ಯಭಿಜ್ಞಾನವಾಗುವದಕ್ಕೆ ಗತಿಯೇನು ?

**ಗುರು:-** ನಸುಗತ್ತಲೆಯಲ್ಲಿದ್ದ ಒಂದೇ ಹಗ್ಗದಲ್ಲಿ ಹತ್ತು ಜನರಿಗೆ ಒಂದೇ ಕಾಲಕ್ಕೆ ಸರ್ಪಭ್ರಮವಾಗುವದು. ಆದರಿಂದ ಓಡಿಹೋಗುವರು. ಮತ್ತು ನೀನು ನೋಡಿದ ಹಾವನ್ನೇ ನಾನು ನೋಡಿದೆನು. ನಾನು ನೋಡಿದ್ದನ್ನೇ ನೀನು ಕಂಡಿರುವಿ. ಎಂದು ತಮ್ಮ ತಮ್ಮೊಳಗೆ ಮಾತಾಡುವರು. ಹೀಗೆ ಪ್ರತ್ಯಭಿಜ್ಞಾನವುಳ್ಳವರಾಗಿ ಸಂತೋಷಹೊಂದುವರು. ಆದರೆ, ತಮ್ಮ ತಮ್ಮ ಭ್ರಮದಿಂದ ಸಿದ್ಧವಾದ ಸರ್ಪವು ಅವರವರಿಂದ ಭಿನ್ನ ಭಿನ್ನವಾಗಿಯೇ ಅನುಭವಿಸಲ್ಪಡುತ್ತದೆ. ಯಾಕಂದರೆ, ಅನ್ಯಪುರುಷನ ಭ್ರಮದಿಂದ ಸಿದ್ಧವಾದ ವಸ್ತು ಅನ್ಯನಿಂದ ತಿಳಿಯುಲಿಕ್ಕೆ ಶಕ್ಯವಲ್ಲ. ಅದು ಅಜ್ಞಾತವಾಗಿರುತ್ತದೆ. ಒಂದೇ ಸರ್ಪವು ನಮ್ಮೆಲ್ಲರಿಂದ ಅನುಭವಿಸಲ್ಪಡುತ್ತದೆಂದು ಹೇಳುವ ಪ್ರತ್ಯಭಿಜ್ಞಾನವು ಭ್ರಮರೂಪವು ಅವಿವೇಕದಿಂದಾಗಿರುತ್ತದೆ.

ಇದರಂತೆ ಜಾಗ್ರದವಸ್ಥೆಯಲ್ಲಿ ಪ್ರಪಂಚವನ್ನು ಅನುಭವಿಸಿ, ಸುಷುಪ್ತಿಯನ್ನು ಹೊಂದಿ ಆ ಮೇಲೆ ಎದ್ದು, ಅದೇ ಈ ಪ್ರಪಂಚವೆಂದು ಭಿನ್ನವಾದ

ಪ್ರಪಂಚವು ಅನುಭವಿಸಲ್ಪಡುತ್ತದೆ. ಆದ್ದರಿಂದ ಪ್ರತ್ಯಭಿಜ್ಞಾನವು ಅವಿವೇಕ ದಿಂದಾಗಿರುತ್ತದೆ.

ಶಿಷ್ಯ:- ಸುಷುಪ್ತಿಯಲ್ಲಿ ಪ್ರಪಂಚ ಲಯವಾಗಿರುವದೆಂಬಲ್ಲಿ ಶ್ರುತಿ ಪ್ರಮಾಣವು ಇಲ್ಲ.

ಗುರು:- ಉಂಟು. "ನಹಿದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೆ ಅವಿನಾಶಿತ್ವಾತ್ ನತು ತದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ ಪಶ್ಯೇತ್" ದ್ರಷ್ಟನಾದ ಆತ್ಮನ ಜ್ಞಾನಸ್ವರೂಪ ದೃಷ್ಟಿಯು ನಾಶವಿಲ್ಲದಿರುತ್ತದೆ. ಯಾಕಂದರೆ ಅವಿನಾಶಿಯಾದ್ದರಿಂದ; ಅದಕ್ಕಿಂತಲೂ ಭಿನ್ನವಾಗಿ ಏನೂ ಇಲ್ಲ. ಆದ್ದರಿಂದ ಆತ್ಮನು ಏನನ್ನು ಕಂಡಾನು. ಎಂಬ ಶ್ರುತಿಯು ಸುಪ್ತಿಯಲ್ಲಿ ಆತ್ಮನ ಸದ್ಭಾವವನ್ನು ಪ್ರಪಂಚದ ಲಯವನ್ನು ಹೇಳುತ್ತದೆ. ಆದ್ದರಿಂದ ಅದೇ ಇದು ಎಂಬ ಪ್ರತ್ಯಾಭಿಜ್ಞಾನವು ಭ್ರಮರೂಪವದೆ.

ಶಿಷ್ಯ:- ಸರ್ಪಭ್ರಮಾದ್ವಿಶೇಷೋಽಸ್ತಿ ಜಾಗ್ರದ್ಬೋಧೇಽನ್ಯಥಾ ಕಥಂ।
ಇಂದ್ರಿಯಾದೇರುಪಾದಾನಂ ತದಭಾವೇಯತೋ ನಧೀಃ ॥

ಅವಿವೇಕದಿಂದ ಪ್ರತ್ಯಾಭಿಜ್ಞಾನವು ತೋರಿದಾಗ್ಯಾದರೂ ರಜ್ಜುಸರ್ಪಾದಿಜ್ಞಾನಕ್ಕಿಂತಲೂ ಆಕಾಶಾದಿ ಪ್ರಪಂಚ ಜ್ಞಾನದಲ್ಲಿ ಕಿಂಚಿದ್ವಿಶೇಷವಿರುತ್ತದೆ. ಏನಂದರೆ, ಪ್ರತ್ಯಕ್ಷಾದಿ ಪ್ರಮಾಣ ಮತ್ತು ಅವಿದ್ಯಾದಿಕಾರಕ ಇವುಗಳ ಭಾವ ಅಭಾವಗಳಿಂದ ವಿಲಕ್ಷಣವುಂಟು ಆದ್ದರಿಂದಲೇ ಯಾವ ಪ್ರಕಾರದ ವಿಷಯವನ್ನು ಇಂದ್ರಿಯಜನ್ಯ ಜ್ಞಾನವು ವಿಷಯೀಕರಿಸುತ್ತದೆಯೋ, ಅದನ್ನು ಅವಿದ್ಯಾಜನ್ಯ ಭ್ರಮ ಜ್ಞಾನವು ವಿಷಯೀಕರಿಸಲಾರದು. ಯಾಕಂದರೆ, ಭ್ರಮಕ್ಕಿಂತಲೂ ಪೂರ್ವದಲ್ಲಿ ವಿಷಯವು ಇರುವದಿಲ್ಲ. ಇಂದ್ರಿಯ ಜನ್ಯಜ್ಞಾನವು ಸನ್ನಿಕರ್ಷಾದಿ ಜನ್ಯವಾದ್ದರಿಂದ ಜ್ಞಾನಕ್ಕಿಂತಲೂ ಪೂರ್ವದಲ್ಲಿ ವಿಷಯವು ಅವಶ್ಯವಿರುತ್ತದೆ.ಆದ್ದರಿಂದ ಅನ್ವಯ ವ್ಯತಿರೇಕಗಳಿಂದ ಇಂದ್ರಿಯಾದಿಗಳಿಗೆ ಕಾರಣತ್ವವು ಸಿದ್ಧಿಸುತ್ತದೆ. ಅದರಿಂದ ಪ್ರಪಂಚಕ್ಕೆ ಅಜ್ಞಾತ ಸತ್ವವನ್ನು ಅಂಗೀಕಾರ ಮಾಡಿದ್ದಾರೆ. ಇಲ್ಲದಿದ್ದರೆ ವಿಲಕ್ಷಣತ್ವವೇ ಇರಲಾರದು.

ಇಂದ್ರಿಯಾಣಾಂ ಕಾರಣತ್ವೇ ಭವೇಚ್ಛ್ಯೋದ್ಯಂತದಾತವ ।
ಸ್ವಪ್ನಭ್ರಮೇ ಯಥಾ ತೇಷಾಮನ್ವಯ ವ್ಯತಿರೇಕ ಧೀಃ ॥

ಗುರು:- ಇಂದ್ರಿಯಾದಿಗಳು ವಸ್ತುತಃ ಪ್ರಪಂಚ ಜ್ಞಾನವನ್ನು ಕುರಿತು ಕಾರಣಗಳಲ್ಲ. ಯಾಕಂದರೆ, ಇಂದ್ರಿಯಾದಿಗಳು ಜ್ಞಾನಮಾತ್ರದಲ್ಲಿ ಕಾರಣಗಳಾಗಿರುವವೋ ? ಅಥವಾ ಭ್ರಮ ಪ್ರಮಾ ಸಾಧಾರಣ ಜ್ಞಾನಮಾತ್ರದಲ್ಲಿ ಕಾರಣಗಳಾಗಿರುವವೋ ? ಅಥವಾ ಭ್ರಮ ಮಾತ್ರದಲ್ಲಿಯೋ ? ಈ ಮೂರರಲ್ಲಿ ಮೊದ

ನೆಯ ಪಕ್ಷವು ಸಂಭವಿಸುವದಿಲ್ಲ. ಯಾಕಂದರೆ, ಇಂದ್ರಿಯಾದಿಗಳಿಂದ ಉತ್ಪನ್ನ ವಾದ ಜ್ಞಾನಕ್ಕೆ ಪ್ರಾಮಾಣ್ಯವನ್ನು ಸಾಧಿಸಬೇಕಾದರೆ, ಭ್ರಮವಿಷಯವನ್ನು ಭಿನ್ನಪಡಿಸಲಿಕ್ಕೇಬೇಕು. ಇದರಂತೆ ಭ್ರಮ ವಿಷಯವನ್ನು ಭಿನ್ನವಾಗಿ ತಿಳಿಯ ಬೇಕಾದರೆ,ಇಂದ್ರಿಯಜನ್ಯ ಜ್ಞಾನವನ್ನು ಭಿನ್ನವಾಗಿ ತಿಳಿಯಲಿಕ್ಕೇಬೇಕು. ಹೀಗೆ ಒಂದನ್ನು ತಿಳಿಯುವದರಲ್ಲಿ ಮತ್ತೊಂದರ ಅಪೇಕ್ಷೆಯು ಬೇಕಾದ್ದರಿಂದ ಅನ್ಯೋ ನ್ಯಾಶ್ರಯ ದೋಷವು ಬರುತ್ತದೆ.

ಮತ್ತು ಜ್ಞಾನಕ್ಕೆ ವಿಷಯವಾದ ವಸ್ತು ಸತ್ಯವಾಗಿರಬೇಕೆಂಬ ನಿಯಮವೂ ಇಲ್ಲ. ಯಾಕಂದರೆ, ಈ ರಜತವು ಮಿಥ್ಯೆಯಾಗಿದೆ. ಹೀಗೆಂದು ಜ್ಞಾನಕ್ಕೆ ಅಸತ್ಯ ವಸ್ತುವಾದರೂ ವಿಷಯವಾಗುತ್ತದೆ. ಆದ್ದರಿಂದ ಅಬಾಧಿತವಸ್ತು ಅಸಿದ್ಧಿಯಾಗಿ ರುತ್ತದೆ.

ಮತ್ತೂ ಇಂದ್ರಿಯಗಳು ಪ್ರಮಾಣಗಳಾಗಿರುವದರಿಂದ ಅಜ್ಞಾತ ಅರ್ಥ ವನ್ನು ವಿಷಯ ಮಾಡುತ್ತವೆಂದು ಹೇಳಿದರೆ, ಅಧಿಷ್ಠಾನವನ್ನು ಮಾತ್ರ ವಿಷಯ ಮಾಡುತ್ತವೆಂದು ಹೇಳಬೇಕಾದೀತು. ಯಾಕಂದರೆ ಸರ್ವ ಪ್ರಪಂಚವು ಜಡವಾ ಗಿರುವದರಿಂದ ಅಜ್ಞಾತವಲ್ಲ, ಪರಂತು ಜ್ಞಾತವಾಗಿರುತ್ತದೆ. ಹಾಗು ಅಧಿಷ್ಠಾನ ತ್ವವು ಆತ್ಮಸ್ವರೂಪದಲ್ಲಿಯೇ ಇರುತ್ತದೆ. ಆದರಿಂದ ಪ್ರಮಾಣಗಳಾದ ಇಂದ್ರಿಯ ಗಳು ಪ್ರತ್ಯಗಾತ್ಮನನ್ನು ವಿಷಯ ಮಾಡುತ್ತವೆಂದು ಹೇಳಬೇಕಾದೀತು. ಅದು ಸಂಭವಿಸುವದಿಲ್ಲ. ಯಾಕಂದರೆ, ಇಂದ್ರಿಯಗಳಿಗೆ ಪ್ರತ್ಯಗಾತ್ಮನು ವಿಷಯ ವಾಗುವದಿಲ್ಲ. ನಿರ್ಧರ್ಮಕನಾಗಿರುವನು, ಹಾಗು ಶೃತಿಯುಂಟು.

**ನ ಸಂದೃಶೆ ತಿಷ್ಠತಿ ರೂಪಮಸ್ಯ**
**ನ ಚಕ್ಷುಷಾ ಪಶ್ಯತಿ ಕಶ್ಚಿದೇನಂ**
**ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ**
**ತಸ್ಮಾತ್ ಪರಾಙ ಪಶ್ಯತಿ ನಾಂತರಾತ್ಮನ್** ||೫||

ಆತ್ಮನ ರೂಪು ಸನ್ಮುಖದಲ್ಲಿರುವದಿಲ್ಲ. ಯಾವನಾದರೂ ಈ ಆತ್ಮನನ್ನು ಕಣ್ಣಿನಿಂದ ನೋಡುವದಿಲ್ಲ. ಬ್ರಹ್ಮನಾದರೂ ಇಂದ್ರಿಯಗಳನ್ನು ಬಹಿರ್ಮುಖ ಗಳನ್ನಾಗಿ ಮಾಡಿದ್ದಾನೆ. ಆದ್ದರಿಂದ ಹೊರಗೆ ನೋಡುತ್ತಾನೆ ಹೊರ್ತು ಒಳಗಿರುವ ಆತ್ಮನನ್ನು ಕಾಣುವದಿಲ್ಲ. ಹೀಗೆ ಶ್ರುತಿಯು ನಿರ್ಧರ್ಮಕ ಆತ್ಮನಿದ್ದಾನೆಂದು ಹೇಳುತ್ತದೆ. ಆದ್ದರಿಂದ ಆತ್ಮನು ಇಂದ್ರಿಯಗಳಿಗೆ ಗೋಚರನಲ್ಲ.

**ಶಿಷ್ಯ:-** ತಾವು ಉದಾಹರಿಸಲ್ಪಟ್ಟ ಶ್ರುತಿಯಿಂದಲೇ ಇಂದ್ರಿಯಗಳಿಗೆ ಪ್ರಪಂಚವು ವಿಷಯವಾಗಿರುವದೆಂದು ಹೇಳಿದಂತಾಯಿತಲ್ಲವೇ ?

**ಗುರು:-** ಹಾಗೆ ಹೇಳಕೂಡದು. ಸ್ವಪ್ನೇಂದ್ರಿಯದಂತೆ, ಅನ್ವಯ ವ್ಯತಿರೇಕ ಭ್ರಮಸಿದ್ಧವಾದ ಪ್ರಪಂಚವು ಇಂದ್ರಿಯ ಜ್ಞಾನಕ್ಕೆವಿಷಯವಾಗಿರುವುದೆಂದು ಅನುವಾದನ ಮಾಡುತ್ತಾ, ಆತ್ಮನು ಇಂದ್ರಿಯಗಳಿಗೆ ಅವಿಷಯನೆಂದು ತೋರಿಸುವಲ್ಲಿ ತಾತ್ಪರ್ಯವಿರುತ್ತದೆ ಹೊರ್ತು; ಇಂದ್ರಿಯಗಳ ಜ್ಞಾನಕ್ಕೆ ಪ್ರಪಂಚವು ವಿಷಯುವಾಗಿರುವುದೆಂಬ ತಾತ್ಪರ್ಯವಲ್ಲ.

ಹೀಗೆ ಹೇಳುವವರಿಂದಲೇ ಭ್ರಮ ಮತ್ತು ಪ್ರಮಾ ಸಾಧಾರಣ ಜ್ಞಾನಕ್ಕೆ ಕಾರಣವಾಗಿರುವದೇಬುವದು ಕೂಡಾ ನಿರಕರಿಸಲ್ಪಟ್ಟಿತು. ಯಾಕಂದರೆ; ಜ್ಞಾನಕ್ಕೆ ಕಾರಣವನ್ನು ನಿರೂಪಣೆ ಮಾಡುವದು ಅಶಕ್ಯವಾಗಿರುತ್ತದೆ.

ಭ್ರಮ ಮಾತ್ರದಲ್ಲಿ ಇಂದ್ರಿಯಗಳಿಗೆ ಕಾರಣತ್ವವಿರಲಿಯೆಂಬುದಾಗಿ ಹೇಳಿದರೆ; ಅದೂ ಸಂಭವಿಸುವದಿಲ್ಲ. ಯಾಕಂದರೆ; ಭ್ರಮಜ್ಞಾನಕ್ಕೆ ಅವಿದ್ಯೆಯೇ ಕಾಣರವಾಗಿರುವದೆಂದು ನೀನೇ ಹೇಳಿರುವದರಿಂದ; ಮತ್ತು ಜ್ಞಾನವನ್ನೇ ಕುರಿತು ಇಂದ್ರಿಯಗಳಿಗೆ ಅನ್ವಯ ವ್ಯತಿರೇಕಗಳೆರಡು; ಸ್ವಪ್ನೇಂದ್ರಿಯ ಅನ್ವಯ ವ್ಯತಿರೇಕಗಳಂತೆ ಉಪಪತ್ತಿಯಾಗುತ್ತವೆ. ಇದೇ ಪ್ರಕಾರ ಘಟಾದಿ ಕಾರ್ಯ ಮಾತ್ರದಲ್ಲಿಯಾದರೂ, ಕಾರಣವನ್ನು ಅಪೇಕ್ಷೆ ಮಾಡುವಲ್ಲಿ ಅವಿದ್ಯೆಯನ್ನೇ ಗ್ರಹಿಸತಕ್ಕದ್ದು. ಮತ್ತು ಆಯಾಯ ಪದಾರ್ಥಗಳ ಅಪೇಕ್ಷೆಯುಳ್ಳವರು ಆಯಾಯ ವಿಶೇಷ ಕಾರಣಗಳನ್ನು ಹುಡುಕುವದಾದರೂ, ಸ್ವಪ್ನದಂತೆ ಸರ್ವವೂ ಸಂಭವಿಸುವದು. ಅದ್ದರಿಂದ ಬ್ರಹ್ಮವ್ಯತಿರಿಕ್ತ ಸಕಲ ಕಾರ್ಯ ಪ್ರಪಂಚವು ಜ್ಞಾನಜ್ಞೇಯ ರೂಪವಾಗಿದ್ದೆಲ್ಲಾ, ಅವಿದ್ಯಾಮಯವಾಗಿರುತ್ತದೆ. ಆದ್ದರಿಂದಲೇ ಸರ್ವವು ಪ್ರಾತಿಭಾಸಿಕ ಸತ್ತಾವುಳ್ಳದ್ದಾಗಿರುತ್ತದೆಂಬುದೇ ಸಿದ್ಧವು.

ಈ ಕಾರಣದಿಂದ ಶ್ರೀ. ವಶಿಷ್ಠರು ಮುಂದಿನ ಶ್ಲೋಕವನ್ನು ಉದಾಹರಿಸಿದ್ದಾರೆ.—

**ಅವಿದ್ಯಾಯೋನಯೋ ಭಾವಾಃ ಸರ್ವೇಽಮೀ ಬುದ್ಬುದಾಇವ ।**
**ಕ್ಷಣ ಮುದ್ಭೂಯ ಗಚ್ಛಂತಿ ಜ್ಞಾನೈಕ ಜಲಧೌ ಲಯಂ ॥**

ಸಮುದ್ರದಲ್ಲಿ ಅವಿದ್ಯಾಕಾರಣವಾಗಿರುವ ಸರ್ವವೂ ಭಾವರೂಪ ಕಾರ್ಯಗಳು ಕ್ಷಣಕಾಲದಲ್ಲಿ ತೋರಿ ಅಡಗುತ್ತವೆ. ಎಂದು ಹೇಳಿರುವದರಿಂದ ಸರ್ವ ಪ್ರಪಂಚಕ್ಕೂ ಅವಿದ್ಯೆಯೇ ಕಾರಣವಾಗಿರುತ್ತದೆ.

**ಶಿಷ್ಯ:- ಮೃದಾದೀನಾಂ ಕಾರಣತ್ವಂ ನಚೇದಿಷ್ಟಂ ಪ್ರತಿಘಟಂ ।**
**ಅವಿದ್ಯಾಯಾ ಕಾರಣತಂ ಕಥಂ ಸಿಧ್ಯೇತ್ ಪ್ರಮಾಂ ವಿನಾ॥**

ಘಟಕಾರ್ಯಕ್ಕೆ ಕಾರಣವಾದದ್ದು ಮೃತ್ತಿಕೆಯೇ ಇಷ್ಟವಲ್ಲವೆಂದು ಹೇಳಿದರೆ, ಅನ್ವಯ ವ್ಯತಿರೇಕ ಜ್ಞಾನವಿಲ್ಲದೆ ಅವಿದ್ಯೆಗೆ ಕಾರಣತ್ವವಾದರೂ ಹೇಗೆ ಸಂಭವಿಸುತ್ತದೆ?

ಈ ಭಾವ ಪದಾರ್ಥಗಳಿಗೆ ಅವಿದ್ಯೆಯೇ ಕಾರಣವಾಗಿರುವದೆಂದು ಹೇಳುವದು, ಕಾರ್ಯಕಾರಣ ಭಾವವನ್ನು ಅಂಗೀಕರಿಸಿ ಹೇಳಲ್ಪಟ್ಟಿರುವದೋ? ಇಲ್ಲವೋ? ಇಲ್ಲೆಂದು ಹೇಳಿದರೆ ಅವಿದ್ಯೆ ಹೇಗೆ ಕಾರಣವಾಗುವದು? ಕಾರ್ಯಕಾರಣ ಭಾವವು ಉಂಟೆಂದು ಹೇಳಿದರೆ ಆಗ್ಯೆ ಮೊದಲಿದ್ದಂತೆ, ಅನ್ವಯ ವ್ಯತಿರೇಕ ಜ್ಞಾನವೇ ಪ್ರಮಾಣವಾಯಿತು. ಯಾಕಂದರೆ, ಬೇರೊಂದು ರೀತಿಯಿಂದ ಕಾರ್ಯಕಾರಣ ಭಾವವನ್ನು ನಿಶ್ಚಯಿಸಲಿಕ್ಕೆ ಆಗುವದಿಲ್ಲ. ಹೀಗಾದ ಮೇಲೆ ಅನ್ವಯ ವ್ಯತಿರೇಕದಿಂದ ಸಿದ್ಧವಾದ ಮೃದಾದಿ ಕಾರಣತ್ವವನ್ನು ಪರಿತ್ಯಾಗಮಾಡಿ, ಅವಿದ್ಯಾಕಾರಣವಾಗಿರುವದೆಂದು ಹೇಳುವದು. ಅನುಚಿತವಾಗಿರುತ್ತದೆ. ಮತ್ತು ಈ ಭಾವ ವಸ್ತುಗಳಿಗೆ ಅವಿದ್ಯೆಯೇ ಕಾರಣವಾಗಿರುವದೆಂದು ಹೇಳಿದರೆ, ನಿರಪೇಕ್ಷವಾಗಿ ಕಾರಣವಾಗಿರುವದೋ? ಇಲ್ಲವೆ ಅದೃಷ್ಟ ಈಶ್ವರಾದಿ ಕಾರಣಾಂತರ ಸಾಕ್ಷೇಪವಾಗಿ ಕಾರಣವಾಗಿರುವದೋ? ನಿರಪೇಕ್ಷವಾಗಿರುವದೆಂಬುವದು ಸಂಭವಿಸುವದಿಲ್ಲ. ಯಾಕಂದರೆ; ಕಾರಣ ವೈಚಿತ್ರ್ಯವಿಲ್ಲದ್ದರಿಂದ ಕಾರ್ಯವೂ ವಿಚಿತ್ರವುಳ್ಳದ್ದಾಗಲಾರದು. ಚೇತನಾಧಿಷ್ಠಾನವಿಲ್ಲದೆ ಜಡಶಕ್ತಿಗೆ ಕಾರ್ಯವನ್ನುಂಟು ಮಾಡುವದು ಶಕ್ಯವಲ್ಲ.

ಇನ್ನು ಎರಡನೇ ಪಕ್ಷವಾದರೂ ಸಂಭವಿಸುವದಿಲ್ಲ. ಯಾಕಂದರೆ; ಅವಿದ್ಯಾಕಾರಣದೊಡನೆ ಅದೃಷ್ಟ ಈಶ್ವರಾದಿ ಕಾರಣಗಳನ್ನು ಅಂಗೀಕರಿಸುವದರಿಂದಲೇ ವಿಚಿತ್ರ ಕಾರ್ಯವು ಉತ್ಪತ್ತಿಯಾಗುತ್ತದೆ. ಅಂದಮೇಲೆ; ಅಜ್ಞಾನವೇ ಕಾರಣವೆಂಬುವಲ್ಲಿ ಪ್ರಯೋಜನವೇನು? ಉಕ್ತ ರೀತಿ ಅರ್ಥವನ್ನು ಮಾಡಿದರೆ, ಕರ್ಮಕಾಂಡ ಉಪಾಸನಾಕಾಂಡಗಳಿಗೆ ಪ್ರಾಮಾಣ್ಯವು ಸಂಭವಿಸುತ್ತದೆ. ಇಲ್ಲದಿದ್ದರೆ; ಲೋಕವೇದ ವಿರುದ್ಧವಾದ ಪಕ್ಷವನ್ನು ಯಾಕೆ ಅಶ್ರಯಮಾಡಬೇಕು? ಆದ್ದರಿಂದ ಜಗತ್ತಿಗೆ ಅವಿದ್ಯಾ ಮಾತ್ರ ಕಾರಣವಾಗಿರುವದೆಂದು ಹೇಳುವದು ಸಾಹಸ ಮಾತ್ರವಾಗಿರುತ್ತದೆ.

**ಗುರು:-** ಈ ವಿಷಯಕ್ಕೆ ಉತ್ತರವನ್ನು ಹೇಳುತ್ತೇನೆ ಕೇಳು.

**"ಯಥಾ ಸತೋ ಜನಿರ್ನೈವ ಮಸತೋಽಪಿ ಜನಿರ್ನಚ ।**
**ಜನ್ಯತ್ವಮೇವ ಜನ್ಯಸ್ಯ ಮಾಯಿಕತ್ವಂ ಸಮರ್ಪಕಂ ॥**

ಇದ್ದದ್ದು ಉತ್ಪತ್ತಿಯಾಗುವದಿಲ್ಲ. ಇಲ್ಲದ್ದೂ ಉತ್ಪತ್ತಿಯಾಗುವದಿಲ್ಲ. ಕಿಂತು; ಉತ್ಪನ್ನವಾಗಲಿಕ್ಕೆ ಯೋಗ್ಯವಾದದ್ದೇ ಉತ್ಪನ್ನವಾಗುತ್ತದೆ. ಅದು ಮಾಯಿಕವಾಗಿದೆ.

ಈ ಕಾರ್ಯವು ಸತ್ಯವೋ? ಅಸತ್ಯವೋ? ಸತ್ಯವೆಂದು ಹೇಳಿದರೆ, ಏಕಮೇವಾದ್ವಿತೀಯಮೆಂಬ ಶ್ರುತಿಗೆ ವಿರೋಧವಾಗುತ್ತದೆ. ಮತ್ತು ಉಪಪತ್ತಿಯೂ ಆಗುವದಿಲ್ಲ.

ಹಾಗು ಈ ಕಾರ್ಯವು ಉತ್ಪತ್ತಿ ಪೂರ್ವದಲ್ಲಿ ಸತ್ತಾಗಿತ್ತೋ? ಅಥವಾ ಅಸತ್ತಾಗಿತ್ತೋ? ಅಸತ್ತಾಗಿತ್ತೆಂದು ಹೇಳಿದರೆ; ಶಶವಿಷಾಣವಾದರೂ ಕಾರಣ ವ್ಯಾಪಾರದಿಂದ ಉತ್ಪನ್ನವಾಗಬೇಕಾಯಿತು. ಯಾಕಂದರೆ, ಅದರಲ್ಲಿಯೂ ಅಸತ್ತು ಸಮಾನವಾಗಿರುವದರಿಂದ; ಸತ್ತಾಗಿರುವದೆಂದು ಹೇಳಿದರೆ, ಕಾರಣ ವ್ಯಾಪಾರಕ್ಕಿಂತಲೂ ಪೂರ್ವದಲ್ಲಿರುವದರಿಂದ ಕಾರ್ಯತ್ವವು ವ್ಯಾಘಾತವಾಗುವದು. ವ್ಯಾಪಾರವು ವೈಯರ್ಥ್ಯವಾಗುವದು. ಇದ್ದ ಕಾರ್ಯವೇ ಕಾರಣ ವ್ಯಾಪಾರದಿಂದ ಅಭಿವ್ಯಕ್ತಿ ಮಾತ್ರವಾಗುತ್ತದೆಂದು ಹೇಳದರೆ, ಅದೂ ಆಗುವದಿಲ್ಲ. ಯಾಕಂದರೆ, ಅಲ್ಲಿಯಾದರೂ ಸತ್ವ, ಅಸತ್ವ, ವಿಕಲ್ಪ, ಗ್ರಾಸರೂಪ ತ್ರಾಸವು ಇರೋಣದರಿಂದ; ಹಾಗಾದರೆ, ಸದಸದ್ವಿಲಕ್ಷಣ ಅನಿರ್ವಚನೀಯವಾದ ಕಾರ್ಯವುಂಟೆಂದು ಹೇಳಿದರೆ; ಹೀಗೆ ಒಡಂಬಟ್ಟರೆ, ಕಾರ್ಯಾನುರೂಪವಾಗಿ ಅನಾದಿ ಅನಿರ್ವಚನೀಯವಾದ ಅಜ್ಞಾನವೇ ಕಾರಣವೆಂಬುವದು ಉಚಿತವಾಗಿರುತ್ತದೆ. ಸತ್ಯವು ಅಸತ್ಯಕ್ಕೆ ಕಾರಣವಾಗಲಾರದು. ಲೋಕದಲ್ಲಿಯೂ ಹೀಗೆ ಕಂಡುಬರುತ್ತದೆ. ಕಾರ್ಯವೈಚಿತ್ರ ಅನುಪಪತ್ತಿಯೂ ಆಗುವದಿಲ್ಲ. ವಿಚಿತ್ರಶಕ್ತಿಯುಳ್ಳ ಅಜ್ಞಾನವೇ ಕಲ್ಪನೆಯನ್ನು ಮಾಡುತ್ತದೆ. ಅದರಿಂದಲೇ ಪೂರ್ವಸಾಧನಗಳಾದ ಕರ್ಮಕಾಂಡ ಉಪಾಸನಾಕಾಂಡಗಳು ಪ್ರಾಮಾಣ್ಯಗಳಾಗುತ್ತವೆ. ಅವುಗಳಾದರೂ ಅಂತಃಕರಣ ಶುದ್ಧಿದ್ವಾರದಿಂದಾಗಲಿ ಪ್ರವೃತ್ತಿದ್ವಾರದಿಂದಾಗಲಿ ಬ್ರಹ್ಮದಲ್ಲಿಯೇ ತಾತ್ಪರ್ಯವುಳ್ಳವುಗಳಾಗಿರುತ್ತವೆ. ಆದ್ದರಿಂದ ಭಾವಗಳಿಗೆ ಅವಿದ್ಯೆ ಕಾರಣವಾಗಿರುವದು ಯೋಗ್ಯವದೆ. ಆದ್ದರಿಂದ ಅವಿದ್ಯಾ ಕಲ್ಪಿತ ಪ್ರಪಂಚಕ್ಕೆ ಪ್ರತೀತಿ ಸಮಕಾಲವೇ ಸತ್ವ ಅಂದರೆ, ಸ್ಥಿತಿಯಾಗಿರುವದು ಒಳ್ಳೇದಾಗಿರುತ್ತದೆ. ರಜ್ಜುಸರ್ಪ, ಶುಕ್ತಿರಜತ, ಗಂಧರ್ವನಗರ, ಸ್ವಪ್ನಪ್ರಪಂಚ, ಮೊದಲಾದವುಗಳಲ್ಲಿಯೂ ಹೀಗೆ ಅನುಭವಕ್ಕೆ ಬರುತ್ತದೆ.

**ಶಿಷ್ಯಃ- ಪ್ರತೀತಿಮಾತ್ರಂ ಸತ್ವಂ ಚೇತ್ ಸತ್ವಂ ಪ್ರಾತೀತಿಕಂ ಮತಂ |**
**ಅವಿರೋಧಾತ್ ಮಮಾಪೀಷ್ಟಂ ತದ್ಭೇದೆ ವದ ಕಾ ಪ್ರಮಾ ||**

ಪ್ರತೀತಿ ಸಮಕಾಲವೇ ಜಗತ್ತಿನ ಸತ್ವವಿರುತ್ತದೆಂಬುದು ಅಂಗೀಕಾರವಿರುತ್ತದೆ. ಆದರೆ ಜ್ಞಾನದ ಸತ್ವವು ಒಂದು ಬೇರೆ, ಜ್ಞೇಯರೂಪ ಜಗತ್ತಿನ ಸತ್ವವೊಂದು ಬೇರೆ, ಹೀಗೆ ಎರಡು ಸತ್ವಗಳಿರುತ್ತವೆ. ಘಟಪ್ರತೀತಿ ಸಮಕಾಲದಲ್ಲಿರುವ ಪಟಕ್ಕೆ ಘಟಕ್ಕಿಂತಲೂ ಬೇರೆಯಾದ ಒಂದು ಸತ್ವವುಂಟು. ಅಥವಾ ಒಂದೇ ಕಾಲದಲ್ಲಿ ಉತ್ಪತ್ತಿಯಾಗಿ ನಾಶವಾಗುವಂಥಾ ಘಟಪಟಗಳು ಭೇದವಾಗಿರೋಣದರಿಂದ ಒಂದೇ ಸತ್ವವಿಲ್ಲ. ಇದರಂತೆ, ಜ್ಞಾನ ಜ್ಞೇಯಗಳು ಭಿನ್ನವಾಗಿರೋಣದರಿಂದ ಸತ್ವವು ಒಂದೇ ಆಗಿಲ್ಲ. ಕಿಂತು ಜ್ಞಾನಕ್ಕೆ ಒಂದು ಸತ್ವ ಬೇರೆ; ಜ್ಞೇಯಕ್ಕೆ ಒಂದು ಸತ್ವ ಬೇರೆ; ಹೀಗೆ ಎರಡು ಸತ್ವಗಳುಂಟು. ಆದ್ದರಿಂದ ಜ್ಞಾನವೇ ಜ್ಞೇಯವಾಗಿದೆ. ದೃಷ್ಟಿಯೇ ಸೃಷ್ಟಿಯಾಗಿದೆಯೆಂಬುದು ಯೋಗ್ಯವಲ್ಲ.

**ಗುರು:-** ಜಗತ್ತು ಪ್ರತೀತಿ ಸಮಕಾಲದಲ್ಲಿ ತೋರುತ್ತದೆಂಬುದರ ಅರ್ಥ ವೇನು. ಪ್ರತೀತಿಯೋ ಸತ್ವವೋ? ಅಥವಾ ಪ್ರತೀತಿ ವ್ಯತಿರಿಕ್ತವಾಗಿ ಜಗತ್ತಿಗೆ ಬೇರೊಂದು ಸತ್ವವುಂಟೋ? ಬೇರೆ ಉಂಟೆಂದು ಹೇಳಿದರೆ; ಉಂಟೆಂದು ಹೇಳುವ ದಕ್ಕೆ ಪ್ರಮಾಣವುಂಟೋ ಇಲ್ಲವೋ? ಉಂಟೆಂದು ಹೇಳಿದರೆ, ಪ್ರತ್ಯಕ್ಷವೋ? ಅನುಮಾನವೋ? ಆಗಮವೋ? ಅರ್ಥಾಪತ್ತಿಯೋ? ಯಾವದುಂಟು ಹೇಳು.

ಪ್ರತ್ಯಕ್ಷ ಪ್ರಮಾಣವೆಂದು ಹೇಳಿದರೆ; ಇದು ಘಟವೆಂಬುವದು ಪ್ರತ್ಯಕ್ಷವಾಗಿ ರುತ್ತದೆ. ಆ ಪ್ರತ್ಯಕ್ಷವು ಜ್ಞಾನರೂಪವಾಗಿರುವ ತನಗಿಂತಲೂ ಭಿನ್ನವಾದ ಘಟ ರೂಪ ಸಂಬಂಧಿ ಭೇದವನ್ನು ವಿಷಯ ಮಾಡುತ್ತದೆಯೋ? ಅಥವಾ ಯಾವದಾದ ರೊಂದು ವಿಷಯದ ಜ್ಞಾನದಿಂದ ಭಿನ್ನವಾದ ಘಟ ಸಂಬಂಧಿ ಭೇದವನ್ನು ವಿಷಯ ಮಾಡುತ್ತದೆಯೋ? ಪ್ರತ್ಯಕ್ಷವು ಪ್ರತಿಯೋಗಿಯಾದ ತನ್ನ ಸಂಬಂಧ ವಿಷಯ ಧರ್ಮಿ ಸಂಬಂಧ ಭೇದವನ್ನು ತಾನೇ ಗ್ರಹಣಮಾಡುತ್ತದೆಂದು ಹೇಳಿದರೆ; ಆ ಪ್ರತ್ಯಕ್ಷವು ಸ್ವಪ್ರಕಾಶವೋ? ಪರಪ್ರಕಾಶವೋ? ಸ್ವಪ್ರಕಾಶವೆಂದು ಹೇಳಿದರೆ; ಪ್ರತ್ಯಕ್ಷವು ತಾನು ವಿಷಯ ವಿಶೇಷಣತ್ವರೂಪದಿಂದ ಭೇದವಾಗಿ ತೋರಿದರೂ, ವಿಶಿಷ್ಟ ಜ್ಞಾನವು ವಿಶೇಷಣ ಜ್ಞಾನಜನ್ಯತ್ವದಿಂದಾಗುವದೆಂಬ ಪಕ್ಷದಲ್ಲಿ ಪ್ರತ್ಯಕ್ಷವು ತನ್ನಿಂದಲೇ ಭೇದ ಲಕ್ಷಣ ವಿಶೇಷಣ ವಿಷಯದಿಂದ ತಾನೆಯುತ್ಪತ್ತಿಯಾಗುವ ದೆಂದು ಹೇಳಿದರೆ; ಆತ್ಮಾಶ್ರಯ ದೋಷವು ಬರುತ್ತದೆ. ತನ್ನ ಉತ್ಪತ್ತಿಯಲ್ಲಿ ತಾನೇ ಕಾರಣವಾಗುವದರಿಂದ * ಆತ್ಮಾಶ್ರಯ ದೋಷವು ಬರುತ್ತದೆ.

ಬಳಿಕ ವಿಶೇಷ್ಯತ್ವದಿಂದ ಭೇದ ತೋರುತ್ತದೆಂದು ಹೇಳಿದರೂ; ಅಂದರೆ, ವಿಶೇಷಣ ವಿಶೇಷ್ಯಗಳಿಗೆ ಇಂದ್ರಿಯ ಸಂಬಂಧ ಮಾತ್ರದಿಂದ ವಿಶಿಷ್ಟ ಜ್ಞಾನ ವಾಗುವದೆಂಬ ಪಕ್ಷಕ್ಕೆ, ಜ್ಞಾನೋತ್ಪತ್ತಿಗಿಂತಲೂ ಪೂರ್ವದಲ್ಲಿಯೇ ಭೇದವಿರುವ ದೆಂದು ಹೇಳಬೇಕಾಗುವದು. ಅಂದಮೇಲೆ, ಅಂಥಾ ಜ್ಞಾನಕ್ಕೆ ಆ ಭೇದವು ಹೇಗೆ ವಿಷಯವಾದೀತು. ಯಾಕಂದರೆ ತನ್ನ ಉತ್ಪತ್ತಿಪೂರ್ವ ತಾನೇ ಇಲ್ಲದ್ದರಿಂದ;

**ಶಿಷ್ಯ:-** ವಿಶಿಷ್ಟಜ್ಞಾನೋತ್ಪತ್ತಿ ಪೂರ್ವದಲ್ಲಿರುವ ಭೇದವು ಬೇರೊಂದು ಜ್ಞಾನದಿಂದ ತಿಳಿಸಿಕೊಳ್ಳುತ್ತದೆ. ಆದ್ದರಿಂದ ಆತ್ಮಾಶ್ರಯಾದಿ ಯಾವ ದೋಷವೂ ಬರುವದಿಲ್ಲ.

---

* ಇಲ್ಲಿ ಪ್ರತ್ಯಕ್ಷವು ವಿಶೇಷಣವಾಗಿದೆ. ಘಟವು ವಿಶೇಷ್ಯವಾಗಿದೆ. ಪ್ರತ್ಯಕ್ಷ ಪ್ರಮಾಣದ ಸಂಬಂಧಿ ಭೇದವು ಘಟದಲ್ಲಿ ತೋರಿದೆ. ಆ ಭೇದವು ಉಕ್ತ ವಿಶೇಷಣ ವಿಶೇಷ್ಯ ಸಂಬಂಧಿ ವಿಶಿಷ್ಟ ಜ್ಞಾನರೂಪಾಗಿರುವದು. ವಿಶೇಷಣ ಜನ್ಯಜ್ಞಾನದಿಂದ ವಿಶಿಷ್ಟ ಜ್ಞಾನವಾಗುವ ದೆಂದು ಹೇಳಿದರೆ, ಭೇದ ಗ್ರಾಹಕ ಪ್ರತ್ಯಕ್ಷದಿಂದ ಭೇದದುತ್ಪತ್ತಿಯನ್ನು ಹೇಳಿದ್ದರಿಂದ ಆತ್ಮಾಶ್ರಯ ದೋಷವು ಬಂದಿರುತ್ತದೆ.

**ಗುರು;**- ಆ ಜ್ಞಾನವಾದರೂ ಸ್ವಯಂಪ್ರಕಾಶವಾಗಿರುವದರಿಂದಲೇ ಅವಿಷಯು ವಾಗಿರುವದು. ಅಂದಮೇಲೆ ಅದರ ಪ್ರತಿಯೋಗಿ ಸಂಬಂಧವಾದ ಭೇದವಾದರೂ ವಿಷಯುವಾಗುವದಿಲ್ಲ.

**ಶಿಷ್ಯ:**- ಹಾಗಾದರೆ ಆ ಜ್ಞಾನವು ಸ್ವಯಂಪ್ರಕಾಶವೆಂದು ನಾನು ಹೇಳುವ ದಿಲ್ಲ. ಕಿಂತು; ಪರಪ್ರಕಾಶವೆಂದು ಹೇಳುತ್ತೇನೆ. ಅದರಿಂದ ಉಕ್ತದೋಷ ಬರುವದಿಲ್ಲ. ಮತ್ತು ಪರಪ್ರಕಾಶರೂಪ ಜ್ಞಾನಕ್ಕೆ ಭೇದವು ವಿಷಯುವಾಗುತ್ತದೆ.

**ಗುರು;**- ವರ್ತಮಾನಕಾಲದಲ್ಲಿ ಇಲ್ಲದ ಜ್ಞಾನಕ್ಕೆ ಪರಪ್ರಕಾಶವೆಂದು ಹೇಳಿ ದರೆ; ವರ್ತಮಾನ ಕಾಲೋಪಾಧಿಯಿಂದ ಕೂಡಿದ ಜ್ಞಾನವೇ ಸ್ವಯಂಪ್ರಕಾಶ ವೆಂದು ಹೇಳಬೇಕಾಯಿತು. ಇದನ್ನು ಅಂಗೀಕರಿಸಿದರೆ, ಭೂತ ಮತ್ತು ಭಾವೀ ಈ ಕಾಲಗಳಲ್ಲಿರುವ ಜ್ಞಾನವಾದರೂ ಯಾಕೆ ಸ್ವಯಂಪ್ರಕಾಶವಾಗುವದಿಲ್ಲ? ಯಾಕಂದರೆ, ಸ್ವಯಂಪ್ರಕಾಶರೂಪವಾಗಿರುವ ಜ್ಞಾನದ ಸ್ವಭಾವವು ಯಾವ ಕಾಲಕ್ಕೂ ಕೆಡಲಾರದು. ಹೇಗಂದರೆ, ಘಟವು ಯಾವ ಕಾಲಕ್ಕೂ ಅಘಟವಾಗ ಲಾರದು. ಇದರಂತೆ;

**ಶಿಷ್ಯ:**- ಇಂದ್ರಿಯು ಸಂಯೋಗ ಸಂಬಂಧವುಳ್ಳ ಭೇದವು ತನ್ನ ಸತ್ತಾ ಮಾತ್ರದಿಂದಲೇ ತನ್ನ ವಿಷಯುಕ ಪ್ರತ್ಯಕ್ಷ ಜ್ಞಾನವನ್ನುಂಟು ಮಾಡುತ್ತದೆಂದು ಹೇಳುತ್ತೇನೆ. ವಿಶಿಷ್ಟಜ್ಞಾನರೂಪ ಭೇದವನ್ನು ನಾನು ಸ್ವೀಕಾರ ಮಾಡುವದಿಲ್ಲ. ಅದರಿಂದ ಯಾವ ದೋಷವೂ ಇಲ್ಲ.

**ಗುರು:**- ಪ್ರತ್ಯಕ್ಷ ವಿಷಯುದಲ್ಲಿ ಸಂಬಂಧವು ತೋರುತ್ತದೆ. ಭೇದ ಮತ್ತು ಇಂದ್ರಿಯು ಇವುಗಳ ಸಂಬಂಧವು ತೋರಬೇಕಾದರೆ, ವಿಶೇಷಣ ವಿಶೇಷ್ಯಗಳ ಜ್ಞಾನವಿಲ್ಲದೆ ತೋರಲಾರದು. ಈ ರೀತಿ ಜ್ಞಾನವಿಲ್ಲದೆ ಭೇದವು ಸ್ವರೂಪ ಸತ್ತೆಯಿಂದ ಇದ್ದು ತನ್ನ ಜ್ಞಾನವನ್ನುಂಟು ಮಾಡುತ್ತದೆಂದು ಹೇಳುವದು ಪ್ರಮಾಣ ಶೂನ್ಯವಾದ ವಿಷಯುವಾಗಿದೆ. ಆದ್ದರಿಂದ ಆ ಭೇದಕ್ಕೆ ಸ್ವತಃ ಸತ್ತೆ ಯಾದರೂ ಇಲ್ಲ. ಯಾಕಂದರೆ, ವಿಶೇಷಣ ವಿಶೇಷ್ಯಗಳ ಸಂಬಂಧವು ಇದ್ದದ್ದಕ್ಕೆ ಆಗುತ್ತದೆ. ಇಲ್ಲದ್ದಕ್ಕೆ ಆಗುವದಿಲ್ಲ. ಆದ್ದರಿಂದ ಭೇದದ ಸತ್ವವು ಮೊದಲು ಇರಲಿಕ್ಕೆಬೇಕು. ಅಂದರೆ, ಭೇದವನ್ನು ವಿಷಯು ಮಾಡುವಂಥಾ ಪ್ರತ್ಯಕ್ಷ ಪ್ರಮಾಣಕ್ಕಿಂತಲೂ ಮೊದಲೇ ಭೇದದ ಸತ್ತೆಯನ್ನು ಗ್ರಹಿಸುವಂಥಾ ಪ್ರಮಾಣವು ಬೇಕಾಯಿತು. ಅದು ಯಾವದೂ ಇಲ್ಲ. ಪ್ರಮಾಣವೇ ಇಲ್ಲದ ಮೇಲೆ ಭೇದದ ಸತ್ತೆಯಾದರೂ ಇಲ್ಲ. ಆದರೆ ಭೇದವು ಅಸತ್ತಾಗಿದೆಯೆಂಬ ಅರ್ಥವಾಯಿತು. ತಾನೇ ಇಲ್ಲದ ಮೇಲೆ ತನ್ನ ಜ್ಞಾನವನ್ನಾದರೂ ಏನು ಉಂಟುಮಾಡುವದು.

ಅಂದರೆ ಪ್ರತ್ಯಕ್ಷ ಪ್ರಮಾಣವು ಸ್ವಪ್ರಕಾಶವಾಗಿದ್ದು, ಇದು ಘಟವೆಂಬಲ್ಲಿ ತನ್ನ ಸಂಬಂಧವಾದ ಭೇದವನ್ನು ತಾನೇ ಗ್ರಹಣ ಮಾಡುತ್ತದೆಂಬ ಪಕ್ಷವು ಯೋಗ್ಯವಲ್ಲ.

ಶಿಷ್ಯ:- ಅದೇ ಪ್ರತ್ಯಕ್ಷವು ಪರಪ್ರಕಾಶವುಳ್ಳದ್ದಾಗಿ ತನ್ನ ಹಾಗು ವಿಷಯ ಸಂಬಂಧದಿಂದ ಭೇದವನ್ನು ತಾನೇ ಗ್ರಹಣ ಮಾಡಲಿ. ಇದರಲ್ಲಿ ಯಾವ ದೋಷ ಗಳೂ ಬರುವದಿಲ್ಲ. ಯಾಕಂದರೆ, ಈ ಪ್ರತಿಯೋಗಿ ಸಂಬಂಧವಾದ ಭೇದವು ಈ ವಿಷಯದಲ್ಲಿರುತ್ತದೆಂದು ಆ ಭೇದವನ್ನು ಗ್ರಹಣಮಾಡುವಂಥಾದ್ದು ಪರಪ್ರಕಾಶ ಪ್ರತ್ಯಕ್ಷವೆಂದು ಹೇಳಿದ್ದೇನೆ. ಆದ್ದರಿಂದ ಯಾವ ದೋಷವೂ ಇಲ್ಲ.

**ಗುರು:**- ಆ ಪರಪ್ರಕಾಶ ಪ್ರತ್ಯಕ್ಷವಾದರೂ ಬೇರ್ಪಡಿಸಲ್ಪಟ್ಟ ಪ್ರತಿ ಯೋಗ್ಯಾದಿ ಗ್ರಹಣ ಪೂರ್ವಕ ಭೇದವನ್ನು ಗ್ರಹಿಸುತ್ತದೆಯೊ? ಇಲ್ಲವೋ? ಎಂದು ವಿವೇಚನವನ್ನು ಮಾಡತಕ್ಕದ್ದು. ಇಲ್ಲೆಂದು ಹೇಳಿದರೆ, ಆ ಪ್ರತ್ಯಕ್ಷವು ಭೇದವನ್ನು ಹೇಗೆ ವಿಷಯಮಾಡೀತು. ಯಾಕಂದರೆ; ಧರ್ಮಿ ಪ್ರತಿಯೋಗಿಗಳಿಂದ ರಹಿತವಾದ ಭೇದವನ್ನು ಯಾವದೂ ವಿಷಯ ಮಾಡಲಾರದು. ಯಾಕಂದರೆ; ಇದು ನಮ್ಮಿಂದ ಭಿನ್ನವಾಗಿದೆ ಎಂದು ಅನುಭವರೂಪವಾಗಿದೆ. ಅನುಭವವನ್ನು ನಿರಾಕರಿಸುವದು ಯೋಗ್ಯವಲ್ಲ.

ಬೇರ್ಪಡಿಸಲ್ಪಟ್ಟ ಪ್ರತಿಯೋಗ್ಯಾದಿ ಗ್ರಹಣ ಪೂರ್ವಕ ಭೇದವನ್ನು ಗ್ರಹಣ ಮಾಡುತ್ತದೆಂದು ಹೇಳಿದರೆ; ಗ್ರಾಹಕರೂಪ ಬೇರೊಂದು ಪ್ರತ್ಯಕ್ಷವನ್ನು ಗ್ರಹಣ ಮಾಡುವದರಿಂದ ಅನವಸ್ಥಾ ದೋಷವು ಬರುತ್ತದೆ. ಹೇಗಂದರೆ, ಪರ ಪ್ರಕಾಶರೂಪ ಪ್ರತ್ಯಕ್ಷವು ಪ್ರತಿಯೋಗಿ ವಿಷಯದಿಂದ ವಿಶೇಷಣವಾಗಿ ಬೇರ್ಪಡಿ ಸಲ್ಪಟ್ಟದೆ. ಹೀಗಿದ್ದು ಪುನಃ ತನ್ನ ಸಂಬಂಧಿ ಭೇದವನ್ನು ತಾನೇ ಗ್ರಹಣ ಮಾಡುತ್ತದೆಂದು ಹೇಳಿದರೆ; ಆತ್ಮಾಶ್ರಯ ದೋಷವು ಬರುತ್ತದೆ. ಈ ದೋಷ ನಿವಾರಣಾರ್ಥಕ್ಕಾಗಿ ಗ್ರಾಹಕ ಬೇರೆ ಪ್ರತ್ಯಕ್ಷವನ್ನು ಸ್ವೀಕಾರ ಮಾಡಿದರೆ, ಅನವಸ್ಥಾ ದೋಷ ಬರುತ್ತದೆ.

ಆದ್ದರಿಂದ ವಸ್ತು ಮಾತ್ರ ತಿಳಿಯತಕ್ಕದ್ದು **ಪ್ರತ್ಯಕ್ಷವಲ್ಲದೆ,** ಭೇದವಾರ್ತೆ ಯನ್ನು ಕೂಡಾ ತಿಳಿಯುವದಿಲ್ಲೆಂಬುದೇ ಸಿದ್ಧವು.

ಶಿಷ್ಯ:- ಈ ರೀತಿ ಜ್ಞಾನ ಜ್ಞೇಯುಗಳಿಗೆ ಭೇದವು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧಿಸದಿದ್ದರೂ, ಅನುಮಾನ ಪ್ರಮಾಣದಿಂದ ಸಿದ್ಧಿಸುತ್ತದೆ. † ವಿವಾದಾಸ್ಪದ ವಾದ ವಿಷಯವು ತನ್ನ ಜ್ಞಾನದಿಂದ ಭಿನ್ನವಾಗಿರುತ್ತದೆ **(ಪ್ರತಿಜ್ಞಾ)** ಯಾಕಂದರೆ

---

† ಘಟ ವಿಷಯುವು ಘಟಜ್ಞಾನದಿಂಗ ಭೇದವಾಗಿರುತ್ತದೆಂಬ ವಿಷಯುವು. ಅರ್ಥಾತ್ ಜ್ಞಾನಕ್ಕೂ ಜ್ಞೇಯಕ್ಕೂ ಭಿನ್ನವುಂಟೆಂಬುದು.

(೧) ಅದಕ್ಕೆ ವಿರುದ್ಧವಾದ ಧರ್ಮಕ್ಕೆ ಆಶ್ರಯವಾಗಿರುವದರಿಂದ (ಹೇತು) ಯಾವದು ಯಾವ ವಿರುದ್ಧ ಧರ್ಮಕ್ಕೆ ಆಶ್ರಯವಾಗಿರುವದೋ ಅದು ಅದರಿಂದ ಭಿನ್ನವಾಗಿರುತ್ತದೆ. ಹೇಗಂದರೆ- ಘಟದಿಂದ ಪಟವು ಹೇಗೆ ಭಿನ್ನವಾಗಿರುವದೋ, ಹಾಗೆ ಇದು ಅದರಿಂದ ಭಿನ್ನವಾಗಿರುವದು (ದೃಷ್ಟಾಂತ) ಈ ರೀತಿ ಅನುಮಾನ ಪ್ರಮಾಣದಿಂದ ಭೇದವು ತೋರುತ್ತದೆ.

**ಗುರು:**- ಹಾಗಲ್ಲ. ವಿರೋಧವು ವಿರುದ್ಧ ಧರ್ಮಕ್ಕೆ ಆಶ್ರಯವಾಗಿರುವದರಿಂದ ಇರುವದು ಯೋಗ್ಯವೇ. ಆದರೆ, ಭೇದ ಜ್ಞಾನವಾದರೆ, ವಿರೋಧದ ಜ್ಞಾನವಾಗುವದು. ಭೇದಜ್ಞಾನವಾಗದಿದ್ದರೆ ವಿರೋಧದ ಜ್ಞಾನವಾಗುವದಿಲ್ಲ. ಸಾಧ್ಯವಾದ ಜ್ಞಾನ ಜ್ಞೇಯಗಳ ಭೇದವೇ ಸಿದ್ಧಿಸಿದ್ದರಿಂದ ವಿರೋಧವು ಸಿದ್ಧಿಸಲಿಲ್ಲ. ವಿರೋಧವಿಲ್ಲದಮೇಲೆ, ವಿರುದ್ಧ ಧರ್ಮಕ್ಕೆ ಆಶ್ರಯವಾಗಿರುವದು ಸಿದ್ಧಿಸುವದಿಲ್ಲ. ಹೀಗೆ (೨) ಸಾಧ್ಯವು ಅಪ್ರಸಿದ್ಧಿಯಾದ್ದರಿಂದ (೩) ವ್ಯಾಪ್ತಿಯೂ ಅಸಿದ್ಧಿಯಾಯಿತು. ಆದ್ದರಿಂದ ಘಟಪಟಗಳ ಭೇದವು ಯಾವ ಪ್ರಮಾಣದಿಂದಲೂ ಸಿದ್ಧವಾಗಲಿಲ್ಲ. ಅಂದಮೇಲೆ, ಯಾವುದರಿಂದ ಸಾಧ್ಯವು ಸಿದ್ಧವಾದೀತು? ಆಗಲಾರದು. ಜ್ಞಾನ ಜ್ಞೇಯಗಳ ಭೇದವು ಪ್ರತ್ಯಕ್ಷದಿಂದ ಸಿದ್ಧಿಸದಿರಲು; ಅನುಮಾನ ಪ್ರಮಾಣವನ್ನು ಸ್ವೀಕರಿಸಿದರೂ ಅನವಸ್ಥಾದಿ ದೋಷಗಳು ಪುನಃ ಬರುತ್ತವೆ. ಆದ್ದರಿಂದ **ಅನುಮಾನಕ್ಕೂ** ಭೇದವು ವಿಷಯವಾಗಲಿಲ್ಲ.

**ಆಗಮ** ಪ್ರಮಾಣವಾದರೂ ಅಭೇದ ಮಾತ್ರದಲ್ಲಿ ತಾತ್ಪರ್ಯದಿಂದ ಪರ್ಯವಸಾನವುಳ್ಳದ್ದರಿಂದ; ಭೇದವನ್ನು ಬೋಧಿಸುತ್ತದೆಂದು ಶಂಕೆಯನ್ನು ಮಾಡುವದು ಕೂಡಾ **ಅಸಂಗತ**ವಾಗಿದೆ.

**ಶಿಷ್ಯ:**- 'ಯತೋವಾ ಇಮಾನಿ ಭೂತಾನಿ' ಎಂಬ ಆಗಮವಾಕ್ಯವು ಬ್ರಹ್ಮದಿಂದ ಸೃಷ್ಟಿಯನ್ನು ಪ್ರತಿಪಾದನ ಮಾಡುತ್ತದೆ. ಆದರಿಂದ ಉತ್ಪನ್ನವಾದ ಕಾರ್ಯಪ್ರಪಂಚವು ಕಾರಣವಾದ ಬ್ರಹ್ಮಕ್ಕಿಂತಲೂ ಭೇದವಾಗಿರುವದೆಂದು ಹೇಳುತ್ತದೆ. ಅಭೇದವಾಗಿದ್ದರೆ, ಬ್ರಹ್ಮದಿಂದ ಜಗತ್ತಿನ ಉತ್ಪತ್ತಿಯೇ ಆಗುತ್ತಿದ್ದಿಲ್ಲ. ಆದ್ದರಿಂದ ಭೇದ ವಿಷಯದಲ್ಲಿ ಆಗಮಪ್ರಮಾಣ ಉಂಟು!

**ಗುರು:**- ಹಾಗಲ್ಲ, ಸಕಲ ಸೃಷ್ಟಿಪ್ರತಿಪಾದನ ಮಾಡುವಂಥಾ ಶ್ರುತಿವಾಕ್ಯಗಳು, ಪ್ರಧಾನ, ಪರಮಾಣುಗಳೇ ಕಾರಣಗಳೆಂದು ಹೇಳುವ ಸಾಂಖ್ಯ ನೈಯಾ

(೧) ಜ್ಞಾನಕ್ಕೆ ವಿರುದ್ಧವಾದ ಧರ್ಮಗಳು ಜಡತ್ವ ಅಪ್ರಕಾಶತ್ವಾದಿ ಧರ್ಮಗಳು ಇವುಗಳಿಗೆ ಆಶ್ರಯವಾಗಿರೋಣವು.

(೨) ಜ್ಞಾನದಿಂದ ಜ್ಞೇಯವು ಭಿನ್ನವಾಗಿರುವದೆಂಬುದು ಸಾಧ್ಯ.

(೩) ವಿರುದ್ಧ ಧರ್ಮಕ್ಕೆ ಆಶ್ರಯವಾಗಿರುವದೆಂಬುದೇ ವ್ಯಾಪ್ತಿಯು.

ಯಿಕ ಪರಮತರಿಂದ ಪರಿಕಲ್ಪಿಸಲ್ಪಟ್ಟ ಕಾರಣಗಳನ್ನು ನಿರಾಕರಿಸುತ್ತಾ: ಮೃದ್ಘಟಾದಿಗಳಲ್ಲಿ ಕಾರಣಕ್ಕಿಂತಲೂ ಕಾರ್ಯವು ಭೇದವಾಗಿ ನಿರೂಪಣ ಮಾಡಲಿಕ್ಕೆ ಬಾರದಂತೆ, ಬ್ರಹ್ಮರೂಪ ಕಾರಣದಿಂದ ಉತ್ಪನ್ನವಾದ ಕಾರ್ಯರೂಪ ಜಗತ್ತು, ಭೇದವಾಗಿ ನಿರೂಪಿಸಲಿಕ್ಕೆ ಬಾರದ್ದರಿಂದ, ಅದ್ವಿತೀಯ ಬ್ರಹ್ಮವನ್ನು ತಿಳಿಸುವದರಲ್ಲಿ § ತಾತ್ಪರ್ಯವುಳ್ಳವುಗಳಾಗಿವೆ. ಸೃಷ್ಟಿಪರ ಶ್ರುತಿವಾಕ್ಯಗಳು ಅಭೇದ ಪರವಲ್ಲ. ಭೇದಪರಗಳೆಂದು ಹೇಳಿದರೆ, 'ನೇಹನಾನಾಸ್ತಿ ಕಿಂಚನ' ಇವೇ ಮೊದಲಾದ ಶ್ರುತಿಗಳು ಭೇದವನ್ನು ನಿರಾಕರಿಸುತ್ತವೆ. ಇವು ಅನರ್ಥಗಳಾಗಬೇಕಾಯಿತು.

ಮತ್ತು ಸೃಷ್ಟಿ ವಾಕ್ಯಗಳು ಸಾಕ್ಷಾತ್ ಭೇದವನ್ನು ಪ್ರತಿಪಾದನ ಮಾಡುವದಿಲ್ಲ; ಯಾಕಂದರೆ ಭೇದವನ್ನು ಹೇಳುವಂಥಾ ಪದವೇ ಇಲ್ಲ. ಪದವಿಲ್ಲದ್ದರಿಂದ ಪದಾರ್ಥವಿಲ್ಲ. ಪದಾರ್ಥವಿಲ್ಲದ್ದರಿಂದ ವಾಕ್ಯಾರ್ಥವಿಲ್ಲ. 'ವಿಷಂಭುಂಕ್ಷ್ವ' ಎಂಬ ವಾಕ್ಯದಂತೆ, ಪದಾರ್ಥಕ್ಕಾದರೂ ಸಂಬಂಧದಿಂದಾಗಲಿ ಧರ್ಮಪರತ್ವದಿಂದಾಗಲಿ ಭೇದಪರ ಅರ್ಥವನ್ನು ಕಲ್ಪನೆ ಮಾಡಿದರೆ, ಭೇದವನ್ನು ನಿಷೇಧ ಮಾಡತಕ್ಕ ಶ್ರುತಿಗಳಿಗೆ ವಿರೋಧವಾಗುವದು. ಆದ್ದರಿಂದ ಅನ್ಯಾರ್ಥವನ್ನು ಕಲ್ಪನೆ ಮಾಡಕೂಡದು.

**ಶಿಷ್ಯ:**- ಜ್ಞಾನವು ತನಗಿಂತ ಭಿನ್ನವಾದ ಜ್ಞೇಯ ವ್ಯತಿರಿಕ್ತ ಸಂಭವಿಸಲಾರದು. ಅಂದರೆ, ಜ್ಞಾನವು ತನಗೆ ಭಿನ್ನವಾದ ಜ್ಞೇಯವನ್ನು ವಿಷಯ ಮಾಡುತ್ತದೆ. ಯಾಕಂದರೆ, ನಿರ್ವಿಷಯವಾದ ಜ್ಞಾನವು ಸಂಭವಿಸುವದಿಲ್ಲ. ಮತ್ತು ಎಲ್ಲಿಯೂ ಕಂಡಿಲ್ಲ. ಸವಿಷಯಾತ್ಮಕ ಜ್ಞಾನವೇ ತೋರುತ್ತದೆ. ಇಲ್ಲದಿದ್ದರೆ, ನಿಷ್ಪ್ರಕಾರಕ ನಿರ್ವಿಷಯ ಜ್ಞಾನವಿರಬೇಕಾದೀತು. ಯಾಕಂದರೆ, ಜ್ಞಾನದಲ್ಲಿ ವಿಷಯ ವ್ಯತಿರಿಕ್ತ ಬೇರೊಂದು ಪ್ರಕಾರವು ಇಲ್ಲವೇ ಇಲ್ಲ. ಆದ್ದರಿಂದ ಜ್ಞೇಯ ವ್ಯತಿರಿಕ್ತ ಜ್ಞಾನವಿಲ್ಲ. ಜ್ಞಾನವು ಭೇದದಿಂದ ಜ್ಞೇಯದೊಡನೆ ಕೂಡಿಕೊಂಡಿರುವದೆಂಬ ಭಾವವು. ಆದ್ದರಿಂದ ಅರ್ಥಾಪತ್ತಿ ಪ್ರಮಾಣದಿಂದ ಭೇದವು ಸಿದ್ಧಿಸುತ್ತದೆ.

**ಗುರು:**- ಜ್ಞೇಯ ವ್ಯತಿರಿಕ್ತ ಜ್ಞಾನವು ಉಪಪತ್ತಿಯಾಗುತ್ತದೆ. ಅನುಪಪತ್ತಿಯೇನೂ ಇಲ್ಲ. ಅಂದರೆ, ಅಸಂಭವವಿಲ್ಲ. ಕಿಂತು ಸಂಭವಿಸುತ್ತದೆಂಬ

---

§ ಇದೇ ಅಭಿಪ್ರಾಯದಿಂದ ಗ್ರಂಥಕರ್ತರು ಮಧ್ಯಮಾಧಿಕಾರಿಯನ್ನು ಕುರಿತು, ಚಿತ್ತಿನ ವಿವರ್ತವೇ ಜಗತ್ತೆಂದು ಹೇಳಿದ್ದಾರೆ. ಪರಮಾನುಭವಬೋಧೆಯಲ್ಲಿ 'ಬ್ರಹ್ಮದ ವಿವರ್ತವೆಂದೆನಿಸದು ಜಗವಿದು' ಎಂಬದಾಗಿ ಉತ್ತಮಾಧಿಕಾರಿಯನ್ನು ಕುರಿತು ವಿವರ್ತ ವಾದನ್ನಾದರೂ ನಿರಾಕರಿಸಿರುವರು. ಜಗತ್ತೇ ಇಲ್ಲೆಂದು ಹೇಳಿರುವರು. ಆದ್ದರಿಂದ ವಿರೋಧವಿಲ್ಲ.

ತಾತ್ಪರ್ಯವು. ಜ್ಞೇಯವ್ಯತಿರಿಕ್ತ ಜ್ಞಾನವು ಅನುಪಪತ್ತಿಯಾಗುವದು. ಅಂದರೆ ಜ್ಞಾನದ ಉತ್ಪತ್ತಿ ಅನುಪಪತ್ತಿಯೋ? ಸ್ಥಿತಿ ಅನುಪಪತ್ತಿಯೋ? † ಜ್ಞಪ್ತಿ ಅನುಪಪತ್ತಿಯೋ?

ಜ್ಞೇಯದ ವಿನಾ ಜ್ಞಾನದ ಉತ್ಪತ್ತಿಯೇ ಆಗುವದಿಲ್ಲೆಂದು ಹೇಳಿದರೆ; ಈ ಮಾತು ಸಂಭವಿಸುವದಿಲ್ಲ. ಯಾಕಂದರೆ, ಜ್ಞಾನವು ಸ್ವರೂಪತಃ ಉತ್ಪತ್ತಿ ಶೂನ್ಯ ವಾಗಿರುತ್ತದೆ. ವೃತ್ತಿ ಮತ್ತು ಆಭಾಸ ಇವೆರಡರಿಂದ ಜ್ಞಾನವು ಉತ್ಪನ್ನವಾದಾ ಗ್ಯಾದರೂ ವಿಷಯವನ್ನು ಮಾತ್ರ ಅಪೇಕ್ಷಿಸುವದಿಲ್ಲ. ಮತ್ತು ಜ್ಞಾನವು ಸರ್ವತ್ರ ವಿಷಯ ಜನ್ಯವಾಗಿರುವದೆಂಬ ನಿಯಮವಿಲ್ಲ. ಅನುಮಾನ ಜ್ಞಾನದಲ್ಲಿ ವ್ಯಭಿಚಾರ ದೋಷ ಬರುವದರಿಂದ, ಜ್ಞಾನವು ತಾನುತ್ಪತ್ತಿಯಲ್ಲಿ ಜ್ಞೇಯದ ಅಪೇಕ್ಷೆಯನ್ನು ಮಾಡುವದಿಲ್ಲ.

ಬಳಿಕ, ಜ್ಞೇಯದ ವಿನಾ ಜ್ಞಾನದ ಸ್ಥಿತಿಯೂ ಸಂಭವಿಸುವದಿಲ್ಲ. ಎಂಬುದು ಸುಳ್ಳಾಗಿರುತ್ತದೆ. ಯಾಕಂದರೆ, ಜ್ಞಾನವು ವಿಷಯವನ್ನು ಆಶ್ರಯಮಾಡಿ ಕೊಂಡಿಲ್ಲ. ಕಿಂತು ಪ್ರಮಾತನನ್ನು ಆಶ್ರಯಮಾಡಿಕೊಂಡಿರುತ್ತದೆ. ವಿಷಯ ವನ್ನೇ ಆಶ್ರಯ ಮಾಡಿರುತ್ತದೆಂದು ಹೇಳಿದರೆ; ವಿಷಯೀಯೆಂದು ಹೇಳಿ ಬಳಿಕ ವಿಷಯವೆಂದು ಕರೆದರೆ ವ್ಯಾಘಾತ ದೋಷ ಬರುವುದು. 'ಜ್ಞಾತೋಘಟಃ, ಎಂಬಲ್ಲಿ ಜ್ಞಾನವು ಜ್ಞೇಯರೂಪ ಘಟವನ್ನು ಆಶ್ರಯಮಾಡಿಕೊಂಡಂತೆ ತೋರಿ ಬಂದರೂ, 'ನಷ್ಟೋಘಟಃ, ಎಂಬಲ್ಲಿ ಜ್ಞಾನವು ಏನನ್ನು ಆಶ್ರಯ ಮಾಡಿ ಕೊಂಡಿರುವದು ಹೇಳು. ಏನೂ ಇಲ್ಲ ಆದ್ದರಿಂದ ಜ್ಞಾನದ ಸ್ಥಿತಿಯು ವಿಷಯ ವನ್ನು ಆಶ್ರಯಿಸಿ ಇಲ್ಲ.

**ಬಳಿಕ**, ಜ್ಞಾನವು ಜ್ಞೇಯದ ವಿನಾ ತಿಳಿಯಲಾರದೆಂಬುವದೂ ಸಂಭವಿ ಸುವದಿಲ್ಲ. ಯಾಕಂದರೆ; ಜ್ಞಾನವು ಸ್ವಯಂಪ್ರಕಾಶವಾಗೋಣದರಿಂದ ತನ್ನ ವ್ಯವಹಾರಾರ್ಥ ಬೇರೊಂದನ್ನು ಅಪೇಕ್ಷಿಸುವದಿಲ್ಲ. ಜ್ಞಾನವು ಸ್ವಯಂಪ್ರಕಾಶವಿಲ್ಲ. ಪರಪ್ರಕಾಶವಿರುವದರಿಂದ ಬೇರೊಂದು ಜ್ಞಾನವನ್ನು ಅಪೇಕ್ಷೆ ಮಾಡುತ್ತದೆಂದು ಹೇಳಿದರೆ, ಜ್ಞಾನವು ಬೇರೊಂದು, ಅದು ಮತ್ತೊಂದನ್ನು ಹೀಗೆ ಅಪೇಕ್ಷಿಸುತ್ತಾ ಹೋದರೆ, ಅನವಸ್ಥಾ ಪ್ರಸಂಗವು ಪ್ರಾಪ್ತವಾಗುತ್ತದೆ. ಜ್ಞಾನವೇ ಇಲ್ಲೆಂದು ಹೇಳಿದರೆ, ಜಗದಾಂಧ್ಯ ಪ್ರಸಂಗವು ಪ್ರಾಪ್ತವಾಗುವದು. ಆದ್ದರಿಂದ ಜ್ಞಾನವು ಪರಪ್ರಕಾಶವೆಂದು ಹೇಳಬಾರದು.

---

† ಜ್ಞಾನವು ಜ್ಞೇಯದ ವಿನಾ ತಿಳಿಯಲಾರದೆಂಬರ್ಥದಲ್ಲಿ ಜ್ಞಪ್ತಿ ಅನುಪಪತ್ತಿ ಶಬ್ದಪ್ರಯೋಗವಿರುವದು.

ಮತ್ತು ಅಜ್ಞಾತಮಾನವಾಗಿರುವ ಅಂದರೆ, ತಿಳಿಯದಿರುವಂಥಾ ಜ್ಞಾನವು. ಯಾವದಾದರೊಂದು ತನ್ನ ವಿಷಯವನ್ನು ತಿಳಿಯುತ್ತದೆಂಬಲ್ಲಿ ಪ್ರಮಾಣವಿಲ್ಲ. ಅಂದಮೇಲೆ; ನರಶೃಂಗದಂತೆ, ಜ್ಞಾನದ ಸ್ವರೂಪವೇ ಅಸಿದ್ಧಿಯಾಗಬೇಕಾಯಿತು. ಆದ್ದರಿಂದ ಜ್ಞಾನವು ಜಡ ಅಪ್ರಕಾಶಮಾನವಾಗಿರುವುದೆಂದು ಹೇಳಬಾರದು.

ಮತ್ತು ಜ್ಞಾನವು ಜ್ಞೇಯವನ್ನು ಅಪೇಕ್ಷೆ ಮಾಡುತ್ತದೆಂದು ನೀನು ಹೇಳುವದು ಸರಿಯಲ್ಲ. ಯಾಕಂದರೆ, ಜ್ಞಾನವು ತಾನೊಂದನ್ನು ತಿಳಿಯುವದರಲ್ಲಿ ಬೇರೊಂದು ಜ್ಞಾನವನ್ನು ಅಪೇಕ್ಷಿಸಬಹುದು. ಆದರೆ, ವಿಷಯವನ್ನು ಅಪೇಕ್ಷಿಸಲಾರದು. ವಿಷಯವೇ ಬೇಕಾದರೆ, ಜ್ಞಾನವನ್ನು ಅಪೇಕ್ಷಿಸಬಹುದು.

**ಶಿಷ್ಯ**:- ಸಾಮಾನ್ಯ ಜ್ಞಾನವು ವಿಷಯವನ್ನು ಅಪೇಕ್ಷೆಮಾಡದಿದ್ದರೂ ವಿಶೇಷ ಜ್ಞಾನವು ತನ್ನ ವಿಷಯದಿಂದ ತಾನು (ವ್ಯಾವೃತ್ತ) ಭಿನ್ನವಾಗಿರಬೇಕಾದರೆ, ವಿಷಯಾಪೇಕ್ಷೆಯು ಅವಶ್ಯಬೇಕಾಗುವದು. ಇಲ್ಲದಿದ್ದರೆ, ಈ ಜ್ಞಾನಗಳಿಂದ ಈ ಜ್ಞಾನವು ಭಿನ್ನವಾಗಿರುವದೆಂಬುದೇ ಸಿದ್ಧಿಸಲಾರದು.

**ಗುರು**:- ನೀನು ಹೀಗೆ ಹೇಳುವದು ಸುಳ್ಳಾಗಿರುವದು. ಯಾಕಂದರೆ, ವೈಶೇಷಿಕರಿಂದ ಅಂಗೀಕರಿಸಲ್ಪಟ್ಟ ಘಟತ್ವ ಜಾತಿಯಂತೆ, ಜ್ಞಾನವು ಸ್ವತಃ ಭಿನ್ನವಾಗಿರುತ್ತದೆ. ಪಟತ್ವಾದಿ ಜಾತಿಗಳಿಂದ ಘಟತ್ವ ಜಾತಿಯು ಸ್ವತಃ ಭಿನ್ನವಾಗಿರುತ್ತದೆ. ಬೇರೊಂದು ವ್ಯಕ್ತಿಯಿಂದ ಹೇಳಿದರೆ, ಅನ್ಯೋನ್ಯಾಶ್ರಯ ದೋಷ ಬರುವದು. ಆದ್ದರಿಂದ ಜ್ಞಾನಕ್ಕೆ ವಿಷಯಾಪೇಕ್ಷೆಯಿಲ್ಲ.

**ಶಿಷ್ಯ**:-ಯದ್ಯಪಿ ವಿಷಯವು ಜ್ಞಾನದ ಉತ್ಪತ್ತಿ, ಸ್ಥಿತಿ, ಜ್ಞಪ್ತಿಗಳಿಗೆ ಕಾರಣವಾಗದಿದ್ದರೂ, ತಥಾಪಿ ಅಗ್ನಿಯು ದಾಹ್ಯರೂಪ ಕಟ್ಟಿಗೆಯಲ್ಲಿ ವ್ಯಾಪಿಸಿ, ಅದನ್ನೇ ಹೇಗೆ ಸುಡುವದೋ, ಹಾಗೆ ಜ್ಞಾನವು ಜ್ಞೇಯವನ್ನು ವ್ಯಾಪಿಸಿ ಅದನ್ನೇ ಪ್ರಕಾಶಿಸುತ್ತದೆ. ಆದ್ದರಿಂದ **ಅರ್ಥಾಪತ್ತಿ** ಪ್ರಮಾಣವು ಭೇದವಿಷಯದಲ್ಲಿ ಉಂಟು.

**ಗುರು**:- ಅಗ್ನಿಯು ಕಟ್ಟಿಗೆಯನ್ನು ಸುಡುವದರಿಂದ ಬಾಹ್ಯರೂಪ ಕಟ್ಟಿಗೆಯಲ್ಲಿರುವದೆಂದು ಹೇಳಲಿಕ್ಕೆ ಬರುತ್ತದೆ. ಆದರೆ ಜ್ಞಾನವು ಜ್ಞೇಯದೊಡನೆ ವ್ಯಾಪಕವಾಗಿಲ್ಲ. ಯಾಕಂದರೆ, ಭಿನ್ನ ದೇಶಗಳಲ್ಲಿರುವದರಿಂದ, ವ್ಯಾಪ್ತಿಯು ಸಿದ್ಧಿಸುವದಿಲ್ಲ. ಎರಡಕ್ಕೂ ಸಾಮಾನಾಧಿಕರಣ್ಯಭಾವವು ಇಲ್ಲ. ಅತೀತ ಮತ್ತು ಅನಾಗತ ವಿಷಯಗಳ ಜ್ಞಾನವಾಗುವದರಿಂದ ಜ್ಞಾನ ಜ್ಞೇಯಗಳೆರಡು ಒಂದು ಕಾಲದಲ್ಲಿರುತ್ತವೆಂಬುವದು ಸಿದ್ಧಿಸುವದಿಲ್ಲ. ಆದ್ದರಿಂದ ಜ್ಞಾನ ಮತ್ತು ಜ್ಞೇಯ ಇವೆರಡರ ಭೇದವು ಪ್ರತ್ಯಕ್ಷ, ಅನುಮಾನ, ಆಗಮ, ಅರ್ಥಾಪತ್ತಿ ಈ ನಾಲ್ಕು ಪ್ರಮಾಣಗಳಿಂದಲೂ ಸಂಭವಿಸುವದಿಲ್ಲ. ಆದ್ದರಿಂದ—

**ಪ್ರತ್ಯೇತವ್ಯ ಪ್ರತೀತ್ಯೋಶ್ಚ ಭೇದಃ ಪ್ರಾಮಾಣಿಕಃ ಕುತಃ ।**
**ಪ್ರತೀತಿಮಾತ್ರ ಮೇವೇತದ್ಭಾತಿ ವಿಶ್ವಂ ಚರಾಚರಂ ॥**

ತಿಳಿಸಿಕೊಳ್ಳುವಂಥಾ ಜ್ಞೇಯಕ್ಕೂ ತಿಳಿಯತಕ್ಕ ಜ್ಞಾನಕ್ಕೂ ಭೇದವು ಪ್ರಾಮಾಣಿಕವಾದದ್ದು ಎಲ್ಲಿ ಆಯಿತು? ಆಗಲಿಲ್ಲ. ಆದ್ದರಿಂದ ಈ ಚರಾಚರ ವಿಶ್ವವು ಪ್ರತೀತಿ ಮಾತ್ರವಾಗಿರುತ್ತದೆ. ಯಾವದು ಪ್ರತೀತಿ ಮಾತ್ರವಾಗಿರುತ್ತದೋ, ಅದು ಸ್ವಪ್ರಕಾಶ ಮಹಿಮೆಯಿಂದ ತೋರುತ್ತದೆ. ಈ ಜಗತ್ತು ಇದು ಸ್ವಪ್ರಕಾಶಕ್ಕಿಂತ ಭಿನ್ನವಲ್ಲ. ಅಂದರೆ ಜಡ ಪ್ರಪಂಚವು ತನ್ನ ಸಿದ್ಧಿಗಾಗಿ ಜ್ಞಾನದ ಅಪೇಕ್ಷೆಯನ್ನು ಅವಶ್ಯ ಮಾಡುತ್ತದೆ. ಜ್ಞಾನವು ಮಾತ್ರ ವಿಷಯಾಪೇಕ್ಷೆಯನ್ನು ಮಾಡುವದಿಲ್ಲೆಂದು ಹೇಳಿದ್ದೇವೆ. ಆದ್ದರಿಂದ ವಿಷಯವು ಜ್ಞಾನದಲ್ಲಿಯೇ ಅಂತರ್ಭಾವವಾಗಲಿಕ್ಕೆ ಯೋಗ್ಯವಾಗಿದೆ.

**ಶಿಷ್ಯಃ**:- ಹಾಗಾದರೆ, ಪ್ರತೀತಿರೂಪವಾದ ಈ ಜಗತ್ತು ಜ್ಞಾನಕ್ಕಿಂತಲೂ ಭಿನ್ನವಲ್ಲೆಂದು ಹೇಳುವದು ಹೇಗೆ ಸಂಭವಿಸುತ್ತದೆ. ಯಾಕಂದರೆ, ನಾನತ್ವರೂಪವಾದ ಈ ಚರಾಚರ ಜಗತ್ತಿನ ಅಭೇದವು ಹೇಗೆ ಸಂಭವಿಸುವದು?

**ಜ್ಞಾನಜ್ಞೇಯ ಪ್ರಭೇದೇನ ಯಥಾ ಸ್ವಪ್ನಂ ಪ್ರತೀಯತೇ ।**
**ವಿಜ್ಞಾನಮಾತ್ರಮೇವೈತತ್ ತಥಾ ಜಾಗ್ರಚ್ಚರಾಚರಂ ॥**

**ಗುರುಃ**- ಸ್ವಪ್ನ ಸಂಬಂಧಿ ಜಗತ್ತು ಜ್ಞಾನ ಮತ್ತು ಜ್ಞೇಯರೂಪದಿಂದ ಪ್ರತೀತಿಯಾಗುತ್ತದೆ. ಅಂದರೆ, ಸ್ವಪ್ನದಲ್ಲಿ ಜ್ಞಾನವೇ ಜ್ಞೇಯರೂಪದಿಂದ ಅನೇಕವಾಗಿ ಹೇಗೆ ತೋರುತ್ತದೆಯೋ, ಹಾಗೆ ವಿಜ್ಞಾನರೂಪದ ಈ ಜಗತ್ತು ಜಾಗ್ರತ್ಕಾಲದಲ್ಲಿ ಚರಾಚರ ರೂಪದಿಂದ ಅನೇಕ ವಿಧವಾಗಿ ತೋರುತ್ತದೆ.

**ಶಿಷ್ಯ**:- ಜ್ಞಾನವೇ ಜಗದ್ರೂಪದಿಂದ ಭೇದವಾಗಿ ತೋರುತ್ತದೆಂದು ಯಾಕೆ ಹೇಳಬೇಕು? ಸ್ವತಂತ್ರವಾಗಿ ಜಗತ್ತು ತೋರುತ್ತದೆಂದು ಹೇಳಲಿಕ್ಕೆ ಬರುವದಿಲ್ಲವೆ?

**ತಂತೋರ್ಭೇದೆ ಪಟೋ ಯದ್ವಚ್ಛೂನ್ಯ ಏವ ಸ್ವರೂಪತಃ ।**
**ಆತ್ಮನೋಽಪಿ ತಥೈವೇದಂ ಭಾನಮಾತ್ರಂ ಚರಾಚರಂ ॥**

**ಗುರುಃ**- ಪಟವು ಸ್ವರೂಪತಃ ತಂತುಗಳಿಂದ ಬೇರೆಯಾದರೆ, ಶೂನ್ಯವೇ ಆಗಿರುತ್ತದೆ. ಯಾಕಂದರೆ, ಕಾರಣ ಸತ್ತೆಯೇ ಕಾರ್ಯಕ್ಕೆ ಸತ್ತೆಯಾಗಿರುತ್ತದೆ ಹೊರ್ತು, ಸ್ವಾತಂತ್ರ್ಯವಾಗಿ ಕಾರ್ಯಕ್ಕೆ ಸತ್ತೆಯಿಲ್ಲ. ಆದ್ದರಿಂದ ಎಳೆಗಳು (ತಂತುಗಳು) ಅಭಾವವಾಗಲು ಪಟವು ಭಾವವಾಗದು.

**ಶಿಷ್ಯ:-** ಪಟವನ್ನು ಕುರಿತು ತಂತುಗಳು ಸಮವಾಯಿ ಕಾರಣತ್ವರೂಪದಿಂದ ಆಶ್ರಯಗಳಾಗಿರುತ್ತವೆ. ಅದರಿಂದ ತಂತುಗಳು ಅಭಾವವಾಗಲು ಪಟವು ಇರಲಾರದು. ಆದರೂ ತಂತುಗಳ ಸತ್ತೆಯೇ ಪಟಸತ್ತೆಯೆಂದು ಹೇಳಲಾಗದು.

**ಗುರು:-** ಹಿಮವತ್ ಮತ್ತು ವಿಂಧ್ಯಪರ್ವತಗಳಂತೆ, ಕಾರ್ಯಕಾರಣಗಳು ಭೇದವಾಗಿರುವದು ಕಂಡು ಬರುವದಿಲ್ಲ. ಮತ್ತು ಪಟಕ್ಕೆ ತಂತುಗಳ ಅಪೇಕ್ಷೆಯುಂಟು ಆದರೆ; ತಂತುವಿಗೆ ಪಟದ ಅಪೇಕ್ಷೆಯಿಲ್ಲ. ತಂತುವೇ ಕಡೆಗೆ ಉಳಿಯುತ್ತದೆ. ಆದ್ದರಿಂದ ತಂತುಗಳು ವ್ಯತಿರೇಕವಾಗಲು ಪಟವು ಶೂನ್ಯವಾಗಿರುತ್ತದೆ.

ಇದರಂತೆ ಈ ಪ್ರತೀತಿಮಾತ್ರ ಸಿದ್ಧವಾದ ಚರಾಚರ ಜಗತ್ತು, ಆತ್ಮನಿಗಿಂತಲೂ ಸ್ವರೂಪತಃ ಭಿನ್ನವಾಗಿದ್ದರೆ, ಶೂನ್ಯವೇ ಆಗುತ್ತದೆ. ಯಾಕಂದರೆ; ಭಾನಮಾತ್ರವಾಗಿರುತ್ತದೆ. ಆ ಭಾನವು ಸ್ವಪ್ರಕಾಶ ಚೈತನ್ಯರೂಪವು, ವಸ್ತುತಃ ಆತ್ಮನಲ್ಲಿಯೇ ಪರ್ಯವಸಾನವಾಗಿರುತ್ತದೆಂಬುದು ಯೋಗ್ಯವಾಗಿದೆ. ಆತ್ಮಭೇದವಾದರೆ ಜಗತ್ತು ಅಸತ್ತಾಗಿದೆ.

**ಶಿಷ್ಯ:-** ಚಿದಾತ್ಮನು ಜಗದ್ರೂಪದಿಂದ ಭಾನವಾಗಿರುವನೆಂದು ಹೇಳಿದರೆ, ವಿಕಾರ ಪ್ರಸಂಗ ಬರಬಹುದು?

**ರಜ್ಜುರ್ಯಥಾ ಭ್ರಾಂತದೃಷ್ಟ್ಯಾ ಸರ್ಪರೂಪಾ ಪ್ರಕಾಶತೆ।**
**ಆತ್ಮಾ ತಥಾ ಮೂಢ ದೃಷ್ಟ್ಯಾ ಜಗದ್ರೂಪಃ ಪ್ರಕಾಶತೆ॥**

**ಗುರು:-** ಭ್ರಾಂತನ ದೃಷ್ಟಿಯಿಂದ ಹಗ್ಗವೇ ಹಾವಾಗಿ ತೋರಿದಂತೆ, ಮೂಢನ ದೃಷ್ಟಿಯಿಂದ ಆತ್ಮನೇ ಜಗದ್ರೂಪಾಗಿ ತೋರುವನು, ಆದ್ದರಿಂದ ವಿಕಾರವಿಲ್ಲೆಂದು ವಿವರ್ತ ಮೂಲಕ ತಿಳಿ

**ಶಿಷ್ಯ:-** ಅಜ್ಞಾತ ರಜ್ಜು ಸರ್ಪಾಕಾರದಿಂದ ತೋರುವದು ಯೋಗ್ಯವೇ. ಯಾಕಂದರೆ; ಅದು ಸರ್ಪಕ್ಕೆ ಅಧಿಷ್ಠಾನವಾಗಿರುತ್ತದೆ. ಅದರಂತೆ ಆತ್ಮನು ಅಜ್ಞಾನವಶಾತ್ ಜಗದ್ರೂಪದಿಂದ ತೋರುತ್ತಾನೆಂದು ಕಲ್ಪಿಸುವದು ಯುಕ್ತವಲ್ಲ. ಅವನು ನಿಮಿತ್ತಮಾತ್ರನಾಗಿದ್ದಾನೆ. ಜಗದಧಿಷ್ಠಾನತ್ವವು ಸಂಭವಿಸುವದಿಲ್ಲ.

**ಆತ್ಮನ್ಯೇವ ಜಗತ್ಸರ್ವಂ ದೃಷ್ಟಿಮಾತ್ರಂ ಸತತ್ವಕಂ।**
**ಉದ್ಭೂಯ ಸ್ಥಿತಿಮಾಸ್ಥಾಯ ವಿನಶ್ಯತಿ ಮುಹುರ್ಮುಹುಃ॥**

**ಗುರು:-** ದೃಷ್ಟಿಮಾತ್ರ ರೂಪವಾದ ಜಗತ್ತೆಲ್ಲಾ ಆತ್ಮಸ್ವರೂಪದಲ್ಲಿಯೇ ಉತ್ಪತ್ತಿ, ಸ್ಥಿತಿ, ಲಯವನ್ನು ಮೇಲಿಂದಮೇಲೆ ಹೊಂದುತ್ತದೆ. ಆದ್ದರಿಂದ

ಅಜ್ಞಾತರೂಪನಾದ ಆತ್ಮನು ಜಗತ್ತಿಗೆ ಅಧಿಷ್ಠಾನ ಮತ್ತು ನಿಮಿತ್ತಮಾತ್ರನೂ ಆಗಿರುವನು.

**ಶಿಷ್ಯ:**- ಆತ್ಮನು ಜಗದ್ರೂಪನಾಗಿರಲಿಕ್ಕೆ ಅನಾತ್ಮತ್ವ; ಪರಿಚ್ಛಿನ್ನತ್ವ, ಜಗದ್ರೂಪನಾಗಿರುವದರಿಂದ ದುಃಖಿತ್ವವು, ಬರಬಹುದು. ಯಾಕಂದರೆ, ದುಃಖರೂಪ ಜಗದಾತ್ಮನಾಗಿರುವದರಿಂದ; ಹಾಗು ನಾನತ್ವವು ಆತ್ಮನಲ್ಲಿ ಅನಿಷ್ಟವಾಗಿರುತ್ತದೆ. ಆತ್ಮನು ನಾನಾತ್ಮ ಜಗದ್ರೂಪನಾಗಿರುವದರಿಂದ ಅಶುದ್ಧವಾದರೂ ಆತ್ಮನಲ್ಲಿ ನಿವಾರಣೆಮಾಡುವದು ಅಶಕ್ಯವಾಗಿರುವದು. ಉಕ್ತ ಜಗದ್ರೂಪನಾಗಿರುವದರಿಂದ ಧರ್ಮಾಧರ್ಮಾದಿ ಪ್ರಸಕ್ತಿಯು ಬರುವದು. ಧರ್ಮಾದಿಗಳನ್ನು ಅಪೇಕ್ಷಿಸದೆ ಆತ್ಮನು ಜಗತ್ತನ್ನು ಮಾಡಲಾರನು. ಮಾಡಿದರೆ, ವೈಷಮ್ಯನೈರ್ಘೃಣ್ಯ ಮೊದಲಾದ ದೋಷಗಳು ಬರುತ್ತವೆ. ಜೀವನ ಅದೃಷ್ಟದಿಂದಾಗಲಿ ತನ್ನ ಅದೃಷ್ಟದಿಂದಾಗಲಿ ಮಾಡಿರುವನೆಂದು ಹೇಳಲಿಕ್ಕೆ ಆಗದು. ಯಾಕಂದರೆ, ಜೀವಬ್ರಹ್ಮರಿಗೆ ಅಭೇದ ಹೇಳಿರುವದರಿಂದ; ಮತ್ತು ಹೇಗೆ ಹಾಲು ಮೊಸರಿನ ರೂಪಾಗಿ ಪರಿಣಮಿಸಿ ಮೊಸರಾಗಿಯೇ ಇರುತ್ತದೆ ಹೊರ್ತು ಹಾಲು ಆಗುವದಿಲ್ಲ. ಅದರಂತೆ, ಆತ್ಮನು ಜಗದ್ರೂಪನಾಗಿ ಪರಿಣಮಿಸಿ ಜಗತ್ತಾಗಿಯೇ ಇರುವನು ಹೊರ್ತು ಆತ್ಮನಾಗುವದಿಲ್ಲ. ಎಂದು ಶಂಕೆಯನ್ನು ಮಾಡಲು;

**ಪೂರ್ಣಾನಂದಾದ್ವಯೇ ಶುದ್ಧೇ ಪಾಪ್ಮದೋಷಾದಿ ವರ್ಜಿತೇ ।**
**ಪ್ರತಿಬಿಂಬಮಿವಾ ಭಾತಿ ದೃಷ್ಟಿಮಾತ್ರಂ ಜಗತ್ರಯಂ ॥**

**ಗುರು:**- ಅಜ್ಞಾನವಶಾತ್ ಪರಿಚ್ಛಿನ್ನ ಜಗದ್ರೂಪತಾ ಆತ್ಮನಾಗಿ ತೋರುತ್ತಾನೆ. ವಸ್ತುತಃ ಇಲ್ಲ. ಹೇಗಂದರೆ, ದರ್ಪಣವು ಬಿಂಬ ಸನ್ನಿಧಿಯಲ್ಲಿ ಪ್ರತಿಬಿಂಬ ರೂಪದಿಂದ ಭಾಸಮಾನವಾದರೂ, ಪ್ರತಿಬಿಂಬಾಕಾರವು ಮಿಥ್ಯೆಯಾಗಿರುವದರಿಂದ ತನ್ನ ಸ್ವರೂಪವನ್ನು ತ್ಯಾಗಮಾಡುವದಿಲ್ಲ. ಇದರಂತೆ, ಪೂರ್ಣನೂ, ಅದ್ವಯನೂ, ಆನಂದನೂ, ಶುದ್ಧನೂ, ಅವಿದ್ಯಾದಿ ದೋಷಗಳಿಂದ ರಹಿತನೂ, ಆಗಿರುವ ಆತ್ಮನು ಜಗದ್ರೂಪದಿಂದ ಭಾಸಮಾನನಾದರೂ, ತನ್ನ ಸ್ವರೂಪವನ್ನು ತ್ಯಾಗಮಾಡುವದಿಲ್ಲ. ಈ ವಿಷಯಕ್ಕೆ ಶ್ರೀ ವಸಿಷ್ಠ ಮಹರ್ಷಿಗಳ ವಾಕ್ಯವೂ ಪ್ರಮಾಣವಾಗಿದೆ.

**ತಸ್ಮಿಂಶ್ಚಿದ್ದರ್ಪಣೇ ಸ್ಫಾರೇ ಸಮಸ್ತಾ ವಸ್ತು ದೃಷ್ಟಯಃ ।**
**ಇಮಾಸ್ತಾಃ ಪ್ರತಿಬಿಂಬಂತಿ ಸರಸೀವ ತಟದ್ರುಮಾಃ ॥**

ಸರೋವರದ ದಂಡೆಯಲ್ಲಿರುವ ಗಿಡಗಳು ನೀರಿನಲ್ಲಿ ಪ್ರತಿಬಿಂಬಿಸಿದಂತೆ, ವಿಸ್ತಾರವಾಗಿಯೂ ಶುದ್ಧವಾಗಿಯೂ ಇರುವ ಚಿದ್ರೂಪ ಆತ್ಮನಲ್ಲಿ ಸಮಸ್ತ ಪದಾರ್ಥಗಳು ಕಲ್ಪಿತಗಳಾಗಿರುತ್ತವೆ. ಆದ್ದರಿಂದ ಈ ಚರಾಚರ ಜಗತ್ತು ಯಾವಾತನ ಚಿತ್ತಮಯವಾದ ಲೀಲಾರೂಪವಾಗಿರುತ್ತದೆ. ಅವನು ವಿಶ್ವಾತ್ಮರೂಪ

ನಾದರೂ ಅವನ ಅಖಂಡ ಸ್ವರೂಪಕ್ಕೆ ಇದರಿಂದ ಹಾನಿಯಿಲ್ಲ. ಆದ್ದರಿಂದ ಬ್ರಹ್ಮ ವ್ಯತಿರಿಕ್ತ ಜ್ಞಾನ ಜ್ಞೇಯಾತ್ಮಕ ಈ ಜಗತ್ತು ಪ್ರತೀತಿಕ ಸತ್ವ ದೃಷ್ಟಿಮಾತ್ರ ರೂಪವಾಗಿರುತ್ತದೆಂದು ನಿಶ್ಚಯಿಸತಕ್ಕದ್ದು.

ಈ ದೃಷ್ಟಿರೇವ ಸೃಷ್ಟಿಯೆಂಬ ಈ ವಿಷಯವನ್ನು **ಯೋಗ ವಾಸಿಷ್ಠ, ವೇದಾಂತ ಸಿದ್ಧಾಂತ ಮುಕ್ತಾವಲೀ ಗ್ರಂಥದಲ್ಲಿ** ಹೇಳಲ್ಪಟ್ಟ ಪ್ರಕಾರ ಇಲ್ಲಿ ಹೇಳಿದ್ದೇವೆ. ಇನ್ನು ಹೆಚ್ಚಿಗೆ ಈ ವಿಷಯವನ್ನು ಜಿಜ್ಞಾಸ ಮಾಡಬೇಕೆಂಬ ಅಪೇಕ್ಷೆಯುಳ್ಳವರು, ಅದ್ವೈತಸಿದ್ಧಿ, ವಾರ್ತಿಕ, ಸಿದ್ಧಾಂತಬಿಂದು ಮೊದಲಾದ ಈ ಗ್ರಂಥಗಳಲ್ಲಿ ನೋಡಬಹುದು. ವಿಷಯಗಳು ಕಠಿಣವಿದ್ದುದರಿಂದಲೂ ವಿಸ್ತಾರ ಭಯದಿಂದಲೂ ಬರೆಯುವದನ್ನು ಬಿಟ್ಟದ್ದೇವೆ.

**ಬಳಿಕ,** ಈ ದೃಷ್ಟಿ ಸೃಷ್ಟಿ ವಿಷಯಕ್ಕೆ ಶ್ರುತಿಪ್ರಮಾಣಗಳು ಉಂಟೇನು? ಎಂದು ಪ್ರಶ್ನೆಯನ್ನು ಮಾಡಲು ಉತ್ತರವನ್ನು ಹೇಳುತ್ತಾರೆ.

**ಮೊದಲಿಲ್ಲದಿಂತು ತೋರ್ಪುದು ನತತ್ರಾದಿ ವಾ।**
**ಕ್ಯದೊಳುದರಮಾದಿ ವಾಕ್ಯದೊಳು ನಿಗಮ ವೃಂ।**
**ದದ ಬೋಧೆ ಸಾರುತಿಹುದಾಗಿ** ॥೧೨॥

**ಟೀಕಾ:-** ಮೊದಲಿಲ್ಲದೆ= ಪೂರ್ವದಲ್ಲಿ ಇರದೆ, ಇಂತು = ಈ ರೀತಿ, ತೋರ್ಪುದು=ತೋರುವದು, ನತತ್ರಾದಿ ವಾಕ್ಯದೊಳು=ಮೊದಲಿರದೆ ಆ ಮೇಲೆ ಎಲ್ಲವೂ ಆಗಿವೆ ಎಂಬ ವಾಕ್ಯದಿಂದಲೂ, ಉದರಮಾದಿ ವಾಕ್ಯದೊಳು=ಈ ಕಾಣುವ ಭೇದವು ಮಿಥ್ಯೆ ಇದು ಭಯಕ್ಕೆ ಕಾರಣವೆಂದು ಹೇಳುವ ವಾಕ್ಯದಿಂದಲೂ, ನಿಗಮವೃಂದದ=ಅನೇಕ ವೇದ ವಾಕ್ಯಗಳ, ಬೋಧೆ=ಜ್ಞಾನವು, ಸಾರುತಿಹುದಾಗಿ= ಹೇಳುತ್ತಿರುವದರಿಂದ.

**ದೃಷ್ಟಿಸೃಷ್ಟಿಗೆ ವೇದದೃಷ್ಟಾಂತಮಿಂತಿದೆ ಸ।**
**ಮೇಷ್ಟಿಯಹ ತಾನೆ ಜಗವಾದನಾತ್ಮನಿದು।**
**ಶಿಷ್ಟಮತವೆಂದು ತಿಳಿ ಪುತ್ರ** ॥೧೩॥

**ಟೀಕಾ:** - ದೃಷ್ಟಿಸೃಷ್ಟಿಗೆ=ಜ್ಞಾನವೇ ಜ್ಞೇಯವಾಗಿದೆಯೆಂಬುದಕ್ಕೆ, ವೇದ= ಶ್ರುತಿ, ದೃಷ್ಟಾಂತ=ಸ್ವಪ್ನವು, ಇಂತಿದೆ=ಹೀಗಿದೆ, ಸಮೇಷ್ಟಿಯಹ ತಾನೆ=ಪೂರ್ಣ ನಾದ ತಾನೊಬ್ಬನೇ, ಜಗವಾದನು=ಜಗತ್ತಾಗಿರುವನು, ಆತ್ಮನಿದು=ಈ ತೋರುವ ಜಗತ್ತು ಆತ್ಮಸ್ವರೂಪವಾಗಿರುತ್ತದೆಂಬುದು, ಶಿಷ್ಟಮತವೆಂದು=ಸಾಂಪ್ರದಾಯ ಆಚಾರ್ಯರ ನಿಶ್ಚಯವಾಗಿರುವದೆಂದು, ತಿಳಿಪುತ್ರ=ಎಲೈ ಮಗನೇ ನೀನು ತಿಳಿ.

**ತಾತ್ಪರ್ಯ:-** ಈ ಪ್ರತೀತಿರೂಪವಾದ ಸೃಷ್ಟಿಯು ಮೊದಲು ಆತ್ಮಸ್ವರೂಪ ದಲ್ಲಿ ಏನೂ ಇಲ್ಲ. ಜ್ಞಾನಸಮಕಾಲದಲ್ಲಿ ಯೇಜ್ಞೇಯರೂಪ ಸೃಷ್ಟಿಯು ತೋರುತ್ತ ದೆಂಬಬಗ್ಗೆ ಶ್ರುತಿಗಳುಂಟು.'ನತತ್ರರಥಾ' ಸ್ವಪ್ನದಲ್ಲಿ ಮೊದಲು ಏನೂ ಇಲ್ಲ. ಒಬ್ಬ ಸಾಕ್ಷಿ ಆತ್ಮನೇ ಇರುವನು. ಅವನಲ್ಲಿ ರಥ, ಅಶ್ವ, ರಸ್ತೆ ಮೊದಲಾದವುಗಳು ದೇಶ ಕಾಲಾದಿ ಸಾಮಗ್ರಿಯಿಂದ ಜನ್ಯವಾಗದೆ. ಸ್ವಾಪ್ನಜ್ಞಾನ ಸಮಕಾಲದಲ್ಲಿಯೇ ತೋರಿರುತ್ತವೆ. ಹೇಗೋ ಹಾಗೇ ಈ ದೃಶ್ಯಮಾನವಾದ ಪ್ರಪಂಚವಾದರೂ ಮೊದಲು ಬ್ರಹ್ಮದಲ್ಲಿ ಏನೂ ಇಲ್ಲ. 'ಉದರ ಮಂತರಂಕುರುತೆ' ಉಂಟೆಂದು ಭೇದಮಾಡಿದರೆ ಅವನಿಗೆ ಭಯದುಃಖಗಳಾಗುತ್ತವೆ. 'ನೇಹನಾನಾಸ್ತಿ' ಒಂದು ಬ್ರಹ್ಮವೇ ಉಂಟು. ಅದರಲ್ಲಿ ಜಗತ್ತು ಕಲ್ಪಿತವಾಗಿರುತ್ತದೆ. ಆದ್ದರಿಂದ ದೃಷ್ಟ ನಷ್ಟರೂಪವಾಗಿರುತ್ತದೆಂದು ಶ್ರುತಿಗಳು ಹೇಳುತ್ತವೆ. ಆದ್ದರಿಂದ ಈ ಎರಡು ಶ್ರುತಿಗಳು ಆತ್ಮನಲ್ಲಿ ಮತ್ತು ಬ್ರಹ್ಮದಲ್ಲಿ ಮೊದಲು ಏನಿಲ್ಲದೆ ಅನಂತರ ಈ ಸೃಷ್ಟಿಯು ತೋರುತ್ತದೆಂದು ಹೇಳುವದರಿಂದ ಮಧ್ಯದಲ್ಲಿ ಅವಿದ್ಯಾ ವೃತ್ಯಾತ್ಮಕ ಜ್ಞಾನದಿಂದ ಸ್ವಪ್ನದಂತೆ, ಪ್ರತೀತಿಯಾಗಿರುವದೆಂಬುದೇ ನಿಶ್ಚಯವಾಗಿರುತ್ತದೆ. ಸ್ವಪ್ನಕ್ಕೆ ಸಾಕ್ಷಿಯಾದ ಒಬ್ಬಾತ್ಮನಲ್ಲಿಯೇ ಸ್ವರೂಪಕ್ಕೆ ಕಿಂಚಿದ್ವಿಕಾರವಿಲ್ಲದೆ, ಅನೇಕಾಕಾರವಾದ ಸೃಷ್ಟಿಯು ತೋರಿದಂತೆ, ಮಾಯಾವಿಗಳಾದ ದೇವತೆಗಳು ಕೂಡಾ ತಮ್ಮ ಸ್ವರೂಪಕ್ಕೆ ವಿಕಾರವನ್ನು ತಂದುಕೊಳ್ಳದೆ, ವಿಚಿತ್ರಗಳಾದ ಹಸ್ತಿ, ಅಶ್ವಾದಿ ಸೃಷ್ಟಿಗಳ ರೂಪಗಳಾದಂತೆ, ಒಂದೇ ಬ್ರಹ್ಮದಲ್ಲಿ ಸ್ವರೂಪಕ್ಕೆ ನಾಶ ವಿಲ್ಲದೆ, ಅನೇಕಾಕಾರ ಸೃಷ್ಟಿಯು ಸಂಭವಿಸುತ್ತದೆ. ಈ ವಿಷಯವನ್ನು ನಾವು ನಮ್ಮ ಸ್ವಕಪೋಲ ಕಲ್ಪನೆಯಿಂದ ಹೇಳುವದಿಲ್ಲ. ಕಿಂತು 'ನತತ್ರರಥಾ' 'ನೇಹ ನಾನಾಸ್ತಿ' ಎಂಬ ಶ್ರುತಿಗಳು ಸ್ವಪ್ನಾದಿ ದೃಷ್ಟಾಂತಗಳೂ ಉಂಟು. ಇವಲ್ಲದೆ **'ಆತ್ಮನಿ ಚೈವಂ ವಿಚಿತ್ರಾಶ್ಚಹಿ' 'ಸರ್ವೋಪೇತಾಚ ತದ್ದರ್ಶನಾತ್'** ಎಂಬ ಸೂತ್ರಗಳೂ ಉಂಟು. ಆದ್ದರಿಂದ ಈ ಅರ್ಥವು ಪೂರ್ವಾಚಾರ್ಯರಿಗೆ ಸಮ್ಮತವಾಗುವದೆಂಬ ಭಾವವು. ಅಂದರೆ, ಸೃಷ್ಟಿ ಪರಶ್ರುತಿಗಳು ಪರಮಾರ್ಥ ವಿಷಯ ಪರವಲ್ಲ. ಮತ್ತೇನೆಂದರೆ, ಅವಿದ್ಯಾ ಕಲ್ಪಿತನಾಮರೂಪ ಪ್ರಂಪಚವನ್ನು ತೋರಿಸುತ್ತಾ ಬ್ರಹ್ಮಾತ್ಮಭಾವ ಪ್ರತಿಪಾದನಪರಗಳಾಗಿರುತ್ತವೆಂಬುದನ್ನು ಮರೆಯಬಾರದು.

## ಚಿದ್ವಿವರ್ತ ವಿಶೇಷ ನಿರೂಪಣೆ ಸೂ. ೬ ತ್ರಿ. ೬೬

ಬಳಿಕ, ಶಿಷ್ಯನು ಗುರುಗಳ ಪಾದ ಕಮಲಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ, ಎದ್ದು ನಿಂತು ಕೈಗಳನ್ನು ಜೋಡಿಸಿ ಮುಖದಿಂದ ಸ್ತುತಿಸುತ್ತಾ, ಮನಸ್ಸು ಆನಂದ ಸಾಗರದಲ್ಲಿ ಮುಳುಗುತ್ತಿರಲು ಪ್ರಶ್ನೆಯನ್ನು ಮಾಡುವಂಥವ ನಾದನು.

ಸೂತ್ರ ॥ **ಕಾರಣದೊಳುಳ್ಳ ಗುಣವಾ ಕಾರ್ಯವಂ ಬಿಡದೆ ।
ಸಾರಿ ತೋರುತ್ತ ಮಿರುತಿರಬೇಹುದು** ॥

**ಟೀಕಾ:-** ಕಾರಣದೊಳುಳ್ಳ=ಕಾರಣದಲ್ಲಿರುವಂಥಾ, ಗುಣವು=ಧರ್ಮವು, ಕಾರ್ಯಮಂ=ಕಾರ್ಯವನ್ನು, ಬಿಡದೆ = ತ್ಯಜಿಸದೆ, ಸಾರಿ = ಪ್ರಸಿದ್ಧವಾಗಿ, ತೋರುತ್ತ=ಪ್ರತೀತಿಯಾಗುತ್ತ, ಇರುತಿರಬೇಹುದು=ಇರಲಿಕ್ಕೇ ಬೇಕು.

**ಮುಗುಳೆ ಗುರುಪದ ಪದ್ಮಯುಗಳಕ್ಕೆ ನಮಿಸಿ ಕೈ ।**
**ಮುಗಿದು ನುತಿಸುತ್ತೆ ಸುಖದ ಸಂದಣಿ ಮನ ।**
**ಕ್ಕೊಗೆಯೆ ಬಿನ್ನೈಸಿದನು ಪುತ್ರ ॥೧॥**

**ಟೀಕಾ:-** ಮುಗುಳೆ=ಮತ್ತೆ, ಗುರುಪದಪದ್ಮಯುಗಳಕ್ಕೆ=ಸದ್ಗುರುಗಳ ಚರಣಾರವಿಂದಗಳಿಗೆ, ನಮಿಸಿ=ನಮಸ್ಕಾರವನ್ನು ಮಾಡಿ, ಕೈಮುಗಿದು= ಕೈಗಳನ್ನು ಜೋಡಿಸಿ, ನುತಿಸುತ್ತೆ=ಕೊಂಡಾಡುತ್ತ, ಸುಖದಸಂದಣಿ=ದಟ್ಟೈತ ವಾದ ಸುಖವು, ಮನಕ್ಕೊಗೆಯೆ=ಮನಸ್ಸಿಗೆ ಪ್ರಾಪ್ತವಾಗಲು, ಪುತ್ರ=ಶಿಷ್ಯನು, ಬಿನ್ನೈಸಿದನು=ಕೇಳಿದನು;

**ಜಡ ಮೃತ್ತಿಕಾ ಹೇತು ವಡೆದ ಕುಂಭಾದಿಗಳು ।**
**ಜಡವೆಯಾದಂತೆ ಚಿತ್ಕಾರಣದ ಜಗಂ ।**
**ಜಡವಾಗಬಾರದೆಲೆ ದೇವ ॥೨॥**

**ಟೀಕಾ:-** ಎಲೆದೇವ=ಹೇ ಗುರುವೇ !, ಜಡ=ಜ್ಞಾನವಿಲ್ಲದ, ಮೃತ್ತಿಕಾ= ಮಣ್ಣೇ, ಹೇತುವಡೆದ=ಕಾರಣಗಳಾಗಿರುವ, ಕುಂಭಾದಿಗಳು=ಘಟ ಮೊದ ಲಾದವುಗಳು, ಜಡವೆಯಾದಂತೆ=ಜಡಗಳಾಗಿರುವಂತೆ, ಚಿತ್ಕಾರಣವಾದ=ಚಿದ್ರೂ ಪಾತ್ಮನೇ ಕಾರಣವಾಗಿವುಳ್ಳಂಥಾ, ಜಗಂ=ಜಗತ್ತು, ಜಡವಾಗಬಾರದು=ಜ್ಞಾನ ಹೀನವಾಗಬಾರದು;

**ಜಲದ ಗುಣವಾ ಫೇನದೊಳಗಗ್ನಿಗುಣವೆ ಸೊಡ ।**
**ರೊಳು ಸದಾಗತಿಯ ಗುಣವೆಯಸುವಿನೊಳಿರ್ಪ ।**
**ವೊಲು ವಿಶ್ವವರಿವೆನಿಸಬೇಕು ॥೩॥**

**ಟೀಕಾ:-** ಜಲದ ಗುಣವು=ನೀರಿನ ಗುಣವಾದ ತಂಪು, ಆ ಫೇನದೊಳು= ಆದರ ಕಾರ್ಯವಾದ ಬುರಿಗಿನಲ್ಲಿರುವಂತೆ, ಅಗ್ನಿಗುಣವೆ=ಅಗ್ನಿಯ ಗುಣವಾದ ಉಷ್ಣಪ್ರಕಾಶಗಳು, ಸೊಡರೊಳು=ಅದರ ಕಾರ್ಯದ ದೀಪದಲ್ಲಿರುವಂತೆ, ಸದಾ ಗತಿಯ ಗುಣವೆ=ವಾಯುವಿನ ಗುಣವಾದ ಗಮನವು, ಅಸುವಿನೊಳಿರ್ಪವೊಲು= ಪ್ರಾಣಗಳಲ್ಲಿರುವಂತೆ, ವಿಶ್ವವು=ಕಾರ್ಯವಾದ ಜಗತ್ತು, ಅರಿವೆನಿಸಬೇಕು= ಕಾರಣ ಸ್ವರೂಪವಾದ ಚಿದ್ರೂಪವೆನಿಸಬೇಕು.

**ಗುರುವರ್ಯ ನೀವೆ ನಿಜಕರುಣದಿಂದೀ ವಿಮತಿ |**
**ಪರಿಹರಿಸುವಂತೆ ಪರಮಾರ್ಥಮಂ ಪೇಳಿ |**
**ಪೊರೆಯುದೆಂದೆರಗಿದನು ಸೂನು ||೪||**

**ಟೀಕಾ**:- ಗುರುವರ್ಯ=ಗುರೂತ್ತಮನೇ ! ನೀವೆ=ನೀವು, ನಿಜಕರುಣದಿಂದೆ= ಪೂರ್ಣ ಕೃಪಾದೃಷ್ಟಿಯಿಂದೆ, ಈ ವಿಮತಿ=ಈ ವಿಪರೀತವಾದ ಬುದ್ಧಿಯು, ಪರಿ ಹರಿಸುವಂತೆ=ಹೊರಟುಹೋಗುವ ಹಾಗೆ, ಪರಮಾರ್ಥಮಂ=ನಿಜವಾದ ಅರ್ಥ ವನ್ನು, ಪೇಳಿ ಪೊರೆಯುದೆಂದು=ರಕ್ಷಿಸಬೇಕೆಂದು, ಸೂನು=ಶಿಷ್ಯನು, ಎರಗಿದನು= ನಮಿಸಿದನು.

ತಾತ್ಪರ್ಯ:- ಹೇ ಗುರುವೇ! ತಾವು ಶ್ರುತಿಯುಕ್ತಿಗಳಿಂದ ಬ್ರಹ್ಮವೇ ಜಗತ್ತಿಗೆ ಕಾರಣವೆಂದು ಹೇಳಿದಿರಿ. ಆದರೆ ಕಾರಣದಲ್ಲಿ ಇರತಕ್ಕ ಗುಣಗಳು ಕಾರ್ಯದಲ್ಲಿಯೂ ಇರಲಿಕ್ಕೇ ಬೇಕು.

ಹೇಗಂದರೆ, ಜಡವಾದ ಮೃತ್ತಿಕೆಯಿಂದ ಉತ್ಪನ್ನವಾದ ಘಟದಲ್ಲಿ ಜಡವು ಕಾಣುತ್ತದೆ. ಕಾರಣವಾದ ಜಲದಲ್ಲಿರುವ ಗುಣವು ಶೀತತ್ವ ದ್ರವತ್ವಾದಿ ಗುಣ ಗಳು, ಅದರ ಕಾರ್ಯಗಳಾದ ತೆರೆ, ನೊರೆ, ಬುರುಗು ಮೊದಲಾದವುಗಳಲ್ಲಿ ಕಂಡು ಬರುತ್ತದೆ. ಮತ್ತು ಕಾರಣವಾದ ಅಗ್ನಿಯಲ್ಲಿರುವ ದಾಹಕ, ಉಷ್ಣತ್ವ, ಪ್ರಕಾಶತ್ವ ಗುಣಗಳು, ಕಾರ್ಯಗಳಾದ ದೀಪಾದಿಗಳಲ್ಲಿಯೂ ತೋರುತ್ತವೆ. ಹಾಗು ಕಾರಣವಾದ ವಾಯುವಿನಲ್ಲಿರುವ ಗಮನರೂಪಕ್ರಿಯೆಯು, ಅದರ ಕಾರ್ಯವಾದ ಪ್ರಾಣವಾಯುವಿನಲ್ಲಿಯೂ ಕಂಡುಬರುತ್ತದೆ. ಈ ದೃಷ್ಟಾಂತ ಗಳಂತೆ ಬ್ರಹ್ಮವೇ ಈ ಜಗತ್ತಿಗೆ ಕಾರಣವಾಗಿದ್ದರೆ, ಈ ಜಗತ್ತು ಜಡವಾಗಿ ಕಾಣ ದಲೆ ಚೈತನ್ಯರೂಪವಾಗಿ ಕಾಣಬೇಕಾಗಿತ್ತು. ಹಾಗೆ ಕಾಣುವದಿಲ್ಲ. ಕಿಂತು ಸತ್ ಚಿತ್ ಆನಂದ ರೂಪ ಬ್ರಹ್ಮಕ್ಕೆ ವಿಲಕ್ಷಣವಾಗಿ ಅಸತ್, ಜಡ, ದುಃಖ ರೂಪವಾಗಿ ತೋರುತ್ತದೆ. ಆದ್ದರಿಂದ ಜಗತ್ತು ಬ್ರಹ್ಮದ ಕಾರ್ಯವಲ್ಲೆಂದು ತೋರುತ್ತದೆ. ಈ ನನ್ನ ಸಂಶಯುವನ್ನು ತಾವು ಚನ್ನಾಗಿ ಮರಳಿ ಅಂಕುರಿಸ ದಂತೆ ಕಳೆಯಬೇಕು. ಮತ್ತು ಸಿದ್ಧಾಂತಾರ್ಥವನ್ನು ಹೇಳಬೇಕು. ಎಂದು ಪ್ರಾರ್ಥನೆಯನ್ನು ಮಾಡಿಕೊಂಡನು.

## ಪ್ರಶ್ನೆನಿರೂಪಣೆ ಸೂ|| ೭ ಪ|| ೭೧

**ಬಳಿಕ**, ಆರನೇಸೂತ್ರದಲ್ಲಿ ಸಚ್ಚಿತ್ ಸ್ವಯಂಪ್ರಕಾಶರೂಪ ಆತ್ಮನಲ್ಲಿ, ಕಾರ್ಯಕಾರಣಾತ್ಮಕ ಸರ್ವಜಗತ್ತು, ಸ್ವಪ್ನದಂತೆ ಕಲ್ಪಿತವಾಗಿರುತ್ತದೆ. ಅಂದರೆ,

ರಾಹುವಿನ ಶಿರಸ್ಸು, ಆಕಾಶದ ಪ್ರೊಳ್ಳು, ಸನ್ನ ಆತ್ಮಾ, ಪ್ರತಿಮೆಯ ಶರೀರವೆಂಬ ಕಲ್ಪನೆಗಳಂತೆ ಒಬ್ಬಾತ್ಮನಲ್ಲಿ ಮಾಯಾಮೂಲಕ ಅನೇಕ ಕಾರ್ಯಕಾರಣಾತ್ಮಕ ಪ್ರಪಂಚವು ತೋರಿತು. ದೃಷ್ಟಿರೇವ ಸೃಷ್ಟಿ ಎಂಬುದನ್ನು ನಿರೂಪಣ ಮಾಡಿದರು. ಈಗ ಈ ಎಂಟನೇ ಸೂತ್ರದಲ್ಲಿಯಾದರೂ ಸಚ್ಚಿದಾನಂದ ಬ್ರಹ್ಮವೇ ಈ ಜಗತ್ತಿಗೆ ಕಾರಣವಾಗಿದೆ. ಜಗತ್ತು ಸಚ್ಚಿದಾನಂದವದೆ. ಆದ್ದರಿಂದ ಕಾರ್ಯಕ್ಕೂ ಕಾರಣಕ್ಕೂ ವೈಲಕ್ಷಣ್ಯವಿಲ್ಲ. ಸಲಕ್ಷಣವಾಗಿರಬೇಕೆಂಬ ನಿಯಮವಿಲ್ಲ. ಒಂದು ವೇಳೆ ಜಗತ್ತು ಜಡವಾಗಿ ವಿಲಕ್ಷಣ ಕಂಡರೆ ಅದು ನಿನ್ನ ಅವಿವೇಕದಿಂದ ಹಾಗೆ ಜಡವಾಗಿ ತೋರುತ್ತದೆ. ಕಾರಣವಾದ ಚೇತನಕ್ಕೆ ಭಿನ್ನವಾಗಿ ಜಗತ್ತು ಜಡವಾಗಿ ಕಂಡರೂ ಕಾರ್ಯಕಾರಣ ಭಾವವು ಸಂಭವಿಸುತ್ತದೆ. ಪಾರಮಾರ್ಥಿಕ ಬ್ರಹ್ಮ ವ್ಯತಿರಿಕ್ತ ಜಗತ್ತೆಂಬುವದುಯಿಲ್ಲ. ಶ್ರುತಿ ಯುಕ್ತಿ ಅನುಭವಗಳಿಂದ ನಿರೂಪಣ ಮಾಡುತ್ತಾರೆ.

**ಸೂತ್ರ:- ಚಿತ್ತುಪಾದಾನ ಕಾರಣವಾದೊಡಂ ಜಗವ |**
**ಚಿತ್ತೆನಿಸಿ ತೋರ್ಪುದವಿವೇಕದಿಂದೆ ||**

**ಟೀಕಾ:-** ಚಿತ್ತುಪಾದಾನ ಕಾರಣವು=ಜಗತ್ತಿಗೆಚಿತ್ತೇ ಉಪಾದಾನ ಕಾರಣವು, ಆದೊಡಂ=ಆದಾಗ್ಯಾದರೂ, ಜಗವು=ಜಗತ್ತು, ಅಚಿತ್ತೆನಿಸಿ=ಜಡವೆಂದು ಹೇಳಿಸಿಕೊಂಡು, ಅವಿವೇಕದಿಂದೆ=ಅವಿಚಾರದಿಂದೆ, ತೋರ್ಪುದು=ತೋರುವದು.

**ಸಾರಜ್ಞ ತಿಳಿ ನೀನೆ ಕಾರಣಗುಣಂ ತನ್ನ |**
**ಕಾರಿಯದೊಳಿಹುದು ನಿಯಮವಲ್ಲಂ ದಧಿ |**
**ಕ್ಷೀರ ಪ್ರಸೂನ ಫಲದಂತೆ ||೧||**

**ಟೀಕಾ:-** ಸಾರಜ್ಞ = ತಾತ್ಪರ್ಯಗ್ರಾಹಿಯೇ ಕೇಳು, ಕಾರಣಗುಣಂ= ಕಾರಣದಲ್ಲಿರುವ ಗುಣವು, ತನ್ನ=ಸ್ವಕೀಯ, ಕಾರಿಯೊಳಿಹುದು=ಕಾರ್ಯದಲ್ಲಿರುವದು, ನಿಯಮವಲ್ಲಂ=ಇದು ಸರ್ವತ್ರ ಸಂಭವಿಸುವದಿಲ್ಲ, ನೀನೆ ತಿಳಿ=ನೀನೇ ವಿಚಾರಮಾಡಿ ನೋಡು, ಕ್ಷೀರದಧಿಯಂತೆ= ಕಾರಣವಾದ ಹಾಲಿನಲ್ಲಿರುವ ಮಾಧುರ್ಯವು, ಕಾರ್ಯವಾದ ಮೊಸರಿನಲ್ಲಿರದೆ, ಹುಳಿಯಾಗಿರುವಂತೆ, ಪ್ರಸೂನ ಫಲದಂತೆ=ಕಾರಣವಾದ ಹೂವುಗಳಲ್ಲಿರುವ ರುಚಿ, ಆಕಾರ, ಬಣ್ಣ ಮೊದಲಾದವುಗಳು, ಕಾರ್ಯವಾದ ಫಲಗಳಲ್ಲಿ ಇರುವದಿಲ್ಲ. ಆದ್ದರಿಂದ ಉಕ್ತ ದೃಷ್ಟಾಂತಗಳಂತೆ ಕಾರಣದಲ್ಲಿದ್ದ ಗುಣವು ಕಾರ್ಯದಲ್ಲಿರುವದು ನಿಯಮವಲ್ಲ.

**ಚಿತ್ತು ಕಾರಣವೀಜಗತ್ತಿಗಾಗಿರಲೇನ |**
**ಚಿತ್ತೆನಿಸಿ ಭಿನ್ನ ಜಾತೀಯವಾಗಿ ತೋ |**
**ರುತ್ತಮೀ ವಿಶ್ವವೆಸೆಯುವದು ||೨||**

**ಟೀಕಾ:-** ಈ ಜಗತ್ತಿಗೆ=ಕಾಣುವ ಜಗತ್ತಿಗೆ, ಚಿತ್ತುಕಾರಣವು=ಚಿದ್ರೂಪು ಕಾರಣವು, ಆಗಿರಲೇನ್=ಆದರೆ ಏನಾಯಿತು, ಅಚಿತ್ತೆನಿಸಿ=ಜಡವೆಂದು ಹೇಳಿಸಿ ಕೊಂಡು, ಭಿನ್ನ ಜಾತೀಯವಾಗಿ=ಬೇರೆ ವಿಜಾತೀಯವುಳ್ಳದ್ದಾಗಿ, ತೋರುತ್ತ= ಪ್ರತೀತಿಯಾಗುತ್ತ, ಈ ವಿಶ್ವವು=ಈ ಜಗತ್ತು, ಎಸೆಯುವದು=ತೋರುವದು.

**ಮಗನೆ ಕೇಳೀಜಗಂ ಬಗೆಯಿಂದಚಿತ್ತೆನಿಸಿ ।**
**ನಿಗಮಾನುಮಾನ ಯುಕ್ತ್ಯಂತರಂಗಳಿಂ ।**
**ಮಿಗೆ ನೋಡೆ ಸಂವಿದೆನಬೇಕು** ॥೩॥

**ಟೀಕಾ:-** ಮಗನೆ ಕೇಳ್=ಶಿಷ್ಯನೇ ಕೇಳು, ಈ ಜಗಂ=ಈ ಜಗತ್ತು, ಬಗೆ ಯಿಂದ=ಭಾವನೆಯಿಂದ, ಅಚಿತ್ತೆನಿಸಿ=ಜಡವಾದದ್ದೆನಿಸಿದರೂ, ನಿಗಮ=ವೇದ, ಅನುಮಾನ=ಅನುಮಾನ ಪ್ರಮಾಣ, ಯುಕ್ತ್ಯಂತರಂಗಳಿಂದ=ಯುಕ್ತಿರೂಪ ದೃಷ್ಟಾಂತಾದಿಗಳಿಂದ, ಮಿಗೆ ನೋಡೆ=ಚನ್ನಾಗಿ ವಿಚಾರಮಾಡಿ ನೋಡಲಾಗಿ, ಸಂವಿದೆನಬೇಕು=ಚಿದ್ರೂಪವೇಯೆಂದು ತಿಳಿಯಬೇಕು.

**ತಾತ್ಪರ್ಯ:-** ಸಕಲ ಶಾಸ್ತ್ರಗಳು ಪಾರಮಾರ್ಥಿಕ ಬ್ರಹ್ಮಸ್ವರೂಪದಲ್ಲಿಯೇ ತಾತ್ಪರ್ಯವುಳ್ಳವುಗಳಾಗಿರುತ್ತವೆಂಬದನ್ನು ಬಲ್ಲ ಶಿಷ್ಯನೇ ! ಹೇಳುತ್ತೇನೆ ಕೇಳು. ಏನಂದರೆ, ಚಿನ್ಮಯ ರೂಪವಾದ ಬ್ರಹ್ಮವೇ ಕಾರಣವಾಗಿರಲು, ಅದರ ಕಾರ್ಯ ವಾದ ಜಗತ್ತಾದರೂ ಚಿನ್ಮಯವೇ ಆಗಿದೆ. ನೀನು ಉದಾಹರಿಸಿದ ದೃಷ್ಟಾಂತ ಗಳಂತೆ, ಕಾರಣವಾದ ಬ್ರಹ್ಮದಲ್ಲಿರುವ ಚಿನ್ಮಯವು, ಕಾರ್ಯವಾದ ಜಗತ್ತಿನ ಲ್ಲಿಯೂ ಉಂಟು. ವಿಲಕ್ಷಣವೇನೂ ಇಲ್ಲ. ಕಿಂತು, ಸಲಕ್ಷಣವಾಗಿದೆ. ಅಂದಮೇಲೆ, ಕಾರ್ಯಕ್ಕೆ ಬ್ರಹ್ಮವು ಕಾರಣವೇಕೆ ಆಗಲಾರದು ? ಜಗತ್ತು ಜಡ, ದೃಶ್ಯ, ಪರಿ ಚ್ಛಿನ್ನವಾಗಿ ತೋರುತ್ತದೆಂದು ಹೇಳಿದರೆ, ಹಾಗೆ ತೋರುವದು ನಿನ್ನ ಅವಿವೇಕ ದೃಷ್ಟಿಯಲ್ಲದೆ ಬೇರೆ ಏನೂ ಇಲ್ಲ. ಕೇವಲ ಒಂದು ಪಾರಮಾರ್ಥಿಕ ಚಿನ್ಮಯ ಬ್ರಹ್ಮವದೆ. ಅದೇ ನಿನ್ನ ಅವಿವೇಕ ದೃಷ್ಟಿಗೆ ಜಗದ್ರೂಪಾಗಿ ತೋರುತ್ತದೆ. ಅಂದಮೇಲೆ ಜಗತ್ತು ಜಡವಲ್ಲ. ಕಿಂತು, ಚಿನ್ಮಯವಾಗಿದೆ.

ಮತ್ತು ಕಾರ್ಯಕಾರಣಗಳು ಸರ್ವತ್ರ ಸಮಾನವಾಗಿರಬೇಕೆಂಬ ನಿಯ ಮವೂ ಇಲ್ಲ. ಕಿಂತು, ವಿಲಕ್ಷಣವಾಗಿಯೂ ಇರಬಹುದು.

**"ಪುಷ್ಪೇ ಫಲತ್ವಮಾಪನ್ನೇ ಕ್ಷೀರೇಚ ದಧಿತಾಂ ಗತೆ ।**
**ವಿಜಾತೀಯಾಃ ಪ್ರತೀಯಂತೆ ಗುಣಾರೂಪ ರಸಾದಯಃ" ॥**

ಹೂವು ಹಣ್ಣಾಗಲು, ಹಾಲು ಮೊಸರಾಗಲು, ಕಾರಣದಲ್ಲಿರುವ ಗುಣಗಳಿ ಗಿಂತ ಕಾರ್ಯದಲ್ಲಿರುವ ಗುಣಗಳು ವಿಜಾತೀಯಗಳಾಗಿಯೂ ತೋರುತ್ತವೆ. ಸಜಾ

ತೀಯವಾಗಿರಬೇಕೆಂಬ ನಿಯಮವಿಲ್ಲ. ಹೇಗಂದರೆ, ಕಾರಣವಾದ ಮಾವಿನ ಹೂವು ಒಗರಿರುತ್ತದೆ. ಅದರ ಕಾರ್ಯವಾದ ಹಣ್ಣು ಮಧುರವಾಗಿರುತ್ತದೆ. ಕಾರಣವಾದ ಹಾಲು ಸೀಯಾಗಿರುತ್ತದೆ. ಅದರ ಕಾರ್ಯವಾದ ಮೊಸರು ಹುಳಿಯಾಗಿರುತ್ತದೆ. ರಸ ಭಿನ್ನಗಳಾದಂತೆ ಆಕಾರಗಳಾದರೂ ಭಿನ್ನಗಳಾಗಿರುತ್ತವೆ ವಿಜಾತೀಯಗಳಾದರೂ ಕಾರ್ಯ ಕಾರಣ ಭಾವವು ತೋರುತ್ತದೆ. ಅಂದಮೇಲೆ, ಇದರಂತೆಯೇ ಜಗತ್ತಿಗೆ ಚಿನ್ಮಯವಾದ ಬ್ರಹ್ಮವು ಕಾರಣವಾಗಿದ್ದರೂ, ಜಗತ್ತು ಜಡವಾಗಿ ವಿಜಾತೀಯವಾಗಿಯೂ ತೋರಲಿ. ತೋರಿದರೆ ಏನಾಯಿತು? ಬ್ರಹ್ಮವು ಕಾರಣವಲ್ಲವೇ? ಬ್ರಹ್ಮವೇ ಜಗತ್ತಿಗೆ ಕಾರಣವಾಗಿರುವದೆಂಬ ಭಾವವು. **"ನ ವಿಲಕ್ಷಣತ್ವಾದಸ್ಯ ತಥಾತ್ವಂಚ ಶಬ್ದಾತ್"** ಎಂಬ ಸೂತ್ರವೂ ಉಂಟು.

ಮತ್ತೆ ಎಲೈ ಪುತ್ರನೇ ಕೇಳು. ನಿನ್ನ ಭಾವನೆಯಿಂದ ಜಗತ್ತು ಜಡವಾಗಿ ತೋರುವದು. ಅದು ಚೈತನ್ಯರೂಪವಾಗಿದೆ. ಇದನ್ನು ನಾನು ಹೇಗೆ ತಿಳಿಯಲಿ ಎಂದು ಕೇಳಿದರೆ, ಯುಕ್ತಿ, ಅನುಮಾನ, ಶ್ರುತಿ ಪ್ರಮಾಣಗಳಿಂದ ಹೇಳುತ್ತೇನೆ ಕೇಳು. ನಾನು ಮುಂದೆ ಹೇಳುವ ಪ್ರಕಾರ ವಿಚಾರಮಾಡಿ ನೋಡಿದರೆ, ನೀನೇ ಜಗತ್ತು ಚಿನ್ಮಯವೆಂದು ಹೇಳಬಹುದು. ಇದರಲ್ಲಿ ಸಂಶಯವಿಲ್ಲ.

**(ಯುಕ್ತಿಗಳನ್ನು ಹೇಳುತ್ತಾರೆ)**

**ಬಳಿಕ, ಶಿಷ್ಯ:-** 'ಸ್ವಯಂಪ್ರಕಾಶರೂಪವಾದ ಬ್ರಹ್ಮವು ಅಪ್ರಕಾಶಾತ್ಮಕ ಜಗತ್ತಾಗಿ ಹೇಗೆ ತೋರುವದು? ಇದು ಅಸಂಭವವಲ್ಲವೇ?

**ಜಳಹತ್ತಿ ಬರಲು ಮನೆಯೊಳಗುಳ್ಳ ಬೆಳಕು ಕ ।**
**ತ್ತಲೆಯೆನಿಸಿ ಮತ್ತಮಾ ಬೆಳಗೆ ತೋರ್ಪಂತೆ ।**
**ತಿಳಿಯಾತ್ಮನಖಿಳವಹುದೆಂದು ॥೪॥**

**ಟೀಕಾ:-**ಜಳಹತ್ತಿ=ಬಿಸಿಲುತಾಗಿ, ಬರಲು=ಬರಲಾಗಿ, ಮನೆಯೊಳಗುಳ್ಳ ಬೆಳಕು=ಮನೆಯಲ್ಲಿರುವ ಪ್ರಕಾಶವೇ, ಕತ್ತಲೆಯೆನಿಸಿ=ತಮವೆಂದು ಕರಿಸಿಕೊಂಡು, ಮತ್ತಂ=ಅನಂತರ,ಆ ಬೆಳಗೆ=ಆಬೆಳಕೇ,ತೋರ್ಪಂತೆ=ತೋರುವಹಾಗೆ,ಆತ್ಮನು=ಚಿದ್ರೂಪಾತ್ಮನು, ಅಖಿಳವಹನೆಂದು=ಎಲ್ಲವೂ ಆಗಿರುವನೆಂದು, ತಿಳಿ=ಅರಿ.

**ಗುರು:-** ಇದೇನು ಅಸಂಭವವಲ್ಲ. ಸಂಭವಿಸುತ್ತದೆ. ಹೇಗಂದರೆ,ಬೇಸಿಗೆಯ ಬಿಸಿಲಿನಲ್ಲಿ ನಡೆದು ಜಳಹತ್ತಿ ಮನೆಯೊಳಗೆ ಬಂದ ಮನುಷ್ಯನಿಗೆ, ಮನೆಯೊಳಗಿನ ಬೆಳಕೇ ಕತ್ತಲೆಯಾಗಿ ತೋರಿದಂತೆ, ಸ್ವಯಂಪ್ರಕಾಶ ಚೈತನ್ಯರೂಪ ಆತ್ಮನೇ ನಿನ್ನ ಅವಿವೇಕ ದೃಷ್ಟಿಗೆ ಜಡಜಗತ್ತಾಗಿ ತೋರುವನು. ಜಳಹತ್ತಿದ ಮನಷ್ಯನು

ಸ್ವಲ್ಪಹೊತ್ತು ಕೂತುಕೊಂಡ ಮೇಲೆ, ಮನೆಯಲ್ಲಿ ಬೆಳಕೇ ತೋರಿದಂತೆ, ಗುರು ಶಾಸ್ತ್ರಗಳಿಂದ ನಿನ್ನ ಅವಿವೇಕ ದೃಷ್ಟಿಯು ಹೋಗಲು, ಸ್ವಯಂಪ್ರಕಾಶ ಪರಮಾತ್ಮನು ತೋರುವನು.

**ಬಳಿಕ, ಶಿಷ್ಯ**:- ದೃಷ್ಟಿ ದೋಷದಿಂದ ಮನೆಯಲ್ಲಿರುವ ಬೆಳಕು ಕತ್ತಲೆಯಾಗಿ ಕಾಣುವದು ಸಹಜವೇ. ಆದರೆ, ಜಗತ್ತು ವಿಚಾರ ಮಾಡಿದರೂ ಜಡವಾಗಿ ಕಾಣುವದರಿಂದ ದೃಷ್ಟಾಂತವು ಸರಿಯಲ್ಲ ಎಂದು ಅನ್ನಲು.

**ತರಳಂಗೆ ಮರದಾನೆ ಪರಮಾರ್ಥವಾಗಿರ್ದ ।**
**ಕರಿಯೆನಿಸಿ ತೋರಿ ತಿಳಿಯೆ ಮರನೆನಿಸುತಿಪ ।**
**ಪರಿಯಂತೆ ವಿಶ್ವವರಿವೈಸೆ** ||೫||

**ಟೀಕಾ**:- ತರಳಂಗೆ=ಬಾಲಕನಿಗೆ, ಮರದಾನೆ=ಕಟ್ಟಿಗೆಯ ಆನೆಯು, ಪರಮಾರ್ಥವಾಗಿರ್ದ=ನಿಜವೆನಿಸಿದ, ಕರಿಯೆನಿಸಿ ಆನೆಯೆಂದು ಕರೆಯಿಸಿಕೊಂಡು, ತೋರಿ=ಪ್ರತೀತಿಯಾಗಿ, ತಿಳಿಯೆ=ವಿಚಾರಿಸುತ್ತಿಲು, ಮರನೆನಿಸುತಿಹ=ಕಟ್ಟಿಗೆಯೆನಿಸುತಿಹ, ಪರಿಯಂತೆ=ರೀತಿಯಂತೆ, ವಿಶ್ವವು=ಜಗತ್ತು, ಅರಿವೈಸೆ=ಚಿದ್ರೂಪವಾಗಿರುವದು.

**ಗುರು**:- ಬಾಲಕನು ಕಟ್ಟಿಗೆಯ ಆನೆಯನ್ನು ಕಂಡು ನಿಜವಾದ ಆನೆಯೆಂದು ತಿಳಕೊಂಡು ಕ್ರೀಡಿಸುತ್ತಾನೆ. ಕೆಲವು ದಿವಸಗಳು ಕಳೆದು ಹೋಗಲು, ಅವನೇ ದೊಡ್ಡವನಾದಮೇಲೆ, ಇದು ಆನೆಯಲ್ಲ. ಕಟ್ಟಿಗೆ ಇರುವದೆಂದು ಹೇಗೆ ತಿಳಿಯುತ್ತಾನೋ, (ಅಂದರೆ—ಕಾಷ್ಟವನ್ನು ಕಂಡು ಗಜವೆಂದು ಹೇಗೆ ತಿಳಕೊಂಡನೋ) ಹಾಗೇ ನೀನು ಅಜ್ಞಾನದಿಂವ ಬ್ರಹ್ಮವನ್ನೇ ಕಂಡು ಜಗತ್ತೆಂದು ತಿಳಿದುಕೊಂಡಿರುವಿ. ಯಥಾರ್ಥ ಜ್ಞಾನವಾದರೆ, ಜಗತ್ತಿಲ್ಲ. ಒಂದು ಅರುವೇ ಇರುವದೆಂದು ಹೇಳುವಿ.

**ಬಳಿಕ, ಶಿಷ್ಯ**:- ಬಾಲಕನು ಅಜ್ಞಾನ ದೋಷವಶಾತ್ ಕಾಷ್ಠವನ್ನು ಕಂಡು ಗಜವೆಂದು ತಿಳಿಯುಬಹುದು. ನಾವು ವಿಚಾರ ಮಾಡಿದಾಗ್ಯಾದರೂ ಬ್ರಹ್ಮಕ್ಕೆ ಬೇರೆ ವಿಲಕ್ಷಣವಾಗಿ ಜಗತ್ತು ತೋರುವದರಿಂದ ದೃಷ್ಟಾಂತವು ದೃಷ್ಟಾಂತಕ್ಕೆ ಯೋಗ್ಯವಲ್ಲ.

**ಜಗವೆಂಬ ತೆರೆ ಮೀರಿ ಮಿಗೆ ಚಿತ್ಪಯೋನಿಧಿಯೊ ।**
**ಳೊಗೆದಲ್ಲಿಯಡಗುತಿಹುದಾಗಿ ಮಧ್ಯದೊ ।**
**ಳ್ಪೊಗೆಯುದೆಂತರಿವಿಗೆರವೆಂದು** ||೬||

ಟೀಕಾ:- ಚಿತ್ ಪಯೋನಿಧಿಯೊಳು=ಜ್ಞಾನ ಸಮುದ್ರದಲ್ಲಿ, ಮಿಗೆ=ವಿಶೇಷವಾಗಿ, ಜಗವೆಂಬ ತೆರೆ=ಜಗತ್ತೆಂಬ ತರಂಗವು, ಮೀರಿ=ಹೆಚ್ಚಾಗಿ, ಒಗೆದಲ್ಲಿ=ಉಂಟಾದಲ್ಲಿ, ಅಡಗುತಿಹುದಾಗಿ=ಲಯಿಸುವದರಿಂದ, ಮಧ್ಯದೊಳು=ಸ್ಥಿತಿಕಾಲದಲ್ಲಿ, ಅರಿವಿಗೆ=ಬ್ರಹ್ಮಕ್ಕೆ, ಎರಡೆಂದು=ಭಿನ್ನವೆಂದು, ಎಂತು=ಹೇಗೆ, ಬಗೆಯುವದು=ತಿಳಿಯುವದು.

ಗುರು:-ಜಲವನ್ನು ಕಂಡು ತೆರೆಯೆಂದು ಕರೆಯುವಂತೆ, ತನ್ನನ್ನು ಕಂಡು ಜಗತ್ತೆಂದು ನುಡಿಯುವಿ. ಆದರೆ, ಸಮುದ್ರದಲ್ಲಿ ತೋರಿದ ತೆರೆ ಸಮುದ್ರದಲ್ಲಿಯೇ ಅಡಗಿಹೋಗುತ್ತದೆ. ಅದು ಸಮುದ್ರಕ್ಕಿಂತಲೂ ಭಿನ್ನವಲ್ಲ. ಇದರಂತೆ ಚೈತನ್ಯದಲ್ಲಿ ತೋರಿದ ಜಗತ್ತು ಚೈತನ್ಯದಲ್ಲಿಯೇ ಅಡಗುತ್ತದೆ. ಅಂದಮೇಲೆ, ಚೈತನ್ಯಕ್ಕಿಂತಲೂ ಬೇರೆಯಾದೀತೆ, ಎಂದಿಗೂ ಆಗಲಾರದು. ಇದಕ್ಕೆ ಶ್ರೀ. ಸುರೇಶ್ವರಾಚಾರ್ಯರ ವ್ಯಾಕ್ಯಪ್ರಮಾಣವುಂಟು.

**'ಪ್ರಕಾಶಾಭಿನ್ನಮೇವೇತದ್ವಿಶ್ವಂ ಸರ್ವಸ್ಯ ಭಾಸತೆ ।**
**ಲಹರೀ ಬುದ್ಬುದಾದಿನಾಂ ಸಲಿಲಾನ್ನ ಪೃಥಕ್ಸ್ಥಿತಿಃ" ॥**

ಅರ್ಥಾತ್ ಬೆಳಕನ್ನು ಕಂಡು ಕತ್ತಲೆಂಬಂತೆ, ಕಟ್ಟಿಗೆಯನ್ನು ಕಂಡು ಗಜವೆಂಬಂತೆ, ನೀರನ್ನು ಕಂಡು ತೆರೆಯೆಂಬಂತೆ, ಹಗ್ಗವನ್ನು ಕಂಡು ಹಾವೆಂದು ಹೆದರುವಂತೆ, ಶುಕ್ತಿಯನ್ನು ಕಂಡು ಬೆಳ್ಳಿಯೆಂದು ಇಚ್ಛಿಸಿದಂತೆ, ಮೋಟ ಮರವನ್ನು ಕಂಡು ಕಳ್ಳನೆಂದು ಹೆದರಿದಂತೆ, ತನ್ನನ್ನು ತಾನು ಕಂಡು ಭ್ರಾಂತಿಯಿಂದ ಜಗತ್ತೆಂದು ತಿಳಿಯುವದಾಗಿರುತ್ತದೆ. ವಿಚಾರಮಾಡಿದರೆ, ಚೇತನರೂಪ ತನಗಿಂತ ಭಿನ್ನವೇನೂ ಇಲ್ಲ ಎಂಬುದೇ ಸಹಜವಾಗಿರುತ್ತದೆ.

**(ಅನುಮಾನಗಳನ್ನು ಹೇಳುತ್ತಾರೆ)**

ಬಳಿಕ ಶಿಷ್ಯ:- ಈ ಸಕಲ ಪ್ರಪಂಚವು ದೃಶ್ಯವಾಗಿ ಜ್ಞಾನರೂಪ ಆತ್ಮನಿಂದ ಅರಿಸಿಕೊಳ್ಳುವದರಿಂದ ಆತ್ಮನಿಗಿಂತಲೂ ಭಿನ್ನವಾಗಿ ತೋರುತ್ತದೆ. ಹೀಗಿದ್ದು ತಾವು ಈ ಜಗತ್ತು ಆತ್ಮಸ್ವರೂಪವೆಂದು ಹೇಗೆ ಹೇಳುವಿರಿ? ನಮ್ಮ ಅನುಭವಕ್ಕೆ ಯಾಕೆ ತೋರುವದಿಲ್ಲ?

**ಈ ನಿಖಿಳವಾತ್ಮಂಗೆ ತಾನನ್ಯವೆನಲೇಕೆ ।**
**ಭಾನಮಿಹುದಾದ ಕಥದಿ ನೆಂತೊಂದೊಡಾ ।**
**ಜ್ಞಾನದಂತೆಂಬುದನುಮಾನ ॥೭॥**

ಟೀಕಾ:- ಈ ನಿಖಿಳವು=ಈ ಸರ್ವ ಪ್ರಪಂಚವು, ಆತ್ಮಂಗೆ=ಅರಿವಿಗೆ, ತಾನು ಅನ್ಯವೆನಲೇಕೆ=ಬೇರೆಯೆಂದು ಯಾಕೆ ಹೇಳಬೇಕು? ಹೇಳಬಾರದು, ಇದು

(ಪ್ರತಿಜ್ಞಾ) ಭಾನಮಿಹುದಾದಕಥದಿಂದ = ಅರುವಿನಿಂದ ಅರಿಸಿಕೊಳ್ಳುವದೆಂದು ಹೇಳುವದರಿಂದ (ಹೇತು), ಎಂತೊಂದೊಡೆ=ಹೇಗಂದರೆ, ಆ ಜ್ಞಾನದಂತೆ=ಸ್ವಪ್ನದ ಜ್ಞಾನದಂತೆ (ದೃಷ್ಟಾಂತ), ಎಂಬುದು=ಅನ್ನುವದು, ಅನುಮಾನ=ಅನುಮಾನ ಪ್ರಮಾಣವೆನಿಸುವದು.

**ಗುರು:-** ದೃಶ್ಯವಾಗಿ ತಿಳಿಸಿಕೊಳ್ಳುತ್ತಿರುವಂಥಾ ಜಗತ್ತು ತಿಳಿಯುವ ಆತ್ಮನಿಗೆ ಭಿನ್ನವಲ್ಲವೆಂಬುವದು ಪ್ರತಿಜ್ಞಾ ವಾಕ್ಯವು. ಯಾಕಂದರೆ, ತಿಳಿಸಿಕೊಳ್ಳುವದರಿಂದವೆಂಬುದೇ ಹೇತು ವಾಕ್ಯವು. ಹೇಗಂದರೆ, ಆ ಸ್ವಪ್ನ ಜ್ಞಾನದಂತೆಂಬುದೇ ದೃಷ್ಟಾಂತವು. ಇಲ್ಲಿ ವಿವೇಚನವನ್ನು ಮಾಡತಕ್ಕದ್ದು. ಹೇಗಂದರೆ, ಸ್ವಪ್ನದಲ್ಲಿ ಸ್ವಯಂಪ್ರಕಾಶ ಸಾಕ್ಷಿ ಜ್ಞಾನದಿಂದ ಬೆಳಗಿಸಿಕೊಳ್ಳಲ್ಪಟ್ಟ, ಸ್ವಪ್ನ ಪ್ರಪಂಚವು ತನಗಿಂತಲೂ ಹೇಗೆ ಭಿನ್ನವಲ್ಲವೋ; ಹಾಗೇ ಜಾಗ್ರತ್ಕಾಲದಲ್ಲಿಯಾದರೂ, ಜ್ಞಾನರೂಪ ಆತ್ಮದಿಂದ ಅರಿಸಿಕೊಳ್ಳುತ್ತಿರುವಂಥಾ, ಈ ಜಗತ್ತಾದರೂ, ಅರಿಯುತ್ತಿರುವ ಆತ್ಮನಿಗಿಂತ ಬೇರೆಯಿಲ್ಲ. ಕಿಂತು, ಆತ್ಮನರೂಪವೇ ಆಗಿದೆ. ಇದಕ್ಕೆ ಶ್ರೀ ಮತ್ಸುರೇಶ್ವರಾಚಾರ್ಯರ ವಾಕ್ಯ ಪ್ರಮಾಣವೂ ಉಂಟು.

**ಸ್ವಪ್ನೇ ಪ್ರಕಾಶೋ ಭಾವಾನಾಂ ಸ್ವಪ್ರಕಾಶಾನ್ನ ಹೀತರಃ ।**
**ಜಾಗ್ರತ್ಯಪಿ ತಥೈವೇತಿ ನಿಶ್ಚಿನ್ವಂತಿ ವಿಪಶ್ಚಿತಃ ।**

**ಶಿಷ್ಯ:-** ಸ್ವಪ್ನ ಪ್ರಪಂಚವು ನಮ್ಮ ಅಂತರದಲ್ಲಿ ತೋರುವದರಿಂದ ಅದು ಅರಿಯುವ ಆತ್ಮನ ರೂಪಾಗಿರಬಹುದು. ಆದರೆ, ಜಾಗ್ರತ್ಪ್ರಪಂಚವು ನಮಕಿಂತಲೂ ಹೊರಗೆ ತೋರುವದರಿಂದ ಇದು ಆತ್ಮನರೂಪವಾಗದು.

**ಗುರು:-** 'ಸ್ವಪ್ನೇ ಸ್ವಾಂತರ್ಗತಂ ಯಥಾ ವಿಶ್ವಂ ಪೃಥಗಿವೇಕ್ಷ್ಯತೇ ।
**ತಥೈವ ಜಾಗ್ರತ್ಕಾಲೇಽಪಿ ಪ್ರಪಂಚೋಽಯಂ ವಿವಿಚ್ಯತಾಂ ॥**

ಸ್ವಪ್ನ ಪ್ರಪಂಚವು ತನ್ನಲ್ಲಿಯೇ ತೋರಿದರೂ, ಸ್ವಪ್ನದಲ್ಲಿ ತನಗಿಂತಲೂ ಭಿನ್ನವಾಗಿದೆಯೋ ಏನೋ ಎಂಬಂತೆ ಹೇಗೆ ತೋರುತ್ತದೆಯೋ; ಹಾಗೆ ಈ ಜಗತ್ತು ತನ್ನಲ್ಲಿಯೇ ತೋರಿದರೂ, ತನಗಿಂತ ಭಿನ್ನವಾಗಿರುವಂತೆ ತೋರುತ್ತಿದೆ. ಭಿನ್ನವಲ್ಲ. ಕಿಂತು; ತನ್ನಲ್ಲಿಯೇ ಇರುತ್ತದೆ.

**" ಅಂತರಸ್ಮಿನ್ನಿಮೇ ಲೋಕಾ ಅಂತರ್ವಿಶ್ವ ಮಿದಂ ಜಗತ್ ।**
**ಬಹಿರ್ವನ್ಮಾಯಯಾ" " ಭಾತಿ ದರ್ಪಣೇ ಸ್ವಶರೀರವತ್" ॥**

ಈ ಹದಿನಾಲ್ಕು ಲೋಕಗಳಿಂದ ಯುಕ್ತವಾದ ಈ ಜಗತ್ತು, ಸಚ್ಚಿದಾನಂದರೂಪನಾದ ತನ್ನಲ್ಲಿಯೇ ತೋರುತ್ತದೆ. ಆದರೂ ತನ್ನಲ್ಲಿ ಈ ಜಗತ್ತು ಇರುತ್ತ

ದೆಂಬ ಜ್ಞಾನವಿಲ್ಲ. ಕಿಂತು ತನಗಿಂತ ಭಿನ್ನವಾಗಿರುವಂತೆ ತೋರುತ್ತದೆ. ಇದಕ್ಕೆ ಮಾಯೆಯೇ ಕಾರಣವಾಗಿರುತ್ತದೆ. ಜಗತ್ತು ತನ್ನಲ್ಲಿ ಒಳಗಿದ್ದರೂ ಹೊರಗಿದ್ದಂತೆ; ಜಗತ್ತು ತನ್ನಲ್ಲಿದ್ದರೂ ತಾನು ಜಗತ್ತಿನಲ್ಲಿದ್ದಂತೆ; ತಾನು ಪೂರ್ಣನಾದರೂ ಪರಿಚ್ಛಿನ್ನನಾದಂತೆ; ಜಗತ್ತು ಪರಿಚ್ಛಿನ್ನವಾದರೂ ಪೂರ್ಣವಾಗಿದ್ದಂತೆ; ಹೀಗೆ ವಿಪರೀತಜ್ಞಾನವನ್ನುಂಟುಮಾಡುವದಕ್ಕೆ ಮಾಯೆಯೇ ಕಾರಣವಾಗಿರುವದು. ಕನ್ನಡಿಯಲ್ಲಿ ತನ್ನ ಶರೀರದ ಪ್ರತಿಬಿಂಬವು ತೋರುತ್ತದೆ. ಆದರೆ ಕನ್ನಡಿಗಿಂತಲೂ ಬೇರೆ ಹೊರಗೆ ಇದ್ದಂತೆ ಹೇಗೆ ತೋರುತ್ತದೆಯೋ; ಹಾಗೆ ಈ ಜಗತ್ತು ತನ್ನ ಒಳಗೆ ಇದ್ದರೂ, ಮಾಯಾಮೂಲಕ ಹೊರಗೆ ತೋರುತ್ತದೆ. ಹೀಗೆ ತೋರಿದಾಗ್ಯಾದರೂ ಈ ಜಗತ್ತು ಉಕ್ತ ಅನುಮಾನದಿಂದ ನೋಡಲು ಭಿನ್ನವಲ್ಲ. ಹೇಗಂದರೆ,—

ನಿದ್ರಯಾ ದರ್ಶಿತಾನರ್ಥಾನ್ನ ಪಶ್ಯತಿ ಯಥೋತ್ಥಿತಃ।
ಸಮ್ಯಗ್ಜ್ಞಾನೋದಯಾದೂರ್ಧ್ವಂ ತಥಾ ವಿಶ್ವಂ ನ ಪಶ್ಯತಿ"॥

ನಿದ್ರೆಯಿಂದೆದ್ದ ಪುರುಷನು ಸ್ವಪ್ನ ಪ್ರಪಂಚವನ್ನು ಹೇಗೆ ಕಾಣುವದಿಲ್ಲವೋ, ಹಾಗೆ ಯಥಾರ್ಥವಾದ ತನ್ನ ನಿಜಸ್ವರೂಪ ಜ್ಞಾನವಾದಮೇಲೆ, ಈ ಜಗತ್ತಾದರೂ ಕಾಣುವದಿಲ್ಲ. ಇಂಥಾ ತನ್ನ ಸ್ವಾತ್ಮ ಜ್ಞಾನವಾಗಬೇಕಾದರೆ, ಶ್ರುತಿ, ಗುರುಗಳ ಪ್ರಸಾದದಿಂದಲೂ ಈಶ್ವರನ ಅನುಗ್ರಹದಿಂದಲೂ ಆಗುತ್ತದೆ. ಬೇರೊಂದರಿಂದಾಗದು.

**ಬಳಿಕ, ಶಿಷ್ಯ-** ಈ ಜಗತ್ತು ದೃಶ್ಯವಾಗಿ ತಿಳಿಸಿಕೊಳ್ಳುತ್ತದೆಂದು ಹೇಳಿದರೆ, ತಿಳಿಯುವ ಆತ್ಮನಿಗಿಂತ ಬೇರೆಯಿಲ್ಲಯೆಂಬದಾಗಿ ಹೇಳಿದಿರಿ. ಆದರೆ, ನಾನು ಈಗ ಹೀಗೆ ಹೇಳುತ್ತೇನೆ. ಏನಂದರೆ; ತಿಳಿಯುವ ಆತ್ಮನಿಗಿಂತಲೂ ಜಗತ್ತು ಭಿನ್ನವಾಗಿ ಜಡವಾಗಿ ಉಂಟು. ಅದು ಆತ್ಮನಿಂದ ತಿಳಿಸಿಕೊಳ್ಳುವದಿಲ್ಲೆಂದು ಹೇಳುತ್ತೇನೆ. ಆದ್ದರಿಂದ ಆತ್ಮನ ಸ್ವರೂಪವಾಗಲಿಲ್ಲ. ಕಿಂತು ವಿಲಕ್ಷಣವಾಗಿ ಆತ್ಮನಂತೆ ಸತ್ಯವಾಗ ಜಗತ್ತುಂಟು.

ಏನಾತ್ಮನೊಳು ಭಿನ್ನ ತಾನಿಲ್ಲವದಕೆ ತತ್ ।
ಜ್ಞಾನತ್ವವಿಲ್ಲ ವೆಂತೆನಲ್ ಗಗನಪ್ರ ।
ಸೂನದಂತೆಂಬುದನುಮಾನ ॥೮॥

**ಟೀಕಾ:—** ಆತ್ಮನೊಳು=ಬ್ರಹ್ಮದಿಂದ, ಏನು ಭಿನ್ನ ತಾನಿಲ್ಲವು=ಯಾವದೂ ಬೇರೆಯಾಗಿ ಇರುವದಿಲ್ಲ, (ಪ್ರತಿಜ್ಞಾ) ಆದಕ್ಕೆ ತತ್ ಜ್ಞಾನತ್ವವಿಲ್ಲವು=ಅರಿಸಿಕೊಳ್ಳುವದರ ಜ್ಞಾನವಿಲ್ಲೆಂದು ಹೇಳುವದರಿಂದ(ಹೇತು) ಎಂತೆನಲ್=ಹೇಗಂದರೆ,

ಗಗನ ಪ್ರಸೂನದಂತೆ=ಆಕಾಶ ಕುಸುಮದ ಹಾಗೆ(ದೃಷ್ಟಾಂತ) ಎಂಬುದು=ಅನ್ನು ವದು, ಇದು ಅನುಮಾನ=ಅನುಮಾನ ಪ್ರಮಾಣವೆನಿಸುವದು.

ಗುರು:- ಹೇ ಶಿಷ್ಯನೇ ಕೇಳು. ಜಗತ್ತು ಆತ್ಮನಿಂದ ತಿಳಿಸಿಕೊಳ್ಳಲಾರದು. ಎಂದು ಹೇಳಿದರೆ, ಜಗತ್ ಸತ್ಯಾವಾಗುವದೆಂದು ನಿನ್ನ ಅಭಿಪ್ರಾಯವಿರುತ್ತದೆ. ಆದರೆ ಇದು ಯೋಗ್ಯವಲ್ಲ. ಕಿಂತು ಈ ಹೇತುವಿನಿಂದಲೇ ಅತ್ಯಂತ ಮಿಥ್ಯೆಯೆಂಬ ಜ್ಞಾನವೇ ಆಗುತ್ತದೆ. ಹೇಗಂದರೆ; ಕೇಳು. ಆತ್ಮನಿಗಿಂತ ಭಿನ್ನವಾದದ್ದು ಏನೂ ಇಲ್ಲೆಂಬುದು ಪ್ರತಿಜ್ಞಾವಾಕ್ಯವಿರುತ್ತದೆ. ಯಾಕಂದರೆ, ಅದರ ಸಂಬಂಧಿ ಜ್ಞಾನ ವಿಲ್ಲೆಂದು ನೀನೇ ಹೇಳುವದರಿಂದ, ಇದು ಹೇತುವಾಗಿರುತ್ತದೆ. ಹೇಗಂದರೆ, ಗಗನದ ಪುಷ್ಪದಂತೆ ಎಂಬುದು ದೃಷ್ಟಾಂತವಾಗಿರುವದು. ಅರ್ಥಾತ್ ಈ ಅನು ಮಾನದಿಂದ ಅರುರೂಪ ಆತ್ಮನಕಿಂತಲೂ ಬೇರೆಯಾಗಿ ಜಗತ್ತು ಅಸತ್ತಾಗಿರುತ್ತ ದೆಂಬ ಭಾವವು. ಹೇಗಂದರೆ,— ಜಗತ್ತುಂಟು ಸತ್ಯವಾಗಿದೆಯೆಂದು ಹೇಳಿದರೆ, ತಿಳಿದು ಹೇಳುತ್ತೀಯಾ? ತಿಳಿಯದಲೇಹೇಳುತ್ತೀಯಾ? ತಿಳದು ಹೇಳುತ್ತೇ ನಂದರೆ, ಸ್ವಪ್ನಜ್ಞಾನದಂತೆ ಜಗತ್ತು ತನಗಿಂತ ಬೇರೆಯಿಲ್ಲೆಂಬುವದು ಸಿದ್ಧ ವಾಯಿತು. ಜಗತ್ತು ವಿಷಯವೇ ಆಗಿಲ್ಲ. ನನಗೆ ಗೊತ್ತಿಲ್ಲ ಸತ್ಯಮಾತ್ರವುಂಟೆಂದು ಹೇಳಿದರೆ; ಗಗನ ಕುಸುಮದಂತೆ ಅಸತ್ತು ವ್ಯಾಘಾತ ದೋಷವು ಬರುವದು. ಯಾಕಂದರೆ, ವಿಷಯದ ಜ್ಞಾನವೇ ಇಲ್ಲದಮೇಲೆ ವಿಷಯವುಂಟೆಂದು ಹೇಳುವ ದಾದರೂ ಹೇಗೆ? ಸರೋವರದಲ್ಲಿರುವ ಕಮಲವು ಜ್ಞಾನಕ್ಕೆ ವಿಷಯವಾದ್ದರಿಂದ ಉಂಟೆಂದು ಹೇಳಿಸಿಕೊಳ್ಳುತ್ತದೆ. ಆಕಾಶದಲ್ಲಿರುವ ಕಮಲವು ಜ್ಞಾನಕ್ಕೆ ವಿಷಯ ವಾಗಿಲ್ಲ. ಆದ್ದರಿಂದಲೇ ಇಲ್ಲ. ವಂಧ್ಯಾಪುತ್ರ, ಮನುಷ್ಯನಕೋಡು, ಗಗನಕುಸುಮ, ಇವು ಜ್ಞಾನದಿಂದ ಜ್ಞೇಯವಾಗದ್ದರಿಂದಲೇ ಅತ್ಯಂತ ಅಸತ್ತುಗಳಾಗಿರುತ್ತವೆ. ಇವುಗಳಂತೆ ಜಗತ್ತು ಜ್ಞಾನಕ್ಕೆ ವಿಷಯವಲ್ಲೆಂದು ಹೇಳಿದರೆ, ಜಗತ್ತು ಅತ್ಯಂತ ಅಸತ್ ವಾಗಿರುವದೆಂಬುದೇ ಸಿದ್ಧವಾಯಿತು. ನೀನು ಯುಕ್ತಿಯಿಂದ ಜಗತ್ತನ್ನು ಸಿದ್ಧಮಾಡಲಿಕ್ಕೆ ಹೋದರೆ; ನಿನ್ನ ಯುಕ್ತಿಯಿಂದಲೇ ಜಗತ್ತು ಅಸತ್ತೆಂದು ಸಿದ್ಧವಾಯಿತು. ಆದ್ದರಿಂದ ಜಗತ್ತುಂಟೆಂಬುದು ಸಂಭವಿಸುವದಿಲ್ಲ.

ಬಳಿಕ, ಶಿಷ್ಯ:- ಇದು ಜಗತ್ತುಂಟು ಯೆಂದು ಸತ್ ಬುದ್ಧಿಗೆ ವಿಷಯವಾಗಿ ಜಗತ್ತು ತೋರುತ್ತದೆ. ಹೀಗಿದ್ದು ಇಲ್ಲೆಂದು ತಾವು ಹೇಗೆ ಹೇಳುತ್ತೀರಿ? ತಾವು ಉದಾಹರಿಸಿದ ಗಗನಕುಸುಮ, ವಂಧ್ಯಾಪುತ್ರ ಮೊದಲಾದವುಗಳು, ಕೇವಲ ನಾಮಮಾತ್ರಗಳಾಗಿ, ವಸ್ತುತಃ ಅಭಾವರೂಪಗಳಾಗಿರುತ್ತವೆ. ಜಗತ್ತು ಹಾಗೆ ಅತ್ಯಂತಾಭಾವವಲ್ಲ. ಕಿಂತು; ಭಾವರೂಪವಾಗಿ ಉಂಟು, ಅದೆ, ಎಂಬ ಬುದ್ಧಿಗೆ ವಿಷಯರೂಪದಿಂದ ಪ್ರತ್ಯಕ್ಷವಾಗಿ ತೋರುತ್ತದೆ. ಆದ್ದರಿಂದ ಇಲ್ಲೆಂದು ಹೇಳ ಲಾಗದು, ಎಂದು ಪ್ರಶ್ನೆಯನ್ನು ಮಾಡಲು;

**ಸತ್ತಿಗಿದು ಭಿನ್ನವೆನಿಸುತ್ತಿರದು ತನ್ಮಯಂ।**
**ಬೆತ್ತು ಕಾಣಿಸುವದಾಗಿ ಮೃದನನ್ಯವಂ।**
**ಪೊತ್ತ ಘಟದಂತಿದನುಮಾನ ||೯||**

**ಟೀಕಾ:-** ಇದು=ಈ ಜಗತ್ತು, ಸತ್ತಿಗೆ=ಸದ್ರೂಪವಾದ ಬ್ರಹ್ಮಕ್ಕೆ, ಭಿನ್ನ ವೆನಿಸುತ್ತಿರದು=ಬೇರೆಯೆಂದು ಹೇಳಲಿಕ್ಕೆ ಬರುವದಿಲ್ಲ. (ಪ್ರತಿಜ್ಞಾ) ತನ್ಮಯಂ= ಆ ಸದ್ರೂಪ ಬ್ರಹ್ಮದ ಸ್ವರೂಪವಾಗಿಯೇ, ಬೆತ್ತು=ಹೊಂದಿ, ಕಾಣಿಸುವದಾಗಿ= ಕಾಣಿಸುವದರಿಂದ,(ಹೇತು) ಮೃತ್=ಮಣ್ಣಿನೊಡನೆ, ಅನನ್ಯವಂ=ಅಭೇದವನ್ನು, ಪೊತ್ತ=ಹೊಂದಿದ, ಘಟದಂತೆ=ಘಟದಹಾಗೆ (ದೃಷ್ಟಾಂತ) ಇದು ಅನುಮಾನ= ಇದು ಅನುಮಾನ ಪ್ರಮಾಣವೆನಿಸುವದು,

**ಗುರು:-** ನಿನಗೆ ಉಂಟು, ಅದೆ, ಎಂಬ ಬುದ್ಧಿಗೆ ವಿಷಯವಾಗಿ ಯಾವದು ತೋರುತ್ತದೆಯೋ; ಅದು ಸದ್ರೂಪಾತ್ಮನಿಗೆ ಭಿನ್ನವಾಗಿರಲಾರದೆಂಬುದು **ಪ್ರತಿಜ್ಞಾ** ವಾಕ್ಯವದೆ. ಯಾಕಂದರೆ, ಅದರ ಸ್ವರೂಪವಾಗಿಯೇ ಕಾಣಿಸು ವದರಿಂದ ಎಂಬುದೇ **ಹೇತು** ವಾಕ್ಯವಿರುತ್ತದೆ. ಹೇಗಂದರೆ, ಮೃತ್ತಿಕೆಯೊಡನೆ ಅನನ್ಯರೂಪವಾಗಿರುವ ಘಟದಂತೆಯೆಂಬುದೇ **ದೃಷ್ಟಾಂತ**ವಾಗಿರುತ್ತದೆ. ಆದರೆ ಘಟವುಂಟುಯೆಂಬುದಾಗಿ ಸತ್ ಬುದ್ಧಿಗೆ ವಿಷಯವಾದ ಘಟವು ಮಣ್ಣಿ ಗಿಂತಲೂ ಬೇರೆಯಾಗಿರುವದೇನು? ಇಲ್ಲ. ಕಿಂತು ಮೃತ್ತಿಕಾರೂಪವೇ ಆಗಿರು ತ್ತದೆ. ಮೃತ್ತಿಕೆಯನ್ನು ಬೇರ್ಪಡಿಸಿದರೆ, ಘಟಕ್ಕೆ ಸ್ಥಿತಿಯೇ ಉಳಿಯ ಲಾರದು. ಅಂದರೆ ಮೃತ್ತಿಕೆಯ ಸತ್ತೆಯೇ ಘಟದ ಸತ್ತೆಯಾಗಿದೆ. ಹೊರ್ತು ಘಟಕ್ಕೆ ಬೇರೊಂದು ಸತ್ತೆಯಿಲ್ಲ. ಹೇಗೋ ಹಾಗೇ ಈ ಜಗತ್ತಿನಲ್ಲಿಯಾದರೂ ತೋರುವಂಥಾ ಸತ್ತು ಬ್ರಹ್ಮದ್ದೆ ಹೊರ್ತು, ಜಗತ್ತಿನದಲ್ಲ. ಸದ್ರೂಪವಾದ ಬ್ರಹ್ಮದ ಸತ್ತೆಯೇ ಜಗತ್ತಿನ ಸತ್ತೆಯಾಗಿದೆ. ಆದ್ದರಿಂದ ಬ್ರಹ್ಮದ ಸತ್ತೆಯನ್ನು ಬೇರ್ಪಡಿಸಿ ದರೆ, ಜಗತ್ತು ಅಭಾವವೇ ಆಗುವದು. ಹೇಗಂದರೆ; ಸಕ್ಕರೆಯಲ್ಲಿರುವ ಮಧುರವು ಪಕ್ವಾನ್ನಗಳಲ್ಲಿ ಸೇರಿ ಮಧುರಗಳಾಗಿರುತ್ತವೆ. ಆದರೆ, ಆ ಮಧುರವು ಸಕ್ಕರಿದೇ ಹೊರ್ತು ಅನ್ನದ್ದಲ್ಲ. ಇದರಂತೆ ಜಗತ್ತಿನಲ್ಲಿ ತೋರುವ ಸತ್ತು ಬ್ರಹ್ಮದ್ದೇ ಹೊರ್ತು ಜಗತ್ತಿನದಲ್ಲ. ಸತ್ತನ್ನು ತೆಗೆವರೆ, ಜಗತ್ತು ಅಸತ್ತೇ ಆಗಿವೆ. ಮೃತ್ತಿಕೆಯನ್ನು ತೆಗೆದರೆ ಘಟವು ಇಲ್ಲೆಂಬ ಬುದ್ಧಿಗೆ ವಿಷಯವಾದಂತೆ ಬ್ರಹ್ಮದ ಸತ್ತನ್ನು ಬೇರ್ಪಡಿಸಿದರೆ ಜಗತ್ತಾದರೂ ಇಲ್ಲೆಂಬ ಬುದ್ಧಿಗೆ ವಿಷಯವಾಗುತ್ತದೆ. ಇದಕ್ಕೆ ಶ್ರೀ ಸುರೇಶ್ವರಆಚಾರ್ಯರ ವಾಕ್ಯವುಂಟು—

**ಸ್ವಪ್ನೇ ಸ್ವ ಸತ್ತೈವಾರ್ಥಾನಾಂ ಸತ್ತಾನಾನ್ಯೇತಿ ನಿಶ್ಚಿತಾ।**
**ಕೋ ಜಾಗ್ರತಿ ವಿಶೇಷೋಽಸ್ತಿ ಜಡಾನಾಮಾಶು ನಾಶಿನಾಮ್॥**

ಸ್ವಪ್ನದಲ್ಲಿ ತೋರುವ ಸ್ವಪ್ನ ಪದಾರ್ಥಗಳಿಗೆ ಇರುವಿಕೆಯು (ಸತ್ತೆಯು) ತನ್ನದೇ ಹೊರ್ತು ಬೇರೊಂದರದಲ್ಲ. ಇದರಂತೆ; ಜಾಗ್ರದವಸ್ಥೆಯಲ್ಲಿ ತೋರುವಂಥಾ ಜಡ, ಅನಿತ್ಯಗಳಾದ ಪದಾರ್ಥಗಳಿಗಾದರೂ, ತನ್ನ ಸತ್ತೆಯೇ ಅಲ್ಲದೇ ಬೇರೆಯಾರ ಸತ್ತೆಯೂ ಇಲ್ಲ. ಅಂದರೆ; ತನ್ನ ಅಸ್ತಿತ್ವದಮೇಲೆ ಜಗತ್ತಿನ ಅಸ್ತಿತ್ವವುಂಟೇ ಹೊರ್ತು ಬೇರೆಯಿಲ್ಲೆಂಬ ಭಾವವು. ಅದರಿಂದ ಜಗತ್ತು ಇಲ್ಲೆಂಬ ತಾತ್ಪರ್ಯವಾಗಿರುತ್ತದೆ.

**ಬಳಿಕ ಶಿಷ್ಯ:-** ಜಗತ್ತು ನನ್ನ ಬುದ್ಧಿಗೆ ಉಂಟೆಂದು ತೋರಿದರೆ, ತಮ್ಮ ಬುದ್ಧಿಗೆ ಇಲ್ಲೆಂದು ತೋರುವದು. ಆದ್ದರಿಂದ ಉಂಟೆಂಬ ಇಲ್ಲೆಂಬ ಎರಡೂ ಬುದ್ಧಿಗೂ ಜಗತ್ತು ವಿಷಯವಾಗಿರುವುದೆಂದು ಅಂಗೀಕಾರಮಾಡೋಣ. ಹೀಗೆ ಮಾಡಿದರೆ ವಾದವೇ ಇಲ್ಲ. ಯಾಕಾಗ ಒಲ್ಲದೆಂದು ಒಪ್ಪಿದರೆ, ಜಗತ್ತು ಅವಿವೇಕದಿಂದ ತೋರುತ್ತದೆಂದು ತಾವು ಪೂರ್ವದಲ್ಲಿ ಹೇಳಿದ ಮಾತು ಬಾಧಿಸಿಕೊಳ್ಳುತ್ತದೆ. ಯಾಕಂದರೆ; ಪ್ರತ್ಯಕ್ಷ ವ್ಯವಹಾರ ರೂಪದಿಂದ ತೋರುತ್ತದೆ. ಅದರಿಂದ ಅವಿವೇಕದಿಂದ ತೋರುತ್ತದೆಂದು ಹೇಳಲಿಕ್ಕಾಗದು- ಎಂದು ಪ್ರಶ್ನೆಯನ್ನುಮಾಡಲು;

**ನೆನಹಿಂಗೀ ಜಗವನ್ಯವೆನಲಿಲ್ಲವಾತ್ಮನೊಳು ।**<br>
**ತನಗನ್ಯ ಹೇತುವಿಲ್ಲದೊಪ್ಪಿಹುದಾಗಿ ।**<br>
**ಕನಸಿನಂತೆಂಬುದನುಮಾನ ॥೧॥**

**ಟೀಕಾ:-** ನೆನಹಿಗೆ=ಮನಸ್ಸಿಗೆ, ಈ ಜಗವು=ಈ ಜಗತ್ತು, ಅನ್ಯವೆನಲಿಲ್ಲ= ಬೇರೆಯೆಂದು ಹೇಳಲಿಕ್ಕೆ ಬರುವದಿಲ್ಲ,(ಪ್ರತಿಜ್ಞಾ) ಆತ್ಮನೊಳು=ತನ್ನಲ್ಲಿ, ತನಗನ್ಯ ಹೇತುವಿಲ್ಲದೆ=ತನಗೆ ಬೇರೆ ಕಾರಣವಿಲ್ಲದೆ, ಒಪ್ಪಿಹುದಾಗಿ = ಇರುವವರಿಂದ,(ಹೇತು) ಕನಸಿನಂತೆ=ಸ್ವಪ್ನದ ಹಾಗೆ, (ದೃಷ್ಟಾಂತ) ಎಂಬುದು = ಅನ್ನುವದು, ಅನುಮಾನ= ಅನುಮಾನ ಪ್ರಮಾಣವೆನಿಸುವದು;

**ಗುರು:-** ಎಲೈ ಶಿಷ್ಯನೇ ! ಕೇಳು. ನಾನು ಪಾರಮಾರ್ಥಿಕ ಬ್ರಹ್ಮ ದೃಷ್ಟಿಯಿಂದ ಜಗತ್ತು ಇಲ್ಲೆಂದು ಹೇಳಿದರೆ, ನೀನು ವ್ಯವಹಾರ ದೃಷ್ಟಿಯಿಂದ ಜಗತ್ತು ಉಂಟೆಂದು ಹೇಳುವಿ. ಅರ್ಥಾತ್ ವಿವೇಕ ಬುದ್ಧಿಯಿಂದ ನಾನು ಇಲ್ಲೆಂದು ಹೇಳಿದರೆ, ನೀನು ಅವಿವೇಕ ಬುದ್ಧಿಯಿಂದ ಉಂಟೆಂದು ಹೇಳುವಿ. ಒಂದು ವೇಳೆ ನಿನ್ನ ಬುದ್ಧಿಯು ವ್ಯವಹಾರದಿಂದ ವಿವೇಕವುಳ್ಳದ್ದಾದರೂ, ವಸ್ತು ವಿಚಾರದಿಂದ ನೋಡಿದರೆ ಅವಿವೇಕವೇ ಆಗಿರುತ್ತದೆ. ಇರಲಿ, ಪರಂತು; ಉಂಟು, ಇಲ್ಲ. ಎಂಬ ಎರಡು ಬುದ್ಧಿಗಳಿಗೆ ವಿಷಯವಾಗಿ ಜಗತ್ತು ತೋರುವದರಿಂದ, ಈ ಬುದ್ಧಿಗೆ ಈ ಜಗವು ಬೇರೆಯಾಗಿಲ್ಲವೆಂಬುವದು **ಪ್ರತಿಜ್ಞಾ**ವಾಕ್ಯವಿರುತ್ತದೆ. (ಬುದ್ಧಿ,ಮನಸ್ಸು, ನೆನಹು.

ಇವು ಪರ್ಯಾಯ ಶಬ್ದಗಳಾಗಿವೆ.) ಯಾಕಂದರೆ. ಆತ್ಮನಲ್ಲಿ ಬೇರೊಂದು ಕಾರಣ ವಿಲ್ಲದೆ ತೋರುವದರಿಂದ ಎಂಬುದು ಹೇತುವಾಕ್ಯವಿರುತ್ತದೆ. ಹೇಗಂದರೆ, ಸ್ವಪ್ನದ ದೃಷ್ಟಾಂತವಂತೆ, ಎಂಬುದು ಅನುಮಾನ ಪ್ರಮಾಣವಿರುತ್ತದೆ. ತನ್ನಲ್ಲಿ ಸ್ವಪ್ನ ಪ್ರಪಂಚವು ನಿರ್ನಿಮಿತ್ತವಾಗಿ ತೋರತ್ತದೆ. ಮತ್ತು ಸ್ವಪ್ನ ಪ್ರಪಂಚವು ಸ್ವಪ್ನದಲ್ಲಿ ಸತ್ಯವಾಗಿ ಉಂಟೆಂದು ತೋರಿದರೂ, ಜಾಗ್ರತ್ಕಾಲದಲ್ಲಿ ಇಲ್ಲೆಂಬ ಬುದ್ಧಿಗೆ ಅಸತ್ತಾಗಿಯೂ ತೋರುತ್ತದೆ. ಆದ್ದರಿಂದ ಸ್ವಪ್ನವು ಸದಸದ್ವಿಲಕ್ಷಣ ಅನಿರ್ವಚನೀಯ ಮನೋಮಯವಾಗಿರುವಂತೆ; ಜಗತ್ತಾದರೂ ಸಚ್ಚಿದಾನಂದ ಸ್ವರೂಪವಾದ ತನ್ನಲ್ಲಿಯೇ ನಿಮಿತ್ತವಿಲ್ಲದೆ, ಸದಸದ್ವಿಲಕ್ಷಣ ಅನಿರ್ವಚನೀಯ ಮನೋಮಯವಾಗಿರುತ್ತದೆ. ಆದ್ದರಿಂದಲೇ ಅಧಿಷ್ಠಾನನಾದ ತನ್ನಲ್ಲಿ ಜಗತ್ತು ಕಲ್ಪಿತ ಮಿಥ್ಯೆಯಾಗಿರುತ್ತದೆಂಬುದೇ ನಿಶ್ಚಯವಾಯಿತು. ವಿಚಾರ ದೃಷ್ಟಿಯಿಂದ ನೋಡಿದರೂ, ಜಗತ್ತು ಇಲ್ಲ. ಶ್ರುತಿಗಳಾದರೂ ಮೂರು ಕಾಲಗಳಲ್ಲಿಯೂ ಜಗತ್ತಿಲ್ಲೆಂದು ಹೇಳುತ್ತವೆ. ಹೇಗಂದರೆ:-

**ಈ ವಿವರ್ತಕ್ಕೆಂ ಸದೇವ ಸೋಮ್ಯೇತಿಯಾ।**
**ತ್ಮೈವೇದಮಿತಿ ಸ ವಾಯು ಮಾತ್ಮೇತಿ ಯೆಂ।**
**ದಾವೇದ ಮುಂಟು ತಿಳಿಪುತ್ರ ॥೧೧॥**

**ಟೀಕಾ:-** ಈ ವಿವರ್ತಕಂ್ಕ= ಈ ವಿವರ್ತವಾದಕ್ಕೆ, (ಸದೇವಸೋಮ್ಯೇತಿ) ಹೇಸೋಮ್ಯ=ಎಲೈ ಶಿಷ್ಯನೇ, ಸದೇವಇತಿ=ಈ ಜಗತ್ತು ಉತ್ಪತ್ತಿಗಿಂತಪೂರ್ವದಲ್ಲಿ ಸದ್ರೂಪವೇ ಆಗಿತ್ತೆಂದು, (ಭೂತಕಾಲ) (ಆತ್ಮೈವೇದಮಿತಿ) ಇದಂ=ಈಜಗತ್ತು ಆತ್ಮೈವ ಇತಿ=ಆತ್ಮಸ್ವರೂಪವಾಗಿರುವದೆಂದೂ, (ವರ್ತಮಾನಕಾಲ) ಸವಾಯುಮಾತ್ಮೇತಿ = ಮುಂದಾಗುವದೆಲ್ಲವು ಆತ್ಮ ಸ್ವರೂಪವಾಗಿರುವದೆಂದೂ, (ಭವಿಷ್ಯತ್ಕಾಲ) ಎಂದು=ಹೀಗೆಂದು, ಆ ವೇದಮುಂಟು=ಶ್ರುತಿಗಳುಂಟು, ತಿಳಿಪುತ್ರ= ಹೇಶಿಷ್ಯನೇ ನೀನು ತಿಳಿ,

**ಭೂತವಾ ಭುವನವಾ ಜಾತವಾ ಜಾಯುವಾ।**
**ನಾತ್ತತ್ವವೆಲ್ಲ ವಾತ್ಮನೆಂದಿಹ ನಿಗಮ।**
**ಜಾತದರ್ಥವನೆ ತಿಳಿಯೊಂದೆ ॥೧೨॥**

**ಟೀಕಾ:-** ಭೂತವಾಭುವನಗಳು = ಹಿಂದಾದಲೋಕಗಳು, ಜಾತವಾ= ಉತ್ಪನ್ನವಾದವುಗಳು, ಜಾಯಮಾನ=ಮುಂದಾಗುವ, ಆ ತತ್ವವೆಲ್ಲವು= ಆ ಸಕಲ ತತ್ತ್ವಗಳು, ಆತ್ಮನೆಂದಿಹ=ಆತ್ಮಸ್ವರೂಪಗಳೆಂದು ಹೇಳುವಂಥಾ, ನಿಗಮಜಾತದ= ವೇದವಾಕ್ಯಸಮೂಹದ, ಅರ್ಥವನೆ=ತಾತ್ಪರ್ಯವನ್ನೇ, ತಿಳಿಯೊಂದೆ=ಒಂದೇ ಆಗಿರುವದೆಂದು ತಿಳಿ.

**ಇದು ಕಾರಣಂ ಲೋಕದುದಯವು ಶಿವ ಜೀವ।**
**ದುದಯವಾ ಬ್ರಹ್ಮದೊಳು ಕಲ್ಪಿತಾಕಾರ।**
**ದುದಯವೆಂದರಿಯುವಲೆ ಸೂನು ||೧೩||**

ಟೀಕಾ:- ಇದುಕಾರಣಂ=ಈ ಕಾರಣದಿಂದ, ಲೋಕದುದಯವು=ಜಗದುತ್ಪತ್ತಿಯು, ಶಿವಜೀವರುದಯವು=ಶಿವ ಜೀವರ ಉತ್ಪತ್ತಿಯು, ಆ ಬ್ರಹ್ಮದೊಳು=ಉಕ್ತಬ್ರಹ್ಮದಲ್ಲಿ, ಕಲ್ಪಿತಾಕಾರದುದಯವೆಂದು=ಜಗದಾದಿ ಉತ್ಪತ್ತಿಗಳು ಕಲ್ಪಿತಗಳಾಗಿರುವವೆಂದು, ಎಲೆಸೂನು=ಎಲೈ ಮಗನೇ, ಅರಿಯುವದು=ತಿಳಿಯುವದು.

(ಶ್ರುತಿ ಪ್ರಮಾಣಗಳು)

'ಸದೇವ ಸೋಮ್ಯೇತಿ' ಈ ತೋರುವ ಜಗತ್ತು ಉತ್ಪತ್ತಿ ಪೂರ್ವದಲ್ಲಿ ಸದ್ರೂಪವೇ ಆಗಿತ್ತೆಂದೂ, 'ಆತ್ಮೈವೇದಮಿತಿ' ಈಗಲಾದರೂ ಸದ್ರೂಪ ಚಿದ್ರೂಪವಾಗಿರುವದೆಂದೂ, 'ಸವಾಯ ಮಾತ್ಮೇತಿ' ಮುಂದೆ ಆಗುವ ಲೋಕಾದಿಗಳಾದರೂ ಆತ್ಮರೂಪಗಳೇ ಆಗಿರುತ್ತವೆಂದೂ, ಅಂದರೆ, ಹಿಂದಿನ ಈಗಿನ ಮುಂದಿನ ಯಾವತ್ತು ಲೋಕಗಳು ಆತ್ಮನಲ್ಲಿ ಕಲ್ಪಿತಗಳಾಗಿರುತ್ತವೆ. ಕಲ್ಪಿತಗಳಾದ್ದರಿಂದ ಅಧಿಷ್ಠಾನನಾದ ಆತ್ಮಸ್ವರೂಪಗಳೇ ಹೊರ್ತು, ಆತ್ಮನಿಗಿಂತ ಭಿನ್ನಗಳಲ್ಲವೆಂಬ ಭಾವವು. ಅಂದರೆ, ಶ್ರುತಿಗಳು; ಭ್ರಾಂತಿ ದೃಷ್ಟಿಮೂಲಕ ತೋರಿದ ಜಗತ್ತನ್ನು ಬಾಧಿಸಿ, ಆತ್ಮಸ್ವರೂಪಗಳೆಂದು ಹೇಳುವದರಿಂದ, ಶಿವ, ಜೀವ, ಜಗತ್ತು ಈ ಮೂರು ಪರಬ್ರಹ್ಮ ಸ್ವರೂಪವಾದ ತನ್ನಲ್ಲಿ ಕಲ್ಪಿತಗಳಾಗಿರುತ್ತವೆಂಬುದು ಸಿದ್ಧವಾಗುತ್ತದೆ.

**ಇಂತು ಯುಕ್ತ್ಯನುಮಾನ ಸಂತತಿಗಳೊಡನೆ ಶ್ರುತಿ ।**
**ಮುಂತಾಗಿ ವಿಶ್ವವೇನೆಂಬ ಶಂಕೆ ಬಿಡು ।**
**ವಂತೊಲಿದು ಪೇಳ್ದೆನಿದರಲ್ಲಿ ||೧೪||**

ಟೀಕಾ:- ಇಂತು=ಈ ಪ್ರಕಾರ, ಯುಕ್ತಿ=ದೃಷ್ಟಾಂತಗಳು, ಅನುಮಾನ=ಅನುಮಾನಪ್ರಮಾಣಗಳು, ಸಂತತಿಗಳೊಡನೆ = ಸಮೂಹದೊಡನೆ, ಶ್ರುತಿ ಮುಂತಾಗಿ=ಶ್ರುತಿಗಳ ಪ್ರಮಾಣಮೂಲಕ, ವಿಶ್ವವೇನೆಂಬ=ಜಗತ್ತು ಏನಾಗಿರಬಹುದೆಂಬ, ಶಂಕೆ=ಸಂಶಯ, ಬಿಡುವಂತೆ=ಹೊರಟುಹೋಗುವಹಾಗೆ, ಒಲಿದು=ಪ್ರೀತಿಯಿಂದ, ಇದರಲ್ಲಿ=ಗ್ರಂಥದಲ್ಲಿ, ಪೇಳ್ದೆನು=ಹೇಳಿದೆನು;

**ಎಳೆಗಳೆಂಟವರೊಡನೆ ತಿಳಿಯೆ ಪಂಚಾಶೀತಿ।**
**ಯುಳವಟ್ಟಪದದೊಸೆಳೆಸೆವಾದಿ ಸಂಧಿಯಿದ।**
**ನೆಳಸಿ ಕೇಳ್ದವನೆ ಕೃತಕೃತ್ಯ ||೧೫||**

ಟೀಕಾ: ಎಳೆಗಳು=ಸೂತ್ರಗಳು, ಎಂಟು=ಎಂಟು, ಅವರೊಡನೆ=ಆ ಸೂತ್ರಗಳೊಡನೆ, ತಿಳಿಯೆ=ವಿಚಾರಿಸಲು, ಪಂಚಾಶೀತಿ=ಎಂಭತ್ತೈದು, ಅಳವಟ್ಟ=ಕೂಡಿಸಿದ, ಪದದೋಳ್=ಪದಗಳಿಂದ, ಎಸೆವ=ಶೋಭಿಸುವ, ಆದಿಸಂಧಿಯು=ಮೊದಲನೆಯ ಸಂಧಿಯು, ಇದನು=ಇದನ್ನು ಎಳಸಿ=ಇಚ್ಛೈಸಿ, ಕೇಳ್ದವನೆ=ಕೇಳಿದವನೇ, ಕೃತಕೃತ್ಯ=ಮಾಡುವದೆಲ್ಲ ಮಾಡಿದವನು,

ಈ ರೀತಿ ಶ್ರುತಿ, ಯುಕ್ತಿ, ಅನುಮಾನ ಪ್ರಮಾಣಗಳ ಮೂಲಕ ಜಗತ್ತು ಏನು? ಎಲ್ಲಿ ಹುಟ್ಟಿತು? ಎಂಬ ನಿನ್ನ ಸಂಶಯವು ಹೊರಟುಹೋಗುವ ಹಾಗೆ ಪ್ರೀತಿಯಿಂದ ಹೇಳಿರುತ್ತೇನೆ. ಸಪ್ರಮಾಣ ಅನುಭವಪೂರ್ವಕ ಹೇಳಿರುತ್ತೇನೆ. ಆದ್ದರಿಂದ ಉಕ್ತವಿಷಯದಲ್ಲಿ ಸಂದೇಹಕ್ಕೆ ಅವಕಾಶವಿಲ್ಲೆಂಬ ಭಾವವು

ಈ ಮೊದಲನೇ ಸಂಧಿಯಲ್ಲಿ ಎಂಟು ಸೂತ್ರಗಳುಂಟು, ಎಂಭತ್ತೈದು ಪದಗಳಿರುತ್ತವೆ. ಇವುಗಳಲ್ಲಿ ಜಗತ್ತು ಚಿದ್ವಿವರ್ತ ರೂಪವಿರುತ್ತದೆಂದು ಪ್ರತಿಪಾದಿಸಿದ್ದೇವೆ. ಈ ಸಂಧಿಯನ್ನು ಸಂಪೂರ್ಣವಾಗಿ ಯಾವಾತನು ಗುರುಮುಖದಿಂದ ಶ್ರವಣ ಮಾಡುತ್ತಾನೋ, ಅವನು ನಿಃಸಂಶಯನಾಗಿ ಪರಿಪೂರ್ಣ ಬ್ರಹ್ಮದಲ್ಲಿ ಸ್ಥಿರಬುದ್ಧಿಯುಳ್ಳವನಾಗಿ ಕೃತಕೃತ್ಯನು ಆಗುತ್ತಾನೆ. ಎಂದು ಪ್ರಯೋಜನವನ್ನು ತೋರಿಸಿದಂತಾಯಿತು.

**ಚಿದ್ವಿವರ್ತ ಮನನಾರ್ಥ ನಿರೂಪಣೆ ಸೂ· ೮ ತ್ರಿ. ೮೫**
**ಅಂತು ಸಂಧಿ ೧ಕ್ಕಂ, ಸೂತ್ರ ೮ಕ್ಕಂ ತ್ರಿವಿಧಿ ೮೫ಕ್ಕಂ ಮಂಗಳ ಮಸ್ತು.**

ಓಂ ಶಾಂತಿಃ, ಶಾಂತಿಃ, ಶಾಂತಿಃ.

೧. **ಕೌಮುದೀಕಾರರು:**– ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶ ಇವು ಪ್ರತಿಯೊಂದು; ಬ್ರಹ್ಮವೇ ಜಗತ್ತಿಗೆ ಉಪಾದಾನ ಕಾರಣವೆಂದು ಬೋಧಿಸತಕ್ಕವುಗಳು ಆಗಿವೆ. ಹೀಗೆಂದು ಹೇಳುತ್ತಾರೆ.

೨. **ಸಂಕ್ಷೇಪ ಶಾರೀರಕಾರರ ಅನುಯಾಯಿಗಳು:**– ಉತ್ಪತ್ತಿ, ಸ್ಥಿತಿ, ನಾಶ ಈ ಮೂರೂ ಲಕ್ಷಣಗಳಿಂದ,ಜಗತ್ತಿಗೆ ಶುದ್ಧ ಬ್ರಹ್ಮವೇ ಉಪಾದಾನ ಕಾರಣವಾಗಿದೆ ಎಂದು ಹೇಳುತ್ತಾರೆ.

೩. **ವಿವರಣಾಚಾರ್ಯರ ಅನುಯಾಯಿಗಳು:**– ಬ್ರಹ್ಮವೇ ಮಾಯೋಪಾಧಿವಶಾತ್ ಈಶ್ವರ ರೂಪದಿಂದ, ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನ ಕಾರಣವಾಗಿರುವದು ಎಂದು ಹೇಳುತ್ತಾರೆ.

೪. ಮಾಯಾ ಮತ್ತು ಅವಿದ್ಯಾ ಭೇದವಾದಿಗಳಾದ ಕೆಲವರು:- ಆಕಾಶಾದಿ ಪ್ರಪಂಚವು; ಈಶ್ವರಾಶ್ರಿತ ಮಾಯಾಪರಿಣಾಮವಾದ್ದರಿಂದ, ಆಕಾಶಾದಿ ಪ್ರಪಂಚಕ್ಕೆ ಈಶ್ವರನೇ ಉಪಾದಾನಕಾರಣನು ಆಗಿರುವನು. ಅಂತಃಕರಣವು; ಈಶ್ವರಾಶ್ರಿತ ಮಾಯಾ; ಜೀವಾಶ್ರಿತ ಅವಿದ್ಯಾ; ಈ ಎರಡರ ಪರಿಣಾಮವಾದ್ದರಿಂದ ಅಂತಃಕರಣಕ್ಕೆ ಜೀವೇಶ್ವರರಿಬ್ಬರು ಉಪಾದಾನಕಾರಣರು ಆಗಿದ್ದಾರೆಂದು ಹೇಳುತ್ತಾರೆ.

೫. ಉಕ್ತಮತದಲ್ಲಿ ಕೆಲವರು:- ಆಕಾಶಾದಿ ಪ್ರಪಂಚವು; ಈಶ್ವರಾಶ್ರಿತ ಮಾಯಾ ಪರಿಣಾಮವಾದ್ದರಿಂದ, ಈಶ್ವರನೇ ಉಪಾದಾನ ಕಾರಣನಾಗಿರುವನು. ಅಂತಃಕರಣವು; ಜೀವಾಶ್ರಿತ ಅವಿದ್ಯಾ ಪರಿಣಾಮವಾದ್ದರಿಂದ, ಜೀವನೇ ಉಪಾದಾನಕಾರಣನು ಎಂದು ಹೇಳುತ್ತಾರೆ.

೬. ಕೆಲವರು:- ವ್ಯಾವಹಾರಿಕ ಪ್ರಪಂಚಕ್ಕೆ ಬ್ರಹ್ಮವೇ ಉಪಾದಾನ ಕಾರಣವಾಗಿದೆ. ಸ್ವಪ್ನ ಪ್ರಪಂಚಕ್ಕೆ ಜೀವನೇ ಉಪಾದಾನಕಾರಣನು. ಆಗಿರುವನು ಎಂದು ಹೇಳುತ್ತಾರೆ.

೭. ಕೆಲವರು:- ಸ್ವಪ್ನದ್ರಷ್ಟನಂತೆ; ಜೀವನೇ ತನ್ನಲ್ಲಿ ಈಶ್ವರತ್ವಾದಿಕ ಸಕಲವನ್ನು ಕಲ್ಪನೆಮಾಡುತ್ತಾನೆ. ಆದ್ದರಿಂದ ಸರ್ವಕ್ಕೂ ಜೀವನೇ ಉಪಾದಾನ ಕಾರಣನು ಎಂದು ಹೇಳುತ್ತಾರೆ.

೮. ಪದಾರ್ಥ ತತ್ತ್ವ ನಿರ್ಣಯಕಾರರು:- ಜಗತ್ತಿಗೆ ಬ್ರಹ್ಮವು ವಿವರ್ತೋಪಾದಾನಕಾರಣವಾಗಿದೆ. ಮಾಯೆಯು ಪರಿಣಾಮ ಉಪಾದಾನ ಕಾರಣವಾಗಿದೆ. ಎಂದು ಹೇಳುವರು. ವಿಚಾರಸಾಗರಕಾರರ ಅಭಿಪ್ರಾಯವು ಇದೇ ಇರುತ್ತದೆ.

೯. ಸಂಕ್ಷೇಪ ಶಾರೀರಕಕಾರರು:- ಅರಳೆಯು ತಂತು ದ್ವಾರಾ ಪಟವಾದಂತೆ; ಮಣ್ಣು ಜಗಿಶಕ್ತಿ ದ್ವಾರಾ ಘಟವಾದಂತೆ; ಬ್ರಹ್ಮವು ಅಂದರೆ, ಶುದ್ಧ ಬ್ರಹ್ಮವೇ; ಮಾಯಾಶಕ್ತಿ ದ್ವಾರಾ ಜಗತ್ತಿಗೆ ವಿವರ್ತೋಪಾದಾನಕಾರಣವಾಗಿರುತ್ತದೆ. ಎಂದು ಹೇಳುವರು.

೧೦. ವಾಚಸ್ಪತಿ ಮಿಶ್ರಾಚಾರ್ಯರು:- ಜೀವಾಶ್ರಿತ ಮಾಯಾ; ಬ್ರಹ್ಮವನ್ನು ವಿಷಯಮಾಡಿದೆ. ಆದ್ದರಿಂದ ಜೀವನೇ ಜಗತ್ತಿಗೆ ವಿವರ್ತೋಪಾದಾನ ಕಾರಣನು ಆಗಿರುವನು. ಮಾಯೆಯು ಸಹಕಾರಿ ಮಾತ್ರವಾಗಿದೆ. ಹೀಗೆಂದು ಹೇಳುವರು.

**೧೧. ಸಿದ್ಧಾಂತಮುಕ್ತಾವಲೀಕಾರರು:-** ಮಾಯಾಶಕ್ತಿಯೇ ಜಗತ್ತಿಗೆ ಉಪಾದಾನ ಕಾರಣವಾಗಿದೆ. ಬ್ರಹ್ಮವಲ್ಲ. ಮಾಯೆಗೆ ಬ್ರಹ್ಮವು ಅಧಿಷ್ಠಾನವಾಗಿರುವದರಿಂದ; ಬ್ರಹ್ಮದಲ್ಲಿ ಉಪಾದಾನವು ಉಪಚಾರಪರವಾಗಿರುತ್ತದೆಂದು ಹೇಳುವರು.

ಉಕ್ತ ಹನ್ನೊಂದು ಮತಗಳಲ್ಲಿ (೯) ಸಂಕ್ಷೇಪ ಶಾರೀರಕಾರರ ಅಭಿಪ್ರಾಯವೇ ಅನುಭವಸಾರದಲ್ಲಿ ಹೇಳಿರುವದೆಂದು ಕಂಡು ಬರುತ್ತದೆ.

ಮೇಲೆ ಹೇಳಲ್ಪಟ್ಟವರೆಲ್ಲರೂ ಅದ್ವೈತ ಆಚಾರ್ಯರೇ ಇರುವರು. ಪ್ರತಿಯೊಂದು ತಮ್ಮ ತಮ್ಮ ಮತಗಳನ್ನು ಶ್ರುತಿ, ಯುಕ್ತಿ, ಸೂತ್ರ, ಪ್ರಮಾಣಗಳಿಂದ ಸಿದ್ಧಾಂತಗೊಳಿಸಿದ್ದಾರೆ. ಎಲ್ಲವೂ ಅಂಗೀಕರಿಸಲಿಕ್ಕೆ ಯೋಗ್ಯಗಳಾಗಿವೆ. ಒಂದೇ ವೇದಾಂತ ಮತದಲ್ಲಿ ಪರಸ್ಪರ ವಿರುದ್ಧವಾದ ಅನೇಕ ಅಭಿಪ್ರಾಯವುಳ್ಳವರಾಗಲಿಕ್ಕೆ ಕಾರಣವೇನೆಂದು ಕೇಳಿದರೆ, ಅಧಿಕಾರಿ ಜನರ ಬುದ್ಧ್ಯನುಗುಣವಾಗಿಯೂ ಅದ್ವೈತ ವಸ್ತುಜ್ಞಾನದಲ್ಲಿ ತಾತ್ಪರ್ಯಯುಳ್ಳವರಾದ್ದರಿಂದಲೂ, ಹೀಗೆ ಅನೇಕ ರೀತಿ ಹೇಳಿರುವರು. ಯಾರಿಗೆ ಯಾರ ಮತವು ಚನ್ನಾಗಿ ಕಾಣುವದೋ; ಅವರು ಅದೇ ಪ್ರಕಾರ ವಿಚಾರವನ್ನು ಮಾಡಿ ಬ್ರಹ್ಮಜ್ಞಾನಸಂಪನ್ನರಾದರಾಯಿತು. ಇವುಗಳಲ್ಲಿ ಯಾವದು ಶ್ರೇಷ್ಠ ನಿಕೃಷ್ಟಗಳೆಂದು ಹುಡುಕುವದು ಬೇಕಾಗಿಲ್ಲ.

ಶ್ರೀ ಮನ್ನಿಜಗುಣ ಶಿವಯೋಗಿಗಳ ಅಭಿಪ್ರಾಯವೂ ಹೀಗೇ ಇರುತ್ತದೆಂದು ಕಂಡುಬರುತ್ತದೆ. ಹೇಗಂದರೆ- **ಪರಮಾನುಭವ ಬೋಧೆಯಲ್ಲಿ** ಜಗವು ಕಾರಣತ್ರಯವೊಂದರಿಂದುದಿಸಿಲ್ಲ. ಉಪಾದಾನ ಕಾರಣ, ನಿಮಿತ್ತ ಕಾರಣ, ಸಹಕಾರಿ ಕಾರಣ, ಇವುಗಳಿಂದ ಈ ಜಗತ್ತು ಉತ್ಪನ್ನವಾಗಿಲ್ಲವೆಂದು (ಪ-ಸ.೨-ಸೂ-೧೨-ಪ-೫) ಹೇಳಿದರು.

**ವಿವೇಕಚಿಂತಾಮಣಿಯಲ್ಲಿ:-** ಜಗತ್ತಿಗೆ ಮಾಯೆಯೇ ಉಪಾದಾನ ಕಾರಣ, ಈಶ್ವರನೇ ನಿಮಿತ್ತ ಕಾರಣ, ಪುಣ್ಯ ಪಾಪಗಳೇ ಸಹಕಾರಿ ಕಾರಣಗಳುಂಟು. ಆದ್ದರಿಂದ ಜಗತ್ತು ಘಟದಂತೆ ಕಾರ್ಯವಾಗಿರುತ್ತದೆಂದು ಹೇಳಿರುವರು. (ವಿ-೧-೧)

**ಅನುಭವಸಾರದಲ್ಲಿ:-** 'ಚಿತ್ತಿನ ವಿವರ್ತವೆಂದೆನಬೇಹುದು' ಈ ಜಗತ್ತಿಗೆ ಚಿದ್ರೂಪ ಬ್ರಹ್ಮವೇ ವಿವರ್ತೋಪಾದಾನ ಕಾರಣವಾಗಿದೆ ಹೊರ್ತು ಬೇರೊಂದು ಕಾರಣವಿಲ್ಲೆಂದು ( ಅ-ಸಂ-೧-೬ ) ಮಾಯಾಮಾತ್ರ ಉಪಾದಾನಕಾರಣವಾಗದೆಂದೂ ಹೇಳಿರುವರು.

**ಪರಮಾನುಭವ ಬೋಧೆಯಲ್ಲಿ:-** ಜಗತ್ತು ಬ್ರಹ್ಮದ ವಿವರ್ತವಲ್ಲ. ಬ್ರಹ್ಮದ ಕಾರ್ಯವಲ್ಲ. ಬ್ರಹ್ಮಕ್ಕೆ ವಿಲಕ್ಷಣವಿಲ್ಲ. ಬ್ರಹ್ಮದಲ್ಲಿಯೂ ಇಲ್ಲ. ಅತ್ಯಂತ ಅಭಾವವಾಗಿದೆಯೆಂದು (ಪ-೩-೧೨-೧) ಹೇಳಿದ್ದಾರೆ.

**ಪರಮಾರ್ಥ ಗೀತೆಯಲ್ಲಿ:-** ಬ್ರಹ್ಮವು ನಿರ್ವಿಕಾರವಾದ್ದರಿಂದ ಜಗತ್ತಿಗೆ ಕಾರಣವಲ್ಲ. ಮಾಯೆಯಾದರೂ (ಮಿಥ್ಯೆ) ಪುಸಿಯಾಗಿರುವದರಿಂದ ಅದೂ ಕಾರಣ ವಲ್ಲ. ಈಶ್ವರನೂ ಅಲ್ಲ ಹೀಗೆಂದು ಹೇಳತ್ತಾ ಕಾರ್ಯಕ್ಕೆ ಕಾರಣವಿಲ್ಲ. ಕಿಂತು ಸಿನ್ನ ಅವಿದ್ಯಾ ಮೂಲಕ 'ಗುಣಫಣಿಯಂದದಿ' ಜಗತ್ತು ತೋರುತ್ತದೆ. ಕಾರ್ಯ ಕಾರಣವಿಲ್ಲೆಂದು ಹೇಳಿರುವರು.

ಆದ್ದರಿಂದ ಒಬ್ಬ ಗ್ರಂಥಕರ್ತರೇ ಇಷ್ಟು ವಿರೋಧವಾಗಿ ತಮ್ಮ ಗ್ರಂಥ ಗಳಲ್ಲಿ ಹೇಳಿದ್ದಾರೆ. ಮುಮುಕ್ಷುಗಳು ಯಾವ ಅರ್ಥವನ್ನು ನಿಶ್ಚಯಮಾಡಬೇಕೆಂದು ಸಂಶಯ ಬರುತ್ತದೆ. ಆದರೆ ಸೃಷ್ಟಿಪರ ಪ್ರಕ್ರಿಯಗಳ ಕಡೆಗೆ ದೃಷ್ಟಿಯನ್ನಿಡದೆ, ಅಧಿಷ್ಠಾನ ವಸ್ತುವಿನ ಕಡೆಗೆ ದೃಷ್ಟಿಯನ್ನಿಟ್ಟು ಗ್ರಂಥಗಳನ್ನು ನೋಡುವದು ಶ್ರೇಯಸ್ಕರವಾಗಿದೆ. ಅಧಿಕಾರಿ ಪ್ರಭೇದ ಮೂಲಕ ಉಪದೇಶವಾದರೂ ಭಿನ್ನ ಭಿನ್ನವಾಗಬಹುದು. ಆದ್ದರಿಂದ ಗ್ರಂಥಕರ್ತರಲ್ಲಿ ದೋಷವನ್ನು ಎಣಿಸಕೂಡದು. ಶ್ರುತಿ, ಸ್ಮೃತಿ, ಸೂತ್ರ, ಪುರಾಣ, ಇತಿಹಾಸಗಳಲ್ಲಿ ಶೋಧಮಾಡಿ ನೋಡಿದರೆ, ಸಾವಿರಾರು ರೀತಿ ಸೃಷ್ಟಿಪ್ರಕ್ರಿಯೆಗಳು ದೊರೆಯಬಹುದು. ಆದ್ದರಿಂದ ನದಿ ಪ್ರವಾಹದಕಡೆಗೆ ನೋಡದೆ ಉಗಮದ ಕಡೆಗೆ ನೋಡುವದು ಒಳ್ಳೇದು. ಇದರಂತೆ ಅಧಿಷ್ಠಾನ ಬ್ರಹ್ಮದ ಜ್ಞಾನಮಾಡಿಕೊಳ್ಳುವದು ಶ್ರೇಯಸ್ಕರವಾಗಿದೆ.





ಶ್ರೀ ಶಂಭುಲಿಂಗಾಯನಮಃ

# ಅನುಭವಸಾರ

## ಎರಡನೆಯ ಸಂಧಿ

ಮೊದಲನೇ ಸಂಧಿಯಲ್ಲಿ ಜಗತ್ತೆಲ್ಲವು ಚಿದ್ವಿವರ್ತವೆಂದು ನಿರೂಪಣೆಮಾಡಿದರು. ಭಂಗಾರವೇ ಅನೇಕ ಆಭರಣಗಳಾಗಿ ತೋರಿದಂತೆ, ಜಲವೇ, ಅನೇಕ ತೆರೆ ನೊರೆ ಗಳಾಗಿ ತೋರುವಂತೆ, ಚಿದ್ರೂಪ ಬ್ರಹ್ಮವೊಂದೇ ಅನೇಕ ನಾಮರೂಪಾತ್ಮಕ ಜಗತ್ತು ಆಗಿರುತ್ತದೆಂಬುದನ್ನು ನಿರೂಪಣ ಮಾಡಿದರು.

ಬಳಿಕ, ಈ ವಿಷಯವನ್ನು ಕೇಳಿದ ಶಿಷ್ಯನು, ಜಗತ್ತಿನ ಸಂಬಂಧಿ ಸಂಶಯ ಗಳಿಂದ ರಹಿತನಾಗಿ, ಈ ಕಾಣುವ ಜೀವೇಶ್ವರ ಭೇದವು ಹೇಗೆ ಆಯಿತು ? ಒಂದೇ ಸದ್ರೂಪವಾದ ಬ್ರಹ್ಮವೇ ಚಿದ್ರೂಪವಾಗಿರುವದು. ಆ ಸದ್ರೂಪ ಚಿದ್ರೂಪವಾದ ಬ್ರಹ್ಮವೇ ಜೀವೇಶ್ವರವಾಗಿ ತೋರಲಿಕ್ಕೆ ಬೇಕು. ಯಾಕಂದರೆ, ಆ ಬ್ರಹ್ಮದ ವ್ಯತಿರಿಕ್ತ ಬೇರೊಂದು ವಸ್ತು ಸೃಷ್ಟಿಪೂರ್ವದಲ್ಲಿ ಇಲ್ಲೆಂದು ಮೊದಲೇ ಹೇಳಿ ದ್ದಾರೆ. ಒಂದು ಚಿದ್ರೂಪ ಬ್ರಹ್ಮವೇ ಜೀವೇಶ್ವರರಾದಮೇಲೆ, ಜೀವೇಶ್ವರರು ಸಮಾನರೇ ಆಗಿರಬೇಕಾಗಿತ್ತು. ಆಗಿಲ್ಲ. ಅಜಗಜಗಳಂತೆ ಕಿಂಚಿಜ್ಞತ್ವ ಸರ್ವ ಜ್ಞತ್ವಾದಿಗಳಿಂದ ವಿಲಕ್ಷಣರಾಗಿದ್ದಾರೆ. ಹೀಗಾಗಲಿಕ್ಕೆ ಕಾರಣವೇನಿರಬಹುದು. ಮತ್ತು ಜೀವೇಶ್ವರರು ಪರಸ್ಪರ ಭೇದವುಳ್ಳವರಾಗಿರುವರೋ? ಅಭೇದವುಳ್ಳವರಾಗಿ ರುವರೋ? ಭೇದವಾಗಿಲ್ಲ. ಅಭೇದರಾಗಿರುವರೆಂದರೆ, ಅದು ಹೇಗೆ? ಇಬ್ಬರೂ ಈ ದೇಹದಲ್ಲಿ ಕೂಡಿರುವರೋ ? ಬೇರೆಯಾಗಿರುವರೋ ? ಈ ದೇಹದ ಯಾವ ಸ್ಥಾನ ದಲ್ಲಿರುವರು ? ಏನು ಮಾಡುತ್ತಲಿರುವರು ? ಅವರುಗಳನ್ನು ನಾವು ಹೇಗೆ ಗುರ್ತಿಸ ಬೇಕು ? ಎಂಬ ಆಲೋಚನಾ ಪರನಾಗಿ, ಶಿಷ್ಯನು ಮುಂದೆ ಹೇಳುವ ರೀತಿ

ಶ್ರೀ ಸದ್ಗುರುಗಳನ್ನು ಕುರಿತು, ಜೀವೇಶ್ವರರ ವಿಷಯಕ್ಕೆ ಅನೇಕ ಪ್ರಶ್ನೆಗಳನ್ನು ಮಾಡಲಿಕ್ಕೆ ಉದ್ಯುಕ್ತನಾದನು. ಹೇಗಂದರೆ:—

ಸೂತ್ರ|| **ಜಗದೀಶ ಜೀವರಿರವೆಂತು ಕರುಣಿಸುವುದೆನ |**
**ಗಗಣಿತ ಗುಣಾಂಬುನಿಧಿ ಗುರುವರ್ಯನೆ ||**

**ಟೀಕಾ:-** ಅಗಣಿತ = ಲೆಕ್ಕವಿಲ್ಲದ, ಗುಣಾಂಬುನಿಧಿ = ಮೈತ್ರೀಕರುಣಾದಿ ಸದ್ಗುಣಗಳೆಂಬ ರತ್ನಂಗಳಿಗೆ ಸಮುದ್ರಪ್ರಾಯನಾದಂಥಾ, ಗುರುವರ್ಯನೇ= ಗುರೂತ್ತಮನೇ, ಜಗತ್=ಜಗತ್ತು, ಈಶ=ಪರಮಾತ್ಮ ಜೀವರ=ಜೀವರುಗಳ, ಇರವು=ಸ್ವರೂಪು, ಎಂತು=ಹೇಗೆ, ಎನಗೆ=ನನಗೆ, ಕರುಣಿಸುವುದು=ಕೃಪೆಯಿಂದ ತಿಳಿಸಬೇಕು.

**ತಾತ್ಪರ್ಯ:-** ಮೈತ್ರೀ, ಕರುಣಾ, ಮುದಿತಾ, ಉಪೇಕ್ಷೆ, ಅಮಾನಿತ್ವಾದಿ ದೈವೀಸಂಪದ್ರೂಪ ಗುಣಗಳೆಂಬ ರತ್ನಗಳಿಗೆ,ಆಶ್ರಯಭೂತವಾದ ಸಮುದ್ರದಂತೆ; ಶೋಭಾಯಮಾನನಾದ ಸದ್ಗುರುವೇ! ಎಂದು ಶಿಷ್ಯನು ಗುರುಗಳನ್ನು ಕುರಿತು ಸಂಬೋಧಿಸಿದ್ದಾನೆ. ಅಂದರೆ, ರತ್ನಗಳು ಅಧಿಕ ಬೆಲೆಯುಳ್ಳವುಗಳಾಗಿವೆ. ಹಾಗೇ ಸದ್ಗುಣಗಳಾದರೂ ಅವುಗಳಿಗಿಂತಲೂ ಹೆಚ್ಚಿನ ಬೆಲೆಗಳಾಗಿರುತ್ತವೆ. ಯಾಕಂದರೆ, ಸದ್ಗುಣವಿಲ್ಲದವನು ರತ್ನಗಳಿದ್ದರೂ ಮರ್ಯಾದೆಗೆ ಪಾತ್ರನಲ್ಲ. ರತ್ನಗಳಿಲ್ಲ ದಿದ್ದರೂ ಸದ್ಗುಣವಿದ್ದವನು ಜನರಲ್ಲಿ ಪೂಜ್ಯನಾಗುತ್ತಾನೆ. ಇಂಥಾ ಅಮೌಲ್ಯ ಗಳಾದ ಸದ್ಗುಣಗಳಿಂದ ಕೂಡಿದವನು ಗುರುವು ಆಗಿರುವನು. ಅಥವಾ ಸಮುದ್ರ ನಾಥನು ಅನೇಕ ರತ್ನಂಗಳನ್ನು ತನ್ನಲ್ಲಿಟ್ಟುಕೊಂಡರೂ ಜಡನಾಗಿರುವನು. ಗುರುನಾಥನು ಚೈತನ್ಯರೂಪನಾಗಿರುವನು. ಆದ್ದರಿಂದ ಗುರುವಿಗೆ ಸಮುದ್ರ ಉಪಮಾನವೂ ಯೋಗ್ಯವಲ್ಲ. ಆದರೂ ಅನೇಕತ್ವದ ಬಗ್ಗೆ ದೃಷ್ಟಾಂತಕ್ಕಾಗಿ ಉದಾಹರಿಸಲ್ಪಟ್ಟಿರುತ್ತದೆಂದು ತಿಳಿಯತಕ್ಕದ್ದು. ಅಥವಾ ಅಗಣಿತ ಜಲಗಳಿಗೆ ಸಮುದ್ರವು ಆಶ್ರಯವಾಗಿರುವಂತೆ, ಗುರುವು ಅಗಣಿತ ಸದ್ಗುಣಗಳಿಗೆ ಆಶ್ರಯ ನಾಗಿರುವನೆಂದು ತಿಳಿಯಬೇಕು. ಹೀಗೆ ಇದ್ದಾಗ್ಯೂ, ಸಮುದ್ರದ ನೀರು ಉಪ್ಪಾಗಿದೆ. ಪಾನಕ್ಕೆ ಬರುವದಿಲ್ಲ. ಗುಣನಿಧಿಯಾದ ಗುರುನಾಥನು ಮುಮುಕ್ಷು ಗಳಿಗೆ ಬಹು ರುಚಿಕರ ಪ್ರೀತಿಗೆ ಪಾತ್ರನಾಗಿರುತ್ತಾನೆ. ಸಮುದ್ರವು ಸೌಳಾದರೆ, ಗುರುವು ಸೀಯಾಗಿ ತೋರುತ್ತಾನೆ. ಆದ್ದರಿಂದ ದೃಷ್ಟಾಂತ ಸರಿಯಲ್ಲ. ಹೀಗೆ ಬೇರೆ ಬೇರೆ ಅಂಶಗಳಿಂದ ವಿರೋಧವಾದರೂ, ಅಗಣಿತ ಎಂಬ ಅಂಶದಲ್ಲಿ ಸಮಾನ ವಾಗಿದೆ. ಆದ್ದರಿಂದ ಗುರುನಾಥನು ಸಮುದ್ರದಂತೆ ಅನೇಕ ಸದ್ಗುಣಗಳಿಂದ ಕೂಡಿಕೊಂಡಿರುತ್ತಾನೆಂದು **ಗುರುವಿನನ್ನು ಸ್ತುತಿಸಿದ್ದಾನೆ.**

ಹೇ ಗುರುನಾಥನೇ! ಒಂದೇ ಸಚ್ಚಿದಾನಂದರೂಪ ಬ್ರಹ್ಮವು; ಜಗತ್ತು, ಜೀವ, ಈಶ ಇವರಿಗೆ ಕಾರಣವಾದರೂ, ಜಗತ್ತು ಜಡವಾಗಿರುವದು. ಜೀವನು ದುಃಖಿ ಅಲ್ಪಜ್ಞನಾಗಿರುವನು. ಈಶನು ಸುಖಿ ಸರ್ವಜ್ಞನಾಗಿರುವನು. ಹೀಗೆ ಭೇದ ವಾಗಿರಲಿಕ್ಕೆ ಏನು ಕಾರಣವು? ಮತ್ತು ಈ ಮೂವರುಗಳ ಉತ್ಪತ್ತಿಯು ಹೇಗೆ? ಅವರ ಸ್ವರೂಪವೇನು? ಎಂಬುವನ್ನು ತಿಳಿಸಿ, ನನ್ನ ಸಂಶಯಗಳನ್ನು ಪರಿಹರಿಸ ಬೇಕೆಂದು, ಶಿಷ್ಯನು ಈ ಸೂತ್ರದಲ್ಲಿ ಪ್ರಶ್ನೆಗಳನ್ನು ಮಾಡಿದ್ದಾನೆ.

ಬಳಿಕ, ಗ್ರಂಥಕರ್ತರಾದ ಶ್ರೀ ಮನ್ನಿಜಗುಣರು ಸಾಂಪ್ರದಾಯ ರೀತಿಯಾಗಿ ಇಷ್ಟದೇವತೆಯಾದ ಶ್ರೀ ಶಂಭುಲಿಂಗನನ್ನು ಕುರಿತು ನಮಸ್ಕಾರರೂಪಮಂಗಳ ವನ್ನು ಮಾಡುತ್ತಾರೆ.

**ಶ್ರೀ ಮಹಾದೇವಂಗೆ ಸೋಮಂಗೆ ಸತ್ಯ ಸುಖ।**
**ಧಾಮಂಗೆ ದಾನ ಶೀಲಂಗೆ ಶಂಭುವಿಂ।**
**ಗಾಮೋದದಿಂದೆ ನತನಪ್ಪೆ ॥೧॥**

ಟೀಕಾ:- ಶ್ರೀಮಹಾದೇವಂಗೆ = ಷಡ್ಗುಣೈಶ್ವರ್ಯಗಳಿಂದೊಡಗೂಡಿದ, ಸೋಮಂಗೆ=ಉಮಾನಾಮಕ ಶಕ್ತಿಯಿಂದ ಕೂಡಿದವನಾದ, ಸತ್ಯ ಸುಖಧಾಮಂಗೆ= ಸಚ್ಚಿದಾನಂದಸ್ವರೂಪನಾದ, ದಾನಶೀಲಂಗೆ = ಭಕ್ತರಿಷ್ಟಾರ್ಥಗಳನ್ನು ಕೊಡುವ ಸ್ವಭಾವವುಳ್ಳಂಥಾ,ಶಂಭುವಿಂಗೆ=ಪರಮಾತ್ಮನಿಗೆ, ಆಮೋದದಿಂದೆ=ಪ್ರೇಮಲಕ್ಷಣಾ ತ್ಮಕ ಭಕ್ತಿಯಿಂದೆ, ನತನು=ನಮಸ್ಕಾರಮಾಡುವಾತನು, ಅಪ್ಪೆ=ಆಗುತ್ತೇನೆ

ತಾತ್ಪರ್ಯ:- ಶ್ರೀ ಮಹಾದೇವ, ಸೋಮ, ಎಂಬ ಪದಗಳು ಸಗುಣ ವಾಚಕಗಳು ಆಗಿವೆ. ಸತ್ಯಸುಖಧಾಮಂಗೆ ಎಂಬ ಪದವು ನಿರ್ಗುಣವಾಚಕ ವಾಗಿವೆ. ಶಂಭುಲಿಂಗನು ಸಗುಣನೂ ನಿರ್ಗುಣನೂ ಆಗಿರುವನು. ಭೋಗಾ ಪೇಕ್ಷೆಗಳು ಸಗುಣವನ್ನು ಮೋಕ್ಷಾಪೇಕ್ಷೆಗಳು ನಿರ್ಗುಣವನ್ನು ಕುರಿತು, ಶರಣಾಗತ ರಾಗತಕ್ಕದ್ದು. ಆ ಸಕಾಮಿ ನಿಷ್ಕಾಮಿ ಭಕ್ತರಿಗೆ ಪರಮಾತ್ಮನು ಭೋಗ ಮೋಕ್ಷ ಗಳನ್ನು ಕೊಡುತ್ತಾನೆ. ಇಂಥಾ ಸಗುಣ ನಿರ್ಗುಣ ಸ್ವರೂಪನಾದ ಶ್ರೀ ಶಂಭು. ಲಿಂಗನನ್ನು ಕುರಿತು ನಮಸ್ಕಾರ ಮಾಡುತ್ತೇನೆಂಬ ಭಾವವು.

ವಿವರಣೆ:- **'ತತ್ಸೃಷ್ಟ್ವಾತದೇವಾನು ಪ್ರಾವಿಶತ್'** ಎಂಬ ಶ್ರುತ್ಯನು ಸಾರವಾಗಿ ಪರಮಾತ್ಮನೇ ಈ ಸೃಷ್ಟಿಯನ್ನು ರಚಿಸಿದನು. ಆನಂತರ ಈ ದೇಹಾ ದಿಗಳಲ್ಲಿ ಜೀವರೂಪದಿಂದ ಅಲ್ಲಲ್ಲಿ ಪ್ರಕಟನಾಗಿರುವನೆಂಬ ಶ್ರುತಿಯುಂಟು. ಆದ್ದ ರಿಂದ ಜೀವ, ಶಿವ ಎಂಬ ಎರಡು ಹೆಸರುಗಳಿದ್ದರೂ ಚೈತನ್ಯಮಾತ್ರ ಒಂದೇ ಇರು ವದೆಂಬುದು ಸಿದ್ಧವಾಗುತ್ತದೆ. ಮತ್ತು ಈ ಸಂಧಿಯ ತಾತ್ಪರ್ಯವೂ ಇದೇ ಇರುತ್ತದೆ. ಹೇಗಂದರೆ, ಈಶನು ಹೇಗೆ ನಿರ್ವಿಕಾರನಿರುವನೋ, ಹಾಗೇ ಜೀವನೂ

ನಿರ್ವಿಕಾರನಾಗಿರುತ್ತಾನೆಂದು ಸಂಧಿ ಅಂತ್ಯದಲ್ಲಿ ಹೇಳುತ್ತಾರೆ. ಉಪಾಧಿ ವ್ಯವಹಾರಗಳ ಮೂಲಕ ಜೀವೇಶ್ವರರು ಭೇದವಾಗಿ ತೋರಿದರೂ, ಸ್ವರೂಪತಃ ಅವಿಕಾರತ್ವ ಲಕ್ಷಣದಿಂದ ಅಭೇದವನ್ನು ಸೂಚಿಸುತ್ತಾರೆ. ಈ ಸಂಧಿಯಲ್ಲಿ ಹೇಳುವ ತಾತ್ಪರ್ಯಾರ್ಥವನ್ನೇ ಈ ಮಂಗಳದಲ್ಲಿಯೂ ಹೇಳುತ್ತಾರೆ. ಹೇಗಂದರೆ;— 'ದಿವ್ಯತೀತಿ ದೇವಃ' ಪ್ರಕಾಶ ಮಾಡುವದೆಂಬ ಅರ್ಥವನ್ನು ದೇವ ಪದವು ಹೇಳುತ್ತದೆ. ಪ್ರಕಾಶಾತ್ಮಕ ಬ್ರಹ್ಮಾದಿಗಳಿಗೆ ಶ್ರೇಷ್ಠನಾದ್ದರಿಂದ ಈಶನು ಮಹಾದೇವನೆನಿಸುವನು. ನೇತ್ರಾದಿ ಇಂದ್ರಿಯಗಳು ರೂಪಾದಿ ವಿಷಯಗಳನ್ನು ಬೆಳಗುವದರಿಂದ ಇಂದ್ರಿಯಗಳು ದೇವ ಎಂದು ಹೇಳಿಸಿಕೊಳ್ಳುತ್ತವೆ. ಈ ಇಂದ್ರಿಯಾದಿಗಳಿಗಿಂತಲೂ ಶ್ರೇಷ್ಠನಾದವನು ಜೀವನಿರುವನು. ದೇಹದಲ್ಲಿ ಜೀವನಿದ್ದರೆ, ಇಂದ್ರಿಯ ವ್ಯಾಪಾರಗಳು ನಡೆಯುತ್ತವೆ. ಇಲ್ಲದಿದ್ದರೆ ನಡೆಯಲಾರವು. ಆದ್ದರಿಂದ ಜೀವನು ಮಹಾದೇವನು. ಮಾಯಾಶಕ್ತಿಯಿಂದ ಈಶನು ಕೂಡಿ ಮಹೇಶನೆನಿಸಿದಂತೆ, ಮನೋಶಕ್ತಿಯಿಂದ ಕೂಡಿ ಜೀವನೆನಿಸುತ್ತಾನೆ. ತತ್ಪದಾರ್ಥ ಶಿವನು ಮಹಾಪ್ರಕಾಶ, ಮಹಾಶಕ್ತಿಯಿಂದ ಕೂಡಿಕೊಂಡಿದ್ದರೆ, ತ್ವಂಪದಾರ್ಥ ಜೀವನು ಅಲ್ಪ ಪ್ರಕಾಶ ಅಲ್ಪಶಕ್ತಿಯುಕ್ತನಾಗಿರುವನು. ಈ ರೀತಿ ಭೇದವಾಗಿ ತೋರಿದರೂ, ಸತ್ಯ, ಸುಖ, ಸ್ವರೂಪದಲ್ಲಿ ಭೇದವಿಲ್ಲ. ತತ್ತ್ವಂಪದಗಳ ಲಕ್ಷ್ಯಾರ್ಥರೂಪ ಸಚ್ಚಿದಾನಂದ ಸ್ವರೂಪವು ಒಂದೇ ಆಗಿರುತ್ತದೆ. ಅದರಲ್ಲಿ ಭೇದವಿಲ್ಲ. ಆ ತತ್‌ಪದ ಲಕ್ಷ್ಯಾರ್ಥರೂಪ ಶಿವನೇ **ನಾನು,** ತ್ವಂಪದ ಲಕ್ಷ್ಯಾರ್ಥನಾದ **ನಾನೇ ಆ ಶಿವನು,** ಶಿವನಿಗೂ ತನಗೂ ಅಭೇದ ಸ್ವರೂಪವುಂಟೆಂದು ಅಸಿಪದದಿಂದ ನಿಶ್ಚಯಮಾಡುವದೇ **ನಮಸ್ಕಾರ**ವಾಗಿರುವದು. ಈ ರೀತಿ ಅಭೇದವೆಲ್ಲಿರುವದೋ ಅದೇ ಪ್ರೇಮ, ಮೋದವೆನಿಸುವದು. ಎಲ್ಲಿ ಭೇದವಿರುವದೋ ಅಲ್ಲಿ ದ್ವೇಷವಿರುತ್ತದೆ. ಈ ಅಭೇದವೇ ಪ್ರೇಮಭಕ್ತಿ ನಾಮದಿಂದ ಕರೆಯಿಸಿಕೊಳ್ಳುತ್ತದೆ. ಭಗವದ್ಗೀತೆಯಲ್ಲಿಯೂ ಭಗವಂತನು;– ನಾಲ್ಕುವಿಧ ಭಕ್ತರಲ್ಲಿ ಆರ್ತಾದಿ ಮೂವರು ಭೇದವುಳ್ಳವರಾಗಿರುವರು. ಅವರು ನನಗೆ ಪ್ರಿಯರಲ್ಲ. **'ಜ್ಞಾನೀತ್ವಾತ್ಮೈವ ಮೇ ಮತಂ'** ಜ್ಞಾನಿಯು ಮಾತ್ರ ನನ್ನನ್ನು ತನ್ನೊಡನೆ ಅಭೇದವಾಗಿ ಕಾಣುತ್ತಾನೆ. ಆದ್ದರಿಂದ ಅಭೇದಜ್ಞಾನಿಯು ನನಗೆ ಅಧಿಕಪ್ರಿಯನಾಗಿರುವನೆಂದು ಹೇಳಿದ್ದಾನೆ. ಅದರಿಂದ ಅಭೇದವಿದ್ದಲ್ಲಿಯೇ ಪ್ರೀತಿಯಿರುತ್ತದೆಂದು ತಿಳಿಯತಕ್ಕದ್ದು. ಅರ್ಥಾತ್ ಈ ಮಂಗಲದಿಂದ ತತ್ತ್ವಮಸಿ ಮಹಾವಾಕ್ಯದ ಅರ್ಥವನ್ನೇ ಪ್ರತಿಪಾದಿಸಿದ್ದಾರೆಂದು ತಿಳಿಯಬೇಕು. ಅಂದರೆ, **ಮಹಾದೇವಂಗೆ, ಸೋಮಂಗೆ,** ಇವೆರಡು ಪದಗಳು ತತ್ತ್ವಂಪದಗಳ ವಾಚ್ಯಾರ್ಥಗಳಾದ ಜೀವೇಶ್ವರರನ್ನು, **ಸತ್ಯಸುಖಧಾಮಂಗೆ** ಎಂಬ ಪದವು ಲಕ್ಷ್ಯಾರ್ಥವಾದ ಅವರ ಸ್ವರೂಪವನ್ನು ಹೇಳುತ್ತದೆ. **ನತನಪ್ಪೆ,** ಎಂಬ (ಅಸಿ) ಪದವು ಲಕ್ಷ್ಯಗಳೆರಡಕ್ಕೂ ಅಭೇದವನ್ನು ಹೇಳುತ್ತದೆಂಬ ಭಾವವು;

ಬಳಿಕ, ಶ್ರೀ ಶಂಭುಲಿಂಗನ ಸ್ತುತಿಯನ್ನು ಮಾಡಿದ ನಂತರ, ಸಚ್ಛಿಷ್ಯನು ಶ್ರೀ ಗುರುಗಳನ್ನು ಕುರಿತು, ಮುಂದೆ ಹೇಳುವ ಪ್ರಕಾರ, ಮುಕ್ತಿಗೆ ಮಾರ್ಗ ದರ್ಶಕನು ಗುರುವೇ ಆಗಿರುತ್ತಾನೆಂದು ಹೊಗಳುತ್ತಾನೆ.

**ಭವದಾವದಲ್ಲಿ ತೊಳಲುವ ಜೀವರಿಗೆ ಸದಾ ।**
**ಶಿವಪಥವ ತೋರ್ಪ ಗುರುವರ್ಯ ಬಿನ್ನಪವ !**
**ನವಧರಿಪುದೀಗಳೊಲಿದೆನ್ನ ॥ ೨ ॥**

ಟೀಕಾ:- ಭವದಾವದಲ್ಲಿ=ಜನನ ಮರಣರೂಪ ಕಾಡ್ಗಿಚ್ಚಿನಲ್ಲಿ, ತೊಳಲುವ= ಪಾರಾಗಲಿಕ್ಕೆ ದಾರಿಗಾಣದೆ ಅಲ್ಲಿಯೇ ಅತ್ತಿತ್ತ ತಿರುಗುತ್ತಿರುವ, ಜೀವರಿಗೆ=ಜೀವಿ ಗಳಿಗೆ, ಸದಾ=ಯಾವಾಗಲೂ, ಶಿವ=ಸುಖಕರವಾದ, ಪಥವ=ಮೋಕ್ಷಮಾರ್ಗ ವನ್ನು, ತೋರ್ಪ=ತೋರಿಸುವಂಥಾ, ಗುರುವರ್ಯ=ಗುರುಶ್ರೇಷ್ಠನೆ!, ಒಲಿದು= ಪ್ರೀತನಾಗಿ, ಈಗಳ್=ಸದ್ಯಕ್ಕೆ, ಎನ್ನ=ನನ್ನ, ಬಿನ್ನಪವನು=ಮಾಡುತ್ತಿರುವ ಪ್ರಶ್ನೆ ಯನ್ನು, ಅವಧರಿಪುದು=ಲಕ್ಷಪೂರ್ವಕ ಕೇಳತಕ್ಕದು.

ತಾತ್ಪರ್ಯ:-ಜನನ ಮರಣರೂಪ ಅರಣ್ಯಕ್ಕೆ ತಾಪತ್ರಯವೆಂಬ ಅಗ್ನಿಯು ಹತ್ತಿರುತ್ತದೆ. ಇದರಲ್ಲಿ ಜೀವಿಗಳು ಸಿಕ್ಕುಬಿದ್ದು, ಪಾರಾಗಿಹೋಗುವದಕ್ಕೆ ದಾರಿ ಗಾಣದೆ, ಭವರೂಪ ಅಡವಿಯಲ್ಲಿಯೇ ಸುತ್ತುತ್ತಲಿರುತ್ತಾರೆ. ಅಂದರೆ, ಪುನಃ ಪುನಃ ಜನನ ಮರಣರೂಪ ಸಂಸಾರದಲ್ಲಿಯೇ ಇರುವರು. ಪರಮಾನಂದರೂಪ ಮುಕ್ತಿಯನ್ನು ಹೊಂದುವ ದಾರಿಯನ್ನೇ ಕಾಣರು. ಅಂಥಾ ಜೀವಿಗಳೆಲ್ಲರಿಗೂ ಮುಕ್ತಿಮಾರ್ಗವನ್ನು ತೋರಿಸುವವನು ಗುರುವೇ ಆಗಿರುವನು. ಆದ್ದರಿಂದ ಗುರುಗಳಿಗೆ ದೇಶಿಕರೆಂದು ಹೆಸರು ಬಂದಿರುತ್ತದೆ. ಸರ್ವ ಜೀವರಿಗೆ ಯಾವಾಗಲೂ ಸುಖವನ್ನುಂಟುಮಾಡುವ ಸದ್ಗುರುನಾಥನೇ! ನನ್ನ ಮನಸ್ಸಿನ ಸಂಶಯಗಳನ್ನು ಕಳೆದು, ಅಜ್ಞಾನವನ್ನು ತೊಲಗಿಸಿ, ನನಗೂ ಸುಖವನ್ನುಂಟುಮಾಡು. ಅದರಿಂದ ನಾನು ಹೇಳುವ ಪ್ರಶ್ನೆಗಳನ್ನು ಏಕಾಗ್ರಚಿತ್ತದಿಂದ ಆಲಿಸಿರಿ. ಎಂದು ಬೇಡಿಕೊಳ್ಳು ತ್ತಾನೆ. ಅರ್ಥಾತ್ ಅತ್ಯಂತ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿರೂಪ ಮೋಕ್ಷಕ್ಕೆ ಸ್ವಸ್ವರೂಪ ಜ್ಞಾನವೇ ಕಾರಣವಾಗಿರುತ್ತದೆ. ಅಂಥಾ ಜ್ಞಾನವು ಗುರೂಪದೇಶವಿಲ್ಲದೆ ದೊರೆಯದು. “**ಗುರುವಿಲ್ಲದೆಂತಪ್ಪ ಪುರುಷರ್ಗೆ ಮುಕ್ತಿ ಸಮನಿಸದು**” ಆದ್ದರಿಂದ **ಗುರುವೇ ಮುಕ್ತಿಗೆ ಮೂಲಕಾರಣನಾಗಿರುವನೆಂಬ** ಭಾವವು.

ಬಳಿಕ, ಶಿಷ್ಯನು ಗುರುಗಳನ್ನು ಕುರಿತು ತನ್ನ ಮನಸ್ಸಿನಲ್ಲಿ ತೋರಿದ ಸಂಶಯಗಳನ್ನು ಕಳೆದುಕೊಳ್ಳುವದಕ್ಕಾಗಿ, ಜೀವ ಶಿವಾದಿಗಳ ಬಗ್ಗೆ ಪ್ರಶ್ನೆಗಳನ್ನು ಮಾಡುತ್ತಾನೆ.

ಶಿವ ಜೀವಲೋಕವೆಂಬಿವನೆಂತು ತಿಳಿವೆನಾ ।
ಶಿವ ಜೀವರಾವನೆಲೆಯೊಳೆಂತಿಹರದನೆ ।
ವಿವರಿಸೆನಗಾದಿ ಗುರುವರ್ಯ ॥೩॥

**ಟೀಕಾ:-** ಶಿವ=ಸರ್ವಜ್ಞ ಸರ್ವ ಶಕ್ತಿಯುಕ್ತನಾದವನು, ಜೀವ=ಕಿಂಚಿಜ್ಞತ್ವ,ಕರ್ತೃತ್ವ, ಭೋಕ್ತೃತ್ವಾದಿಗಳಿಂದ ಕೂಡಿದವನು, ಲೋಕವ=ಈ ಕಾಣುವ ಜಡವಾದ ಜಗತ್ತು, ಎಂಬಿವನು=ಹೀಗೆ ಹೇಳಿಸಿಕೊಳ್ಳುವವುಗಳನ್ನು, ಎಂತು=ಹೇಗೆ, ತಿಳಿವೆನು=ತಿಳಿಯಲಿ, ಆ ಶಿವ ಜೀವರು=ಆ ಜೀವೇಶ್ವರರು, ಆವನೆಲೆಯೊಳು=ಯಾವ ಸ್ಥಾನದಲ್ಲಿ, ಎಂತಿಹರು=ಹೇಗಿರುವವರು, ಇದನೆ=ಈ ವಿಷಯವನ್ನೇ, ಆದಿಗುರುವರ್ಯ=ದಕ್ಷಿಣಾಮೂರ್ತಿಯಾದ ಗುರುನಾಥನೇ ! ಎನಗೆ=ನನಗೆ, ವಿವರಿಸು=ಚನ್ನಾಗಿ ತಿಳಿಸಿರಿ.

**ತಾತ್ಪರ್ಯ:-** ಶಿವ, ಜೀವ, ಜಗತ್ತು ಇವುಗಳ ಸ್ವರೂಪವೇನು ? ಆ ಶಿವ ಜೀವರು ಯಾವ ಸ್ಥಳದಲ್ಲಿ ಹೇಗೆ ಇರುವರು ? ಈ ವಿಷಯವನ್ನು ನನಗೆ ಮೊದಲು ತಿಳಿಸಿರಿ. ಯಾಕಂದರೆ, ಒಂದೇ ಬ್ರಹ್ಮದಲ್ಲಿ ತೋರಿದ ಶಿವ ಜೀವರು ಚೇತನರಾಗಿಯೂ ಜಗತ್ತು ಜಡವಾಗಿಯೂ ತೋರುತ್ತದೆ. ಈ ರೀತಿ ಜಡಾಜಡವಾಗಿ ತೋರುವುದಕ್ಕೆ ಕಾರಣವೇನು ? ಮತ್ತು ಆ ಶಿವ ಜೀವರು ಈ ದೇಹದಲ್ಲಿ ಬೇರೆ ಬೇರೆ ಸ್ಥಳದಲ್ಲಿ ವಾಸವಾಗಿರುವರೋ ? ಅಥವಾ ಒಂದೇ ಸ್ಥಳದಲ್ಲಿರುವರೋ ? ಒಂದು ಸ್ಥಳದಲ್ಲಿ ಕೂಡಿದ್ದರೂ ಹೇಗಿರುವರು ? ಜೀವನು ಕರ್ತಾ ಭೋಕ್ತಾ ಸಂಸಾರಿಯಾಗಿರುವನು. ಇವನೊಡನೆ ಶಿವನಿದ್ದರೆ ಆ ಸಂಗದೋಷದಿಂದ ಶಿವನೂ ಸಂಸಾರಿಯಾಗಬೇಕಾಗುವದು. ಅಥವಾ ಜಗತ್ಕರ್ತನಿಲ್ಲವೆನ್ನಬೇಕಾಗುವದು. ಇದು ಅಸಂಗತವಾಗಿದೆ. ಶಿವನ ಸಂಗದಿಂದ ಜೀವನು ಶಿವನಾಗಿರುವನೆಂದರೆ, ಈ ಕಾಣುವ ಸಂಸಾರವನ್ನು ಯಾರಿಗೆ ಹೇಳಬೇಕಾಗುವದು ? ಶಿವನಿಗೆಂದು ಹೇಳಿದರೆ, ಇದು ವಿರೋಧವಾಗುವದು. ಇಲ್ಲೆಂದು ಹೇಳಿದರೆ, ಸಂಸಾರವು ಯಾರಿಗಿರುವದು ? ಈ ರೀತಿ ಅನೇಕ ದೋಷಗಳು ಬರುವದರಿಂದ ಒಂದೇ ಸ್ಥಳದಲ್ಲಿ ಶಿವ ಜೀವರು ಹೇಗಿರುವರೆಂದು ಪ್ರಶ್ನೆಯನ್ನು ಮಾಡಿದ್ದಾನೆ.

## ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿಧಿ ೩

---

ಬಳಿಕ, ಹಿಂದಿನ ಸೂತ್ರದಲ್ಲಿ ಶಿಷ್ಯನು ಗುರುಗಳನ್ನು ಕುರಿತು; ಶಿವ, ಜೀವ, ಜಗತ್ತುಗಳ ಬಗ್ಗೆ ಪ್ರಶ್ನೆಗಳನ್ನು ಮಾಡಿದನು. ಅವುಗಳಿಗೆ ಈ ಸೂತ್ರದಲ್ಲಿ ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಾರೆ. ಹೇಗಂದರೆ, ಚಿದ್ರೂಪವಾದ

ಸ್ವಗತಾದಿ ಭೇದವಿಲ್ಲದ ಒಂದು ಬ್ರಹ್ಮವೇ; ಮಾಯೋಪಾಧಿಯಿಂದ ಈಶನಾದನು. ಅಹಂಕಾರ ಉಪಾಧಿಯಿಂದ ಜೀವನಾದನು. ಭೋಕ್ತೃಗಳಾದ ಜೀವರಿಗೆ ಭೋಗ್ಯಾತ್ಮಕ ಭೂತ ಭೌತಿಕ ಪ್ರಪಂಚವೇ ಜಗತ್ತಾಗಿರುವುದು. ಎಂದು ನಿರೂಪಿಸುತ್ತಾರೆ. ಆ ಶಿವ ಜೀವರು ಹೃದಯಕಮಲ ಮಧ್ಯದಲ್ಲಿ ಕೂಡಿಕೊಂಡಿರುವರೆಂದು ದೃಷ್ಟಾಂತಮೂಲಕ ತಿಳಿಸುತ್ತಾರೆ.

ಸೂತ್ರ|| **ಚಿತ್ತೊಂದುಪಾಧಿ ವಶದಿಂದೀಶ ಜೀವರೆನಿ|**
**ಸುತ್ತಮಿಹುದೆಂದು ತಿಳಿಯಲ್ಬೇಹುದು||**

**ಟೀಕಾ:-** ಚಿತ್ತೊಂದು=ಸ್ವಗತಾದಿ ಭೇದರಹಿತವಾದ ಒಂದು ಚಿದ್ರೂಪವೇ, ಉಪಾಧಿವಶದಿಂದ=ಉಪಾಧಿಗಳ ಮೂಲಕ, ಈಶಜೀವರೆನಿಸುತ್ತ=ಜೀವೇಶ್ವರರೆಂದು ಹೇಳಿಸಿಕೊಳ್ಳುತ್ತ, ಇಹುದೆಂದು=ಇರುತ್ತದೆಂದು, ತಿಳಿಯಲ್ಬೇಹುದು= ತಿಳಿಯತಕ್ಕದ್ದು.

**ತಾತ್ಪರ್ಯ:-** ಒಂದೇ ಆಕಾಶವು ಮಠೋಪಾಧಿಯಿಂದ ಮಠಾಕಾಶವೆಂದೂ, ಘಟೋಪಾಧಿಯಿಂದ ಘಟಾಕಾಶವೆಂದೂ ಹೇಳಿಸಿಕೊಳ್ಳುವಂತೆ; ಭೇದರಹಿತವಾದ ಪರಿಪೂರ್ಣ ಚಿದ್ರೂಪ ಬ್ರಹ್ಮವು ಮಾಯಾ, ಮತ್ತು ಮಾಯಾಕಾರ್ಯವಾದ ಅಹಂಕಾರಗಳ ಉಪಾಧಿಮೂಲಕ, ಈಶ ಜೀವರಾಗಿ ತೋರುತ್ತದೆ. ಹೀಗೆ ಭೇದವಾಗಿ ತೋರಿದರೂ, ಸ್ವರೂಪತಃ ಒಂದೇ ಆಗಿರುವದು. ಜೀವೇಶ್ವರಾದಿಗಳ ಭೇದವು ಔಪಾಧಿಕವಾಗಿರುತ್ತದೆ ಹೊರ್ತು; ಸ್ವರೂಪತಃ ಭೇದವಿಲ್ಲೆಂಬುದನ್ನು ಸೂಚನೆ ಮಾಡಿದರೆಂಬ ಭಾವವು.

**ಬಳಿಕ;** ಗುರುಗಳು ಶಿಷ್ಯನಿಗೆ ಅಭಯಕೊಟ್ಟು, ಈ ನಿನ್ನ ಪ್ರಶ್ನೆಗಳಿಗೆ ಪ್ರಮಾಣ ಪೂರ್ವಕವಾಗಿ ಉತ್ತರವನ್ನು ಕೊಡುತ್ತೇನೆಂದು ಹೇಳುತ್ತಾರೆ.

ತ್ರಿ|| **ಕಂದ ನೀನಿದನೆ ತಿಳಿವಂದದಿಂ ನಿಗಮಾರ್ಥ|**
**ದಿಂದೊರೆವೆನೊಲಿದು. ಕೇಳು ಮಾಯೋಪಾಧಿ|**
**ಯಿಂದೀಶನೆನಿಸುತಿಹ ನಾತ್ಮ** ||೧||

**ಟೀಕಾ:-** ಕಂದ=ಹೇ ಮಗುವೇ ! ನೀನು=ನೀನು, ಇದನೆ=ಈ ವಿಷಯವನ್ನೆ, ತಿಳಿವಂದದಿಂ=ಅರಿಯುವಹಾಗೆ, ನಿಗಮಾರ್ಥದಿಂದ=ಶ್ರುತಿಯ ಪ್ರಮಾಣರೂಪ ಅರ್ಥವನ್ನು, ಒಲಿದು=ಪ್ರೀತಿಪೂರ್ವಕ, ಒರೆವೆನು=ತಿಳಿಸುತ್ತೇನೆ, ಆತ್ಮ= ಚಿದ್ರೂಪನಾದಾತ್ಮನು, ಮಾಯೋಪಾಧಿಯಿಂದ=ಮಾಯಾಉಪಾಧಿಮೂಲಕ, ಈಶನೆನಿಸುತಿಹನು=ಈಶ್ವರನೆಂದು ಹೇಳಿಸಿಕೊಳ್ಳುವನು,

**ತಾತ್ಪರ್ಯ:-** ಕಂದನೆಂಬ ಶಬ್ದದಿಂದ ಹಾಲನ್ನು ಕುಡಿಯುವ ಕೂಸು ಎಂಬರ್ಥವಲ್ಲ. ಕಿಂತು ಸಿದ್ಧಾರ್ಥವನ್ನು ಅರಿಯದವನಾದ್ದರಿಂದ 'ಕಂದ' ಎಂದು ಸಂಬೋಧಿಸಿದ್ದಾರೆ. ನಿನಗೆ ಮುಂದೆ ಹೇಳುವ ಅರ್ಥಗಳು ನಮ್ಮ ಕಲ್ಪನೆಯಿಂದ ಹೇಳುವದಿಲ್ಲ. ಶ್ರುತಿಯ ಅರ್ಥವನ್ನೇ ನಿನಗೆ ತಿಳಿಯುವ ಹಾಗೆ ಹೇಳುತ್ತೇನೆ. ಹೇಳುವದರಲ್ಲಿ ಬೇಸರಪಡದೆ ಪ್ರೀತಿಯಿಂದ ತಿಳಿಸುತ್ತೇನೆ. ನೀನು ಏಕಾಗ್ರ ಬುದ್ಧಿಯಿಂದ ಗ್ರಹಿಸು. ಅಖಂಡ ಚಿದ್ರೂಪನಾದೊಬ್ಬ ಆತ್ಮನೇ ಶುದ್ಧ ಸತ್ವಪ್ರಧಾನ ಭೂತವಾದ ಮಾಯೋಪಾಧಿಯಿಂದ ಈಶನೆಂದು ಹೇಳಿಸಿಕೊಳ್ಳುವನು. ('ಉಪಾಧಿ' ಅಂದರೆ, **'ಸ್ವರೂಪೇ ಅಪ್ರವಿಷ್ಟತ್ವೈಸತಿ ವ್ಯಾವರ್ತಕತ್ವಂ ಉಪಾಧಿತ್ವಂ'** ಸ್ವರೂಪದಲ್ಲಿ ಪ್ರವೇಶವಾಗದೆ ಹೊರಗಿದ್ದು, ಅನ್ಯದರಿಂದ ಬೇರ್ಪಡಿಸುವದಕ್ಕೆ ಉಪಾಧಿಯೆಂದು ಹೇಳುತ್ತಾರೆ) ಅದರಿಂದ ಮಾಯೆಯು ಚಿದ್ರೂಪಾತ್ಮ ಸ್ವರೂಪದಲ್ಲಿ ಪ್ರವೇಶವಾಗದೆ ಹೊರಗಿದ್ದು, ಜೀವಾದಿಗಳಿಗಿಂತಲೂ ಈ ಈಶನು ಬೇರೆಯಾಗಿದ್ದಾನೆ. ಎಂಬದಾಗಿ ವ್ಯಾವರ್ತಕ ಮಾಡುವದರಿಂದ; ಘಟಾಕಾಶಕ್ಕೆ ಘಟೋಪಾಧಿಯಾದಂತೆ, ಈಶನಿಗೆ ಮಾಯಾ ಉಪಾಧಿಯಾಗಿರುವದು. ಘಟದ ಹವಣಾಗಿದ್ದ ಆಕಾಶಕ್ಕೆ ಘಟಾಕಾಶವೆನ್ನುವ ಹಾಗೆ, ಮಾಯಾ ಉಪಾಧಿಯೊಳಗಿದ್ದ ಉಪಹಿತ ಚೈತನ್ಯವು ಮಾತ್ರ ಈಶನೆಂದು ಕರೆಯಿಸಿಕೊಳ್ಳುತ್ತವೆ. (ಉಪಾಧಿ ಲಕ್ಷಣ ವಿಚಾರಸಾಗರದಲ್ಲಿ ನೋಡಿರಿ).

ಬಳಿಕ, ಈಶನಿಗೆ ಉಪಾಧಿ ಮೂಲಕ ಪ್ರಾಪ್ತವಾದ ಗುಣಗಳನ್ನು ಹೇಳುತ್ತಾರೆ.

**ಮತ್ತೆ ಸರ್ವಜ್ಞತಾದ್ಯುತ್ತಮೋತ್ತಮ ಶಕ್ತಿ |**<br>**ಯುಕ್ತನೆನಿಸುತ್ತೆ ಜಗವೆಲ್ಲಮಂ ಪ್ರೇರಿ |**<br>**ಸುತ್ತೆ ನಿಜಕರ್ತನಹ ನೀಶ ||೨||**

**ಟೀಕಾ:-** ಮತ್ತೆ = ಅನಂತರ, ಸರ್ವಜ್ಞತಾದಿ = ಎಲ್ಲವನ್ನರಿಯುವಿಕೆಯೇ ಮೊದಲಾದ, ಉತ್ತಮೋತ್ತಮ=ಅತ್ಯುತ್ತಮಗಳಾದ, ಶಕ್ತಿಯುಕ್ತನೆನಿಸುತ್ತೆ= ಸೃಷ್ಟಿ, ಸ್ಥಿತಿ, ನಾಶಗಳೆಂಬ ಶಕ್ತಿಗಳಿಂದ ಕೂಡದವನೆಂದು ಹೇಳಿಸಿಕೊಳ್ಳುತ್ತ; ಜಗವೆಲ್ಲಮಂ=ಎಲ್ಲ ಜಗತ್ತನ್ನು, ಪ್ರೇರಿಸುತ್ತೆ=ಒಳಹೊರಗೆ ಪ್ರೇರಣೆಯನ್ನು ಮಾಡುತ್ತಾ, ಈಶ=ಪರಮಾತ್ಮನು, ನಿಜಕರ್ತನಹನು=ಜಗತ್ತಿಗೆ ಮೂಲ ಕರ್ತನಾಗಿರುವನು.

**ತಾತ್ಪರ್ಯ:-** ಮೇಲೆ ಹೇಳಿದ ಮಾಯೋಪಾಧಿಯಿಂದ ಉಪಹಿತ ಚೈತನ್ಯ ರೂಪನಾದ ಮಹೇಶನು, ಸರ್ವಜ್ಞನು, ಸರ್ವಶಕ್ತನು, ಸರ್ವಪ್ರೇರಕನು ಆಗಿರು

ತ್ತಾನೆ. ಈ ಗುಣಗಳಿಂದ ಕೂಡಿರುವ ಕಾರಣ ಜಗತ್ತಿಗೆ ಕರ್ತನೂ ಆಗಿರುವನು. ಲೋಕದಲ್ಲಿ ಒಂದು ಘಟಕಾರ್ಯವನ್ನು ಮಾಡಬೇಕಾದರೆ, ಕುಲಾಲನಿಗೆ ಮೊದಲು ಆ ಘಟದ ಜ್ಞಾನವು ಬೇಕು. ಜ್ಞಾನಾನಂತರದಲ್ಲಿಯೇ ಘಟಕಾರ್ಯವಾಗುತ್ತದೆ. ಈ ದೃಷ್ಟಾಂತದಂತೆ, ಈ ಜಗದ್ರೂಪ ಕಾರ್ಯವಾಗಬೇಕಾದರೆ, ಈಶನಿಗೆ ಈ ಜಗತ್ತಿನ ಜ್ಞಾನವು ಇರಲಿಕ್ಕೇಬೇಕು. ಈ ಸರ್ವ ಪ್ರಪಂಚವು ಹೇಗಾಯಿತು? ಎಂದು ತಿಳಿಯಲಿಕ್ಕೆ ಎಂಥಾ ಪಂಡಿತನು ಪ್ರಯತ್ನ ಮಾಡಿದರೂ, ಕಡೆಗೆ ಇದು ತಿಳಿಯುವದಿಲ್ಲ. ಇದು ಹೇಗೆ ಆಗಿರುವದೋ? ಏನಿರುವದೋ! ಎಂದು ಆಶ್ಚರ್ಯವುಳ್ಳವನಾಗುತ್ತಾನೆ. ಆದ್ದರಿಂದ ಈ ಜಗತ್ಕಾರ್ಯವನ್ನು ಮಾಡಿದ ಈಶನು ಸರ್ವಜ್ಞನು ಆಗಿದ್ದಾನೆ. ತಿಳಿಯುವ ಮಾತ್ರದಿಂದಲೇ ಕಾರ್ಯವಾಗದು. ತಿಳಿಯುವಂತೆ ಕಾರ್ಯಮಾಡುವ ಶಕ್ತಿಯೂ ಬೇಕು. **ಅರಿಯುತಿರದ ಸಮರ್ಥನಿಂದೊಂದು ಕಾರ್ಯಂ ಅನುವಾಗದಾಗಿ** ಎಂದು ವಿವೇಕಚಿಂತಾ ಮಣಿಯಲ್ಲಿ ಹೇಳಿದ್ದಾರೆ. ಪರಮಾತ್ಮನಲ್ಲಿ ಅಘಟಿತ ಘಟನಾರೂಪ ಶಕ್ತಿಯುಂಟು. **'ಅಘಟಿತ ಘಟನಾ ಪಟೀಯಸೀಮಾಯಾ'** ಎಂಬದಾಗಿ ಶ್ರೀ. ಶಂಕರಾ ಚಾರ್ಯರು ಹೇಳಿರುತ್ತಾರೆ. ಇಂಥಾ ಮಾಯಾಶಕ್ತಿಯಿಂದ ಸಮೇತನಾದ ಮಹೇಶನಿಗೆ ಯಾವದು ಅಸಾಧ್ಯವು? ಎಲ್ಲವೂ ಸಾಧ್ಯವಾಗುತ್ತದೆ. **'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೆ'** ಪರಮಾತ್ಮನ ಶಕ್ತಿಯು ಅನೇಕ ರೂಪವಾದದ್ದಾಗಿ ರುತ್ತದೆಂಬ ಶ್ರುತಿಯೂ ಉಂಟು. ವಿಶ್ವಾಮಿತ್ರಾದಿ ಮಹರ್ಷಿಗಳು ತಮ್ಮ ತಪೋ ಶಕ್ತಿಯಿಂದ ಸಂಕಲ್ಪಮಾತ್ರದಿಂದಲೇ ಉಪಾದಾನಾದಿ ಯಾವ ಸಾಧನಗಳಿಲ್ಲ ದಿದ್ದರೂ, ಸ್ವರ್ಗಾದಿ ಲೋಕಗಳನ್ನು ಸೃಜಿಸಿದ್ದಾರೆ. ಅಂದಮೇಲೆ ಅಘಟಿತ ಘಟನಾರೂಪ ಮಾಯಾಶಕ್ತಿಯುಕ್ತನಾದ ಮಹೇಶನಲ್ಲಿ ಇನ್ನೇನು ಹೇಳತಕ್ಕದ್ದು. ಉಪಾದಾನಾದಿ ಸಾಧನಸಾಮುಗ್ರಿಗಳು ಯಾವೂ ಇಲ್ಲದಿದ್ದರೂ, ಬೇಕಾದ ಕಾರ್ಯ ವನ್ನುಂಟು ಮಾಡುವ ಶಕ್ತಿಯುಂಟು, ಅಸಂಭವವಾದದ್ದು ಯಾವದೂ ಇಲ್ಲ.

ಅಥವಾ ಸ್ವಪ್ನಾವಸ್ಥೆಯಲ್ಲಿ ಜೀವನು ಸ್ವಪ್ನ ಕಲ್ಪಿತ ಪದಾರ್ಥಗಳನ್ನು ಏಕ ಕಾಲದಲ್ಲಿ ರಚಿಸುತ್ತಾನೆ. ಮತ್ತು ಅವುಗಳ ಜ್ಞಾನವೂ ಇರುತ್ತದೆ. **'ಸ್ವಸ್ಮಿನ್ನ ಧ್ಯಸ್ತ ಸರ್ವಾವಭಾಸಕತ್ವಂ ಸರ್ವಜ್ಞತ್ವಂ'** ಸ್ವಪ್ನಗತ ಜೀವನಲ್ಲಿ ಕಲ್ಪಿತ ಸರ್ವ ಸ್ವಪ್ನ ಪದಾರ್ಥಗಳ ಜ್ಞಾನವು ಹೇಗೆ ಇರುತ್ತದೆಯೋ ಹಾಗೇ, ಈಶ್ವರನಲ್ಲಿ ಅಧ್ಯಸ್ತ ವಾದ ಈ ಜಗತ್ತಿನ ಜ್ಞಾನವು ಇರುತ್ತದೆ. ಈ ಜಗತ್ತಿನ ಸರ್ವನಾಮ ರೂಪಾತ್ಮಕ ಸೃಷ್ಟಿಯ ಜ್ಞಾನವು ಈಶ್ವರನಿಗಿದ್ದಂತೆ ಬೇರೆ ಯಾರಿಗೂ ಇರಲಾರದು. ಇದೇ ಸರ್ವಜ್ಞತ್ವವೆಂದು ಹೇಳಲ್ಪಡುತ್ತದೆ. ಮತ್ತು ಕಿಂಚಿತ್ ನಿದ್ರಾದೋಷದಿಂದ ನಾನಾ ವಿಚಿತ್ರಗಳಾದ ಸ್ವಪ್ನಗಳ ರಚನಾಶಕ್ತಿಯು ನಮ್ಮ ಅನುಭವಕ್ಕೆ ಬರುತ್ತದೆ. ಅಂದಮೇಲೆ; ಸಕಲ ದೋಷಮಯವಾದ ಮಾಯಾ ಶಕ್ತಿಯಿಂದ ಏನು ಆಗಲಿ

ಕ್ಷಿಲ್ಲ. ಎಂಬುದು ಕೈಮುತಿಕನ್ಯಾಯದಿಂದ ಸಿದ್ಧವಾಗುತ್ತದೆ. ಆದ್ದರಿಂದ ಪರಮಾತ್ಮನು **ಸರ್ವಜ್ಞನೂ ಸರ್ವಶಕ್ತನೂ** ಆಗಿರುವನು.

ಮತ್ತು ಈಶನು ಸರ್ವಾತ್ಮರ ಹೃದಯಾದಿಗಳಲ್ಲಿ ಅಂತರ್ಯಾಮಿ ರೂಪದಿಂದ ಇದ್ದು ಪ್ರೇರಿಸುತ್ತಾನೆ. **'ಹೃದ್ದೇಶೇ ತಿಷ್ಠಾಮಿ'** ಎಂಬ ಸ್ಮೃತಿಯುಂಟು. **'ವಿಜ್ಞಾನೇ ತಿಷ್ಠನ್ ವಿಜ್ಞಾನಮಂತರೋ ನಿಯಮಯತಿ'** ಜೀವನಲ್ಲಿದ್ದು ಜೀವನನ್ನು ಪ್ರೇರಿಸುತ್ತಾನೆಂಬ ಶ್ರುತಿಯುಂಟು. **'ತೇನ ವಿನಾ ತೃಣಮಪಿ ನ ಚಲತಿ'** ಪರಮಾತ್ಮನ ಪ್ರೇರಣೆಯಿಲ್ಲದೆ ಹುಲ್ಲುಕಡ್ಡಿಯಾದರೂ ಅಗಲಾಡಲಾರದು. ಎಂಬ ಮಹಾತ್ಮರ ವಾಕ್ಯವೂ ಉಂಟು. ಈ ರೀತಿ ಒಳಗೆ ಪ್ರೇರಿಸುವದಲ್ಲದೆ, ಹೊರಗೆ ಶ್ರುತಿ ಸ್ಮೃತಿರೂಪ ಆಜ್ಞೆಯಿಂದಲೂ ಪ್ರೇರಿಸುತ್ತಾನೆ. ಆದ್ದರಿಂದ ಸರ್ವಪ್ರೇರಕನೆಂಬ ನಾಮವು ಬಂದಿರುತ್ತದೆ. ಚೇತನರೂಪ ಅಶ್ವದ ಪ್ರೇರಣೆಯಿಲ್ಲದೆ ರಥವು ಚಲಿಸದು. ಡ್ರೈವರನ ಪ್ರೇರಣೆಯಿಲ್ಲದೆ ಮೋಟಾರು ಓಡದು. ಈ ದೃಷ್ಟಾಂತಗಳಂತೆ; ಚೇತನರೂಪ ಪರಮಾತ್ಮನ ಪ್ರೇರಣೆಯಿಲ್ಲದೆ, ಜಡವಾದ ಜಗತ್ತು ವ್ಯವಹರಿಸದು. ಕಿಂತು ಚೈತನ್ಯರೂಪ ಪರಮಾತ್ಮನ ಪ್ರೇರಣೆಯಿಂದಲೇ ವ್ಯವಹಾರವು ನಡೆದಿರುತ್ತದೆ.

**ಶಂಕಾ:-** ಡ್ರೈವರನು, ಅಶ್ವವು, ಇವುಗಳು ನಮ್ಮ ಕಣ್ಣಿಗೆ ತೋರುತ್ತವೆ. ಪರಮಾತ್ಮನು ನಮ್ಮ ಕಣ್ಣಿಗೆ ತೋರುವದಿಲ್ಲ. ಆದ್ದರಿಂದ ಈಶನು ಪ್ರೇರಿಸುತ್ತಾನೆಂಬುದು ಕೇವಲ ನುಡಿ ಮಾತ್ರವಾಗಿದೆ. ಈಶನಿಗೆ ಶರೀರವಿಲ್ಲ. ಅವನು ನಮ್ಮನ್ನು ಪ್ರೇರಿಸುವದು ಹೇಗೆ ಆಗುವದು ?

**ಸಮಾಧಾನ:- 'ಕಾಲಮೆಂತು ಅಮೂರ್ತಮಾದೊಡಂ ಪಲ್ಲವ ಕುಸುಮಾದಿ ಸಾಧಕ ಮಪ್ಪುದೋ'** ವಂಸತ ಋತುವಿಗೆ ಶರೀರವಿಲ್ಲ. ಕಣ್ಣಿಗೆ ಕಾಣಿಸುವದೂ ಇಲ್ಲ. ಗಿಡಗಳು ಚಿಗತು ಚಿಗುರೆಲೆ ಹೂವು ಕಾಯಿ ಬಿಡುವದನ್ನು ಕಂಡು; ವಸಂತ ಋತುವು ಬಂತೆಂದು ಹೇಳುತ್ತಾರೆ. ಇಲ್ಲಿ ವಿಚಾರ ಮಾಡತಕ್ಕದ್ದು ಏನೆಂದರೆ:– "ವಸಂತ ಋತುವಿಗೆ ಶರೀರವಿಲ್ಲ. ನಿರವಯುವವಾಗಿರುತ್ತದೆ. ಆದರೂ ವೃಕ್ಷಾದಿಗಳಿಗೆ ಹೇಗೆ ಪ್ರೇರಣೆಯನ್ನು ಮಾಡುವದೋ, ಹಾಗೆ ಪರಮಾತ್ಮನು ನಿರವಯುವನು. ಅಶರೀರಿಯಾಗಿದ್ದು, ಕಣ್ಣಿಗೆ ಕಾಣಿಸದೆ, ಸರ್ವವನ್ನು ಪ್ರೇರಿಸುತ್ತಲಿರುವನೆಂಬಲ್ಲಿ ಯಾವ ಸಂದೇಹವೂ ಇಲ್ಲ. ಆದ್ದರಿಂದ ಈಶನು ಸರ್ವಜ್ಞ, ಸರ್ವಶಕ್ತ, ಸರ್ವ ಪ್ರೇರಕನಾಗಿರುವನು. ಹಾಗು ಜಗತ್ತಿಗೆ ಕರ್ತನಾಗಿರುವನೆಂಬುದು ಸಮಿಚೀನವಾಗಿರುತ್ತದೆ.

**ಬಳಿಕ,** ಜೀವಾತ್ಮನಿಗೆ ಅಹಂಕಾರ ಉಪಾಧಿಯನ್ನು ಹೇಳುತ್ತಾರೆ.

**ಅಂತಾ ಪ್ರಕೃತಿಯವಸ್ಥಾಂತರಂ ತಾನಾದ ।**
**ಹಂತೆಯುಪದಾನ ವಾಗೆ ಜೀವಾತ್ಮಪೆಸ।**
**ರಿಂತೋರ್ಪುದೊಂದೆ ಚಿದಖಂಡ ॥೩॥**

**ಟೀಕಾ:-** ಅಂತಾ=ಆ, ಪ್ರಕೃತಿಯು=ಮಾಯೆಯು, ಅವಸ್ಥಾಂತರಂ=ರೂಪಾಂತರವಾದ, ತಾನಾದಹಂತೆ=ತಾನಾದ ಅಹಂಕಾರವು, ಉಪದಾನವಾಗೆ=ಉಪಾಧಿಯಾಗಲು, ಒಂದೇ ಚಿದಖಂಡ=ಒಂದೇ ಅಖಂಡವಾದ ಚಿದ್ರೂಪವು, ಜೀವಾತ್ಮಪೆಸರಿಂ=ಜೀವಾತ್ಮನೆಂಬ ಹೆಸರಿನಿಂದ, ತೋರ್ಪುದು=ತೋರುತ್ತಿರುವದು.

**ತಾತ್ಪರ್ಯ:-** ತಮಃ ಪ್ರಧಾನ ಭೂತವಾದ ಮಾಯೆಯೇ, ಜಗತ್ತಿನ ಉತ್ಪತ್ತಿಗೆ ಅಭಿಮುಖವಾಗಲು; **ಪ್ರಕೃತಿ**ಯೆಂಬ ಹೆಸರನ್ನು ಪಡೆಯಿತು. ಬಳಿಕ ಆ ಪ್ರಕೃತಿಯು; ಮಹತ್ತು, ಅಹಂಕಾರ, ಪಂಚತನ್ಮಾತ್ರೆ, ಪಂಚಭೂತಗಳ ರೂಪಾಗಿ ಪರಿಣಾಮವನ್ನು ಹೊಂದಿತು, ಆ ಐದು ಭೂತಗಳಿಂದ ಪಂಚಪ್ರಾಣ, ಇಂದ್ರಿಯದಶಕ, ಕರಣಪಂಚಕ, ಜನಿಸಿದವು. ಅದರೊಳಗಿನ ಅಹಂಕಾರವೇ ಜೀವನಿಗೆ ಉಪಾಧಿಯಾಯಿತು. ಆದ್ದರಿಂದ ಜೀವನು ಅಹಂವೃತ್ತಿಯಿಂದ ಕೂಡಿಕೊಂಡು, ನಾನು ಎಂದು ನಿದ್ರೆಯಿಂದ ಏಳುತ್ತಾ ಮುಳಗುತ್ತಾ ಇರುತ್ತಾನೆ. ಈ ಅಹಂಕಾರ ಉಪಾಧಿಮೂಲಕ ಒಂದೇ ಅಖಂಡವಾದ ಚಿದ್ರೂಪು **ಜೀವನೆಂಬ** ಹೆಸರನ್ನು ಪಡೆಯಿತು. ಇಲ್ಲಿ '**ಒಂದೆ ಚಿದಖಂಡ,** ಎಂಬ ವಿಶೇಷಣದಿಂದ, ಭೇದ ರಹಿತವಾದ ಚಿತ್ತು, ಈಶ, ಜೀವ, ಎಂದು ಎರಡಾಗಿ ಉಪಾಧಿಮೂಲಕ ಭೇದವಾಗಿ ತೋರಿದರೂ; ಸ್ವರೂಪತಃ ಭೇದವಿಲ್ಲದ ಒಂದು ಚಿದ್ರೂಪ ಬ್ರಹ್ಮವೇ ಉಂಟು. ಎಂಬ ಅರ್ಥವನ್ನು ಸೂಚಿಸುತ್ತದೆ.

**ಬಳಿಕ,** ಆ ಅಹಂಕಾರ ಉಪಾಧಿಯಿಂದ ಅಖಂಡಾತ್ಮನಿಗೆ ಕರ್ತೃತ್ವಾದಿ ಗುಣಗಳು ಪ್ರಾಪ್ತವಾಗಲು; ಜೀವಾತ್ಮನೆಂಬ ಹೆಸರು ಬಂದಿತು. ಎಂದು ಹೇಳುತ್ತಾರೆ.

**ಅದು ಕರ್ತೃ ಭೋಕ್ತೃತ್ವ ಮೊದಲಾದ ಗುಣವಿಶೇ।**
**ಷ್ಯದಹಮ್ಮಿನಲ್ಲಿ ಬೆರಸಿ ತದ್ಧರ್ಮವಾಂ।**
**ತುದರಿಂದೆ ಜೀವನೆನಿಸುವದು**

**ಟೀಕಾ:-**ಅದು=ಆ ಅಖಂಡಚಿದ್ರೂಪು, ಕರ್ತೃ=ಕರ್ಮವನ್ನು ನಾನುಮಾಡಿದೆನೆಂಬ ಅಭಿಮಾನವು, ಭೋಕ್ತೃತ್ವ=ಸುಖ ದುಃಖಗಳನ್ನು ಅನುಭವಿಸುವನು ನಾನೆಂಬುದು, ಮೊದಲಾದ= ಬುಧ್ಯಾದಿ ಒಂಭತ್ತು, ಗುಣ= ವಿಶೇಷಣಗಳಾದ ಗುಣಗಳಿಂದಕೂಡಿದ, ವಿಶೇಷ್ಯದ ಹಮ್ಮಿನಲ್ಲಿ=ವಿಶೇಷ್ಯವಾದ ಅಹಂಕಾರದಲ್ಲಿ,

ಬೆರಸಿ=ತಾದಾತ್ಮ್ಯಅಧ್ಯಾಸವನ್ನು ಹೊಂದಿ, ತದ್ಧರ್ಮವ= ಆ ಅಹಂಕಾರದಧರ್ಮ ರೂಪ ಗುಣಗಳನ್ನು, ಅಂತುದರಿಂದೆ=ಹೊಂದಿದ್ದರಿಂದಲೇ, ಜೀವನೆನಿಸುವದು= ಜೀವಾತ್ಮನೆಂದು ಕರಿಸಿಕೊಳ್ಳುತ್ತಿರುವದು.

**ತಾತ್ಪರ್ಯ:-** ದೇಶ, ಕಾಲ, ವಸ್ತು, ಪರಿಚ್ಛಿನ್ನಗಳಿಂದ ರಹಿತವಾದ ಅಖಂಡ ಚಿದ್ರೂಪವಾದ ಬ್ರಹ್ಮವು, ಅಹಂಕಾರದೊಡನೆ ತಾದಾತ್ಮ್ಯ ಅಧ್ಯಾಸ ವನ್ನು ಹೊಂದಿತು. ಅದರಿಂದ ಪರಿಚ್ಛಿನ್ನನು ನಾನು ಎಂಬ ಭಾವನೆಬಂದಿತು. ಬಳಿಕ ಆ ವಿಶೇಷ್ಯವಾದ ಅಹಂಕಾರದಲ್ಲಿದ್ದ ವಿಶೇಷಣಾತ್ಮಕ ಕರ್ತೃತ್ವ ಭೋಕ್ತೃ ತ್ವಾದಿ ಗುಣಗಳಲ್ಲಿಯೂ ಅಧ್ಯಾಸವುಳ್ಳವನಾದನು. ಅದರಿಂದ ಕರ್ಮಕ್ಕೆ ತಾನು ಕರ್ತನೆಂದೂ, ಕರ್ಮಫಲ ಸುಖ ದುಃಖಗಳನ್ನು ಅನುಭವಿಸುವ ನಾನು ಭೋಕ್ತೃ ವೆಂದೂ, ಅದರಿಂದ ನಾನು ಸುಖೀ ನಾನು ದುಃಖೀ ಎಂದೂ ಭಾವನೆಯನ್ನು ಮಾಡುವಂಥವನಾದನು. ಅಂದರೆ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಭಾವನೆಗಳೆಂಬ ಒಂಭತ್ತು ವಿಶೇಷಣಗಳಾದ ಗುಣ ಗಳಿಂದ ಕೂಡಿರುತ್ತಾನೆ. ಈ ರೀತಿ ಅಹಂಕಾರದ ಗುಣಗಳಿಂದ ಕೂಡಿಕೊಂಡು, ವ್ಯವಹರಿಸುವದರಿಂದ **ಜೀವನೆಂಬ** ಹೆಸರು ಪ್ರಾಪ್ತವಾಯಿತು. ಇಲ್ಲಿ ವಿಚಾರವನ್ನು ಮಾಡಿ ನೋಡಲು, ಅಹಂಕಾರಕ್ಕೆ ಸಾಕ್ಷಿಯಾದ ಚಿದ್ರೂಪಕ್ಕೆ ಜೀವತ್ವವಿಲ್ಲ. ಹಾಗೂ ಜಡವಾದ ದೃಶ್ಯಅಹಂಕಾರಕ್ಕೂ ಇಲ್ಲ ಕಿಂತು ಮಧ್ಯಂತರದಲ್ಲಿ ಅನ್ಯೋನ್ಯ ಅಧ್ಯಾಸರೂಪ ಹೃದಯಗ್ರಂಥಿಯಲ್ಲಿಯೇ ಈ ಜೀವವ್ಯವಹಾರವು ನಡೆದಿರುತ್ತದೆ. ತಪ್ತಾಯಃಪಿಂಡದಂತಿರುವ ಈ ಅನ್ಯೋನ್ಯಾಧ್ಯಾಸರೂಪ ಜೀವತ್ವವು, ಸ್ವಸ್ವರೂಪಜ್ಞಾನದಿಂದ ನಿವೃತ್ತಿಯಾಗುತ್ತದೆ. ಅದರಿಂದ ಜೀವನ್ಮುಕ್ತಿ ಎಂಬ ನಾಮವು ಬಂದಿರುತ್ತದೆ. ಅರ್ಥಾತ್ ಜೀವತ್ವವು ಧರ್ಮಿಅಧ್ಯಾಸ ಧರ್ಮಾ ಧ್ಯಾಸಗಳ ಮೂಲಕ ಬಂದಿರುತ್ತದೆಂಬ ಭಾವವು.

ಮತ್ತು ಅಹಂಕಾರ ವಿಶೇಷ್ಯ, ಕರ್ತೃತ್ವಾದಿಗಳು ವಿಶೇಷಣ, ಎಂದು ಹೇಳು ವದರಿಂದ, ಕರ್ತೃತ್ವ ಭೋಕ್ತೃತ್ವಾದಿಗಳು ಅಹಂಕಾರದ ಧರ್ಮಗಳೇ ಹೊರತು, ಆತ್ಮನ ಧರ್ಮಗಳಲ್ಲ ಎಂಬುದನ್ನು ಹೇಳಿದಂತಾಯಿತು.

**ಶಂಕಾ:-** ಕರ್ತೃತ್ವಾದಿಗಳು ಅಹಂಕಾರದ ಧರ್ಮಗಳಲ್ಲ. ಕಿಂತು ಆತ್ಮನ ಧರ್ಮಗಳೆಂದು ಏಕೆ ಹೇಳಬಾರದು? ಯಾಕಂದರೆ, ಚೈತನ್ಯ ಸಹಾಯವಿಲ್ಲದೆ ಯಾವ ಕ್ರಿಯೆಗಳು ಸಂಭವಿಸುವದಿಲ್ಲ. ಎಂದು ತಾವೇ ಹೇಳಿರುವಿರಿ. ಆದ್ದರಿಂದ ಆತ್ಮನಿಗೆ ಕರ್ತೃತ್ವ ಭೋಕ್ತೃತ್ವಗಳುಂಟು. ಎಂದು ಶಂಕೆಯನ್ನು ಮಾಡಿದರೆ,

**ಸಮಾಧಾನಃ-** ಇದು ಸರಿಯಲ್ಲ. ಯಾಕಂದರೆ; ಎಲ್ಲಿ ಅಹಂಕಾರವಿರು ವದೋ ಅಲ್ಲಿ ಕರ್ತೃತ್ವಾದಿಗಳುಂಟು. ಎಲ್ಲಿ ಅಹಂಕಾರವಿಲ್ಲ, ಅಲ್ಲಿ ಕರ್ತೃತ್ವಾದಿ

ಗಳಿಲ್ಲ. ಆದ್ದರಿಂದ ಅಹಂಕಾರದ ಧರ್ಮಗಳೆಂದು ಹೇಳತಕ್ಕದ್ದು. ಹೇಗಂದರೆ; ಜಾಗ್ರತ್ಸ್ವಪ್ನಗಳಲ್ಲಿ ಅಹಂಕಾರವಿರುವದರಿಂದ ಕರ್ತೃತ್ವಭೋಕ್ತೃತ್ವಗಳುಂಟು. ಸುಷ್ತಿಯಲ್ಲಿ ಆತ್ಮನಿದ್ದಾನೆ ಅಹಂಕಾರವಿಲ್ಲ. ಕರ್ತೃತ್ವಾದಿಗಳಿಲ್ಲ. ಆತ್ಮನು ಸುಷ್ತಿ, ಸಮಾಧಿ, ಉದಾಸೀನಾದಿ ಅವಸ್ಥೆಗಳಲ್ಲಿ ಇದ್ದಾನೆ. ಕರ್ತೃತ್ವಾದಿಗಳಿಲ್ಲ. ಈ ಅನ್ವಯ ವ್ಯತಿರೇಕ ವಿಚಾರವನ್ನು ಮಾಡಿದರೆ ಕರ್ತೃತ್ವಾದಿಗಳು ಅಹಂಕಾರದ ಧರ್ಮಗಳಾಗಿರುತ್ತವೆಂಬುದು ಅನುಭವಸಿದ್ಧವಾಗಿರುತ್ತದೆ. ಒಂದು ವೇಳೆ ಆತ್ಮನು ಕರ್ತೃತ್ವ ಭೋಕ್ತೃತ್ವಾದಿ ಧರ್ಮಗಳುಳ್ಳವನೆಂದು ಹೇಳಿದರೆ, ಅವರು ಮೋಕ್ಷದ ಅಪೇಕ್ಷೆಯನ್ನು ಮಾಡಬಾರದು. ಯಾಕಂದರೆ, ಕರ್ತೃತ್ವಾದಿಗಳೇ ಬಂಧರೂಪವಾಗಿವೆ. ಇವುಗಳ ನಿವೃತ್ತಿವಿನಾ ಮೋಕ್ಷವಾಗದು. ಧರ್ಮನಿವೃತ್ತಿ ಯಾಗಬೇಕಾದರೆ, ಧರ್ಮಿನಾಶವಾಗದ ವಿನಾ ಧರ್ಮಗಳು ನಾಶವಾಗಲಾರವು. ಧರ್ಮಿರೂಪ ಅಗ್ನಿನಾಶವಿಲ್ಲದೆ ಧರ್ಮರೂಪ ಉಷ್ಣವು ನಾಶವಾಗದಂತೆ, ಧರ್ಮಿ ರೂಪ ಆತ್ಮನ ನಾಶವನ್ನು ಒಪ್ಪಿದರೆ, ಮೋಕ್ಷವಾರಿಗೆ? ಮತ್ತು ಶೂನ್ಯವಾದ ಪ್ರಸಂಗವೂ ಪ್ರಾಪ್ತವಾಗಬಹುದು. ಈ ರೀತಿ ಪರಂಪರಾ ದೋಷಗಳು ಒದಗು ವದರಿಂದ ಕರ್ತೃತ್ವಾದಿಗಳು ಆತ್ಮ ಧರ್ಮಗಳಲ್ಲ. ಕಿಂತು, ಅಹಂಕಾರದ ಧರ್ಮ ಗಳಾಗಿರುತ್ತವೆ. ಮತ್ತು '**ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹು ರ್ಮನೀಷಿಣಃ**, ಆತ್ಮನು ಇಂದ್ರಿಯ ಮನಸ್ಸಾದಿಗಳಿಂದ ಕೂಡಿದಾಗ್ಯೆ ಭೋಕ್ತಾ ನಾಮ ವ್ಯವಹಾರವು ಸಂಭವಿಸುವದು. ಇಂದ್ರಿಯಗಳಿಗೆ ಬೇರೆಯಾಗಿ ಇದ್ದಾಗ್ಯೆ ಈ ಭೋಕ್ತಾನಾಮವು ಬರಲಾರದೆಂದು ಶ್ರುತಿಹೇಳುತ್ತದೆ. '**ತಕ್ಷಕೋ ಉಭಯಥಾ ಯಥಾ**' ಎಂಬಪ್ರಾಗಿ ಸೂತ್ರವೂ ಉಂಟು. ಅಂದರೆ ಉಳಿ ಬಾಚಿ ಸಾಧನಗಳಿಂದ ಯುಕ್ತನಾದಾಗ್ಯೆ ಬಡಿಗನೆಂಬ ಹೆಸರು ಬರುತ್ತದೆ. ಬಿಟ್ಟಾಗ್ಯೆ ಬರುವದಿಲ್ಲ. ಇದರಂತೆ ಆತ್ಮನು ಅಹಂಕಾರದೊಡನೆ ಕೂಡಿದಾಗ್ಯೆ ಕರ್ತೃತ್ವಾದಿಗಳುಂಟು. ಇಲ್ಲದ ಕಾಲದಲ್ಲಿ ಇಲ್ಲ. ಆದ್ದರಿಂದ ಕರ್ತೃತ್ವಾದಿಗಳು ಆತ್ಮಧರ್ಮಗಳಲ್ಲ. ಕಿಂತು; ಅನಾತ್ಮವಾದ ಅಹಂಕಾರದ ಧರ್ಮಗಳಾಗಿರುತ್ತವೆ. ಆದ್ದರಿಂದ ಅಹಂಕಾರವು ವಿಶೇಷ್ಯವಾಗಿದೆ. ಕೃತ್ರ್ಯತ್ವಾದಿಗಳು ವಿಶೇಷಣಗಳಾಗಿವೆ. ಕರ್ತೃತ್ವಾದಿಗಳು ಅಹಂಕಾರದಲ್ಲಿ ಸಹಜವಾಗಿವೆ. ಆತ್ಮನಲ್ಲಿ ಆರೋಪಿತಗಳಾಗಿವೆ ಎಂಬ ತಾತ್ಪರ್ಯವು, ಆದ್ದರಿಂದ ಅಹಂಕಾರಗತ ಕರ್ತೃತ್ವಾದಿಗಳು ಸಾಕ್ಷಿ ಯೆಂಬರೂಪ ಚಿದ್ರೂಪಾತ್ಮನಲ್ಲಿ ಅಧ್ಯಾಸ ಮೂಲಕ ತೋರುವದರಿಂದ ಜೀವತ್ವವು ಬಂದಿರುವದೆಂದು ತಿಳಿ.

ಬಳಿಕ, ಶಿವ ಜೀವರುಗಳ ಸ್ವರೂಪವನ್ನು ಹೇಳಿ; ಈಗ ಜಗತ್ತಿನ ಸ್ವರೂಪ ವನ್ನು ಎರಡು ಪದ್ಯಗಳಿಂದ ವರ್ಣಿಸುತ್ತಾರೆ.

**ಜೀವನೇ ತನ್ನ ಕರ್ಮಾವಳಿಯ ಫಲವನುಣ।**
**ಲಾವಿಶ್ವಭೂತ ಭೌತಿಕ ಪ್ರಸರಂಗ।**
**ಳಾವರಿಸಿ ಕಾಣಿಪುದು ಜಗವು ||೫||**

**ಟೀಕಾ:-** ಜೀವನೇ=ಉಕ್ತಜೀವನು, ತನ್ನ = ತಾನು ಜನ್ಮಾಂತರಗಳಲ್ಲಿ ಮಾಡಿದ, ಕರ್ಮಾವಳಿಯ=ಪುಣ್ಯ ಪಾಪಕರ್ಮಗಳ ಸಮೂಹದ, ಫಲವನು=ಸುಖ ದುಃಖಗಳನ್ನು, ಉಣಲ್=ಉಪಭೋಗಿಸುವದಕ್ಕಾಗಿ, ಆ ವಿಶ್ವ=ಆ ಜಗತ್ತಿನ, ಭೂತ=ಪಂಚಭೂತಗಳು, ಭೌತಿಕ=ಭೂತ ಕಾರ್ಯಗಳ, ಪ್ರಸರಂಗಳು=ಸಮೂಹ ಗಳು, ಆವರಿಸಿ=ಎಲ್ಲ ಕಡೆಗೆ ತುಂಬಿಕೊಂಡು, ಕಾಣಿಪುದು=ತೋರುವದು, ಜಗವು=ಜಗತ್ತೆಂದು ಹೇಳಿಸಿಕೊಳ್ಳುವದು.

**ತಾತ್ಪರ್ಯ:-** ಭೋಕ್ತೃವಾದ ಜೀವನಿಗೆ; ಜನ್ಮಾಂತರಗಳಲ್ಲಿ ಮಾಡಿದ ಕರ್ಮಫಲ ಸುಖದುಃಖಗಳನ್ನು ಊಟ ಮಾಡಬೇಕಾದರೆ, ಭೋಗ್ಯಾತ್ಮಕ ಜಗತ್ತು ಬೇಕಾಗುತ್ತದೆ. ಅದು ಯಾವದು? ಅಂದರೆ, ಪ್ರತ್ಯಕ್ಷಕ್ಕೆ ವಿಷಯ ವಾಗಿಯೂ, ಶಬ್ದಾದಿ ಪಂಚವಿಷಯಗಳಿಂದ ಕೂಡಿದ, ಭೂತ ಭೌತಿಕ ಪ್ರಪಂಚವೇ ಭೋಗ್ಯವಾಗಿದೆ. ಇದು ಜಗತ್ತು ಎಂಬ ಹೆಸರಿನಿಂದ ಹೇಳಿಸಿಕೊಳ್ಳು ತ್ತದೆ. ಭೋಗ್ಯಾತ್ಮಕ ಜಗತ್ತು, ಜಡವಾಗಿರೋಣದರಿಂದ ಚೇತನರೂಪ ಭೋಕ್ತೃಗಳಾದ ಜೀವಿಗಳಿಗೆ, ತಾನೇ ಸ್ವತಃ ಸುಖದುಃಖ ಭೋಗಗಳನ್ನು ಕೊಡ ಲಾರದು. ಮತ್ತೇನಂದರೆ, ಭೋಕ್ತೃಗಳು ಭೋಗ್ಯ ವಿಷಯಗಳಲ್ಲಿ ಇಷ್ಟಬುದ್ಧಿ ಅನಿಷ್ಟಬುದ್ಧಿಗಳನ್ನು ಮಾಡುವರು.. ಅನುಕೂಲವಾದ ವಿಷಯಗಳಲ್ಲಿ ಇಷ್ಟ ಬುದ್ಧಿಯನ್ನು ಪ್ರತಿಕೂಲಗಳಾದ ವಿಷಯಗಳಲ್ಲಿ ಅನಿಷ್ಟಬುದ್ಧಿಯನ್ನು ಮಾಡು ತ್ತಾರೆ. ಆ ವಿಷಯಗಳು ಇಷ್ಟಬುದ್ಧಿ ದ್ವಾರಾ ಸುಖವನ್ನೂ ಅನಿಷ್ಟಬುದ್ಧಿ ದ್ವಾರಾ ದುಃಖವನ್ನೂ ಕೊಡುತ್ತವೆ. ಆ ಸುಖದುಃಖಾಕಾರ ವೃತ್ತಿಗಳಲ್ಲಿ, ಆ ವೃತ್ತಿಗೆ ಸಾಕ್ಷಿಯಾದ ತಾನು ತನ್ನನ್ನು ಮರೆತು, ಅಹಂ ಸುಖೀ ಅಹಂ ದುಃಖೀ ಎಂದು; ಆ ವೃತ್ತಿಗಳಲ್ಲಿ ವಿಶಿಷ್ಟನಾಗಿ ವ್ಯವಹರಿಸುತ್ತಾನೆ. ಆದ್ದರಿಂದ ಸುಖದುಃಖ ಭೋಗಗಳು ಸಂಭವಿಸುತ್ತವೆ.

ಅರ್ಥಾತ್ ತನ್ನ ಇಷ್ಟಾನಿಷ್ಟವೃತ್ತಿ ವ್ಯವಹಾರದಿಂದ ಜೀವನು ಇದು ಸುಖ, ಇದು ದುಃಖ ಎಂದು ಕಲ್ಪನೆಯನ್ನು ಮಾಡುತ್ತಾ ಹೋಗಿದ್ದಾನೆ. ತನ್ನ ದೋಷನ್ನು ಅನ್ಯ ವಿಷಯಗಳ ಮೇಲೆ ಹಾಕುತ್ತಿರುವನು. ಹೇಗೆಂದರೆ, ಮಾರ್ಗ ದಲ್ಲಿ ಹೋಗುತ್ತಿರಲು ತಾನೇ ಕಲ್ಲನ್ನು ಎಡವಿ ನನ್ನ ಕಾಲಿಗೆ ಕಲ್ಲು ಬಡಿಯಿತು ಎಂಬಂತೆ, ತಾನೇ ವಿಷಯಗಳಲ್ಲಿ ಸುಖದುಃಖಗಳನ್ನು ಕಲ್ಪಿಸಿ, ಇದು ನನಗೆ ಸುಖ ಕೊಟ್ಟಿತು, ಇದು ನನಗೆ ದುಃಖ ಕೊಟ್ಟಿತು ಎಂದು ಇಂದ್ರಿಯಗಳಿಗೆ ಗೋಚರ ಗಳಾದ ವಿಷಯಗಳಲ್ಲಿ ಸುಖದುಃಖಾದಿಗಳನ್ನು ಆರೋಪ ಮಾಡುತ್ತಿರುತ್ತಾನೆ.

ಅಂದರೆ, ಜೀವನಿಗೆ ಜನ್ಮಾಂತರಗಳಲ್ಲಿ ಮಾಡಿದ ಪುಣ್ಯವೇ, ವಿಷಯಗಳಲ್ಲಿ ಅನುಕೂಲ ರೂಪ ಇಷ್ಟಬುದ್ಧಿಯನ್ನುಂಟು ಮಾಡಿ, ಸುಖಕ್ಕೆ ಹೇತುವಾಗಿದೆ. ಪಾಪವೇ ಪ್ರತಿಕೂಲರೂಪ ಅನಿಷ್ಟಬುದ್ಧಿಯನ್ನುಂಟು ಮಾಡಿ, ದುಃಖಕ್ಕೆ ಕಾರಣವಾಗಿದೆ. ಆ ಪುಣ್ಯ ಪಾಪಕರ್ಮಗಳಾದರೂ ಜಡಗಳಾದ್ದರಿಂದ ತಾವೇ ಇಷ್ಟಾನಿಷ್ಟ ಬುದ್ಧಿಗಳನ್ನುಂಟು ಮಾಡಲಾರವು. ಹಾಗೆ ಹೇಳಿದರೆ, ಕರ್ಮಂಗಳಿಗೆ ಕರ್ತೃತ್ವ ಬರುತ್ತದೆ. ಅದು ನಿರೀಶ್ವರವಾದಿಗಳಾದ ಪೂರ್ವಮೀಮಾಂಸಕರ ಮತವಾಗುತ್ತದೆ. ಮತ್ತೇನಂದರೆ, ಆ ಪುಣ್ಯ ಪಾಪಕರ್ಮಗಳ ಸಂಸ್ಕಾರಗಳಿಗೆ ದೇಶಕಾಲಾನುಗುಣ್ಯವಾಗಿ ಅಂತರ್ಯಾಮಿಯಾದ ಈಶ್ವರನು ಪ್ರೇರಿಸುತ್ತಾನೆ. ಈಶನ ಪ್ರೇರಣೆಯಿಂದ ಕರ್ಮಸಂಸ್ಕಾರವು ವಾಸನೆಯನ್ನುಂಟು ಮಾಡುತ್ತದೆ. ಆ ವಿಷಯ ವಾಸನೆಯಿಂದ ವಿಷಯದಲ್ಲಿ, ಬಳಿಕ ಇಷ್ಟಾನಿಷ್ಟ ಬುದ್ಧಿಗಳು ತೋರುತ್ತವೆಂದು ತಿಳಿಯಬೇಕು. ಮತ್ತು ಈಶನು ಜೀವರ ಕರ್ಮಾನುಗುಣ್ಯವಾಗಿ ಪ್ರೇರಿಸುವದರಿಂದ, ಈಶನಿಗೆ ರಾಗ ದ್ವೇಷಾದಿಗಳುಂಟು ಎಂಬ ದೋಷವೂ ಬರುವದಿಲ್ಲ. ಆಸ್ತಿಕ್ಯಸಿದ್ಧಾಂತವೂ ಸಿದ್ಧಿಸುತ್ತದೆ. ಭೋಕ್ತೃಗಳಾದ ಜೀವಿಗಳ ಭೋಗಗಳಿಗೆ ಸಾಧನವಾದದ್ದು ಭೋಗ್ಯರೂಪ ಜಗತ್ತಾಗಿರುತ್ತದೆಂಬ ಭಾವವು.

ಬಳಿಕ, ಆ ಭೋಗ್ಯಾತ್ಮಕ ಜಗತ್ತು ಭೋಕ್ತೃಗಳ ಬುದ್ಧಿಭೇದದಿಂದ ಹಲವು ಪ್ರಕಾರವಾಗಿ ತೋರುತ್ತದೆಂದು ಹೇಳುತ್ತಾರೆ.

**ಅದು ಸರ್ವ ದೇಹಿಗಳಿಗೊದವಿಮೋಹಕನಾಂ ।**
**ತದಿದೆಂಬ ಬಗೆಯ ನೆಸಗಿ ಬಹುವೃತ್ತಿಗಾ ।**
**ಸ್ಪದವಾಗಿ ತಾನೆ ಮೆರೆಯುವದು ॥೬॥**

ಟೀಕಾ:- ಅದು = ಆ ಜಗತ್ತು, ಸರ್ವ ದೇಹಿಗಳಿಗೆ = ಎಲ್ಲ ಜೀವಿಗಳಿಗೆ, ಒದವಿ=ಚನ್ನಾಗಿ, ಮೋಹಕವನು=ವಿಪರೀತ ಬುದ್ಧಿರೂಪ ಪ್ರೀತಿಯನ್ನು ಆಂತು= ಉಂಟುಮಾಡಿ, ಅದು=ಪರೋಕ್ಷವೆಂದೂ, ಇದು=ಅಪರೋಕ್ಷವೆಂದೂ, ಎಂಬ= ಎನ್ನುವ, ಬಗೆಯನು=ಭಾವನೆಯನ್ನು, ಎಸಗಿ=ಹುಟ್ಟಿಸಿ, ಬಹುವೃತ್ತಿಗೆ=ರಾಗ ದ್ವೇಷಾದಿ ಅನೇಕ ವೃತ್ತಿಗಳಿಗೆ, ಆಸ್ಪದವಾಗಿ = ಆಶ್ರಯವಾಗಿ, ತಾನೆ ಮೆರೆಯುವದು=ತಾನೇ ಶೋಭಾಯಮಾನವಾಗಿರುವದು.

**ತಾತ್ಪರ್ಯ:-** ಜಗತ್ತು ಸರ್ವ ಜೀವಿಗಳ ಪ್ರೀತಿಗೆ ಪಾತ್ರವಾಗಿರುತ್ತದೆ. ಮತ್ತು ಪರೋಕ್ಷ ಪ್ರತ್ಯಕ್ಷ ಬುದ್ಧಿಗಳಿಗೆ ವಿಷಯವಾಗಿರುತ್ತದೆ. ಕೆಲವರಿಗೆ ಸುಖ ದುಃಖ, ರಾಗ, ದ್ವೇಷ, ಉದಾಸೀನ, ನಾಮಕ ವೃತ್ತಿಗಳಿಗೆ ಗೋಚರವಾಗಿಯೂ ತೋರುತ್ತಿರುತ್ತದೆ ಶಬ್ದಾದಿ ಪಂಚ ವಿಷಯಗಳಿಂದ ಕೂಡಿದ ಜಗತ್ತು;

ಕಂಡೊಡನೆ ಜೀವಿಗಳಿಗೆ ಸುಖರೂಪವಾಗಿ ತೋರುತ್ತದೆ. ಇಂದ್ರಿಯಗಳಾದರೂ ಸ್ವಭಾವತಃ ಬಹಿರ್ಮುಖವುಳ್ಳವುಗಳಾಗಿ ವಿಷಯಗಳ ಕಡೆಗೆ ಧಾವಿಸುತ್ತವೆ. ಆ ವಿಷಯಗಳು ಮೊದಲು ಸುಖರೂಪಗಳಾಗಿ ತೋರಿ; ಕಡೆಯಲ್ಲಿ ನಿರಸರೂಪ ದುಃಖ ಮಯಗಳಾಗಿ ತೋರುತ್ತವೆ. ಆದರೂ ಜೀವಿಗಳು ಆ ವಿಷಯಗಳನ್ನು ತ್ಯಜಿಸದೆ, ನಷ್ಟವಾದ ವಿಷಯಗಳನ್ನು ಪುನಃ ಸಂಪಾದನಮಾಡುವದರಲ್ಲಿಯೇ ತತ್ಪರರಾಗುತ್ತಾರೆ. ಅರ್ಥಾತ್ ಇದು ದುಃಖಮಯವೆಂದು ತಿಳಿದರೂ ಬಿಡದೆ, ಅದರಲ್ಲಿಯೇ ಕಮಲದಲ್ಲಿದ್ದ ಭೃಂಗದಂತೆ ಮೋಹಾಸಕ್ತರಾಗಿರುವರು. ಸುಖವಿಲ್ಲದಿದ್ದರೂ ಸುಖವೆಂದು ತಿಳದಿರುವದೇ ಮೋಹವು. ಮತ್ತು ಜಗದ್ವಿಷಯಗಳು ದೂರದಲ್ಲಿರುವದರಿಂದ ಪರೋಕ್ಷವಾಗಿಯೂ, ಸಮೀಪದಲ್ಲಿರುವದರಿಂದ ಅಪರೋಕ್ಷವಾಗಿಯೂ ತೋರುತ್ತಿರುತ್ತವೆ. ಇಹಲೋಕವು ಪ್ರತ್ಯಕ್ಷವಾಗಿದೆ. ಸ್ವರ್ಗಾದಿ ಪರಲೋಕಗಳು ಪರೋಕ್ಷಗಳಾಗಿವೆ. ಭೂಮಿ, ಜಲ, ಅಗ್ನಿ ಈ ಮೂರು ಭೂತಗಳು ಪ್ರತ್ಯಕ್ಷಗಳಾಗಿವೆ. ವಾಯು, ಆಕಾಶ ಪರೋಕ್ಷಗಳಾಗಿವೆ. ಈ ಜಗತ್ತು ರಾಗ, ದ್ವೇಷ, ಉದಾಸೀನ ವೃತ್ತಿಗಳಿಗೆ ವಿಷಯವಾಗಿಯೂ ತೋರುತ್ತದೆ. ಸ್ತ್ರೀರತ್ನಾದಿಗಳು ರಾಗಕ್ಕೆ ವಿಷಯಗಳಾಗಿವೆ. ಹಾವು, ಚೇಳುಗಳು ದ್ವೇಷಕ್ಕೆ ವಿಷಯಗಳಾಗಿವೆ. ಕಸ, ಕಡ್ಡಿ ಮೊದಲಾದವುಗಳು ಉಪೇಕ್ಷಾ ಬುದ್ಧಿಗೆ ವಿಷಯಗಳಾಗಿವೆ. ಆದ್ದರಿಂದ ಈ ಜಗತ್ತು ಬಹುವೃತ್ತಿಗಳಿಗೆ ಆಸ್ಪದವಾಗಿ ತೋರುತ್ತಿರುತ್ತದೆ. ಈಶ್ವರ ರಚಿತ ಸೃಷ್ಟಿಯು ಒಂದೇ ವಿಧವಾಗಿದ್ದರೂ ಜೀವರ ಬುದ್ಧಿಭೇದ ಮೂಲಕ ಅನೇಕ ವಿಧವಾಗಿ ತೋರುತ್ತದೆ. ಹೇಗಂದರೆ, ವಿವೇಕಚಿಂತಾಮಣಿಯಲ್ಲಿ ಹೇಳಿದ ರತ್ನ ಮತ್ತು ಸ್ತ್ರೀ ದೃಷ್ಟಾಂತಗಳನ್ನು ನೋಡಿರಿ.

ಬಳಿಕ, ಶಿವ, ಜೀವ, ಜಗತ್ತುಗಳನ್ನು ನಿರೂಪಣ ಮಾಡಿ, ಆ ಶಿವ ಜೀವರು ಯಾರ ಸ್ಥಳದಲ್ಲಿ? ಹೇಗೆ ಇರುವರು? ಎಂಬುದನ್ನು ನಿರೂಪಿಸುತ್ತಾರೆ.

**ಇಂತು ಶಿವ ಜೀವ ಜಗದಂತಮಂ ತಿಳಿವುದೋ ।**
**ರಂತಾವ ತಾಣದೊಳಗೀಶ ಜೀವಾತ್ಮ ।**
**ರೆಂತಿರ್ಪರೆಂಬುದನೆ ಕೇಳು ॥೭॥**

**ಟೀಕಾ:-** ಇಂತು=ಈ ಪ್ರಕಾರ, ಶಿವಜೀವ ಜಗದ: ಶಿವಜೀವ ಜಗತ್ತುಗಳು ಅಂತಮಂ=ಸ್ವರೂಪವನ್ನು, ಓರಂತೆ=ಚನ್ನಾಗಿ ತಿಳಿವುದು=ತಿಳಿಯತಕ್ಕದ್ದು, ಈಶ ಜೀವಾತ್ಮರು=ಜೀವೇಶ್ವರರು, ಆವ ತಾಣದೊಳಗೆ=ಯಾವ ಸ್ಥಳದಲ್ಲಿ, ಎಂತಿರ್ಪರು= ಹೇಗಿರುವರು, ಎಂಬುದನೆ=ಅನ್ನುವಂಥಾದ್ದನ್ನು, ಕೇಳು:ಏಕಾಗ್ರ ಚಿತ್ತದಿಂದ ಆಲಿಸು.

**ತಾತ್ಪರ್ಯ**:- ಉಕ್ತ ಪದ್ಯಗಳಲ್ಲಿ ಶಿವ, ಜೀವ ಮತ್ತು ಜಗತ್ತು ಇವುಗಳ ಜ್ಞಾನವು ಚೆನ್ನಾಗಿ ಆಗುವ ಹಾಗೆ, ನಾವು ನಿನಗೆ ತಿಳಿಸಿರುತ್ತೀವೆ. ನೀನು ತಿಳಿಯ ತಕ್ಕದ್ದು. ಮತ್ತು ಆ ಶಿವಜೀವರು ಯಾವ ಸ್ಥಳದಲ್ಲಿ? ಹೇಗಿರುತ್ತಾರೆ? ಎಂದು ನೀನು ಮಾಡಿದ ಪ್ರಶ್ನೆಗಳಿಗೆ ಉತ್ತರವನ್ನು ಹೇಳುತ್ತೀವೆ. ಮುಂದೆ ಹೇಳುವ ವಿಷಯುವನ್ನು ನೀನು ಏಕಾಗ್ರ ಬುದ್ಧಿಯಿಂದ ಶ್ರವಣಮಾಡು. ಎಂಬದಾಗಿ ಗುರುಗಳು ಶಿಷ್ಯನನ್ನು ಎಚ್ಚರಿಸುವಂಥವರಾಗಿದ್ದಾರೆ.

**ಬಳಿಕ**, ಶಿವ ಜೀವರಿಬ್ಬರೂ ಹೃದಯ ಕಮಲದ ದಳಗಳಲ್ಲಿಯೂ, ಕಮಲದ ಬುಡದಲ್ಲಿಯೂ, ಯಾವಾಗಲೂ ಕೂಡಿಕೊಂಡು ಸಂಚರಿಸುತ್ತಲಿರುತ್ತಾರೆಂದು ಹೇಳುತ್ತಾರೆ.

**ಶಿವ ಜೀವರೀರ್ವರೊಂದವಯವಾಂತರದೊಳು |**
**ದ್ಭವಕಂಜ ಕರ್ನಿಕಾಗ್ರದಲ್ಲಿಯೆ ನೋಡ |**
**ಲವಿರತಂ ಗೂಡಿ ಮೆರೆಯುವರು ||೮||**

**ಟೀಕಾ**:- ಶಿವ ಜೀವರೀರ್ವರು=ಶಿವ ಜೀವರಿಬ್ಬರು, ಉದ್ಭವ=ತೋರುವ, ಕಂಜ=ಕಮಲದ, ಒಂದು ಅವಯವಾಂತರದೊಳು=ಯಾವದಾದರೊಂದು ದಳದಲ್ಲಿಯಾಗಲಿ, ಕರ್ನಿಕಾಗ್ರದಲ್ಲಿಯೇ=ಕರ್ನಿಕೆಯ ಮೂಲದಲ್ಲಿಯಾಗಲಿ, ನೋಡಲ್=ವಿಚಾರಮಾಡಲಾಗಿ, ಅವಿರತಂ=ಯಾವಾಗಲೂ, ಕೂಡಿ=ಕೂಡಿಕೊಂಡು, ಮೆರೆಯುವರು=ಆ ಕಮಲದಲ್ಲಿ ಸಂಚರಿಸುತ್ತಿರುವರು.

**ತಾತ್ಪರ್ಯ**:- ಶಿವ ಜೀವರಿಬ್ಬರು ಕೂಡಿಕೊಂಡು ಹೃದಯ ಕಮಲದ ದಳಗಳಲ್ಲಿ ಜಾಗ್ರದವಸ್ಥೆಯಲ್ಲಿರುವರು. ಕೇಸರಗಳಲ್ಲಿ ಸ್ವಪ್ನಾವಸ್ಥೆಯಲ್ಲಿರುವರು. ಆ ಕಮಲದ ದಳಗಳಿಗೆ ವರ್ತುಲಾಕಾರವಾದದ್ದಾಗಿಯೂ ಆಶ್ರಯವುಳ್ಳದ್ದಾಗಿರುವದೇ ಕರ್ನಿಕೆಯೆನಿಸುವದು. ಅದಕ್ಕೆ ಮೂಲಕಾರಣವಾದದ್ದೇ ಬುಡವೆನಿಸುವದು. ಅದರಲ್ಲಿ ಸುಪ್ತಾವಸ್ಥೆಯಲ್ಲಿರುವರು. ಈ ರೀತಿ ಜಾಗ್ರತ್ಸ್ವಪ್ನ ಸುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿ, ಯಾವಾಗಲೂ ಕೂಡಿಕೊಂಡು ಸಂಚಾರವನ್ನು ಮಾಡುತ್ತಿರುವರು. ಇಲ್ಲಿ ಹೃದಯಕಮಲ ಅಂದರೆ, ಕಮಲ ಸದೃಶವಾದದ್ದು ಹೃದಯವಿರುತ್ತದೆಂದು ತಿಳಿಯಬೇಕು. ಅಥವಾ ಹೃದಯ ದೇಶವನ್ನೇ ಕಮಲದಂತೆ ರೂಪಕ ಮಾಡಿ ವರ್ಣಿಸಿದ್ದಾರೆಂದು ತಿಳಿಯಬೇಕು. ಹೃದಯದಲ್ಲಿ ಒಂದು ಕಮಲವುಂಟೆಂದ್ಯು ತಿಳಿಯಬಾರದು. ಹೇಗಂದರೆ; ಶಿವ ಜೀವ ಪಕ್ಷಿಗಳು ಬುದ್ಧಿ ವೃಕ್ಷದಲ್ಲಿ ವಾಸ ಮಾಡಿವೆ. ಅಂದರೆ, ಈ ವಾಕ್ಯದಲ್ಲಿ ಶಿವ ಜೀವರು ಪಕ್ಷಿಗಳಾಗಿರುವರೆಂಬರ್ಥವಲ್ಲ. ಕಿಂತು, ಪಕ್ಷಿಗಳಂತೆ ರೂಪಕಮಾಡಿ ವರ್ಣಿಸಿದ್ದಾರೆಂದು ಹೇಗೆ ತಿಳಿಯುತ್ತೀವೊ,

ಹಾಗೇ ಇಲ್ಲಿಯಾದರೂ ಕಮಲದಂತೆ ರೂಪಕಮಾಡಿ ಹೇಳುತ್ತಾರೆಂದು ಗ್ರಹಿಸಬೇಕು.

ಬಳಿಕ, ಶಿವ ಜೀವರಿಬ್ಬರು ಹೃದಯ ದೇಶದಲ್ಲಿರುವರೆಂಬುದನ್ನು ಕೇಳಿ, ಶಿಷ್ಯನು ಪ್ರಶ್ನೆಯನ್ನು ಮಾಡುತ್ತಾನೆ. ಹೇಗೆಂದರೆ, ಶಿವ ಜೀವರು ಸಾಕಾರವುಳ್ಳರಾಗಿದ್ದರೆ, ಬೇರೆ ಬೇರೆ ಭೇದವಾಗಿ ತೋರುತ್ತಿದ್ದರು. ಸಾಕಾರವಲ್ಲ. ಕಿಂತು, ನಿರಾಕಾರರು ಆಗಿದ್ದಾರೆ. ನಿರಾಕಾರರಾದ್ದರಿಂದ ಅಭೇದವೇ ಆಗಿರುವರು. ಹೀಗಿದ್ದು ತಾವು ಬೇರೆ ಬೇರೆ ಭೇದವಾಗಿ ತೋರುತ್ತಿರುವರೆಂದು ಹೇಗೆ ಹೇಳುತ್ತೀರಿ ? ಎಂದು ಶಂಕೆಯನ್ನು ಮಾಡಿದರೆ, ಇದಕ್ಕೆ ಮುಂದೆ ಹೇಳುವ ರೀತಿ ಸಮಾಧಾನವನ್ನು ಹೇಳುತ್ತಾರೆ.

ಬೇರಿಲ್ಲದವರೆಂತು ಬೇರೆನಿಸುತೊಂದರೊಳು।
ತೋರುತಿಹರೆಂದೊಡಿದಕೆ ದೃಷ್ಟಾಂತವಂ।
ಸಾರಿ ನಿನಗೊರವೆ ನೆಲೆಪುತ್ರ ॥೯॥

ಟೀಕಾಃ- ಬೇರಿಲ್ಲದವರು=ಭೇದವಿಲ್ಲದವರು, ಎಂತು=ಹೇಗೆ, ಬೇರೆನಿಸುತ=ಭೇದವಾಗಿರುವರೆಂದು ಹೇಳಿಸಿಕೊಳ್ಳುತ್ತ, ಒಂದರೊಳು=ಒಂದು ಸ್ಥಳದಲ್ಲಿ, ತೋರುತಿಹರು=ಪ್ರತೀತಿಯಾಗುತ್ತಿರುವರು, ಎಂದೊಡೆ=ಹೀಗೆಕೇಳಿದರೆ, ಎಲೆ ಪುತ್ರ=ಎಲೈಮಗನೇ, ಇದಕೆ=ಈ ವಿಷಯಕ್ಕೆ, ದೃಷ್ಟಾಂತವಂ=ಉಪಮಾನವನ್ನು, ಸಾರಿ=ಪ್ರಸಿದ್ಧವಾಗಿ, ನಿನಗೆ=ನಿನಗಾಗಿ, ಒರೆಯುವೆನು=ಹೇಳುತ್ತೇನೆ.

ತಾತ್ಪರ್ಯ;- ಮೂರ್ತಿಮಂತ ಸಾಕಾರ ವಸ್ತುಗಳು ಒಂದೇ ಸ್ಥಳದಲ್ಲಿ ಕೂಡಿದ್ದರೂ, ಭೇದವಾಗಿ ತೋರುತ್ತವೆ. ನಿರವಯವ ನಿರಾಕಾರಗಳಾದ ಎರಡು ವಸ್ತುಗಳು, ಒಂದೇ ದೇಶದಲ್ಲಿ ಭೇದವಾಗಿ ತೋರಲಾರವೆಂದು ಪ್ರಶ್ನೆಯನ್ನು ಮಾಡಿದರೆ, ಎರಡು ನಿರಾಕಾರಗಳು ಒಂದೇ ಸ್ಥಳದಲ್ಲಿ ಇರಲಿಕ್ಕೆ ಬರುತ್ತದೆ. ಸಾಕಾರಗಳಾದ ಎರಡು ವಸ್ತುಗಳು ಒಂದೇ ಸ್ಥಳದಲ್ಲಿ ಇರಲಿಕ್ಕೆ ಬರುವದಿಲ್ಲ. ಯಾಕಂದರೆ, ಅವು ಸ್ಥಳವನ್ನು ನಿರೋಧಮಾಡುತ್ತವೆ. ಹೇಗಂದರೆ, ಒಬ್ಬನು ಕೂತಸ್ಥಳದಲ್ಲಿ ಇನ್ನೊಬ್ಬನು ಕೂಡ್ರಲಿಕ್ಕೆ ಬರುವದಿಲ್ಲ. ನಿರವಯುವಗಳು ಮಾತ್ರ ಸ್ಥಳ ನಿರೋಧಮಾಡದ್ದರಿಂದ ಇರಲಿಕ್ಕೆ ಬರುತ್ತದೆ. ಹೇಗಂದರೆ- ಒಂದೇ ಸ್ಥಳದಲ್ಲಿ ಪೂರ್ವ, ಪಶ್ಚಿಮಾದಿ ದಿಕ್ಕುಗಳು ಇರುತ್ತವೆ. ಯಾಕಂದರೆ, ದಿಕ್ಕುಗಳು ಮೂರ್ತಿಮಂತವಾಗಿಲ್ಲ. ಕಿಂತು, ನಿರಾಕಾರಗಳಾಗಿವೆ. ಇದೇ ಪ್ರಕಾರ ಬೇರೆ ದೃಷ್ಟಾಂತವನ್ನು ಕೊಟ್ಟು, ನಿನಗೆ ಬಂದ ಸಂಶಯವು ದೂರಾಗುವಂತೆ ಹೇಳುತ್ತೇನೆಂದು ಅಭಯವನ್ನು ಕೊಡುತ್ತಾರೆ,




ಜಲಕುಂಭದಲ್ಲಿ ಮಾರ್ಪೊಳೆವಂಬರಂ ತಾನೆ।
ನೆಲಸಿದಂಬರ ಮಿವೆರಡುಮಿರ್ಪಂತೊಂದ
ರೊಳಗೆ ಜೀವೇಶರಿಹರೊಂದಿ ॥೧೦॥

ಟೀಕಾಃ- ಜಲಕುಂಭದಲ್ಲಿ=ನೀರುತುಂಬಿದಕೊಡದಲ್ಲಿ, ಮಾರ್ಪೊಳೆವ=ಪ್ರತಿಬಿಂಬಿಸಿರುವ, ಅಂಬರಂ=ಆಕಾಶವು, ತಾನೆನೆಲಸಿದಂಬರಂ=ತಾನಾಗಿಯೆ ಅಲ್ಲಿದ್ದ ಆಕಾಶವು, ಇವೆರಡುಂ=ಇವೆರಡುಗಳು, ಇರ್ಪಂತೆ=ಇರುವಹಾಗೆ, ಒಂದರೊಳಗೆ=ಒಂದೇ ಸ್ಥಳದಲ್ಲಿ, ಒಂದಿ=ಕೂಡಿಕೊಂಡು, ಜೀವೇಶರಿಹರು=ಜೀವೇಶ್ವರರು ಇರುವರು.

ತಾತ್ಪರ್ಯ:-ಒಂದು ನೀರು ತುಂಬಿದ ಕೊಡವು ಉಂಟು. ಆ ನೀರಿನಲ್ಲಿ ಪ್ರತಿಬಿಂಬಿತವಾದ ಆಕಾಶವು ಉಂಟು. ಹಾಗು ಆ ಕೊಡದೊಳಗಿನ ನೀರಿಗೆ ಅವಕಾಶವನ್ನು ಕೊಟ್ಟಿರುವ ಘಟಾವಚ್ಛಿನ್ನ ಆಕಾಶವೂ ಉಂಟು. ಒಂದೇ ಕೊಡದಲ್ಲಿ ಇದ್ದ ಆಕಾಶ, ಮೂಡಿದ ಆಕಾಶ, ಇವೆರಡು ನಿರಾಕಾರಗಳಾಗಿವೆ. ಸಾಕಾರಗಳಾಗಿದ್ದರೆ, ಒಂದಿದ್ದ ಸ್ಥಳದಲ್ಲಿ ಇನ್ನೊಂದು ಇರಲಿಕ್ಕೆ ಬರುತ್ತಿದ್ದಿಲ್ಲ, ಹೇಗಂದರೆ, ಕೊಡದಲ್ಲಿ ನೀರು ಸ್ಥಳನಿರೋಧ ಮಾಡಿದೆ. ಅಲ್ಲಿ ಬೇರೊಂದು ಹಾಲನ್ನಾಗಲಿ ತೈಲವನ್ನಾಗಲಿ ಇರಿಸಲಿಕ್ಕೆ ಬರುವದಿಲ್ಲ. ಎರಡು ಆಕಾಶಗಳು ನಿರಾಕಾರ ನಿರವಯವಗಳಾದ್ದರಿಂದ ಇರಲಿಕ್ಕೆ ಬರುತ್ತದೆ. ಈ ದೃಷ್ಟಾಂತದಂತೆ, ಈ ಶರೀರರೂಪ ಘಟದಲ್ಲಿ ಅಂತಃಕರಣರೂಪ ಜಲದಲ್ಲಿ ಪ್ರತಿಬಿಂಬಾಕಾಶದಂತೆ ಸಾಕ್ಷಿಕೂಟಸ್ಥನ ಪ್ರತಿಬಿಂಬರೂಪ ಜೀವನಿದ್ದಾನೆ. ಘಟಾವಚ್ಛಿನ್ನ ಆಕಾಶದಂತೆ ಚೇತನರೂಪ ಈಶ್ವರನಿದ್ದಾನೆ. ಆದ್ದರಿಂದ ಒಂದೇ ದೇಹದಲ್ಲಿ ಜೀವೇಶ್ವರರಿಬ್ಬರು ಕೂಡಿಕೊಂಡು ಇರುತ್ತಾರೆಂದು ತಿಳಿಯತಕ್ಕದ್ದು.

ಬಳಿಕ, ಪರಿಚ್ಛಿನ್ನ ಪದಾರ್ಥಗಳಿಗೆ ಬಿಂಬ ಪ್ರತಿಬಿಂಬವನ್ನು ಹೇಳಬಹುದು. ಪೂರ್ಣಕ್ಕೆ ಬಿಂಬ ಪ್ರತಿಬಿಂಬವನ್ನು ಹೇಳಲಿಕ್ಕೆ ಬರುವದಿಲ್ಲೆಂದು ಶಂಕೆಯನ್ನು ಮಾಡಿದರೆ, ಪೂರ್ಣವಿದ್ದಾಗ್ಯೂ ಪ್ರತಿಬಿಂಬ ಸಂಭವಿಸುತ್ತದೆಂದು ದೃಷ್ಟಾಂತವನ್ನು ಕೊಟ್ಟು, ಸಮಾಧಾನ ಹೇಳುತ್ತಾರೆ.

ಎಲ್ಲರೊಳಹೊರಗೆ ಮುನ್ನಳ್ಳ ಚಿತ್ತಿಂಗೆ ಬೇ।
ರಿಲ್ಲಿ ಬಿಂಬಾದಿ ಯನು ಪೇಳ ಬಹುದೆಂಬೊ।
ಡಿಲ್ಲಿ ನಿನಗರಪುವೆನು ಕೇಳು ॥೧೧॥

ಟೀಕಾ:- ಎಲ್ಲರೊಳಹೊರಗೆ=ಸರ್ವರ ಒಳಗೂ ಹೊರಗೂ, ಮುನ್ನುಳ್ಳ=ಮೊದಲಿಗೆ ಇರುವ, ಚಿತ್ತಿಂಗೆ=ಚಿದ್ರೂಪಬ್ರಹ್ಮಕ್ಕೆ, ಬೇರೆ=ಭಿನ್ನವಾಗಿ, ಇಲ್ಲಿ=

ಹೃದಯದಲ್ಲಿ, ಬಿಂಬಾದಿಯನು= ಬಿಂಬ ಪ್ರತಿಬಿಂಬವನ್ನು, ಪೇಳಬಹುದೇ? ಎಂದೊಡೆ=ಹೀಗೆ ಕೇಳಿದರೆ, ಇಲ್ಲಿ= ಈ ವಿಷಯದಲ್ಲಿ, ನಿನಗರಪುವೆನು=ನಿನಗೆ ತಿಳಿಸುತ್ತೇನೆ. ಕೇಳು=ಏಕಾಗ್ರಬುದ್ಧಿಯಿಂದ ಶ್ರವಣಮಾಡು.

**ತಾತ್ಪರ್ಯ:-** ಹೇ ಗುರುವೆ! ಮೂರ್ತಿಮಂತ ಸಾಕಾರವಸ್ತು ಪರಿಚ್ಛಿನ್ನವಾಗಿರುತ್ತದೆ. ಆದರಿಂದ ಅದಕ್ಕೆ ಅನ್ಯತ್ರದಲ್ಲಿ ಪ್ರತಿ-ಬಿಂಬತಾಳುವದಕ್ಕೆ ಅವಕಾಶವುಂಟು. ನಿರಾಕಾರ ನಿರವಯವ ವಸ್ತು ಎಲ್ಲ ಕಡೆಗೆ ಪರಿಪೂರ್ಣವಾಗಿರೋಣದರಿಂದ ಅದಕ್ಕೆ ಬಿಂಬ ಪ್ರತಿಬಿಂಬವನ್ನು ಹೇಳಲಿಕ್ಕೆ ಬರುವದಿಲ್ಲ. ಎಂದು; ಪ್ರಶ್ನೆಯನ್ನು ಮಾಡಲು, ಗುರುಗಳು ಅದಕ್ಕೆ ಪರಿಪೂರ್ಣವಿದ್ದರೂ ಪ್ರತಿಬಿಂಬವನ್ನು ಹೇಳಲಿಕ್ಕೆಬರುತ್ತದೆ. ಯಾಕೆ ಬರುವದಿಲ್ಲ.? ಎಂದು, ಹೇಳುತ್ತಿದ್ದಾರೆ. ಹೇಗೆಂದರೆ,- ಆಕಾಶವು ನಿರವಯವಾಗಿ ಪರಿಪೂರ್ಣವಿದ್ದರೂ, ಹೇಗೆ ಜಲದಲ್ಲಿ ಪ್ರತಿಬಿಂಬಿಸುವದೋ, ಹಾಗೇ ಪೂರ್ಣವಾದ ಚಿತ್ತು ಪ್ರತಿಬಿಂಬಿಸುತ್ತದೆ.

**ಬಳಿಕ,** ಉಕ್ತದೃಷ್ಟಾಂತವನ್ನು ಸ್ಪಷ್ಟವಾಗಿ ತಿಳಿಸುತ್ತಾರೆ.

**ಸರಸಿಯೊಳ್ಮೇಲಣಂಬರವೆ ಮಾರ್ಪೊಳೆವುದ ।**
**ಲ್ಲಿರುತಿರ್ಪ ತಾರೆ ಮೇಘ ಮುಂತಾದವಾ ।**
**ಸರಸಿಯೊಳಗೊಪ್ಪುತಿಹವಾಗಿ ॥೧೨॥**

**ಟೀಕಾ:-** ಸರಸಿಯೋಳ್=ಸರೋವರದಲ್ಲಿ, ಮೇಲಣಂಬರವೆ=ಮೇಲಿರುವ ಆಕಾಶವೇ, ಮಾರ್ಪೊಳೆವುದು=ಪ್ರತಿಬಿಂಬಿಸುವದು. ಅಲ್ಲಿರುತಿರ್ಪ=ಅಲ್ಲಿಇರುತ್ತಿರುವ, ತಾರೆ=ನಕ್ಷತ್ರಗಳು; ಮೇಘ=ಮೇಘಗಳು, ಮುಂತಾದವು=ಮೊದಲಾದವುಗಳು, ಆ ಸರಸಿಯೊಳಗೆ= ಆ ಸರೋವರದಲ್ಲಿ, ಒಪ್ಪುತಿಹವಾಗಿ=ಶೋಭಾಯಮಾನವಾಗಿರುವವು.

**ತಾತ್ಪರ್ಯ:-** ಸರೋವರದ ಮೇಲಿರುವ ನಿರವಯವ ಆಕಾಶವೇ ಆ ಸರೋವರದಲ್ಲಿ ಪ್ರತಿಬಿಂಬಿಸುತ್ತದೆ. ರೂಪವಿಲ್ಲದ ಆಕಾಶವು ಹೇಗೆ ಪ್ರತಿಬಿಂಬಿಸುತ್ತದೆ? ಎಂದು ಕೇಳಿದರೆ, ಅಲ್ಪ ನೀರಿನಲ್ಲಿಯೂ ಗುಮ್ಮಾಗಿ ಮತ್ತು ಪೊಳ್ಳಾಗಿ ತೋರುವದು. ಅದೇ ಆಕಾಶದ ಪ್ರತಿಬಿಂಬವಾಗಿರುತ್ತದೆ. ಬಹಳ ಇಂಬಾಗಿ ತೋರುವದೇ ಪ್ರತಿಬಿಂಬವೆಂದು ಅನುಭವಕ್ಕೆ ಬರುವ ಬಗೆ ಹೇಗೆ? ಅಂದರೆ, ಆ ಆಕಾಶದಲ್ಲಿರುವ ನಕ್ಷತ್ರಗಳೂ ಮೇಘಗಳೂ ಸಹಾ ಆ ನೀರಿನಲ್ಲಿ ಪ್ರತಿಬಿಂಬರೂಪಗಳಾಗಿ ತೋರುತ್ತವೆ. ಆದ್ದರಿಂದ ನಕ್ಷತ್ರ ಮೇಘಮಂಡಲಗಳಿಗೆ ಅವಕಾಶವನ್ನಿತ್ತಿರುವ ಆಕಾಶವಾದರೂ ಅಲ್ಲಿ ಪ್ರತಿಬಿಂಬರೂಪವಾಗಿರುತ್ತದೆಂದು ತಿಳಿಯತಕ್ಕದ್ದು-

ಬಳಿಕ, ಪೂರ್ಣವಾದ ಚಿತ್ತು, ಜೀವೇಶ್ವರ ರೂಪವಾಗಿ ಉಪಾಧಿ ಮೂಲಕ ಸಂಚರಿಸುತ್ತದೆಂದು ನಿರೂಪಣ ಮಾಡುತ್ತಾರೆ.

ಪರಿಪೂರ್ಣ ಗಗನವೀಪರಿಯ ಮಾರ್ಪೊಳೆವಂತೆ।
ಭರಿತವಹ ಚಿತ್ತು ಶಿವ ಜೀವರೆನಿಸಿ ಸಂ।
ಚರಿಸುವದುಪಾಧಿ ವಶದಿಂದ ||೧೩||

ಟೀಕಾ:- ಪರಿಪೂರ್ಣ ಗಗನವು=ಎಲ್ಲ ಕಡೆಗಿರುವ ಆಕಾಶವು, ಈ ಪರಿಯ ಮಾರ್ಪೊಳೆವಂತೆ=ಈ ರೀತಿ ಪ್ರತಿಬಿಂಬಿಸುವ ಹಾಗೆ, ಭರಿತವಹಚಿತ್ತು=ತುಂಬಿ ಕೊಂಡಿರುವ ಚಿತ್ತು, ಉಪಾಧಿವಶದಿಂದ=ಮಾಯಾ ಮತ್ತು ಅಹಂಕಾರಗಳ ವಶ ದಿಂದ, ಶಿವಜೀವರೆನಿಸಿ=ಶಿವಜೀವರುಗಳೆಂದು ಹೇಳಿಸಿಕೊಂಡು, ಸಂಚರಿಸುವದು= ಹೃದಯ ಕಮಲದಲ್ಲಿ ಸಂಚರಿಸುವದು.

ತಾತ್ಪರ್ಯ:- ಪರಿಪೂರ್ಣ ನಿರೂಪವಾದ ಆಕಾಶವು ಜಲದಲ್ಲಿ ಪ್ರತಿ ಬಿಂಬಿಸಿದಂತೆ, ಎಲ್ಲ ಕಡೆಗೆ ಒಳಹೊರಗೆ ತುಂಬಿಕೊಂಡಿರುವ ಚಿದ್ರೂಪ ಬ್ರಹ್ಮವು, ಮಾಯಾ ಅಹಂಕಾರ ಉಪಾಧಿಗಳ ಮೂಲಕ † ಪ್ರತಿಬಿಂಬಿಸಿ, ಶಿವಜೀವ ರೂಪ ಗಳಾಗಿ ಹೃದಯಕಮಲದಲ್ಲಿ ಸುಳಿಯುವದು. ಜೀವ ಶಿವರ ವಿಷಯದಲ್ಲಿ ಬಿಂಬ ಪ್ರತಿಬಿಂಬವಾದವೆಂದೂ ಆಭಾಸವಾದವೆಂದೂ ಅವಚ್ಛಿನ್ನವಾದವೆಂದೂ ಹೀಗೆ ಬೇರೆ ಬೇರೆ ಪ್ರಕ್ರಿಯಾರೂಪವಾದಗಳುಂಟು. ಇವರ ಖಂಡನ ಮಂಡನರೂಪ ಯುಕ್ತಿ ದೃಷ್ಟಾಂತಗಳೂ ಉಂಟು. ಆದರೂ ಎಲ್ಲ ಪ್ರಕ್ರಿಯೆಗಳು ಅದ್ವೈತ ಬ್ರಹ್ಮವನ್ನು ಬೋಧಿಸುವದರಲ್ಲಿಯೇ ತಾತ್ಪರ್ಯವುಳ್ಳವುಗಳಾದ್ದರಿಂದ; ಎಲ್ಲ ವಾದಗಳೂ ಯೋಗ್ಯವೇ ಆಗಿರುತ್ತವೆ, ಯಾರ ಬುದ್ಧಿಗೆ ಯಾವದು ಹೊಳೆಯು ವದೋ, ಯಾವದು ರುಚಿಸುವದೋ, ಅವರು ಅದನ್ನು ಸ್ವೀಕರಿಸಬಹುದೆಂದು ಶ್ರೀಮತ್ಸುರೇಶ್ವರಾಚಾರ್ಯರು ಹೇಳಿದ್ದಾರೆ. ಆದ್ದರಿಂದ ಎಲ್ಲ ವಾದಗಳೂ ಯೋಗ್ಯವೇ ಆಗಿವೆ, ಆದ್ದರಿಂದ ಈ ಗ್ರಂಥಕರ್ತರಾದ ಶ್ರೀಮನ್ನಿಜಗುಣ ಶಿವ ಯೋಗಿಗಳು ಎಲ್ಲ ವಾದಗಳನ್ನು ಅಲ್ಲಲ್ಲಿ ಇದೇ ಗ್ರಂಥದಲ್ಲಿ ಹೇಳಿದ್ದಾರೆ, ಅವು ಗಳನ್ನು ಪ್ರಸಂಗಾನುಸಾರ ಅಲ್ಲಿ ಪ್ರಕಟಿಸುತ್ತೇವೆ.

ಬಳಿಕ, ಒಂದೇ ಬ್ರಹ್ಮದಿಂದ ಈಶ, ಜೀವ, ಜಗತ್ತು, ಇವುಗಳು ಹೇಗಾದವು? ಎಂಬುದಕ್ಕೆ, ಸಂಖ್ಯಾರೂಪ ಗಣಿತದ ದೃಷ್ಟಾಂತವನ್ನು ಕೊಟ್ಟು ಹೇಳುತ್ತಾರೆ.

---

† ನಿರಾಕಾರ ಆಕಾಶವು ಸಾಕಾರ ಜಲದಲ್ಲಿ ಪ್ರತಿಬಿಂಬಿಸಬಹುದು. ನಿರಾಕಾರ ಚೈತನ್ಯವು ನಿರಾಕಾರ ಮಾಯಾ ಅಹಂಕಾರಗಳಲ್ಲಿ ಪ್ರತಿಬಿಂಬಿಸದು. ಆದರೂ ಶಿಷ್ಯನ ಬುದ್ಧಿ ಅನುಸಾರವಾಗಿ ಇಲ್ಲಿ ಬಿಂಬಪ್ರತಿಬಿಂಬ ನ್ಯಾಯವನ್ನು ಹೇಳಿರುವರೆಂದು ಗ್ರಹಿಸಬೇಕು.

ಒಂದು ಗಣಿತಕ್ಕೆ ಮುಂದೊಂದೆರಡು ಮೂರಾದ ।
ಬಿಂದುಬರೆ ಪತ್ತು ನೂರು ಸಾವಿರ ವೆನಿಸಿ ।
ದಂದವಾ ಬ್ರಹ್ಮದೊಳಗಿಂತು ॥೧೪॥

ಪ್ರಕೃತಿಯಿಂದೀಶತ್ವ ವಿಕೃತಿಯಿಂ ಜೀವತ್ವ ।
ಸಕಲ ಭೂತಂಗಳಿಂದೆ ಭುವನತ್ವವಹು ।
ದಕಲಂಕ ನೀಸರಿವುದಿಂತು ॥೧೫॥

**ಟೀಕಾ:**- ಒಂದು=ಒಂದು ಸಂಖ್ಯೆಗೆ, ಮುಂದೆ=ಸಮ್ಮುಖದಲ್ಲಿ, ಒಂದೆರಡು ಮೂರಾದ, ಬಿಂದುಬರೆ=ಒಂದು ಎರಡು ಮೂರು ಪೂಜೆಗಳು ಬರಲಾಗಿ, ಪತ್ತು= ಹತ್ತು, ನೂರು=ಶತ, ಸಾವಿರ=ಸಹಸ್ರ, ಎನಿಸಿದದಂದವೆ=ಆದರೀತಿ, ಆ ಬ್ರಹ್ಮ ದೊಳಗೆ=ಆ ಚಿದ್ರೂಪ ಬ್ರಹ್ಮದಲ್ಲಿ, ಇಂತು=ಈ ರೀತಿ, ಪ್ರಕೃತಿಯಿಂದ=ಕಾರಣ ವಾದ ಮಾಯೋಪಾಧಿಯಿಂದ, ಈಶತ್ವ=ಈಶ್ವರತ್ವವು, ವಿಕೃತಿಯಿಂ=ಕಾರ್ಯೋ ಪಾಧಿಯಿಂದ ಜೀವತ್ವ=ಜೀವತ್ವವು, ಸಕಲಭೂತಂಗಳಿಂದೆ=ಎಲ್ಲಾ ಭೂತಗಳೋ ಪಾಧಿಯಿಂದ, ಭುವನತ್ವವು=ಜಗತ್ತತ್ತ್ವವು, ಅಹುದು=ಆಗಿರುವದು, ಅಕಲಂಕ= ವಿಕ್ಷೇಪಾದಿ ದೋಷರಹಿತ ಬುದ್ಧಿಯುಳ್ಳ ಶಿಷ್ಯನೇ, ನೀನು=ನೀನು, ಇಂತು=ಈ ರೀತಿ, ಅರಿವುದು=ತಿಳಿಯುವದು-

**ತಾತ್ಪರ್ಯ:**- ಒಂದೇ ಬ್ರಹ್ಮವು ಈಶ, ಜೀವ ಜಗದಾದಿಗಳ ರೂಪಾಗಿ ಅಂದರೆ ಮೂರು ವಿಧವಾಗಿ ಹೇಗಾಯಿತು ? ಎಂದು ಪ್ರಶ್ನೆಯನ್ನು ಮಾಡಿದರೆ, ಅದಕ್ಕೆ ದೃಷ್ಟಾಂತವನ್ನು ಕೊಡುತ್ತಾರೆ. ಹೇಗಂದರೆ, ಒಂದು ಅನ್ನುವ ಈ ಸಂಖ್ಯೆಯ ಮುಂದೆ ಒಂದು, ಎರಡು, ಮೂರು, ಶೂನ್ಯಗಳನ್ನು ಇಟ್ಟರೆ, (೧೦) ಹತ್ತು (೧೦೦) ನೂರು (೧೦೦೦) ಸಾವಿರ ಸಂಖ್ಯೆಗಳಾಗಿ ತೋರುತ್ತವೆ. ಆದರೆ ಇಲ್ಲಿ ವಿಚಾರ ಮಾಡತಕ್ಕದ್ದಿರುತ್ತದೆ. ಏನಂದರೆ, ಇದರಲ್ಲಿ ಒಂದು ಸಂಖ್ಯೆಗೆ ಪ್ರಾಮುಖ್ಯತೆ ಉಂಟು. ಪೂಜೆಗಳಿಗೆ ಅಷ್ಟು ಮಹತ್ವವಿಲ್ಲ. ಯಾಕಂದರೆ, (೧)ಭಾವರೂಪ ಒಂದನ್ನು ತೆಗೆದರೆ ಎಲ್ಲವೂ ಪೂಜೆಗಳೇ ಆಗುತ್ತವೆ. ಪೂಜೆ, ಶೂನ್ಯ, ಈ ಹೆಸರುಗಳು ಅಭಾವ ಅರ್ಥಗಳಾಗಿರುತ್ತವೆ. ಒಂದು ಅನ್ನುವದು ಭಾವವಾಚಕವಾಗಿದೆ. ಈ ರೀತಿ ಸದ್ಭಾವವಾದ ಒಂದು ಚಿದ್ರೂಪ ಬ್ರಹ್ಮವು ಒಂದಾಗಿದೆ. ಇದರ ಮುಂದೆ ಪ್ರಕೃತಿಯೆಂಬ ಪೂಜೆಯು ಬರಲಾಗಿ **ಹತ್ತೆಂಬ ಈಶತ್ವ** ತೋರಿತು. ಮುಂದೆ ವಿಕೃತಿಯೆಂಬ ಎರಡು ಪೂಜೆಬರಲು **ನೂರೆಂಬ ಜೀವತ್ವ** ತೋರಿತು. ಭೂತಗಳೆಂಬ ಮೂರು ಪೂಜೆಗಳು ಬರಲಾಗಿ; **ಸಹಸ್ರೆಂಬ ಜಗತ್ತಾ**ಯಿತು. ಅರ್ಥಾತ್, ಒಂದೆಂಬ ಬ್ರಹ್ಮವೊಂದನ್ನು ಉಳಿದರೆ; ಈಶ, ಜೀವ, ಜಗದಾದಿಗಳು ಅಭಾವವೇ ಆಗಿವೆ. ಆ ಪೂಜೆಗಳ ಹಿಂದೆ ಒಂದು ಸಂಖ್ಯೆ

ಯನ್ನು ಇರಿಸಿದರೆ ಮಾತ್ರ; ಹತ್ತು ನೂರುಗಳಾಗಬಹುದು. ಇದರಂತೆ ಒಂದು ಸಚ್ಚಿದ್ರೂಪ ಅಧಿಷ್ಠಾನ ಬ್ರಹ್ಮದಿಂದಲೇ **ಈಶ, ಜೀವ, ಜಗದಾದಿಗಳು** ತೋರುತ್ತಿರುತ್ತವೆ. ಬ್ರಹ್ಮವನ್ನು ಬಿಟ್ಟರೆ, ಎಲ್ಲವೂ ಏನೂ ಇಲ್ಲ. ಎಂಬ ಅಭಾವ ರೂಪವಾಗುತ್ತದೆ. ಆದರೆ, ಒಂದೇ ದಶ, ಶತ, ಸಹಸ್ರಾದಂತೆ, ಬ್ರಹ್ಮವೇ ಈಶ ಜೀವ ಜಗದಾದಿಗಳ ರೂಪವಾಗಿರುತ್ತದೆಂದು ತಿಳಿಯತಕ್ಕದ್ದು.

## ಜಗಜ್ಜೀವೇಶ್ವರ ಕಲ್ಪಿತ ನಿರೂಪಣೆ ಸೂತ್ರ ೨ಕ್ಕೆ ತ್ರಿವಿಧಿ ೧೮

**ಬಳಿಕ,** ಪೂರ್ವ ಸೂತ್ರದಲ್ಲಿ, ಶಿಷ್ಯನು ಶಿವ, ಜೀವ, ಜಗದಾದಿಗಳು ಒಂದು ಬ್ರಹ್ಮದಿಂದ ಉಪಾಧಿಗಳ ಮೂಲಕ ತೋರಿದವು. ಎಂಬುದನ್ನು ಶ್ರವಣ ಮಾಡಿದನು. ಅನಂತರ ಆ ಶಿವಜೀವರು ಹೃದಯ ಕಮಲದಲ್ಲಿ ವಾಸವಾಗಿರುವರೆಂಬುದನ್ನು ಕೇಳಿ, ಪುನಃ ಪ್ರಶ್ನೆಯನ್ನು ಮಾಡುವಂಥವನಾಗಿದ್ದಾನೆ. ಏನೆಂದರೆ, ಹೃದಯ ಕಮಲವು ಯಾವದು ? ಅದು ಎಲ್ಲಿಗುವದು ? ಅದರ ಸ್ವರೂಪವೇನು ? ಹೃದಯಕ್ಕೆ ಕಮಲದ ಉಪಮಾನವನ್ನು ಹೇಳಿದ ಮೇಲೆ, ಅದಕ್ಕೆ ದಳ, ಕೇಸರಿ, ಮೂಲ, ನಾಳ ಮೊದಲಾದುವುಗಳು ಯಾವವು? ಪ್ರಮಾಣವು ಯಾವದು ? ಆ ಹೃದಯ ಕಮಲದಲ್ಲಿ ಜೀವೇಶ್ವರರು ಹೇಗಿರುವರು? ಏನು ಮಾಡುತ್ತಿರುವರು? ಅಲ್ಲಿ ಜೀವೇಶ್ವರರನ್ನು ನಾವು ಹೇಗೆ ಗುರ್ತಿಸಬೇಕು ? ಇವುಗಳನ್ನೆಲ್ಲಾ ತಿಳಿಯುವದರಿಂದ ಪ್ರಯೋಜನವೇನು ? ಎಂಬದಾಗಿ ಶಿಷ್ಯನು ಪ್ರಶ್ನೆಗಳನ್ನು ಮಾಡಲು, ಗುರುಗಳು ಈ ಸೂತ್ರದಲ್ಲಿ ಮುಂದೆ ಹೇಳುವ ಪ್ರಕಾರ ಉತ್ತರಗಳನ್ನು ಹೇಳುತ್ತಿದ್ದಾರೆ.

ಸೂತ್ರ ||೩|| **ಶಿವ ಜೀವರಿರವನಾ ನಳಿನ ದಾಯತವನೊ |**
**ಪ್ಪುವ ತೆರದಿನೆನಗೆ ಗುರುವರ್ಯ ಬೆಸಸು ||**

**ಟೀಕಾ:-** ಶಿವಜೀವರ=ಶಿವಜೀವರುಗಳ, ಇರವನು=ಸ್ವರೂಪವನ್ನು, ಆ ನಳಿನದ=ಆ ಕಮಲದ, ಆಯತವನು=ವಿಸ್ತಾರವನ್ನು, ಒಪ್ಪುವತೆರದಿಂ=ನನ್ನ ಮನಸ್ಸಿಗೆ ಹೊಳೆಯುವಹಾಗೆ, ಎನಗೆ=ನನಗೆ, ಗುರುವರ್ಯ=ಗುರುಶ್ರೇಷ್ಠನೇ ! ಬೆಸಸು=ತಿಳಿಸು,

**ತಾತ್ಪರ್ಯ:-** ಹೇ ಗುರುನಾಥನೇ ! ಆ ಹೃದಯಕಮಲವು ಯಾವದು ? ಅದು ಹೇಗೆ ಅದೆ ? ಅದರಲ್ಲಿ ಜೀವೇಶ್ವರರು ಯಾವ ಸ್ವರೂಪದಿಂದ ಇರುವರು ? ಈ ವಿಷಯುವನ್ನು ನನಗೆ ಹೇಳಿರಿ. ಮತ್ತು ನನ್ನ ಮನಸ್ಸಿಗೆ ತಿಳಿಯುವಹಾಗೆ ತಿಳಿಸಿರಿ. ಅನ್ಯರಿಂದ ತಿಳಿ. ಎಂದು ನೀವು **ಹೇಳಿದರೆ,** ನಿಮಗಿಂತಲೂ ಶ್ರೇಷ್ಠರಾದವರು

ಯಾರೂ ಇಲ್ಲ. ನೀವೇ ಹೇಳಬೇಕು. ಎಂಬರ್ಥವನ್ನು 'ಗುರುವರ್ಯ' ಎಂಬ ಸಂಬೋಧನವು ಸೂಚಿಸುತ್ತದೆ.

ಬಳಿಕ, ಸಚ್ಛಿಷ್ಯನು ಗುರುಭಕ್ತಿರಸಾವೇಶದಿಂದ ಉದ್ರಿಕ್ತ ಚಿತ್ತನುಳ್ಳವನಾಗಿ, ಸಾತ್ವಿಕ ಭಾವಾಷ್ಟಕದಿಂದ ಕೂಡಿ, ಗುರುಗಳನ್ನು ಕುರಿತು ನಮಸ್ಕರಿಸಿ, ಪ್ರಶ್ನೆಯನ್ನು ಮಾಡುವಂಥವನಾದನೆಂದು ಹೇಳುತ್ತಾರೆ.

**ದಳವೇರುತಿಹ ಪುಳಕ ವಿಳಿವಶ್ರುಗದ್ಗದಂ|**
**ಗಳು ಸಹಿತ ಗುರುವಿನಡಿಗೆರಗಿ ಪೊಗಳಿ ಮ |**
**ತ್ತೆಳಸಿ ಬಿನ್ನೈಸಿದನು ಬೋಧ್ಯ ||೧||**

**ಟೀಕಾ:**- ದಳವು=ತುದಿಯು, ಏರುತಿಹ=ಮೇಲಕ್ಕೆ ಮುಖಮಾಡುತ್ತಿರುವ, ಪುಳಕವು=ರೋಮಾಂಚನವು, ಇಳಿವ=ಕೆಳಮುಖವಾಗಿ ಹರಿಯುವ, ಅಶ್ರು=ಕಣ್ಣೀರುಗಳು, ಗದ್ಗದಂಗಳು=ಕಂಠ ಉಬ್ಬಿ ನುಡಿಯುವ ಮಾತುಗಳು, ಸಹಿತ=ಇವುಗಳಿಂದ ಕೂಡಿ, ಗುರುವಿನ=ಗುರುಗಳ, ಅಡಿಗೆ=ಪಾದಗಳಿಗೆ, ಎರಗಿ=ನಮಸ್ಕರಿಸಿ, ಪೊಗಳಿ=ಸ್ತುತಿಸಿ, ಮತ್ತೆ=ಅನಂತರ, ಎಳಸಿ=ಇಚ್ಛಾಪೂರ್ವಕವಾಗಿ, ಬಿನ್ನೈಸಿದನು=ಕೇಳಿಕೊಂಡನು.

**ತಾತ್ಪರ್ಯ:**- ಶಿಷ್ಯನು ಗುರುಭಕ್ತಿಯುಳ್ಳವನು. ಆದ್ದರಿಂದ, ಗುರುಗಳನ್ನು ಕುರಿತು ಪ್ರಶ್ನೆಗಳನ್ನು ಮಾಡುವಾಗ್ಯೆ, ಅವನಲ್ಲಿ ಭಕ್ತಿಯು ಉಕ್ಕೇರಿದಾಗ್ಯೆ, ಯಾವ ಲಕ್ಷಣಗಳು ತೋರುವುವೋ, ಅವುಗಳನ್ನು ಹೇಳುತ್ತಾರೆ. ಅವು ಯಾವವು ಅಂದರೆ? ಶ್ರೀ ಗುರುಗಳನ್ನು ಕಂಡೊಡನೆ ಅವರ ಸನ್ಮುಖದಲ್ಲಿ ಕೈಗಳನ್ನು ಮುಗಿದುಕೊಂಡು ಕಂಭದಂತೆ ನಿಲ್ಲುವದು. ಆ ಮೇಲೆ ಮೈಮೇಲೆ ಬೆವರು ಬರುವದು. ರೋಮಗಳು ನೆಟ್ಟಗಾಗುವಿಕೆ, ಮಾತಾಡಲಿಕ್ಕೆ ಹೋದರೆ ಕಂಠಸ್ವರ ಭಿನ್ನವಾಗಿ ತೋರುವಿಕೆ, ಶರೀರದಲ್ಲಿ ನಡಗು ಬರುವಿಕೆ, ಮುಖದ ಬಣ್ಣ ಬದಲಾವಣೆಯಾಗುವಿಕೆ, ಕಣ್ಣೊಳಗಿಂದ ಆನಂದರೂಪ ಹನಿಗಳು ಇಳಿಯೋಣ, ಬಳಿಕ ಮೂರ್ಛೆ ಬಂದು ನೆಲಕೆ ಬೀಳುವಿಕೆ, ಇವು **ಸಾತ್ವಿಕ ಭಾವಾಷ್ಟಕ**ಗಳೆಂದು ಹೇಳಿಸಿಕೊಳ್ಳುತ್ತವೆ. ಇವು ಭಕ್ತಿಯ ಹೆಚ್ಚುವಿಕೆಯಿಂದ ತೋರುತ್ತವೆ. ಈ ಉಕ್ತಲಕ್ಷಣ ಗುಣಗಳಿಂದ ಶಿಷ್ಯನು ಯುಕ್ತನಾಗಿದ್ದನೆಂದು ಮೇಲಿನ ಪದ್ಯದಿಂದ ವರ್ಣನೆ ಮಾಡಿದ್ದಾರೆ. ಉಕ್ತಲಕ್ಷಣಗಳಿಂದ ಕೂಡಿದ ಶಿಷ್ಯನು ಗುರುಗಳನ್ನು ಕುರಿತು ನಮಸ್ಕಾರ ಮಾಡಿ, ಚೈತನ್ಯ ಶಾಶ್ವತಂ ಎಂಬ ಮಂತ್ರಾಷ್ಟಕದಿಂದ ಸ್ತುತಿಸಿ, ಮುಂದೆ ಹೇಳುವ ರೀತಿ ಪ್ರಶ್ನೆಗಳನ್ನು ಮಾಡುವಂಥವನಾದನು.

**ಬಳಿಕ, ಶಿಷ್ಯನು ಹೃದಯ ಕಮಲವು ಹೇಗೆ ಅದೆ? ಅದರಲ್ಲಿ ಯಾವ ರೀತಿ ಜೀವೇಶ್ವರರಿರುವರೆಂದು ಕೇಳುತ್ತಾನೆ.**

**ಆ ಸರೋಜದ ಪರಿಯನಾ ಸರೋಜದೊಳು ಜೀ |**
**ವೇಶರಿಹ ತೆರನನೊಲಿದಿನ್ನು ಸತ್ಯಸುಖ |**
**ವಾಸ ಗುರುವರ್ಯ ಕರುಣಿಪುದು ||೨||**

**ಟೀಕಾ:-** ಆ ಸರೋಜದ=ಆ ಕಮಲದ, ಪರಿಯನು=ಸ್ವರೂಪವನ್ನು, ಆ ಸರೋಜದೊಳು=ಆ ಕಮಲದಲ್ಲಿ,ಜೀವೇಶರಿಹತೆರನಂ=ಜೀವೇಶ್ವರರು ಇರುವ ರೀತಿಯನ್ನು, ಸತ್ಯಸುಖವಾಸ ಗುರುವರ್ಯ=ನಿತ್ಯಾನಂದ ಸ್ವರೂಪನಾದ ಗುರುವರ್ಯನೇ! ಒಲಿದು=ಪ್ರೀತನಾಗಿ, ಇನ್ನು=ಬಳಿಕ, ಕರುಣಿಪುದು=ಕೃಪೆಯನ್ನು ಮಾಡುವದು.

**ತಾತ್ಪರ್ಯ:-** ಹೇ ಶ್ರೀಗುರುವೇ! ನಿನ್ನ ಸಮಾನರು ಯಾರೂ ಇಲ್ಲ. ಯಾಕಂದರೆ, ಎಲ್ಲರೂ ಮನುಷ್ಯಾನಂದ ಮೊದಲುಗೊಂಡು ಬ್ರಹ್ಮಲೋಕ ಪರ್ಯಂತರವಿರುವ, ಸೋಪಾಧಿಕ ಅನಿತ್ಯ ಆನಂದಗಳಲ್ಲಿಯೇ ತತ್ಪರರಾಗಿರುವರು. ನೀನು ಮಾತ್ರ ನಿರುಪಾಧಿಕ ನಿರತಿಶಯವಾದ ನಿತ್ಯಾನಂದದಲ್ಲಿ ಇರುವಿ. ಅರ್ಥಾತ್ ಆನಂದ ಸ್ವರೂಪ ಸಾಮ್ರಾಜ್ಯಕ್ಕೆ ನೀನು ಸಾರ್ವಭೌಮನಾಗಿರುವಿ. ಆದ್ದರಿಂದ ನಿನ್ನನ್ನು ಕುರಿತು ನಾನು ಶರಣಾಗತನಾಗಿರುವೆನು. ಆ ಹೃದಯ ಕಮಲದ ಸ್ವರೂಪವು ಹೇಗೆ? ಅದರಲ್ಲಿ ಜೀವೇಶ್ವರರು ಯಾವ ವಿಧದಿಂದ ವಾಸಮಾಡಿಕೊಂಡಿರುವರು? ಎಂಬುದನ್ನು ನನಗೆ ತಿಳಿಸಿ. ನನ್ನ ಅಜ್ಞಾನವನ್ನು ಹೋಗಲಾಡಿಸಿ ಕಾಪಾಡಬೇಕೆಂದು ಕೇಳುತ್ತಿರುತ್ತಾನೆ.

ಬಳಿಕ, ಗುರುಗಳು, ಪ್ರಶ್ನೆಗಳ ಅಭಿಪ್ರಾಯವನ್ನು ತಿಳಿದು ಸಂತೋಷವುಳ್ಳವರಾಗಿ; ಶಿಷ್ಯನಿಗೆ ಉತ್ತರವನ್ನು ಹೇಳುತ್ತೇನೆಂದು ಅಭಯವನ್ನು ಕೊಡುತ್ತಾರೆ.

**ಎಂದೊಡೆಲೆ ಮಗನೆ ನೀನಿಂದು ಕೇಳ್ದೀಪ್ರಶ್ನೆ |**
**ಯಂದವಾಗಿಹುದು. ಪೇಳ್ವೆನಿದನತಿ ಗೋಪ್ಯ |**
**ವೆಂದು ನಿನ್ನೊಳಗೆ ತಿಳಿಯುವದು ||೩||**

**ಟೀಕಾ:-** ಎಂದೊಡೆ=ಹೀಗನ್ನಲು, ಎಲೆ ಮಗನೆ=ಎಲೈ ಶಿಷ್ಯನೇ!, ನೀನು=ನೀನು, ಇಂದು=ಈ ಹೊತ್ತು, ಕೇಳ್ದೀಪ್ರಶ್ನೆ=ಮಾಡಿದ ಪ್ರಶ್ನೆಯು, ಅಂದವಾಗಿಹುದು=ಮನೋಹರವಾಗಿರುವದು, ಇದನು=ಉತ್ತರವನ್ನು, ಪೇಳ್ವೆನು=ಹೇಳುತ್ತೇನೆ, ಅತಿಗೋಪ್ಯವೆಂದು=ವೇದಗಳಲ್ಲಿ ಅಡಗಿರುವಂಥಾದ್ದೆಂದು, ಅಥವಾ ರಕ್ಷಿಸಲಿಕ್ಕೆ ಯೋಗ್ಯವಾದದ್ದೆಂದು, ನಿನ್ನೊಳಗೆ=ನಿನ್ನಲ್ಲಿ, ತಿಳಿಯುವದು=ಅರಿಯುವದು.

ತಾತ್ಪರ್ಯ:- ಎಲೈ ಶಿಷ್ಯನೇ! ನೀನು ಮಾಡಿದ ಪ್ರಶ್ನೆಯು ಬಹಳ ಮನೋಹರವಾಗಿದೆ. ಇದಕ್ಕೆ ಉತ್ತರವನ್ನು ಹೇಳುತ್ತೇನೆ. ಆದರೆ ಈ ವಿಷಯವು ಉಪನಿಷತ್ತುಗಳಲ್ಲಿ ಗೂಢವಾದದ್ದು. ಅಂದರೆ, ತಿಳಿಯಲಿಕ್ಕೆ ಕಷ್ಟಪಟ್ಟರೂ ಮನಸ್ಸಿಗೆ ಹೊಳೆಯಲಾರದ್ದು. ಇಂಥಾ ವಿಷಯಕ್ಕೆ ಪ್ರಶ್ನೆಯನ್ನು ಮಾಡಿರುವಿ. ಇದು ಮನನಮಾಡಿ ಹೃದಯದಲ್ಲಿ ಇಟ್ಟುಕೊಳ್ಳತಕ್ಕ ವಿಷಯವಾಗಿದೆ. ನಿನಗಾಗಿ ತಿಳಿಸುತ್ತೇನೆ. ಏಕಾಗ್ರಚಿತ್ತದಿಂದ ಶ್ರವಣಮಾಡು.

ಬಳಿಕ, ಹೃದಯಕಮಲ ತೋರಿಸುವದನ್ನು ಮನಸ್ಸಿನಲ್ಲಿ ಇಟ್ಟುಕೊಂಡು; ಶರೀರದ ಏಳು ಸ್ಥಳಗಳಲ್ಲಿ ಏಳು ಕಮಲಚಕ್ರಗಳಿರುತ್ತವೆಂದು ಹೇಳುತ್ತಾರೆ.

**ಗುದ ಲಿಂಗ ನಾಭಿ ಮತ್ತೆದೆ ಗಳ ಭ್ರೂಮಧ್ಯ।**
**ಮದುಮೇಲೆ ಶಿರವಿವರೊಳೇಳು ಚಕ್ರಮಿಹ।**
**ಐದು ಸತ್ಯವೆಲ್ಲರೊಡಲಲ್ಲಿ ॥೪॥**

ಟೀಕಾ:- ಗುದ=ಪಾಯು, ಲಿಂಗ=ಲಿಂಗವು, ನಾಭಿ=ಹೊಂಕಳು, ಮತ್ತೆ= ಆ ಮೇಲೆ, ಎದೆ=ಹೃದಯ, ಗಳ=ಕಂಠ, ಭ್ರೂಮಧ್ಯ=ಭ್ರುಕುಟಿ, ಅದು ಮೇಲೆ= ಅದರ ಮೇಲೆ, ಶಿರವು=ಶಿರಸ್ಸು, ಇವರೋಳ್=ಈ ಏಳು ಸ್ಥಳಗಳಲ್ಲಿ, ಎಲ್ಲರೊಡ ಲಲ್ಲಿ=ಎಲ್ಲರ ಶರೀರಗಳಲ್ಲಿಯು, ಏಳು ಚಕ್ರಮಿಹವು=ಏಳು ಚಕ್ರಗಳು ಇರುತ್ತವೆ.

ಬಳಿಕ, ಏಳು ಸ್ಥಳಗಳಲ್ಲಿ ಹೇಳಿದ ಏಳು ಕಮಲಗಳಿಗೆ ಅಕ್ಷರರೂಪದಳಗಳು ಯಾವದಕ್ಕೆ ಎಷ್ಟು ಇರುತ್ತವೆಂಬುದನ್ನು ಹೇಳುತ್ತಾರೆ.

**ದಳನಾಲ್ಕು ದಳವಾರು ದಳಹತ್ತು ಹನ್ನೆರಡು।**
**ದಳಷೋಡಶ ದ್ವಿದಳ ಸಾಸಿರಂಗಳಿಂ।**
**ನಳಿನವಿಹವಾ ಕ್ರಮದೊಳೊಂದಿ ॥೫॥**

ಟೀಕಾ:. ದಳನಾಲ್ಕು=ವಾದಿಸಾಂತವಾದ ನಾಲ್ಕು ದಳಗಳು, ದಳವಾರು= ಬಾದಿಲಾಂತವಾದ ಆರು ದಳಗಳು, ದಳಹತ್ತು=ಡಾದಿ ಫಾಂತವಾದ ಹತ್ತು ದಳಗಳು, ಹನ್ನೆರಡುದಳ=ಕಾದಿಠಾಂತವಾದ ಹನ್ನೆರಡು ದಳಗಳು, ಷೋಡಶ= ಅಕಾರಾದಿ ಅಃದವರೆಗಿರುವ (೧೬) ಹದಿನಾರು ದಳಗಳು, ದ್ವಿದಳ=ಹಂ-ಕ್ಷಂ ಎಂಬ ಎರಡು ದಳಗಳು, ಸಾಸಿರಂಗಳಿಂ=ಸೋಹಂ ಎಂಬ ಸಾವಿರ ದಳಗಳು, ಆ ಕ್ರಮ ದೊಳು=ಉಕ್ತರೀತಿಯಿಂದ, ಒಂದಿ=ಆಯಾಯ ದಳಗಳಿಂದ ಕೂಡಿಕೊಂಡು, ನಳಿನವಿಹವು=ಕಮಲಗಳಿರುವವು. ಸುಗಮವಿದ್ದದರಿಂದ ತಾತ್ಪರ್ಯವನ್ನು ಬರೆಯುವದು ಬಿಟ್ಟದೆ.

ಬಳಿಕ, ಉಕ್ತ ಏಳು ಕಮಲಗಳು ಆಕಾರ, ಅಧಿದೈವತೆ, ಅಕ್ಷರ, ವರ್ಣ, ಮೊದಲಾದವುಗಳಿಂದ ಬೇರೆ ಬೇರೆಯಾಗಿರುತ್ತವೆಂದು ಹೇಳುತ್ತಾರೆ.

ಬೇರೆ ಬೇರಾಕಾರ ಬೇರೆಬೇರಧಿದೈವ ||
ಬೇರೆ ಬೇರಕ್ಷರ ಪ್ರಕಾಶಂಗಳಿಂ |
ಬೇರೆ ಬೇರೊಪ್ಪುತಿಹವಿಂತು ||೬||

ಟೀಕಾ:- ಬೇರೆ ಬೇರಾಕಾರ=ಭಿನ್ನ ಭಿನ್ನ ತಾರಕಾದಿ ಆಕಾರಗಳಿಂದಲೂ, ಬೇರೆಬೇರೆ ಅಧಿದೈವ=ಭಿನ್ನ ಭಿನ್ನ ಬ್ರಹ್ಮಾದಿ ಆಧಿದೇವತೆಗಳಿಂದಲೂ, ಬೇರೆಬೇರೆ ಅಕ್ಷರ=ಭಿನ್ನ ಭಿನ್ನ ನಕಾರಾದಿ ಅಕ್ಷರಗಳಿಂದಲೂ, ಪ್ರಕಾಶಂಗಳಿಂ=ಪೀತ, ಶ್ವೇತಾದಿ ವರ್ಣಗಳಿಂದಲೂ, ಬೇರೆಬೇರೆ=ಭಿನ್ನಗಳಾಗಿ, ಇಂತು=ಈ ಪ್ರಕಾರ, ಒಪ್ಪುತಿಹವು= ಶೋಭಾಯಮಾನಗಳಾಗಿರುವವು.

ತಾತ್ಪರ್ಯ:- ೪-೫-೬ ಈ ಶ್ಲೋಕಗಳಲ್ಲಿ ಹೇಳಲ್ಪಟ್ಟ ಅರ್ಥವು ಪರಮಾರ್ಥಗೀತೆಯ ಪಂಚೀಕರಣದಲ್ಲಿಯೂ, ನಿರ್ವಾಣ ಶಿವಯೋಗಿ ಕೃತ ಪಂಚೀಕರಣದಲ್ಲಿಯೂ ಬಂದಿರುತ್ತದೆ. ಮತ್ತು ಕೋಷ್ಟಕ ಬರೆದು ಅದರಲ್ಲಿ ಪ್ರತಿಯೊಂದು ವಿಷಯಗಳು ಮನಸ್ಸಿಗೆ ಹೊಳೆಯುವಂತೆ ಬರೆಯಲ್ಪಟ್ಟವೆ. ಆದ್ದರಿಂದ ಇಲ್ಲಿ ಬರೆಯುವದನ್ನು ಬಿಟ್ಟಿರುತ್ತೇವೆ. ಅಲ್ಲಿ ನೋಡಿ ತಿಳಿದುಕೊಳ್ಳತಕ್ಕದ್ದು.

ಬಳಿಕ, ಈ ಏಳು ಸ್ಥಳಗಳಲ್ಲಿ ಏಳು ಕಮಲಗಳುಂಟು. ಅವುಗಳ ಮಧ್ಯದಲ್ಲಿರುವದು ಹೃದಯಕಮಲವು. ಅದರ ಮಧ್ಯದಲ್ಲಿ ಒಂದು ಶುಭ್ರಕಮಲವುಂಟು ಅದೇ ಹೃದಯವೆನ್ನಲ್ಪಡುವದೆಂದು ಹೇಳುತ್ತಾರೆ.

ಅವರ ನಡುವೆಸೆದು ತೋರುವ ದಿವ್ಯ ಕಮಲ ಮ |
ಧ್ಯವನೈದಿ ಶುಭ್ರ ನಳಿನ ವೊಂದಿಹುದು ತುಂ |
ಡವನಧಸ್ಸಾಗಿ ತಳೆದಲ್ಲಿ ||೭||

ಟೀಕಾ:- ಅವರನಡುವೆ=ಆ ಕಮಲಗಳ ಮಧ್ಯದಲ್ಲಿ, ಎಸೆದು=ಸ್ಪಷ್ಟವಾಗಿ, ತೋರುವ=ಪ್ರತೀತಿಯಾಗುವ, ದಿವ್ಯಕಮಲ ಮಧ್ಯವನು=ಪ್ರಕಾಶ ಮಾನವಾದ ಹೃದಯ ಕಮಲವನ್ನು ಕುರಿತು, ಐದಿ=ಹೊಂದಿ ಅಲ್ಲಿ=ಆ ಹೃದಯದಲ್ಲಿ, ತುಂಡವನು=ಮುಖವನ್ನು ಅಧಃಸಾಗಿ=ಕೆಳಗೆ ಮುಖಮಾಡಿ, ತಳೆದು=ಹೊಂದಿಕೊಂಡು, ಶುಭ್ರನಳಿನವೊಂದಿಹುದು=ಒಂದು ಬಿಳೀಕಮಲವಿರುವದು.

ತಾತ್ಪರ್ಯ:ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಈ ಮೂರು ಕಮಲಗಳು ಕೆಳಗೆ ಇರುತ್ತವೆ. ವಿಶುದ್ಧಿ, ಆಗ್ನೇಯ, ಶಿಖಾಚಕ್ರಗಳೆಂಬವು ಮೇಲೆ

ಇರುತ್ತವೆ. ಇವುಗಳ ಮಧ್ಯದಲ್ಲಿರುವದು ಅನಾಹತ ಚಕ್ರವು. ಇದೇ ಹೃದಯ ಕಮಲವೆಂದು ಹೇಳಿಸಿಕೊಳ್ಳುತ್ತದೆ. ಇಂಥಾ ಪ್ರಕಾಶಾತ್ಮಕವಾದ ಹೃದಯ ಕಮಲದಲ್ಲಿ ಒಂದು ಬಿಳಿ ಬಣ್ಣದ ಕಮಲವಿರುತ್ತದೆ. ಬಾಳೆಯ ಹೂವಿನ ಗೊನೆಯಂತೆ, ಅದು ತನ್ನ ಮುಖವನ್ನು ಕೆಳಗೆ ಮಾಡಿರುತ್ತದೆ.

ಬಳಿಕ, ಆ ಶುಭ್ರಕಮಲವು ಕಾದಿಯಿಂದ ಜಕಾರದವರೆಗಿರುವ ಎಂಟುದಳಗಳಿಂದ ಕೂಡಿಕೊಂಡಿರುತ್ತದೆಂದು ಹೇಳುತ್ತಾರೆ.

**ಝುನಕಾಂತ ವರ್ಣವದಕನುವಪ್ಪವೀ ಪೂರ್ವ ।**
**ವನೆಯಾದಿಯಾಗಿ ನೋಡಲೆಂಟು ದಳಂಗ ।**
**ಳನು ತಾಳ್ದು ಬೆಳಗುತಿರುತಿರ್ಕು ॥೮॥**

ಟೀಕಾ:-ಅದಕೆ=ಆ ಕಮಲಕ್ಕೆ ಝುನಕಾಂತವರ್ಣವು=ಝುಕಾರ ಮೊದಲಾದ ನಾಲ್ಕು ವರ್ಣಗಳನ್ನು 'ನ' ಪದದಿಂದ ನಿಷೇಧಮಾಡಲು, ಉಳಿದಎಂಟುವರ್ಣಗಳು, ಅನುಒಪ್ಪವು=ಶೋಭಾಯಮಾನವಾಗಿರುವವು, ಈ ಪೂರ್ವವನೆಯಾದಿಯಾಗಿ= ಈ ಪೂರ್ವದಿಕ್ಕನ್ನೇ ಮೊದಲು ಮಾಡಿಕೊಂಡು, ನೋಡಲ್=ವಿಚಾರಮಾಡಲಾಗಿ ಎಂಟುದಳಂಗಳನು=ಎಂಟುದಳಗಳನ್ನು, ತಾಳ್ದು=ಹೊಂದಿ, ಬೆಳಗುತಿರುತಿರ್ಕು= ಪ್ರಕಾಶಮಾನವಾಗಿರುವದು.

ತಾತ್ಪರ್ಯ:- ಆ ಶುಭ್ರಕಮಲವು ಎಂಟುದಳಗಳಿಂದ ಕೂಡಿರುತ್ತದೆ. ಅವು ಯಾವವು ? ಅಂದರೆ ಅನಾಹತಚಕ್ರಕ್ಕೆ (೧೨) ಹನ್ನೆರಡು ದಳಗಳೆಂದು ಪೂರ್ವದಲ್ಲಿ ಹೇಳಿದ್ದಾರೆ. [ ಕ, ಖ, ಗ, ಘ, ಙ, ಚ, ಛ, ಜ, ] ( ಝು, ಞ, ಟ, ಠ, ) ಇವೇ ಹನ್ನೆರಡು ದಳಗಳು'ಝು, ಈ ಅಕ್ಷರದಿಂದ 'ಠ, ಪರ್ಯಂತರ, ನಾಲ್ಕು ವರ್ಣಗಳನ್ನು ಅಂದರೆ, ಝು, ಞ, ಟ, ಠ, ಇವುಗಳನ್ನು 'ನ, ಪದದಿಂದ ನಿರಾಕರಿಸಲು, ಜಕಾರದಿಂದ ಕಕಾರದ ವರೆಗೆ ಇರುವ ಎಂಟು ಅಕ್ಷರಗಳೇ ಇದಕ್ಕೆ ಎಂಟು ದಳಗಳಾಗಿರುವವು. ಇವು ಆ ಶುಭ್ರವಾದ ಹೃದಯ ಕಮಲದ ಪೂರ್ವಾದಿ ಎಂಟು ದಿಕ್ಕುಗಳನ್ನು ಹಿಡಿದು ಎಂಟು ದಳಗಳು ಇರುತ್ತವೆ.

ಬಳಿಕ, ಶುಭ್ರ ಹೃದಯ ಕಮಲಕ್ಕೆ ಅಕ್ಷರರೂಪ ದಳಗಳನ್ನು ಹೇಳಿದ ಮೇಲೆ ಅದಕ್ಕೆ ಕರ್ಣಿಕಾ, ಕಿಂಜಲ್ಕ, ದಳ ನಾಳ, ಕಂದಾದಿಗಳು ಯಾವವಾಗಿರುತ್ತವೆಂಬುದನ್ನು ನಿರೂಪಣಮಾಡುತ್ತಾರೆ.

**ಪ್ರಣವ ಕರ್ಣಿಕೆ ವಿದ್ಯೆಯೆನಿಸಿ ಕಿಂಜಲ್ಕ ದಳ ।**
**ವಣಿಮಾದಿ ಭೂತಿಯರಿವೆ ನಾಳಂ ಮಹಾ ।**
**ತ್ರಣಿಯರದ ಕಂದವದರಲ್ಲಿ ॥೯॥**

**ಟೀಕಾ:-** ಅದರಲ್ಲಿ=ಆ ಶುಭ್ರಕಮಲದಲ್ಲಿ, ಪ್ರಣವ=ಓಂಕಾರವೇ, ಕರ್ನಿಕೆ= ದಳಗಳಿಗೆ ಆಶ್ರಯುವಾಗಿ ವರ್ತುಲಾಕಾರವಾಗಿರುವಂಥಾದ್ದು, ವಿದ್ಯೆ=ಅರವತ್ತು ನಾಲ್ಕು ವಿದ್ಯೆಗಳೇ, ಕಿಂಜಲ್ಕಯೆನಿಸಿ=ಕೇಸರಿಗಳಾಗಿರುವವು, ಅಣಿಮಾದಿ ಭೂತಿ= ಅಣಿಮಾದ್ಯಷ್ಟೈಶ್ವರ್ಯಗಳು, ದಳವು = ಎಂಟು ದಳಗಳಾಗಿಯೂ, ಅರಿವೆ = ಜ್ಞಾನವೇ, ನಾಳಂ=ದಂಟಾಗಿಯೂ, ಮಹತ್ತು=ಸಾಮಾನ್ಯವಾದ ಅಹಂಕಾರವು, ಅಣಿಯರದ=ಕೂಡಿದ, ಕಂದವು=ಗಡ್ಡೆಯಾಗಿರುವದು.

**ತಾತ್ಪರ್ಯ:-** ಆ ಉಕ್ತ ಹೃದಯ ಕಮಲದಲ್ಲಿರುವ ಶುಭ್ರ ಕಮಲಕ್ಕೆ ಅಕ್ಷರ ದಳಗಳನ್ನು ಹೇಳಿ; ಈಗ ಪುನಃ ಅದಕ್ಕೆ ಅಣಿಮಾ, ಮಹಿಮಾದಿ ಅಷ್ಟ ಮಹಾಸಿದ್ಧಿಗಳೇ ಎಂಟು ದಳಗಳಾಗಿರುತ್ತವೆಂದು ಹೇಳುತ್ತಾರೆ. ಹೀಗೆ ಹೇಳುವದ ರಿಂದ ಎರಡು ಸಾರೆ ದಳಗಳನ್ನು ಹೇಳಿದಂತಾಯಿತು, ಆದ್ದರಿಂದ ಪುನರುಕ್ತಿ ದೋಷಬರುತ್ತದೆಂದು ತೋರುತ್ತದೆ. ಆದರೂ ದೋಷಬರುವದಿಲ್ಲ. ಯಾಕಂದರೆ ಅಲ್ಲಿ ಅಕ್ಷರ ದಳಗಳನ್ನು ಹೇಳಿ; ಇಲ್ಲಿ ಐಶ್ವರ್ಯ ದಳಗಳನ್ನು ಹೇಳಿದ್ದಾರೆ. ಇದು ಔಪಾಸನಾ ವಿಷಯವಾದ್ದರಿಂದ ಎರಡು ಸಾರೆ ಹೇಳದರೂ ವಿರೋಧವಿಲ್ಲ. ಅಂದರೆ ಅಣಿಮಾದ್ಯಷ್ಟೈಶ್ವರ್ಯಗಳು ದಳದ ಸದೃಶವಾಗಿರುವವೆಂದು ಭಾವನೆ ಯನ್ನು ಮಾಡತಕ್ಕದ್ದಿರುತ್ತದೆ. ಇದರಂತೆ ಓಂಕಾರವು ದಳಾಶ್ರಯವಾದ ಕರ್ನಿಕೆ ಯಾಗಿರುತ್ತದೆ. ಆ ಕರ್ನಿಕೆಯ ಮೂಲದಿಂದ ವಿದ್ಯೆಗಳೆಂಬ ಕೇಸರಿಗಳಿರುತ್ತವೆ. ಇವುಗಳಿಗೆಲ್ಲಕ್ಕೂ ಆಶ್ರಯುವಾದ ಜ್ಞಾನವೇ ದಂಟಿನ ಸದೃಶವಾಗಿದೆ. ಸಮಷ್ಟಿ ಬುದ್ಧಿಯೇ ಕಂದವಾಗಿದೆ. ಎಂದು ಭಾವನೆಯನ್ನು ಮಾಡತಕ್ಕದ್ದಿರುತ್ತದೆ. ಹೇಗಂದರೆ, ಶಾಲಿಗ್ರಾಮದಲ್ಲಿ ವಿಷ್ಣುಬುದ್ಧಿ; ನರ್ಮದಾ ಶಿಲೆಯಲ್ಲಿ ಈಶಬುದ್ಧಿ, ಮಾಡುವಂತೆ, ಪ್ರಣವಾದಿಗಳಲ್ಲಿ ಕರ್ನಿಕಾಬುದ್ಧಿಯನ್ನು ಮಾಡತಕ್ಕದ್ದಿರುತ್ತದೆ. ಎಂದು ಊಹೆಮಾಡಬೇಕು.

**ಬಳಿಕ,** ಇದೇ ಶುಭ್ರಕಮಲಕ್ಕೆ ಅನೇಕ ಗ್ರಂಥಕಾರರು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಮತ್ತು ಶ್ರುತಿಯೂ ಉಂಟೆಂದು ಹೇಳುತ್ತಾರೆ.

**ಅದು ಹೃದಯುವದು ಪರಮ ಸದನವದು ಹರಭವನ ।**
**ವದು ಪೂರ್ವಶಿಖರಿಯದು ಮಹಾಚಕ್ರವದು ।**
**ಯುದಿದವೆಂದೆಂಬ ಶ್ರುತಿಸಿದ್ಧ ॥೧೦॥**

**ಟೀಕಾ:-** ಅದು=ಹೃದಯವದು=ಅದು ಹೃದಯವೆಂದೂ, ಅದು ಪರಮ ಸದನವು=ಅದು ಪರಮಾತ್ಮನಿರುವ ಮನೆಯೆಂದೂ, ಅದು ಹರಭವನ=ಹರನಿರುವ ಭವನವೆಂದೂ, ಅದು ಪೂರ್ವಶಿಖರಿ = ಅದು ಉದಯಾಚಲವೆಂದೂ, ಅದು

ಮಹಾಚಕ್ರವು=ಏಳು ಚಕ್ರಗಳಲ್ಲಿ ಇದು ದೊಡ್ಡದೆಂದೂ, ಅದು ಯದಿದವೆಂದೆಂಬ ಶ್ರುತಿ ಸಿದ್ಧ=ಯಾವ ಈ ಶರೀರರೂಪ ಬ್ರಹ್ಮಪುರದಲ್ಲಿ ಅಲ್ಪ, ಸೂಕ್ಷ್ಮವಾದ ಬಿಳೀ ಕಮಲರೂಪ ಹೃದಯವಿರುವದು. ಅದರಲ್ಲಿ ಪರಮಾತ್ಮನು ಇದ್ದಾನೆ. ಅವನನ್ನು ನೋಡಿರಿ, ತಿಳಿಯಿರಿ ಎಂಬ ಶ್ರುತಿಯುಂಟು.

**ತಾತ್ಪರ್ಯ:-** ಕೆಲವರು ಈ ಹೃದಯಕ್ಕೆ ಸದನ, ಭವನ ಎಂದು ಬೇರೆ ಹೆಸರುಗಳಿಂದ ಕರೆದರೂ ಮನೆಯೆಂಬ ಏಕಾರ್ಥವೇ ಆಗುತ್ತದೆ. ಇದಕ್ಕೆ ಕೆಲವರು ಪೂರ್ವದಿಕ್ಕಿನಲ್ಲಿ ಸೂರ್ಯನು ಉದಯನಾಗಬೇಕಾದರೆ; ಆ ದಿಕ್ಕಿನಲ್ಲಿರುವ ಪರ್ವತದಿಂದ ಬರುತ್ತಾನೆಂದು ಪುರಾಣಗಳು ಹೇಳುತ್ತವೆ. ಆದ್ದರಿಂದ ಅದಕ್ಕೆ ಉದಯಾಚಲ, ಪೂರ್ವಶಿಖರಿ ಎಂಬ ಹೆಸರುಗಳು ಇರುತ್ತವೆ. ಅದೇ ರೀತಿ ಪರಮಾತ್ಮನು ಅಪರೋಕ್ಷನಾಗಬೇಕಾದರೆ, ಇದೇ ಸ್ಥಳವಾದ್ದರಿಂದ ಪೂರ್ವಶಿಖರಿ ಎಂದು ಕರೆಯುತ್ತಾರೆ. ಕೆಲವರು ಯೋಗಿಗಳು ಮಹಾಚಕ್ರವೆಂದು ಕರೆಯುತ್ತಾರೆ. ಮತ್ತು ಈ ಹೃದಯದಲ್ಲಿಯೇ ಪರಮಾತ್ಮನನ್ನು ಹುಡುಕರಿ ಎಂಬ ಶ್ರುತಿಯೂ ಉಂಟು. ಪರಮಾತ್ಮನು ಅಪರೋಕ್ಷನಾಗಲಿಕ್ಕೆ ಯೋಗ್ಯವಾದ ಸ್ಥಾನವೆಂದು ಊಹೆಯಾಗುತ್ತದೆ. ಈ ಶ್ರುತ್ಯರ್ಥವನ್ನು ಇದೇ ಗ್ರಂಥದ ಕಡೆಯಲ್ಲಿ ನೋಡಿರಿ .ಶಾಂಕರ ಭಾಷ್ಯಾನುಸಾರವಾಗಿ ಅರ್ಥವನ್ನು ಬರೆದಿರುತ್ತದೆ.

**ಶಂಕಾ:-** ಮಾಯೋಪಹಿತನಾದ ಪರಮಾತ್ಮನು ಮಾಯಾಕಾರ್ಯವಾದ ಜಗತ್ತಿನಲ್ಲಿ ಎಲ್ಲ ಕಡೆಗೂ ಪೂರ್ಣನಾಗಿರುವನು. ಹೃದಯದಲ್ಲಿ ಇರುವನೆಂದು ಹೇಳಿದರೆ, ಅನ್ಯತ್ರ ಇಲ್ಲವೆನ್ನಬೇಕಾಗುವದು. ಹೀಗೆ ಹೇಳುವದರಿಂದ ಪರಿಚ್ಛಿನ್ನತ್ವ ಅನಿತ್ಯತ್ವ ಬರುತ್ತದೆ. ಶ್ರುತಿ ಅನುಭವಗಳಿಗೆ ವಿರೋಧವಾಗಿದೆ. ಇದು ಸರಿಯಲ್ಲ. ಪೂರ್ಣನು ಎಲ್ಲ ಕಡೆಗೆ ಇರುವನೆಂಬುದೆ ಯೋಗ್ಯವು.

**ಸಮಾಧಾನ:-** ಪರಮಾತ್ಮನು ಸರ್ವತ್ರ ಪರಿಪೂರ್ಣನಾಗಿರುವನೆಂಬುದು ಸಹಜವೇ. ಆದರೆ ಹೃದಯ ಕಮಲದಲ್ಲಿರುವನೆಂಬುದು ಸುಳ್ಳಲ್ಲ, ಹೇಗೆಂದರೆ; ಆಕಾಶವು ಅಥವಾ ಸೂರ್ಯನ ಪ್ರಕಾಶವು ಪೂರ್ಣವಾಗಿ ಎಲ್ಲ ಕಡೆಗೂ ಅದೆ. ಆದರೆ ಅದು ನೀರಿನಲ್ಲಿ, ಕನ್ನಡಿಯಲ್ಲಿ, ಸ್ವಚ್ಛವಾದ ಉಪಾಧಿಗಳಲ್ಲಿ ವಿಶೇಷವಾಗಿ ಹೊಳೆಯುತ್ತದೆ. ಹಾಗೇ ಪರಮಾತ್ಮನು ಸರ್ವತ್ರ ಸಾಮಾನ್ಯ ರೂಪದಿಂದ ಇದ್ದರೂ, ಹೃದಯವು ಮಾತ್ರ ವಿಶೇಷರೂಪವಾಗಿರುತ್ತದೆ. ಆದ್ದರಿಂದ ಪರಮಾತ್ಮನು ಹೃದಯದಲ್ಲಿರುವನೆಂದು ಹೇಳಿರುವದು ವಿರೋಧವಲ್ಲ. ಯುಕ್ತವದೆ.

**ಬಳಿಕ, ಯಾವ ಯಾವ ಗ್ರಂಥಗಳಲ್ಲಿ ಈ ವಿಷಯವನ್ನು ಹೇಳಿದೆ. ಅಂದರೆ; ಆ ಗ್ರಂಥಗಳ ಹೆಸರುಗಳನ್ನು ಹೇಳುತ್ತಾರೆ,**

**ತಾತ ನೀನರಿ ಸೂತಗೀತೆ ವಿದ್ಯಾನಾಥ |**
**ಗೀತೆ ಶಿವಗೀತೆ ಯೋಗಸಾರ ಸಮುಚ್ಚ |**
**ಯಾತಿಶಯದರ್ಥವಿದು ತಾನು ||೧೧||**

**ಟೀಕಾ:-** ತಾತ=ಎಲೈ ಪುತ್ರನೇ!, ಸೂತಗೀತೆ, ವಿದ್ಯಾನಾಥ ಗೀತೆ, ಶಿವ ಗೀತೆ, ಯೋಗಸಾರ, ಸಮುಚ್ಚಯ=ಇವುಗಳಲ್ಲಿ ಹೇಳಿದ ಅರ್ಥವನ್ನು ಸಂಗ್ರಹಿಸಿದ, ಅತಿಶಯದ=ಆಧಿಕ್ಯವಾದ, ಅರ್ಥವಿದು ತಾನು=ಈ ಅರ್ಥವು ತಾನಾಗಿರುತ್ತದೆ.

**ತಾತ್ಪರ್ಯ:-**ಉಕ್ತ ಗ್ರಂಥಗಳಲ್ಲಿ ಹೇಳಿರುವ ಅರ್ಥಗಳನ್ನು ಸಂಗ್ರಹಮಾಡಿ ಕೊಂಡು, ಇಲ್ಲಿ ನಿನಗಾಗಿ ಹೇಳಿರುತ್ತೇವೆ. ಅಂದರೆ, ನಾವು ನಮ್ಮ ಕಲ್ಪನೆಯಿಂದ ಹೇಳಿಲ್ಲ. ಕಿಂತು ಪ್ರಮಾಣಪೂರ್ವಕ ಹೇಳಿರುತ್ತವೆಂಬ ಭಾವವು.

ಬಳಿಕ, ಹೃದಯಕಮಲದಲ್ಲಿ ಪರಮಾತ್ಮನಿರುತ್ತಾನೆಂದು ತಿಳಿಯುವದ ರಿಂದಾಗುವ ಪ್ರಯೋಜನವನ್ನು ಹೇಳುತ್ತಾರೆ.

**ಯೋಗೀಂದ್ರರಿದನೆ ಮುಂತಾಗಿ ಭಾವಿಸುತಲ್ಲಿ |**
**ಯಾಗಳಾ ಜೀವ ಪರಮಾತ್ಮರುಗಳ ಸಂ |**
**ಯೋಗ ಸುಖಸಿದ್ಧಿ ಪಡೆಯುವರು ||೧೨||**

**ಟೀಕಾ:-** ಯೋಗೀಂದ್ರರು = ಯೋಗಿಗಳಲ್ಲಿ ಶ್ರೇಷ್ಠರಾದವರು, ಇದನೆ = ಈ ಹೃದಯವನ್ನೆ, ಮುಂತಾಗಿ = ಉಕ್ತ ದಳಕರ್ಣಿಕಾ ಮೊದಲಾದ ರೀತಿಯಿಂದ, ಭಾವಿಸುತ=ಧ್ಯಾನಿಸುತ್ತಾ, ಆಗಳ್ = ಆ ಧ್ಯಾನಮಾಡುವ ಕಾಲದಲ್ಲಿ, ಆ ಜೀವ ಪರಮಾತ್ಮರುಗಳ = ಆ ಜೀವ ಪರಮಾತ್ಮಗಳ, ಸಂಯೋಗ = ಐಕ್ಯದಿಂದಾಗುವ, ಸುಖಸಿದ್ಧಿ=ಪ್ರಾಪ್ತವಾದ ಆನಂದವನ್ನು, ಪಡೆಯುವರು=ಹೊಂದುವರು.

**ತಾತ್ಪರ್ಯ:-** ಹೃದಯಕಮಲವನ್ನು ಅದರಲ್ಲಿರುವ ಸ್ವಯಂಪ್ರಕಾಶರೂಪ ಪರಮಾತ್ಮನನ್ನು ಯೋಗಿಗಳು ಧ್ಯಾನಮಾಡುತ್ತಾರೆ. ಆ ಶಿವನನ್ನು ಧ್ಯಾನಿಸು ತ್ತಿರಲು, ಮನಸ್ಸು ಶಿವಚಿಂತನವನ್ನು ಮಾಡುತ್ತಾ ಶಿವನಲ್ಲಿಯೇ ಮುಳುಗಿಹೋಗು ತ್ತದೆ. ಇದಕ್ಕೆ **ನಿರ್ವಿಕಲ್ಪ ಸಮಾಧಿ**ಯೆನ್ನುತ್ತಾರೆ. ಮನಸ್ಸು ಧ್ಯಾನದಿಂದ ಶಿವ ನಲ್ಲಿ ಕೂಡಿದ್ದರಿಂದ, ಮನೋಪಾಧಿಯುಳ್ಳ ಜೀವನು ಶಿವನಲ್ಲಿ ಅಭೇದವನ್ನು ಹೊಂದುತ್ತಾನೆ. ಆಗ್ಗೆ ಆ ಮನಸ್ಸಿಗೆ ಅಲೌಕಿಕ ನಿರ್ವಿಷಯವಾದ ಅತ್ಯಧಿಕ ಆನಂದವು ಹೊಳೆಯುತ್ತದೆ. ಇಂಥಾ ಆನಂದವನ್ನು ಯೋಗಿಗಳು ಅನುಭವಿ ಸುತ್ತಾರೆಂಬ ಭಾವವು. ಈ ರೀತಿ ಸವಿಕಲ್ಪ ನಿರ್ವಿಕಲ್ಪ ಸಮಾಧಿಯನ್ನು ಮಾಡುತ್ತಾ ಸ್ವರೂಪಾನಂದದಲ್ಲಿ ಮುಳುಗಿರುವದೇ **ಪರಮ ಪ್ರಯೋಜನ**ವಾಗಿದೆ.

**ಬಳಿಕ,** ಜೀವನು ಆ ಹೃದಯ ಕಮಲದಲ್ಲಿ ಯಾವ ಸ್ವರೂಪದಿಂದ ಇರುವನು? ಅವನನ್ನು ನಾವು ಹೇಗೆ ತಿಳಿಯಬೇಕೆಂದು ಕೇಳಿದರೆ? ಉತ್ತರವನ್ನು ಹೇಳುತ್ತಾರೆ.

**ವಾಲಾಗ್ರ ಶತಭಾಗೆಯಾಲೇಶದೊಳಗೊಂದ ।**
**ನಾಲೋಕಿಸಲ್ಕೆ. ತದ್ರೂಪದಿಂದಿರ್ಪ ।**
**ನಾಲೋಲಗತಿವಿಡಿದು ಜೀವ** ॥೧೩॥

**ಟೀಕಾ:-** ಜೀವ=ಜೀವನು, ವಾಲಾಗ್ರ=ಕೂದಲ ತುದಿಯ, ಶತಭಾಗೆಯ= ನೂರು ಭಾಗದ, ಆಲೇಶದೊಳಗೊಂದನು=ಆ ಭಾಗಗಳಲ್ಲಿ ಒಂದನ್ನು, ಅವಲೋಕಿಸಲ್ಕೆ=ವಿಚಾರಮಾಡಿನೋಡಲು, ತದ್ರೂಪದಿಂದ=ಆ ಸ್ವರೂಪದಿಂದ, ಲೋಲಗತಿವಿಡಿದು=ಚಂಚಲಾವಸ್ಥೆಯನ್ನು ಹೊಂದಿ, ಇರ್ಪನು=ಇರುವನು.

**ತಾತ್ಪರ್ಯ:-** ಜೀವನು ಆ ಹೃದಯ ಕಮಲದಲ್ಲಿ ಯಾವ ರೂಪದಿಂದ ಇರುವನೆಂದು ಕೇಳಿದರೆ, ಅತಿ ಸೂಕ್ಷ್ಮರೂಪನಾಗಿರುತ್ತಾನೆಂದು ಹೇಳುತ್ತಾರೆ. ಒಂದು ಕೂದಲಿನ ತುದಿಯನ್ನು ನೂರು ಭಾಗ ಮಾಡಿದರೆ, ಅದರೊಳಗಿನ ಒಂದು ಭಾಗದಷ್ಟು ಜೀವನು ಸೂಕ್ಷ್ಮನಾಗಿರುವನು. ಎಂದು ಶ್ರುತಿಯು ಹೇಳುತ್ತದೆ. ಕೂದಲ ತುದಿಯೇ ಸೂಕ್ಷ್ಮವಾಗಿದೆ. ಅದರ ನೂರು ಅಂಶದಲ್ಲಿ ಒಂದಂಶವಂದರೆ ಅತಿ ಸೂಕ್ಷ್ಮವಾಯಿತು. ಹೀಗೆ ಹೇಳುವದರಿಂದ ಪರಿಚ್ಛಿನ್ನತ್ವ ದೋಷಬರುವದೆಂದರೆ? ಇಲ್ಲ. ಯಾಕಂದರೆ, 'ಅಣೋರಣೀಯಾನ್' ಅಣುವಿಗೂ ಅಣುವಾಗಿರುವನು ಎಂಬ ಶ್ರುತಿಯೂ ಉಂಟು. ಹೀಗೆ ಹೇಳಿರುವದು ಉಪಾಧಿ ದೃಷ್ಟಿಯಿಂದ ಹೊರತು ಸ್ವರೂಪದಿಂದಲ್ಲ. ಸ್ವರೂಪತಃ ಜೀವನಾದರೂ ಆಕಾಶದಂತೆ ಪರಿಪೂರ್ಣನೇ ಇರುವನು. ಹೇಗಂದರೆ, ಆಕಾಶವು ಸೂಜಿಯ ಹೆಜ್ಜೆಗಿಂತಲೂ ಸಣ್ಣದಾಗಿರುವದೆಂದು ಹೇಳಿದಂತೆ, ಈ ಮಾತು ಆಗಿರುತ್ತದೆ. ಉಪಾಧಿ ಸೂಕ್ಷ್ಮವಾಗಿರೋಣದರಿಂದ ಅದರಲ್ಲಿ ಜೀವನೂ ಸೂಕ್ಷ್ಮವಾಗಿರುತ್ತಾನೆ. ಮತ್ತು ಆ ಉಪಾಧಿಯಾದ ಹೃದಯನಾಮಕ ಮನಸ್ಸು ಚಂಚಲವಾಗುವದರಿಂದ, ಜೀವನು ಚಂಚಲರೂಪನಾಗಿ ತೋರುತ್ತಾನೆ. ನದಿಯ ಪ್ರವಾಹದಲ್ಲಿ ಸೂರ್ಯನ ಪ್ರತಿಬಿಂಬು ನೀರು ಹರಿದು ಹೋದರೆ, ತಾನೂ ಹರಿದು ಹೋದಂತೆ ತೋರುತ್ತದೆ. ಆ ಮನಸ್ಸು ಚಂಚಲವಾಗೋಣದರಿಂದ ಜೀವನೂ ಚಂಚಲರೂಪನಾದಂತೆ ಕಂಡು ಬರುತ್ತಾನೆಂಬ ಭಾವವು. ಅರ್ಥಾತ್ ಜೀವನು ಅತಿ ಸೂಕ್ಷ್ಮನಾಗಿಯೂ ಚಂಚಲನಾಗಿಯೂ ಇರುತ್ತಾನೆಂದು ಹೇಳಿದ್ದಾಯಿತು.

**ಬಳಿಕ,** ಉಕ್ತಲಕ್ಷಣ ಜೀವನಲ್ಲಿ ಪರಮಾತ್ಮನು ವಾಸಮಾಡಿಕೊಂಡಿರುತ್ತಾನೆಂದು ಪ್ರತಿಪಾದಿಸುತ್ತಾರೆ.

**ದಹನ ಲೇಖಾಕಾರವಹ ಜೀವನದರೊಳೊ।**
**ಪ್ಪಿಹ ನಾದಿದೇವನುಂ ತಸ್ಯ ಮಧ್ಯೆಯೆಂ।**
**ದಿಹ ನೈಗಮಾರ್ಥವೆಲೆ ವತ್ಸ ॥೧೪॥**

**ಟೀಕಾ:-** ಎಲೆವತ್ಸ=ಏಲೈಪುತ್ರನೇ! ದಹನ=ಅಗ್ನಿಯು, ಲೇಖಾಕಾರವಹ= ಜ್ವಾಲೆಯಂತೆ ಪ್ರಕಾಶಮಾನವಾಗಿರುವ, ಜೀವನು=ಜೀವನಿದ್ಧಾನೆ, ಅದರೊಳು= ಆ ಪ್ರಕಾಶರೂಪ ಜೀವನಲ್ಲಿ, ಆದಿದೇವನುಂ=ಪರಮಾತ್ಮನೂ, ಒಪ್ಪಿಹನು= ಶೋಭಾಯಮಾನನಾಗಿರುವನು, ತಸ್ಯ ಮಧ್ಯೆಯೆಂದು=ಆ ಜೀವನ ಮಧ್ಯದಲ್ಲಿ ಈಶನಿರುವನೆಂದು, ಇಹ ನೈಗಮಾರ್ಥವು=ಶ್ರುತಿಯ ಅರ್ಥವು ಇರುತ್ತದೆ.

**ತಾತ್ಪರ್ಯ:-** ಅತಿ ಸೂಕ್ಷ್ಮನೂ ಚಂಚಲನೂ, ಅಗ್ನಿಜ್ವಾಲೆಯಂತೆ, ಪ್ರಕಾಶರೂಪನೂ ಜೀವನು ಆಗಿರುವನು. ಇಂಥಾ ಜೀವನ ಮಧ್ಯದಲ್ಲಿ ಪರಮಾತ್ಮನೂ ವಾಸಮಾಡಿಕೊಂಡಿರುತ್ತಾನೆ. ಎಂಬ ಶ್ರುತಿಯೂ ಉಂಟು(ಇದನ್ನು ಕಡೆಯಲ್ಲಿರುವ ಶ್ರುತ್ಯರ್ಥವನ್ನು ಅವಲೋಕನಮಾಡಿರಿ) 'ವಿಜ್ಞಾನೇ ತಿಷ್ಠನ್ ವಿಜ್ಞಾನ ಮಂತರೋ ಯಮಯತಿ' ಜೀವನಲ್ಲಿ ಪರಮಾತ್ಮನಿದ್ದು ಜೀವನನ್ನು ಪ್ರೇರಿಸುತ್ತಾನೆಂಬ ಬೃಹದಾರಣ್ಯಕ ಶ್ರುತಿಯೂ ಉಂಟು. ಆದ್ದರಿಂದ ಒಂದೇ ಹೃದಯಕಮಲದಲ್ಲಿ ಜೀವೇಶ್ವರರು ಕೂಡಿಯೇ ವಾಸಮಾಡಿಕೊಂಡಿರುವರೆಂದು ಹೇಳಿದಂತಾಯಿತು.

**ಬಳಿಕ,** ಜೀವನೊಡನೆ ಈಶನು ಕೂಡಿಕೊಂಡು ಇದ್ದಮೇಲೆ ಜೀವನು ಕರ್ತಾ ಕರ್ಮಫಲ ಭೋಕ್ತಾ ಆಗಿರುವನು. ಜೀವನಂತೆ ಈಶನೂ ಕರ್ತಾಭೋಕ್ತಾ ಆಗಬೇಕಾದೀತು. ಅಗ್ನಿಯ ಸಮೀಪದಲ್ಲಿ ಇಬ್ಬರು ಕೂತುಕೊಂಡಿದ್ದರೆ ಇಬ್ಬರಿಗೂ ಸಮಾನವಾಗಿಯೇ ಉಷ್ಣವು ತಗಲುವಂತೆ, ಹೃದಯದಲ್ಲಿದ್ದ ಜೀವೇಶ್ವರರಿಬ್ಬರಿಗೂ ಸಂಸಾರವು ಪ್ರಾಪ್ತವಾಗಬೇಕಾಯಿತೆಂದು ಶಂಕೆಯನ್ನು ಮಾಡಿದರೆ, ಈಶನು ಜೀವನೊಡನೆ ಕೂಡಿದರೂ ಅಸಂಗ ಅಸಂಸಾರಿಯಾಗಿರುತ್ತಾನೆಂದು ಉತ್ತರವನ್ನು ಹೇಳುತ್ತಾರೆ.

**ವ್ಯವಹಾರಿ ಜೀವರಂತವರೊಡನೆ ಕೂಡಿ ಕೂ।**
**ಡುವನಲ್ಲ ದೀಶ ನಿಹನಾಗಿ ದ್ವಾಸುಪ।**
**ರ್ಣವೆನಿಸಾ ವೇದ ವಿದಿತಾರ್ಥ ॥೧೫॥**

**ಟೀಕಾ:-** ವ್ಯವಹಾರಿಜೀವರು=ಸಂಸಾರಿಯಾದ ಜೀವರುಗಳು, ಅಂತವರೊಡನೆ=ಆ ಕರ್ತಾಭೋಕ್ತಾರೂಪ ಜೀವರೊಡನೆ, ಕೂಡಿ=ಬೆರತಾಗ್ಯಾದರೂ,

ಕೂಡುವನಲ್ಲದೆ=ಅವರಂತೆ ತಾನು ಸಂಸಾರಿಯಾಗಿರದೆ, ಈಶನಿಹನಾಗಿ=ಪರಮಾತ್ಮನಿರುವನೆಂದು, ದ್ವಾಸುಪರ್ಣವೆನಿಪ=ಜೀವಶಿವರೆಂಬ ಎರಡುಪಕ್ಷಿಗಳು ಬುದ್ಧಿರೂಪ ವೃಕ್ಷದಲ್ಲಿ ವಾಸವಾಗಿವೆಯೆಂಬ, ವೇದವಿದಿತಾರ್ಥ=ವೇದದಲ್ಲಿ ಪ್ರಸಿದ್ಧವಾದ ಅರ್ಥವಾಗಿರುತ್ತದೆ.

**ತಾತ್ಪರ್ಯ:-** **ದ್ವಾ ಸುಪರ್ಣಾ ಸಯುಜಾ ಸಖಾಯಾ,** ಎಂಬ ಶ್ರುತಿಯು, ಜೀವೇಶ್ವರರಿಬ್ಬರು, ಪಕ್ಷಿಗಳಂತೆ ಯಾವಾಗಲೂ ಕೂಡಿಕೊಂಡು, ಪರಸ್ಪರ ಪ್ರೇಮದಿಂದಲೇ ಇರುತ್ತಾರೆ. ಆದರೆ ಜೀವನು ಮಾತ್ರ ತಾನು ಜನ್ಮಾಂತರಗಳಲ್ಲಿ ಮಾಡಿದ, ಕರ್ಮಫಲ ಸುಖ ದುಃಖಗಳನ್ನು ಭೋಗಿಸುತ್ತಾನೆ. ಈಶನು ಮಾತ್ರ ಕರ್ಮಫಲಗಳನ್ನು ಭೋಗಿಸುವದಿಲ್ಲ. ಕಿಂತು, ಕರ್ಮಫಲದಾತಾ ಆಗಿರುತ್ತಾನೆ. ಹೀಗೆಂದು ವರ್ಣನ ಮಾಡಿರುತ್ತದೆ. ಆದ್ದರಿಂದ ಕರ್ತಾಭೋಕ್ತಾ ರೂಪ ಸಂಸಾರಿ ಜೀವರೊಡನೆ ಈಶನು ಕೂಡಿಕೊಂಡು ಇದ್ದರೂ, ಅವನು ಕೂಡಿದವನಲ್ಲ. ಎಂಬದಾಗಿ ಶ್ರುತಿಯು ಹೇಳುತ್ತದೆ. ಆದ್ದರಿಂದ ಶಿವನು ಅಸಂಸಾರಿ, ಅಸಂಗ, ನಿತ್ಯಮುಕ್ತನಾಗಿರುತ್ತಾನೆಂಬ ಭಾವವು.

ಬಳಿಕ, ಪರಿಪೂರ್ಣವಾಗಿದ್ದ ಒಂದು ಬ್ರಹ್ಮದಲ್ಲಿ ದೇಹ, ದೇಹದಲ್ಲಿ, ಹೃದಯ, ಅದರಲ್ಲಿ ಜೀವೇಶ್ವರರು ಇದ್ದಾರೆಂದು ಅನೇಕತ್ವವನ್ನು ಹೇಳುವದು ಸರಿಯಾಗಿ ತೋರವದಿಲ್ಲೆಂದು ಶಂಕೆಯನ್ನು ಮಾಡಿದರೆ? ಮುಂದೆ ಹೇಳುವ ದೃಷ್ಟಾಂತದಂತೆ ಎಲ್ಲವೂ ಸರಿಯಾಗಿರುತ್ತದೆಂದು ಉತ್ತರವನ್ನು ಹೇಳುತ್ತಾರೆ.

**ತನುಕುಂಭವಹಮಂಬುಘನ ಜೀವನದರಲ್ಲಿ ।**
**ಮಿನುಗುವಾ ಛಾಯೆ ಪರಮನೇ ರವಿಯುಂದ ।**
**ವೆನಿಸಿ ಚಿನ್ನಭದೊಳಿಹರಿಂತು** ||೧೬||

**ಟೀಕಾ:-** ತನುಕುಂಭವು=ಶರೀರವೇ ಒಂದು ಕೊಡವು, ಅಹ ಮಂಬುಘನ=ಅಹಂಕಾರವೇ ಜಲರಾಶಿಯು, ಜೀವನು=ಜೀವಾತ್ಮನು, ಅದರಲ್ಲಿ=ಜಲದಲ್ಲಿ, ಮಿನಗುವ=ಹೊಳೆಯುವ, ಛಾಯೆ=ಅಭಾಸ ರೂಪನು. ಪರಮನೇ=ಪರಮಾತ್ಮನೇ, ರವಿಯುಂದವೆನಿಸಿ=ಸೂರ್ಯನ ಸದೃಶನಾಗಿ, ಚಿನ್ನಭದೋಳ್=ಚಿದ್ರೂಪ ಬ್ರಹ್ಮವೆಂಬ ಆಕಾಶದಲ್ಲಿ, ಇಂತು=ಹೇಳಿದ ಪ್ರಕಾರ, ಇಹರು=ಇರುವರು.

**ತಾತ್ಪರ್ಯ:-** ದೇಶ ಕಾಲ, ವಸ್ತು ಪರಿಚ್ಛೇದ ರಹಿತವಾದ, ಚಿದ್ರೂಪ ಬ್ರಹ್ಮವೆ ಒಂದು ಆಕಾಶರೂಪವಾಗಿದೆ. ಆ ಆಕಾಶದಲ್ಲಿದ್ದ ಸೂರ್ಯನ ಹಾಗೆ ಪರಮಾತ್ಮನಿರುವನು. ಶರೀರವು ಕೊಡದ ಸಮಾನವಾಗಿದೆ. ಆದರೊಳಗಿನ ಜಲ

ರಾಶಿಯಂತೆ ಅಹಂಕಾರವಾಗಿರುವದು. ಆ ಪರಮಾತ್ಮನ ಪ್ರತಿಬಿಂಬು ಈ ಅಹಂಕಾರರೂಪ ಜಲದಲ್ಲಿ ಮೂಡಿರುತ್ತದೆ. ಇದು ಹೊಳೆಯುತ್ತಾ ಪ್ರಕಾಶಮಾನವಾಗಿರಲು; ಜೀವನೇ ಛಾಯಾರೂಪನು ಎಂದು ಹೇಳಿಸಿಕೊಳ್ಳುವನು. ಒಂದು ಚಿದಾಕಾಶದಲ್ಲಿಯೇ ಉಪಾಧಿಮೂಲಕ ಎಲ್ಲ ವ್ಯವಹಾರಗಳು ನಡೆದಿರುವವು ಎಂದು ತಿಳಿಯತಕ್ಕದ್ದು. ಇಲ್ಲಿ ಪರಮನೇ ರವಿಯು; ಅಹಂಕಾರವೇಜಲವು. ಅದರಲ್ಲಿ ಹೊಳೆಯುವ ಛಾಯೆಯೇ ಜೀವನು, ಎಂದು ಹೀಗೆ ಹೇಳುವದರಿಂದ ಆಭಾಸವಾದವನ್ನು ಪ್ರತಿಪಾದನ ಮಾಡಿರುವರೆಂದು ತಿಳಿಯತಕ್ಕದ್ದು. ನಮ್ಮದೇಹದ ನೆರಳು ನೀರಿನಲ್ಲಿ ಬಿದ್ದಂತೆ; ಪರಮಾತ್ಮನ ನೆರಳು ಅಹಂಕಾರದಲ್ಲಿ ಬೀಳಲು ಅದೇ ಛಾಯೆಯೆಂದು ಜೀವನೆಂದು ಹೇಳಲ್ಪಡುವದು. ಇದಕ್ಕೆ ಅಭಾಸವಾದವೆಂದು ಹೇಳುವರು. ಶ್ರೀಮದ್ವಿದ್ಯಾರಣ್ಯರು ಪಂಚದಶಿಯಲ್ಲಿ ಶ್ರೀ. ಶಂಕರ ಭಗವತ್ಪಾದಾಚಾರ್ಯರು ಉಪದೇಶ ಸಾಹಸ್ರಿಯಲ್ಲಿ ಈ ವಿಷಯವನ್ನು ಹೇಳಿದ್ದಾರೆ. ಹಿಂದಿನ ಸೂತ್ರದಲ್ಲಿ ಬಿಂಬ ಪ್ರತಿಬಿಂಬವೆಂದು ಹೇಳಿದಂತೆ, ಇಲ್ಲಿ ಆಭಾಸವಾದವೆಂದು ಹೇಳಿದ್ದಾರೆ. ಬಿಂಬ ಪ್ರತಿಬಿಂಬ ಅಂದರೆ, ಅಭಾಸ ಅಂದರೆ, ಎರಡೂ ಶಬ್ದಗಳ ಅರ್ಥವು ಒಂದೇ ಆಗುತ್ತದೆಂದು ಶ್ರೀಮದ್ವಿದ್ಯಾರಣ್ಯರು ಹೇಳಿದ್ದಾರೆ. 'ಈಷಿದ್ಭಾಸನಂ ಆಭಾಸ' (ಕೂ. ದಿ. ಶ್ಲೋ. ೩೨) ಕಿಂಚಿತ್ ಪ್ರಕಾಶ ರೂಪನಾದ್ದರಿಂದ ಅಭಾಸ ಎಂದು ಕರೆಯುವರು. ಅಥವಾ ಬಿಂಬ ಲಕ್ಷಣಗಳಿಲ್ಲದೆ, ಬಿಂಬದಂತೆ ತೋರುವದರಿಂದ ಆಭಾಸ ಎಂಬ ಹೆಸರು ಬಂದಿರುತ್ತದೆ.

ಶಂಕಾ:- ಬಿಂಬ ಪ್ರತಿಬಿಂಬವಾದವೆಂದೂ, ಆಭಾಸವಾದವೆಂದೂ, ಅವಚ್ಛಿನ್ನವಾದವೆಂದೂ ಹೀಗೆ ಮೂರು ವಾದಗಳಿರುತ್ತವೆಂದು ಬಲ್ಲವರು ಹೇಳುತ್ತಾರೆ. ತಾವು ಬಿಂಬ ಪ್ರತಿಬಿಂಬನಾದ ಆಭಾಸವಾದ ಎರಡೂ ಒಂದೇ ಎಂದು ಹೇಗೆ ಹೇಳುತ್ತೀರಿ? ಎಂದು ಶಂಕೆಯನ್ನು ಮಾಡಿದರೆ;

**ಉತ್ತರ:-** (೧) ಪ್ರತಿಬಿಂಬ, ಮತ್ತು ಆಭಾಸಗಳೆಂಬ ಪದಗಳು ಎರಡಾದರೂ ಮುಖ್ಯವಾಗಿ ಅರ್ಥವುಮಾತ್ರ ಒಂದೇ ಆಗಿರುತ್ತದೆ. **ಆ ಮಾಯಾ ಅವಿದ್ಯೆ ಶಬ್ದಾರ್ಥದಲ್ಲಿ ಮೂರು ಮತಗಳಿರುತ್ತವೆ-**

(೧) ಮೂಲ ಪ್ರಕೃತಿಯೇ ಮಾಯೆಯೆಂದೂ, ಅದರ ಆವರಣ ವಿಕ್ಷೇಪ ಶಕ್ತಿಗಳೆರಡರಿಂದ ಕೂಡಿದ್ದೇ ಅವಿದ್ಯೆಯೆಂದು **ಕೆಲವರು** ಮಾಯಾ ಮತ್ತು ಅವಿದ್ಯಾ ಈ ಶಬ್ದಗಳ ಅರ್ಥವನ್ನು ಮಾಡುತ್ತಾರೆ.

(೨) ತತ್ವವಿವೇಕ ಗ್ರಂಥದಲ್ಲಿ **'ಮಾಯಾ ಅವಿದ್ಯಾ ಸ್ವಯಮೇವ** ಭವತಿ ಎಂಬ ಶ್ರುತಿಯನ್ನು ಅನುಸರಿಸಿ, ತ್ರಿಗುಣಾತ್ಮಕ ಮೂಲ ಪ್ರಕೃತಿಯೊಂದೇ

ಮಾಯಾ ಅವಿದ್ಯಾ ಹೀಗೆ ಎರಡಾಯಿತು. ಹೇಗೆಂದರೆ, ಸತ್ವಗುಣ ಪ್ರಾಧಾನ್ಯ ವಾಗಲು ಮಾಯೆ ಆಯಿತು. ರಜಸ್ತಮಗುಣಗಳು ಹೆಚ್ಚಾಗಲು ಅವಿದ್ಯೆಯಾಯಿತು. ಎಂದು ಹೇಳುತ್ತಾರೆ,

(೩) ಕೆಲವರು:- ಮೂಲ ಪ್ರಕೃತಿಯು ವಿಕ್ಷೇಪ ಶಕ್ತಿಯ ಪ್ರಾಧಾನ್ಯತೆ ಯಿಂದ ಮಾಯೆಯೆಂದೂ, ಆವರಣಶಕ್ತಿ ಪ್ರಾಧಾನ್ಯತೆಯಿಂದ ಅವಿದ್ಯೆಯೆಂದೂ; ಅರ್ಥಗಳನ್ನು ಮಾಡುತ್ತಾರೆ.

(೧) ಬಳಿಕ, ಮಾಯೆಯಲ್ಲಿ ಪ್ರತಿಬಿಂಬಿತ ಚೈತನ್ಯ ಈಶನು. ಅವಿದ್ಯೆಯಲ್ಲಿ ಪ್ರತಿಬಿಂಬಿತ ಚೈತನ್ಯಜೀವನೆಂದು ಕೆಲವರು ಹೇಳುತ್ತಾರೆ.

(೨) ಕಾರಣವಾದ ಅವಿದ್ಯೆಯಲ್ಲಿ ಪ್ರತಿಬಿಂಬಿತ ಚೈತನ್ಯ ಈಶನು. ಅದರ ಕಾರ್ಯಗಳಾದ ಅಂತಃಕರಣಗಳಲ್ಲಿ ಪ್ರತಿಬಿಂಬಿತ ಚೈತನ್ಯಜೀವರು. ಎಂದು ಸಂಕ್ಷೇಪ ಶಾರೀರಕಾರರು ಹೇಳುತ್ತಾರೆ.

(೩) ಬ್ರಹ್ಮಾಶ್ರಿತವಾಗಿ ಸಕಲ ಪ್ರಾಣಿಗಳ ಬುದ್ಧಿ ವಾಸನೆಗಳಿಂದೊಡಗೂಡಿದ ಅಜ್ಞಾನದಲ್ಲಿ ಪ್ರತಿಬಿಂಬಿತ ಚೈತನ್ಯ ಈಶ್ವರನು. ಸ್ಥೂಲ ಸೂಕ್ಷ್ಮ ದೇಹದ್ವಯ ಗಳಿಗೆ ಅಧಿಷ್ಠಾನವಾದ ಕೂಟಸ್ಥ ಚೈತನ್ಯವಿರುತ್ತದೆ. ಅಲ್ಲಿ ಕಲ್ಪಿತವಾದ ಅಂತಃಕ ರಣವು ಅದೆ. ಅದರಲ್ಲಿ ಪ್ರತಿಬಿಂಬಿತವಾದ ಚೈತನ್ಯವೇ ಜೀವನು. ಎಂಬದಾಗಿ ಜೀವೇಶ್ವರ ಭೇದವನ್ನು ಚಿತ್ರದೀಪದಲ್ಲಿ ಶ್ರೀ ವಿದ್ಯಾರಣ್ಯರು ಹೇಳಿದ್ದಾರೆ.

ಈ ಮತಗಳಲ್ಲಿ ಮಾತ್ರ ಪ್ರತಿಬಿಂಬವಾದವೆಂದರೂ ಅಭಾಸವಾದ ಅಂದರೂ ಒಂದೇ ಅರ್ಥವಾಗುತ್ತದೆಂದು ತಿಳಿಯಬೇಕು. ಮತ್ತು ಮುಂದೆ ಹೇಳುವ ವಿವ ರಣಾಚಾರ್ಯರ ಮತವು ಮಾತ್ರ ಇವುಗಳಿಗಿಂತಲೂ ಭಿನ್ನವಾಗಿರುವದು. ಅದಕ್ಕೆ ಬಿಂಬ ಪ್ರತಿಬಿಂಬ ವಾದವೆಂದು ಕರೆಯುತ್ತಾರೆ. ಇದಕ್ಕೆ ಮಾತ್ರ ಅಭಾಸವಾದ ವೆಂದು ಹೇಳಲಿಕ್ಕಾಗದು.

ಅದು ಹೇಗೆಂದರೆ? ವಿವರಣಾಚಾರ್ಯರು ಹೀಗೆ ಹೇಳುತ್ತಾರೆ. ಅಂತಃಕರಣದಲ್ಲಿ ಪ್ರತಿಬಿಂಬ ಚೈತನ್ಯಕ್ಕೆ ಜೀವವೆಂದು ಹೇಳಲಿಕ್ಕೆ ಬರುವದಿಲ್ಲ. ಯಾಕೆಂದರೆ, ಒಬ್ಬ ಯೋಗಿಯು ಯೋಗಶಕ್ತಿಯಿಂದ ಏಕ ಕಾಲಕ್ಕೆ ನೂರಾರು ದೇಹಗಳಲ್ಲಿ ತಾನೊಬ್ಬನೇ ಇರುತ್ತಾನೆ. ಇಲ್ಲಿ ದೇಹಗಳು ಅನೇಕವಾದರೂ ಆ ದೇಹೋಪಾಧಿಗಳಿಂದ ಯೋಗಿಯು ಅನೇಕವಾಗಲಿಲ್ಲ. ಕಿಂತು, ಒಬ್ಬನೇ ಇರುತ್ತಾನೆ. ಇದರಂತೆ ಅಂತಃಕರಣಗಳು ಅನೇಕವಾದರೂ ಜೀವರು ಅನೇಕರಲ್ಲ. ಕಿಂತು ಅನೇಕ ದೇಹಗಳಲ್ಲಿ ಒಬ್ಬ ಜೀವನೇ ಇರುತ್ತಾನೆ. ಆದ್ದರಿಂದ ಅಂತಃ

ಕರಣ ಪ್ರತಿಬಿಂಬಿತ ಚೈತನ್ಯಕ್ಕೆ ಜೀವನೆಂದು ಹೇಳಬಾರದು. ಮತ್ತು ಅವಿದ್ಯೆಯಲ್ಲಿ ಪ್ರತಿಬಿಂಬಿತ ಚೈತನ್ಯಕ್ಕೆ ಈಶ್ವರನೆಂದು ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ, ಅವಿದ್ಯೆಯಿಂದ ಪರತಂತ್ರನಾಗಿ ಕಿಂಚಿಜ್ಞನಾಗಬೇಕಾದೀತು. ಹೀಗೆ ಹಿಂದೆ ಹೇಳಿದ ಮೂರು ಮತಗಳಿಗೆ ದೋಷವನ್ನು ತೋರಿಸಿ, ತನ್ನ ಮತವನ್ನು ಹೇಳುತ್ತಾರೆ. ಹೇಗಂದರೆ, ಅವಿದ್ಯೆಯಲ್ಲಿ ಪ್ರತಿಬಿಂಬಿತ ಚೈತನ್ಯವು **ಜೀವ**ವಾಗಿದೆ. ಆ ಜೀವನಿಗೆ ಬಿಂಬಭೂತವಾದ ಚೈತನ್ಯವೇ **ಈಶ್ವರನು** ಆಗಿದ್ದಾನೆ. ಹೀಗೆ ಜೀವೇಶ್ವರ ವಿಭಾಗವನ್ನು **ಒಂದು ಅಜ್ಞಾನದ** ಉಪಾಧಿಯಿಂದಲೇ ಪ್ರತಿಪಾದಿಸುತ್ತಾರೆ. ಈ ವಾದಕ್ಕೆ ಬಿಂಬ ಪ್ರತಿಬಿಂಬವಾದವೆಂಬ ಹೆಸರು ಬಂದಿರುತ್ತದೆ.

**ವಾಚಸ್ಪತಿ ಆಚಾರ್ಯರು ಅವಚ್ಛೇದ ವಾದವನ್ನು** ಹೇಳುತ್ತಾರೆ. ಹೇಗೆಂದರೆ, ಜೀವನಾಗಲಿ ಈಶ್ವರನಾಗಲಿ ಪ್ರತಿಬಿಂಬ ರೂಪರಲ್ಲ. ಯಾಕಂದರೆ, ಚೈತನ್ಯವು ರೂಪರಹಿತವಾಗಿದೆ. ಅದಕ್ಕೆ ಪ್ರತಿಬಿಂಬ ಸಂಭವಿಸುವದಿಲ್ಲ. ನಿರೂಪವಾದ ಆಕಾಶವು ನೀರಿನಲ್ಲಿ ಪ್ರತಿಬಿಂಬಿಸಿರುತ್ತದೆಂದು ಹೇಳುವದು ಭ್ರಾಂತಿಮಾತ್ರವಾಗಿರುತ್ತದೆ. ಆದ್ದರಿಂದ ಘಟಾಕಾಶದಂತೆ ಅಂತಃಕರಣ ಅವಚ್ಛಿನ್ನ ಚೈತನ್ಯವು ಜೀವವಾಗಿದೆ. ಅಂತಃಕರಣ ಅನವಚ್ಛಿನ್ನ ಚೈತನ್ಯವೇ ಈಶ್ವರನಾಗಿದೆ. ಎಂದು **ಅವಚ್ಛೇದ ವಾದವನ್ನು** ನಿರೂಪಣೆ ಮಾಡುತ್ತಾರೆ.

ಈ ರೀತಿ ಆಭಾಸವಾದವೆಂದೂ, ಬಿಂಬಪ್ರತಿಬಿಂಬವಾದವೆಂದೂ, ಅವಚ್ಛಿನ್ನವಾದವೆಂದೂ, ಮೂರು ವಾದಗಳಿರುತ್ತವೆ.

ಇವುಗಳ ಮೇಲೆ **ವಾರ್ತಿಕಾಚಾರ್ಯರ** ಸಿದ್ಧಾಂತವಾದವೂ ಉಂಟು. ಹೇಗೆಂದರೆ, ಜೀವನು **ಪ್ರತಿಬಿಂಬನೂ ಅಲ್ಲ. ಅವಚ್ಛಿನ್ನನೂ ಅಲ್ಲ.** ಕಿಂತು; ವ್ಯಾಧಕುಲದಲ್ಲಿ ಬೆಳೆದ ರಾಜಕುಮಾರನಾದ ಕುಂತೀ ಪುತ್ರನಿಗೆ **ರಾಧಾಪುತ್ರತ್ವ** ಭಾವನೆಯಂತೆ, ಬ್ರಹ್ಮವೇ ಅವಿದ್ಯಾಮೂಲಕ **ಜೀವವಾಗಿ ತೋರಿದೆ.** ವಿದ್ಯೆಯಿಂದ ಅವಿದ್ಯೆಯು ನಿವೃತ್ತಿಯಾಗಲು ಬ್ರಹ್ಮವೇ ಆಗಿರುವುದು. 'ಮರೆದೊಡೆ ಜೀವಾತ್ಮ ಅರಿದೊಡೆ ಪರಮಾತ್ಮ, ಎಂದು ಪರಮಾನುಭವಬೋಧೆಯಲ್ಲಿ ಹೇಳಿದ ಮಾತು ಇದಕ್ಕೆ ಸರಿಹೋಗಿದೆ.

ಈ ರೀತಿ ಎಲ್ಲ ಅದ್ವೈತ ಆಚಾರ್ಯರು ಜೀವೇಶ ಪ್ರಕ್ರಿಯಾ ಹೇಳುವಲ್ಲಿ; ಭೇದವಾದರೂ, ಎಲ್ಲರ ಗುರಿಯು ಜೀವ ಬ್ರಹ್ಮೈಕ್ಯದಲ್ಲಿಯೇ ಪರ್ಯವಸಾನಗಳಾಗಿವೆ. ಎಲ್ಲರೂ ಶ್ರುತಿ ಪ್ರಮಾಣ ಯುಕ್ತಿ ಪ್ರಯುಕ್ತಿ ದೃಷ್ಟಾಂತಗಳನ್ನು ಹೇಳಿರುವರು. ಆದ್ದರಿಂದ ಎಲ್ಲರ ಪ್ರಕ್ರಿಯೆಗಳು ಯೋಗ್ಯವೇ ಅವೆ. ಯಾರ ಬುದ್ಧಿಗೆ ಯಾವದು ರುಚಿಸುವದೋ, ಅವರು ಅದನ್ನು ಗ್ರಹಿಸಿ ಅದ್ವೈತದಲ್ಲಿ

ತಾತ್ಪರ್ಯ ಬುದ್ಧಿಯುಳ್ಳವರು ಆದರಾಯಿತು. ಆದ್ದರಿಂದ ಪ್ರಸಂಗಾನುಸಾರ ಆಚಾರ್ಯರ ಮತಾಭಿಪ್ರಾಯವನ್ನು ಇಲ್ಲಿ ಸಂಕ್ಷಿಪ್ತವಾಗಿ ತಿಳಿಸಿರುತ್ತೇವೆ. ವಿಸ್ತಾರವಾಗಿ ನೋಡಲಿಚ್ಛಿಸುವವರು **ವೇದಾಂತಮತ ದರ್ಶನವೆಂಬ** ಹಿಂದೀ ಗ್ರಂಥವನ್ನು ನೋಡಬಹುದು. ಮತ್ತು ವೃತ್ತಿ ಪ್ರಭಾಕರದ ಎಂಟನೇ ಸಂಧಿಯಲ್ಲಿಯೂ ಈ ವಿಚಾರವುಂಟು. ಅಪ್ಪಯ್ಯ ದೀಕ್ಷತರಿಂದ ರಚಿಸಲ್ಪಟ್ಟ ಸಿದ್ಧಾಂತ **ಲೇಶವೆಂಬ** ಸಂಸ್ಕೃತ ಗ್ರಂಥದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಮತ್ತು ಒಂದು ಮತವು ಮತ್ತೊಂದು ಮತವನ್ನು ಖಂಡನ ಮಂಡನ ಮಾಡುವ ಯುಕ್ತಿಗಳನ್ನು ಹೇಳಿದ್ದಾರೆ. ಅವುಗಳನ್ನು ಬಿಟ್ಟು ಸಾರಗ್ರಾಹಿ ದೃಷ್ಟಿಯಿಂದ ಜೀವೇಶ್ವರ ಪ್ರಕ್ರಿಯಾ ಸಂಬಂಧಿ ಆಚಾರ್ಯರ ಮತದ ಅಭಿಪ್ರಾಯವನ್ನಷ್ಟೇ ಇಲ್ಲಿ ಹೇಳಿರುತ್ತೇವೆ.

**ಬಳಿಕ,** ಆ ಹೃದಯ ಕಮಲದಲ್ಲಿ ಜೀವನು ಚರಿಸುತ್ತಾ ಭೋಗ್ಯವನ್ನು ಭೋಗಿಸುತ್ತಿರುತ್ತಾನೆಂದು ಮುಂದಿನ ಸೂತ್ರಾರ್ಥಕ್ಕೆ ಬೀಜವಾದ ಅರ್ಥವನ್ನು ಇಲ್ಲಿ ಹೇಳುತ್ತಾರೆ.

**ಅಲ್ಲಿ ಜೀವಂ ಚರಿಸುತೆಲ್ಲಾಗಳುಂ ಭೋಗ್ಯ ।**
**ವೆಲ್ಲಮಂ ಭುಂಜಿಸುತ್ತೆ ಜಾಗರಣಾದಿ ।**
**ಪಲ್ಲಟದವಸ್ಥೆವಡೆಯುವನು ॥೧೭॥**

**ಟೀಕಾ:-** ಅಲ್ಲಿ=ಆ ಕಮಲದಲ್ಲಿ, ಜೀವಂ=ಜೀವನು, ಎಲ್ಲಾಗಳುಂ=ಎಲ್ಲಾ ಕಾಲಗಳಲ್ಲಿಯೂ, ಚರಿಸುತ್ತೆ=ತಿರುಗುತ್ತ, ಭೋಗ್ಯವೆಲ್ಲಮಂ=ಭೋಗ್ಯ ಸಮೂಹವನ್ನು, ಭುಂಜಿಸುತ್ತೆ=ಉಣ್ಣುತ್ತಾ, ಜಾಗರಣಾದಿ=ಜಾಗ್ರದವಸ್ಥೆಯೇ ಮೊದಲಾದ, ಪಲ್ಲಟದವಸ್ಥೆ=ಇದ್ದಂತಿರದವಸ್ಥೆಗಳನ್ನು, ವಡೆಯುವನು=ಹೊಂದುವನು.

**ತಾತ್ಪರ್ಯ:-** ಆ ಹೃದಯ ಕಮಲದಲ್ಲಿ ಜೀವನು ಯಾವಾಗಲೂ ಸಂಚಾರ ಮಾಡುತ್ತಿರುವನು. ಅದರಿಂದ ಜಾಗ್ರತ್, ಸ್ವಪ್ನ, ಸುಷ್ಟಿಗಳೆಂಬ ಮೂರು ಅವಸ್ಥೆಗಳು ಬರುತ್ತವೆ. ಆಯಾಯ ಅವಸ್ಥೆಗಳಲ್ಲಿ ಜೀವನು ನಾನಾ ಪ್ರಕಾರಗಳಾದ ಭೋಗ್ಯವನ್ನು ಭೋಗಿಸುತ್ತಾನೆ. ಆ ಜಾಗ್ರತಾದಿ ಅವಸ್ಥೆಗಳು ಇದ್ದಂತಿರದೆ ಚಕ್ರವತ್ ಯಾವಾಗಲೂ ತಿರುಗುತ್ತಾ ಇರುತ್ತವೆ.

**ಇತಿ ಜೀವೇಶ್ವರ ವಿಶೇಷ ನಿರೂಪಣೆ ಸೂತ್ರ ೩ಕ್ಕೆ ತ್ರಿ॥ ೩೩**

ಬಳಿಕ, ಹಿಂದಿನ ಸೂತ್ರದಲ್ಲಿ ಹೃದಯದಲ್ಲಿ ಶುಭ್ರವಾದ ಕಮಲವುಂಟು. ಅದರಲ್ಲಿ ಅತಿ ಸೂಕ್ಷ್ಮನಾಗಿಯೂ ಪ್ರಕಾಶಾತ್ಮಕನಾಗಿಯೂ ಜೀವನಿದ್ದಾನೆ. ಆ ಜೀವನಲ್ಲಿ ಪರಮಾತ್ಮನಿದ್ದಾನೆ. ಈಶನು ಕರ್ಮಫಲ ದಾತಾ ಆಗಿದ್ದಾನೆ. ಜೀವನು ಭೋಕ್ತಾ ಆಗಿರುತ್ತಾನೆ. ಅದರಿಂದ ಜಾಗ್ರದಾದಿ ಅವಸ್ಥೆಗಳನ್ನು ಹೊಂದುತ್ತಾ ಬಿಡುತ್ತಾ ಚರಿಸುತ್ತಿರುವನೆಂದು ಹೇಳಲ್ಪಟ್ಟಿತು. ಈ ಸೂತ್ರದಲ್ಲಿ ಪುನಃ ಶಿಷ್ಯನು ಗುರುಗಳನ್ನು ಕುರಿತು, " ಹೇ ಗುರುವೇ ! ಆ ಜೀವನು ಯಾಕೆ ಸಂಚರಿಸುವನು. ? ಅವನಿಗೆ ಸಂಚರಿಸಲಿಕ್ಕೆ ಸಾಧನವುಂಟೋ ? ಇಲ್ಲೋ ? ಹೀಗೆ ಯಾವಾಗಲೂ ತಿರಗುವದರಿಂದ ಅವನಿಗೆ ಪ್ರಯೋಜನವೇನು ? ಎಲ್ಲೆಲ್ಲಿ ಸಂಚಾರ ಮಾಡುತ್ತಾನೆ ? ಯಾವ ಯಾವ ಭೋಗ್ಯಗಳನ್ನು ಭುಂಜಿಸುತ್ತಾನೆ ? ಭೋಗಿಸ ಬೇಕಾದರೆ ಸಾಧನಗಳಿಂದ ಸಹಿತವಾಗಿಯೋ ? ರಹಿತನಾಗಿಯೋ ? ಸ್ವೇಚ್ಛೆಯಿಂದ ತಿರುಗುವನೋ ? ಪರೇಚ್ಛೆಯಿಂದಲೋ ? ಎಂದು ಪ್ರಶ್ನೆಗಳನ್ನು ಮಾಡುವಂಥವ ನಾದನು. ಇದಕ್ಕೆ ಗುರುಗಳು— " ಹೇ ಶಿಷ್ಯನೇ ! ಜೀವನು ಜನ್ಮಾಂತರಗಳಲ್ಲಿ ಮಾಡಿದ ಕರ್ಮನಿಮಿತ್ತವಾಗಿ' ಮನೋಸಾಧನದಿಂದ ಈಶ ಪ್ರೇರಿತನಾಗಿ' ಆ ಹೃದಯ ಕಮಲದ ದಳ, ಕೇಸರಿ, ಮೂಲಾದಿಗಳಲ್ಲಿ ಸಂಚರಿಸುವನು. ಅದರಿಂದ ಜಾಗ್ರಾದಾದಿ ಅವಸ್ಥೆಗಳು. ವಿಶ್ವಾದಿನಾಮಗಳು, ವಿಚಿತ್ರಭೋಗ್ಯಗಳು, ಮುಂದೆ ಹೇಳುವ ಪ್ರಕಾರ ಒದಗುತ್ತಿರುತ್ತವೆಂದು ಉತ್ತರವನ್ನು ಹೇಳುತ್ತಾರೆ.

ಸೂತ್ರ ॥ **ಜೀವನೆಡೆಯಾಟದಿಂದೇನಹುದದೆಲ್ಲವಂ ।**
**ದೇವ ಪೇಳೆನಗೆಂದೊಡೊರೆದನಂದು ॥**

**ಟೀಕಾ:-** ಜೀವನ = ಜೀವಾತ್ಮನ, ಎಡೆಯಾಟದಿಂದ = ಸಂಚಾರದಿಂದ, ಏನು ಆಹುದು=ಏನಾಗುತ್ತದೆ, ಅದೆಲ್ಲವಂ=ಆ ಸರ್ವವನ್ನು, ದೇವ=ಗುರುವೇ!, ಎನಗೆ ಪೇಳು=ನನಗೆ ಹೇಳು, ಎಂದೊಡೆ=ಅನ್ನಲಾಗಿ, ಅಂದು = ಆ ಕಾಲಕ್ಕೆ, ಒರೆದನು=ತಿಳಿಸಿದನು.

**ತಾತ್ಪರ್ಯ:-** ಜೀವನು ಹೃದಯಕಮಲದಲ್ಲಿ ಚರಿಸುತ್ತಿರಲಿಕ್ಕೆ ಏನೇನು ಆಗುತ್ತದೆಯೋ, ಅದೆಲ್ಲವನ್ನು ನನಗೆ ತಿಳಿಸಬೇಕೆಂದು ಕೇಳಲು; ಗುರುಗಳು ಮುಂದೆ ಹೇಳುವ ಪ್ರಕಾರ ತಿಳಿಸುತ್ತಾರೆ.

ಬಳಿಕ, ಶಿಷ್ಯನು ಗುರುಪಾದಕ್ಕೆ ಎರಗಿ, ಸ್ತುತಿಸಿ ಪ್ರಶ್ನೆಗಳನ್ನು ಮಾಡುತ್ತಾ ನೆಂದು ಹೇಳುತ್ತಾರೆ.

(ತ್ರಿ) **ಬಳಿಕಲಾ ಗುರುಪಾದ ನಳಿನಕ್ಕೆ ನಮಿಸಿ ನಿ ।**
**ರ್ಮಳರೂಪ ಕರುಣಿಸೆನುತೆ ಕೈಮುಗಿವುತಂ ।**
**ದೆಳಸಿ ಬಿನ್ನೈಸಿದನು ಸೂನು** ॥೧॥

**ಗುರುವೆ ಜೀವಾತ್ಮನಾ ಸರಸಿಜದೊಳೆಂತು ಸಂ |**
**ಚರಿಸುವನದಕೇನು ಕಾರಣವದಂ ನೀನೇ |**
**ಕರುಣದಿಂದೊರೆವುದೆನಗೊಲ್ದು ||೨||**

**ಟೀಕಾ:-** ಬಳಿಕಲ್=ಅನಂತರ, ಆ ಗುರುಪಾದ ನಳಿನಕ್ಕೆ=ಆ ಗುರುಗಳ ಪಾದಕಮಲಗಳಿಗೆ, ನಮಿಸಿ=ನಮಸ್ಕರಿಸಿ, ನಿರ್ಮಳರೂಪ=ಎಲೈ ಶುದ್ಧ ಚಿನ್ಮಾತ್ರ ಸ್ವರೂಪನೆ, ಕರುಣಿಸು ಎನುತೆ=ಕೃಪೆ ಮಾಡು ಅನ್ನುತ್ತಾ, ಕೈಮುಗಿವುತ=ಕೈಗಳನ್ನು ಜೋಡಿಸುತ್ತಾ, ಅಂದು=ಆ ಹೊತ್ತಿನಲ್ಲಿ, ಎಳಸಿ=ಇಚ್ಛೈಸಿ, ಸೂನು=ಶಿಷ್ಯನು, ಬಿನ್ನೈಸಿದನು=ಕೇಳಿಕೊಂಡನು.

ಗುರುವೇ=ಹೇ ಗುರುವೇ ! ಜೀವಾತ್ಮನು=ಜೀವನು, ಆ ಸರಸಿಜದೊಳು=ಆ ಕಮಲದಲ್ಲಿ, ಎಂತು=ಹೇಗೆ, ಸಂಚರಿಸುವಂ=ತಿರಗುವನು, ಅದಕೆ ಏನು ಕಾರಣಂ=ಹೀಗೆ ತಿರಗುವದಕ್ಕೆ ಕಾರಣವೇನು? ಅದಂ=ಆ ಕಾರಣವನ್ನು, ನೀನೇ=ನೀನು, ಕರುಣದಿಂದೆ=ಕೃಪೆಯಿಂದೆ, ಎನಗೆ=ನನಗೋಸ್ಕರ, ಒಲ್ದು=ಪ್ರೀತನಾಗಿ, ಒರೆವುದು=ತಿಳಿಸಬೇಕು.

**ತಾತ್ಪರ್ಯ:-** ಶಿಷ್ಯನು ಗುರುಗಳ ಪಾದಕಮಲಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಹೇ ಶುದ್ಧ ಚೈತನ್ಯಸ್ವರೂಪನಾದ ಸದ್ಗುರುನಾಥನೇ ! ಎಂದು ಸ್ತುತಿಸಿ, ನೀವು ನನ್ನ ಮೇಲೆ ಕೃಪೆಯನ್ನು ಮಾಡಬೇಕು, ಎಂದು ಬೇಡಿಕೊಳ್ಳುತ್ತಾ ಪ್ರಶ್ನೆಗಳನ್ನು ಮಾಡುವಂಥವನಾದನು.

ಹೇ ಗುರುವೆ! ಜೀವನು ಹೃದಯ ಕಮಲದಲ್ಲಿ ಸಂಚಾರ ಮಾಡುತ್ತಾನೆಂದು ಪೂರ್ವದಲ್ಲಿ ಹೇಳಿದಿರಿ. ಹಾಗೆ ಸಂಚರಿಸುವದಕ್ಕೆ ಕಾರಣವೇನು ? ತಾನೇ ಸ್ವತಃ ತನ್ನಿಚ್ಛೆಯಿಂದ ಚರಿಸುವನೋ? ಅಥವಾ ಬೇರೊಂದು ಕಾರಣವುಂಟೋ? ಬೇರೆ ಉಂಟು. ಅಂದರೆ, ಅದು ಯಾವದು ? ಈ ವಿಷಯವನ್ನು ನನಗೆ ತಿಳಿಯುವ ಹಾಗೆ ಕೃಪೆಮಾಡಬೇಕೆಂದು ಬೇಡಿಕೊಳ್ಳುವಂಥವನಾದನು.

ಬಳಿಕ, ಶಿಷ್ಯನ ಪ್ರಶ್ನೆಗೆ ಸರಿಯಾಗಿ ಗುರುಗಳು, ಜೀವನು ಕರ್ಮ ನಿಮಿತ್ತ ವಾಗಿ ಸಂಚಾರ ಮಾಡುತ್ತಿರುವನು. ಎಂದು ಉತ್ತರವನ್ನು ಹೇಳುತ್ತಾರೆ.

**ಎನೆ ಕೇಳು ವತ್ಸ ಜೀವನು ಕರ್ಮವಶದಿನಾ |**
**ತನುಮಧ್ಯಕಮಲದಲ್ಲಿ ಸುಳಿವಂ ತನಗೆ ||**
**ಮನವೇ ರಥವಾಗಲದನೇರಿ ||೩||**

**ಟೀಕಾ:**- ಎನೆ = ಶಿಷ್ಯನು, ಹೀಗೆ ನುಡಿಯಲು, ವತ್ಸ = ಹೇ ಪುತ್ರನೇ, ಕೇಳು=ಏಕಾಗ್ರ ಚಿತ್ತದಿಂದಾಲಿಸು, ಜೀವನು=ಜೀವಾತ್ಮನು, ಕರ್ಮವಶದಿಂ= ಕರ್ಮಕ್ಕೆ ಆಧೀನನಾಗಿ, ಆ ತನುಮಧ್ಯ ಕಮಲದಲ್ಲಿ=ಆ ಶರೀರದ ನಡುವಿರುವ ಹೃದಯ ಕಮಲದಲ್ಲಿ, ತನಗೆ=ಜೀವನಿಗೆ, ಮನವೆ=ಮನಸ್ಸೇ, ರಥವಾಗಲ್=ರಥ ದಂತೆ ಸಾಧನವಾಗಲು, ಅದನೇರಿ=ಅದನ್ನು ಹಿಡಿದುಕೊಂಡು, ಸುಳಿವಂ=ಸಂಚಾರ ಮಾಡುವನು.

**ತಾತ್ಪರ್ಯ:**- ಜೀವನು ಹೃದಯ ಕಮಲದಲ್ಲಿ ಸಂಚಾರವನ್ನು ಮಾಡ ಬೇಕಾದರೆ, ಅವನಿಗೆ ಉಪಾಧಿಯಾದ ಮನಸ್ಸು ಬೇಕು. ಗ್ರಾಮಾಂತರ ಗಮ ನಕ್ಕೆ ರಥವು ಸಾಧನವಾಗಿರುವಂತೆ, ಜೀವನಿಗೆ ಮನಸ್ಸು ಸಾಧನವಾಗಿರುತ್ತದೆ. ಈ ಮನೋಸಾಧನದಿಂದ ಜೀವನು ತನ್ನಿಚ್ಛೆಯಿಂದ ಸಂಚರಿಸುವದಿಲ್ಲ. ಪೂರ್ವ ಜನ್ಮದಲ್ಲಿ ಮಾಡಿದಂಥಾ ಈ ಜನ್ಮಭೋಗಕ್ಕೆ ಸಾಧನವಾದ ಪ್ರಾರಬ್ಧ ಕರ್ಮವಿರು ವದು. ಆ ಕರ್ಮಕ್ಕೆ ಆಧೀನನಾಗಿ, ಮನಸ್ಸು ಸಾಧನ ಮಾಡಿಕೊಂಡು, ಭೋಗ ಪ್ರಾಪ್ತಿಗಾಗಿ ಕಮಲದಲ್ಲಿ ಸಂಚರಿಸುತ್ತಾನೆ.

**ಬಳಿಕ**, ಆ ಕಮಲದ ದಳಗಳಲ್ಲಿ ಒಂದು ದಳವನ್ನು ಬಿಟ್ಟು ಇನ್ನೊಂದು ದಳಕ್ಕೆ ಹೋಗಲು, ಯಾವ ಯಾವ ಗುಣಗಳು ಜೀವನಿಗೆ ಪ್ರಾಪ್ತಗಳಾಗುತ್ತ ವೆಂಬುದನ್ನು ಹೇಳುತ್ತಾರೆ.

**ವರ ಭಕುತಿ ಕ್ಷುಧೆ ಕೋಪ ದುರಿತ ಲೀಲಾ ಗಮನ ।**
**ಸುರತ ಧನದಾನ.ಗಳು ಪೂರ್ವೆ ಯೆಂದು ಶ್ರುತಿ ।**
**ಯಿರಲೆಂಟು ದಳದ ಗತಿಯಕ್ಕು ॥೪॥**

**ಟೀಕಾ:**- ವರಭಕುತಿ= ಶ್ರೇಷ್ಠವಾದ ಭಕ್ತಿಯು, ಕ್ಷುಧೆ=ಹಸಿವೆ, ಕೋಪ= ಸಿಟ್ಟು, ದುರಿತ=ಪಾಪ, ಲೀಲಾ=ಕ್ರೀಡೆಯು, ಗಮನ=ಸಂಚಾರದಿಚ್ಛೆಯು, ಸುರತ= ಸ್ತ್ರೀರತಿಯ ಅಪೇಕ್ಷೆಯು, ಧನದಾನಗಳು=ದ್ರವ್ಯವನ್ನು ದಾನಮಾಡ ಬೇಕೆಂಬ ಬುದ್ಧಿಯೇ ಮೊದಲಾದವುಗಳು, ಪೂರ್ವೆಎಂದು=ಜೀವನು ಹೃದಯ ಕಮಲದ ಪೂರ್ವದಿಕ್ಕಿನ.ದಳಾದಿಗಳಲ್ಲಿ ವಿಶ್ರಾಂತಿಹೊಂದಲು, ಭಕ್ತಿಮೊದಲಾದ ಗುಣಗಳು ಬರುತ್ತವೆಂದು, ಶ್ರುತಿಯಿರಲ್=ಶ್ರುತಿಯಿದ್ದ ಮೂಲಕ, ಎಂಟುದಳದ ಗತಿಯಕ್ಕು=ಎಂಟುದಳಗಳಲ್ಲಿ ಗಮನವು ಇರುತ್ತದೆ.

**ತಾತ್ಪರ್ಯ:**- ಜೀವನು ಕರ್ಮದಿಂದ ಪ್ರೇರಿತನಾಗಿ ಕಮಲದ ಪೂರ್ವ ದಿಕ್ಕಿನ ದಳದಮೇಲೆ ಬಂದರೆ, ಭಕ್ತಿ ಮೊದಲಾದ ಗುಣಗಳು ಜೀವನಿಗೆ ಒದಗುತ್ತವೆ. ಈ ಶ್ರುತಿಯ ಅರ್ಥವನ್ನು ಕಡೆಯಲ್ಲಿ ಅವಲೋಕನಮಾಡಿರಿ.

ಆಯಾಯ ಗುಣಗಳ ಮೇಲಿಂದ ಜೀವನು ಇಂಥಾದಿಕ್ಕಿನ ದಳದಮೇಲೆ ಇರುತ್ತಾ ನೆಂದು ಊಹೆಮಾಡತಕ್ಕದ್ದು.

ಬಳಿಕ:- ಜೀವನು ದಳಗತಿಯನ್ನು ಬಿಟ್ಟು ಕಮಲದ ಮಧ್ಯಸ್ಥಾನಕ್ಕೆ ಬರಲಾಗಿ ಯಾವಗುಣಗಳು ಬರುತ್ತವೆಂಬುದನ್ನು ಹೇಳುತ್ತಾರೆ.

**ದಳಗತಿಯೊಳಿಂತು ತನ್ನಳಿನ ಮಧ್ಯಸ್ಥಾನ ।**
**ವಳಯಕ್ಕೆ ಹಂಸ, ನಿಳಿದಾಗಳೇ ವಿರತಿ ।**
**ತಿಳಿವೆಂಬಿವಕ್ಕು ಶ್ರುತಿಸಿದ್ಧ ॥೫॥**

**ಟೀಕಾ:-** ಇಂತು=ಈರೀತಿ, ದಳಗತಿಯೊಳು=ದಳಗಳ ಗಮನದಿಂದ, ತನ್ನಳಿನ = ಆ ಕಮಲದ, ಮಧ್ಯಸ್ಥಾನವಳಯಕ್ಕೆ = ಮಧ್ಯದಲ್ಲಿರುವ ಒಳಭಾಗಕ್ಕೆ, ಹಂಸನು=ಜೀವನು, ಇಳಿದಾಗಳೆ ಇಳಿದು ಬರಲಾಗಿ, ವಿರತಿ=ವೈರಾಗ್ಯವು, ತಿಳಿವು=ಜ್ಞಾನವು, ಅಕ್ಕು=ಆಗುವದು. ಶ್ರುತಿಸಿದ್ಧ=ಶ್ರುತಿಯಲ್ಲಿ ಹೇಳಿದೆ.

**ತಾತ್ಪರ್ಯ:-** ಈ ರೀತಿ ದಳಗಳಲ್ಲಿ ಸಂಚರಿಸಿ, ಕಮಲದ ಮಧ್ಯಸ್ಥಾನಕ್ಕೆ ಹಂಸನು ಅಂದರೆ ಹಂಸತೀತಿ, ಗಚ್ಛತೀತಿ, ಗಮನವುಳ್ಳವನಾದ್ದರಿಂದ ಹಂಸ ಜೀವನು ಒಳಭಾಗದಲ್ಲಿ ಬಂದಕಾಲಕ್ಕೆ ಅವನಿಗೆ ವೈರಾಗ್ಯ ವಿವೇಕಾದಿಗಳು ಉದಯುಗಳಾಗುತ್ತವೆ. ಈ ಮಾತನ್ನು ನಾವು ಕಲ್ಪನಾಮಾಡಿಕೊಂಡು ಹೇಳಿಲ್ಲ. ಕಿಂತು; ಶ್ರುತಿಯೇ ಹೀಗೆ ಹೇಳುತ್ತದೆ. ಶ್ರುತಿಯು ಸರ್ವಜ್ಞನಾದ ಈಶ್ವರ ವಾಣಿಯಾಗಿದೆ. ಅದನ್ನು ಒಪ್ಪಲೇಬೇಕಾಗುತ್ತದೆ

**ಬಳಿಕ;** ಈ ರೀತಿ ಜೀವನು ಸ್ಥೂಲಶರೀರದ ವ್ಯವಹಾರದಿಂದ ಜಾಗ್ರದವಸ್ಥೆಯನ್ನು ಹೊಂದಲು; ಅವನಿಗೆ ವಿಶ್ವಜೀವ ಎಂಬ ಹೆಸರು ಬರುತ್ತದೆಂದು ನಿರೂಪಣೆ ಮಾಡುತ್ತಾರೆ.

**ಈ ಗತಿಯೊಳಿರೆ ಹಂಸನಾಗಳೆ ವಿಶ್ವಾಖ್ಯ ।**
**ನಾಗಿ ಜಾಗರಣವನು ತೋರತನುವಿನು ।**
**ದ್ಯೋಗದಿಂ ಪಡೆವನೆಲೆ ಪುತ್ರ ॥೬॥**

**ಟೀಕಾ:-** ಎಲೆಪುತ್ರ=ಎಲೈ ಶಿಷ್ಯನೆ! ಹಂಸನು=ಜೀವನು, ಈಗತಿಯೊಳಿರೆ=ಈ ಪ್ರಕಾರ ಗಮನದಿಂದ ಇರಲಾಗಿ, ಆಗಳೆ=ಆ ಕಾಲಕ್ಕೆ, ವಿಶ್ವಾಖ್ಯನಾಗಿ=ವಿಶ್ವನೆಂಬ ಹೆಸರುಳ್ಳವನಾಗಿ, ತೋರತನುವಿನ=ಸ್ಥೂಲ ಶರೀರದ, ಉದ್ಯೋಗದಿಂ=ವ್ಯವಹಾರದಿಂದ, ಜಾಗರಣವನು=ಜಾಗ್ರದವಸ್ಥೆಯನ್ನು, ಪಡೆವನು=ಹೊಂದುವನು.

**ತಾತ್ಪರ್ಯ**:- ಎಲೈ ಪುತ್ರನೇ! ಕೇಳು. ಈ ವಿಧವಾಗಿ ಜೀವನು ಸ್ಥೂಲ ಶರೀರದೊಡನೆ ಕೂಡಿಕೊಂಡು, ಇಂದ್ರಿಯಗಳ ಮುಖದಿಂದ ವಿಷಯಗಳ ಸಂಯೋಗ ಸಂಬಂಧ ವ್ಯವಹಾರದಿಂದ ಕೂಡಿರಲಾಗಿ, ಆಗ್ಯೆ ಅವನಿಗೆ **ವಿಶ್ವನೆಂಬ** ಹೆಸರು ಪ್ರಾಪ್ತವಾಗುವದು. ಯಾಕಂದರೆ, ವಿಶ್ವ, ಜಗತ್ತು; ಜಗತ್ತಿನ ವಿಷಯ ಗಳನ್ನು ಕುರಿತು ಜೀವನು ಅಭಿಮಾನ ಮಾಡುವದರಿಂದ; ಇವನಿಗೆ ವಿಶ್ವನೆಂದು ಕರೆಯುಹತ್ತಿದರು. ವಿಷಯೇಂದ್ರಿಯ ಸಂಯೋಗ ಸಂಬಂಧಿ ಜ್ಞಾನ ಕಾಲವೇ **ಜಾಗ್ರದವಸ್ಥೆ**ಯೆನಿಸುವದು. ಸ್ಥೂಲ ದೇಹದೊಡಗೂಡಿ ಜಾಗ್ರದವಸ್ಥಾವುಳ್ಳವ ನಾಗಲು ವಿಶ್ವನೆಂಬ ಹೆಸರನ್ನು ಪಡೆದನೆಂಬ ಭಾವವು.

**ಬಳಿಕ;** ಲಿಂಗ ಶರೀರದೊಡನೆ ಕೂಡಿಕೊಂಡು ವಾಸನಾ ವ್ಯವಹಾರ ಪರನಾಗಲು ತೈಜಸ ಹೆಸರನ್ನು ಪಡೆದನೆಂದು ಹೇಳುತ್ತಾರೆ.

**ದಳಗತಿಯನಾ ಹಂಸನುಳಿದು ತತ್ಕೇಸರ ।**
**ಕ್ಕಿಳಿಯೆ ತೈಜಸಪೆಸರು ಕನಸು ಲಿಂಗತನು ।**
**ವಳವಡಗು ವಾಸನೆಗಳಿಂದ** ॥೭॥

**ಟೀಕಾ**:- ಆ ಹಂಸನು=ಆ ಜೀವನು, ದಳಗತಿಯನು=ದಳಗಳಲ್ಲಿ ತಿರಗುವ ದನ್ನು, ಉಳಿದು=ಬಿಟ್ಟು, ತತ್ಕೇಸರಕ್ಕೆ=ಆ ಕಮಲದಲ್ಲಿರುವ ಕೇಸರಗಳಿಗೆ, ಇಳಿಯೆ=ಬರಲಾಗಿ, ತೈಜಸಪೆಸರು=ತೈಜಸನೆಂಬ ನಾಮವು, ಕನಸು=ಸ್ವಪ್ನಾ ವಸ್ಥೆಯು, ಲಿಂಗತನು=ಸೂಕ್ಷ್ಮದೇಹವು, ವಾಸನೆಗಳಿಂದ=ವಾಸನಾಗಳಮೂಲಕ, ಅಳವಡಗು==ಪ್ರಾಪ್ತಗಳಾಗುವವು.

**ತಾತ್ಪರ್ಯ**:- ಜೀವನು ಕಮಲದ ದಳಗಳಲ್ಲಿ ಚರಿಸುವದನ್ನು ಬಿಟ್ಟು, ಆ ಕಮಲದ ಕೇಸರಗಳಿಗೆ ಇಳಿದು ಬರಲಾಗಿ, ಅನೇಕ ವಾಸನೆಗಳ ಮೂಲಕ ಆ ಜೀವನಿಗೆ ಸೂಕ್ಷ್ಮದೇಹ ಸ್ವಪ್ನಾವಸ್ಥೆಗಳು ಸಂಭವಿಸುತ್ತವೆ. ಆಗ್ಯೆ ಅವನಿಗೆ ತೈಜಸ ನೆಂಬ ಹೆಸರು ಪ್ರಾಪ್ತವಾಗುತ್ತದೆ. ಯಾಕಂದರೆ, ನಾನಾ ವಿಚಿತ್ರವಾದ ಸ್ವಪ್ನ ಪ್ರಪಂಚವನ್ನು ಈ ಜೀವನು ತನ್ನ ಪ್ರಕಾಶದಿಂದಲೇ ಬೆಳಗುತ್ತಾನೆ. ಆದ್ದರಿಂದ ಇವನ ಹೊರತು ಅಲ್ಲಿ ಪ್ರಕಾಶ ಮಾಡುವವರು ಯಾರೂಇಲ್ಲ. ಅದರಿಂದ ತೈಜಸ ನೆಂಬ ಹೆಸರಾಯಿತು. ಆ ಸ್ವಪ್ನದಲ್ಲಿ ಲಿಂಗದೇಹವು ಉಂಟು. ಲಿಂಗದೇಹ ಅಂದರೆ, ವಿಚಿತ್ರ ಸ್ವಪ್ನ ಪ್ರತೀತಿ ಕಾರ್ಯದ ಮೇಲಿಂದ, ಕಾರಣಗಳಾದ ವಾಸನೆಗಳುಂ ಟೆಂದು ಊಹೆ ಮಾಡಲ್ಪಡುವವು. ಕಾರ್ಯದ ಮೇಲಿಂದ ಕಾರಣವನ್ನು ಕಂಡು ಹಿಡಿಯುವದಕ್ಕೆ **ಲಿಂಗ**ವೆಂಬ ಹೆಸರು ಬರುತ್ತದೆ. ಧೂಮವನ್ನು ಕಂಡು ಅಗ್ನಿ ಅನುಮಾನ ಮಾಡಿದಂತೆ, ಸ್ವಪ್ನ ಕಾರ್ಯದ ಮೇಲಿಂದ ಕಾರಣವಾದ ವಾಸನೆ

ಗಳುಂಟೆಂದು ತಿಳಿಯಬೇಕು. ಇಂಥಾ ವಾಸನಾಮಯ ಶರೀರಕ್ಕೆ **ಲಿಂಗದೇಹ** ವೆಂದು ಹೇಳುವರು. ಅದು ನೋಡಲಿಕ್ಕೆ ಹೋದರೆ ಕಣ್ಣಿಗೆ ಕಾಣಿಸುವದಿಲ್ಲ. ಅದರಿಂದ ಸೂಕ್ಷ್ಮದೇಹವೆಂದು ಹೇಳುವರು. ಜೀವನು ಅನೇಕ ವಾಸನೆಗಳ ಮೂಲಕ ವಿಚಿತ್ರ ಸ್ವಪ್ನವನ್ನು ಕಾಣುತ್ತಾನೆ. ಅದನ್ನು ಅವನೇ ಬೆಳಗುತ್ತಾನೆ. ಆದ್ದರಿಂದ ತೈಜಸನೆಂಬ ಹೆಸರು ಬಂದಿರುತ್ತದೆಂದು ತಿಳಿಯತಕ್ಕದ್ದು.

**ಬಳಿಕ,** ಜೀವನು ಕಮಲದ ಕರ್ಣಿಕೆಗೆ ಬರಲಾಗಿ; ಕಾರಣದೇಹ, ಸುಪ್ತಿ ಅವಸ್ಥೆ, ಪ್ರಾಜ್ಞ ಪೆಸರುಗಳು ಒದಗುತ್ತವೆಂದು ಹೇಳುತ್ತಾರೆ.

**ಅದನುಳಿದು ಕರ್ನಿಕಾಸ್ಪದನಾಗೆ ಜೀವನಂ ।**
**ತದರಲ್ಲಿ ಪ್ರಾಜ್ಞ ಸುಪ್ತಿತ್ವ ಕಾರಣಾಂ ।**
**ಗದ ಕೂಟ ವಾಗಲೊದಗುವದು ॥೮॥**

**ಟೀಕಾ:-** ಜೀವನು=ಉಕ್ತಜೀವನು,ಅದನುಳಿದು=ಆ ಕೇಸರಗಳನ್ನು ಬಿಟ್ಟು, ಕರ್ನಿಕಾಸ್ಪದನಾಗೆ=ಕರ್ನಿಕೆಗೆ ಬರಲಾಗಿ, ಅದರಲ್ಲಿ=ಅಲ್ಲಿ,ಪ್ರಾಜ್ಞ=ಪ್ರಾಜ್ಞನೆಂಬ ಹೆಸರು, ಸುಪ್ತಿತ್ವ=ನಿದ್ರಾವಸ್ಥೆಯು, ಕಾರಣಾಂಗದ=ಕಾರಣ ಶರೀರದ,ಕೂಟವು= ಪ್ರಾಪ್ತಿಯು, ಆಗಳ್=ಆ ಕಾಲದಲ್ಲಿ, ಒದಗುವದು=ಪ್ರಾಪ್ತವಾಗುವದು.

**ತಾತ್ಪರ್ಯ:-** ಜೀವನು ಕೇಸರುಗಳನ್ನು ಬಿಟ್ಟು ಕರ್ನಿಕೆಗೆ ಬರಲಾಗಿ, ಅಲ್ಲಿ ಕಾರಣ ಶರೀರದ ಸಂಬಂಧವೂ, ಸುಷುಪ್ತಿ ಅವಸ್ಥೆಯೂ,ಪ್ರಾಜ್ಞನೆಂಬ ಹೆಸರೂ ಇವುಗಳು ಪ್ರಾಪ್ತಗಳಾಗುತ್ತವೆ. ಕಾರಣ ಶರೀರವು ಅಂದರೆ, ಸ್ಥೂಲ ಸೂಕ್ಷ್ಮ ಶರೀರಗಳೆರಡಕ್ಕೂ ಕಾರಣವಾಗುವದರಿಂದ, ಈ ಶರೀರಕ್ಕೆ **ಕಾರಣ ಶರೀರ**ವೆಂದು ಕರೆಯುತ್ತಾರೆ. ಅರ್ಥಾತ್ ಅವಿದ್ಯಾರೂಪವಾಗಿರುವದು. ಕಾಮ ಕರ್ಮಾದಿಗಳ ಸಂಸ್ಕಾರಗಳಿಂದಲೂ ಕೂಡಿರುತ್ತದೆ. ಇದಕ್ಕೆ **ಸುಷುಪ್ತಿ**ಯೆಂಬ ಹೆಸರುಂಟು. ಮನಸ್ಸು ವಾಸನೆಗಳಿಂದ ಮಾಡುವ ಸ್ವಪ್ನವ್ಯವಹಾರಗಳನ್ನು ತ್ಯಜಿಸಿ; ತನಗೆ ಕಾರಣವಾದ ಅವಿದ್ಯೆಯಲ್ಲಿ ಲೀನವಾಗುತ್ತದೆ. ಆಗ್ಯೆ ಎಲ್ಲಾ ವ್ಯವಹಾರಗಳು ಉಪರಾಮ ಹೊಂದುತ್ತವೆ. ಇದಕ್ಕೆ ಸುಷುಪ್ತಿ ಅವಸ್ಥಾ ಅನ್ನುವರು. ಈ ಅವಸ್ಥೆ ಯಲ್ಲಿ ಜೀವನಿಗೆ **ಪ್ರಾಜ್ಞ**ನೆಂಬ ಹೆಸರು ಬರುವದು. ಪ್ರಾಜ್ಞನು ಅಂದರೆ ಜ್ಞಾನ ಮತ್ತು ಅಜ್ಞಾನ ಇವುಗಳಿಂದ ಕೂಡಿರುವವೆಂಬ ಎರಡು ಅರ್ಥಗಳು ಆಗುತ್ತವೆ. ಹೇಗಂದರೆ—ಜಾಗ್ರತ್ಸ್ವಪ್ನಗಳಲ್ಲಿ ಜೀವನು ಜ್ಞಾನದಿಂದ ಎಲ್ಲವನ್ನು ಅರಿಯು ತ್ತಾನೆ. ಅಂಥಾ ವಿಷಯಗಳ ಸಂಬಂಧಿ ವಿಶೇಷವಾದ ಜ್ಞಾನವು ನಿದ್ರೆಯಲ್ಲಿ ಇರುವದಿಲ್ಲ. ಮತ್ತು ನಿದ್ರೆಯು ತಮೋಗುಣವಾಗಿದೆ. ಅದರಿಂದ ಅಲ್ಲಿ ಮೌಢ್ಯ ತ್ವವೇ ಕಂಡುಬರುತ್ತದೆ. ಈ ದೃಷ್ಟಿಯಿಂದ ವಿಚಾರ ಮಾಡಿದರೆ, ಪ್ರ-ಅಜ್ಞ

ಪ್ರಾಜ್ಞ ಅಂದರೆ, ಅಧಿಕ ಅಜ್ಞಾನದಿಂದ ಕೂಡಿರುವನೆಂದು ಅರ್ಥವಾಗುತ್ತದೆ. ಮತ್ತು ನಿದ್ರೆಯಲ್ಲಿ ಯಾವ ವಿಷಯಗಳ ಸಂಬಂಧಿ ಜ್ಞಾನವಿಲ್ಲದಿದ್ದರೂ, ಯಾವತ್ತು ವಿಷಯಗಳ ಅಭಾವ ಜ್ಞಾನವು ಇರುತ್ತದೆ. ಆದ್ದರಿಂದ ಶ್ರುತಿಯು ಪ್ರಜ್ಞಾನ ಘನನಾಗಿರುವನೆಂದು ಹೇಳುತ್ತದೆ. ಮತ್ತು ಜಾಗ್ರತ್ತು ಸ್ವಪ್ನ ಇವುಗಳಲ್ಲಿ ಮನೋಸಹಿತ ಇಂದ್ರಿಯಗಳಿಂದ, ಹೊರಹೊರಟು ಹೋಗುವ ಜ್ಞಾನಪ್ರವಾಹವು, ಒಂದಾಗಿ ನಿದ್ರೆಯಲ್ಲಿ ಒಂದೇ ಕಡೆಯಲ್ಲಿ, ಕೆರೆಯಲ್ಲಿ ನೀರು ನಿಂತಂತೆ ನಿಂತಿರುವದು. ಅಂದರೆ, ಸವಿಕಲ್ಪ ಜ್ಞಾನಗಳೆಲ್ಲವೂ ಹೋಗಿ ನಿರ್ವಿಕಲ್ಪಜ್ಞಾನರೂಪಗಳಾಗಿವೆಯೆಂಬ ಭಾವವು. ಆದರಿಂದ 'ಪ್ರ' ಅಂದರೆ, ವಿಶೇಷವಾಗಿ 'ಜ್ಞ' ಅಂದರೆ ಅರಿಯುವವನು ಪ್ರಜ್ಞನು. ಪ್ರಜ್ಞಾ ಸಂಬಂಧಿಯಾದವನಾದ್ದರಿಂದ ಪ್ರಾಜ್ಞನೆಂದು ಅಧಿಕ ಜ್ಞಾನರಾಶಿವುಳ್ಳವನೆಂದೂ ಅರ್ಥವಾಗುತ್ತದೆ. ಆದ್ದರಿಂದ ನಿದ್ರೆಯಲ್ಲಿ ಜೀವನಿಗೆ ಪ್ರಾಜ್ಞನೆಂಬ ಹೆಸರು ಬಂದಿರುತ್ತದೆ. ವಿಶ್ವ, ತೈಜಸ, ಪ್ರಾಜ್ಞರೆಂದು ಮೂವರು ಜೀವರಲ್ಲ. ಕಿಂತು ಒಬ್ಬ ಜೀವನಿಗೆ ದೇಹ ಮತ್ತು ಅವಸ್ಥಾ ಭೇದಗಳ ಮೂಲಕ, ಮೂರು ವಿಶ್ವಾದಿ ನಾಮಗಳು ಬಂದಿರುತ್ತವೆಂದು ತಿಳಿಯತಕ್ಕದ್ದು. ಹೇಗಂದರೆ, ಒಬ್ಬನಿಗೆ ವ್ಯವಹಾರ ಭೇದದಿಂದ ಪಾಚಕ, ಪಾಠಕ, ಯಾಚಕ ಎಂಬ ಹೆಸರುಗಳು ಬರುವಂತೆ ಬಂದಿರುತ್ತವೆ. ಕಿಂತು ಜೀವನು ಒಬ್ಬನೇ ಇದ್ದಾನೆ.

ಬಳಿಕ, ಉಕ್ತ ಮೂರು ಜಾಗ್ರದಾದಿ ಅವಸ್ಥೆಗಳಲ್ಲಿ ಯಾವ ಸಾಧನದಿಂದ ಯಾವ ಭೋಗಗಳನ್ನು ಜೀವನು ಭೋಗಿಸುತ್ತಾನೆಂಬುದನ್ನು ನಿರೂಪಣ ಮಾಡುತ್ತಾರೆ.

**ಸ್ಥೂಲಂ ವಿವಿಕ್ತಂ ವಿಶಾಲ ಸುಖವೆಂಬಿಂದ್ರ |**
**ಜಾಲಮಯ ಭೋಗ್ಯವನು ಕಣ್ಮನಂ ಮಾಯೆ |**
**ಮೇಳವಾಗರಿವುತಿಹನಲ್ಲಿ | ||೯||**

**ಟೀಕಾ:-** ಅಲ್ಲಿ=ಆಯಾ ಅವಸ್ಥೆಗಳಲ್ಲಿ, ಸ್ಥೂಲಂ=ಜಾಗ್ರದಲ್ಲಿ ಇಂದ್ರಿಯಗಳಿಗೆ ತೋರುವ ಸ್ಥೂಲ ವಿಷಯಗಳನ್ನು, ವಿವಿಕ್ತಂ=ಸ್ವಪ್ನದಲ್ಲಿ ವಾಸನಾಮಯ ಸೂಕ್ಷ್ಮ ವಿಷಯಗಳನ್ನು, ವಿಶಾಲ ಸುಖವು=ನಿದ್ರೆಯಲ್ಲಿ ಅಧಿಕವಾದ ಆನಂದವು, ಎಂಬ=ಅನ್ನುವ, ಇಂದ್ರಜಾಲಮಯ=ತೋರಿ ಅಡಗುವ, ಭೋಗ್ಯವನು=ಭೋಗ್ಯರೂಪ ವಿಷಯಗಳನ್ನು, ಕಣ್ಮನಂ ಮಾಯೆ ಮೇಳವಾಗಿ = ಕಣ್ಣಿನಿಂದ, ಮನಸ್ಸಿನಿಂದ, ಮಾಯೆಯಿಂದ, ಬೆರತುಕೊಂಡು, ಅರಿಯುತಿಹನು=ತಿಳಿಯುವನು.

**ತಾತ್ಪರ್ಯ:-** ಜಾಗ್ರದವಸ್ಥೆಯಲ್ಲಿ ವಿಶ್ವನಾಮಕ ಜೀವನು, ಸ್ಥೂಲ ಶರೀರಸಹಿತನಾಗಿ, ಮನೋಸಹಿತ **ನೇತ್ರಾದಿಂದ್ರಿಯಗಳಿಂದ ಸ್ಥೂಲ ವಿಷಯ**

ಗಳನ್ನು ಪರಿಗ್ರಹಿಸುತ್ತಾನೆ. ಅದೇ ಜೀವನು ಸ್ವಪ್ನಾವಸ್ಥೆಯಲ್ಲಿ ಮನಸ್ಸಿನಿಂದೊಡಗೂಡಿ, ವಾಸನಾಮಯ ಸೂಕ್ಷ್ಮ ವಿಷಯಗಳ ಭೋಗಗಳನ್ನು ಅನುಭವಿಸುತ್ತಾನೆ. ಅದೇ ಜೀವನು ಸುಷ್ಪ್ತಿಯಲ್ಲಿ ಅವಿದ್ಯಾಕರಣದಿಂದ ಆ ಅವಿದ್ಯೆಯ ಸೂಕ್ಷ್ಮವೃತ್ತಿಗಳಲ್ಲಿ ಪ್ರತಿಬಿಂಬಿತವಾದ ನಿರ್ವಿಷಯ ಅಧಿಕಾನಂದವನ್ನು ಅನುಭವಿಸುತ್ತಾನೆ. ಹೀಗೆ ಜೀವನು ಒಂದೊಂದು ಅವಸ್ಥೆಗಳಲ್ಲಿ ಒಂದೊಂದು ವಿಧವಾದ ಭೋಗ್ಯವನ್ನು ಭೋಗಿಸುತ್ತಿರುವನು. ಅದರಿಂದ ಒಂದು ಅವಸ್ಥೆಯಲ್ಲಿ ತೋರಿದ ಭೋಗ್ಯವು, ಮತ್ತೊಂದು ಅವಸ್ಥೆಯಲ್ಲಿ ತೋರುವದಿಲ್ಲ. ಆದ್ದರಿಂದ ಭೋಗ್ಯಗಳು ಇಂದ್ರಜಾಲದಂತೆ ಮಾಯಾಮಯಗಳಾಗಿರುತ್ತವೆ. ಅಂದರೆ, ತೋರುತ್ತಾ ಅಡಗುತ್ತಾ ಇರುತ್ತವೆ. ಆದ್ದರಿಂದ ಇವು ನಿಜವಲ್ಲೆಂಬ ಭಾವವು.

**ತ್ರಿಷು ಧಾಮಸು ಯದ್ಭೋಗ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್ ।**
**ತೇಭ್ಯೋ ವಿಲಕ್ಷಣಃ ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ ।**

ಮೂರು ಶರೀರಗಳು, ಅವುಗಳಲ್ಲಿ ತೋರುವ ವಿಷಯಗಳು, ಅವುಗಳಿಂದಾಗುವ ಸುಖ ದುಃಖಗಳು, ಅವುಗಳನ್ನುಣ್ಣುವ ಜೀವರು ಇವುರುಗಳಿಗೆಲ್ಲಕ್ಕೂ ಬೇರೆಯಾಗಿ ನಾನು ಸಾಕ್ಷೀ ಚಿನ್ಮಾತ್ರರೂಪ ಸದಾಶಿವನಿದ್ದೇನೆಂದು ತಿಳಿಯಬೇಕು. ಎಂಬ ಶ್ರುತಿಯಿರುವದರಿಂದ, ಭೋಕ್ತಾ ಭೋಗ, ಭೋಗ್ಯಾತ್ಮಕ, ತ್ರಿಪುಟಿಮಯ ಪ್ರಪಂಚವು ಮಾಯಿಕ ಮಿಥ್ಯೆಯಾಗಿರುತ್ತದೆ. ಇವುಗಳಿಗೆ ಸಾಕ್ಷಿಯಾದ ತಾನೊಬ್ಬನೇ ಸತ್ಯನಾಗಿರುವನು. ಇಂಥಾ ಸಾಕ್ಷೀ ಚಿನ್ಮಾತ್ರರೂಪನೇ ನಾನೆಂಬ ಜ್ಞಾನೋದಯಕ್ಕಾಗಿ; ಈ ಅವಸ್ಥಾತ್ರಯ ವಿಚಾರವನ್ನು ಮಾಡತಕ್ಕದ್ದಾಗಿದೆ. ಇಂಥಾ ಜ್ಞಾನದಿಂದಲೇ ಪರಮ ಪುರುಷಾರ್ಥವು ಲಭ್ಯವಾಗುತ್ತದೆ. ಹೀಗೆ ತಿಳಿದರೆ ಜನ್ಮಸಾರ್ಥಕವು ಆಗುತ್ತದೆ.

**'ಜಾಗ್ರತ್ಸ್ವಪ್ನ ಸುಷುಪ್ತ್ಯಾದಿ ಯತ್ಪ್ರಕಾಶಂ ಪ್ರಕಾಶತೆ ।**
**ತದ್ಬ್ರಹ್ಮಾಹಮಿತಿ ಜ್ಞಾತ್ವಾ ಸರ್ವಬಂಧೈಃ ಪ್ರಮುಚ್ಯತೆ' ॥**

ಉಕ್ತ ಜಾಗ್ರತ್ಸ್ವಪ್ನ ಸುಷ್ಪ್ತಿಗಳೆಂಬ ಮೂರು ಅವಸ್ಥೆಗಳ ಆಗುಹೋಗುಗಳನ್ನು ಯಾವದು ಪ್ರಕಾಶ ಮಾಡುತ್ತಿರುವದೋ, ಅದೇ ಬ್ರಹ್ಮವು. ಆ ಬ್ರಹ್ಮರೂಪನೇ ನಾನಿದ್ದೇನೆ. ಹೀಗೆ ಯಾವಾತನು ತಿಳಯುತ್ತಾನೋ, ಅವನು ಸಕಲ ಬಂಧನಗಳಿಂದ ಬಿಡುಗಡೆಯನ್ನು ಹೊಂದುತ್ತಾನೆಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಈ **ಅವಸ್ಥಾತ್ರಯಗಳ** ವಿಚಾರವು ಮುಖ್ಯವಾಗಿರುತ್ತದೆ.

**ಬಳಿಕ,** ಜಾಗ್ರತಾದಿ ಅವಸ್ಥೆಗಳಿಗೆ ಯಾವ ಗುಣಗಳಿರುತ್ತವೆಂಬುದನ್ನು ನಿರೂಪಿಸುತ್ತಾರೆ.

**ನೆನಸಿಂಗೆ ಸಾತ್ವಿಕಂ ಕನಸಿಂಗೆ ರಾಜಸಂ ।**
**ತನಿ ನಿದ್ರೆಗಲ್ಲಿ ತಾಮಸಗುಣಂ ಬೀಜ ।**
**ವೆನಿಸಿರ್ಪುದೆಂದು ತಿಳಿ ನೀನು ॥೧೦॥**

**ಟೀಕಾ:-** ನೆನಸಿಂಗೆ=ಜಾಗ್ರಕ್ಕೆ, ಸಾತ್ವಿಕಂ=ಸತ್ವಗುಣವು, ಕನಸಿಂಗೆ=ಸ್ವಪ್ನಕ್ಕೆ, ರಾಜಸಂ=ರಜೋಗುಣವು, ತನಿನಿದ್ರೆಗೆ=ಗಾಢನಿದ್ರೆಗೆ, ಅಲ್ಲಿ=ಅದರಲ್ಲಿ, ತಾಮಸಗುಣಂ= ತಮೋಗುಣವು, ಬೀಜವೆನಿಸಿರ್ಪುದೆಂದು = ಕಾರಣಗಳಾಗಿರುವ ವೆಂದು, ನೀನು ತಿಳಿ=ನೀನು ಅರಿ.

ತಾತ್ಪರ್ಯ:. ಜಾಗ್ರದಾದಿ ಮೂರು ಅವಸ್ಥೆಗಳು ಸತ್ವಾದಿ ಮೂರು ಗುಣ ಗಳಿಂದ ಕೂಡಿಕೊಂಡಿರುತ್ತವೆಂದು ತಿಳಿಯಬೇಕು. ಗುಣಗಳು ನಿರೂಪಗಳಾಗಿವೆ. ಕಣ್ಣಿಗೆ ತೋರುವದಿಲ್ಲ. ಅವುಗಳನ್ನು ಹೇಗೆ ತಿಳಿಯಬೇಕು? ಅಂದರೆ ಹೇಳು ತ್ತಾರೆ. ಜಾಗ್ರದವಸ್ಥೆಯಲ್ಲಿ ಪ್ರತಿಯೊಂದು ವಿಷಯಗಳು ಇದ್ದಂತೆಯೇ ಹೊಳೆ ಯುತ್ತವೆ. ಆದ್ದರಿಂದ ಜಾಗ್ರದವಸ್ಥೆಗೆ **ಸತ್ವಗುಣವು** ಕಾರಣವಾಗಿರುತ್ತದೆ. ಸ್ವಪ್ನಾವಸ್ಥೆಯಲ್ಲಿ ವಿಷಯಗಳು ಸ್ಪಷ್ಟಾಸ್ಪಷ್ಟವಾಗಿ ತೋರುತ್ತವೆ. ಮತ್ತು ನೂತನವಾಗಿ ಉತ್ಪತ್ತಿಯಾದ್ದರಿಂದ ಇದಕ್ಕೆ **ರಜೋಗುಣ** ಕಾರಣವಾಗಿದೆ. ನಿದ್ರಾವಸ್ಥೆಯು ಏನೊಂದು ತಿಳಿಯದಿರುವದರಿಂದ ಇದು ಮೌಢ್ಯಲಕ್ಷಣವಾಗಿದೆ. ಆದ್ದರಿಂದ ಇದಕ್ಕೆ **ತಮೋಗುಣವು** ಕಾರಣವಾಗಿರುತ್ತದೆಂದು ತಿಳಿಯತಕ್ಕದ್ದು. **'ಪ್ರಕಾಶಂಚ ಪ್ರವೃತ್ತಿಶ್ಚ ಮೋಹಮೇವಚ'** ಪ್ರಕಾಶವಾಗಿದ್ದರೆ ಸತ್ವಗುಣ ವೆಂದೂ ಪ್ರವೃತ್ತಿಯಿದ್ದರೆ ರಜೋಗುಣವೆಂದೂ, ಮೋಹವಿದ್ದರೆ ತಮೋಗುಣ ವೆಂದೂ ಹೀಗೆ ಕಾರ್ಯಲಿಂಗದ ಮೇಲಿಂದಲೇ ಕಾರಣಗಳಾದ ಗುಣತ್ರಯ ಗಳನ್ನು ತಿಳಿಯಬೇಕು.

ಬಳಿಕ; ಈ ಅವಸ್ಥೆಗಳು ಯಾರಿಗೆ ಯಾವು ಇರುತ್ತವೆಂಬುದನ್ನು ಹೇಳುತ್ತಾರೆ.

**ಸ್ಥಾವರಕೆ ಸುಪ್ತಿ ಪಶುಜೀವರ್ಗೆ ಸ್ವಪ್ನವದು ।**
**ದೇವಜಾಲಕ್ಕೆ ಜಾಗ್ರವೀಮನುಜರ್ಗೆ ।**
**ಭಾವಿಸಲವಸ್ಥೆಗಳು ಮೂರು ॥೧೧॥**

**ಟೀಕಾ:-** ಸ್ಥಾವರಕ್ಕೆ=ಚಲಿಸದಿರುವ ಅಚರವರ್ಗಕ್ಕೆ, ಸುಪ್ತಿ=ನಿದ್ರೆಯು, ಪಶುಜೀವರ್ಗೆ=ಪಶುಪಕ್ಷಿ ಮೊದಲಾದವುಗಳಿಗೆ, ಸ್ವಪ್ನವದು=ಸ್ವಪ್ನಾವಸ್ಥೆಯು, ದೇವಜಾಲಕ್ಕೆ=ದೇವತೆಗಳ ಸಮೂಹಕ್ಕೆ, ಜಾಗ್ರವು=ಜಾಗ್ರದವಸ್ಥೆಯು, **ಈ**

ಮನುಜರ್ಗೆ=ಈ ಮನುಷ್ಯರಿಗೆ, ಭಾವಿಸಲ್=ವಿಚಾರ ಮಾಡಲಾಗಿ, ಮೂರು ಅವಸ್ಥೆಗಳು=ಜಾಗ್ರತ್, ಸ್ವಪ್ನ, ಸುಪ್ತಿಗಳೆಂಬ ಮೂರು ಅವಸ್ಥೆಗಳು ಇರುತ್ತವೆ.

**ತಾತ್ಪರ್ಯ:-** ಸ್ಥಾವರಗಳು ತಮೋಗುಣದಿಂದ ಮೌಢ್ಯಗಳಾಗಿವೆ. ಅದರಿಂದ ಅವು ಸುಪ್ತಿಯಲ್ಲಿರುವವು. ಪಶುಪಕ್ಷಿಗಳು ಪ್ರವೃತ್ತಿಯುಳ್ಳವುಗಳಾಗಿಯೂ ಸ್ಪಷ್ಟಾಸ್ಪಷ್ಟ ಜ್ಞಾನವುಳ್ಳವುಗಳಾದ್ದರಿಂದ ರಜೋಗುಣಾತ್ಮಕ ಸ್ವಪ್ನಾವಸ್ಥೆಯಲ್ಲಿರುತ್ತವೆ. ಇಂದ್ರಾದಿ ದೇವತೆಗಳು ಸದಾ ಜ್ಞಾನವುಳ್ಳವರಾಗಿರುವರು. ಅದರಿಂದ ಸತ್ವಗುಣಾತ್ಮಕ ಜಾಗ್ರದವಸ್ಥೆಯಲ್ಲಿರುತ್ತಾರೆ. ವಿಚಾರವನ್ನು ಮಾಡಿದರೆ, ಮನುಷ್ಯರಿಗೆ ತ್ರಿಗುಣಾತ್ಮಕ **ಮೂರು ಅವಸ್ಥೆಗಳು** ಉಂಟು. ಆದ್ದರಿಂದ ಮನುಷ್ಯರು ಮೂರು ಅವಸ್ಥೆಗಳನ್ನು ಅನುಭವ ಮಾಡುವದರಿಂದ, ಸತ್ಯ ಮಿಥ್ಯೆ ವಸ್ತು ವಿಚಾರ ಮಾಡಿ ಸ್ವಪ್ನದಂತೆ ಜಗತ್ತು ಮಿಥ್ಯೆಯೆಂದು ತಿಳಿಯಲಿಕ್ಕೆ ಬರುತ್ತದೆ. ದೇವತೆಗಳಿಗೆ ಬರಲಾರದು. ಯಾಕಂದರೆ, ಅವರಿಗೆ ಸ್ವಪ್ನದ ಅನುಭವವಿಲ್ಲ. ಆದ್ದರಿಂದ ದೇವತೆಗಳಿಗಿಂತಲೂ ಮನುಷ್ಯರೇ ಶ್ರೇಷ್ಠರು. ಇವರಿಗೆ ಯಾವತ್ತು ಅವಸ್ಥೆಗಳ ಅನುಭವವಿರುತ್ತದೆ.

**ಬಳಿಕ,** ಈ ರೀತಿಯಾಗಿ ಜೀವರಿಗೆ ಯಾವಾಗಲೂ ಮೂರು ಅವಸ್ಥೆಗಳು ಒದಗುತ್ತವೆಂದು ಶ್ರುತಿಯೂ ಹೇಳುತ್ತದೆ.

> **ಇಂತು ಜೀವಂಗವಸ್ಥಾಂತರಾದಿಗಳುಂಟು ।**
> **ಸಂತತಂ ತಸ್ಯ ತ್ರಯ ಆವಸಥಾ ಶ್ರುತಿ ।**
> **ಸಂತಾನ ಮಿರ್ಪ ಕಥದಿಂದ** ॥೧೨॥

**ಟೀಕಾ:-** ಇಂತು=ಈ ರೀತಿ, ಜೀವಂಗೆ=ಜೀವನಿಗೆ, ಅವಸ್ಥಾಂತರಾದಿಗಳುಂಟು=ಬೇರೆ ಬೇರೆ ಅವಸ್ಥೆಗಳುಂಟು, ಸಂತತಂ=ಯಾವಾಗಲೂ, ತಸ್ಯ=ಜೀವನಿಗೆ, ತ್ರಯ=ಮೂರು, ಅವಸಥಾ=ಅವಸ್ಥೆಗಳುಂಟೆಂದು, ಶ್ರುತಿ=ಸಂತಾನ ಮಿರ್ಪಕಥದಿಂದ, ಹೇಳುವ ಅನೇಕ ಶ್ರುತಿಗಳಿರುವದರಿಂದ.

**ತಾತ್ಪರ್ಯ:-** ಆ ಜೀವನಿಗೆ ಯಾವಾಗಲೂ ಜಾಗ್ರದಾದಿ ಮೂರು ಅವಸ್ಥೆಗಳು ಚಕ್ರವತ್ ತಿರಿತಿರಿಗಿ ಬರುತ್ತಾ ಹೋಗುತ್ತಾ ಇರುತ್ತವೆ. ಈ ಮಾತನ್ನು ಹೇಳುವ ಶ್ರುತಿಗಳೂ ಅನೇಕವಾಗಿವೆ. ಅರ್ಥಾತ್ ಈ ಮೂರು ಅವಸ್ಥೆಗಳು ತನ್ನಿಂದ ದೃಶ್ಯಗಳಾಗಿ ಅರಿಸಿಕೊಳ್ಳುವದರಿಂದ ಮಿಥ್ಯೆಗಳಾಗಿವೆಯೆಂದು ತಿಳಿಯತಕ್ಕದ್ದು. ತೋರಿ ಅಡಗುವದರಿಂದ ಮಾಯಾಮಯಗಳಾಗಿವೆ.

**ಬಳಿಕ;** ಈ ರೀತಿ ಜೀವನು ಮೂರು ಅವಸ್ಥೆಗಳನ್ನು ಹೊಂದುತ್ತಾನೆ. ಹೀಗಿದ್ದರೂ, ಇವನು ತಾನೇ ಹೊಂದಲಾರನು. ಕಿಂತು; ಅಂತರ್ಯಾಮಿಯ ಪ್ರೇರಣೆಯಿಂದಲೇ ಹೊಂದುತ್ತಿರುವನೆಂದು ಹೇಳುತ್ತಾರೆ.

**ಈಪರಿಯವಸ್ಥೆಯೊಳಗೇ ಪೊತ್ತು ಜೀವನಿಹ ।**
**ನಾಪರಮನಲ್ಲಿ ಹರಿ ಪಿತಾಮಹ ರುದ್ರ ।**
**ರೂಪಿನಿಂ ಪ್ರೇರಿಪನು ನೋಡು ||೧೩||**

**ಟೀಕಾ:-** ಈಪರಿಯ=ಈ ರೀತಿಯ, ಅವಸ್ಥೆಯೊಳಗೆ=ಜಾಗ್ರತಾದಿ ಅವಸ್ಥೆಗಳಲ್ಲಿ, ಎಪ್ಪೊತ್ತು=ಯಾವಾಗಲೂ, ಜೀವನಿಹನು=ಜೀವನಿರುವನು, ಅಲ್ಲಿ=ಆಯಾಯ ಅವಸ್ಥೆಗಳಲ್ಲಿ, ಆ ಪರಮ = ಆ ಪರಮಾತ್ಮನು, ಹರಿ = ವಿಷ್ಣು, ಪಿತಾಮಹ=ಬ್ರಹ್ಮ, ರುದ್ರರೂಪಿನಿಂ = ರುದ್ರನೆಂಬ ರೂಪದಿಂದ, ಪ್ರೇರಿಪನು ನೋಡು=ಪ್ರೇರಿಸುತ್ತಿರುವನೆಂದು ಅರಿ.

**ತಾತ್ಪರ್ಯ:—** ಈ ಪ್ರಕಾರ ಜೀವನು ಜಾಗ್ರದಾದಿ ಮೂರು ಅವಸ್ಥೆಗಳಲ್ಲಿ ಸಂಚರಿಸುವನು. ಆದರೆ, ಈ ಜೀವನು ಪರಮಾತ್ಮನ ಪ್ರೇರಣೆಯಿಂದಲೇ ತಿರುಗುತ್ತಾನೆ. ಜಾಗ್ರದವಸ್ಥೆಯಲ್ಲಿ ವಿಶ್ವ ಜೀವನಿಗೆ ಪರಮಾತ್ಮನು **ಹರಿರೂಪದಿಂದ** ಪ್ರೇರಿಸುತ್ತಾನೆ. ಸ್ವಪ್ನಾವಸ್ಥೆಯಲ್ಲಿ ತೈಜಸನಿಗೆ ಪರಮಾತ್ಮನು **ಬ್ರಹ್ಮರೂಪದಿಂದ** ಪ್ರೇರಿಸುತ್ತಾನೆ. ಸುಷ್ತಿಯಲ್ಲಿ ಪ್ರಾಜ್ಞನಿಗೆ **ರುದ್ರರೂಪದಿಂದ** ಪ್ರೇರಿಸುತ್ತಾನೆ. ಈ ರೀತಿ ಪ್ರೇರಣೆಯಿಂದ ಜೀವನು ಜಾಗ್ರದಾದಿ ಅವಸ್ಥೆಗಳನ್ನು ಹೊಂದುತ್ತಿರುವನು. ಇಲ್ಲದೆ ಹೋದರೆ, ಜೀವನು ನಿದ್ರೆಯಲ್ಲಿ ಅಧಿಕ ಸುಖವುಂಟು. ಇಲ್ಲಿಯೇ ಇದ್ದರಾಯಿತು. ಜಾಗ್ರದವಸ್ಥೆಯು ದುಃಖಮಯವಾಗಿದೆ. ಆದ್ದರಿಂದ ನಿದ್ರೆಯಲ್ಲಿಯೇ ನಿಂತುಬಿಡಬಹುದಾಗಿತ್ತು. ಆದರೆ ಹಾಗಿಲ್ಲ. ನಿದ್ರೆಯನ್ನು ಬಿಟ್ಟು ಬರಲಿಕ್ಕೆ ಇಚ್ಛೆಯಿಲ್ಲದಿದ್ದರೂ ಅವಶ್ಯ ಹೊರಗೆ ಬಂದೇ ತೀರುವನು. ಇದರ ಮೇಲಿಂದ ಜೀವನು ಪರಮಾತ್ಮನ ಪ್ರೇರಣೆಯಿಂದ ತಿರುಗುವನೆಂಬುದು ಸಿದ್ಧವಾಗುತ್ತದೆ.

**ಬಳಿಕ:-** ಪರಮಾತ್ಮನು ಜೀವರಾಶಿಗಳನ್ನು ಪ್ರೇರಿಸುತ್ತಾನೆಂಬ ಬಗ್ಗೆ ಶ್ರುತಿ ವಾಕ್ಯವನ್ನು ಉದಾಹರಿಸುತ್ತಾರೆ.

**ಕುಂದದೀಶಂ ಜೀವ ವೃಂದಮಂ ಪ್ರೇರಿಸುವ ।**
**ನಂದದಿಂ ಕೂಡಿ ಯೋಽಂತರೋ ನಿಯಮಯತಿ ।**
**ಯೆಂದು ಶ್ರುತಿವಾಕ್ಯ ವಿಹುದಾಗಿ ||೧೪||**

**ಟೀಕಾ:-** ಈಶಂ=ಈಶ್ವರನು, ಕುಂದದೆ=ಕೊರತೆಯಿಲ್ಲದೆ, ಜೀವ ವೃಂದಮಂ=ಜೀವರುಗಳ ಸಮೂಹವನ್ನು ಪ್ರೇರಿಸುವನು=ಪ್ರೇರಣೆ ಮಾಡುತ್ತಾನೆ. ಆಂದದಿಂ=ಸ್ವರೂಪದಿಂದ, ಕೂಡಿ=ಬೆರತು, ಯಃ=ಯಾವ ಪರಮಾತ್ಮನು ಅಂತರಃ ಒಳ

ಗಿದ್ದು, ನಿಯಮಯತಿ=ಪ್ರೇರಿಸುತ್ತಾನೆ, ಎಂದು=ಹೀಗೆಂದು, ಶ್ರುತಿವಾಕ್ಯವಿಹು ದಾಗಿ=ಶ್ರುತಿಯ ವಾಕ್ಯ ವಿರುವದರಿಂದ,

ತಾತ್ಪರ್ಯ:- 'ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಮಂತರೋ ಯಮಯತಿ 'ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ, ಜೀವನಲ್ಲಿದ್ದು ಜೀವನನ್ನು ಪ್ರೇರಿಸುತ್ತಾನೆಂದು ಶ್ರುತಿಯುಂಟು. ಸ್ಥೂಲ ಸೂಕ್ಷ್ಮ ದೇಹಗಳಲ್ಲಿ ನಾನೆಂಬ ಅಭಿಮಾನದಿಂದ ಕೂಡಿರುವ ಸಕಲ ಜೀವಿಗಳನ್ನು ನಾನೇ ಪ್ರೇರಿಸುತ್ತಿರುವನೆಂಬ ಸ್ಮೃತಿವಾಕ್ಯವುಂಟು. ಮನುಷ್ಯನ ಪ್ರೇರಣೆಯಿಲ್ಲದೆ ಕೊಡವು ನೀರನ್ನು ಹೇಗೆ ತರಲಾರದೋ, ಹಾಗೆ ಪರಮಾತ್ಮನ ಪ್ರೇರಣೆಯಿಲ್ಲದೆ ಏನೂ ಆಗದು. ಆದರೂ ಪರಮಾತ್ಮನು ಜೀವರ ಕರ್ಮಾನು ಸಾರವಾಗಿ ಪ್ರೇರಿ ಸುವದರಿಂದ ಯಾವ ದೋಷಗಳು ಬರಲಾರವು. ಅರ್ಥಾತ್ ಅಂತರ್ಯಾಮಿ ಪರಮಾತ್ಮನ ಪ್ರೇರಣೆಯಿಂದಲೇ ಸರ್ವ ಜೀವರ ವ್ಯವಹಾರಗಳು ನಡೆದಿರುತ್ತ ವೆಂಬ ಭಾವವು.

### ಜೀವಂಗವಸ್ಥಾತ್ರಯ ನಿರೂಪಣೆ ಸೂತ್ರ ೪೪ಕ್ಕೆ ತ್ರಿ ||೪೯||

ಬಳಿಕ:- ಪೂರ್ವ ಸೂತ್ರದಲ್ಲಿ ಹೃದಯ ಕಮಲದ ಮಧ್ಯದಲ್ಲಿ ಸುಳಿಯು ವಂಥಾ ಜೀವನಿಗೆ ಕರ್ಮನಿಮಿತ್ತವಾಗಿ, ಈಶಪ್ರೇರಣೆಯನ್ನು ಮಾಡಲು, ಜಾಗ್ರ ದಾದಿ ಮೂರು ಅವಸ್ಥೆಗಳೂ, ಸತ್ವಾದಿ ಮೂರು ಗುಣಗಳೂ, ಸ್ಥೂಲಾದಿ ಮೂರು ತನುಗಳೂ, ನೇತ್ರಾದಿ ಮೂರು ಕರಣಗಳೂ, ಸ್ಥೂಲಾದಿ ಮೂರು ವಿಷಯಗಳೂ, ಪ್ರಾಪ್ತಗಳಾದವು. ಅದರಿಂದ ಜೀವನಿಗೆ ವಿಶ್ವಾದಿ ಮೂರು ಹೆಸರುಗಳೂ ಒದಗಿದವು. ಈ ನಿಮಿತ್ತದಿಂದ ಪರಮಾತ್ಮನು ಹರಿ ಪಿತಾಮಹಾದಿ ಮೂರುವಿಧ ರೂಪವನ್ನು ತಾಳಿ ಪ್ರೇರಿಸುವನೆಂದು ಹೇಳಿದ್ದಾಯಿತು. ಈ ವಿಷಯವನ್ನು ಕೇಳಿ; ಶಿಷ್ಯನು ಪ್ರಶ್ನೆಗಳನ್ನು ಮಾಡುವಂಥವನಾಗಿದ್ದಾನೆ. ಹೇಗಂದರೆ=ಹೇಗುರುನಾಥನೇ ! ಕೇಳು. ಈಶನೇ ಜೀವನಾಗಿರುವನು. ತಾನೇ ತನ್ನನ್ನು ಪ್ರೇರಿಸುತ್ತಾನೆಂದು ಹೇಳು ವದು ಸರಿಯಾಗುವದೆ? ಒಬ್ಬನೇ ಅರಸಾಗಿ ಆಜ್ಞೆಯನ್ನು ಮಾಡುವದು. ಆಳಾಗಿ ಕೇಳುವದು ಘಟಿಸದಂತೆ ಸಂಭವಿಸದು. ಹಾಗಲ್ಲ, ಬಿಂಬ ಪ್ರತಿಬಿಂಬನ್ಯಾಯದಂತೆ ಸಂಭವಿಸುತ್ತದೆ. ಯಾಕಂದರೆ, ಪರಮಾತ್ಮನೇ ಜಗತ್ತಿಗೆ ಅಭಿನ್ನನಿಮಿತ್ತೋ ಪಾದಾನನಾಗಿರುವನೆಂದು ತಾವು ಹೇಳಬಹುದು. ಹೀಗೆ ಹೇಳಿದರೂ ಸಂಭ ವಿಸದು. ಯಾಕಂದರೆ ಕಾರ್ಯ ಕಾರಣವೆಲ್ಲಾ ತಾನೇ ಆಗಿರುವನೆಂದು ಹಾಗೆ ಹೇಳಿದಲ್ಲಿ; ಪರಮಾತ್ಮನಿಗೆ ವಿಕಾರತ್ವವು ಬರುತ್ತದೆ. ಶ್ರುತಿಯು ಪರಮಾತ್ಮನಿಗೆ ನಿರ್ವಿಕಾರನೆಂದು ಹೇಳುತ್ತದೆ. ಶ್ರುತಿ ವಿರುದ್ಧವಾಗಿ ತಿಳಿಯುವದು ಸರಿಯಲ್ಲ.

ಹಾಗಾದರೆ; ದಿನಮಣಿ ಸನ್ನಿಧಾನದಿಂದ ಸೂರ್ಯಕಾಂತ ಮಣಿಯಲ್ಲಿ ಅಗ್ನಿಯು ಉದಯವಾದಂತೆ, ಇದೆಲ್ಲವು ಈಶನ ಸನ್ನಿಧಾನ ಮೂಲಕ ನಡೆದಿರುವುದೆಂದು ತಾವು ಹೇಳಬಹುದು. ಇದು ಯೋಗ್ಯವಾಗಿ ಕಂಡು ಬರುವದಿಲ್ಲ. ಯಾಕಂದರೆ ಸೂರ್ಯಬೇರೆ, ಕಲ್ಲುಬೇರೆ, ಆದ್ದರಿಂದ ಹಾಗಾಗಬಹುದು. ಆ ರೀತಿ ದ್ರಾಷ್ಟಾಂತ ದಲ್ಲಿ ಭಿನ್ನತ್ವವಿಲ್ಲ. ಈ ಕಾರಣದಿಂದ ತಾವು ಉದಾಹರಿಸಿದ ದೃಷ್ಟಾಂತವು ವಿಷಮವಾಗಿದೆ. ಎಂದು ಈ ವಿಧವಾಗಿ ಶಿಷ್ಯನು ಶಂಕೆಗಳನ್ನು ಮಾಡುತ್ತಾನೆ. ಗುರುಗಳು ಇದಕ್ಕೆ ಉತ್ತರವನ್ನು ಹೇಳುತ್ತಾರೆ. " ಹೇಶಿಷ್ಯನೇ! ಕೇಳು ಸೂರ್ಯನು ತನ್ನ ಉಷ್ಣಕಿರಣಗಳಿಂದ ಜಲವನ್ನು ಹೀರಿ, ಉಗೆಯ ರೂಪದಿಂದ ತಾನೇ ಮೇಘಗಳಾದನು. ಬಳಿಕ ಮಳೆಯಾಗಿ ನೀರಾದನು. ಆ ನಿಂತನೀರುಗಳಲ್ಲಿ ತಾನೇ ಪ್ರತಿಬಿಂಬಿಸಿದನು. ಬಿಂಬರೂಪದಿಂದ ಪ್ರೇರಿಸುವನು. ಬಳಿಕ ಆ ನೀರನ್ನು ಹೀರಿ, ಪ್ರತಿಬಿಂಬನ್ನು ತನ್ನಲ್ಲಿ ಲಯವನ್ನು ಮಾಡಿಕೊಳ್ಳುತ್ತಾನೆ. ಹೀಗೆ ವ್ಯವಹರಿಸಿದರೂ; ಸೂರ್ಯನು ಹೇಗೆ ನಿರ್ವಿಕಾರನಾಗಿರುವನೋ, ಹಾಗೇ ಪರಮಾತ್ಮನೂ ಎಲ್ಲವೂ ತಾನಾಗಿರುವನು. **ಪ್ರೇರ್ಯ ಪ್ರೇರಕಭಾವವು** ಬರುವದು. ಬಂದರೂ ನಿರ್ವಿಕಾರನಾಗಿಯೇ ಇರುತ್ತಾನೆ. ಈ ಮಾತನ್ನು ಮುಂದೆ ವಿಸ್ತಾರವಾಗಿ ತಿಳಿಸುತ್ತೇನೆಂದು ಈ ಸೂತ್ರದಲ್ಲಿ ಹೇಳುವಂಥವರಾಗಿದ್ದಾರೆ.

**ಪ್ರೇರ್ಯತ್ವವಾ ಪ್ರೇರಕತ್ವವೆಂತೆಂದೊಡಾ ।**
**ಚಾರ್ಯನಾ ಸೂನುವಿಂಗೊಲಿದರುಪಿದ ॥**

ಟೀಕಾ:- ಪ್ರೇರ್ಯತ್ವವು- ಪ್ರೇರಣೆ ಮಾಡಿಸಿಕೊಳ್ಳುವದು, ಆ ಪ್ರೇರಕತ್ವವು= ಪ್ರೇರಣೆಯನ್ನು ಮಾಡುವದು, ಎಂತೆಂದೊಡೆ=ಹೇಗಂದರೆ, ಆಚಾರ್ಯನು= ಗುರುಗಳು, ಸೂನುವಿಂಗೆ = ಶಿಷ್ಯನಿಗೆ, ಒಲಿದು = ಪ್ರಸನ್ನನಾಗಿ, ಅರುಪಿದ= ತಿಳಿಸಿದನು.

ತಾತ್ಪರ್ಯ:- ಪ್ರೇರ್ಯಪ್ರೇರಕದಲ್ಲಿ ಎರಡು ಪದಾರ್ಥಗಳಿರಬೇಕು. ಒಂದು ಹೆಚ್ಚಾಗಿಯೂ ಒಂದು ಕಡಿಮೆಯಾಗಿಯೂ ಇದ್ದರೆ, ಪ್ರೇರಣೆ ಮಾಡು ವದು ಮಾಡಿಸಿಕೊಳ್ಳುವದು ಸಂಭವಿಸುತ್ತವೆ. ಭೇದರಹಿತ ಒಂದೇ ವಸ್ತುವಿನಲ್ಲಿ ಪ್ರೇರ್ಯ ಪ್ರೇರಕತ್ವವು ಸಂಭವಿಸದು. ತಾವು ಜೀವಾತ್ಮ ಪರಮಾತ್ಮರ ಸ್ವರೂಪು ಒಂದೇಯಾಗಿದೆ. ಅವರಿಗೆ ಭೇದವಿಲ್ಲ ಎಂದು ಹೇಳುತ್ತೀರಿ. ಮತ್ತೆ ಒಂದ ರಲ್ಲಿಯೇ ಪ್ರೇರ್ಯಪ್ರೇರಕತ್ವವನ್ನು ಹೇಳುವದು ಅನುಚಿತವಾಗಿದೆ' ಎಂದು ಶಂಕೆ ಯನ್ನು ಮಾಡಲು; ಮುಂದೆ ಹೇಳುವ ಪ್ರಕಾರ ಒಂದೇ ಇದ್ದರೂ; ಉಪಾಧಿ ಮೂಲಕ ಪ್ರೇರ್ಯ ಪ್ರೇರಕ ಭಾವವು ಸಂಭವಿಸುತ್ತದೆಂದು ಉತ್ತರವನ್ನು ಹೇಳುತ್ತಾರೆ.

**ಬಳಿಕ,** ಶಿಷ್ಯನು ಗುರುಗಳನ್ನು ಕುರಿತು ಜಯತೆಂದು ಸ್ತುತಿಸುತ್ತಾ ನಮಸ್ಕರಿಸಿ ಪ್ರಶ್ನೆಯನ್ನು ಮಾಡುತ್ತಾನೆ.

**ಜಯ ಶರಣ ಕುಲಗೋತ್ರ ಜಯ ಸುಗುಣ ಮಣಿಸೂತ್ರ |**
**ಜಯ ಸೌಖ್ಯಗಾತ್ರ. ಗುರುವೇ ಬಿನ್ನಪವಿಂತು |**
**ಜಯತೆಂದು ನಮಿಸಿದನು ಪುತ್ರ ||೧||**

**ಟೀಕಾ:-** ಶರಣಕುಲ=ಸತ್ಪುರುಷರ ಕುಲಕ್ಕೆ, ಗೋತ್ರ=ಮೂಲಕಾರಣನಾದವನೇ !, ಜಯ=ನಿನಗೆ ಜಯವಾಗಲಿ, ಸುಗುಣ=ಸದ್ಗುಣಗಳೆಂಬ, ಮಣಿ=ರತ್ನಗಳಿಗೆ, ಸೂತ್ರ=ಆಧಾರವಾದ ಸೂತ್ರನೇ !, ಜಯ=ಜಯವಾಗಲಿ, ಸೌಖ್ಯಗಾತ್ರ=ಆನಂದ ಸ್ವರೂಪವಾದ ಶರೀರವುಳ್ಳವಗೆ, ಜಯ=ಜಯವಾಗಲಿ, ಗುರುವೆ=ಗುರುವರ್ಯನೇ !, ಜಯತೆಂದು=ನಿನಗೆ ಜಯಜಯವಾಗಲಿ ಅನ್ನುತ್ತಾ, ಪುತ್ರ=ಶಿಷ್ಯನು, ಇಂತು=ಈ ರೀತಿ, ಬಿನ್ನಪವು=ಪ್ರಶ್ನೆಯುಂಟೆಂದು, ನಮಿಸಿದನು=ನಮಸ್ಕಾರಮಾಡಿದನು.

**ತಾತ್ಪರ್ಯ:-** ಹೇ ಗುರುವೇ ! ಶಿವನಲ್ಲಿ ಅಭೇದ ಸಮರಸ ಭಾವನಾಸ್ಥಿತಿಯಲ್ಲಿದ್ದವರು ಶರಣರು, ಇವರುಗಳಿಗೆ ನೀನೇ ಬೋಧೆ ಮಾಡಿದ್ದರಿಂದ ಅವರು ಈ ಸ್ಥಿತಿಯುಳ್ಳವರಾದರು. ಅದರಿಂದ ಶರಣ ಕುಲಕ್ಕೆ ನೀನು ಮೂಲ ಕಾರಣ ಗೋತ್ರರೂಪನಾಗಿರುವಿ. ಮತ್ತು ಮೈತ್ರೀಕರುಣಾ, ಮುದಿತಾ, ಉಪೇಕ್ಷಾ ಮೊದಲಾದ ಸದ್ಗುಣಗಳೆಂಬ ರತ್ನಂಗಳಿಗೆ, ನೀನು ಎಳೆಯಾಗಿರುವಿ. ಅಂದರೆ ನೀನು ಆಧಾರನಾಗಿರುವಿ. ನಿನ್ನಾಶ್ರಯದಲ್ಲಿ ಸದ್ಗುಣಗಳಿರುತ್ತವೆಂಬ ಭಾವವು. ಮತ್ತು ನೀನು ನಿರತಿಶಯ ನಿರುಪಾಧಿಕ ಆನಂದರೂಪ ಪರಬ್ರಹ್ಮವೇ ಶರೀರವುಳ್ಳವನಾಗಿರುವಿ. ನಿನಗೆ ಪುನಃ ಪುನಃ ಅನೇಕ ಜಯಜಯಗಳಿರಲಿ. ಮುಂದೆ ಹೇಳುವ ರೀತಿ ನನ್ನದೊಂದು ಪ್ರಶ್ನೆಯುಂಟೆಂದು ಹೇಳಿ ನಮಸ್ಕಾರವನ್ನು ಮಾಡುವಂಥವನಾದನು.

**ಬಳಿಕ,** ಹೀಗೆ ಸದ್ಗುರುವಿನನ್ನು ಸ್ತುತಿಸಿ ಈಗ ಪ್ರಶ್ನೆಯನ್ನು ಎತ್ತುತ್ತಾನೆ.

**ಜೀವೇಶರೊಂದೆಂದು ದೇವಮುನ್ನರುಪಿ ತ |**
**ಜ್ಜೀವಂಗೆ ಮತ್ತೆ ಪ್ರೇರಕಂ ಶಿವನೆಂಬು |**
**ದಾವತೆರನಿದನು ತಿಳಿಯಲ್ಕೆ ||೨||**

**ಟೀಕಾ:-** ದೇವ=ಗುರುವೇ, ಜೀವೇಶರೊಂದೆಂದು=ಜೀವ ಮತ್ತು ಶಿವ ಇವರಿಬ್ಬರು ಒಂದೇ ಸ್ವರೂಪರೆಂದು, ಮುನ್ನರುಪಿ=ಮೊದಲು ತಿಳಿಸಿ, ಮತ್ತೆ=ಅನಂ

ತರ, ತಜ್ಜೀವಂಗೆ=ಆ ಜೀವನಿಗೆ, ಪ್ರೇರಕಂ=ನಿಯಮನ ಮಾಡುವವನು, ಶಿವನೆಂಬುದು=ಶಿವನಿರುವನೆಂದು, ಇದನು=ಈ ಮಾತನ್ನು, ತಿಳಿಯಲ್ಕೆ=ವಿಚಾರಿಸುತ್ತಿರಲು, ಆವತೆರಂ=ಯಾವ ರೀತಿಯು.

**ತಾತ್ಪರ್ಯ:-** ಹೇ ಗುರುವೇ! ಪೂರ್ವದಲ್ಲಿ ಜೀವ ಶಿವರಿಗೆ ಭೇದವಿಲ್ಲ. ಅವರ ಸ್ವರೂಪು ಒಂದೇ ಆಗಿರುತ್ತದೆ. ಈ ಕಾಣುವ ಭೇದವು ಕಾಲ್ಪನಿಕವಾಗಿದೆ. ನಿಜವಲ್ಲ. ಎಂಬುದಾಗಿ ನನಗೆ ಹೇಳಿದಿರಿ. ಈಗ ಪುನಃ ಆ ಜೀವನಿಗೆ ಶಿವನು ಪ್ರೇರಿಸುತ್ತಾನೆಂದು ಹೇಳುತ್ತೀರಿ. ಪ್ರೇರ್ಯ್ಯ ಪ್ರೇರಕತ್ವವು ಭೇದವಿದ್ದರೆ ಆಗುತ್ತದೆ. ಶಿವನೇ ಜೀವನಿಗೆ ಪ್ರೇರಿಸುತ್ತಾನೆಂದು ತಾವು ಹೇಗೆ ಹೇಳುವಿರಿ? ಯಾವ ರೀತಿಯಿಂದ ಸರಿಹೋಗುವದು? ಎಂದು ಕೇಳುತ್ತಲಿದ್ದಾನೆ.

**ಬಳಿಕ,** ಶಿಷ್ಯನು "ಓರ್ವನಲ್ಲಿ ಪ್ರೇರ್ಯ ಪ್ರೇರಕ ಭಾವವು ಸಂಭವಿಸುವದಿಲ್ಲ. ಎಂಬುವ ಬಗ್ಯೆ ದೃಷ್ಟಾಂತವನ್ನು ಹೇಳುತ್ತಾನೆ.

**ತನಗೆ ತಾನಾಳಾಗಿ ತನಗೆ ತಾನರಸೆನಿಪ।**
**ತನಗೋರ್ವನಲ್ಲಿ ಘಟಿಸುವದೆ ಜಗದೊಳಿದ।**
**ನೆನಗೆ ಗುರುವರ್ಯ ಕರುಣಿಪುದು ॥೩॥**

**ಟೀಕಾ:-** ಜಗದೊಳಗೆ=ಜಗತ್ತಿನಲ್ಲಿ, ತನಗೆ ತಾನಾಳಾಗಿ=ತನಗೆ ತಾನೇ ಆಳಾಗಿ, ತನಗೆ ತಾನರಸನೆನಿಪ=ತನಗೆ ತಾನೇ ರಾಜನಾಗುವದು, ತನಗೋರ್ವನಲ್ಲಿ=ತನಗೊಬ್ಬನಲ್ಲಿಯೇ, ಘಟಿಸುವದೇ=ಸಂಭವವಾಗುವದೇ, ಗುರುವರ್ಯ=ಗುರೂತ್ತಮನೇ! ಇದನು=ಈ ವಿಷಯವನ್ನು, ಎನಗೆ=ನನಗೆ, ಕರುಣಿಪುದು=ತಿಳಿಸುವದು.

**ತಾತ್ಪರ್ಯ:-** ಹೇ ಗುರುಶ್ರೇಷ್ಠನೇ! ಜಗತ್ತಿನಲ್ಲಿ ಎಲ್ಲಿಯಾದರೂ ತಾನೊಬ್ಬನೇ ಅರಸನಾಗಿ ಆಜ್ಞೆಯನ್ನು ಮಾಡುವದೂ, ಆಳಾಗಿ ಅಜ್ಞೆಯನ್ನು ಪರಿಪಾಲನೆ ಮಾಡುವದೂ, ಆಗುವದುಂಟೆ? ಇಲ್ಲ. ಮತ್ತು ಪ್ರೇರಣೆಯನ್ನು ಮಾಡುವವನೂ ಮಾಡಿಸಿಕೊಳ್ಳುವವನೂ ಒಬ್ಬನೇ ಎಂದು ಹೇಳಿದರೆ, ಆತ್ಮಾಶ್ರಯ ದೋಷವು ಬರುತ್ತದೆ. ಪರಿಚ್ಛಿನ್ನತ್ವಾದಿ ದೋಷಗಳೂ ಬರುತ್ತವೆ. ಆದ್ದರಿಂದ ಇದು ಹೇಗೆ ಆಗುವದು? ಎಂಬುದನ್ನು ನನಗೆ ತಿಳಿಸಬೇಕೆಂದು ಶಿಷ್ಯನು ಪ್ರಶ್ನೆಗಳನ್ನು ಮಾಡುವಂಥವನು ಆಗಿದ್ದಾನೆ.

ಬಳಿಕ, ಗುರುಗಳು ಶಿಷ್ಯನ ಪ್ರಶ್ನೆಯನ್ನು ಕೇಳಿ, ನಿನಗೆ ಉತ್ತರವನ್ನು ದೃಷ್ಟಾಂತ ಮೂಲಕ ತಿಳಿಸುತ್ತೇವೆಂದು ಅಭಯವನ್ನು ಕೊಡುತ್ತಾರೆ.

ಎಂದು ಬೆಸಗೊಂಡೊಡಾನಂದಮಯ ಗುರು ತನ್ನ ।
ಕಂದನಂ ನೋಡಿ ನಲಿಯುತೆಲೆ ವತ್ಸ ಕೇ ।
ಳೆಂದು ದೃಷ್ಟಾಂತ ವರುಪಿದನು ॥೪॥

ಟೀಕಾ:- ಎಂದು = ಹೀಗೆಂದು, ಬೆಸಗೊಂಡೊಡೆ = ಕೇಳಿದಕೂಡಲೇ, ಆನಂದಮಯ ಗುರು=ಆನಂದ ಸ್ವರೂಪರಾದ ಗುರುಗಳು, ತನ್ನ ಕಂದನಂ=ತನ್ನ ಶಿಷ್ಯನನ್ನು, ನೋಡಿ=ಕಂಡು, ನಲಿಯುತ=ಸಂತೋಷದಿಂದ ಒಲೆಯುತ್ತ, ಎಲೆ ವತ್ಸ=ಎಲೈ ಶಿಷ್ಯನೇ! ಕೇಳೆಂದು=ಏಕಾಗ್ರದಿಂದಾಲಿಸೆಂದು, ದೃಷ್ಟಾಂತವ= ದೃಷ್ಟಾಂತವನ್ನು, ಅರುಪಿದನು=ತಿಳಿಸಿದನು.

ತಾತ್ಪರ್ಯ:- ಉಕ್ತರೀತ್ಯಾ ಪ್ರಶ್ನೆಯನ್ನು ಮಾಡಿದ ಶಿಷ್ಯನನ್ನು ಕುರಿತು ಗುರುಗಳು ಸಂತೋಷಭರಿತರಾಗಿ, ಎಲೈ ಶಿಷ್ಯನೇ! ನಿನ್ನ ಸಂಶಯವು ದೂರಾಗುವ ಹಾಗೆ, ನಿನಗೆ ಈ ವಿಷಯಕ್ಕಾಗಿ ದೃಷ್ಟಾಂತವನ್ನು ಕೊಟ್ಟು ಹೇಳುತ್ತೇನೆ. ನೀನು ಏಕಾಗ್ರಚಿತ್ತದಿಂದ ಆಲಿಸು ಎಂಬುದಾಗಿ ಅಭಯವನ್ನು ಕೊಡುವಂಥವರಾದರು.

ಬಳಿಕ, ಉಪಾಧಿ ಮೂಲಕ ಒಂದರಲ್ಲಿಯೇ ಪ್ರೇರ್ಯ ಪ್ರೇರಕ ಭಾವವು ಸಂಭವಿಸುತ್ತದೆಂದು ದೃಷ್ಟಾಂತವನ್ನು ಕೊಡುತ್ತಾರೆ.

ರವಿ ತನ್ನ ಪಡಿಯ ಬಿಂಬವನೆ ತನ್ನಲ್ಲಿ ತೋ ।
ರುವ ಕಾಲದಿಂದೆ ನಡಿಸುವಂತೀ ಜೀವ ।
ನಿವಹಮಂ ಪ್ರೇರಿಸುವ ನೀಶ ॥೫॥

ಟೀಕಾ:-ರವಿ =ಸೂರ್ಯನು, ತನ್ನ=ಸ್ವಕೀಯ, ಪಡಿಬಿಂಬವನೆ= ಪ್ರತಿಬಿಂಬವನ್ನೇ, ತನ್ನಲ್ಲಿ=ತಾನಿದ್ದಲ್ಲಿ, ತೋರುವ=ಪ್ರತೀತಿಯಾಗುವ, ಕಾಲದಿಂದೆ=ಆ ಕಾಲದಲ್ಲಿ,ನಡಿಸುವಂತೆ=ಪ್ರೇರಿಸುವಹಾಗೆ, ಈಶ=ಪರಮಾತ್ಮನು, ಈ ಜೀವನಿವಹಮಂ= ಈ ಜೀವರುಗಳ ಸಮೂಹವನ್ನು, ಪ್ರೇರಿಸುವನು=ನಿಯಮಿಸುವನು.

ತಾತ್ಪರ್ಯ:- ಸೂರ್ಯನು ತಾನೊಬ್ಬನಿದ್ದರೂ ಉಪಾಧಿಗಳ ಮೂಲಕ ಅನೇಕ ಜಲಗಳಲ್ಲಿ ಪ್ರತಿಬಿಂಬಿಸಿ ಅನೇಕನಾಗಿರುವನು. ಮತ್ತು ಸೂರ್ಯನು ಪ್ರೇರಕನು ಆಗಿರುವನು. ಪ್ರತಿಬಿಂಬಗಳು ಪ್ರೇರ್ಯಗಳು ಆಗಿವೆ. ಅಂದರೆ, ಸೂರ್ಯನು ಇದ್ದರೆ ಪ್ರತಿಬಿಂಬ ಇರುವದು. ಗಮನಮಾಡಿದರೆ ಮಾಡುವದು. ಅಸ್ತಂಗತನಾದರೆ ಇಲ್ಲದಿರುವದು, ಹೀಗಾಗುವದರಿಂದ ಇಲ್ಲಿ ಸೂರ್ಯನು ಪ್ರೇರಕನು ಪ್ರತಿಬಿಂಬಗಳು ಪ್ರೇರ್ಯಗಳಾಗಿವೆ. ಅಂದರೆ, ಬಿಂಬ ತೋರುವದರಿಂದಲೇ ಪ್ರತಿಬಿಂಬಗಳು

ತೋರುತ್ತವೆ. ಯೆಂಬ ಭಾವವು. ಈ ದೃಷ್ಟಾಂತದಂತೆ, ಈಶನು ಬಿಂಬರೂಪನು ಜೀವರು ಪ್ರತಿಬಿಂಬಗಳಾಗಿದ್ದಾರೆ. ಆದ್ದರಿಂದ ಬಿಂಬ ಪ್ರತಿಬಿಂಬ ನ್ಯಾಯದಂತೆ ಈಶನು ಸಕಲ ಜೀವರಾಶಿಯನ್ನು ಪ್ರೇರಿಸುತ್ತಿರುತ್ತಾನೆ. ಆದ್ದರಿಂದ **ಪ್ರೇರ್ಯ್ಯ** **ಪ್ರೇರಕಭಾವಸಂಭವಿಸುತ್ತದೆ.**

ಬಳಿಕ; ಶಿವನೇ ಪ್ರೇರಕನು ಎಂದು ಏಕೆ ಹೇಳುವಿರಿ? ಅನ್ಯಕರ್ಮಾದಿಗಳನ್ನು ಹೇಳಿದರೆ, ಬರುವದಿಲ್ಲವೆ? ಎಂದು ಶಂಕೆಯನ್ನು ಮಾಡಿದರೆ ಬರುವದಿಲ್ಲ. ಯಾಕಂದರೆ ಜಗತ್ತಿಗೆ ಪರಮಾತ್ಮನು ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿರುವನು. ಇವನಿಗೆ ಪ್ರೇರಕತ್ವವು ಸಂಭವಿಸುತ್ತದೆ. ಅನ್ಯಕರ್ಮಾದಿಗಳು ಆಗಲಿ ಬೇರೆ ಯಾವಾದರೂ ಆಗಲಿ. ಅವುಗಳಿಗೆ ಪ್ರೇರಕತ್ವವು ಬರಲಾರದು ಎಂದು ನಿರೂಪಿಸುತ್ತಾರೆ.

**ಶಿವನು ತಾನೇ ಲೋಕನಿವಹಮಂ ಮಾಡುತಂ ।**
**ತವನೆ ತನ್ನಲ್ಲಿ ಲಯಿಸುತಿರ್ಪಂ ನಿಮಿ ।**
**ತ್ತವು ಮುಪಾದಾನ ವಹನಾಗಿ ॥೬॥**

**ಟೀಕಾ:-** ಶಿವನು=ಪರಮಾತ್ಮನು, ನಿಮಿತ್ತವುಂ=ನಿಮಿತ್ತಕಾರಣನೂ, ಉಪಾದಾನವಹನಾಗಿ=ಉಪಾದಾನ ಕಾರಣನು ಆದ್ದರಿಂದ, ತಾನೇ=ಸ್ವತಃ, ಲೋಕನಿವಹಮಂ=ಲೋಕಗಳನ್ನು, ಮಾಡುತ=ಮಾಡುತ್ತಾ, ಅಂತವನೆ=ಅವುಗಳನ್ನೇ, ತನ್ನಲ್ಲಿ= ತನ್ನ ಸ್ವರೂಪದಲ್ಲಿ, ಲಯಿಸುತಿರ್ಪಂ = ಲಯಮಾಡಿಕೊಳ್ಳುತ್ತಿರುವನು.

**ತಾತ್ಪರ್ಯ:-** ಕುಲಾಲನು ಘಟಕ್ಕೆ ನಿಮಿತ್ತ ಕಾರಣನು. ಮೃತ್ತಿಕೆ ಉಪಾದಾನ ಕಾರಣವಾಗಿದೆ. ಭಿನ ಭಿನ್ನ ಕಾರಣಗಳಿರುತ್ತವೆ. ಪರಮಾತ್ಮನು ಹೀಗಲ್ಲ. ನಿಮಿತ್ತ ಕಾರಣನೂ ಉಪಾದಾನ ಕಾರಣನೂ ತಾನೇ ಆಗಿರುವನು 'ಸಃ ಐಕ್ಷತ ಬಹುಸ್ಯಾಂ ಪ್ರಜಾಯೇಯ ಇತಿ, ಬಹಳ ಪ್ರಜೆಗಳಾಗಬೇಕೆಂದು ಸಂಕಲ್ಪವನ್ನು ಮಾಡಿದನೆಂಬ ಶ್ರುತಿಯಿರುತ್ತದೆ. ಇಲ್ಲಿ ಬಹಳ ಪ್ರಜೆಗಳು ಯಾರು ಆದರು? ಪರಮಾತ್ಮನೇ ಆದನು. ಎಂಬಲ್ಲಿ **ಉಪಾದಾನ ಕಾರಣವು** ಹೇಳಲ್ಪಡುತ್ತದೆ. ಯಾರು ಮಾಡಿದರು? ಶಿವನು ಮಾಡಿದನೆಂಬಲ್ಲಿ **ನಿಮಿತ್ತಕಾರಣವು** ಹೇಳಲ್ಪಡುತ್ತದೆ. ಈ ರೀತಿ ಪರಮಾತ್ಮನು ನಿಮಿತ್ತನೂ ಉಪಾದಾನನೂ ಆಗಿರುವನು. ಆದ್ದರಿಂದ ಅಭಿನ್ನನಿಮಿತ್ತೋಪಾದಾನನೆಂದು ಹೇಳಿಸಿಕೊಳ್ಳುವನು. ( ಕಾರ್ಯದೊಡನೆ ಕೂಡಿ ಕಾರ್ಯೋತ್ಪತ್ತಿಗೆ ಹೇತುವಾದದ್ದು **ಉಪಾದಾನವು**, ಕಾರ್ಯೋತ್ಪತ್ತಿಗೆ ಹೇತುವಾಗಿ ಕಾರ್ಯದಿಂದ ಬೇರೆ ಯಿರುವದೇ **ನಿಮಿತ್ತಕಾರಣವು.**) ಈ ಕಾರಣದಿಂದ ಪರಮಾತ್ಮನೇ ಸರ್ವಕ್ಕೂ ಪ್ರೇರಕನಾಗಿರುವನು.

**ಬಳಿಕ,** ಶಿಷ್ಯನು ಇದಕ್ಕೆ ದೃಷ್ಟಾಂತವು ಯಾವದು ಅದೆ? ಎಂದು ಕೇಳುತ್ತಾನೆ.

**ತಾನೇಯುಪಾದಾನವಾ ನಿಮಿತ್ತಾದಿಕ ನಿ।**
**ದಾನವಾಗುತ್ತೆ ರಚಿಸಿ ಕೆಡಿಪುದಕೆ ಬೇ।**
**ರೇನು ದೃಷ್ಟಾಂತವೆನೆ ಕೇಳು ||೭||**

**ಟೀಕಾ:-** ತಾನೆಯುಪಾದಾನವು=ತಾನೇ ಉಪಾದಾನಕಾರಣವು, ಆ ನಿಮಿತ್ತಾದಿಕ ನಿದಾನನಾಗುತ್ತೆ=ನಿಮಿತ್ತವೇ ಮೊದಲಾದ ಕಾರಣವುಳ್ಳವನು ಆಗುತ್ತಾ, ರಚಿಸಿ=ಕಾರ್ಯವನ್ನುಂಟುಮಾಡಿ, ಕೆಡಿಪುದಕೆ=ನಾಶಮಾಡುವದಕ್ಕೆ, ಬೇರೇನು ದೃಷ್ಟಾಂತವೆನೆ=ಬೇರೆ ದೃಷ್ಟಾಂತವೇನಿರುವದೆಂದು ಕೇಳಲಾಗಿ, ಕೇಳು=ಆಲಿಸು.

**ತಾತ್ಪರ್ಯ.-** ಶಿವನೇ ಜಗತ್ತಿಗೆ ಅಭಿನ್ನನಿಮಿತ್ತೋಪಾದಾನಕಾರಣನಾಗಿರುವನೆಂದು ಹೇಳಿದಿರಿ. ಆದರೆ, ಈ ವಿಷಯಕ್ಕೆ ದೃಷ್ಟಾಂತವನ್ನು ಕೊಟ್ಟು ತಾವು ಹೇಳಿದರೆ, ನನಗೆ ತಿಳಿಯುವದೆಂದು ಶಿಷ್ಯನು ಕೇಳಲಾಗಿ, ಗುರುಗಳು ಹಾಗಾದರೆ ಹೇಳುತ್ತೇನೆ. ಕೇಳು ಎಂದು ಹೇಳುತ್ತಾರೆ.

**ಬಳಿಕ,** ಉಕ್ತ ವಿಷಯಕ್ಕೆ ಮೂರು ಶ್ಲೋಕಗಳಿಂದ ಮೂರು ದೃಷ್ಟಾಂತಗಳನ್ನು ಕೊಟ್ಟು ಶಿಷ್ಯನ ಸಂಶಯಗಳನ್ನು ನಿವೃತ್ತಮಾಡುತ್ತಾರೆ.

**ಒಂದು ಪುಳು ತನ್ನ ನೂಲಿಂದೆ ವಲಯಾಕಾರ।**
**ದಂದಮುಂ ಮಾಡಿ ಕೆಡಿಸಿ ತಾನದನೆ ಮು।**
**ತ್ತೆಂದಿನಂತೆಸಗುತಿಹುದಂತೆ ||೮||**

**ಟೀಕಾ:-** ಒಂದು ಪುಳು=ಒಂದು ಜೇಡಹುಳವು, ತನ್ನ ನೂಲಿಂದೆ=ತನ್ನ ಜೊಲ್ಲಿನಿಂದ ಉತ್ಪನ್ನವಾದ ಎಳೆಯಿಂದ, ವಲಯಾಕಾರದ=ಚಕ್ರಾಕಾರದ, ಅಂದಮುಂಮಾಡಿ=ಸೌಂದರ್ಯವನ್ನುಂಟುಮಾಡಿ, ಕೆಡಿಸಿ=ನಾಶಮಾಡಿ, ತಾನು=ಆ ಹುಳವು, ಅವನೆ=ಆ ವಲಯಾಕಾರವನ್ನೇ, ಎಂದಿನಂತೆಸಗುತಿಹುವಂತೆ=ಮೊದಲಿನಂತೆ ಮಾಡುವ ಹಾಗೆ.

**ತಾತ್ಪರ್ಯ:-** ಜೇಡಹುಳವು ಜಾಲವನ್ನು ನಿರ್ಮಿಸುತ್ತದೆ. ಅದರಲ್ಲಿ ಸಿಕ್ಕ ನೊಣ ಮೊದಲಾದ ಕ್ಷುದ್ರ ಜಂತುಗಳನ್ನು ಹಿಡಿದು ತಿನ್ನುತ್ತದೆ. ಜಾಲವನ್ನು ನಾನಾಕಾರಗಳಿಂದ ನಿರ್ಮಾಣ ಮಾಡುತ್ತವೆ. ತನಗೆ ಬೇಡವಾದಾಗ್ಯೆ ಅದು ಆ ಜಾಲವನ್ನು ತಿರುಗಿ ನುಂಗಿ ಬಿಡುತ್ತದೆ. ಜೇಡಹುಳವು ತಾನೇ ಜಾಲರೂಪವಾ

ಯಿತು. ತಾನೇ ಮಾಡಿತು. ಅದರಿಂದ ಉಪಾದಾನ,ನಿಮಿತ್ತ ಈ ಎರಡೂ ಕಾರಣ ಗಳು ತಾನೇ ಆಗಿರುತ್ತದೆ, ಜೇಡಹುಳವು ಜಾಲಕ್ಕೆ ಹೇಗೆ ಅಭಿನ್ನ ನಿಮಿತ್ತೋಪಾ ದಾನ, ಕಾರಣವಾಗಿರುವದೋ, ಹಾಗೆ ಪರಮಾತ್ಮನು ಈ ಜಗತ್ತಿಗೆ ಆಗಿರುವ ನೆಂದು ತಿಳಿ.

**ಬಳಿಕ,** ತಾವು ಹೇಳಿದ ಹುಳದ ದೃಷ್ಟಾಂತವು ಪರೋಕ್ಷವಾದ್ದರಿಂದ ಅನು ಭವಕ್ಕೆ ಬರುವದಿಲ್ಲ. ನಮ್ಮ ಅನುಭವಕ್ಕೆ ಬರುವಂತೆ ಹೇಳಬೇಕೆಂದು ಕೇಳಲು, ಈಗ ದೇವದತ್ತನ ದೃಷ್ಟಾಂತವನ್ನು ಕೊಡುತ್ತಾರೆ.

**ಮತ್ತೆ ನಖ ಕೇಶಾದಿ ಮೊತ್ತಂಗಳಿಗೆ ದೇವ ।**
**ದತ್ತನೇ ನೈಜ. ವಾಗುಪಾದಾನಂ ನಿ ।**
**ಮಿತ್ತಕಾರಣನೆನಿಸುವಂತೆ** ||೯||

**ಟೀಕಾ:-** ಮತ್ತೆ=ಅನಂತರ, ನಖಕೇಶಾದಿ=ಉಗುರು ಕೂದಲುಗಳೇ ಮೊದ ಲಾದ, ಮೊತ್ತಂಗಳಿಗೆ=ಸಮೂಹಗಳಿಗೆ, ದೇವದತ್ತನೇ=ದೇವದತ್ತನಾಮಕ ಪುರು ಷನೇ, ನೈಜವಾಗೆ=ನಿಜವಾಗಿಯೂ, ಉಪಾದಾನಂ ನಿಮಿತ್ತ ಕಾರಣನು=ಉಪಾ ದಾನ ನಿಮಿತ್ತ ಕಾರಣನು, ಎನಿಸುವಂತೆ=ಹೇಳಿಸಿಕೊಳ್ಳುವ ಹಾಗೆ.

**ತಾತ್ಪರ್ಯ:-** ಹಾಗಾದರೆ ಕೇಳು. ಪುರುಷನ ಶರೀರದಲ್ಲಿ ಉಗುರು ಕೂದಲು ಮೊದಲಾದವುಗಳು ಬೆಳೆಯುತ್ತವೆ. ಅವುಗಳಿಗೆ ದೇವದತ್ತನಾಮಕ ಪುರುಷನೇ ಉಪಾದಾನ ಕಾರಣನೂ ನಿಮಿತ್ತ ಕಾರಣನೂ ಆಗಿರುವಂತೆ, ಪರ ಮಾತ್ಮನು ಆಗಿರುತ್ತಾನೆಂದು ತಿಳಿ. ಅಂದರೆ ಪ್ರತಿಯೊಬ್ಬರ ದೇಹದಲ್ಲಿ ಉಗರು ಕೂದಲು ಇವು ಬೆಳೆಯುತ್ತವೆ. ಇವುಗಳಿಗೆ ತಮ್ಮ ಹೊರತು ಬೇರೆ ಯಾರೂ ಕಾರಣರಿಲ್ಲ. ಮತ್ತು ಎಲ್ಲರಿಗೂ ಅನುಭವವೂ ಉಂಟು. ಇದರಂತೆ ಪರಮಾತ್ಮನು ಅಭಿನ್ನ ನಿಮಿತ್ತೋಪಾದಾನ ಕಾರಣನಿರುವನು.

ಬಳಿಕ, ಶಿಷ್ಯನು-' ತಾವು ಕೊಟ್ಟ ಎರಡೂ ದೃಷ್ಟಾಂತಗಳು ಸರಿಯಿಲ್ಲ. ಯಾಕಂದರೆ, ಜೇಡ ಹುಳವು ಜಾಲಕ್ಕೆ ಶರೀರದಿಂದ ಉಪಾದಾನ ಕಾರಣವಾಗಿದೆ. ಹಾಗು ದೇವದತ್ತನ ಶರೀರವು ನಖಕೇಶಾದಿಗಳಿಗೆ ಉಪಾದಾನವಾಗಿದೆ. ಈ ಎರಡೂ ದೃಷ್ಟಾಂತಗಳಲ್ಲಿ ಜಡಕ್ಕೆ ಉಪಾದಾನ ಕಾರಣವು ಕಂಡುಬರುತ್ತದೆ. ಆದರೆ ಪರಮಾತ್ಮನು ಜಡನಲ್ಲ. ಕಿಂತು ಚೇತನ ರೂಪನಿದ್ದಾನೆ. ಆದ್ದರಿಂದ ಪರ ಮಾತ್ಮನಲ್ಲಿ ಈ ದೃಷ್ಟಾಂತಗಳು ಸರಿಹೋಗುವದಿಲ್ಲ. ಎಂದು ಅನ್ನಲು ಗುರು ಗಳು ಮುಂದೆ ಹೇಳುವ ರೀತಿ ಚೇತನ ರೂಪನಾದ ಜೀವನ ದೃಷ್ಟಾಂತವನ್ನು ಉದಾಹರಿಸುತ್ತಾರೆ.

ತನ್ನ ನವಗುಣಕೆ ಜೀವಂ ನಿಮಿತ್ತಾದಿ ಬೀ।
ಜಂ ನೋಡಲಾದ ತೆರದಿನೀಶಂ ತಾನ।
ಭಿನ್ನದಿಂ ಮಾಳ್ಪನಖಿಳವನು ॥೧೦॥

ಟೀಕಾ:- ಜೀವಂ=ಜೀವಾತ್ಮನು, ತನ್ನ ನವಗುಣಕೆ=ಬುಧ್ಯಾದಿ ಒಂಭತ್ತು ಗುಣಗಳಿಗೆ, ನಿಮಿತ್ತಾದಿ ಬೀಜಂ=ನಿಮಿತ್ತ ಉಪಾದಾನ ಕಾರಣನು, ನೋಡಲ್= ವಿಚಾರ ಮಾಡಲಾಗಿ, ಆದ ತೆರದಿಂ=ಆಗಿರುವಹಾಗೆ, ಈಶಂ=ಪರಮಾತ್ಮನು, ತಾನ ಭಿನ್ನದಿಂ = ತಾನು ಅಭೇದನಾಗಿ, ಅಖಿಳವನು = ಸರ್ವವನ್ನು, ಮಾಳ್ಪನು= ಮಾಡುವನು,

ತಾತ್ಪರ್ಯ:- ಅಂತಃಕರಣ ವಿಶಿಷ್ಟ ಚೇತನ ರೂಪನಾದ ಜೀವನು; ಬುದ್ಧಿ, ಸುಖ, ದುಃಖಾದಿ ಒಂಭತ್ತು ಗುಣಗಳಿಗೆ ಅಭಿನ್ನ ನಿಮಿತ್ತೋಪಾದಾನ ಕಾರಣನು ಹೇಗೆ ಆಗಿರುವನೋ; ಹಾಗೆ ಮಾಯಾ ವಿಶಿಷ್ಟ ಚೇತನರೂಪನಾದ ಈಶನು ಈ ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣನು ಆಗಿರುತ್ತಾನೆ. ಚೈತನ್ಯ ಸ್ವರೂಪದಲ್ಲಿ ಇಬ್ಬರು ಸಮಾನರೇ ಆಗಿರುವರು.

ಬಳಿಕ, ಉಕ್ತ ದೃಷ್ಟಾಂತಗಳನ್ನು ಕೇಳಿದ ಶಿಷ್ಯನು 'ಹಾಗಾದರೆ, ಈಶ್ವರನು ಅವಿಕಾರಿ ಹೇಗೆ ಆಗುವನು? ಯಾಕಂದರೆ, ವಿಕಾರಿಯಾಗಿಯೇ ಹಲವು ರೂಪ ವಾಗಬೇಕಾಗುತ್ತದೆ. ಮತ್ತು ಕರ್ತೃತ್ವ ದೋಷವೂ ಬರುತ್ತದೆ. ಎಂದು ಶಂಕೆ ಯನ್ನು ಮಾಡಲು, ದೃಷ್ಟಾಂತ ಮೂಲಕ ಉತ್ತರವನ್ನು ಕೊಡುತ್ತೇವೆಂದು ಹೇಳುತ್ತಾರೆ.

ತಾನೇ ಸೃಜಿಸುವನೆನಲ್ಕೆಂತುಂಟವಿಕಾರತ್ವ।
ವಾಂತನೆನಲಿದಕೆ. ಪರಿಹಾರಮಂ ಸದೃ।
ಷ್ಟಾಂತದಿಂದರಪುವೆನು ಕೇಳು ॥೧೧॥

ಟೀಕಾ:- ಇಂತು=ಈ ಪ್ರಕಾರ, ಸೃಜಿಸುವನು=ಹುಟ್ಟಿಸುವನು, ಎನಲ್ಕೆ=ಅನ್ನ ಲಾಗಿ, ಅವಿಕಾರತ್ವವು= ವಿಕಾರವಿಲ್ಲದಿರುವಿಕೆಯು, ಎಂತುಂಟು= ಹೇಗಿರುವದು, ವಿಕಾರವಾಂತನು=ವಿಕಾರವನ್ನು ಹೊಂದಿದನು, ಎನಲ್=ಅನ್ನಲಾಗಿ, ಇದಕೆ=ಈ ವಿಷಯಕ್ಕೆ, ಪರಿಹಾರಮಂ=ದೋಷರಹಿತ ಉತ್ತರವನ್ನು, ಸದೃಷ್ಟಾಂತದಿಂದ= ದೃಷ್ಟಾಂತಸಹಿತವಾಗಿ, ಅರಪುವೆನು=ಹೇಳುತ್ತೇನೆ, ಕೇಳು=ಏಕಾಗ್ರಚಿತ್ತದಿಂದ ಆಲಿಸು.

ತಾತ್ಪರ್ಯ:- 'ತಾನೆ ಸೃಜಿಸುವನು, ತಾನೇ ಸೃಷ್ಟಿಯನ್ನು ಮಾಡಿದನು. ಅಂದರೆ; ಕುಲಾಲನಂತೆ ಕರಣಾದಿಸಾಧನಗಳಿಂದ ಸಹಿತನಾಗಿ ಮಾಡಿದನೋ?

ಅಥವಾ ವಿಶ್ವಾಮಿತ್ರಾದಿಗಳಂತೆ ಕೇವಲ ಸಂಕಲ್ಪ ಕರ್ತೃತ್ವದಿಂದ ಮಾಡಿದನೋ? ಹೀಗೆ ಅಂಗೀಕರಿಸಿದರೆ, ಜೀವತ್ವ ಪ್ರಾಪ್ತವಾಗುವದು. ಈಶತ್ವವಿಲ್ಲವೆನಬೇಕಾಗುವದು. ಮತ್ತು ಎಲ್ಲಾ ತಾನೇ ಆದನೆಂದು ನೀವು ಹೇಳುವಿರಿ. ಇದರಿಂದ ವಿಕಾರತ್ವವು ಬರುತ್ತದೆ. ಹಾಲು ಕೆಟ್ಟು ಮೊಸರಾದಂತೆ ವಿಕಾರತ್ವ ಆದಮೇಲೆ, ಅನಿತ್ಯತ್ವಾದಿ ದೋಷಗಳೂ ಬರುತ್ತವೆ- ಆದ್ದರಿಂದ ಈಶನು ಅಭಿನ್ನ ನಿಮಿತ್ತೋಪಾದಾನನಾಗಿರುವನೆಂದು ಹೇಳುವದು ಯೋಗ್ಯವಲ್ಲ. ಎಂದು ಶಿಷ್ಯನು ಶಂಕೆಗಳನ್ನು ಮಾಡಲು, ಗುರುಗಳು 'ಸನ್ನಿಧಾನ ಕರ್ತೃತ್ವ ಮೂಲಕ' ಸೃಷ್ಟಿಯಾಗಿರುವದೆಂದು ಹೇಳಿದರೆ, ಯಾವ ದೋಷಗಳೂ ಬರುವದಿಲ್ಲ ಎಂದು ದೃಷ್ಟಾಂತವನ್ನು ಹೇಳುತ್ತಾರೆ.

ಬಳಿಕ, ಎರಡು ಪದಗಳಿಂದ ಚನ್ನಾಗಿ ತಿಳಿಯುವ ಹಾಗೆ ದೃಷ್ಟಾಂತವನ್ನು, ವಿಸ್ತಾರವಾಗಿ ನಿರೂಪಣಮಾಡುತ್ತಾರೆ.

**ರವಿಯಾಗಸದೊಳಿಹನು ಭುವಿಯೊಳಿಹುದಾ ಕಾಂತ ।**
**ವಿವರೆಡೆಯೊಳುಜ್ವಲಿಸುವ ಪಾವಕನ ಸಂ ।**
**ಭವಮಂ ವಿಚಾರಿಸುವದಿಲ್ಲಿ ॥೧೨॥**

**ಮಣಿಗಿಲ್ಲವಿಚ್ಛೆ ದಿನಮಣಿಗಿಲ್ಲವಾ ಯತ್ನ ।**
**ಗುಣವಿಂತಿ ವೆರಡರನುಸಂಧಿಯಲ್ಲಿ ಸಂ ।**
**ದಣಿಸುತಾ ವಹ್ನಿಯೊಗೆವಂತೆ ॥೧೩॥**

**ಟೀಕಾ:-** ರವಿಯು=ಸೂರ್ಯನು, ಆಗಸದೊಳಿಹನು=ಆಕಾಶದಲ್ಲಿರುವನು, ಆ ಕಾಂತವು=ಸೂರ್ಯಕಾಂತಮಣಿಯು, ಭುವಿಯೊಳಿಹುದು=ಭೂಮಿಯಲ್ಲಿರುವದು, ಇವೆರಡರೊಳು=ಇವುಗಳೆರಡರಲ್ಲಿ, ಉಜ್ವಲಿಸುವ=ಪ್ರಕಾಶಮಾನನಾಗಿರುವ, ಪಾವಕನ=ಅಗ್ನಿಯ, ಸಂಭವಮಂ=ಉತ್ಪತ್ತಿಯನ್ನು, ಇಲ್ಲಿ=ಈ ಸ್ಥಳದಲ್ಲಿ, ವಿಚಾರಿಸುವುದು=ವಿಚಾರಮಾಡತಕ್ಕದ್ದು. ಮಣಿಗೆ=ಸೂರ್ಯಕಾಂತಮಣಿಗೆ, ಇಚ್ಛೆಯಿಲ್ಲವು=ನನ್ನಲ್ಲಿ ಅಗ್ನಿ ಉದಯವಾಗಲಿ ಎಂಬ ಅಪೇಕ್ಷೆಯಿಲ್ಲ. ದಿನಮಣಿಗೆ=ಸೂರ್ಯನಿಗೆ, ಯತ್ನಗುಣವುಇಲ್ಲವು=ಇದರಲ್ಲಿ ಅಗ್ನಿಯನ್ನುಂಟುಮಾಡಬೇಕೆಂಬ ಪ್ರಯತ್ನವು ಇಲ್ಲ, ಇಂತು=ಈ ಪ್ರಕಾರವಿದ್ದರೂ, ಎರಡರ=ಸೂರ್ಯಮತ್ತು ಮಣಿ ಇವುಗಳ, ಅನುಸಂಧಿಯಲ್ಲಿ=ಮಧ್ಯಸಂಧಿಯಲ್ಲಿ ಸಂದಣಿಸುತ್ತ=ಗುಂಪಾಗಿ ಸೇರುತ್ತಾ, ವಹ್ನಿ=ಅಗ್ನಿಯು, ಒಗೆವಂತೆ=ಉತ್ಪನ್ನವಾಗುವ ಹಾಗೆ.

**ತಾತ್ಪರ್ಯ:-** ಎಲೋ ಶಿಷ್ಯನೆ! ವಿಚಾರಮಾಡು. ಸೂರ್ಯನು ಆಕಾಶದಲ್ಲಿರುವನು. ನೆಲದ ಮೇಲೆ ಸೂರ್ಯಕಾಂತಶಿಲೆಯು ಇರುವದು. ಅಂದರೆ ಒಂದೆ

ಕ್ಕೊಂದು ಸಂಯೋಗ ಸಂಬಂಧವಿಲ್ಲದಿದ್ದರೂ, ಸೂರ್ಯಕಾಂತ ಶಿಲೆಯಲ್ಲಿ ಸೂರ್ಯನ ಕಿರಣಗಳು ಬೀಳುವದರಿಂದ ಅಗ್ನಿಯು ಪ್ರಕಟವಾಗುತ್ತದೆ. ಇದು ಹೇಗೆ ಆಯಿತು? ಎಂಬುದನ್ನು ಇಲ್ಲಿ ವಿಚಾರ ಮಾಡತಕ್ಕದ್ದಿರುತ್ತದೆ. ಏನಂದರೆ, ಸೂರ್ಯಕಾಂತ ಮಣಿಗೆ ತನ್ನಲ್ಲಿ ಅಗ್ನಿ ಉತ್ಪನ್ನವಾಗಬೇಕೆಂಬ ಇಚ್ಛೆಯಿಲ್ಲ. ಸೂರ್ಯನಿಗಾದರೂ ಅಗ್ನಿಯನ್ನು ಹುಟ್ಟಿಸುವಲ್ಲಿ ಪ್ರಯತ್ನವಿಲ್ಲ. ಹೀಗೆ ಎರಡ ರಲ್ಲಿಯೂ ಇಚ್ಛಾಪ್ರಯತ್ನಗಳೂ ಇಲ್ಲದಿದ್ದರೂ, ಅಕಸ್ಮಾತ್ ಅಗ್ನಿಯು ಉತ್ಪನ್ನವು ಹೇಗೆ ಆಗುವದೋ, ಹಾಗೆ ಸೃಷ್ಟಿಯು ಹುಟ್ಟಿರುವದು.

ಬಳಿಕ, ಹೇಳಿದ ದೃಷ್ಟಾಂತದ ಅರ್ಥವನ್ನು ದಾರ್ಷ್ಟಾಂತದಲ್ಲಿ ಯೋಜನೆ ಯನ್ನು ಮಾಡಿ ತೋರಿಸುತ್ತಾರೆ.

**ಪರಮಾತ್ಮನೆಂಬರ್ಕನಿರೆ ಪ್ರಕೃತಿ ಮಣಿಯಲ್ಲಿ |**
**ಸ್ಫುರಿಸುತಿರುವಖಿಳ ತತ್ವನೆಂಬನಲನಿಂ |**
**ತಿರಲು ಸರ್ವೇಶನವಿಕಾರಿ ||೧೪||**

**ಟೀಕಾ:-** ಪರಮಾತ್ಮನೆಂಬ=ಈಶನೆಂಬ, ಅರ್ಕನಿರೆ=ಸೂರ್ಯನಿರಲಾಗಿ, ಪ್ರಕೃತಿ ಮಣಿಯಲ್ಲಿ=ತ್ರಿಗುಣಾತ್ಮಕ ಸಾಮ್ಯರೂಪ ಪ್ರಕೃತಿ ಮಣಿಯಲ್ಲಿ, ಅಖಿಳ ತತ್ವವೆಂಬ=ಸಮಸ್ತ ತತ್ವಂಗಳೆಂಬ, ಅನಲನು=ಅಗ್ನಿಯು, ಸ್ಫುರಿಸುತಿರುವ=ಉದ ಯನಾಗುತ್ತಿರುವನು, ಇಂತು=ಈ ಪ್ರಕಾರ, ಇರಲು=ಇರಲಾಗಿ, ಸರ್ವೇಶನು= ಪರಮಾತ್ಮನು, ಅವಿಕಾರಿ=ನಿರ್ವಿಕಾರನಾಗಿರುವನು.

**ತಾತ್ಪರ್ಯ:-** ಉಕ್ತದೃಷ್ಟಾಂತದಂತೆ, ಪರಮಾತ್ಮನೆಂಬ ಸೂರ್ಯನು, ಪ್ರಕೃತಿಯೆಂಬ ಸೂರ್ಯಕಾಂತ ಮಣಿಯಲ್ಲಿ, ತತ್ವತಾತ್ವಿಕಗಳೆಂಬ ಅಗ್ನಿಯು ತನ್ನಿಂದ ತಾನೇ ಉದಯವಾಗುತ್ತಿರುವದು. ಅಂದರೆ ಸೂರ್ಯ ಮತ್ತು ಮಣಿ ಇವುಗಳೆರಡಕ್ಕೂ ಇಚ್ಛಾಯತ್ನಗಳು ಇಲ್ಲದಿದ್ದರೂ, ಅಕಸ್ಮಾತ್ ಸೂರ್ಯನ ಸನ್ನಿ ಧಾನ ಮೂಲಕ ಸೂರ್ಯಕಾಂತ ಮಣಿಯಲ್ಲಿ ಅಗ್ನಿಯು ಹೊರಟಂತೆ, ಪರಮಾ ತ್ಮನ ಸನ್ನಿಧಾನ ಮೂಲಕ ತ್ರಿಗುಣಾತ್ಮಕ ಪ್ರಕೃತಿಯಲ್ಲಿ ವಿಕೃತಿರೂಪ ಜಗತ್ಕಾ ರ್ಯವು ಉಂಟಾಗಿರುತ್ತದೆ. ಸೂರ್ಯನ ಹೊರತು ಮಣಿಯಲ್ಲಿ ಅಗ್ನಿಯು ಉದ ಯಿಸದಂತೆ,ಪರಮಾತ್ಮನಿಲ್ಲದೆ ಪ್ರಕೃತಿಯಿಂದ ಜಗತ್ತಾಗದು. ಪರಮಾತ್ಮನಾದರೂ ಇಚ್ಛಾಯತ್ನಂಗಳನ್ನು ಮಾಡಿಲ್ಲ. ಆದರೂ ಸನ್ನಿಧಾನ ಮೂಲಕ ಸೃಷ್ಟಿಯು ಆಗಿರುತ್ತದೆ. ಆದ್ದರಿಂದ ಗೀತೆಯಲ್ಲಿ ಭಗವಂತನು **"ತಸ್ಯಕರ್ತಾರಮಪಿ ಮಾಂ ಅಕರ್ತಾರಂ ವಿದ್ಧಿ"** ಸೃಷ್ಟಿಗೆ ನಾನು ಕರ್ತನಂತೆ ತೋರಿದರೂ, ನಾನು ಅದಕ್ಕೆ ಕರ್ತನಲ್ಲ. ಕಿಂತು ಅಕರ್ತನಾಗಿರುವೆನು ಎಂದು ಹೇಳಿದ್ದಾರೆ. ಈ ಉಕ್ತ ಅಭಿ

ಪ್ರಾಯದಿಂದಲೇ ಹೀಗೆ ಹೇಳಿರುವನು. ಈ ಕಾರಣದಿಂದ ಪರಮಾತ್ಮನು ಅವಿಕಾರಿಯಾಗಿರುತ್ತಾನೆ.

ಬಳಿಕ, ಉಕ್ತ ದೃಷ್ಟಾಂತದಲ್ಲಿರುವ ಅರ್ಥಕ್ಕೂ ದೃಷ್ಟಾಂತಕ್ಕೂ ಸರಿಹೋಗದೆ, ಶಿಷ್ಯನು 'ಹೇಗುರುವೇ! ಸೂರ್ಯನು ಬೇರೆ ಸೂರ್ಯಕಾಂತಮಣಿಯು ಬೇರೆಯಾಗಿದೆ. ಆದ್ದರಿಂದ ಅದರಲ್ಲಿ ಅಗ್ನಿಯು ಉದಯಿಸಬಹುದು. ಅದರಂತೆ ಈ ಏಕಾತ್ಮನು ಎಲ್ಲವೂ ತಾನೇ ಆಗಿರುವನೆಂದು ಹೇಳುವಿರಿ. ಇದರಲ್ಲಿ ಆ ಮಾತು ಸಂಭವಿಸಲಾರದೆಂದು ಹೇಳಲು, ಗುರುಗಳು ಅದಕ್ಕೆ ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಾರೆ.

**ಎಲೆದೇವ ರವಿಬೇರೆ ಶಿಲೆಬೇರೆಯಾಗಲಾ।**
**ಜ್ವಲನವಹುದಲ್ಲಿ ಯದರಂದವೇಕಾತ್ಮ ।**
**ನೊಳಗೆಂತು ಸಲವುದೆನೆ ಕೇಳು ॥೧೫॥**

**ಟೀಕಾ:-** ಎಲೆದೇವ= ಎಲೈ ಗುರುವೇ!, ರವಿಬೇರೆ=ಸೂರ್ಯನುಬೇರೆ, ಶಿಲೆಬೇರೆಯಾಗಲ್=ಸೂರ್ಯಕಾಂತಮಣಿಯು ಬೇರೆಯಾಗಲು, ಆ ಜ್ವಲನವು= ಆ ಅಗ್ನಿಯು, ಅಲ್ಲಿ=ಅದರಲ್ಲಿ, ಅಹುದು=ಆಗುವದು, ಅದರಂದವು=ಆ ರೀತಿಯು, ಏಕಾತ್ಮನೊಳಗೆ=ಒಬ್ಬಾತ್ಮನಲ್ಲಿ, ಎಂತು=ಹೇಗೆ, ಸಲುವದು=ಸಂಭವಿಸುವದು, ಎನೆ=ಅನಲಾಗಿ, ಕೇಳು=ಆಲಿಸು.

**ತಾತ್ಪರ್ಯ:-** ದೃಷ್ಟಾಂತದಲ್ಲಿ ಸೂರ್ಯಬೇರೆ ಮಣಿಬೇರೆಯಾದ್ದರಿಂದ ಅದರಲ್ಲಿ ಅಗ್ನಿಯು ತೋರಬಹುದು. ಇದರಂತೆ, ಕಾರ್ಯ ಪ್ರಪಂಚಕ್ಕಿಂತಲೂ ಕಾರಣನಾದ ಪರಮಾತ್ಮನು ಬೇರೆಯಿಲ್ಲ. ಕಿಂತು ಎರಡಕ್ಕೂ ಅಭೇದವೇ ಉಂಟು. ಹೀಗಿರಲು ಉತ್ಪತ್ತಿಕಥನವು ಪ್ರೇರ್ಯ ಪ್ರೇರಕಭಾವವು ಹೇಗೆ ಸಂಭವಿಸುತ್ತದೆಂದು ಪ್ರಶ್ನೆಯನ್ನು ಮಾಡುತ್ತಾನೆ.

ಬಳಿಕ, ಗುರುಗಳು ಶಿಷ್ಯನನ್ನು ಕುರಿತು, "ಹೇ ಪುತ್ರ! ಸೃಷ್ಟಿಯ ಉತ್ಪತ್ತಿ ಕಥನವು ಭೇದವಾಗಿದ್ದಲ್ಲಿ ಸಂಭವಿಸುತ್ತದೆಂಬ ನಿಯಮವಿಲ್ಲ. ಅಭೇದವಾಗಿದ್ದರೂ ಸಂಭವಿಸುವದು. ಇದಕ್ಕೆ ನಿನಗಾಗಿ ದೃಷ್ಟಾಂತವನ್ನು ಹೇಳುತ್ತೇನೆ ಕೇಳು. ಸೂರ್ಯನು ತನ್ನ ಕಿರಣಗಳಿಂದ ಮಳೆ ಕರೆದು, ಜಲದಲ್ಲಿ ಪ್ರತಿಬಿಂಬ ರೂಪದಿಂದ ಪ್ರವೇಶಿಸಿ, ಪ್ರೇರ್ಯ ಪ್ರೇರಕನಾಗಿರುವನು. ಈ ಕಾರ್ಯವು ಪ್ರಯತ್ನವಿಲ್ಲದೆ ಹೇಗೆ ನಡೆದಿರುವದೋ; ಹಾಗೆ ಸನ್ನಿಧಾನ ಮೂಲಕ ಕಾರ್ಯವಾಗುವದೆಂದು ತಿಳಿ; ಎಂಬದಾಗಿ ಉತ್ತರವನ್ನು ಹೇಳುತ್ತಾರೆ.

**ಮಳೆಗಳಂ ತಾನೆ ಭೂತಳದಲ್ಲಿ ಕರೆದು ತ।**
**ಜ್ಜಲದಲ್ಲಿ ಪೊಕ್ಕು ಪಡಿಬಿಂಬರೂಪದಿಂ।**
**ಸುಳಿವ ರವಿಗೆತ್ನವಿರದಂತೆ ॥ ೧೬ ॥**

ಟೀಕಾ:- ಮಳೆಗಳಂ=ವೃಷ್ಟಿಗಳನ್ನು, ತಾನೆ=ಸ್ವತಃ, ಭೂತಳದಲ್ಲಿ=ಭೂಮಿಯಲ್ಲಿ, ಕರೆದು=ಸುರಿಸಿ, ತಜ್ಜಲದಲ್ಲಿ=ಆ ನೀರುಗಳಲ್ಲಿ, ಪಡಿಬಿಂಬರೂಪದಿಂ=ಪ್ರತಿಬಿಂಬರೂಪದಿಂದ, ಪೊಕ್ಕು=ಸೇರಿ, ಸುಳಿವ=ಸಂಚರಿಸುವ, ರವಿಗೆ=ಸೂರ್ಯನಿಗೆ, ಯತ್ನವಿರದಂತೆ=ಪ್ರಯತ್ನವಿಲ್ಲದ ಹಾಗೆ.

ತಾತ್ಪರ್ಯ:- ಸೂರ್ಯನು ಜಲವು ತಾನೇ ಆಗಿರುವನು. ಆ ಜಲದಲ್ಲಿ ಪ್ರತಿಬಿಂಬನೂ ಆಗಿರುವನು. ಬಿಂಬದಿಂದ ಪ್ರೇರಿಸುತ್ತಾನೆ. ಪ್ರತಿಬಿಂಬರೂಪದಿಂದ ಪ್ರೇರ್ಯನೂ ಆಗಿರುವನು. ಹೀಗೆ ಸೂರ್ಯನು ಏಕಾತ್ಮನಾಗಿದ್ದರೂ, ಎಲ್ಲ ವ್ಯವಹಾರಗಳು ನಡೆದಿರುತ್ತವೆ. ಆದರೂ ಆ ಎಲ್ಲ ವ್ಯವಹಾರಗಳನ್ನು ಸೂರ್ಯನು ತನ್ನ ಇಚ್ಛಾ ಯತ್ನಾದಿಗಳಿಂದ ಮಾಡಿಲ್ಲ. ಸಹಜವಾಗಿಯೇ ಸಂಭವಿಸಿರುವವು. ಆ ಕಾರ್ಯಗಳಿಗೆ ಸೂರ್ಯನು ಕರ್ತನಾಗದೆ ಅಕರ್ತನಾಗಿರುವನು. ಅಂದರೆ, ಕಾರ್ಯಗಳು ಸೂರ್ಯನನ್ನು ಬಿಟ್ಟು ಆಗಿಲ್ಲ. ಅವುಗಳನ್ನು ಸೂರ್ಯನು ಮಾಡಿಲ್ಲ. ಕಿಂತು; ಸೂರ್ಯನ ಸಾನ್ನಿಧ್ಯ ಬಲದಿಂದ ನಡೆದಿರುತ್ತವೆಂದು ತಿಳಿಯತಕ್ಕದ್ದು. ಹೇಗಂದರೆ:- ಸೂರ್ಯನಲ್ಲಿ ಸಾವಿರ ಕಿರಣಗಳಲ್ಲಿ ಕೆಲವು ಉಷ್ಣ, ಕೆಲವು ಹಿಮ, ಕೆಲವು ವೃಷ್ಟಿ, ರೂಪ ಕಿರಣಗಳಿರುತ್ತವೆ. ಬೇಸಿಗೆಯಲ್ಲಿ ಉಷ್ಣ ಕಿರಣಗಳು ಭೂಮಿಯಲ್ಲಿದ್ದ ಕೆರೆ, ಭಾವಿ, ಹಳ್ಳ, ಹೊಳೆ ಮೊದಲಾದವುಗಳ ನೀರನ್ನು ಉಗೆಯ ರೂಪದಿಂದ ಹೀರುತ್ತವೆ. ಅವೇ ಮಳೆಗಾಲದಲ್ಲಿ ಮೋಡಗಳಾಗಿ ಪರಿಣಮಿಸುತ್ತವೆ. ವಾಯುವಶದಿಂದ ಆ ಮೋಡಗಳು ಭೂಮಿಯ ಸಮೀಪಕ್ಕೆ ಬರುತ್ತವೆ. ವರ್ಷಾ ಕಿರಣಗಳು ಮಳೆಯನ್ನು ಸುರಿಸುತ್ತವೆ. ಹಿಮ ಕಿರಣಗಳು ನೀರನ್ನು ತಡೆಯುತ್ತವೆ. ಆಗ್ಯೆ ಸೂರ್ಯನು ಪ್ರತಿಬಿಂಬ ರೂಪದಿಂದ ಎಲ್ಲ ಜಲಗಳಲ್ಲಿ ತೋರುತ್ತಾನೆ. ಬಿಂಬದಿಂದ ಏಕನಾದರೂ ಪ್ರತಿಬಿಂಬ ರೂಪದಿಂದ ಅನೇಕನು ಆಗಿರುತ್ತಾನೆ. ಬಿಂಬದಿಂದ ಪ್ರೇರಕನು ಪ್ರತಿಬಿಂಬದಿಂದ ಪ್ರೇರ್ಯನೂ ಆಗಿರುವನು. ಬಳಿಕ (ಆತಪ) ಬಿಸಿಲಿನ ಕಿರಣಗಳು ನೀರನ್ನು ಹೀರಲು, ಪ್ರತಿಬಿಂಬಗಳು ಬಿಂಬದೊಡನೆ ಏಕರೂಪವಾಗುತ್ತವೆ. ನೀರುಗಳೂ ಸೂರ್ಯನ ಸ್ವರೂಪವೇ ಆಗಿ, ಸೂರ್ಯನೊಬ್ಬನೇ ಉಳಿಯುವನು. ಇವೆಲ್ಲಾ ಕಾರ್ಯಗಳು ಸೂರ್ಯನಿಂದ ನಡೆಯುತ್ತವೆ. ಆದರೂ ಇವುಗಳನ್ನು ಸೂರ್ಯನು ಇಚ್ಛೆಯಿಂದಾಗಲಿ ಪ್ರಯತ್ನದಿಂದಾಗಲಿ ಮಾಡಲಿಲ್ಲ. ಕಿಂತು; ಅವನ ಸನ್ನಿಧಾನ ಮೂಲಕ ನಡೆದಿರುತ್ತವೆ. ಸೂರ್ಯನು ವಿಕಾರಿಯೂ ಆಗಿಲ್ಲ. ಕಾರ್ಯವೂ ನಿಂತಿಲ್ಲ. ಸೂರ್ಯನಂತೆ ಪರಮಾತ್ಮನು ನಿರ್ವಿಕಾರಿಯೆಂದು ತಿಳಿ.

ಬಳಿಕ, ಉಕ್ತ ದೃಷ್ಟಾಂತದ ಅರ್ಥವನ್ನು ದ್ರಾಷ್ಟಾಂತದಲ್ಲಿ ಯೋಜನೆ ಯನ್ನು ಮಾಡಿ ತಿಳಿಸುತ್ತಾರೆ.

**ತನ್ನೊಳವಿನಾಭೂತದಿಂ ನಿತ್ಯಮಿಹ ಶಕ್ತಿ ||**
**ಯಿಂ ನಿಖಿಳಸೃಷ್ಟಿಯನೆ ಮಾಡಿಯದರೊಳಿ |**
**ರ್ದುಂ ನೋಡಲೀಶ ನವಿಕಾರಿ ||೧೭||**

ಟೀಕಾ:- ತನ್ನೊಳು=ಈಶ್ವರನಾದ ತನ್ನಲ್ಲಿ, ಅವಿನಾ ಭೂತದಿಂ=ನೆರಳಿನಂತೆ ತನ್ನ ಬಿಟ್ಟು ಇರದ, ನಿತ್ಯಮಿಹ=ನಿತ್ಯವಾಗಿರುವ, (ಕಾರ್ಯ ದೃಷ್ಟಿಯಿಂದ) ಶಕ್ತಿಯಿಂ=ಮಾಯಾಶಕ್ತಿಯಿಂದ, ನಿಖಿಳ=ಸರ್ವ, ಸೃಷ್ಟಿಯನೆ=ಪ್ರಪಂಚವನ್ನೆ, ಮಾಡಿ=ರಚಿಸಿ, ಅದರೊಳಿರ್ದುಂ=ಅದರಲ್ಲಿ ಜೀವರೂಪದಿಂದ ಇದ್ದಾಗ್ಯಾದರೂ, ನೋಡಲ್=ವಿಚಾರ ಮಾಡಲಾಗಿ, ಈಶ=ಪರಮಾತ್ಮನು, ಅವಿಕಾರಿ=ವಿಕಾರ ರಹಿತನು.

ತಾತ್ಪರ್ಯ:-ಉಕ್ತ ದೃಷ್ಟಾಂತದಂತೆ, ಈಶ್ವರನು ತನ್ನ ಮಾಯಾಶಕ್ತಿ ಮೂಲಕ ಸೃಷ್ಟಿಯನ್ನು ಮಾಡುತ್ತಾ,ಅದರಲ್ಲಿ ಜೀವರೂಪದಿಂದ ಇದ್ದು, ಪ್ರೇರ್ಯ ಪ್ರೇರಕನಾಗಿರುತ್ತಾನೆ. ಆದರೂ ಅವಿಕಾರಿಯು ಆಗಿರುವನು. ಆದರೆ ಈಶ್ವರನಲ್ಲಿ ಮಾಯಾಶಕ್ತಿಯು ಅವಿನಾಭೂತದಿಂದ ಇರುತ್ತದೆ. ಎಂದು ಇಲ್ಲಿ ಹೇಳಿದೆ.ಅಂದರೆ, ಈಶ್ವರನ ವಿನಾ ಶಕ್ತಿಯು ಬೇರೆಯಿರಲಾರದು. ಹೇಗಂದರೆ, ದೇಹದಲ್ಲಿರುವ ಶಕ್ತಿಯು ದೇಹವನ್ನು ಬಿಟ್ಟು ಹೇಗೆ ಇರಲಾರದೋ, ಹಾಗೆ ಬೇರೆಯಾಗಿ ಇರ ಲಾರದು. ಅಥವಾ ಅಗ್ನಿಯೊಳಗಿನ ದಾಹಕ ಶಕ್ತಿಯು ಅಗ್ನಿಯನ್ನು ಬಿಟ್ಟು ಬೇರೆ ಹೇಗೆ ಇರಲಾರದೋ, ಹಾಗೆ ಮಾಯಾ ಶಕ್ತಿಯು ಮಹೇಶನನ್ನು ಬಿಟ್ಟು ಇರ ಲಾರದು. ಆದ್ದರಿಂದ ಅವಿನಾಭೂತ ಎಂಬ ಹೆಸರು ಬಂದಿರುವದು. ಅರ್ಥಾತ್ ಅನಿರ್ವಚನೀಯವೆಂಬ ಭಾವವು. ಮತ್ತು (ನಿತ್ಯಮಿಹಶಕ್ತಿ) ಶಕ್ತಿಯು ನಿತ್ಯವಾಗಿ ಇರುವದೆಂದು ಹೇಳಿದರೆ, ಬ್ರಹ್ಮಜ್ಞಾನ ಪರ್ಯಂತರವಿರುವದರಿಂದ ನಿತ್ಯವೆಂದು ಹೇಳಿದೆ. ಎಂಬ ಅರ್ಥವನ್ನು ಮಾಡಬೇಕು. ಯಾಕಂದರೆ, ಮಾಯೆಗೆ ಅಕ್ಷರ ಎಂಬ ಹೆಸರೂ ಉಂಟು. ಅಕ್ಷರ ಶಬ್ದಕ್ಕೆ ನಾಶರಹಿತವಾದದ್ದು ನಿತ್ಯವೆಂಬ ಅರ್ಥವೂ ಆಗುತ್ತದೆ. ಆದರೂ ಕಾರ್ಯವು ಅನಿತ್ಯವಾದಂತೆ ಕಾರಣವಾದ ಮಾಯೆ ಯಲ್ಲ. ಆದ್ದರಿಂದ ನಿತ್ಯ; ಅಥವಾ ಬ್ರಹ್ಮಜ್ಞಾನವಾಗುವವರೆಗೆ ಅಕ್ಷರ,ನಿತ್ಯ, ಎಂಬ ಪದಗಳಿಗೆ ಅರ್ಥವನ್ನು ಮಾಡಬೇಕು. ಹೀಗೆ ಮಾಡಿದರೆ, ಸರಿಹೋಗುವದು. ಹೀಗಲ್ಲ ಬ್ರಹ್ಮದಂತೆ ನಿತ್ಯ, ಅಕ್ಷರವಾಗಿದೆಯೆಂದು ಅರ್ಥವನ್ನು ಮಾಡಿದರೆ, ದ್ವೈತಾಪತ್ತಿಯೂ ಏಕಮೇವಾದ್ವಿತೀಯವೆಂಬ ಶ್ರುತಿಗೆ ವಿರೋಧವೂ ಬರು ತ್ತದೆ. ಆದ್ದರಿಂದ ಮೇಲೆ ಹೇಳಿದ ಅರ್ಥವೇ ಯೋಗ್ಯವಾಗಿರುತ್ತದೆ. ಇಂಥಾ ಅಘಟಿತ ಘಟನಾರೂಪ ವಿಚಿತ್ರವಾದ ಮಾಯಾಶಕ್ತಿ ಮೂಲಕ ಸೃಷ್ಟಿಯನ್ನು

ರಚಿಸಿ, ಅದರಲ್ಲಿ ಜೀವರೂಪದಿಂದ ಪ್ರವೇಶಮಾಡಿ, ಪ್ರೇರ್ಯ ಪ್ರೇರಕನಾದರೂ, ಈಶನು ಅವಿಕಾರಿಯಾಗಿರುತ್ತಾನೆ.

ಬಳಿಕ, ಸೃಷ್ಟಿಯನ್ನು ಮಾಡಿ ಅದರಲ್ಲಿ ಜೀವರೂಪದಿಂದ ಪ್ರವೇಶಮಾಡಿರುವನೆಂಬಲ್ಲಿ ಶ್ರುತಿ ಪ್ರಮಾಣವನ್ನು ಕೊಡುತ್ತಾರೆ.

**ತಾನೆ ಪುಟ್ಟಿಸುತಲ್ಲಿ ತಾನೈದುವಂ ತದೇ।**
**ನಾನು ಪ್ರಾವಿಶ ತೆನುತೆ ವೇದವಿಹುದಾಗಿ।**
**ನೀನಿದಂ ನಂಬಿ ತಿಳಿಪುತ್ರ** ॥೧೮॥

**ಟೀಕಾ:-** ತಾನೆ=ಈಶ್ವರನೇ, ಪುಟ್ಟಿಸುತ=ದೇಹಾದಿಗಳನ್ನು ರಚಿಸುತ್ತ, ಅಲ್ಲಿ=ದೇಹದಲ್ಲಿ, ತಾನೈದುವಂ=ತಾನೇ ಪ್ರವೇಶ ಮಾಡುವನು, ತದೇವ=ಪರಮಾತ್ಮನೆ, ಅನುಪ್ರಾವಿಶತ=ಪ್ರವೇಶ ಮಾಡಿರುವನು, ಎನುತ=ಅನ್ನುತ್ತಾ, ವೇದವಿಹುದಾಗಿ=ಶ್ರುತಿಯಿರುವದರಿಂದ, ಪುತ್ರ=ಮಗನೇ, ನೀನು=ನೀನು, ಇದಂ=ಈ ಶ್ರುತಿವಾಕ್ಯವನ್ನು, ನಂಬಿ=ವಿಶ್ವಾಸವುಳ್ಳವನಾಗಿ, ತಿಳಿ=ಅರಿ.

**ತಾತ್ಪರ್ಯ:-** ಈಶ್ವರನು ಮೊದಲು ಬಹಳ ಜೀವಿಗಳಾಗಬೇಕೆಂದು ಸಂಕಲ್ಪ ಮಾಡಿದನು. **'ಬಹುಸ್ಯಾಂ ಪ್ರಜಾಯೇಯ ಇತಿ'** ಅನಂತರ ಪಂಚಭೂತ ಭೌತಿಕ ಸೃಷ್ಟಿಯನ್ನು ರಚಿಸಿದನು. ಭೌತಿಕ ದೇಹಾದಿಗಳು ಜಡಗಳಾದ್ದರಿಂದ ಅವುಗಳಿಂದ ವ್ಯವಹಾರವು ನಡೆಯಲಿಲ್ಲ. ಬಳಿಕ ಇಂದ್ರಿಯಾದಿಗಳ ಅಭಿಮಾನಿ ದೇವತೆಗಳು ಪ್ರವೇಶರಾದರು. ಅವರಿಂದಲೂ ದೇಹದ ವ್ಯವಹಾರವು ನಡೆಯಲಿಲ್ಲ. ಆಗ್ಯೆ ಪರಮಾತ್ಮನು ನನ್ನ ಹೊರತು ಈ ಕಾರ್ಯ ನಡೆಯುವದಿಲ್ಲವೆಂದು ತಿಳಿದು, ತಾನೇ ಶರೀರದಲ್ಲಿ ಜೀವರೂಪದಿಂದ ಪ್ರವೇಶ ಮಾಡಿರುವನು. ಎಂಬ ಶ್ರುತಿಯುಂಟು. **'ಸೀಮಾನಂ ವಿದಾರ್ಯ್ಯ ಏತಯಾ ದ್ವಾರಾ ಪ್ರಾಪದ್ಯತ'** ನೆತ್ತಿಯಮೇಲಿನ ಬ್ರಹ್ಮರಂಧ್ರದ್ವಾರಾ ಪರಮಾತ್ಮನು ಶರೀರದಲ್ಲಿ ಪ್ರವೇಶ ಮಾಡಿದನೆಂದು ಶ್ರುತಿಯು ಹೇಳುತ್ತದೆ. ಆದರೆ, ಇಲ್ಲಿ ಪ್ರವೇಶ ಶಬ್ದಕ್ಕೆ ಗುದ್ದಿನಲ್ಲಿ ಇಲಿ ಹೊಕ್ಕಂತೆ, ದೇಹದಲ್ಲಿ ಪರಮಾತ್ಮನು ಸೇರಿರುವನೆಂದು ತಿಳಿಯಬಾರದು. ಯಾಕಂದರೆ, ಪರಮಾತ್ಮನು ನಿರವಯುವನೂ ಪರಿಪೂರ್ಣನೂ ಆಗಿರುವನು. ಪರಿಚ್ಛಿನ್ನ ಸಾವಯುವಕ್ಕೆ ಪ್ರವೇಶವುಂಟು. ನಿರವಯುವ ಪರಿಪೂರ್ಣಕ್ಕೆ ಪ್ರವೇಶವಿಲ್ಲ. ಆದರೆ, ಶ್ರುತಿಯಲ್ಲಿ ಹೇಳಿದೆ. ಇದರ ತಾತ್ಪರ್ಯವೇನಂದರೆ, ಆಕಾಶವು ಘಟದಲ್ಲಿ ಸೇರಿದೆಯೆಂಬ ವಾಕ್ಯಕ್ಕೆ ಸದೃಶವಾಗಿದೆ. ಸೇರಿದೆ ಎಂಬಲ್ಲಿ ಪ್ರಕಟವಾಗಿದೆಯೆಂಬರ್ಥವನ್ನು ಮಾಡಬೇಕಾಗುವದು. ಇದರಂತೆ ದೇಹದಲ್ಲಿ ಪರಮಾತ್ಮನು ಪ್ರಕಟವಾಗಿರುವನು. ಅಪರೋಕ್ಷ ಜ್ಞಾನಕ್ಕೆ

ಯೋಗ್ಯನಾಗಿರುವನೆಂದೇ ಅರ್ಥ ಮಾಡಬೇಕಾಗುತ್ತದೆ. ಈ ಶ್ರುತಿವಾಕ್ಯವನ್ನು ಕೇಳಿ ನಂಬಿಗೆಯಿಂದ ಇದು ಸತ್ಯವೆಂದು ತಿಳಿ. ಇದರಲ್ಲಿ ಸಂಶಯಾದಿಗಳಿಂದ ಕೂಡಬೇಡ ಎಂದು ಹೇಳಿದರು.

ಈ ಪ್ರಕಾರ ಪರಮಾತ್ಮನು ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿ ಸಕಲ ಪ್ರಪಂಚವನ್ನು ಸೃಜಿಸಿ, ಜೀವರೂಪದಿಂದ ಇರುವವನಾಗಿದ್ದಾನೆ. ಮತ್ತು ಉಪಾಧಿ ಮೂಲಕ ಒಂದೇ ವಸ್ತುವಿನಲ್ಲಿ ಪ್ರೇರ್ಯ ಪ್ರೇರಕಭಾವವು ಬರುತ್ತದೆ. ಅರ್ಥಾತ್ ಪರಮಾತ್ಮನು ತನ್ನ ಸನ್ನಿಧಾನದಲ್ಲಿದ್ದ ಮಾಯಾ ಶಕ್ತಿ ಮೂಲಕ ವಿಚಿತ್ರ ಸೃಷ್ಟಿಯನ್ನು ಮಾಡಿದರೂ, **ನಿರ್ವಿಕಾರನಾಗಿರುತ್ತಾನೆಂದು** ತಿಳಿ. ಎಂಬದಾಗಿ ತಿಳಿಸಿದರು.

### ಈಶ್ವರಂಗೆ ಸನ್ನಿಧಾನ ಕರ್ತೃತ್ವ ನಿರೂಪಣೆ ಸೂ|| ಜಕ್ಕೆ ತ್ರಿ|| ೬೭

ಬಳಿಕ, ಹಿಂದಿನ ಸೂತ್ರದಲ್ಲಿ ಇಚ್ಛಾಯತ್ನಾದಿಕಗಳಿಲ್ಲದೆ, ಪರಮಾತ್ಮನ ಸನ್ನಿಧಾನ ಮೂಲಕ ಸೃಷ್ಟಿಯು ಆಗಿರುತ್ತದೆ. ಮತ್ತು ಪ್ರೇರ್ಯ್ಯ ಪ್ರೇರಕ ಭಾವವೂ ಸಂಭವಿಸುತ್ತದೆ. ಆದಗೂ; ಪರಮಾತ್ಮನು ನಿರ್ವಿಕಾರನಾಗಿರುತ್ತಾನೆಂದು ಹೇಳಲ್ಪಟ್ಟಿತು. ಈ ಮಾತನ್ನು ಕೇಳಿ ಶಿಷ್ಯನು–"ಹೇಗುರುವೇ? ತಾವು ಸನ್ನಿಧಾನದ ಮೂಲಕ ಸೃಷ್ಟಿ ಕಥನವನ್ನು ಮಾಡಿದಿರಿ. ಆದರೆ, **ನೈಯಾಯಿಕರು ಕಣಾದರು** ಈಶ್ವರನ ಇಚ್ಛಾರೂಪ ಸಂಕಲ್ಪ ಕರ್ತೃತ್ವಮೂಲಕ ಸೃಷ್ಟಿಯನ್ನು ಹೇಳುತ್ತಾರೆ. ಹೇಗಂದರೆ, ಅನಿತ್ಯಗಳಾದ ಜ್ಞಾನ, ಇಚ್ಛಾ, ಪ್ರಯತ್ನಗಳುಳ್ಳವನು **ಜೀವನು.** ನಿತ್ಯಗಳಾದ ಜ್ಞಾನ, ಇಚ್ಛಾ, ಪ್ರಯತ್ನಗಳಿಂದ ಯುಕ್ತನು **ಈಶ್ವರನು;** ಈಶ್ವರನ ಇಚ್ಛಾ, ಪ್ರಯತ್ನಗಳಿಂದಲೇ ಈ ಸೃಷ್ಟಿಯಾಗಿರುತ್ತದೆಂದು ಹೇಳುತ್ತಾರೆ.

ಮತ್ತು ಈ ಸೃಷ್ಟಿಯ ಉತ್ಪತ್ತಿಗೆ ಪರಮಾಣುಗಳು ಉಪಾದಾನ ಕಾರಣ ಕಾರಣಗಳಾಗಿವೆ. ಅವುಗಳ ಒಂದಕ್ಕೊಂದು ಆದ ಸಂಯೋಗವು ಅಸಮವಾಯಿ ಕಾರಣವಾಗಿದೆ. ಈಶ್ವರನೇ ಕುಲಾಲನಂತೆ ನಿಮಿತ್ತಕಾರಣನು ಆಗಿರುವನು. ಹೀಗೆ ಮೂರು ಕಾರಣಗಳು ಇದ್ದರೆ ಒಂದು ಕಾರ್ಯವಾಗುತ್ತದೆಂದೂ ಹೇಳುತ್ತಲಿರುವರು.

ನ್ಯಾಯ ಮತದವರು ಹೇಳಿದಪ್ರಕಾರ ಸಂಕಲ್ಪ ಕರ್ತೃತ್ವವಾಗಲಿ ಅಥವಾ ಕರಣಕರ್ತೃತ್ವ ನಿಮಿತ್ತಕಾರಣವಾಗಲಿ ಈಶ್ವರನಲ್ಲಿ ಹೇಳುವದು ಯೋಗ್ಯವಾಗಿ ಕಂಡು ಬರುತ್ತದೆ. ಸಂನಿಧಾನ ಕರ್ತೃತ್ವಮೂಲಕ ಸುಮ್ಮನೆ ಸೃಷ್ಟಿಕಾರ್ಯ

ಹಾಗದು''ಎಂದು ಮತಾಂತರ ರೀತ್ಯಾ ಶಿಷ್ಯನು ಪ್ರಶ್ನೆಯನ್ನು ಮಾಡಲು, ಅದಕ್ಕೆ ಗುರುಗಳು ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಾರೆ. ಹೇಗಂದರೆ:- ನಿತ್ಯಜ್ಞಾನ ಇಚ್ಛಾ ಪ್ರಯತ್ನವುಳ್ಳ ಈಶನು, ನಿತ್ಯನಾಗಿ ಯಾವಾಗಲೂ ಸೃಷ್ಟಿಯನ್ನು ಮಾಡುತ್ತಿರಬೇಕಾಯಿತು. ಹೀಗಾದಮೇಲೆ ಸೃಷ್ಟಿಗೆ ನಾಶವಿಲ್ಲದಾಯಿತು. ನಾಶವಿಲ್ಲದಮೇಲೆ, ಜನನ ಮರಣಾದಿ ಸಂಸಾರದುಃಖವು ಯಾವಾಗಲೂ ಇರಬೇಕಾಯಿತು. ಹೀಗಾದಮೇಲೆ, ಮೋಕ್ಷೋಪದೇಶಾದಿ ಗುರುಶಾಸ್ತ್ರಾದಿಗಳು ವ್ಯರ್ಥವಾಗಬೇಕಾಯಿತು. ಈ ರೀತಿ ಅನೇಕ ದೋಷಗಳು ಬರುತ್ತವೆ.

ಮತ್ತೆ ಸಾಧಾರಣ ಕುಲಾಲನಂತೆ ಕರಣಕರ್ತೃತ್ವವನ್ನು ಹೇಳಿದರೆ, ಕುಲಾಲನಂತೆ ಈಶನು ಉತ್ಪತ್ತಿನಾಶವುಳ್ಳವನಾಗಬೇಕಾಗುವದು. ಅವನ ಉತ್ಪತ್ತಿ ನಾಶಗಳನ್ನು ಅವನೇ ಮಾಡಿಕೊಳ್ಳುವನೋ? ಅನ್ಯರು ಮಾಡುವರೋ ? ತಾನೇ ಎಂದು ಹೇಳಿದರೆ, ಆತ್ಮಾಶ್ರಯದೋಷವು ಬರುತ್ತದೆ. ಬೇರೊಬ್ಬ ಈಶ್ವರನಿಂದ ಎಂದು ಹೇಳಿದರೆ, ಅನ್ಯೋನ್ಯಾಶ್ರಯಾದಿ ದೋಷಗಳು ಬರುತ್ತವೆ. ಆದ್ದರಿಂದ ಸಾಧಾರಣ **ಕರಣ ಕರ್ತೃತ್ವವೂ** ಸರಿಯಲ್ಲ.

ಕಿಂತು; ಸೂರ್ಯನ ಸನ್ನಿಧಾನಮೂಲಕ ಅನೇಕವಿಧ ಜಗತ್ಕಾರ್ಯಗಳು ಆಗುವಂತೆ, ಈಶನ **ಸನ್ನಿಧಾನಮೂಲಕ** ಮಾಯೆಯಿಂದ ಅನೇಕ ವಿಧ ಜಗತ್ಕಾರ್ಯವು ತನ್ನಿಂದ ತಾನೇ ಆಗಿರುತ್ತದೆಂದು ತಿಳಿ.

ಈ ರೀತಿಯಾಗಿ ಗುರುಗಳು ಶಿಷ್ಯನನ್ನು ಕುರಿತು ಈ ಸೂತ್ರದಲ್ಲಿ ವಿಸ್ತಾರ ಪೂರ್ವಕ ಅರ್ಥವನ್ನು ಪ್ರತಿಪಾದಿಸುತ್ತಾರೆ.

ಸೂತ್ರ ॥ **ಅವಿಕಾರಿಯಲ್ಲದಿರುತಿರಲಾ ಪರಮಾತ್ಮನು ।**
**ಭವಮಾಲೆಗಳಿಗವಧಿಯಿಲ್ಲ ನೋಡಾ ॥**

**ಟೀಕಾ:-** ಆ ಪರಮಾತ್ಮನು=ಆ ಈಶನು, ಅವಿಕಾರಿಯಲ್ಲದೆ=ಅವಿಕಾರಿಯಾಗದೆ ವಿಕಾರವುಳ್ಳವನಾಗಿ, ಇರುತಿರಲ್=ಇದ್ದದ್ದು ಆದರೆ, ಭವಮಾಲೆಗಳಿಗೆ= ಜನನಮರಣರೂಪ ಭವಮಾಲೆಗೆ, ಅವಧಿಯಿಲ್ಲ=ಸೀಮೆಯಿಲ್ಲ ನೋಡು= ವಿಚಾರಮಾಡು.

**ತಾತ್ಪರ್ಯ:-** ಪರಮಾತ್ಮನಿಗೆ ಸನ್ನಿಧಾನ ಕರ್ತೃತ್ವವನ್ನು ಹೇಳಿದರೆ, ಅವಿಕಾರತ್ವವು ಸಿದ್ಧಿಸುತ್ತದೆ. ಇದನ್ನು ಬಿಟ್ಟು ನ್ಯಾಯಮತದಂತೆ ಸಂಕಲ್ಪರೂಪ ನಿತ್ಯ ಇಚ್ಛಾ ಕರ್ತೃತ್ವವನ್ನಾಗಲಿ ಅಥವಾ ಕುಲಾಲನಂತೆ ಕರಣ ಕರ್ತೃತ್ವವನ್ನಾಗಲಿ ಹೇಳಿದರೆ, ಮುಂದೆ ಹೇಳುವಪ್ರಕಾರ ಅನೇಕ ದೋಷಗಳು ಬರುತ್ತವೆ. ಆದರಿಂದ

ಭವಬಂಧನಾಶವೂ ಆಗುವದಿಲ್ಲ. ಮೋಕ್ಷಪ್ರಾಪ್ತಿಯೂ ಆಗುವದಿಲ್ಲ, ನೀನೇ ನಿನ್ನಲ್ಲಿ ಚನ್ನಾಗಿ ವಿಚಾರಿಸಿ ನೋಡು ಎಂದು ಹೇಳುತ್ತಾರೆ.

ಬಳಿಕ, ಮೂರು ಪದ್ಯಗಳವರೆಗೆ ಸಂಕಲ್ಪರೂಪ ಕರ್ತೃತ್ವದಿಂದ ಆಗುವ ದೋಷಗಳನ್ನು ತೋರಿಸಿ, ಸನ್ನಿಧಾನ ಕರ್ತೃತ್ವವೇ ಪರಮಾತ್ಮನಿಗೆ ಸರಿಯಾಗಿದೆ. ಎಂದು ನಿರೂಪಣೆಮಾಡುತ್ತಾರೆ.

**ಅಂತಲ್ಲ ದಾತ್ಮೇಚ್ಛೆ ವಂತನೆನಲೀಶ್ವರಂ ।**
**ಸಂತತಂ ತೋರು, ತಿಹನಾಗಿ ಸರ್ವದಾ ।**
**ಚಿಂತಿಸುತ್ತಿರ್ಪನಖಿಳವನು ॥೧॥**

**ಟೀಕಾ:-** ಅಂತಲ್ಲದೆ=ಹಾಗೆ ಆಗುವದಿಲ್ಲೆಂದು, ಆತ್ಮೇಚ್ಛೆವಂತನು=ಪರಮಾತ್ಮನು ನಿತ್ಯ ಇಚ್ಛಾ ಪ್ರಯತ್ನಾದಿಗಳುಳ್ಳವನು, ಎನಲ್=ಹೇಳಿದರೆ, ಈಶ್ವರಂ=ಪರಮನು, ಸಂತತಂ=ಯಾವಾಗಲೂ. ತೋರುತಿಹನಾಗಿ=ಇರುವವನಾದ್ದರಿಂದ, ಸರ್ವದಾ=ಯಾವಾಗಲೂ, ಅಖಿಳವನು=ಸರ್ವವನ್ನು, ಚಿಂತಿಸುತ್ತಿರ್ಪನು=ಆಲೋಚನೆಯನ್ನು ಮಾಡುತ್ತಿರುವನು.

**ತಾತ್ಪರ್ಯ:-** ಹೇ ಶಿಷ್ಯನೇ ! ಕೇಳು. ಪರಮಾತ್ಮನಿಗೆ ನಾವು ಹಿಂದಕ್ಕೆ ಹೇಳಿದ ಸನ್ನಿಧಾನ ಕರ್ತೃತ್ವವು ಸರಿಯಲ್ಲಯೆಂದು ಬಿಟ್ಟು; ನ್ಯಾಯಮತದಂತೆ ನಿತ್ಯ, ಜ್ಞಾನ, ಇಚ್ಛಾ, ಪ್ರಯತ್ನಗಳಿಂದ ಕೂಡಿರುವವನೇ ಪರಮಾತ್ಮನು, ಎಂಬ ಸಂಕಲ್ಪ ಕರ್ತೃತ್ವವನ್ನು ಅಂಗೀಕಾರ ಮಾಡಿದರೆ, ಈಶ್ವರನು ನಿತ್ಯ, ಅವನ ಇಚ್ಛೆಯು ನಿತ್ಯವಾಯಿತು. ಆಂದಮೇಲೆ ಯಾವಾಗಲೂ ಅವನು ಸೃಷ್ಟಿಯನ್ನು ಚಿಂತಿಸುತ್ತಲೇ ಇರಬೇಕಾಯಿತು. ಈ ರೀತಿ ಅಂಗೀಕಾರ ಮಾಡಿದರೆ, ಅನರ್ಥಗಳು ಒದಗುತ್ತವೆ.

**ಈ ಪರಿಯೊಡಂಬಟ್ಟೊಡೇ ಪೊತ್ತುಮಾವೃತ್ತಿ ।**
**ಲೋಪಮಿಲ್ಲಾಗಿ ಭವಪಾಶ ಬಂಧನಂ ।**
**ರೂಪುಗೊಂಡಿರ್ಪುದನುದಿನವು ॥೨॥**

**ಟೀಕಾ:-** ಈ ಪರಿ=ಈ ರೀತಿ, ಒಡಂಬಟ್ಟೊಡೆ=ಅಂಗೀಕರಿಸಿದರೆ, ಏಪೊತ್ತು=ಯಾವಾಗಲೂ, ಆವೃತ್ತಿ=ಪುನಃ ಪುನಃ ಸೃಷ್ಟಿಯಾಗುವದು, ಲೋಪಮಿಲ್ಲಾಗಿ=ನಾಶವಿಲ್ಲದ್ದರಿಂದ,. ಭವಪಾಶಬಂಧನಂ=ಭವಬಂಧವು, ಅನುದಿನವು=ಯಾವಾಗಲೂ, ರೂಪುಗೊಂಡಿರ್ಪುದು=ಮೂರ್ತಿಮಂತವಾಗಿರುವದು. ಅಂದರೆ, ನಾಶವಿಲ್ಲದಾಯಿತುಯೆಂಬ ಭಾವವು.

**ತಾತ್ಪರ್ಯ**:- ಮೇಲಿಂದ ಮೇಲೆ ಯಾವಾಗಲೂ ಸೃಷ್ಟಿಯು ಆಗುತ್ತಾ ಇರುತ್ತದೆಂಬುದನ್ನು ಅಂಗೀಕಾರ ಮಾಡಿದರೆ, ಜಗತ್ತಿಗೆ ನಾಶವಿಲ್ಲದೆ ಯಾವಾಗಲೂ ಇರುತ್ತದೆಂದು ಹೇಳಬೇಕಾಗುತ್ತವೆ. ಹೀಗಾದ ಮೇಲೆ, ಈ ಪುನಃ ಪುನಃ ಜನನ ಮರಣರೂಪ ಭವವೇ ಬಂಧನರೂಪವಾದ ಸಂಸಾರಕ್ಕೆ ನಾಶವಿಲ್ಲದೆ, ಸದಾ ಇರುತ್ತದೆಂದು ಅಂಗೀಕಾರ ಮಾಡಬೇಕಾಗುತ್ತದೆ- ಇದಕ್ಕಿಂತಲೂ ಬೇರೆ ಅನರ್ಥವುಂಟೇ? ನೀನೇ ಹೇಳು.

**ಭವಹಿಂಗದಿರಲು ಮೋಕ್ಷವಿಧಾನವಾ ಶಾಸ್ತ್ರ ।**
**ನಿವಹಾದ್ಯನರ್ಥವಹುದಾಗಿ ಸನ್ನಿಧಾ ।**
**ನವದೆ ಕರ್ತೃತ್ವವಭವಂಗೆ ॥೩॥**

**ಟೀಕಾ**:- ಭವಹಿಂಗದಿರಲು=ಸಂಸಾರ ನಾಶವಾಗದೆ ಹೋಗಲು, ಮೋಕ್ಷವಿಧಾನವು=ಮೋಕ್ಷವನ್ನು ಪ್ರತಿಪಾದಿಸುತ್ತಿರುವಂಥಾ, ಆ ಶಾಸ್ತ್ರನಿವಹಾದಿ=ಆ ಶಾಸ್ತ್ರ ಸಮೂಹಗಳೆಲ್ಲವು, ಅನರ್ಥವಹುದಾಗಿ=ವ್ಯರ್ಥಗಳಾಗುವದರಿಂದ, ಅಭವಂಗೆ= ಪರಮಾತ್ಮನಿಗೆ, ಸನ್ನಿಧಾನವದೆ ಕರ್ತೃತ್ವವು=ಸನ್ನಿಧಾನರೂಪ ಕರ್ತೃತ್ವವನ್ನು ಹೇಳಬೇಕೆ ವಿನಾ ಇಚ್ಛಾರೂಪ ಕರ್ತೃತ್ವವನ್ನು ಹೇಳಬಾರದು.

**ತಾತ್ಪರ್ಯ**:- ಸೃಷ್ಟಿಯು ಯಾವಾಗಲೂ ಇರಲಾಗಿ, ಸಂಸಾರಕ್ಕೆ ನಿವೃತ್ತಿಯಿಲ್ಲದಾಯಿತು. ಅದರಿಂದ ಮೋಕ್ಷವನ್ನು ಪ್ರತಿಪಾದಿಸುತ್ತಿರುವ ಉಪನಿಷತ್ತಾದಿ ವೇದಾಂತಶಾಸ್ತ್ರಗಳು ನಿಷ್ಪ್ರಯೋಜನಗಳಾಗಬೇಕಾಯಿತು. ಅದರಿಂದ ಆ ಶಾಸ್ತ್ರೋಪದೇಶವನ್ನು ಮಾಡುವ ಗುರುಗಳೂ ಪ್ರಯೋಜನರಲ್ಲೆಂದು ಹೇಳಿದಂತಾಗುತ್ತದೆ. ಆದ್ದರಿಂದ ಪರಮಾತ್ಮನಿಗೆ ಸನ್ನಿಧಾನದ ವಿನಾ ಬೇರೆ ಕರ್ತೃತ್ವವನ್ನು ಹೇಳಬಾರದು.

ಬಳಿಕ, ಮತ್ತು ಕುಲಾಲನಂತೆ ಸಾಧಾರಣ ಕರ್ತೃತ್ವವನ್ನು ಹೇಳಿದರೆ, ಯಾವ ದೋಷವು ಬರುತ್ತದೆ. ಎಂಬುದನ್ನು ಹೇಳುತ್ತೇನೆ ಕೇಳು.

**ಮತ್ತೆ ಸಾಧಾರಣ ನಿಮಿತ್ತಮಂ ಪೇಳಲಾ ।**
**ಚಿತ್ತುಲಯ ವಿಕೃತಿಗಳ ನುಳ್ಳುದೆಂಬುದಾ ।**
**ಯಿತ್ತು ಘಟಕಾರಕನ ಪೋಲು ॥೪॥**

**ಟೀಕಾ**:- ಮತ್ತೆ=ಅನಂತರ, ಸಾಧಾರಣ ನಿಮಿತ್ತಮಂ=ಕರಣ ಕರ್ತೃತ್ವವನ್ನು, ಪೇಳಲ್=ಹೇಳಿದರೆ, ಘಟಕಾರಕನ=ಕುಂಬಾರನ, ಪೋಲ್=ಹಾಗೆ, ಆ ಚಿತ್ತು=ಆ ಪರಮಾತ್ಮನು, ಲಯವಿಕೃತಿಗಳನುಳ್ಳುದೆಂಬುದು=ಉತ್ಪತ್ತಿ ನಾಶಾದಿ ವಿಕಾರಗಳಿಂದ ಕೂಡಿರುವದೆಂಬುದು=ಆಯಿತ್ತು=ಆಗುವದು.

**ತಾತ್ಪರ್ಯ:**- ಕುಂಬಾರನ ಹಾಗೆ ಕರಣ ಕರ್ತೃತ್ವವನ್ನು ಹೇಳಿದರೆ ಕುಂಬಾರನಂತೆ ಈಶ್ವರನು ಸಾವಯುವ ಶರೀರವುಳ್ಳವನೆಂದು ಹೇಳಬೇಕಾಗುವದು. ಹೀಗೆ ಒಪ್ಪಿದರೆ, ಕುಂಬಾರನು ಹುಟ್ಟಿ ಸಾಯುವಂತೆ ಈಶ್ವರನು ಹುಟ್ಟುವನು ಸಾಯುವನು ಎಂದು ಒಪ್ಪಬೇಕಾಗುವದು. ಆ ಈಶ್ವರನು ತನ್ನ ಶರೀರದ ಉತ್ಪತ್ತಿ ನಾಶಗಳನ್ನು ತಾನೇ ಮಾಡುತ್ತಾನೆಂದು ಹೇಳಿದರೆ, ಆತ್ಮಾಶ್ರಯ ದೋಷವು ಬರುತ್ತದೆ. ಬೇರೊಬ್ಬ ಈಶ್ವರನಿಂದ ಎಂದು ಹೇಳಿದರೆ, ಅನ್ಯೋನ್ಯಾಶ್ರಯ ದೋಷವು ಬರುವದು. ಮೂರನೆಯವನೆಂದು ಹೇಳಿದರೆ, ಚಕ್ರಿಕಾಪತ್ತಿದೋಷವು ಬರುವದು. ನಾಲ್ಕನೆಯವನೆಂದು ಹೇಳಿದರೆ, ಅವಸ್ಥಾದಿ ದೋಷಗಳು ಬರುತ್ತವೆ. ಆದ್ದರಿಂದ ಕುಲಾಲನಂತೆ ಸಾಧಾರಣ ಕರ್ತೃತ್ವವನ್ನು ಹೇಳಲಿಕ್ಕೆ ಬರುವದಿಲ್ಲ.

ಬಳಿಕ, ಶಿಷ್ಯನು "ಹಾಗಾದರೆ, ಈ ಜಗತ್ತು ಹೇಗಾಯಿತು? ಯಾರು ಮಾಡಿದರು? ಅದಕ್ಕೆ ಸಾಧನಗಳು ಯಾವವು? ಎಂದು ಪ್ರಶ್ನೆಗಳನ್ನು ಮಾಡಲು; ಈಶನ ಸನ್ನಿಧಾನ ಮೂಲಕ ಮಾಯೆಯಿಂದ ಜಗತ್ತು ಅನೇಕ ರೂಪವಾಗಿ ತೋರುತ್ತಿರುತ್ತದೆಂದು ಉತ್ತರವನ್ನು ಹೇಳುತ್ತಾರೆ.

**ಅದು ಕಾರಣಂ ಜಗತ್ತಿದು ತಾನನಿರ್ವಾಚ್ಯ ।**
**ಪದವಾದ ಮಾಯೆಯಿಂದೀಶ ಸನ್ನಿಧಿಯೊ ।**
**ಳುದಿಸುವದನೇಕ ವಿಧವಾಗಿ ॥೫॥**

**ಟೀಕಾ:**– ಅದು ಕಾರಣಂ=ಆದ್ದರಿಂದ, ಜಗತ್ತಿದು=ಈ ಜಗತ್ತು, ತಾನು= ತಾನು, ಅನಿರ್ವಾಚ್ಯ=ಒಂಭತ್ತು ರೀತಿ ಹೇಳಲಿಕ್ಕೆ ಬಾರದ, ಪದವಾದ=ಬಾಧಾಯೋಗ್ಯ ಸ್ವರೂಪವುಳ್ಳ, ಮಾಯೆಯಿಂದ=ಮಾಯಾಮೂಲಕ, ಈಶ ಸನ್ನಿಧಿಯೊಳು=ಪರಮಾತ್ಮನ ಸನ್ನಿಧಾನ ಸತ್ತಾಮೂಲಕ, ಅನೇಕ ವಿಧವಾಗಿ=ಅನೇಕ ರೂಪವಾಗಿ, ಉದಿಸುವದು=ಉತ್ಪನ್ನವಾಗುವದು.

**ತಾತ್ಪರ್ಯ;**- ಪರಮಾತ್ಮನು ಇಚ್ಛಾಯತ್ನಾದಿಗಳಿಲ್ಲದೆ ನಿರ್ವಿಕಾರ ಸ್ವರೂಪದಿಂದ ಇರುವನು. ಅವನ ಸನ್ನಿಧಾನ ಸತ್ತೆಯನ್ನು ಪಡೆದು ಮಾಯೆಯು ಈ ನಿಖಿಳ ದೃಷ್ಟಿಯನ್ನು ಮಾಡುತ್ತದೆ. ಅದರಿಂದ ಈ ಜಗತ್ತು ಅನೇಕ ರೂಪವಾಗಿ ತೋರುತ್ತ ಇರುತ್ತದೆ. ರಾಜನ ಸಮೀಪದಲ್ಲಿದ್ದ ಮಂತ್ರಿಯು ರಾಜನ ಸತ್ತೆಯನ್ನು ಹೊಂದಿ, ರಾಜ್ಯಕಾರ್ಯಗಳನ್ನು ಮಾಡಿದಂತೆ, ಈಶನ ಸನ್ನಿಧಾನ ಸತ್ತಾಮೂಲಕ, ಅನಿರ್ವಚನೀಯವಾದ ಮಾಯೆಯು, ಸತ್ತೆಯನ್ನು ಹೊಂದಿ, ಜಗತ್ಕಾರ್ಯಗಳನ್ನು ಮಾಡುತ್ತದೆ. ಆದ್ದರಿಂದ ಈ ರೀತಿ ತಿಳಿಯುವದರಿಂದ ಯಾವ ದೋಷಗಳೂ ಬರುವದಿಲ್ಲ. ಉಕ್ತ ಸಂಕಲ್ಪ ಕರ್ತೃತ್ವ ಅಥವಾ ಕರಣ ಕರ್ತೃತ್ವಗಳನ್ನು ಈಶ್ವರನಲ್ಲಿ ಅಂಗೀಕರಿಸಿದರೆ, ಅನೇಕ ದೋಷಗಳು ಸಂಭವಿಸು

ತ್ತವೆ. ಹಾಗೆ ತಿಳಿಯಕೂಡದು. ಈ ಮಾತನ್ನು ಶ್ರೀ ಸುರೇಶ್ವರಾಚಾರ್ಯರು ತಮ್ಮ ಮಾನಸೋಲ್ಲಾಸದಲ್ಲಿ ಹೇಳಿದ್ದಾರೆ. ಅದನ್ನೇ ಗ್ರಂಥಕರ್ತರು ಇಲ್ಲಿ ಸ್ವೀಕಾರ ಮಾಡಿದ್ದಾರೆ. ಆ ಶ್ಲೋಕಗಳನ್ನು ಕೆಲವು ಇಲ್ಲಿ ಉದಾಹರಿಸುತ್ತೇವೆ.

**ನಿಮಿತ್ತ ಮಾತ್ರಂ ಚೇದಸ್ಯ ಜಗತಃ ಪರಮೇಶ್ವರಃ ।**
**ವಿಕಾರಿತ್ವಂ ವಿನಾಶಿತ್ವಂ ಭವೇದಸ್ಯ ಕುಲಾಲವತ್ ॥೧॥**

**ಬುಧ್ಯಾದಯೋ ನವಗುಣಾಃ ನಿತ್ಯಾವಿವೇಶ್ವರಸ್ಯಚೇತ್ ।**
**ನಿತ್ಯೇಚ್ಛಾವಾನ್ ಜಗತ್ಸೃಷ್ಟೌ ಪ್ರವರ್ತೆತೈವ ಸರ್ವದಾ ॥೨॥**

**ಪ್ರವೃತ್ತ್ಯುಪರಮಾಭಾವಾತ್ಸಂಸಾರೋ ನೈವ ನಶ್ಯತಿ ।**
**ಮೋಕ್ಷೋಪದೇಶೋ ವ್ಯರ್ಥಸ್ಯಾದಾಗಮೋಽಪಿ ನಿರರ್ಥಕಃ ॥೩॥**

**ತಸ್ಮಾನ್ಮಾಯಾ ವಿಲಾಸೋಽಯಂ ಜಗತ್ಕರ್ತೃತ್ವಮೀಶಿತುಃ।**
**ಬಂಧಮೋಕ್ಷೋಪ ದೇಶಾದಿ ವ್ಯವ್ಯಹಾರೋಽಪಿ ಮಾಯಯಾ ॥೪॥**

ಈ ಶ್ಲೋಕಗಳ ಅರ್ಥವನ್ನು ಅಥವಾ ಮಾನಸೋಲ್ಲಾಸ ನಾಮಕ ವಾರ್ತಿಕ ವನ್ನು ಶ್ರೀ ದಕ್ಷಿಣಾಮೂರ್ತಿ ಸ್ತೋತ್ರದ ತಾತ್ಪರ್ಯದಲ್ಲಿ ಕನ್ನಡವಾಗಿ ಬರೆದಿರು ತ್ತೇವೆ. ಅಲ್ಲಿ ನೋಡಿಕೊಳ್ಳಬಹುದು. ಆದ್ದರಿಂದ ಈ ಜಗತ್ತು ಈಶನ ಸನ್ನಿಧಾನ ಮೂಲಕ ಮಾಯಾವಿಲಾಸವಾಗಿರುತ್ತದೆಂದು ತಿಳಿಯತಕ್ಕದ್ದು.

**ಬಳಿಕ,** ಶಿಷ್ಯನು ಗುರುಗಳನ್ನು ಕುರಿತು, 'ಸ್ವಾಮಿನ್! ಶಿವನ ಸನ್ನಿಧಾನ ಮೂಲಕ ಸೃಷ್ಟಿಯಾಗಿರುವುದೆಂದು ತಾವು ಹೇಳಿದರೆ, ಒಂದೇ ವಿಧವಾದ ಸೃಷ್ಟಿ ಯಾಗಬೇಕು. ಅನೇಕ ವಿಧವಾದ ನಾನಾ ವಿಚಿತ್ರವಾದ ಈ ಸೃಷ್ಟಿಯು ಆಗಬಾರ ದಾಗಿತ್ತು. ಎಂದು ಶಂಕೆಯನ್ನು ಮಾಡಲು; ಅದಕ್ಕೆ ಗುರುಗಳು 'ಒಂದು ಸನ್ನಿಧಾನಮೂಲಕ ಒಂದೇವಿಧ|ಸೃಷ್ಟಿಯಾಗಬೇಕು. ಅನೇಕ ಪ್ರಕಾರದ ಕಾರ್ಯ ವಾಗಬಾರದೆಂಬ ನಿಯಮವಿಲ್ಲ. ಅನೇಕ ವಿಧವಾಗಬಹುದು. ಎಂಬದಾಗಿ ದೃಷ್ಟಾಂತವನ್ನು ಕೊಟ್ಟು ಹೇಳುತ್ತಾರೆ.

**ಸನ್ನಿಧಾನವೆ ಶಿವಂಗೆನ್ನಲೊಂದೇ ತೆರೆದೊ ।**
**ಳಂ ನಿಖಿಳವಾಗುತಿಹುದು ಬಹುಕೃತ್ಯವಿದು ।**
**ತನ್ನ ತಾನಾಗದೆನೆ ಕೇಳು ॥೬॥**

**ಟೀಕಾ:-** ಶಿವಂಗೆ=ಶಿವನಿಗೆ, ಸನ್ನಿಧಾನವೆ=ಸಾನಿಧ್ಯ ಕರ್ತೃತ್ವವೇ, ಎನಲ್= ಅನ್ನಲಾಗಿ, ಒಂದೆ ತೆರದೊಳಂ=ಒಂದೇ ವಿಧವಾಗಿ, ನಿಖಿಳವಾಗುತಿಹುದು=ಎಲ್ಲವೂ

ಆಗಬೇಕಾಗಿತ್ತು. ಬಹುಕೃತ್ಯವಿದು=ಈ ಅನೇಕ ವಿಧ ಕಾರ್ಯವು, ತನ್ನತಾನಾಗದೆನೆ=ತನ್ನಷ್ಟಕ್ಕೆ ತಾನೇ ಆಗದು, ಅಂದರೆ, ಕೇಳು=ಆಲಿಸು,

**ತಾತ್ಪರ್ಯ:-** ಶಿವನ ಸನ್ನಿಧಾನ ಮೂಲಕ ಸೃಷ್ಟಿಯು ಆಗುತ್ತದೆಂದು ತಾವು ಹೇಳಿದರೆ, ಅಗ್ನಿಯ ಸುತ್ತಲೂ ಕೂತಿರುವ ಸರ್ವರಿಗೆ, ಸಮಾನ ಉಷ್ಣತೆಯು ದೊರೆದು, ಸರ್ವರ ಶೀತನಿವಾರಣ ಕಾರ್ಯವು ಒಂದೇ ವಿಧವಾಗಿರುವಂತೆ, ಆಗಬೇಕಾಗಿತ್ತು. ಒಂದಕ್ಕೊಂದು ವಿರುದ್ಧ ಧರ್ಮಗಳಿಂದ ಕೂಡಿದ ಅನೇಕ ವಿಧ ಕಾರ್ಯವು ಆಗಬಾರದಾಗಿತ್ತು. ಹೀಗೆಂದು ಶಂಕೆಯನ್ನು ಮಾಡಿದರೆ, ಅನೇಕವಿಧ ಕಾರ್ಯವೂ ಆಗುತ್ತದೆಂದು ದೃಷ್ಟಾಂತವನ್ನು ಕೊಟ್ಟು ಹೇಳುತ್ತಾರೆ.

**ಬಳಿಕ, ಆ ದೃಷ್ಟಾಂತವು ಯಾವುದೆಂದು ಕೇಳಿದರೆ, ಹೇಳುತ್ತಾರೆ.**

**ಅಲರುವದು ನಳಿನ ಮುತ್ಪಲವೆ ಮುಗಿವುದು ಮಣ್ಣು ।**
**ಬಲಿವುದಾಮೇಣವದು ಕರಗುವದು ನಿರಾ ।**
**ಕುಳಭಾನು ಸನ್ನಿಧಿಯೊಳಂತೆ ॥೭॥**

**ಟೀಕಾ:-** ನಳಿನಂ=ಕಮಲವು, ಅಲರುವದು=ಅರಳುವದು, ಉತ್ಪಲವೆ=ನೈದಿಲವೆ, ಮುಗಿವುದು=ಮುಚ್ಚಿಕೊಳ್ಳುವದು, ಮಣ್ಣು=ಮೃತ್ತಿಕೆಯು, ಬಲಿವುದು=ಗಟ್ಟಿಯಾಗುವದು, ಆ ಮೇಣವದು=ಆ ಮೇಣವು, ಕರಗುವದು=ದ್ರವಿಸುವದು, ನಿರಾಕುಲ=ಮೇಘಗಳ ಆವರಣವಿಲ್ಲದ, ಭಾನು=ಸೂರ್ಯನ, ಸನ್ನಿಧಿಯೊಳಂತೆ=ಸನ್ನಿಧಿಯ ಹಾಗೆ,

**ತಾತ್ಪರ್ಯ:-** ಮೇಘಮಂಡಲದ ಆವರಣದಿಂದ ರಹಿತನಾದ ಸೂರ್ಯನು, ತೇಜಃಪುಂಜವಾದ ತನ್ನ ಕಿರಣಗಳಿಂದ ಪ್ರಕಾಶಮಾನನಾಗಿರಲು, ಅವನ ಸನ್ನಿಧಾನದಿಂದ ಕಮಲವು ಅರಳುವದು. ನೈದಿಲೆಯು ಮುಚ್ಚಿಕೊಳ್ಳುತ್ತದೆ. ಕೆಸರಾದ ಮಣ್ಣು ಘಟ್ಟಿಯಾಗಿ ಒಣಗಹತ್ತುತ್ತದೆ. ಮೇಣವು ಕರಗುತ್ತದೆ. ಹೀಗೆ ಪರಸ್ಪರ ವಿರುದ್ಧಗಳಾದ ಅನೇಕ ವಿಧ ಕಾರ್ಯಗಳು ಆಗುವಂತೆ, ಈಶನ ಸನ್ನಿಧಾನ ಸತ್ತಾ ಮೂಲಕ ನಾನಾ ವಿಚಿತ್ರಗಳಾದ ಸೃಷ್ಟಿಯು ಕಾರ್ಯಗಳು ನಡೆದಿರುತ್ತವೆ. ಸನ್ನಿಧಾನ ಕರ್ತೃತ್ವವು ಒಂದೇ ವಿಧವಾದರೂ, ಕಾರ್ಯಗಳು ಒಂದೇ ರೀತಿಯಾಗದೆ, ಅನೇಕ ವಿಧಗಳಾಗುತ್ತವೆಂಬ ಭಾವವು.

ಬಳಿಕ, ಉಕ್ತದೃಷ್ಟಾಂತದಂತೆ ಈಶನ ಸನ್ನಿಧಾನ ಮೂಲಕ ಮಾಯೆಯು, ಅನೇಕ ಪ್ರಕಾರದ ಕಾರ್ಯಗಳನ್ನುಂಟು ಮಾಡುತ್ತದೆ. ಆದರಿಂದ ಈಶ್ವರನಿಗೆ ತತ್ಸಂಬಂಧಿ ಕರ್ತೃತ್ವವು ಆರೋಪವಾಗಿರುತ್ತದೆಂದು ಹೇಳುತ್ತಾರೆ.

ಬಹುವೃತ್ತಿಗಳನೈದಿ ವಿಹರಿಸುತ್ತಿರೆ ಮಾಯೆ ।
ಯಹುದಖಿಳ ಕೃತ್ಯ, ವದೆ ಕರ್ತೃತನವಾಗಿ ।
ಮಹದೀಶ್ವರಂಗೆ ಘಟಿಸುವದು ॥೮॥

ಟೀಕಾಃ- ಮಾಯೆ = ಮಾಯೆಯು, ಬಹುವೃತ್ತಿಗಳನೈದಿ = ಅನೇಕವಿಧ ಕಾರ್ಯರೂಪಗಳಾಗಿ, ವಿಹರಿಸುತ್ತಿರೆ=ಕ್ರೀಡಿಸುತ್ತಿರಲು, ಅಖಿಳ=ಎಲ್ಲ, ಕೃತ್ಯವು= ಕಾರ್ಯವು, ಅಹುದು=ಆಗುವದು, ಅದೆ=ಹೀಗಾಗಿರುವದೇ, ಈಶ್ವರಂಗೆ=ಈಶ್ವರ ನಿಗೆ, ಮಹತ್=ದೊಡ್ಡದಾದ, ಕರ್ತೃತನವಾಗಿ=ಕರ್ತೃತ್ವವಾಗಿ, ಘಟಿಸುವದು= ಸಂಭವಿಸುವದು.

ತಾತ್ಪರ್ಯ:- ಈಶನ ಸನ್ನಿಧಾನ ಸತ್ತೆಯನ್ನು ಪಡೆದಿರುವ ತ್ರಿಗುಣಾತ್ಮಕ ವಾದ ಮಾಯೆಯು, ಅನೇಕ ವಿಚಿತ್ರ ಕಾರ್ಯರೂಪಗಳಾಗಿ ಪರಿಣಮಿಸುತ್ತದೆ. ಅದು ಹೀಗಾಗುತ್ತಿರಲಿಕ್ಕೆ ಇದನ್ನೆಲ್ಲಾ ಈಶನೇ ಮಾಡಿದನೆಂದು ಈಶ್ವರನಲ್ಲಿ ಕರ್ತೃತ್ವದ ಆರೋಪವು ಬರುತ್ತದೆ. ಸೇನಾಪತಿ ಜಯವನ್ನು ಸಂಪಾದಿಸಲು, ರಾಜನು ಜಯಿಸಿದನೆಂಬಂತೆ; ಆಳು ಮಾಡಿದರೆ, ಯಜಮಾನನೇ ಮಾಡಿದ ನೆಂಬಂತೆ; ಮಾಯಾಮೂಲಕ ಜಗತ್ಕರ್ತೃತ್ವವು ಈಶ್ವರನಲ್ಲಿ ತೋರುತ್ತಿರುತ್ತ ದೆಂಬ ಭಾವವು.

ಬಳಿಕ, ಈ ರೀತಿ ಮಾಯೋಪಾಧಿ ಮೂಲಕ ಈಶನು ಸೃಷ್ಟಿಗೆ ಕರ್ತೃವಾಗಿ ತೋರಿದರೂ, **ಅವಿಕಾರಿಯೇ** ಆಗಿರುತ್ತಾನೆಂದು ಹೇಳುತ್ತಾರೆ.

**ಇಂತೀಶನವಿಕಾರದಿಂ ತಾನೆ ಜೀವ ಜಗ ।**
**ಮಂ ತೋರಿ ಚೇಷ್ಟಿಸುವನು ಕರ್ತೃತ್ವೇತಿ ।**
**ಮುಂತಾದ ಸೂತ್ರವಿಹವಾಗಿ ॥೯॥**

**ಟೀಕಾ:-** ಇಂತು=ಈ ರೀತಿ, ಈಶನು=ಪರಮಾತ್ಮನು, ಅವಿಕಾರದಿಂ= ವಿಕಾರನಾಗದೆ, ತಾನೆ=ಸ್ವಯಂ, ಜೀವ=ಜೀವವನ್ನು, ಜಗಮಂ=ಜಗತ್ತನ್ನು, ತೋರಿ=ಉತ್ಪತ್ತಿ ಮಾಡಿ, ಚೇಷ್ಟಿಸುವನು=ಪ್ರೇರಣೆಯನ್ನು ಮಾಡುತ್ತಿರುವನು, ಕರ್ತೃತ್ವೇತಿ=ಈಶನು ಜಗತ್ಕರ್ತನೆಂದು, ಮುಂತಾದ=ವೊದಲಾದ, ಸೂತ್ರವಿಹ ವಾಗಿ=ಸೂತ್ರಗಳಿರುವದರಿಂದ.

ತಾತ್ಪರ್ಯ:- ಮೇಲೆ ಹೇಳಿರುವ ಪ್ರಕಾರ ಈಶನು ಮಾಯೋಪಾಧಿ ಮೂಲಕ, ಜೀವಜಗತ್ತನ್ನುಂಟು ಮಾಡಿ, ರಕ್ಷಿಸಿ, ಪ್ರೇರಿಸಿ, ಸಂಹರಿಸಿದಾಗ್ಯಾ ದರೂ; ತಾನು ಮಾತ್ರ ನಿರ್ವಿಕಾರನಾಗಿಯೇ ಇರುತ್ತಾನೆ. ಯಾವ ವಿಕಾರಗಳ

ಸಂಬಂಧವೂ ಅವನಿಗೆ ಇಲ್ಲವೆಂದು ತಿಳಿ. ಈ ಮಾತನ್ನು ನಾವೇ ಹೇಳುವದಿಲ್ಲ. ಕಿಂತು, ವ್ಯಾಸಸೂತ್ರವಾದರೂ ಹೇಳುತ್ತದೆ. ಏನಂದರೆ, **'ಈಡಾಯತ್ತ ಮಾಯಾ ಸರ್ವಜ್ಞ, ಸರ್ವಕರ್ತೇತಿ'** ಈಟ್ ಅಂದರೆ, ಈಶನು ಮಾಯೆಯನ್ನು ತನ್ನಾಧೀನವಾಗಿಟ್ಟುಕೊಂಡಿದ್ದಾನೆ. ಜೀವನಂತೆ ಮಾಯಾಧೀನನಾಗದೆ, ಅದನ್ನು ತನ್ನಾಧೀನವಾಗಿರುವಂತೆ ಮಾಡಿಕೊಂಡಿರುವನು. ಅದರ ಮೂಲಕ ಈಶನಿಗೆ ಸರ್ವಜ್ಞನೆಂದೂ ಜಗತ್ಕರ್ತನೆಂದೂ ಕರೆಯಲಾಗುತ್ತದೆಂದು ಸೂತ್ರಗಳು ಹೇಳುತ್ತವೆ. ಹೀಗೆ ಜಗದುತ್ಪತ್ತಿ, ಸ್ಥಿತಿ, ನಾಶಂಗಳಿಗೆ ಕರ್ತನಾದರೂ ಸ್ವರೂಪತಃ **ಅಕರ್ತಾ ಅವಿಕಾರಿಯಾಗಿರುವನೆಂದು** ತಿಳಿಯೆಂಬ ಭಾವವು.

**ಈಶ್ವರಂಗೆ ಅವಿಕಾರತ್ವ ನಿರೂಪಣೆ ಸೂತ್ರ ೬೯೬, ತ್ರಿವಿಧಿ ೭೬.**

ಬಳಿಕ, ಹಿಂದಿನ ಸೂತ್ರದಲ್ಲಿ ಈಶ್ವರನಿಗೆ ಸಂಕಲ್ಪರೂಪ ನಿತ್ಯವಾದ ಇಚ್ಛಾಕರ್ತೃತ್ವವನ್ನು ಹೇಳಿದರೆ, ಸೃಷ್ಟಿಯು ನಾಶವಾಗದೆ ನಿತ್ಯವಾಗಿರಬೇಕಾಯಿತು. ಗುರು, ಶಾಸ್ತ್ರ. ಮೋಕ್ಷಾದಿಗಳು ವ್ಯರ್ಥವಾಗಬೇಕಾಯಿತು. ಆದ್ದರಿಂದ ಸಂಕಲ್ಪ ಕರ್ತೃತ್ವವು ಯೋಗ್ಯವಲ್ಲ. ಕುಲಾಲನಂತೆ ಕರಣಕರ್ತೃತ್ವವನ್ನು ಅಂಗೀಕರಿಸಿದರೆ, ಈಶನು ಮನುಷ್ಯನಂತೆ ಉತ್ಪತ್ತಿ ನಾಶಗಳುಳ್ಳವನಾಗಬೇಕಾಗುವದು. ಆದ್ದರಿಂದ ಕರಣಕರ್ತೃತ್ವವು ಯೋಗ್ಯವಲ್ಲ. ಕಿಂತು, ಸೂರ್ಯನಂತೆ ಸನ್ನಿಧಾನ ಕರ್ತೃತ್ವವೇ ಸರಿಯಾಗಿದೆ. ಇದರಲ್ಲಿ ಯಾವ ದೋಷಗಳು ಇಲ್ಲೆಂದು ಹೇಳಿದರು.

ಈ ಸೂತ್ರದಲ್ಲಿ ಶಿಷ್ಯನು ಪುನಃ ಪ್ರಶ್ನೆಯನ್ನು ಮಾಡುತ್ತಾನೆ. ಏನಂದರೆ, ಸೂರ್ಯನ ಪ್ರತಿಬಿಂಬನ್ಯಾಯದಂತೆ, ಶಿವಜೀವರಿರುತ್ತಾರೆ. ಅವರಲ್ಲಿ ಪ್ರೇರ್ಯ ಪ್ರೇರಕಭಾವವು ಸಂಭವಿಸುತ್ತದೆಂದು ಪೂರ್ವದಲ್ಲಿ ಹೇಳಿದಿರಿ. ಇದರಿಂದ ಪ್ರತಿಬಿಂಬಿತನಾದ ಜೀವನು ಬಿಂಬರೂಪ ಶಿವನಾಗಿಯೇ ಇರಬೇಕಾಗುತ್ತದೆ. ಅದರಿಂದ ಶಿವಜೀವರಿಬ್ಬರಿಗೂ ಐಕ್ಯವು ಆಗುತ್ತದೆ. ಆಗ್ಯೆ ಜೀವನೊಡನಿದ್ದ ವಿಕಾರ ದೋಷವು ಈಶನೊಡನೆ ಕೂಡುತ್ತದೆ. ಅದರಿಂದ ನಿರ್ವಿಕಾರನಾದ ಈಶನು ವಿಕಾರವುಳ್ಳವನು ಆಗ ಬೇಕಾಗುವದು. ಆದ್ದರಿಂದ ಈಶ್ವರನು ನಿರ್ವಿಕಾರನಾಗಿರುವನೆಂದು ಹೇಳಲಿಕ್ಕೆ ಬರುವದಿಲ್ಲ. ಎಂದು ಶಿಷ್ಯನು ಪ್ರಶ್ನೆಯನ್ನು ಮಾಡಲು, ಅದಕ್ಕೆ ಗುರುಗಳು ಮುಂದೆ ಹೇಳುವ ರೀತಿ ಉತ್ತರವನ್ನು ಹೇಳುತ್ತಾರೆ.–'ಹೇಶಿಷ್ಯನೇ! ಕೇಳು ಕನ್ನಡಿಯನ್ನು ಬೆಂಕಿಯಲ್ಲಿ ಹಾಕಿದ್ದೇವೆಂದು ತಿಳಿ. ಆ ಕನ್ನಡಿಯಲ್ಲಿ ಪ್ರತಿಬಿಂಬ ಮುಖವು ಬೆಂಕಿ ಹತ್ತಿ ಸುಟ್ಟರೂ, ನಿಜವಾದ ಬಿಂಬ ಮುಖಕ್ಕೆ ಬೆಂಕಿಯೇನಾದರು ಹತ್ತುವದೇ? ಇಲ್ಲ. ಇದರಂತೆ, ಪ್ರತಿಬಿಂಬನಾದ ಜೀವನು ಕರ್ತೃತ್ವ, ಭೋಕ್ತೃತ್ವ, ಸುಖ ದುಃಖಾದಿ ಅನೇಕ ಸಂಸಾರ ಧರ್ಮಗಳಿಂದ **ವಿಕಾರಿಯಾಗಿ** ತೋರಿದರೂ, ಬಿಂಬ

ರೂಪನಾದ ಶಿವನಿಗೆ ತತ್ಸಂಬಂಧಿ **ವಿಕಾರದೋಷವು** ಎಳ್ಳಷ್ಟೂ ಇಲ್ಲ. ಇಷ್ಟೇ ಅಲ್ಲ. ಪ್ರತಿಬಿಂಬರೂಪ ಜೀವನು ವಿಕಾರಿಯಾಗಿ ತೋರುವದೂ ನಿಜವಲ್ಲ. ಅದು ಉಪಾಧಿ ಸಂಬಂಧವಾದದ್ದು. ಆ ವಿಕಾರವು ಉಪಾಧಿಯಲ್ಲಿ ಸಹಜವಾದದ್ದು; ಪ್ರತಿಬಿಂಬ ಜೀವನಲ್ಲಿ **ಆರೋಪಿತವಾಗಿದೆ.** ಗಮನವು ಮೇಘದಲ್ಲಿ ಸಹಜ, ಚಂದ್ರನಲ್ಲಿ ಆರೋಪಿತವಾಗಿದೆ. ಅದರಿಂದ ಚಂದ್ರನು ಓಡುತ್ತಾನೆಂಬಂತೆ ಕಂಡು ಬರುತ್ತದೆ. ಚಂದ್ರನಲ್ಲಿ ಗಮನವು ಆರೋಪಿತವಾಗಿದೆ. ಈ ದೃಷ್ಟಾಂತದಂತೆ' ಅಹಂಕಾರಾದಿ ಸಂಸಾರ ವಿಕಾರಿತ್ವ ಧರ್ಮವು ಜೀವನಲ್ಲಿ ಆರೋಪಿತವಾಗಿದೆ. ಚನ್ನಾಗಿ ವಿಚಾರಮಾಡಿನೋಡಿದರೆ, ಜೀವನೂ **ನಿರ್ವಿಕಾರನಾಗಿರುತ್ತಾನೆ.** ಜೀವನೇ ನಿರ್ವಿಕಾರನಾಗಿರುವನು. ಅಂದಮೇಲೆ, ಈಶ್ವರನು ನಿರ್ವಿಕಾರನೆಂದು ಕೈಮುತಿಕ ನ್ಯಾಯದಿಂದ ಇನ್ನೇನು ಹೇಳತಕ್ಕದ್ದು. ಆದರೆ ಇಲ್ಲಿ ರಹಸ್ಯವದೆ. ಏನಂದರೆ, **'ದುರ್ಜನಃ ತುಷ್ಯತು,** ದುರ್ಜನನು ಶಾಂತನಾಗಲಿ ಎಂಬ ನ್ಯಾಯಾನುಸಾರವಾಗಿ, ಅಂದರೆ, ದುರ್ಜನನು ಹೇಳುವ ಬುದ್ಧಿಮಾತು ಕೇಳುವದಿಲ್ಲ. ಆದರೂ ಬುದ್ಧಿವಂತರು ಅವನು ಹೇಳುವ ಮಾತನ್ನು ತಾವು ಕೇಳುತ್ತ ಅವನನ್ನು ಒಳ್ಳೇದಾರಿಗೆ ತರುತ್ತಾರೆ. ಈ ದೃಷ್ಟಾಂತದಂತೆ, ಗುರುಗಳು, ಇಲ್ಲಿ ಶಿಷ್ಯನು ಜೀವನು ವಿಕಾರಿಯಾಗಿರುವನೆಂಬ ಮಾತನ್ನು ಕೇಳಿ ಒಪ್ಪಿಕೊಂಡು' ಈಶನಿಗೆ ನಿರ್ವಿಕಾರವನ್ನು ಹೇಳಿದರು. ಅನಂತರ ಆ ಜೀವನು ವಿಕಾರಿಯು ಅಲ್ಲ. ಜೀವನಲ್ಲಿಯೂ ವಿಕಾರತ್ವ ಸಂಭವಿಸುವದಿಲ್ಲ. ಎಂದು ಹೇಳುತ್ತಾ; ಈಶನಲ್ಲಿ ಮತ್ತು ನಿರ್ವಿಕಾರತ್ವವನ್ನು ತೋರಿಸಿದ್ದಾರೆ. ವಾದಿಯು ಮಾಡುವ ಶಂಕೆಯನ್ನು ಒಪ್ಪಿಕೊಂಡೂ ಅವನಿಗೆ ಸಿದ್ಧಾಂತವನ್ನು ಬೋಧಿಸುವದು ಇದು ಮಹತ್ತ ಕೌಶಲವಾಗಿರುತ್ತದೆಂಬ ಭಾವವು.

ಈಶನೊಬ್ಬನೇ ನಿರ್ವಿಕಾರಿ; ಜೀವನು ವಿಕಾರಿಯೆಂದು ಹೇಳಿದರೆ, ಇದು ಸರಿಯಲ್ಲ. ಯಾಕಂದರೆ; ಜೀವನು ವಿಕಾರಿಯಾಗಿದ್ದರೆ **'ತತ್ತ್ವಮಸಿ' 'ಅಯಮಾತ್ಮಾಬ್ರಹ್ಮ,' 'ಪ್ರಜ್ಞಾನಂ ಬ್ರಹ್ಮ,' 'ಅಹಂಬ್ರಹ್ಮಾಸ್ಮಿ,'** ಈ ಮಹಾ ವಾಕ್ಯಗಳು ಜೀವಶಿವರಿಗೆ ಐಕ್ಯವನ್ನು ಬೋಧಿಸಬಾರದಾಗಿತ್ತು; ಬೋಧಿಸುತ್ತವೆ. ಅದರಿಂದ **ಅರ್ಥಾಪತ್ತಿ** ಪ್ರಮಾಣದಿಂದಲೂ ಜೀವನು ನಿರ್ವಿಕಾರಿಯಾಗಿರುವನೆಂದು ಸಿದ್ಧವಾಗುತ್ತದೆ. ಆದ್ದರಿಂದ ಜೀವನೇ ನಿರ್ವಿಕಾರಿಯಾದ ಮೇಲೆ; ಶಿವನು ನಿರ್ವಿಕಾರಿಯಾಗುವದರಲ್ಲಿ ಆಶ್ಚರ್ಯವೇನಿದೆ? ಎಂಬ ಭಾವವು. ಅರ್ಥಾತ್ ಇಬ್ಬರಲ್ಲಿಯೂ **ನಿರ್ವಿಕಾರಲಕ್ಷಣ**ಒಂದಾದ್ದರಿಂದ ಲಕ್ಷ್ಯವಾದ ಜೀವಶಿವರ ಸ್ವರೂಪವೂ **ಒಂದೇ ಆಗಿರುವದೆಂದು** ಹೇಳಿದಂತಾಯಿತು.

ಸಂಕ್ಷಿಪ್ತವಾಗಿ ಹೇಳಿದ ಈ ವಿಷಯವನ್ನೇ ಈ ಸೂತ್ರದಲ್ಲಿ ವಿಸ್ತಾರಪೂರ್ವಕ ತಿಳಿಸುತ್ತಾರೆ.

**ಸೂತ್ರ:- ಜೀವಂಗೆ ಸಕಲ ಸಂಸಾರ ವೆಂಬುದನು ಪರಿ ।**
**ಭಾವಿಸಲು ಪರಮಾರ್ಥವಲ್ಲ ನೋಡ ||**

**ಟೀಕಾ:**-ಜೀವಂಗೆ=ಜೀವಾತ್ಮನಿಗೆ, ಸಕಲ=ಎಲ್ಲ, ಸಂಸಾರವೆಂಬುದನು= ಪ್ರಪಂಚವೆಂಬುದನ್ನು, ಪರಿಭಾವಿಸಲು=ವಿಚಾರಮಾಡಲಾಗಿ, ಪರಮಾರ್ಥವಲ್ಲ ನೋಡು=ಯಥಾರ್ಥವಾದದ್ದು,ಅಲ್ಲ. ಎಂಬುದು ತಿಳಿ.

**ತಾತ್ಪರ್ಯ:**- ಜನನ, ಮರಣ, ಸುಖ, ದುಃಖ, ಕರ್ತೃತ್ವ, ಭೋಕ್ತೃತ್ವ ರೂಪ ಸಂಸಾರವು ಜೀವನಲ್ಲಿ ತೋರುತ್ತದೆ. ತೋರಿದರೂ ಅದು ಜೀವನಿಗೆ ನಿಜ ವಾದದ್ದು ಅಲ್ಲ. ಯಾಕಂದರೆ, ದೇಹಾದಿ ಅಹಂಕಾರಗಳ ಸಂಬಂಧದಿಂದ ತೋರಿ ರುವದೇ ಹೊರತು; ಜೀವನ ನಿಜ ಸ್ವರೂಪದಲ್ಲಿ ಅದು ಇಲ್ಲ. ಸ್ಫಟಿಕವು ಕೆಂಪಾ ಗಿದೆಯೆಂದು ತೋರಿದರೂ, ಆ ಕೆಂಪು ದಾಸನಾಳ ಹೂವಿನದು ಆಗಿರುತ್ತದೆ. ಸ್ಫಟಿ ಕವು ಸ್ವರೂಪತಃ ಶುಭ್ರವೇ ಇರುವದು. ಕಿಂತು ದಾಸವಾಳದ ಹೂವಿನ ಸಂಬಂಧ ದಿಂದ ಸ್ಫಟಿಕವು ಕೆಂಪಾಗಿ ತೋರಿದಂತೆ, ಅಹಂಕಾರಾದಿ ಅನಾತ್ಮ ವರ್ಗಗಳ ಉಪಾಧಿಯಿಂದ ಅಸಂಸಾರಿಯಾದ ಆತ್ಮನು ಸಂಸಾರಿಯೆಂಬಂತೆ ತೋರುವನು. ನಿಜವಾಗಿ ಅವನ ಸ್ವರೂಪವನ್ನು ಚನ್ನಾಗಿ ವಿಚಾರ ಮಾಡಿದರೆ, ನಿತ್ಯಶುದ್ಧ ಮುಕ್ತನೇ ಇರುವನು. ಈ ರೀತಿ ಜೀವನೇ ನಿರ್ವಿಕಾರಿಯಾಗಿರುತ್ತಿರಲಿಕ್ಕೆ; ಈಶ್ವರನು ನಿರ್ವಿಕಾರಿಯಾಗುವನೆಂಬುದನ್ನು ಇನ್ನೇನು ಹೇಳತಕ್ಕದ್ದೆಂಬ ಭಾವವು.

**ಬಳಿಕ,** ಶಿಷ್ಯನು ಪ್ರಶ್ನೆಯನ್ನು ಮಾಡುವ ಉದ್ದೇಶವನ್ನಿಟ್ಟುಕೊಂಡು ಮೊದಲು ಗುರುಸ್ತುತಿಯನ್ನು ಮಾಡುತ್ತಾನೆ.

**ಶ್ರೀಗುರುವೇ ಭವ ಮಹಾರೋಗ ಸಂಕುಲ ವೈದ್ಯ ।**
**ಯೋಗಿಜನ ವಂದ್ಯ ನಿಜಸುಖ ಪ್ರದನೆ ಕೃಪೆ ।**
**ಯಾಗಿ ಬಿನ್ನಪವನವಧರಿಸು ||೧||**

**ಟೀಕಾ:**- ಶ್ರೀಗುರುವೇ=ಸದ್ಗುರುನಾಥನೇ, ಭವ=ಜನನ ಮರಣವೆಂಬ, ಮಹಾರೋಗ ಸಂಕುಲ=ಈ ಮಹಾರೋಗಾದಿಗಳ ಸಮೂಹಕ್ಕೆ, ವೈದ್ಯ=ವೈದ್ಯ ರೂಪನೇ, ಯೋಗಿಜನ=ಯೋಗಿಜನಗಳಿಂದ, ವಂದ್ಯ=ನಮಸ್ಕಾರ ಮಾಡಿಸಿ ಕೊಳ್ಳುವದಕ್ಕೆ ಯೋಗ್ಯನಾದ, ನಿಜಸುಖ ಪ್ರದನೆ=ನಿಜಾನಂದವನ್ನುಂಟು ಮಾಡು ವಾತನೇ, ಕೃಪೆಯಾಗಿ=ದಯುವಿಟ್ಟು, ಬಿನ್ನಪವನು=ಪ್ರಶ್ನೆಯನ್ನು, ಅವಧರಿಸು= ಕೇಳು.

**ತಾತ್ಪರ್ಯ:**- ಹೇ ಸದ್ಗುರುವೇ! ನೀನು ನನ್ನ ಈ ಭವರೋಗವನ್ನು ಕಳೆಯುವದಕ್ಕೆ ವೈದ್ಯನಾಗಿರುವಿ. ಪುನಃ ಪುನಃ ಜನನ ಮರಣಾತ್ಮಕವಾದ ಈ

ಭವರೋಗವು ಮಹರೋಗವಾಗಿರುವದು. ಅಂದರೆ, ಈ ರೋಗವು ಅನಾದಿಕಾಲ ದಿಂಪಲೂ ಬಿಡದೆ ಬೆನ್ನುಹತ್ತಿರುವದು. ಯಾರಿಂದಲೂ ಯಾವ ಉಪಾಯ ದಿಂದಲೂ ಈ ರೋಗದ ನಿವೃತ್ತಿಯು ಆಗುವದಿಲ್ಲ. ನಿನ್ನಿಂದಲೇ ಈ ರೋಗವು ನಿವೃತ್ತಿಯಾಗುವದು. ಈ ಭವರೋಗ ನಿವೃತ್ತಿಗೆ ಯೋಗ್ಯವಾದ ಜ್ಞಾನಮಾತ್ರಾ ರೂಪ ದಿವ್ಯೌಷಧವೂ ನಿನ್ನಲ್ಲಿಯೇ ಇರುವದು. ಆದ್ದರಿಂದಲೇ ಅನೇಕ ಯೋಗಿ ಜನರು ನಿನ್ನನ್ನೇ ಕುರಿತು ಶರಣಾಗತರಾಗುತ್ತಾರೆ. ಅವರೆಲ್ಲರು ನಿನ್ನನ್ನು ನಮ ಸ್ಕರಿಸಿ, ಪೂಜಿಸಿ, ಸ್ತುತಿಸಿ, ನಿನ್ನ ಕೃಪೆಯನ್ನು ಸಂಪಾದಿಸಿಕೊಂಡು ಈ ಭವ ರೋಗಪೀಡೆಯಿಂದ ನಿರ್ಮುಕ್ತರಾಗಿ, ನಿಜಾನಂದ ಆರೋಗ್ಯದಲ್ಲಿ ಯಾವಾಗಲೂ ಮಗ್ನಚಿತ್ತವುಳ್ಳವರಾಗುವರು. ಅಂದರೆ, ಅತ್ಯಂತ ದುಃಖ ನಿವೃತ್ತಿ, ಪರಮಾ ನಂದ ಪ್ರಾಪ್ತಿರೂಪ ಮಹತ್ಪ್ರಯೋಜನವನ್ನುಂಟುಮಾಡುವಂಥಾ ಗುರು ವರ್ಯನೇ! ನೀನು ನನ್ನ ಪ್ರಶ್ನೆಯನ್ನು ಕೇಳಿ ನನಗೆ ಸರಿಯಾದ ಉತ್ತರವನ್ನು ದಯಪಾಲಿಸಿ, ನನ್ನ ಸಂಶಯಗಳನ್ನು ಕಳೆದು, ನನಗೂ ನಿಜಸುಖವನ್ನು ಕೊಡು. ಎಂಬ ಅಭಿಪ್ರಾಯವುಳ್ಳವನಾಗಿರುವನು.

ಬಳಿಕ; ಶಿಷ್ಯನು ತನ್ನ ಮನೋಗತ ಸಂಶಯವನ್ನು ಗುರುವಿಗೆ ನಿವೇದನ ಮಾಡುತ್ತಾನೆ.

**ತರಣಿ ತತ್ಪ್ರತಿಬಿಂಬ ವೆರಡರಂತೀಶಾತ್ಮ ।**
**ರಿರುತಿರ್ಪರೆಂದು ಮಗುಳೆ ನಿರ್ವಿಕೃತಿಯೆನೆ ।**
**ಪರಮಂಗೆ ಪೇಳ್ದಿರೆಲೆ ದೇವ ॥೨॥**

**ಟೀಕಾ:-** ಎಲೆದೇವ=ಎಲೈ ಗುರುವೇ!, ತರಣಿ=ಸೂರ್ಯನು, ತತ್ಪ್ರತಿ ಬಿಂಬವು=ಸೂರ್ಯನ ಪ್ರತಿಬಿಂಬವು, ಎರಡರಂತೆ=ಬಿಂಬ ಪ್ರತಿಬಿಂಬಗಳಂತೆ, ಈಶಾತ್ಮರಿರುತಿರ್ಪರೆಂದು=ಜೀವೇಶರಿರುತ್ತಿರುವರೆಂದು, ಮಗುಳೆ=ಅನಂತರ, ಪರ ಮಂಗೆ=ಪರಮಾತ್ಮನಿಗೆ, ನಿರ್ವಿಕೃತಿಯೆನೆ=ನಿರ್ವಿಕಾರವನ್ನೇ, ಪೇಳ್ದಿರಿ=ಹೇಳಿದಿರಿ.

**ತಾತ್ಪರ್ಯ:-** ಸೂರ್ಯನು ಮತ್ತು ಅವನ ಪ್ರತಿಬಿಂಬ ಇವೆರಡಕ್ಕೆ ಅಭೇದವಿರುತ್ತದೆ. ಯಾಕಂದರೆ, ಬಿಂಬವೇ ಪ್ರತಿಬಿಂಬವಾಗಿದೆ. ಉಪಾಧಿಯಿಂದ ಎರಡಾಗಿ ತೋರಿದರೂ ಸ್ವರೂಪತಃ ಒಂದೇ ಆಗಿರುತ್ತದೆ. ಈ ದೃಷ್ಟಾಂತದಂತೆ ಶಿವಜೀವರು ಉಪಾಧಿ ದೃಷ್ಟಿಯಿಂದ ಬೇರೆಯಾದರೂ, ಸ್ವರೂಪತಃ ಒಂದಾಗಿರುವ ರೆಂದು ನನಗೆ ಪೂರ್ವದಲ್ಲಿ ಪ್ರತಿಪಾದನೆಯನ್ನು ಮಾಡಿದಿರಿ. ಹೀಗೆ ಪ್ರೇರ್ಯ ಪ್ರೇರಕತ್ವ ಸಂಭವಿಸಿದರೂ, ನಿರ್ವಿಕಾರದಿಂದ ಇರುವರೆಂಬುದನ್ನು ಹೇಳಿದಿರಿ. ಈ ದೃಷ್ಟಾಂತವನ್ನು ಕೇಳಿ ನನ್ನ ಮನಸ್ಸಿನಲ್ಲಿ ಸಂಶಯವು ಬರುತ್ತದೆ.

ಬಳಿಕ, ಆ ಸಂಶಯವನ್ನು ವಿಶೇಷವಾಗಿ ಈ ಶ್ಲೋಕದಲ್ಲಿ ಹೇಳುತ್ತಾನೆ.

**ಬಿಂಬವೇ ಪಡಿಬಿಂಬವೆಂಬಂತೆ ಶಿವ ಜೀವ ।**
**ರೆಂಬವರ್ಗೈಕ್ಯವಾಗಿ ಜೀವನ ವ್ರೋಲೀ ।**
**ಶಂ ಬಂಧವಡೆವನೆನಬೇಕು ॥೩॥**

**ಟೀಕಾ:-** ಬಿಂಬವೇ ಪಡಿಬಿಂಬವೆಂಬಂತೆ=ಬಿಂಬವೇ ಪ್ರತಿಬಿಂಬವಾಗಿದೆ ಯೆಂದು ಹೇಳುವಂತೆ, ಶಿವಜೀವರೆಂಬುವರ್ಗೆ=ಶಿವಜೀವರೆಂದು ಹೇಳಿಸಿಕೊಳ್ಳುವ ವರಿಗೆ, ಐಕ್ಯವಾಗಿ=ಅಭೇದವಾಗಿರುವದರಿಂದ, ಜೀವನವ್ರೋಲ್=ಜೀವನಹಾಗೆ, ಈಶಂ=ಈಶ್ವರನು, ಬಂಧವಡೆವನು=ಬಂಧವುಳ್ಳವನು. ಎನಬೇಕು=ಅನ್ನಲಿಕ್ಕೇ ಬೇಕಾಗುವದು.

ತಾತ್ಪರ್ಯ:- ಬಿಂಬವೇ ಪ್ರತಿಬಿಂಬವಾಗಿರಲಿಕ್ಕೆ ಮತ್ತು ಎರಡಕ್ಕೂ ಪರ ಸ್ಪರ ಅಭೇದವನ್ನು ಹೇಳುತ್ತಿರುವ ಕಾರಣದಿಂದ, ಪ್ರತಿಬಿಂಬವೇ ಬಿಂಬವಾಗಿದೆ. ಈ ನ್ಯಾಯದಿಂದ ಜೀವೇಶ್ವರರಿಬ್ಬರು ಅಭೇದ ರೂಪದಿಂದ ಇರುತ್ತಾರೆ. ಹಾಗಾದರೆ ಜೀವನು ಕರ್ತೃತ್ವ, ಭೋಕ್ತೃತ್ವ, ಸುಖದುಃಖ, ಜನನ ಮರಣಾದಿ ಸಂಸಾರ ಬಂಧದಿಂದ ಕೂಡಿರುವಂತೆ, ಈಶನಾದರೂ ಬಂಧವುಳ್ಳವನಾಗಿರುವನೆಂದು ಹೇಳ ಬೇಕಾಗುತ್ತದೆ. ಆಗಲಿ. ಅಂದರೆ ? ಸೃಷ್ಟಿಕರ್ತೃತ್ವವು ಉಪಾಸ್ಯಭಾವವು, ಫಲ ದಾತೃತ್ವವು, ಸಂಭವಿಸಲಾರವು. ಬಂಧವಿಲ್ಲೆಂದು ಹೇಳಿದರೆ, ಶಿವಜೀವರಿಗೆ ಅಭೇದ ಸಂಭವಿಸುವದಿಲ್ಲ. ಭೇದವಾಗಿರುತ್ತಾರೆಂದು ಹೇಳಬೇಕಾಗುವದು. ಮತ್ತು ಉಕ್ತದೃಷ್ಟಾಂತವು ಸರಿಯಾಗದು. ಎಂದು ಶಂಕೆಯನ್ನು ಮಾಡಿದನು.

**ಬಳಿಕ,** ಶಿಷ್ಯನು ತನ್ನಲ್ಲಿ ತೋರಿದ ಸಂಶಯವನ್ನು ನಿವಾರಣೆಮಾಡ ಬೇಕೆಂದು ಗುರುಗಳನ್ನು ಕುರಿತು ಬೇಡಿಕೊಳ್ಳುತ್ತಾನೆ.

**ನೀವಿದಂ ಕೇಳಿ ಪರಿಭಾವಿಸುತ್ತೆನ್ನ ದು।**
**ರ್ಭಾವಮಂ ಬಿಡಿಸಬೇಕೆನೆ ಸುತಂಗೆ ಗುರು ।**
**ದೇವನೊಲಿದಿಂತು ಬೆಸಸಿದನು ॥೪॥**

**ಟೀಕಾ:-** ನೀವಿದಂಕೇಳಿ=ತಾವು ಈ ವಿಷಯವನ್ನು ಕೇಳಿಕೊಂಡು, ಪರಿ ಭಾವಿಸುತ್ತ=ಚೆನ್ನಾಗಿ ವಿಚಾರಮಾಡುತ್ತ, ಎನ್ನ ದುರ್ಭಾವಮಂ=ನನ್ನ ಅವಿವೇಕ ತನವನ್ನು, ಬಿಡಿಸಬೇಕು=ನಿವಾರಣೆ ಮಾಡಬೇಕು. ಎನೆ=ಹೀಗೆನ್ನಲಾಗಿ, ಸುತಂಗೆ=ಶಿಷ್ಯನಿಗೆ, ಗುರುದೇವನು=ಗುರುವರ್ಯನು, ಒಲಿದು=ಪ್ರಸನ್ನನಾಗಿ, ಇಂತು=ಈರೀತಿ, ಬೆಸಸಿದನು=ಉತ್ತರವನ್ನು ಹೇಳಿದನು.

**ತಾತ್ಪರ್ಯ:-** ಉಕ್ತ ನನ್ನ ಪ್ರಶ್ನೆಯನ್ನು ತಾವು ಕೇಳಿ, ಅದನ್ನು ಚನ್ನಾಗಿ ಮನಸ್ಸಿನಲ್ಲಿ ತಂದುಕೊಂಡು, ನನ್ನಲ್ಲಿ ಯಾವ ವಿಪರೀತ ತಿಳವಳಿಕೆಯಾಗಿರುವದೋ, ಅದನ್ನು ನಿವೃತ್ತಿ ಪಡಿಸಬೇಕು. ಎಂದು ಶಿಷ್ಯನು ಪ್ರಶ್ನೆಯನ್ನು ಮಾಡಲು, ಅದಕ್ಕೆ ಗುರುಗಳು-'ಹೇಶಿಷ್ಯನೇ ! ನೀನು ಮಾಡಿದ ಪ್ರಶ್ನೆಯು ಯೋಗ್ಯವಾಗಿರುವದು. ಅದಕ್ಕೆ ಸರಿಯಾದ ಉತ್ತರವನ್ನು ಹೇಳುತ್ತೇನೆ ಕೇಳು. ಎಂದು ಗುರುಗಳು ಉತ್ತರವನ್ನು ಹೇಳುತ್ತಲಿದ್ದಾರೆ.

ಬಳಿಕ, ಗುರುಗಳು 'ಜೀವನ ಬಂಧವು ಈಶನಿಗೆ ಆಗುವದಿಲ್ಲ. ಹೇಗಂದರೆ, ಸುಡುವ ಕನ್ನಡಿಯೊಳಗಿರುವ ಮುಖದ ಪ್ರತಿಬಿಂಬಕ್ಕಾಗುವ ದಾಹಕತ್ವವು, ನಿಜ ಮುಖವಾದ ಬಿಂಬಕ್ಕೆ ಇರದಂತೆ; ಜೀವನ ಬಂಧವು ಈಶನಿಗೆ ಇರುವದಿಲ್ಲೆಂದು ತಿಳಿ. ಎಂಬದಾಗಿ ಉತ್ತರವನ್ನು ಹೇಳುತ್ತಾರೆ.

**ಸುಡುವ ಕನ್ನಡಿಯೊಳಿರ್ದೊಡೆ ನಿಜಾಸ್ಯಂ ಬೇಗೆ ॥**
**ವಡೆಯುದಂತಹಮು ವಿಡಿದ ಜೀವನ ವಿಕೃತಿ ।**
**ಯಡಸದೀಶಂಗೆ ಧಿಟವಾಗಿ ॥೫॥**

**ಟೀಕಾ:-** ನಿಜಾಸ್ಯಂ=ತನ್ನ ನಿಜವಾದ ಮುಖವು, ಸುಡುವ ಕನ್ನಡಿಯೊಳು= ಅಗ್ನಿಯಿಂದ ದಹಿಸುತ್ತಿರುವ ಕನ್ನಡಿಯಲ್ಲಿ, ಇರ್ದೊಡೆ=ಇದ್ದಾಗ್ಯಾದರೂ, ಬೇಗೆ ವಡಿಯದಂತೆ=ಸುಡದಹಾಗೆ, ಅಹಮು ವಿಡಿದ=ಅಹಂಕಾರದಿಂದ ಕೂಡಿದ, ಜೀವನ ವಿಕೃತಿ=ಸಂಸಾರವು, ಧಿಟವಾಗಿ=ಸತ್ಯವಾಗಿ, ಈಶಂಗೆ=ಈಶ್ವರನಿಗೆ, ಅಡಸದು= ಪ್ರಾಪ್ತಿಯಾಗದು.

**ತಾತ್ಪರ್ಯ:-** ಹೇ ಶಿಷ್ಯನೇ !, ಕೇಳು. ಪ್ರತಿಬಿಂಬರೂಪ ಜೀವನಿಗಾದ ಸಂಸಾರವು; ಬಿಂಬನಾದ ಶಿವನಿಗೂ ಸಂಭವಿಸುತ್ತದೆಂದು ಹೇಳುವದು ಸರಿಯಲ್ಲ. ಯಾಕಂದರೆ, ಇದು ಅನುಭವಕ್ಕೆ ವಿರೋಧವಾಗಿರುತ್ತದೆ. ಹೇಗಂದರೆ, ಉರಿಯುತ್ತಿರುವ ಅಗ್ನಿಯಲ್ಲಿ ಒಂದು ಕನ್ನಡಿಯನ್ನು ಇರಿಸಿ, ಅದರಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಾನೆ. ಆಗ್ಯೆ ತನ್ನ ಮುಖದ ಪ್ರತಿಬಿಂಬವು ಆ ಕನ್ನಡಿಯಲ್ಲಿ ಪ್ರತಿಬಿಂಬಿಸಿ' ತಾನೂ ಸುಡುತ್ತಿರುವಂತೆ ತೋರುತ್ತದೆ. ಆದರೂ ನಿಜವಾದ ಮುಖವು ಮಾತ್ರ ಯಾವ ದಾಹಕಾದಿ ದೋಷದಿಂದ ಬೆರೆಯದೆ,ನಿರ್ದೋಷ ನಿರ್ಮಲವಾಗಿರುವದೋ, ಹಾಗೇ ಪ್ರತಿಬಿಂಬನಾದ ಜೀವನ ಬಂಧವು ಬಿಂಬನಾದ ಈಶನಿಗೆ ಎಂದೂ ಸಂಭವಿಸುವದಿಲ್ಲ. ಜೀವನು ಅಹಂಕಾರ ಉಪಾಧಿಯಿಂದ ಕೂಡಿಕೊಂಡಿರುವನು. ಆ ಅಹಂಕಾರ ಸಂಬಂಧಗಳಾದ ಕರ್ತೃತ್ವ ಭೋಕ್ತೃತ್ವಾದಿ

ಗಳು ಪ್ರತಿಬಿಂಬನಾದ ಜೀವನಲ್ಲಿ ತೋರುತ್ತವೆ. ಹೀಗೆ ತೋರಿದರೂ ಬಿಂಬನಾದ ಶಿವನಿಗೆ ಯಾವ ದೋಷವೂ ಇಲ್ಲ ಎಂದು ತಿಳಿ.

ಬಳಿಕ, ಪ್ರತಿಬಿಂಬನಾದ ಜೀವನ ಸಂಸಾರವು ಬಿಂಬರೂಪ ಶಿವನಿಗೆ ಇಲ್ಲವೆನ್ನುವದಕ್ಕೆ ಮತ್ತೊಂದು ದೃಷ್ಟಾಂತವನ್ನು ಹೇಳುತ್ತಾರೆ.

**ಬಹು ಮುಖದ ಕನ್ನಡಿಯೊಳಿಹ ಚೆಲುವ ಮುಖಕೆ ತ ।**
**ದ್ಬಹುವಿಧಂ ದೋರದಂತುಪಾಧಿಕ ಜೀವ ।**
**ನಹಿತವೀಶಂಗೆ ಸಮನಿಸದು ॥೬॥**

**ಟೀಕಾ:** ಬಹುಮುಖದ=ಅನೇಕ ಮುಖಗಳುಳ್ಳ, ಕನ್ನಡಿಯೊಳ್=ಕನ್ನಡಿಯಲ್ಲಿ, ಇಹ=ಇರುವ, ಚೆಲುವ ಮುಖಕೆ=ಸುಂದರ ಮುಖಕ್ಕೆ, ತದ್ಬಹುವಿಧಂ=ಆ ಕನ್ನಡಿಯ ಸಂಬಂಧವಾದ ಅನೇಕತ್ವವು, ದೋರದಂತೆ=ತೋರದ ಹಾಗೆ, ಉಪಾಧಿಕ=ಉಪಾಧಿ ಸಂಬಂಧವಾದ, ಜೀವನ=ಜೀವಾತ್ಮನ, ಅಹಿತವು=ದುಃಖರೂಪ ಬಂಧವು, ಈಶಂಗೆ=ಶಿವನಿಗೆ, ಸಮನಿಸದು=ಪ್ರಾಪ್ತವಾಗದು.

**ತಾತ್ಪರ್ಯ:**-ಉಪಾಧಿ ಮೂಲಕ ಪ್ರತಿಬಿಂಬಕ್ಕೆ ತೋರಿದ ಯಾವ ದೋಷಗಳಾದರೂ ಬಿಂಬಕ್ಕೆ ಬರಲಾರವು. ಹೇಗಂದರೆ- ಒಂದು ಕನ್ನಡಿಯ ಎದುರಿಗೆ ನಾವು ಒಬ್ಬರು ನಿಂತು ಕೊಂಡರೆ, ಅದರಲ್ಲಿ ಸಾಲಾಗಿ ನೂರು ಜನರು ನಿಂತು ಕೊಂಡಂತೆ ತೋರುತ್ತದೆ. ಪ್ರತಿಬಿಂಬಗಳು ನೂರಾದರೆ, ಬಿಂಬವು ನೂರು ಆದವು ಏನು? ಇಲ್ಲ. ಕಿಂತು ಒಂದೇ ಆಗಿರುತ್ತದೆ. ಮತ್ತು ನಮ್ಮ ಮುಖವು ಸುಂದರವಾಗಿದ್ದರೂ, ಅದರಲ್ಲಿ ಪ್ರತಿಬಿಂಬ ಮುಖವು ಕುರೂಪವಾಗಿ ತೋರುತ್ತದೆ. ಪ್ರತಿಬಿಂಬ ಮುಖವು ರೂಪದಿಂದ ವಿಕಾರವಾದರೂ, ನಿಜಮುಖವು ವಿಕಾರವಾಗದೆ, ನಿರ್ವಿಕಾರವಾಗಿರುವದು. ಆದ್ದರಿಂದ ಉಪಾಧಿ ಸಂಬಂಧದಿಂದ ಪ್ರತಿಬಿಂಬದಲ್ಲಿ ತೋರುವ ವಿಕಾರಗಳು ಬಿಂಬಕ್ಕೆ ಇರುವದಿಲ್ಲ. ಈ ದೃಷ್ಟಾಂತಗಳಂತೆ; ಪ್ರತಿಬಿಂಬರೂಪನಾದ ಜೀವನು ಉಪಾಧಿಯಾದ ಅಹಂಕಾರ, ಮತ್ತು ಅದರ ಧರ್ಮಗಳಾದ ಕರ್ತೃತ್ವ ಭೋಕ್ತೃತ್ವ ಸುಖ ದುಃಖಾದಿಗಳಿಂದ ಬಂಧರೂಪನಾಗಿ ತೋರಿದರೂ; ಬಿಂಬರೂಪನಾದ ಶಿವನಿಗೆ ಆ ಬಂಧವು ಕಿಂಚಿತ್ತಾದರೂ ಇರುವದಿಲ್ಲೆಂದು ತಿಳಿ.

ಬಳಿಕ, ಅಜ್ಞಾನವಶಾತ್ ಜೀವನಲ್ಲಿ ತೋರಿದ ಬಂಧವಾದರೂ ನಿಜವಲ್ಲ. ಅಂದಮೇಲೆ; ಕೈಮುತಿಕ ನ್ಯಾಯದಿಂದ ಬಿಂಬನಾದ ಶಿವನಲ್ಲಿ ಬಂಧವಿಲ್ಲೆಂದು ಇನ್ನೇನು ಹೇಳತಕ್ಕದ್ದು. ಎಂಬದಾಗಿ ಜೀವನಲ್ಲಿಯೂ ಬಂಧದ ಅಭಾವವನ್ನು ಪ್ರತಿಪಾದಿಸುತ್ತಾರೆ.

**ಆದೊಡಾ ಜೀವಂಗನಾದಿಯಾದಜ್ಞಾನ।**
**ಭೇದದಿಂದಾದ ವಿಕೃತಿಯಂ ನಿಜವೆಂಬೆ।**
**ಯಾದೊಡಂತದನೆ ತಿಳಿ ಪೇಳ್ವೆ ॥೭॥**

**ಟೀಕಾ:-** ಆದೊಡೆ=ಹೀಗಾದಾಗ್ಯಾದರೂ, ಅನಾದಿಯಾದ=ಉತ್ಪತ್ತಿರಹಿತ ವಾದ, ಅಜ್ಞಾನ=ತಿಳಿಯದಿರುವ ಮರವೆಯು, ಭೇದದಿಂದ=ಎರಡೆಂಬ ಬುದ್ಧಿಯ ಮೂಲಕ ಪ್ರಾಪ್ತವಾದ, ವಿಕೃತಿಯಂ=ಬಂಧವನ್ನು, ಜೀವಂಗೆ=ಜೀವಾತ್ಮನಿಗೆ, ನಿಜವೆಂಬೆಯಾದೊಡೆ=ಸತ್ಯವೆಂದು ನೀನು ಹೇಳುವದಾದರೆ,ಅಂತದನೆ=ಆ ವಿಷಯ ವನ್ನು ಕೂಡಾ, ಪೇಳ್ವೆ=ಹೇಳುತ್ತೇನೆ, ತಿಳಿ=ಅರಿ,

**ತಾತ್ಪರ್ಯ:-** ಹೇ ಶಿಷ್ಯನೇ!, ಕೇಳು. ಜೀವನಲ್ಲಿ ಬಂಧವುಂಟೆಂದು ಅಂಗೀಕಾರ ಮಾಡಿರುವದು ನಿಜವಲ್ಲ. ನಿನಗೆ ಮೊದಲು ಬಿಂಬನಾದ ಶಿವನಲ್ಲಿ ಬಂಧರಾಹಿತ್ಯವು ದೃಢವಾಗುವದಕ್ಕಾಗಿ, ಪ್ರತಿಬಿಂಬನಾದ ಜೀವನಲ್ಲಿ ಬಂಧ ವುಂಟೆಂದು ಹೇಳಿದೆವು. ಪ್ರತಿಬಿಂಬ ಜೀವನಲ್ಲಿ ತೋರುವ ಬಂಧವಾದರು ನಿಜ ವಾಗಿಯೂ ಇಲ್ಲ. ಅದು ಅಜ್ಞಾನ ಮೂಲಕ ಹಾಗೆ ಇದ್ದಂತೆ ತೋರಿರುತ್ತದೆ. ಯಾಕಂದರೆ, ನಿನ್ನ ಸ್ವರೂಪು ಏಕಮೇವಾದ್ವಿತೀಯವಾಗಿ ಭೇದವಿಲ್ಲದೆ ಅಖಂಡೈಕ ರಸವಾಗಿತ್ತು. ಅನಿರ್ವಚನೀಯ, ಅನಾದಿಯಾದ, ಅಜ್ಞಾನವು ನಿನ್ನನ್ನು ಆಶ್ರಯಮಾಡಿಕೊಂಡು, ಕಾರಣರೂಪದಿಂದ ಏಕವಾಗಿಯೂ ಕಾರ್ಯರೂಪದಿಂದ ಅನೇಕವಾಗಿಯೂ ತೋರಿತು. ಏಕವಾದ ಅಜ್ಞಾನೋಪಾಧಿಯಿಂದ ಈಶ್ವರನು ಏಕನಾಗಿಯೂ, ಅನೇಕಗಳಾದ ಅಹಂಕಾರಗಳ ಉಪಾಧಿ ಮೂಲಕ ಜೀವರು ಅನೇಕರಾಗಿಯೂ ತೋರಿದರು, ಈ ರೀತಿ ಅಭೇದ ಸ್ವರೂಪವನ್ನು ಭೇದ ಮಾಡಿ ತೋರಿಸುವಂಥಾದ್ದಾಯಿತು. ಅದರಿಂದಲೇ ಜೀವನು ಜನನಾದಿ ಸಂಸಾರವುಳ್ಳವನೆಂದೂ, ಈಶ್ವರನು ಅಸಂಸಾರಿಯೆಂದೂ ತೋರಿತು. ಆದರೆ ಯಥಾರ್ಥವಾಗಿ ವಿಚಾರಮಾಡಿ ನೋಡಿದರೆ, ಜೀವನಲ್ಲಿ ತೋರಿದ ಸಂಸಾರ ವಾದರೂ ಅಹಂಕಾರಾದಿ ಉಪಾಧಿಗಳ ಮೂಲಕ ತೋರುವದೇಹೊರತು, ನಿಜವಾಗಿ ಇಲ್ಲೆಂದು ತಿಳಿ. ಅದು ಹೇಗಂದರೆ, ಈ ವಿಷಯಕ್ಕೆ ನಿನಗೆ ದೃಷ್ಟಾಂತಕೊಟ್ಟು ಹೇಳುತ್ತೇನೆ ಕೇಳು.

**ಬಳಿಕ,** ಗುರುಗಳು; ಶಿಷ್ಯನ ಬುದ್ಧಿಯಲ್ಲಿ ಅರ್ಥವು ಚನ್ನಾಗಿ ಪ್ರವೇಶ ಮಾಡುವ ಹಾಗೆ; ಬೇರೆ ಬೇರೆ ನಾಲ್ಕು ದೃಷ್ಟಾಂತಗಳನ್ನು ಉದಾಹರಿಸುತ್ತಾರೆ. ಮೊದಲು ಜೀವನಲ್ಲಿ ತೋರಿದ ವಿಕಾರವು ನಿಜವಲ್ಲ. ಅದು ಉಪಾಧಿಯಾದ ಅಹಂಕಾರಕ್ಕೆ ಇರುತ್ತದೆಂದು ಹೇಳುತ್ತಾರೆ.

**ಮುಗಿಲೋಡೆ ಚಂದ್ರಮಂ ಮಿಗೆಯೋಡುವಂತಿರ್ಪ |**
**ಬಗೆಯಲ್ಲದೋಡದಂತಹಮಿನಿಂ ಜೀವ |**
**ನಿಗೆ ವಿಕಾರವೆ ಸಹಜವಲ್ಲ** ||೮||

**ಟೀಕಾ:-** ಮುಗಿಲೋಡೆ = ಮೋಡಗಳು ಓಡುತ್ತಿರಲು, ಚಂದ್ರಮ= ಚಂದ್ರನು, ಮಿಗೆ=ವಿಶೇಷವಾಗಿ, ಓಡುವಂತಿರ್ಪ=ಧಾವಿಸುತ್ತಿರುವಂತೆ ತೋರು ವದು, ಬಗೆಯಲ್ಲದೆ=ಭಾವನೆಯಲ್ಲದೆ, ಓಡದಂತೆ=ಗಮನಮಾಡದಹಾಗೆ, ಅಹ ಮಿನಿಂ=ಅಹಂಕಾರದಿಂದ, ಜೀವನಿಗೆ=ಜೀವಾತ್ಮನಿಗೆ, ವಿಕಾರವೇ=ಸಂಸಾರವು, ಸಹಜವಲ್ಲ=ನಿಜವಲ್ಲ.

**ತಾತ್ಪರ್ಯ:-** ಹೇ ಶಿಷ್ಯನೇ!, ಕೇಳು. ಜೀವನಲ್ಲಿ ತೋರುವ ಜನನ ಮರಣ ಕರ್ತೃತ್ವ ಭೋಕ್ತೃತ್ವಾದಿರೂಪ ಸಂಸಾರವು ಅಹಂಕಾರದಲ್ಲಿ **ಸಹಜ ವಾಗಿದೆ.** ಆತ್ಮನಲ್ಲಿ **ಆರೋಪಿತವಾಗಿದೆ.** ಹೇಗೆಂದರೆ, ಚಂದ್ರನು ಇದ್ದಲ್ಲೇ ಇರುವನು. ಅಚಲನಾಗಿರುತ್ತಾನೆ. ಮೇಘಗಳು ವಾಯುವಶದಿಂದ ಗಮನ ಮಾಡುತ್ತಿರುತ್ತವೆ. ಆದರೂ ಚಂದ್ರನೇ ಓಡುತ್ತಾನೆಂದು ಜನರು ನುಡಿಯು ವರು. ನಿರ್ಗಮನ ಚಂದ್ರನಲ್ಲಿ **ಗಮನವು ಆರೋಪವಾಗಿರುತ್ತದೆ.** ಮೇಘ ಗಳಲ್ಲಿ ಗಮನವು **ಸಹಜವಾಗಿದೆ.** ಇದರಂತೆ' ಅಸಂಸಾರಿ, ನಿತ್ಯಮುಕ್ತ, ಅಸಂ ಗಾತ್ಮನಲ್ಲಿ ಸಂಸಾರವು **ಆರೋಪವಾಗಿದೆ.** ಅಹಂಕಾರಾದಿಗಳಲ್ಲಿ **ಸಹಜ ವಾಗಿದೆ.** ಆತ್ಮನಲ್ಲಿ ವಿಕಾರರೂಪ ಸಂಸಾರವು ಇಲ್ಲವೇ ಇಲ್ಲ. ಆದರೂ ಅಜ್ಞ ಜನರು ತಮ್ಮ ತಪ್ಪು ತಿಳವಳಿಕೆಯಿಂದ ಆತ್ಮನಲ್ಲಿ ಸಂಸಾರವನ್ನು ಆರೋಪ ಮಾಡುತ್ತಾರೆ.

ಬಳಿಕ, ಉಕ್ತ ದೃಷ್ಟಾಂತವನ್ನು ಕೇಳಿದ ಶಿಷ್ಯನು ಶಂಕೆಯನ್ನು ಮಾಡು ತ್ತಾನೆ. ಹೇ ಗುರುವೇ! ಚಂದ್ರನು ಅಂತರಿಕ್ಷದಲ್ಲಿ ಬಹಳ ದೂರವಿರುವದರಿಂದ ಹಾಗೇನಾದರೂ ಆಗಬಹುದು. ಆತ್ಮನು ಚಂದ್ರನಂತೆ ದೂರವಿಲ್ಲ. ಕಿಂತು; ಈ ದೇಹದಲ್ಲಿಯೇ ಅಪರೋಕ್ಷನಾಗಿ ನಾನು ಎಂದು ಸದಾ ಸಮೀಪವಾಗಿರುತ್ತಾನೆ. ಇಂಥಾ ಆತ್ಮನಲ್ಲಿ ಸಂಸಾರವು ಆರೋಪವಾಗಿರದೆ ಸಹಜವಾಗಿರಬಹುದು ಎಂದು ಶಂಕೆಯನ್ನು ಮಾಡಲು, ಅದಕ್ಕೆ ಗುರುಗಳು— 'ಹಾಗಾದರೆ, ಹೇ ಶಿಷ್ಯನೇ! ನಿನಗೆ ಸಮೀಪವಾಗಿಯೂ ಅಪರೋಕ್ಷವಾಗಿಯೂ ಇರುವ ಅಚಲವಾದ ಬೆಳಕಿ ನಲ್ಲಿ ಚಲನವು ತೋರಿದಂತೆ, ನಿತ್ಯಮುಕ್ತನಲ್ಲಿ ಬಂಧವು ತೋರುತ್ತಿರುವದು ಎಂದು ಸಮಾಧಾನವನ್ನು ಹೇಳುತ್ತಾರೆ.

**ಮನೆಯ ಕಿಂಡಿಯೊಳ್ಪೈದಿದಿನ ತೇಜದಲ್ಲಿ ಕರ |**
**ವನು ಸಂಚರಿಸಲು ತಾನಾಡುವಂತೆ ಜೀ |**
**ವನು ಮನಂ ಗೂಡಿ ಸುಳಿಯುವನು** ||೯||

**ಟೀಕಾ:-** ಮನೆಯ=ಗೃಹದ, ಕಂಡಿಯೊಳು=ಛಿದ್ರಗಳಲ್ಲಿ, ಐದಿದ=ಹೊಂದಿದ, ಇನ=ಸೂರ್ಯನ, ತೇಜದಲ್ಲಿ=ಪ್ರಕಾಶದಲ್ಲಿ, ಕರವನು=ಕೈಯನ್ನು, ಸಂಚರಿಸಲು=ಅತ್ತಿತ್ತ ಅಲೆದಾಡಿಸಲು, ತಾನಾಡುವಂತೆ=ಆ ಬೆಳಕೂಸುಳಿದಾಡಿದಂತೆ, ಜೀವಂ=ಜೀವನು, ಮನಂಗೂಡಿ=ಮನೋಪಾಧಿಯಿಂದ ಕೂಡಿಕೊಂಡು, ಸುಳಿಯುವನು=ಸಂಚರಿಸುವನು,

**ತಾತ್ಪರ್ಯ:-** ಹಂಚುಗಳನ್ನು ಹೊಚ್ಚಿದ ಮನೆಯಲ್ಲಿ ಅಲ್ಲಲ್ಲಿ ಕಿಂಡಿಗಳು ಇರುತ್ತವೆ. ಅವುಗಳ ದ್ವಾರಾ ಸೂರ್ಯನ ಬೆಳಕು ಮನೆಯಲ್ಲಿ ಬೀಳುತ್ತದೆ. ಆ ಬೆಳಕಿನ ಬುಡದಲ್ಲಿ ಅಂಗೈಯ್ಯನ್ನು ಇರಿಸಿದರೆ ಅದರಲ್ಲಿ ಬೆಳಕು ಬೀಳುವದು, ಬಳಿಕ ಕೈಯನ್ನು ಅತ್ತಿತ್ತ ಚಲಿಸಲು; ಆ ಕೈಯೊಳಗಿರುವ ಅಚಲವಾದ ಬೆಳಕು ಚಲಿಸಿದಂತೆ ತೋರುತ್ತದೆ. ಆ ಬೆಳಕು ಕೈಯಲ್ಲಿ ಓಡಾಡಿದ ಹಾಗೆ ತೋರುತ್ತದೆ, ಕೈಯಲ್ಲಿ ಚಲನವು ಸಹಜವಾಗಿದೆ. ಬೆಳಕಿನಲ್ಲಿ ಚಲನವು ಆರೋಪವಾಗಿದೆ. ಇದರಂತೆ ಜೀವನು ಮನಸ್ಸಿನ ಉಪಾಧಿಯೊಡನೆ ಕೂಡಿಕೊಂಡು ಗಮನ ಮಾಡಿದಂತೆ ತೋರುತ್ತಾನೆ. ಮನಸ್ಸು ಜಾಗ್ರದಲ್ಲಿ ವಿಷಯಾಂತರವನ್ನು ಹೊಂದುತ್ತದೆ. ಒಂದು ಅವಸ್ಥೆಯನ್ನು ಬಿಟ್ಟು ಮತ್ತೊಂದವಸ್ಥೆಯನ್ನೂ ಹೊಂದುತ್ತದೆ. ಇಂಥಾ ಚಂಚಲವಾದ ಮನಸ್ಸಿನ ಮೂಲಕ ಆತ್ಮನು ಚಲಿಸಿದನೆಂಬಂತೆ ತೋರುತ್ತಾನೆ. ಚಂಚಲವಾದ ಮನಸ್ಸಿನ ಧರ್ಮವು ಅಚಲನಾದ ಆತ್ಮನಲ್ಲಿ ತೋರುತ್ತದೆ. ಹೇ ಶಿಷ್ಯನೇ ! ಕೇಳು ಕೈಯಲ್ಲಿ ಬೆಳಕು ಅಪರೋಕ್ಷವಾಗಿದೆ, ಸಮೀಪವೂ ಅದೆ. ಆದರೂ ಅಜ್ಞರು ಬೆಳಕು ತಿರಗುತ್ತದೆಂದು ನುಡಿಯುವರು ಅದು ನಿಜವಲ್ಲ. ಇದರಂತೆ ಮನೋಪಾಧಿಯಿಂದ ಆತ್ಮನು ಚಲಿಸಿದಂತೆ ತೋರಿದರು, ಅಚಲನಾಗಿರುತ್ತಾನೆ '**ಧ್ಯಾಯತೀವ ಲೇಲಾಯತೀವ**, ಎಂಬ ಶ್ರುತಿಗಳು ಉಂಟು.

ಬಳಿಕ, ಶಿಷ್ಯನು ಗುರುಗಳನ್ನು ಕುರಿತು– 'ಹೇ ಗುರುವರ್ಯನೇ ! ತಾವು ಹೇಳುವದು ನಿಜವು. ಆದರೆ ತಾವು ಹೇಳುವ ಮಾತುಗಳು ನಮ್ಮ ಅನುಭವಕ್ಕೆ ಬರುವದಿಲ್ಲ. ನಮ್ಮ ಅನುಭವವು ಈ ಜೀವಾತ್ಮನೇ ಬಂಧವುಳ್ಳವನು. ಖಿದುಃ, ಸಂಸಾರಿಯು ಆಗಿರುವನೆಂದು ತೋರುವದು. ಸುಖ, ದುಃಖ, ಬಂಧ, ಮೋಕ್ಷಾದಿಗಳು ಚೇತನನಾದ ಜೀವನಲ್ಲಿಯೇ ವ್ಯವಹರಿಸುತ್ತವೆ. ಜಡವಾದ ಮನಸ್ಸಿನಲ್ಲಿ ಇರಲಾರವು. ಲೋಕಾನುಭವವಾದರೂ ಜೀವನಲ್ಲಿಯೇ ಉಂಟು. ಆದ್ದರಿಂದ ಜೀವನೇ ಸಂಸಾರಿಯಾಗಿರುವನೆಂದು ಶಂಕೆಯನ್ನು ಮಾಡಿದರೆ; ನಿನಗಾದ ಅನುಭವವು ಭ್ರಮಾತ್ಮಕವಾಗಿದೆ ಹೊರತು, ಪ್ರಮಾರೂಪವಲ್ಲ. ಅನುಭವಗಳೆಲ್ಲವೂ ನಿಜವಿರುತ್ತವೆಂದು ಹೇಳಲಿಕ್ಕೆ ಬರುವದಿಲ್ಲ. ಕಿಂತು, ಯಥಾರ್ಥ ವಕ್ತಾ ಆಪ್ತವಾಕ್ಯ, ಶ್ರುತಿ ಮೊದಲಾದವುಗಳಿಂದ ಜನ್ಯವಾದ ಅನುಭವವೇ ನಿಜ

ವಾದದ್ದು. ಉಳಿದವುಗಳು ಭ್ರಮರೂಪಗಳಾಗಿವೆ. ಎಂಬುದನ್ನು ತಿಳಿಸುತ್ತಾ ಮುಂದೆ ದೃಷ್ಟಾಂತವನ್ನು ಉದಾಹರಿಸುತ್ತಲಿದ್ದಾರೆ.

**ಹಡಗನೇರಿದವಂಗೆ ತಡಿಯೊಳಿರ್ಪಚಲಂಗ |**
**ಳೆಡೆಯಾಡುವಂತೆ ಜಡಮತಿಗೆ ವಿಕೃತಿಯಂ |**
**ಪಡೆದಂತೆ ತೋರುತಿಹನಾತ್ಮ ||೧೦||**

**ಟೀಕಾ:-** ಹಡಗನೇರಿದವಂಗೆ= ಹಡಗದಲ್ಲಿ ಕುಳಿತುಕೊಂಡವನಿಗೆ, ತಡಿಯೊಳಿರ್ಪ=ತೀರದಲ್ಲಿರುವ, ಅಚಲಂಗಳು=ಪರ್ವತಗಳು, ಎಡೆಯಾಡುವಂತೆ= ಗಮನಮಾಡುತ್ತಿರುವ ಹಾಗೆ, ಆತ್ಮ= ಜೀವನು, ಜಡಮತಿಗೆ = ಅಜ್ಞಾನಿಗೆ, ವಿಕೃತಿಯಂ=ವಿಕಾರವನ್ನು, ಪಡೆದಂತೆ=ಹೊಂದಿದಹಾಗೆ, ತೋರುತಿಹನು= ಪ್ರತೀತಿಯಾಗುತ್ತಿರುವನು.

**ತಾತ್ಪರ್ಯ:-** ಹಡಗದಲ್ಲಿಯಾಗಲಿ, ಅಥವಾ ರೇಲ್ವೆಯಲ್ಲಾಗಲಿ ಕುಳಿತುಕೊಂಡು ಪ್ರಯಾಣ ಮಾಡುವಂಥವನಿಗೆ ಸಮುದ್ರ ತೀರದಲ್ಲಿರುವ ಪರ್ವತಗಳು ಮತ್ತು ರೇಲ್ವೆಯ ಬದಿಯಲ್ಲಿರುವ ಗಿಡಗಳು ಓಡಿಹೋದಂತೆ ತೋರುತ್ತವೆ. ಕೂತವರು ಕೆಲವರು ನಿಜವಾಗಿಯೂ ಓಡುತ್ತವೆಂದು ಹೇಳುವರು. ಓಡುವದು ಅನುಭವವಾದರೂ ಅದು ಸರಿಯಲ್ಲ. ಯಾಕಂದರೆ, ಜಡವಾದ ಪರ್ವತ, ಗಿಡಗಳಲ್ಲಿ, ಗಮನವು ಸಂಭವಿಸಲಾರದು. ಆದ್ದರಿಂದ ಓಡುವ ಅನುಭವವು ಭ್ರಮವಾಗಿದೆ. ಇದರಂತೆ, ಜಡಮತಿಗೆ ಅಂದರೆ, ವಿಚಾರ ಶೂನ್ಯನಿಗೆ ಆತ್ಮನು ಬಂಧವುಳ್ಳವನಂತೆ ಸುಖ ದುಃಖಿಯಾದವನಂತೆ ತೋರುತ್ತಾನೆ. ಮೇಘಾವರಣದಿಂದ ಆವೃತವಾದ ದೃಷ್ಟಿಯುಳ್ಳ ಪುರುಷನು, ಸೂರ್ಯನು ಅಪ್ರಕಾಶನಾಗಿರುವನೆನ್ನುವಂತೆ, ಆತ್ಮಾನಾತ್ಮ ವಿವೇಕಶೂನ್ಯ ಪುರುಷನಿಗೆ ಆತ್ಮನು ಬದ್ಧನಾದಂತೆ ಕಾಣುತ್ತಾನೆ. ವಿವೇಕಿಗಳಿಗೆ ಮಾತ್ರ ಯಾವಾಗಲೂ ಮುಕ್ತನಾಗಿಯೇ ತೋರುವನು. '**ತಥಾ ಬದ್ಧವದ್ಭಾತಿ ಯೋ ಮೂಢದೃಷ್ಟೇ**,ಎಂಬದಾಗಿ ಹಸ್ತಾಮಲಕಾಚಾರ್ಯರು ಹೇಳಿರುವರು. ಆದ್ದರಿಂದ ಅಜ್ಞಜನರ ಅನುಭವಕ್ಕೆ ಆತ್ಮನು ಬದ್ಧನಾದಂತೆ ತೋರಿದರೂ; ಸುಜ್ಞಜನರ ಅನುಭವಕ್ಕೆ ನಿತ್ಯಮುಕ್ತನಾಗಿರುತ್ತಾನೆ. ಆದ್ದರಿಂದ ಅಜ್ಞಜನರ ಅನುಭವವು ಭ್ರಮವೆಂದು ತಿಳಿದು ತ್ಯಜಿಸು. ಅದು ಗ್ರಹಿಸಲಿಕ್ಕೆ ಯೋಗ್ಯವಾದದ್ದು ಅಲ್ಲ ಎಂಬ ಭಾವವು.

**ಬಳಿಕ,** ಶಿಷ್ಯನು ಗುರು ಹೇಳಿದ್ದನ್ನು ಕೇಳಿ ಚನ್ನಾಗಿ ತಿಳಿದರೂ, ಮತ್ತು ಅದರಲ್ಲಿ ಶಂಕೆಯನ್ನು ಮಾಡುತ್ತಾನೆ. ಏನಂದರೆ, ಹೇ ಗುರುವೇ! ತಾವು ಹೇಳಿದ್ದು ನಿಜವು. ಆದರೆ ಹಡಗ ಅಥವಾ ರೇಲ್ವೆ ಇವುಗಳು ತೀವ್ರ ಗಮನವುಳ್ಳವು

ಗಳಾದ್ದರಿಂದ, ಅಚಲಗಳು ಚಲಾಯಮಾನಗಳಾಗಿರುವಂತೆ ತೋರುತ್ತವೆ. ಹೀಗೆ ತೋರುವದಕ್ಕೆ ತೀವ್ರ ಗಮನವೇ ಕಾರಣವಾಗಿದೆ. ಯಾಕಂದರೆ, ಅವೇ ಮಂದವಾಗಿ ಗಮನಮಾಡಿದರೆ, ಭ್ರಮವಾಗದು. ಇಲ್ಲಿ ಭ್ರಮಕ್ಕೆ ತೀವ್ರ ಗಮನವೇ ಕಾರಣವಾಗಿದೆ. ಇದರಂತೆ ದ್ರಾಷ್ಟಾಂತದಲ್ಲಿ ಯಾವ ದೋಷವೂ ಇಲ್ಲ. ಇಲ್ಲ ದಿದ್ದರೂ ಆತ್ಮನು ಸಂಸಾರಿ ವಿಕಾರಿಯಾಗಿ ಸರ್ವಾನುಭವದಿಂದ ತೋರುತ್ತಾನೆ. ನಾನು ಕರ್ತಾ, ಭೋಕ್ತಾ, ಸುಖೀ, ದುಃಖೀ, ಎಂಬ ಅನುಭವಗಳಿಂದ ಆತ್ಮನಿಗೆ ಬಂಧವನ್ನು ಹೇಳಬೇಕಾಗುವದು. ಆದರಿಂದ ಜೀವನು ವಿಕಾರಿಯೆಂದೇ ಸಿದ್ಧ ವಾಗುವದು; ಎಂದು ಶಂಕೆಯನ್ನು ಮಾಡಲು; ಗುರುಗಳು ಮುಂದೆ ಹೇಳುವ ಪ್ರಕಾರ ಉತ್ತರವನ್ನು ಹೇಳುತ್ತಾರೆ. " ತೀವ್ರ ಗಮನವನ್ನು ತಾನು ಮಾಡದೆ ತಟಸ್ಥನಾಗಿ ಬೇರೆಯಿದ್ದರೂ; ವಿಚಾರಪರನಾದರೂ ನದಿಯ ಪ್ರವಾಹದಲ್ಲಿ ಸೂರ್ಯನ ಪ್ರತಿಬಿಂಬು ತೇಲಿಹೋದಂತೆ ತೋರುವದು ಹೇಗೋ, ಹಾಗೇ ಅಧ್ಯಾಸಯುಕ್ತ ಬುದ್ಧಿಯುಳ್ಳವನಿಗೆ ಆತ್ಮನು ಬದ್ಧನಂತೆ ತೋರುವನು. ಇದು ನಿಜವಲ್ಲ. ಎಂದು ಉತ್ತರವನ್ನು ಹೇಳುತ್ತಾರೆ.

**ಅದು ಕಾಲ್ಪನಿಕವಲ್ಲದೇ ನೈಜವೇ ಮಿತ್ರ ।**
**ನುದಕ ಪ್ರವಾಹದೊಳು ಪೋಪತೆರದಿ ನೀ ।**
**ಹದನೈಸೆ ಜೀವನೊಳು ಬೋಧ್ಯ ॥೧೧॥**

**ಟೀಕಾ:-** ಬೋಧ್ಯ=ಎಲೈ ಶಿಷ್ಯನೇ ! ಅದು=ಹಾಗೆ ತೋರುವದು, ಕಾಲ್ಪ ನಿಕವಲ್ಲದೆ=ಸುಳ್ಳಲ್ಲದೆ, ನೈಜವೇ=ಸತ್ಯವೇನು ? (ಅಲ್ಲ) ಮಿತ್ರನು=ಸೂರ್ಯನು ಉದಕ ಪ್ರವಾಹದೊಳು=ನದಿ ನೀರಿನ ಸೆಳವಿನಲ್ಲಿ, ಪೋಪತೆರದಿ=ಹೋಗುತ್ತಿರುವ ಹಾಗೆ, ಜೀವನೊಳು=ಜೀವನಲ್ಲಿ, ಈ ಹದನು=ಇದೇ ರೀತಿಯು, ಐಸೆ=ಆಗಿರುವದು.

**ತಾತ್ಪರ್ಯ:-** ನಿಜವಾದ ಅರ್ಥವನ್ನು ತಿಳಿಯಲಿಕ್ಕೆ ಯೋಗ್ಯ ಬುದ್ಧಿ ಯುಳ್ಳ ಶಿಷ್ಯನೇ ! ಕೇಳು. ನದಿ ನೀರಿನ ಪ್ರವಾಹದಲ್ಲಿ ಸೂರ್ಯನ ಪ್ರತಿಬಿಂಬವು ಬಿದ್ದಿರುತ್ತದೆ. ದಡದ ಮೇಲೆ ನಿಂತು ನೋಡುವವನಿಗೆ ಆ ಪ್ರತಿಬಿಂಬವು ನೀರಿನ ಕೂಡ ತೇಲಿಕೊಂಡು ಹೋದಂತೆ ಭಾಸವಾಗುತ್ತದೆ. ಹಾಗೆ ತೇಲಿಕೊಂಡು ಹೋಗುವದು ನಿಜವೇನು ? ಹೇಳು. ಅಲ್ಲ. ಕಿಂತು, ನೀರಿನಲ್ಲಿ ಗಮನವು ಆರೋಪವಾಗಿದೆ. ನಿಂತುಕೊಂಡು ನೋಡುವವನು– 'ಈ ಸೂರ್ಯನ ಪ್ರತಿ ಬಿಂಬು ಇದ್ದಲ್ಲೇ ಇದ್ದರೂ, ನೀರಿನ ಪ್ರವಾಹ ಮೂಲಕ ತೇಲಿಕೊಂಡು ಹೋದಂತೆ ತೋರುತ್ತದೆ. ಆದರೂ ಇದು ನಿಜವಲ್ಲ. ಇದ್ದಲ್ಲೇ ಇದ್ದು ನಿರ್ವಿ ಕಾರವಾಗಿರುತ್ತದೆ. ಎಂದು ಹೇಗೆ ನಿಶ್ಚಯ ಮಾಡುತ್ತಾನೋ, ಹಾಗೇ ಆತ್ಮನು

ಅಜ್ಞಾನವಶಾತ್ ಬದ್ಧನಂತೆ ತೋರಿದರೂ, ಅದು ಮಿಥ್ಯೆಯೆಂದು ತಿಳಿ. ಎಂದು ಉತ್ತರವನ್ನು ಹೇಳಿದರು.

ಬಳಿಕ, ಶಿಷ್ಯನು ಕೆಲವರಿಗೆ ಜೀವಾತ್ಮನು ಮುಕ್ತನಂತೆ ತೋರುತ್ತಾನೆ. ಕೆಲವರಿಗೆ ಬದ್ಧನಂತೆ ತೋರುತ್ತಾನೆ. ಹೀಗೆ ಉಭಯ ವಿಧವಾಗಿ ತೋರುವದು. ಅವರವರ ಬುದ್ಧಿಯ ತಾರತಮ್ಯ ಮೂಲಕವಾಗಿರುತ್ತದೆ. ಆದ್ದರಿಂದ ಉಭಯರು ತಿಳಿದದ್ದು ಸರಿಯೆಂದು ಭಾವಿಸಬೇಕಾಗುವದು. ಆದ್ದರಿಂದ ಆತ್ಮನು ಬದ್ಧನೂ ಮುಕ್ತನೂ ಆಗಿರಬಹುದು. ಎಂದು ಶಂಕೆಯನ್ನು ಮಾಡಲು; ಇದು ಸರಿಯಲ್ಲ. ಯಾಕಂದರೆ, ಆತ್ಮನು ಬದ್ಧನಾದದ್ದು ನಿಜವಾಗಿದ್ದರೆ, 'ಅಯಮಾತ್ಮಾ ಬ್ರಹ್ಮ' ಎಂಬ ಮೊದಲಾದ ಶ್ರುತಿಗಳು ಈ ಜೀವಾತ್ಮನನ್ನು ಕುರಿತು ಬ್ರಹ್ಮನಿದ್ದಿಯೆಂದು ಬೋಧಿಸುತ್ತಿರಲಿಲ್ಲ. ಕಿಂತು, ನೀನೇ ಬ್ರಹ್ಮನಿದ್ದಿ ಎಂದು ಬೋಧಿಸುವದರಿಂದ ಈ ಜೀವನು ನಿತ್ಯಮುಕ್ತ, ನಿರ್ವಿಕಾರ ಇರಲಿಕ್ಕೇಬೇಕು. ಹೀಗೆ ಇದ್ದ ಕಾರಣ ಆತ್ಮನು ನಿರ್ವಿಕಾರ ಬ್ರಹ್ಮರೂಪನೆಂದು ತಿಳಿಯುವದು ಶ್ರುತಿಸಮ್ಮತವಾಗಿದೆ. ಬದ್ಧನೆಂದು ತಿಳಿಯುವದು ಶ್ರುತಿವಿರೋಧವಾಗಿದೆ. ಆಸ್ತಿಕನು ಶ್ರುತಿವಿರೋಧಾರ್ಥವನ್ನು ಅಂಗೀಕರಿಸನು. ಶ್ರುತಿಸಮ್ಮತವಾದ ಅರ್ಥವನ್ನು ಅಂಗೀಕರಿಸತಕ್ಕದ್ದು. ಎಂದು ಮಹಾವಾಕ್ಯ ಪ್ರಮಾಣವನ್ನು ಉದಾಹರಿಸುತ್ತಾರೆ.

**ನಿಗಮವೀಯರ್ಥವಮಂ ಪೊಗಳ್ವುದಯಮಾತ್ಮಾದಿ ।**
**ಮಿಗಿಲಪ್ಪ ವಾಕ್ಯ ಚಯಗಳದು ಕಾರಣಂ ।**
**ಮಗನೇ ತಿಳಿ ಜೀವನವಿಕಾರಿ ॥೧೨॥**

**ಟೀಕಾ:-** ನಿಗಮವು=ವೇದವು, ಈ ಯರ್ಥಮಂ=ಈ ಅರ್ಥವನ್ನು, ಪೊಗಳ್ವುದು=ಹೇಳುವದು, ಅಯಮಾತ್ಮಾದಿ=ಅಪರೋಕ್ಷನಾದ ಈ ಆತ್ಮನೇ ಬ್ರಹ್ಮನು, ಮಿಗಿಲಪ್ಪ=ಮೇಲಾದ, ವಾಕ್ಯಚಯಗಳ=ವಾಕ್ಯಗಳ ಸಮೂಹಗಳು, (ಇರುವವು) ಅದು ಕಾರಣಂ=ಈ ಕಾರಣದಿಂದ, ಮಗನೇ=ಶಿಷ್ಯನೇ, ಜೀವನು=ಜೀವಾತ್ಮನು, ಅವಿಕಾರಿ=ವಿಕಾರವಿಲ್ಲದವನು, ತಿಳಿ=ಅರಿ.

**ತಾತ್ಪರ್ಯ:-** ಹೇ ಶಿಷ್ಯನೇ ಕೇಳು. ಈ ಆತ್ಮನು ನಿರ್ವಿಕಾರನಿರುವನು. ಎಂದು ಹೀಗೆ ತಿಳಿಯುವದೇ ಯೋಗ್ಯವಾಗಿದೆ. ಬದ್ಧನು ವಿಕಾರಿಯೆಂದು ತಿಳಿಯುವದು ಸರಿಯಲ್ಲ. ಯಾಕಂದರೆ, ಜೀವನು ವಿಕಾರಿಯಾಗಿದ್ದರೆ, ಅಯಮಾತ್ಮಾ ಬ್ರಹ್ಮವೆಂಬ ಮಹಾವಾಕ್ಯಗಳು ಜೀವನಿಗೆ ಬ್ರಹ್ಮನಿರುವಿಯೆಂದು ಉಪದೇಶವನ್ನು ಮಾಡುತ್ತಿರಲಿಲ್ಲ. ಉಪದೇಶ ಮಾಡುತ್ತಿರುವದರಿಂದ ಆತ್ಮನು ನಿರ್ವಿಕಾರನಾಗಿರುವನೆಂದು ಸಿದ್ಧವಾಗುತ್ತದೆ. 'ಮಿಗಿಲಪ್ಪ ವಾಕ್ಯಚಯಗಳ್' ಎಂಬಪದದಿಂದ

ಇಲ್ಲಿ ನಾಲ್ಕು ವೇದಗಳ ನಾಲ್ಕು ಮಹಾವಾಕ್ಯಗಳನ್ನು ಗ್ರಹಿಸಬೇಕು. 'ಅಯಮಾತ್ಮಾ ಬ್ರಹ್ಮ' ಈ ಪಂಚಕೋಶಗಳಿಗೆ ವಿಲಕ್ಷಣ ಸಾಕ್ಷಿಯಾದ ಯಾವ ಆತ್ಮನಿರುವನೋ ಇವನೇ ಪರಬ್ರಹ್ಮನಾಗಿರುವನು. 'ಪ್ರಜ್ಞಾನಂ ಬ್ರಹ್ಮ' ಅರುವೇ ಬ್ರಹ್ಮವು ಆಗಿದೆ. ಆ ಅರುವು ಚತುರ್ಮುಖನಾದ ಬ್ರಹ್ಮ ಮೊದಲು ಇರುವೆಯೇ ಕಡೆಯಾಗಿ ಎಲ್ಲದರಲ್ಲಿ ಪೂರ್ಣವಾಗಿರುತ್ತದೆ. ಅಂಥಾ ಅರುರೂಪನಾಗಿ ತಾನು ಇರುವದರಿಂದ ತಾನೂ ಬ್ರಹ್ಮನಾಗಿರುವನು. 'ಅಹಂ ಬ್ರಹ್ಮಾಸ್ಮಿ' ಅಹಂ ಶಬ್ದಕ್ಕೆ ವಾಚ್ಯಾರ್ಥಗಳಾದ ಅಹಂಕಾರಾದಿಗಳನ್ನು ಬಿಟ್ಟು, ಲಕ್ಷ್ಯಾರ್ಥರೂಪ ಸಾಕ್ಷಿಯೇ ತಾನು ಆಗಿರುವನು. ಇಂಥಾ ತಾನು ಜಗತ್ಕಾರಣವಾದ ಪರಬ್ರಹ್ಮನಾಗಿರುವನು. ಅಂದರೆ ಜಗತ್ ಸಾಕ್ಷಿಯೇ ಅಹಂಕಾರ ಸಾಕ್ಷಿಯು, ಅಹಂಕಾರ ಸಾಕ್ಷಿಯೇ ಜಗತ್ಸಾಕ್ಷಿಯು ಆಗಿರುವನು. ಅಂದರೆ, ಬ್ರಹ್ಮಕ್ಕೂ ತನಗೂ ಭೇದವಿಲ್ಲ. ಕಿಂತು ಸಾಕ್ಷಿತ್ವ ರೂಪದಿಂದ ಅಭೇದವದೆಯೆಂಬ ಭಾವವು. ಅರ್ಥಾತ್ ತಾನೇ ಬ್ರಹ್ಮನಿರುವೆನೆಂಬ ತಾತ್ಪರ್ಯವು. 'ತತ್ತ್ವಮಸಿ' ಆ ಬ್ರಹ್ಮವೇ ನೀನಿರುವಿ ಎಂಬ ಮಹಾವಾಕ್ಯವು. ಅಂದರೆ ಸೃಷ್ಟಿ ಪೂರ್ವದಲ್ಲಿ ಯಾವ ಸದ್ರೂಪ ಬ್ರಹ್ಮವಿತ್ತೋ, ಅದೇ ಈ ದೇಹದಲ್ಲಿ ನಾನು ಎಂದು ಇರುವದು. ಆ ಸದ್ರೂಪ ಬ್ರಹ್ಮವೇ ಈ ದೇಹದಲ್ಲಿ ಜೀವಾತ್ಮರೂಪದಿಂದ ಪ್ರಕಟನಾಗಿರುವನೆಂಬ ಶ್ರುತಿಯುಂಟು. ಅದರಿಂದ ಆತ್ಮ ಮತ್ತು ಬ್ರಹ್ಮ ಎಂಬ ಎರಡು ನಾಮಗಳು ಬೇರೆಯಾದರೂ, ನಿಜರೂಪು ಒಂದೇ ಆಗಿರುತ್ತದೆ. ಆದ್ದರಿಂದ ಆ ಬ್ರಹ್ಮವೇ ನೀನೆಂದು ಹೇಳುವದು. ಈ ವಿಧವಾಗಿ ನಾಲ್ಕು ಮಹಾವಾಕ್ಯಗಳು ಜೀವ ಶಿವರಿಗೆ ಅಭೇದ ಬೋಧಿಸುತ್ತವೆ. ಆದ್ದರಿಂದ ಶಿವಜೀವರು ನಿರ್ವಿಕಾರ ಸ್ವರೂಪರು ಇರಲಿಕ್ಕೇಬೇಕು. ಶಿವನು ನಿರ್ವಿಕಾರಿ; ಜೀವನು ವಿಕಾರಿ; ಆಗಿದ್ದರೆ ಅಭೇದವನ್ನು ಉಪದೇಶಮಾಡುತ್ತಿರಲಿಲ್ಲ. ಜೀವನು ನಿರ್ವಿಕಾರನಿರುವದರಿಂದಲೇ ಬ್ರಹ್ಮರೂಪನೆಂದು ಉಪದೇಶಮಾಡಿರುತ್ತದೆ. ಆದ್ದರಿಂದ ಜೀವನು ನಿರ್ವಿಕಾರಿ, ಅಸಂಸಾರಿ, ಅಸಂಗ, ನಿತ್ಯಮುಕ್ತನೆಂದು ತಿಳಿಯುವದು ಶ್ರುತಿ ಸಮ್ಮತವಾಗಿರುವದು. ಇದಕ್ಕೆ ವಿಪರೀತವಾಗಿ ತಿಳಿಯುವದು ಶ್ರುತಿಗೆ ವಿರೋಧವಾಗಿದೆ. ಶ್ರುತಿಸಮ್ಮತವಾದ ಅರ್ಥವನ್ನು ಗ್ರಹಿಸುವದು ಪರಮಶ್ರೇಯಸ್ಕರವಾಗಿದೆ. ಆದ್ದರಿಂದ ನಿರ್ವಿಕಾರಿಯೆಂದು ತಿಳಿ.

## ಜೀವಂಗವಿಕಾರತ್ವ ನಿರೂಪಣೆ ಸೂತ್ರ ೭ಕ್ಕೆ ತ್ರಿವಿಧಿ ೮ಲಕ್ಕೆ

ಬಳಿಕ, ಹಿಂದಿನ ಸೂತ್ರದಲ್ಲಿ, ಉಪಾಧಿಯಾದ ಅಹಂಕಾರ ಮತ್ತು ಅದರ ಧರ್ಮಗಳಿಂದ ಜೀವಾತ್ಮನು; ಸಂಸಾರಿ ವಿಕಾರಿಯೆಂದು ತೋರಿದರೂ; ಸ್ವರೂಪತಃ ನಿರ್ವಿಕಾರಿಯಾಗಿರುವನೆಂದು ತಿಳಿಸಿದರು. ಜೀವನಿಗೆ ನಿರ್ವಿಕಾರತ್ವ ಸಿದ್ಧವಾದ ಮೇಲೆ; ಈಶ್ವರನಿಗೆ ನಿರ್ವಿಕಾರವನ್ನು ಏನು ಹೇಳತಕ್ಕದ್ದು. ಕೈಮುತ್ತಿಕ ನ್ಯಾಯ

ದಿಂದ ನಿರ್ವಿಕಾರತ್ವವನ್ನು ಪ್ರತಿಪಾದಿಸಿದರು. ಈಗ ಈ ಸೂತ್ರದಲ್ಲಿ ಎರಡನೇ ಸಂಧಿಯನ್ನು ಉಪಸಂಹಾರ ಮಾಡುತ್ತಾರೆ. ಇದರಲ್ಲಿ ಹಿಂದೆ ಹೇಳಿದ ಶಿವ, ಜೀವ, ಜಗತ್ತು, ಈ ಮೂರು ಪದಾರ್ಥಗಳ ವಿಚಾರವನ್ನು ಮಾಡುವದರಲ್ಲಿ ಮೂವರು ಅಧಿಕಾರಿಗಳಿರುತ್ತಾರೆಂದು ಹೇಳುತ್ತಾರೆ. ಗುರು ಮುಖದಿಂದ ಶಿವ ಜೀವ ಜಗದ್ವಿಷಯವನ್ನು ಏಕಕಾಲಕ್ಕೆ ಶ್ರವಣಮಾಡಿದರೂ, ಗುಣತ್ರಯಗಳ ಮೂಲಕ ಕನಿಷ್ಠ, ಮಧ್ಯಮ, ಉತ್ತಮ, ಹೀಗೆ ಮೂವರು ಅಧಿಕಾರಿಗಳು ಇರುತ್ತಾರೆ. ಅವರನ್ನು ನಾವು ಹೇಗೆ ಗುರ್ತಿಸಬೇಕು ? ಎಂದು ಕೇಳಿದರೆ; ಶ್ರವಣಾನಂತರ ಅವರ ನಿಶ್ಚಯ ಜ್ಞಾನದ ಮೇಲಿಂದಲೇ ಅವರನ್ನು ಕಂಡು ಹಿಡಿಯಬೇಕಾಗಿದೆ. ಹೇಗಂದರೆ, ಶಿವ, ಜೀವ, ಜಗತ್ತು ಬೇರೆ ಬೇರೆಯೆಂದು ನಿಶ್ಚಯ ಮಾಡಿದವನು ಕನಿಷ್ಠನು. ತನ್ನ ಅಜ್ಞಾನದಿಂದಾಗಲಿ ಈಶನಿಂದಾಗಲಿ ಜಗತ್ತು ಆಗಿರುವದೆಂದು ತಿಳಿಯುವವನು. ಮಧ್ಯಮನು; ಜೀವ ಶಿವ ಜಗದಾದಿಗಳೆಲ್ಲವು ನಾನೇ ಆಗಿರುವೆನೆಂದು ತಿಳಿಯುವವನೇ ಉತ್ತಮನು. ಮಳೆಯ ನೀರು ಒಂದಾದರೂ ಕಪ್ಪೇಚಿಪ್ಪಿನಲ್ಲಿ ನಿಂತು ಮುತ್ತಾಗುತ್ತದೆ. ಅದೇ ಕಮಲಪತ್ರದ ಮೇಲೆ ಬಿದ್ದು ಮುತ್ತಿನಾಕಾರಮಾತ್ರ ವಾಗುತ್ತದೆ. ಅದೇ ನೀರು ಕಾದಕಬ್ಬಿಣದ ಮೇಲೆ ಬಿದ್ದರೆ, ಇಲ್ಲದಂತಾಗಿ ಹೋಗುತ್ತದೆ. ನೀರು ಒಂದಾದರೂ ಸ್ಥಾನಭೇದ ದಿಂದ ಭೇದವಾಗಿರುವಂತೆ, ಗುರುಗಳ ಬೋಧವು ಒಂದೇ ವಿಧನಾದರೂ, ಅಧಿಕಾರಿಗಳ ಬುದ್ಧಿ ಭೇದಮೂಲಕ ಆ ಜ್ಞಾನವು ಭೇದವಾಗಿ ತೋರುತ್ತದೆಂದು ತಿಳಿಸಿ; ಈ ಸಂಧಿಯನ್ನು ಉಪಸಂಹಾರ ಮಾಡುತ್ತಾರೆ.

**ಸೂತ್ರ:- ಜೀವ ಪರಮಾತ್ಮ ಲೋಕಂಗಳಂದವನು ಪರಿ ।**
**ಭಾವಿಸುವರೊಳು ಭೇದವುಂಟು ನೋಡು ॥**

ಟೀಕಾ:- ಜೀವ ಪರಮಾತ್ಮ ಲೋಕಂಗಳ್=ಶಿವ, ಜೀವ, ಜಗತ್ತುಗಳ, ಅಂದವನು=ಸ್ವರೂಪವನ್ನು, ಪರಿಭಾವಿಸುವರೊಳು=ವಿಚಾರಮಾಡುವವರಲ್ಲಿ, ಭೇದವುಂಟು=ಭಿನ್ನರಾಗಿರುವರು, ನೋಡು=ಅರಿ,

ತಾತ್ಪರ್ಯ:- ಗುರುಮುಖದಿಂದ ಏಕಕಾಲಕ್ಕೆ ಶಿವ, ಜೀವ, ಜಗತ್ತುಗಳ ಸ್ವರೂಪವೇನು? ಎಂದು ವಿಚಾರಮಾಡಿದರೂ, ಆ ವಿಷಯವನ್ನು ತಿಳಿಯುವವರಲ್ಲಿ ಭೇದವುಂಟು. ಯಾಕಂದರೆ, ತಿಳಿಯತಕ್ಕ ಅಧಿಕಾರಿಗಳ ಬುದ್ಧಿ ಭೇದದಿಂದ ವಿಷಯದ ಜ್ಞಾನವು ಬೇರೆ ಬೇರೆಯಾಗುತ್ತದೆ. ಹೇಗಂದರೆ, ಒಬ್ಬಾನೊಬ್ಬ ಗುರುಗಳು ಮೂವರು ಶಿಷ್ಯರನ್ನು ಕುರಿತು—' **ಸೂರ್ಯನು ಅಸ್ತಂಗತನಾದನು**, ಎಂದು ಹೇಳಿದನು. ಈ ಮಾತನ್ನು ಕೇಳಿ; ಒಬ್ಬನು( ಉತ್ತಮನು ) ಸಂಧ್ಯಾವಂದನ ಮಾಡಲಿಕ್ಕೆ ಹೋಗು. ಎಂದು ಹೇಳಿದಂತಾಯಿತು. ಹೀಗೆ ತಿಳಕೊಂಡನು.

ಮತ್ತೊಬ್ಬನು (ಮಧ್ಯಮನು) ರಾತ್ರಿಭೋಜನಕ್ಕಾಗಿ ಅಡಿಗೆ ಮಾಡಲಿಕ್ಕೆ ಹೋಗು ಎಂದಂತಾಯಿತೆಂದು ತಿಳಕೊಂಡನು. ಇನ್ನೊಬ್ಬನು (ಕನಿಷ್ಠನು) ಮಲ ಮೂತ್ರ ತ್ಯಜಿಸಲು ಬಹಿರ್ದೇಶಕ್ಕೆ ಹೋಗಂದರೆಂದು ತಿಳಕೊಂಡನು. ಈ ಭೇದವು ಹೇಗಾಯಿತೋ ಹಾಗೆ ಗುರುಗಳು ಶಿವ ಜೀವ ಜಗದಾದಿಗಳ ಬೋಧಮಾಡಿದರೂ,ಅದನ್ನು ಕೇಳಿ ಅಧಿಕಾರಿಗಳು ಭಿನ್ನ ಭಿನ್ನ ನಿಶ್ಚಯಮಾಡಿಕೊಳ್ಳುತ್ತಾರೆ.

ಬಳಿಕ, ಗುರುಗಳು ಶಿಷ್ಯನನ್ನು ಕುರಿತು, ಹೇ ಶಿಷ್ಯನೆ! ನಿನಗೆ ಜೀವಾದಿಗಳ ಸ್ವರೂಪು ತಿಳಿಯುವ ಹಾಗೆ ಶ್ರುತಿಪ್ರಮಾಣಪೂರ್ವಕ ಹೇಳಿದೆನೆಂದು ಹೇಳುತ್ತಾರೆ.

ತರುಣ ನೀನರಿವಂತೆ ವರವೇದ ಸಿದ್ಧರಹ
ಪರಮು ಜೀವರನು. ತದುಪಾಧಿಯಾದ ಜಗ ।
ದಿರವನಾನೊರೆದೆನೊಲವಿಂದೆ ॥೧॥

**ಟೀಕಾ:-** ತರುಣ=ವಿವೇಕ ಪ್ರೌಢಾವಸ್ಥೆಯುಳ್ಳ ಶಿಷ್ಯನೇ!, ನೀನರಿಯುವಂತೆ=ನೀನು ತಿಳಿಯುವ ಹಾಗೆ, ಒಲವಿಂದೆ=ಕೃಪೆಯಿಂದೆ, ವರ=ಶ್ರೇಷ್ಠವಾದ, ವೇದಸಿದ್ಧರಹ=ವೇದಗಳಿಂದ ಪ್ರತಿಪಾದಿಸಲ್ಪಟ್ಟಿರುವ, ಪರಮಜೀವರನು=ಶಿವ ಜೀವರನ್ನು, ತದುಪಾಧಿಯಾದ=ಅವರಿಗೆ ಉಪಾಧಿಯಾದ, ಜಗದಿರವನು=ಜಗತ್ತಿನ ಸ್ವರೂಪವನ್ನು, ಆನು=ನಾನು, ಒರೆದೆನು=ಹೇಳಿದೆನು.

**ತಾತ್ಪರ್ಯ:-** ಶಿವ, ಜೀವ, ಜಗದಾದಿಗಳ ಸ್ವರೂಪವನ್ನು ತಿಳಿಯುವದರಲ್ಲಿ ಯೌವನಾವಸ್ಥೆಯುಳ್ಳ ಶಿಷ್ಯನೇ! ಕೇಳು. ಶಿವ ಜೀವರುಗಳ ಸ್ವರೂಪವನ್ನು ನೀನರಿವಂತೆ ವೇದಪ್ರಮಾಣಪೂರ್ವಕ ಹೇಳಿದೆನು. ಮತ್ತು ಆಲಸ್ಯವಿಲ್ಲದೆ ಪ್ರೇಮದಿಂದ ನಿನಗೆ ಉಪದೇಶವನ್ನು ಮಾಡಿರುತ್ತೇನೆ. ಶ್ರುತಿಪ್ರಮಾಣಪೂರ್ವಕ ಹೇಳಿರುವದರಿಂದ ಅವಶ್ಯವಾಗಿ ಜೀವ ಶಿವಾದಿಗಳ ಸ್ವರೂಪ ಜ್ಞಾನವನ್ನು ಗ್ರಹಿಸಲಿಕ್ಕೇಬೇಕು. ಇದರಲ್ಲಿ ಸಂಶಯಪಡುವಕಾರಣವಿಲ್ಲ ಎಂಬ ಭಾವವು 'ನೀನರಿವಂತ' ಅನ್ನುವದರಿಂದ ಶ್ರುತ್ಯರ್ಥವು ನಿನ್ನ ಮನಸ್ಸಿನಲ್ಲಿ ಪ್ರವೇಶವಾಗುವ ಹಾಗೆ ಸರಿಯಾದ ದೃಷ್ಟಾಂತಗಳನ್ನು ಹೇಳಿ ತಿಳಿಸಿರುತ್ತೇನೆ. ಮತ್ತು 'ಒಲವಿಂದೆ' ಎಂಬುದರಿಂದ ತಾಯಿಯು ತನ್ನ ಕಂದನಿಗೆ ಮೊಲೆಪಾಲನ್ನು ಹೇಗೆ ಪ್ರೇಮದಿಂದ ಉಣಿಸುವಳೋ, ಹಾಗೆ ನೀನು ಈ ವಿಷಯವನ್ನು ತಿಳಿದು ಕೃತಾರ್ಥನಾಗಲಿಯೆಂದು ಹೇಳಿದ್ದೇನೆ. ಆದ್ದರಿಂದ ನೀನು ನಿಶ್ಚಯ ಜ್ಞಾನವುಳ್ಳವನಾಗು. ಎಂಬ ಭಾವವು,

ಬಳಿಕ, ಅಧಿಕಾರಿಗಳು ಮೂವರುಂಟೆಂದು ಹೇಳುತ್ತಾರೆ.

ಆ ವಿಶ್ವವಾ ಪರಮ ಜೀವರಂ ಗುರುಪಾದ ।
ಸೇವೆಯಿಂದರಿಯೆ ಮುಕ್ತರಹರವರಲ್ಲಿ ।
ಮೂವರುಂಟಾತ್ಮಜನೆ ಕೇಳು ॥೨॥

ಟೀಕಾ:- ಆತ್ಮಜನೆ = ಎಲೈ ಪುತ್ರನೆ!, ಆ ವಿಶ್ವವ = ಆ ಜಗತ್ತನ್ನು, ಆ ಪರಮ ಜೀವರಂ=ಆ ಜೀವ ಪರಮಾತ್ಮರನ್ನು, ಗುರುಪಾದ ಸೇವೆಯಿಂದ=ಗುರುಗಳ ಪಾದಸೇವೆಯನ್ನು ಮಾಡುವದರಿಂದ, ಅರಿಯೆ = ತಿಳಿಯಲು, ಮುಕ್ತರು ಅಹರ್=ಮುಕ್ತರಾಗುವರು, ಅವರಲ್ಲಿ=ಆ ಸಮೂಹದಲ್ಲಿ, ಮೂವರುಂಟು=ಮೂರು ಜನರಿರುವರು, ಕೇಳು=ಆಲಿಸು.

ತಾತ್ಪರ್ಯ:- ಆಪ್ತ, ಅಂಗ, ಸ್ಥಾನ, ಸದ್ಭಾವಗಳೆಂಬ ನಾಲ್ಕುವಿಧ ಗುರುಪಾದ ಸೇವೆಯನ್ನು ಮಾಡುತ್ತಿರಲು; ಆ ಗುರುಗಳ ಕೃಪೆಯು ಆಗುವದು. ಅವರು ಪ್ರೇಮದಿಂದ ಉಪದೇಶವನ್ನು ಮಾಡಲು; ಆ ಶಿವ, ಜೀವ, ಜಗತ್ತುಗಳ ಸ್ವರೂಪು ಏನಿರಬಹುದೆಂಬ ಜ್ಞಾನೋದಯವಾಗುವದು. ಅದರಿಂದ = ಅಜ್ಞಾನವು ನೀಗಿ ಸುಜ್ಞಾನಿಗಳಾಗಿ, ಜನನ ಮರಣರೂಪ ದುಃಖಸಾಗರದಿಂದ ಬಿಡುಗಡೆಯನ್ನು ಹೊಂದಿ ಮುಕ್ತರಾಗುವರು. ಅಂಥವರಲ್ಲಿಯೂ ಮೂವರು ಅಧಿಕಾರಿಗಳು ಇದ್ದಾರೆ. ಅವರುಗಳ ವಿಚಾರವು ಮುಂದೆ ಹೇಳುವ ಪ್ರಕಾರವಿರುತ್ತದೆ.

ಬಳಿಕ, ಕನಿಷ್ಠ ಅಧಿಕಾರಿಯ ಲಕ್ಷಣವನ್ನು ಹೇಳುತ್ತಾರೆ.

ಸಕಲ ಲೋಕಂ ಬೇರೆ ಸಕಲಾತ್ಮರುಂ ಬೇರೆ ।
ಸಕಲೇಶನೋರ್ವನದಕೆ ಬೇರೆಂಬ ಕಾ ।
ಣ್ಕೆಕೆಯಿಂ ಕನಿಷ್ಠನವನೈಸೆ ॥೩॥

ಟೀಕಾ:- ಸಕಲ ಲೋಕಂ ಬೇರೆ = ಎಲ್ಲ ಲೋಕಗಳು ಬೇರೆ ಬೇರೆ ಅವೆ, ಸಕಲಾತ್ಮರುಂ ಬೇರೆ=ಎಲ್ಲ ಜೀವಾತ್ಮರು ಬೇರೆ ಬೇರೆಯಾಗಿರುವರು, ಸಕಲೇಶನು= ಈಶ್ವರನು, ಓರ್ವನು=ಒಬ್ಬನು, ಅದಕೆ=ಆ ಜೀವ ಜಗತ್ತುಗಳಿಗೆ, ಬೇರೆ= ಭಿನ್ನನಾಗಿರುವನು, ಎಂಬ=ಅನ್ನುವಂಥಾ, ಕಾಣ್ಕೆಕೆಯಿಂ=ಹೀಗೆ ತಿಳಿದು ನೋಡುವದರಿಂದ, ಅವನು=ಆತನು, ಕನಿಷ್ಠನು=ಕನಿಷ್ಠನು, ಐಸೆ=ಆಗುವನು.

ತಾತ್ಪರ್ಯ:- ಅನೇಕ ವಿಷಯಗಳಿಂದ ಕೂಡಿದ ಭೋಗ್ಯ ಜಗತ್ತು ಬೇರೆಯಾಗಿದೆ. ಆ ಭೋಗ್ಯಾತ್ಮಕ ಜಗತ್ತನ್ನು ಉಪಭೋಗಿಸುವ ಭೋಕ್ತೃಗಳಾದ

ಜೀವರು ಬೇರೆ ಬೇರೆ ಇದ್ದಾರೆ. ಭೋಕ್ತೃಗಳಿಗೆ ಭೋಗ್ಯಗಳನ್ನು ಒದಗಿಸುವ ಈಶ್ವರನೊಬ್ಬನು ಬೇರೆಯಿದ್ದಾನೆ. ಈಶ್ವರನು ಒಬ್ಬನಿದ್ದಾನೆ. ಜೀವರು ಅನೇಕರಿದ್ದಾರೆ. ಈ ರೀತಿ ಜೀವರು ತಮ್ಮ ತಮ್ಮೊಳಗೆ ಬೇರೆ ಬೇರೆಯಾಗಿರುವರು. ಎಂದು ತಿಳಿಯುವದರಿಂದ ಈತನು ಕನಿಷ್ಠನೆನಿಸುವನು. ಅರ್ಥಾತ್ ಜೀವಭೇದ, ಜೀವೇಶ್ವರಭೇದ, ಜಡ ಜಡಭೇದ, ಜಡಭೇದ, ಜಡಚೇತನಭೇದ, ಹೀಗೆ ಅನೇಕ ಭೇದ ದೃಷ್ಟಿಯುಳ್ಳವನಾದ್ದರಿಂದ ಕನಿಷ್ಠನೆನಿಸುವನು.

ಬಳಿಕ, ಮಧ್ಯಮಾಧಿಕಾರಿಯ ಲಕ್ಷಣವನ್ನು ಹೇಳುತ್ತಾರೆ.

**ತನ್ನನಾದಿಯ ಮರವೆಯಿಂ ನೆಗಳ್ದ ಜಗವಿದುವೆ |**
**ನ್ನಿಯಿಂದೀಶ ನಿಂದಾದುದೆಂದು ತಿಳಿ |**
**ವಂ ನೋಡೆ ಮಧ್ಯಮನು ತಾನು ||೪||**

**ಟೀಕಾ:-** ತನ್ನ=ಜೀವನಾಶ್ರಿತವಾದ, ಅನಾದಿಯ = ಉತ್ಪತ್ತಿರಹಿತವಾದ, ಮರವೆಯಿಂ=ಅಜ್ಞಾನದಿಂದ, ನೆಗಳ್ದ=ರಚಿಸಿದ, ಜಗವು=ಜಗತ್ತು, ಇದುವೆ=ಈ ಜಗತ್ತೇ, ನನ್ನಿಯಿಂದ=ನಿಶ್ಚಯವಾಗಿ, ಈಶನಿಂದಾದುದೆಂದು = ಈಶ ನಿರ್ಮಿತವಾಗಿರುವದೆಂದು. ತಿಳಿವಂ = ತಿಳಿಯುವವನು, ನೋಡೆ = ವಿಚಾರಮಾಡಲು, ಮಧ್ಯಮನು ತಾನು=ಮಧ್ಯಮಾಧಿಕಾರಿಯು.

**ತಾತ್ಪರ್ಯ:-** ಈ ಜಗತ್ತು ತನ್ನಾಶ್ರಿತವಾದ ಅವಿದ್ಯೆಯಿಂದಾಗಲಿ, ಈಶನಾಶ್ರಿತವಾದ ಮಾಯೆಯಿಂದಾಗಲಿ, ನಿಶ್ಚಯವಾಗಿ ಆಗಿರುತ್ತದೆಂದು: ತಿಳಿಯುವವನು ಮಧ್ಯಮನೆನಿಸುತ್ತಾನೆ. ಆದರೆ ಇಲ್ಲಿ ವಿಚಾರಮಾಡತಕ್ಕದ್ದು ಅದೆ. ಏನಂದರೆ, ವಾಚಸ್ಪತ್ಯಾಚಾರ್ಯರು ಜೀವರಾಶ್ರಿತವಾಗಿ ಅವಿದ್ಯೆಯಿರುತ್ತದೆಂದು ಹೇಳಿದ್ದಾರೆ. ಬ್ರಹ್ಮಾಶ್ರಿತವಲ್ಲ. ಯಾಕಂದರೆ, ಜೀವನು ನಾನು ಅಜ್ಞಾನಿಯೆಂದು ಅನ್ನುವಂತೆ, ಬ್ರಹ್ಮನು ನಾನು ಅಜ್ಞಾನಿಯೆಂದು ಅಂದಿಲ್ಲ. ಅದರಿಂದ ಅವಿದ್ಯೆಯು ಜೀವನಾಶ್ರಿತವಾಗಿದೆ. ಬ್ರಹ್ಮಕ್ಕೆ ಆವರಣಮಾಡಿದೆಯೆಂದು ಹೇಳುತ್ತಾರೆ. ಆದ್ದರಿಂದ ಜೀವಚೇತನಾಶ್ರಿತ ಅವಿದ್ಯೆಯಿಂದಲೇ ಜಗತ್ತಾಗಿದೆ. ಹೇಗಂದರೆ, ಹಗ್ಗದಲ್ಲಿ ಹಾವು, ದಂಡ, ಜಲಧಾರಾ, ಮಾಲಾ ಮೊದಲಾದ ಅಧ್ಯಾಸಗಳಾಗುತ್ತವೆ. ಆಗ್ಗೆ ರಜ್ಜು ಉಪಹಿತ ಚೇತನಾಶ್ರಿತವಾದ ಅಜ್ಞಾನವೇ ಅವುಗಳಿಗೆ ಉಪಾದಾನಕಾರಣವಾಗಿದ್ದರೆ, ಸರ್ಪಾಧ್ಯಾಸವುಳ್ಳವನಿಗೆ ರಜ್ಜುಜ್ಞಾನವಾಗಲು; ಅಜ್ಞಾನ ನಿವೃತ್ತಿಯಾಗುತ್ತದೆ. ಆ ಕಾಲಕ್ಕೆ ಉಳಿದವರಿಗೆ ದಂಡಾದಿ ಅಧ್ಯಾಸಗಳು ತೋರಬಾರದಾಗಿತ್ತು. ಯಾಕಂದರೆ, ಕಾರಣವಾದ ಅಜ್ಞಾನವು ನಾಶವಾಗಿ ಹೋಗಿರುವ ಕಾರಣ; ಹಾಗಿಲ್ಲದೆ; ಅನ್ಯ ಅಧ್ಯಾಸಗಳು ತೋರುತ್ತವೆ. ಆದ್ದರಿಂದ ರಜ್ಜು ಉಪ

ಹಿತ ಚೈತನ್ಯಾಶ್ರಿತ ಅಜ್ಞಾನ ಸರ್ಪಾಧ್ಯಾಸಗಳಿಗೆ ಕಾರಣವಲ್ಲ. ಮತ್ತೇನೆಂದರೆ, ಅವರವರ ವೃತ್ತ್ಯುಪಹಿತ ಚೇತನಾಶ್ರಿತವಾದ ಅವಿದ್ಯೆಗಳಿಂದಲೇ ಆಯಾಯ ಅಧ್ಯಾಸಗಳು ಆಗಿವೆ. ಅವರಲ್ಲಿ ಯಾರಿಗೆ ರಜ್ಜು ಜ್ಞಾನವಾಗುವದೋ, ಅವರಿಗೆ ಮಾತ್ರ ಅವರ ವೃತ್ತ್ಯುಪಹಿತ ಚೇತನಾಶ್ರಿತ ಅವಿದ್ಯೆಯು ನಿವೃತ್ತಿಯಾಗುತ್ತದೆ. ಅವನಿಗೆ ಸರ್ಪಾಧ್ಯಾಸವಾಗುವದಿಲ್ಲ. ಅನ್ಯರಿಗೆ ಅವರವರ ಅವಿದ್ಯೆಗಳು ಹಾಗೇ ಇರುವದರಿಂದ ಅವರಿಗೆ ಅನ್ಯ ದಂಡಾದಿ ಅಧ್ಯಾಸಗಳು ತೋರುತ್ತಲೇ ಇರುತ್ತವೆ. ಅದರಿಂದ ಅವರವರ ವೃತ್ತ್ಯುಪಹಿತ ಚೇತನಾಶ್ರಿತ ಅವಿದ್ಯೆಗಳಿಂದಲೇ ಆಯಾಯ ಅಧ್ಯಾಸಗಳು ತೋರುತ್ತಿರುತ್ತವೆ. ಇದರಂತೆ, ಈ ಜಗತ್ತಾದರೂ ಆಯಾ ಜೀವರ ಆಶ್ರಿತಗಳಾದ ಅವಿದ್ಯೆಗಳಿಂದಲೇ ಆಯಾಯ ಜಗದಧ್ಯಾಸಗಳು ಆಗಿವೆ. ಯಾರಿಗೆ ಬ್ರಹ್ಮಜ್ಞಾನವಾಗಲು ಅವರ ಅಜ್ಞಾನ ನಿವೃತ್ತಿಯಾಗುತ್ತದೆ. ಅವರಿಗೆ ಜಗತ್ತು ತೋರುವದಿಲ್ಲ. ಅನ್ಯರಿಗೆ ಯಥಾವತ್ ತೋರುತ್ತಿರುತ್ತದೆ. ಎಂದು ಹೇಳುತ್ತಾರೆ. ಈ ವಾಚಸ್ಪತ್ಯಾಚಾರ್ಯರ ಮತಾನುಸಾರವಾಗಿ ಗ್ರಂಥಕರ್ತರು **ತನ್ನಾಶ್ರಿತ ಅನಾದಿ ಅವಿದ್ಯೆಯಿಂದ** ಜಗತ್ತು ಆಗಿರುತ್ತದೆಂದು ಹೇಳಿದ್ದಾರೆ.

ಈಶಚೈತನ್ಯಾಶ್ರಿತ ಮಾಯೆಯಿಂದ ಜಗತ್ತು ಆಗಿರುವದೆಂದಾದರೂ ನಿಶ್ಚಯ ಮಾಡಬಹುದು. ಈ ಮಾತು ಎಲ್ಲಡೆಯಲ್ಲಿ ಪ್ರಸಿದ್ಧವಿದ್ದದರಿಂದ ವಿಶೇಷವಾಗಿ ಬರೆಯುವದನ್ನು ಬಿಟ್ಟಿರುತ್ತೇವೆ.

**'ತಸ್ಮಾದೇತಸ್ಮಾದಾತ್ಮನಃ ಆಕಾಶ ಸಂಭೂತಃ'** ತೈತ್ತರೀಯ ಶ್ರುತಿಯು **'ತಸ್ಮಾತ್'** ಆ ಪರಮಾತ್ಮನಿಂದಾಗಲಿ **'ಏತಸ್ಮಾತ್'** ಈ ಆತ್ಮನಿಂದಾಗಲಿ, 'ಆಕಾಶ ಸಂಭೂತಃ'ಆಕಾಶಾದಿ ಜಗತ್ತು ಉತ್ಪನ್ನವಾಗಿರುತ್ತದೆಂದು ಹೇಳಿರುತ್ತದೆ. ಈ ಶ್ರುತಿ ಪ್ರಮಾಣಕ್ಕನುಗುಣವಾಗಿ ತನ್ನಿಂದಾಗಲಿ ಈಶನಿಂದಾಗಲಿ ಜಗತ್ತು ಉಂಟಾಗಿರುತ್ತದೆಂದು ತಿಳಿಯುವವನು **ಮಧ್ಯಮನು** ಎನಿಸುತ್ತಾನೆ.

**ಶಂಕಾ:-** ಕನಿಷ್ಠನು ಹೇಗೆ ಭೇದಬುದ್ಧಿಯುಳ್ಳವನಾಗಿರುವನೋ ಹಾಗೆ, ಈ ಮಧ್ಯಮನು ಭೇದಬುದ್ಧಿಯುಳ್ಳವನಾಗಿದ್ದಾನೆ. ಅಂದಮೇಲೆ ಇವನಿಗೂ ಕನಿಷ್ಠನೆಂದು ಯಾಕೆ ಹೇಳಬಾರದು ? ಮಧ್ಯಮನೆಂದು ಯಾಕೆ ಹೇಳಬೇಕು ?

**ಉತ್ತರ:-** ಕನಿಷ್ಠನು ಜಡಭೇದ, ಜಡಚೇತನಭೇದ, ಜೀವೇಶ್ವರಭೇದ ಹೀಗೆ ಭೇದತ್ರಯಗಳನ್ನು ತಿಳಕೊಂಡದ್ದರಿಂದ ಕನಿಷ್ಠನಾಗಿರುವನು. ಈತನು ಜಗತ್ತನ್ನು ತನ್ನಲ್ಲಿಯಾಗಲಿ ಈಶನಲ್ಲಾಗಲಿ ಅಭೇದಪಡಿಸಿ ಜೀವೇಶ್ವರ ಭೇದವನ್ನು ಮಾತ್ರ ಸ್ವೀಕಾರಮಾಡಿದ್ದರಿಂದ ಮಧ್ಯಮನೆನಿಸುವನು.

**ಬಳಿಕ,** ಉತ್ತಮಾಧಿಕಾರಿಯ ಲಕ್ಷಣವನ್ನು ಹೇಳುತ್ತಾರೆ.

**ಜಗವೆಂದೊಡಂ ತಾನೆ ಜಗದೀಶನುಂ ತಾನೆ ।**
**ಜಗದಾತ್ಮರೆಲ್ಲರುಂ ತಾನೆ ನಿಜವೆಂದು ।**
**ಬಗೆವಾತನುತ್ತಮನು ನೋಡು ॥೫॥**

ಟೀಕಾ:- ಜಗವೆಂದೊಡಂ = ಜಗತ್ತೆಂದರೂ, ತಾನೆ = ತಾನಾಗಿರುವವನು, ಜಗದೀಶನುಂ ತಾನೆ=ಜಗತ್ಕರ್ತನಾದ ಈಶನೂ ತಾನಾಗಿರುವವನು, ಜಗದಾತ್ಮರೆಲ್ಲರುಂ ತಾನೆ=ಎಲ್ಲ ಜೀವಾತ್ಮರು ತಾನೇ ಆಗಿರುವವನು, ನಿಜವೆಂದು=ಸತ್ಯವೆಂದು, ಬಗೆವಾತನು = ತಿಳಿಯುವವನು, ಉತ್ತಮನು ನೋಡು = ಉತ್ತಮಾಧಿಕಾರಿಯೆಂದು ತಿಳಿ.

ತಾತ್ಪರ್ಯ:- ಹೇ ಶಿಷ್ಯನೇ ! ಕೇಳು. ಉತ್ತಮಾಧಿಕಾರಿಯು ಹೀಗೆ ನಿಶ್ಚಯ ಜ್ಞಾನವುಳ್ಳವನಾಗಿರುತ್ತಾನೆ. ಹೇಗಂದರೆ, ಈ ಕಾಣುವ ಜಗತ್ತೆಲ್ಲವು ತಾನೇ ಆಗಿರುತ್ತೇನೆಂದು ತಿಳಕೊಂಡಿರುತ್ತಾನೆ. ಹಗ್ಗವೇ ಹಾವಾಗಿ ತೋರಿದಂತೆ ತಾನೇ ಜಗದ್ರೂಪನಾಗಿರುವನು. ಒಂದು ಭಂಗಾರವೇ ಅನೇಕ ಆಭರಣಗಳಾಗಿರುವಂತೆ, ನೀರೇ ತೆರೆ, ನೊರೆ,ಫೇನ ಬುದ್ಬುದಾದಿಗಳಿಂದ ಅನೇಕವಾದಂತೆ, ಸ್ವಪ್ನದಲ್ಲಿ ತಾನೊಬ್ಬನೇ ಅನೇಕವಿಧ ಸ್ವಪ್ನ ಪದಾರ್ಥಗಳಾದಂತೆ, ತಾನೇ ಜಗದ್ರೂಪನಾಗಿರುವನು. ಅಥವಾ '**ಸರ್ವಂ ಖಲ್ವಿದಂ ಬ್ರಹ್ಮ**' ಇದೆಲ್ಲವು ಬ್ರಹ್ಮರೂಪವಾಗಿದೆ. ಬಾಧಾಸಾಮಾನಾಧಿಕರಣದಿಂದ ನಾಮರೂಪಗಳನ್ನು ಬಾಧಿಸಿ, ಉಳಿದದ್ದು ಬ್ರಹ್ಮವೆಂದು ಹೇಳುವಂತೆ, ಇದೆಲ್ಲವೂ ತಾನೇ ಆಗಿರುವನು. ಮತ್ತು '**ಸದೇವ ಆಸೀತ**' ಎಂಬ ಶ್ರುತ್ಯನುಸಾರ ಸೃಷ್ಟಿಪೂರ್ವದಲ್ಲಿ ತಾನು ಸ್ವಗತಾದಿ ಭೇದತ್ರಯರಹಿತ ಅಖಂಡೈಕರಸರೂಪನಾಗಿದ್ದನು. ಬಳಿಕ ಮಾಯೆಯಲ್ಲಿ ಪ್ರತಿಬಿಂಬಿಸಿ ಮಹೇಶ್ವರನೆಂದು ಹೇಳಿಸಿಕೊಂಡು; ಸರ್ವಜ್ಞ ಸರ್ವಕರ್ತನಾಗಿ ಪ್ರಪಂಚವನ್ನು ನಿರ್ಮಿಸಿದ್ದರಿಂದ, ತಾನೇ ಈಶ್ವರನೂ ಆಗಿರುವನು. ಬಳಿಕ, ಪರಪೂರ್ಣವಾದ ಒಂದು ಆಕಾಶವೇ ಅನೇಕ ಘಟಗತ ಜಲಗಳಲ್ಲಿ ಪ್ರತಿಬಿಂಬಿಸಿ ಅನೇಕವಾದಂತೆ, ಅನೇಕ ಅಂತಃಕರಣಗಳಲ್ಲಿ ಪ್ರತಿಬಿಂಬಿಸಿ ಅನೇಕ ಜೀವರೂಪನಾಗಿಯೂ ನಾನೇ ಇರುವೆನು. ಈ ರೀತಿ ಜಗತ್ತು ಈಶ, ಜೀವಾದಿಗಳ ರೂಪದಿಂದ ನಾನೇ ತೋರುತ್ತಿರುವೆನೆಂದು ಯಾವಾತನು ತಿಳಿಯುವನೋ, ಅವನು **ಉತ್ತಮಾಧಿಕಾರಿ**ಯೆನಿಸುವನು.

ಹೀಗೆ ಗುರುಗಳ ಉಪದೇಶವು ಒಂದೇ ವಿಧವಾದರೂ ಅಧಿಕಾರಿಗಳ ಭೇದದಿಂದ ಅವರ ತಿಳವಳಿಕೆಯು ಭೇದವಾಗಿ ತೋರುತ್ತದೆ. ಎಂದು ತಿಳಿ.

**ಬಳಿಕ,** ಶಿವ, ಜೀವ ಜಗದಾದಿಗಳ ವಿಚಾರವನ್ನು ಮಾಡಲು; ಅದಕ್ಕೆ ಫಲವನ್ನು ಪ್ರತಿಪಾದಿಸುತ್ತಾರೆ.

**ಇಂತು ಶಿವ ಜೀವ ಜಗಮಂ ತಿಳಿಯೆ ಸಕಲ ವೇ।**
**ದಾಂತದರ್ಥವನೆ. ಪದವಿಟ್ಟೆನಿದ ನರಿದ।**
**ವಂ ತಾನೆ ಪರಮ ಪದವಕ್ಕು ॥೬॥**

**ಟೀಕಾ:-** ಇಂತು= ಈ ರೀತಿಯಾಗಿ, ಶಿವ ಜೀವ ಜಗಮಂ=ಶಿವ ಜೀವ ಜಗತ್ತುಗಳನ್ನು, ತಿಳಿಯೆ=ಅರಿಯುವದಕ್ಕಾಗಿ' ಸಕಲ=ಎಲ್ಲ, ವೇದಾಂತ=ಉಪನಿಷತ್ತುಗಳ, ಅರ್ಥವನೆ=ಸಾರವನ್ನೇ, ಪದವಿಟ್ಟೆನು=ಕ್ರಮದಿಂದ ಹೇಳಿದೆನು. ಇದನು=ಈ ವಿಷಯವನ್ನು, ಅರಿದವಂ=ತಿಳಿದವನಿಗೆ, ಪರಮಪದವು=ಮೋಕ್ಷವು, ತಾನೆ=ಸ್ವತಃ, ಅಕ್ಕು=ಆಗುವದು.

**ತಾತ್ಪರ್ಯ:-** ಮೇಲೆ ಹೇಳಿದ ಪ್ರಕಾರ ಶಿವ, ಜೀವ, ಜಗತ್ತು, ಇವುಗಳ ನಿಜವಾದ ಸ್ವರೂಪ ಜ್ಞಾನವಾಗುವದಕ್ಕಾಗಿ, ಸಕಲ ಉಪನಿಷತ್ತುಗಳ ಸಾರಭೂತವಾದ ಅರ್ಥವನ್ನು ನಿನಗಾಗಿ ನಾನು ಹೇಳಿದ್ದೇನೆ. ಮತ್ತು ಸಕ್ರಮವಾಗಿಯೂ ಹೇಳಿರುತ್ತೇನೆ. ಈ ವಿಷಯವನ್ನು ಯಾವಾತನು ಚನ್ನಾಗಿ ಗುರುಮುಖದಿಂದ ತಿಳಿಯುವನೋ, ಅವನು ಅತ್ಯಂತ ದುಃಖ ನಿವೃತ್ತಿ ಪರಮಾನಂದ ರೂಪ ಪ್ರಾಪ್ತಿ ರೂಪ ಮೋಕ್ಷವನ್ನು ಪಡೆಯುತ್ತಾನೆ.

ಬಳಿಕ, ಸಂಧಿಯೊಳಗಿನ ಸೂತ್ರ ಮತ್ತು ಪದಗಳ ಸಂಖ್ಯೆಯನ್ನು ಹೇಳುತ್ತಾರೆ.

**ತಿಳಿಯ ಲೆಂಟೆಳೆ ಪದಂಗಳ ಗಣನೆ ತೊಂಭತ್ತು।**
**ಬಳಿಕಲ್ಲೈದಿಂತು ರಚಿತ ವಾಯಿತಿದು ನಿ।**
**ರ್ಮಳ ರೊಪ್ಪವೆರಡನೆಯ ಸಂಧಿ ॥೭॥**

**ಟೀಕಾ:-** ತಿಳಿಯಲ್=ವಿಚಾರಮಾಡಲಾಗಿ, ಎಂಟೆಳೆ=ಸೂತ್ರಗಳು ಎಂಟು, ಪದಂಗಳ=ಪದ್ಯಗಳ, ಗಣನೆ=ಲೆಕ್ಕವು, ತೊಂಬತ್ತು ಬಳಿಕ ಲ್ಲೈದು=ತೊಂಭತ್ತೈದು, ಇಂತು=ಈ ಪ್ರಕಾರ, ಇದು=ಈ, ನಿರ್ಮಳರೊಪ್ಪವ=ಜ್ಞಾನಿಗಳು, ಒಡಂಬಡುವ, ಎರಡನೆಯ ಸಂಧಿ=ಎರಡನೆಯ ಸಂಧಿಯು, ರಚಿತವಾಯಿತು=ನಿರ್ಮಿಸಲ್ಪಟ್ಟಿತು.

**ತಾತ್ಪರ್ಯ:-** ಆತ್ಮಾನುಭವಿಗಳಾದ ಜ್ಞಾನಿಗಳು ಒಡಂಬಡುವ ಹಾಗೆ ಹೇಳಲ್ಪಟ್ಟ; ಈ ಎರಡನೇ ಸಂಧಿಯು ಸಮಾಪ್ತವಾಗಿರುತ್ತದೆ. ಇದರಲ್ಲಿ ಎಂಟು ಸೂತ್ರಗಳು ತೊಂಭತ್ತೈದು ಪದ್ಯಗಳು ಇರುತ್ತವೆ.

**ಜ್ಞಾನಾಂತರ ನಿದರ್ಶನ ಸೂತ್ರ ಲಕ್ಕೆ ತ್ರಿವಿದಿ ೯೫ ಅಂತು ಸಂಧಿ ೨ಕ್ಕೆ**

**ಸೂತ್ರ ೧೬ ಕ್ಕಂ ತ್ರಿವಿದಿ ೧೪೦ ಕ್ಕಂ**

**ಮಂಗಳಮಸ್ತು**





ಶ್ರೀ ಶಂಭುಲಿಂಗಾಯನಮಃ

# ಅನುಭವಸಾರ

## ಮೂರನೆಯ ಸಂಧಿ

ಬಳಿಕ, (ಅನುವಾದ) ಹಿಂದಿನ ಸಂಧಿಯಲ್ಲಿ ಹೇಳಿದ ವಿಷಯವನ್ನು ಸಿಂಹಾವಲೋಕನ ನ್ಯಾಯದಂತೆ ಪ್ರತಿಪಾದಿಸಿ, ಮುಂದಿನ ಸಂಧಿಯ ವಿಷಯವನ್ನು ಸೂಚಿಸುತ್ತೇವೆ. ಸಿಂಹವು ತಾನು ರಾತ್ರಿ ಸಂಚಾರಕ್ಕಾಗಿ ಹೊರಟಾಗ್ಯೆ ಮುಂದಕ್ಕೆ ಹೋಗುವಾಗ್ಯೆ ಹಿಂದಕ್ಕೆ ತಿರಿಗಿ ನೋಡುತ್ತಾ, ಮುಂದಕ್ಕೆ ಹೋಗುತ್ತಿರುತ್ತದೆ. ಇದರಂತೆ ಹಿಂದಿನ ಸಂಧಿಯ ವಿಷಯವನ್ನು ಸ್ಮರಣಮಾಡಿ, ಮುಂದಿನ ಸಂಧಿಯ ವಿಷಯವು ಉಪಕ್ರಮ ಮಾಡಲ್ಪಡುತ್ತದೆ. ಹಿಂದಿನ ಸಂಧಿಯಲ್ಲಿ ಅಖಂಡ ಸಚ್ಚಿದಾನಂದ ಬ್ರಹ್ಮವು ಉಪಾಧಿ ಮೂಲಕ ಜಗಜ್ಜೀವೇಶ ರೂಪವಾಯಿತು. ಆ ಜೀವೇಶ್ವರರು .ಹೃದಯಕಮಲದಲ್ಲಿ ಕೂಡಿಯೇ ವಾಸಮಾಡಿದರು. ಜೀವನು ಭೋಕ್ತನಾಗಿಯೂ, ಈಶನು ಕರ್ಮಫಲದಾತನಾಗಿಯೂ ಇರುವರು. ಈಶನ ಪ್ರೇರಣೆಯಿಂದ ಹೃದಯ ಕಮಲದಲ್ಲಿ ಜೀವನು ಚರಿಸುತ್ತಿರಲಿಕ್ಕೆ ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳು ಆದವು. ಈಶನು ಕರಣಕರ್ತೃತ್ವ ಸಂಕಲ್ಪ ಕರ್ತೃತ್ವಗಳನ್ನು ಬಿಟ್ಟು, ಕೇವಲ ಸನ್ನಿಧಾನ ಕರ್ತೃತ್ವ ಮೂಲಕ ಪ್ರೇರಿಸುತ್ತಾನೆ. ಅದರಿಂದ ನಿರ್ವಿಕಾರನಾಗಿರುವನು. ಈಶನಂತೆ ಜೀವನಾದರೂ ನಿರ್ವಿಕಾರನಾಗಿರುವನು. ಈ ಅವಿಕಾರ ಲಕ್ಷಣವು ಜೀವೇಶ್ವರರಲ್ಲಿ ಇರುವದರಿಂದ, ಇಬ್ಬರಿಗೂ ಏಕತ್ವವು ಸಂಭವಿಸುತ್ತದೆಂಬುದನ್ನು ಹೇಳಿದರು. ಮತ್ತು ಕೇಳುವವರಲ್ಲಿ ಮೂವರಿದ್ದಾರೆಂದು, ಅವರಲ್ಲಿ, ಜಗತ್ತು, ಜೀವ, ಈಶ ಇವುಗಳೆಲ್ಲಾ ತನ್ನ ಸ್ವರೂಪವಾಗಿಯೇ ಕಾಣುವಂಥವನು ಉತ್ತಮನು ಎಂದು ಹೇಳಿದರು. ಈ ಪದವು ಮುಂದಿನ ಸಂಧಿಯ ವಿಷಯಕ್ಕೆ ಬೀಜಪದವಾಗಿದೆ. ಅರ್ಥಾತ್ ಭೇದನಿರಾಕರಣ

ಪೂರ್ವಕ ಅಭೇದವೇ ಮುಂದಿನ ಸಂಧಿ ವಿಷಯವಾಗಿದೆ. ಈ ಸಂಧಿಯಲ್ಲಿ ಏನು ಹೇಳುತ್ತಾರೆಂಬುದನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾರೆ.

**ಸೂಚನೆ:-** ಆತ್ಮನು ಅಖಂಡ ರೂಪದಿಂದ ಒಬ್ಬನಿದ್ದಾನೆಂಬುದೇ ಸಿದ್ಧಾಂತವು. ಒಬ್ಬಾತ್ಮನಿದ್ದರೆ, ಸುಖ ದುಃಖಾದಿ ಭೋಗಗಳ ವ್ಯವಸ್ಥೆಯಾಗುವ ದಿಲ್ಲ. ಅನೇಕಾತ್ಮರೆಂದು ಹೇಳಿದರೆ, ಭೋಗದ ವ್ಯವಸ್ಥೆಯಾಗುತ್ತದೆ. ಎಂದು **ಸಾಂಖ್ಯ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಕ, ಪಾತಂಜಲಿ ಮತ ದವರು** ಹೇಳುತ್ತಾರೆ. ಇವರೆಲ್ಲರು **ಪೂರ್ವಪಕ್ಷಿಗಳಾಗಿರುತ್ತಾರೆ,** ಆತ್ಮನು ಒಬ್ಬ ನೆಂಬ ಅಭೇದವಾದಿ **ಉತ್ತರ ಮೀಮಾಂಸಕನು ಸಿದ್ಧಾಂತಪಕ್ಷವಾಗಿರುತ್ತಾನೆ.** ಆತ್ಮರು ಅನೇಕರೆಂಬ ಸಾಂಖ್ಯಾದಿ ಮತಗಳಲ್ಲಿ **ಬಾಧಕ** ಯುಕ್ತಿಗಳನ್ನು ಹೇಳಿ, ಭೋಗದ ವ್ಯವಸ್ಥೆಯಾಗಲಾರದೆಂದು ತೋರಿಸುತ್ತಾರೆ. ಆತ್ಮನು ಸ್ವರೂಪತಃ ಒಬ್ಬನಿದ್ದು, ಉಪಾಧಿ ಅನೇಕವಿರುವದರಿಂದ ಅನೇಕ ಭೋಗಗಳು ಸಂಭವಿಸುತ್ತ ವೆಂಬಲ್ಲಿ, **ಸಾಧಕ** ಯುಕ್ತಿಗಳನ್ನು ತೋರಿಸುತ್ತಾರೆ. ಬಳಿಕ; ಚೇತನರೂಪ ಆತ್ಮರಲ್ಲಿ ಭೇದವಿಲ್ಲೆಂಬುದು ಆಶ್ಚರ್ಯವಲ್ಲ. ಕಿಂತು ಜಡಗಳಾದ ಘಟಪಟಾದಿ ಗಳಲ್ಲಿಯೂ ಸಂಭವಿಸುವದಿಲ್ಲ. ಎಂಬಲ್ಲಿ ಜಡಭೇದ ನಿರಾಕರಿಸುತ್ತಾ ಯುಕ್ತಿ ಅನುಮಾನ, ಶ್ರುತಿಗಳನ್ನು ತೋರಿಸುವರು. ಅರ್ಥಾತ್ **ಭೇದಬಾಧಕ ಅಭೇದ ಸಾಧಕ** ಯುಕ್ತಿ, ಅನುಮಾನ, ಶ್ರುತಿಗಳನ್ನು ಹೇಳುತ್ತಾರೆ. ಜಡದಲ್ಲಿಯೇ ಭೇದ ಸಿದ್ಧಿಸುವದಿಲ್ಲ. ಅಂದಮೇಲೆ; ಚೈತನ್ಯದಲ್ಲಿ ಭೇದವಿಲ್ಲ ಎಂದು ಇನ್ನೇನು ಹೇಳತಕ್ಕದ್ದು. ಈ ರೀತಿ **ಕೈಮುತಿಕನ್ಯಾಯದಿಂದ** ಅಭೇದ ಅಖಂಡಾತ್ಮನು ಒಬ್ಬನೆಂಬುದನ್ನು ನಿರೂಪಣ ಮಾಡುತ್ತಾರೆ.

**ಬಳಿಕ,** ತನ್ನಿಂದ ಅನ್ಯವೇನುಯಿಲ್ಲೆಂದು ತಿಳಿದವನು ಅಧಿಕನೆಂದು ಹೇಳಿ ದ್ದನ್ನು ಸ್ಮರಿಸಿಕೊಂಡು, ಶಿಷ್ಯನು ಪ್ರಶ್ನೆಯನ್ನು ಮಾಡುತ್ತಾನೆ. ನಾನು ಸುಖೀ ನಾನು ದುಃಖೀ ಎಂದು ಆತ್ಮರು ಅನೇಕರು ಇರುತ್ತಾರೆ. ಆದ್ದರಿಂದ ಒಬ್ಬಾತ್ಮ ನೆಂದು ತಾವು ಹೇಳಿದರೆ, ಎಲ್ಲರೂ ಸುಖಿಗಳು ಆಗಿರಬೇಕಾಗಿತ್ತು. ಹಾಗೆ ಇಲ್ಲದ್ದ ರಿಂದ ಅನೇಕರೆಂದು ಹೇಳಬೇಕಾಗುತ್ತದೆಂದು ಪ್ರಶ್ನೆಯನ್ನು ಮಾಡುತ್ತಾನೆ.

ಸೂತ್ರ|| **ಏಕಾತ್ಮವಾದವೆಂಬುದು ಘಟಿಸದದರಿಂದ ।**
**ನೇಕಾತ್ಮರೆಂದು ಪೇಳಲ್ಬೇಹುದು** ||

**ಟೀಕಾ:-**ಏಕಾತ್ಮವಾದವೆಂಬುದು=ಒಬ್ಬನೇ ಆತ್ಮನೆಂಬುವದು, ಘಟಿಸದು= ಸಂಭವಿಸದು,ಅದರಿಂದ=ಆದ್ದರಿಂದ, ಅನೇಕಾತ್ಮರೆಂದು=ಅನೇಕಾತ್ಮರಿರುವರೆಂದು, ಪೇಳಲ್ಬೇಹುದು=ಹೇಳಲಿಕ್ಕೇಬೇಕು.

**ತಾತ್ಪರ್ಯ**:- ಎಲ್ಲ ದೇಹಗಳಲ್ಲಿ ಒಬ್ಬಾತ್ಮನಿದ್ದರೆ, ಒಬ್ಬನು ಸುಖಿಯಾಗಲು ಸರ್ವರೂ ಸುಖಿಗಳಾಗಬೇಕು. ಒಬ್ಬನು ದುಃಖಿಯಾದರೆ, ಸರ್ವರೂ ದುಃಖಿಗಳಾಗಬೇಕು. ಹೀಗೆ ಇದ್ದರೆ; ಒಬ್ಬಾತ್ಮನೆಂದು ಹೇಳಬಹುದು. ಹೀಗಿಲ್ಲ. ಕಿಂತು; ಅನೇಕ ಆತ್ಮರು ಭಿನ್ನ ಭಿನ್ನರಾಗಿರುವರು. ಅದರಿಂದ ಸುಖ ದುಃಖಾದಿ ಭೋಗಗಳು ಬೇರೆ ಬೇರೆ ಯಾಗುತ್ತವೆ. ಅನೇಕಾತ್ಮರು ಪ್ರತ್ಯಕ್ಷವಾಗಿಯೂ ಇರುತ್ತಾರೆ. ಆದರಿಂದ ಏಕಾತ್ಮವಾದವು ಸರಿಯಲ್ಲ. ಅನೇಕಾತ್ಮರೆಂದು ಹೇಳುವ ಸಾಂಖ್ಯಾದಿಮತದವರ ಮಾತು ಸರಿಯಾಗಿದೆ.

**ಬಳಿಕ**, ಗ್ರಂಥಕರ್ತರು ಸಂಧಿ ಆರಂಭದಲ್ಲಿ ಇಷ್ಟದೇವತೆಯಾದ ಶಂಭುಲಿಂಗನನ್ನು ಕುರಿತು' ನಮಸ್ಕಾರ ಮಂಗಳವನ್ನು ಮಾಡುತ್ತಾರೆ. ಮತ್ತು ಈ ಸಂಧಿಯಲ್ಲಿ ಹೇಳುವ ಅರ್ಥವನ್ನೇ ಈ ಮಂಗಳದಲ್ಲಿಯೂ ಹೇಳುತ್ತಾ ಶಂಭುಲಿಂಗನನ್ನು ಹೊಗಳುತ್ತಾರೆ.

**ಭೇದಮತ ದೂರಂಗೆ ವೇದಾಂತ ಸಾರಂಗೆ।**
**ನಾದಿ ಮೋಹಾಂಧ ಸೂರಂಗೆ ಶಂಭುವಿಂ।**
**ಗಾದರಂ ಬೆತ್ತು ನತನಪ್ಪೆ ॥೧॥**

**ಟೀಕಾ**:- ಭೇದಮತದೂರಂಗೆ=ಭೇದವಾದಿಗಳಿಗೆ ಅಗೋಚರನಾದಂಥಾ. **ವೇದಾಂತಸಾರಂಗೆ** = ಉಪನಿಷತ್ತುಗಳಿಂದ ಪ್ರತಿಪಾದ್ಯವಾದ ಅದ್ವೈತರೂಪನಾದಂಥಾ, ಅನಾದಿ ಮೋಹಾಂಧ ಸೂರಂಗೆ=ಅನಾದಿಯಾದ ಅವಿದ್ಯೆಯೆಂಬ ಕತ್ತಲೆಗೆ ಸೂರ್ಯಪ್ರಾಯನಾದಂಥಾ,ಶಂಭುವಿಂಗೆ=ಆನಂದಸ್ವರೂಪನಾದ ಶಂಭುಲಿಂಗನಿಗೆ, ಆದರಂ ಬೆತ್ತು = ಅತ್ಯಧಿಕವಾದ ಪ್ರೀತಿಯಿಂದ ಯುಕ್ತನಾಗಿ, ನತನಪ್ಪೆ=ನಮಸ್ಕಾರಮಾಡುತ್ತೇನೆ.

**ತಾತ್ಪರ್ಯ**:- 'ವೇದಾಂತ ಸಾರಂಗೆ ಶಂಭುವಿಂಗೆ' ಎಂಬ ಪದದಿಂದ ಶಂಭುಲಿಂಗ ಸ್ವರೂಪವನ್ನು ಹೇಳುತ್ತಾರೆ. ವೇದಗಳ ಕಡೆಯಲ್ಲಿ ಹೇಳಿದ ಉಪನಿಷತ್ತುಗಳೇ ವೇದಾಂತ ಶಾಸ್ತ್ರಗಳೆಂದು ಪ್ರಸಿದ್ಧಗಳಾಗಿವೆ. ಅವುಗಳಲ್ಲಿ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿಗಳೆಂಬ ಆರು ಲಿಂಗಗಳಿರುತ್ತವೆ. ಆ ಆರು ಲಿಂಗಗಳಿಂದ ಅದ್ವೈತವೇ ತಾತ್ಪರ್ಯವಾಗಿದೆ. ಅಂಥಾ ಏಕಮೇವಾದ್ವಿತೀಯ ರೂಪನೇ **ಶಂಭುಲಿಂಗ**ನಾಗಿರುವನು. ಆದ್ದರಿಂದಲೇ ಪೂರ್ವಮೀಮಾಂಸಕ, ನ್ಯಾಯ, ಸಾಂಖ್ಯಾದಿ ಭೇದ ಮತದವರಿಗೆ ಶಂಭುಲಿಂಗನು ವಿಷಯನಲ್ಲ. ಷಡ್ಲಿಂಗ ತಾತ್ಪರ್ಯ ಅದ್ವೈತ ಜ್ಞಾನಸ್ವರೂಪನಾದ್ದರಿಂದಲೇ, ಅನಾದಿಯಾದ ಅವಿದ್ಯಾರೂಪ ಕತ್ತಲೆಗೆ ಸೂರ್ಯನಾಗಿರುತ್ತಾನೆ.

ಸೂರ್ಯೋದಯ ಸಮಕಾಲದಲ್ಲಿ ಕತ್ತಲೆಯು ನಾಶವಾಗುವಂತೆ, ಅದ್ವೈತ ಜ್ಞಾನೋದಯ ಸಮಕಾಲದಲ್ಲಿಯೇ ಅನಾದಿಯಾದ ಅವಿದ್ಯೆಯು ನಿವೃತ್ತಿಯಾಗುತ್ತದೆ. ಇಂಥಾ ಶಂಭುಲಿಂಗ ಸ್ವರೂಪನೇ ನಾನು. ನನ್ನ ಸ್ವರೂಪನೇ ಶಂಭುಲಿಂಗನು. ಶಂಭುಲಿಂಗನಿಗೂ ತನಗೂ ಕಿಂಚಿತ್ತಾದರೂ ಭೇದವಿಲ್ಲೆಂದು ತಿಳಿದು, ಅಭೇದ ಸ್ವರೂಪ ಸ್ಥಿತಿಯಿಂದಿರುವದೇ ಅಧಿಕ ಪ್ರೀತಿಯ **ನಮಸ್ಕಾರವಾಗಿರು**ತ್ತದೆ. ಅರ್ಥಾತ್ ಈ ಸಂಧಿಯಲ್ಲಿ ಹೇಳಲ್ಪಡುವ **ಅಭೇದ ವಿಷಯವನ್ನೇ** ಈ ಮಂಗಳ ಪದ್ಯದಿಂದಲೂ ಹೇಳಿದರೆಂಬ ಭಾವವು.

**ಬಳಿಕ,** ಶಿಷ್ಯನು ಶ್ರೀಗುರುಗಳನ್ನು ಕುರಿತು ನೀನು ಸಾಕ್ಷಾತ್ ಪರಮಾತ್ಮ ಸ್ವರೂಪನಿರುವಿ. ಎಂದು ಕೊಂಡಾಡಿ ಪ್ರಶ್ನೆಯನ್ನು ಮಾಡುತ್ತಾನೆ.

**ಅಗಲದಂಗನೆ ಬಾಹುಯುಗ ಚಂದ್ರಕಳೆ ಭಾಳ ।**
**ದೃಗವಿವಂ ತೋರದಿಹ ಗುರುವೆ ಜಯತೆಂದು ।**
**ಪೊಗಳಿ ಬಿನ್ನೈಸಿದನು ಬೋಧ್ಯ ॥೨॥**

**ಟೀಕಾ:-** ಅಗಲದಂಗನೆ=ತನ್ನ ಬಿಟ್ಟಿರಲಾರದ ಪಾರ್ವತಿಯು, ಬಾಹುಯುಗ=ನಾಲ್ಕುಕೈಗಳು, ಚಂದ್ರಕಳೆ = ಬಾಲಚಂದ್ರನು, ಭಾಳದೃಕ್ = ಅಗ್ನಿನೇತ್ರವು, ಇವಂ=ಇವುಗಳನ್ನು, ತೋರದಿಹ=ಪ್ರಕಟಮಾಡದಿರುವಂಥಾ, ಗುರುವೇ=ಗುರುನಾಥನೇ, ಜಯತೆಂದು=ನಿನಗೆ ಜಯವಾಗಲೆಂದು, ಪೊಗಳಿ=ಸ್ತುತಿಸಿ, ಬೋಧ್ಯ=ಶಿಷ್ಯನು, ಬಿನ್ನೈಸಿದನು=ಪ್ರಶ್ನೆಯನ್ನುಮಾಡಿದನು.

**ತಾತ್ಪರ್ಯ:-** 'ಸಾಕ್ಷಾತ್ ಭರ್ಗೋನರಾಕೃತಿ' ಎಂಬ ವಾಕ್ಯದಂತೆ; ಗುರುವು ಪರಮಾತ್ಮ ಸ್ವರೂಪನೇ ಇರುವನು. ಪರಮಾತ್ಮನೇ ಇದ್ದಮೇಲೆ ಅವನಲ್ಲಿ ಯಾವ ಚಿನ್ಹಗಳು ಇರಬೇಕು. ಅವು ಮಾತ್ರ ತೋರುವದಿಲ್ಲ. ಅವು ಯಾವವು ? ಅಂದರೆ, ಯಾವಾಗಲೂ ಕೂಡಿರುವ ಪಾರ್ವತಿಯು, ನಾಲ್ಕು ಕೈಗಳು, ಹಣೆಯಲ್ಲಿ ಅಗ್ನಿನೇತ್ರ,ತಲೆಯಲ್ಲಿ ಚಂದ್ರ, ಇವೇ ಮೊದಲಾದವುಗಳು ಇರಬೇಕಾಗಿತ್ತು. ಇವು ಯಾವೂ ಇರುವದಿಲ್ಲ. ಹರನೇ ಗುರುವು ಆಗಿರುತ್ತಾನೆ. ಯಾಕಂದರೆ, ಅನೇಕ ಜನ್ಮಜನ್ಮಾಂತರಗಳಲ್ಲಿ ನಿಷ್ಕಾಮ ಕರ್ಮೋಪಾಸನೆಯನ್ನು ಮಾಡಲು, ಪರಿಶುದ್ಧಾಂತಃಕರಣನಾದ ಈತನನ್ನು ಜ್ಞಾನೋಪದೇಶದಿಂದ ಉದ್ಧಾರ ಮಾಡುವದಕ್ಕಾಗಿ, ಹರನೇ ಗುರುವಾಗಿರುತ್ತಾನೆ. ಹರನೇ ನರರೂಪದಿಂದ ಗುರುವಾಗಿರುತ್ತಾನೆಂಬ ಭಾವವು. ಹರನಾದರೂ ಹರನಲ್ಲಿರುವ ಚಿನ್ಹಗಳನ್ನು ನಮಗೆ ತೋರಗೊಡದೆ, ನಮ್ಮಂತೆ ನರರೂಪದಿಂದ ತೋರುವ ಗುರುವೇ ! ನಿನಗೆ ಜಯ ಜಯವಾಗಲಿ ಎಂದು ಶಿಷ್ಯನು ಕೊಂಡಾಡುತ್ತಾನೆ. ಪಾರ್ವತಿ, ಚಂದ್ರ ಮೊದಲಾದವ

ರನ್ನು ತೋರಿಸದೆ ಇರುವವನಾಗಿರುವಿ. ಅನ್ನುವದರ ಮೇಲಿಂದ ಅವುಗಳೆಲ್ಲವೂ ಈಗಲಾದರೂ ನಿನ್ನಲ್ಲಿ ಉಂಟು. ಅವು ಪ್ರಕಟಗಳಾಗದೆ ಅಪ್ರಕಟ ರೂಪದಿಂದ ಇರುತ್ತವೆಂಬ ಭಾವವು. ಅವು ನಿನ್ನಲ್ಲಿ ಯಾವ ರೂಪದಿಂದ ಇರುತ್ತವೆ. ಅಂದರೆ; ಪಾರ್ವತಿಯು ಬ್ರಹ್ಮವಿದ್ಯಾರೂಪ ಚಿಚ್ಛಕ್ತಿ ರೂಪದಿಂದಲೂ, ನಾಲ್ಕು ಕೈಗಳು ಶಮ, ದಮ, ವಿವೇಕ, ವೈರಾಗ್ಯಗಳೆಂಬ ಸಾಧನ ಚತುಷ್ಟಯ ರೂಪದಿಂದಲೂ, ಅಥವಾ ಮೈತ್ರಿ, ಕರುಣಾ, ಮುದಿತಾ, ಉಪೇಕ್ಷೆಗಳೆಂಬ ಸದ್ಗುಣ ಚತುಷ್ಟಯ ರೂಪದಿಂದಲೂ, ಚಂದ್ರಕಳೆಯು ಜೀವನ್ಮುಕ್ತಿ ವಿಲಕ್ಷಣಾನಂದ ರೂಪದಿಂದಲೂ ಅಗ್ನಿನೇತ್ರವು ಅಪರೋಕ್ಷ ಜ್ಞಾನ ರೂಪದಿಂದಲೂ ಈಗಲಾದರೂ ಅವೆಲ್ಲಾ ನಿನ್ನಲ್ಲಿ ರೂಪಾಂತರಗಳಾಗಿ ಅವೆ. ಇಂಥಾ ಸಾಕ್ಷಾತ್ ಶಂಕರರೂಪನಾದ ಗುರುವೇ ನಿನಗೆ ಜಯವಾಗಲಿಯೆಂದು ಸ್ತುತಿಸುತ್ತಾ, ಶಿಷ್ಯನು ಪ್ರಶ್ನೆಯನ್ನು ಮಾಡುವಂಥ ವನಾದನು.

ಬಳಿಕ, ಶಿಷ್ಯನು ಗುರುಗಳನ್ನು ಕುರಿತು; ಹೇ ಗುರುವೇ! ಎಲ್ಲವನ್ನು ತನ್ನಾತ್ಮ ಸ್ವರೂಪಾಗಿ ಕಂಡಾತನು ಅಧಿಕನೆಂದು ತಾವು ಹೇಳಿದರೆ; ನನಗೆ ಅನೇಕಾತ್ಮರು ಭಿನ್ನ ಭಿನ್ನರಾಗಿ ಕಾಣುತ್ತಾರೆಂದು ಪ್ರಶ್ನೆಯನ್ನು ಮಾಡುತ್ತಾನೆ.

**ತಂದೆ ಚಿತ್ತೈಸು ತನ್ನಿಂದನ್ಯವೇನು ಮಿ।**
**ಲ್ಲೆಂದು ಕಂಡಾತ ನಧಿಕನಹನೆಂದು ನೀ।**
**ನೆಂದೊಡಾನಿಂತು ತಿಳಿಯುವೆನು ॥೩॥**

**ಟೀಕಾ:-** ತಂದೆ=ಹೇ ಗುರುವೇ, ಚಿತ್ತೈಸು=ಏಕಾಗ್ರದಿಂದ ಕೇಳಿರಿ, ತನ್ನಿಂದ ನ್ಯವೇನು ಮಿಲ್ಲೆಂದು=ತನಗಿಂತ ಭಿನ್ನವಾಗಿ ಏನೂ ಇರುವದಿಲ್ಲೆಂದು, ಕಂಡಾತನು= ಅರಿದಾತನು, ಅಧಿಕನಹನೆಂದು=ಉತ್ತಮನಾದವನೆಂದು, ನೀನೆಂದೊಡೆ=ನೀನು ಹೇಳಿದರೆ, ಆನು=ನಾನು, ಇಂತು=ಮುಂದೆ ಹೇಳುವ ಪ್ರಕಾರ, ತಿಳಿಯುವೆನು= ಅರಿಯುವವನಾಗಿದ್ದೇನೆ.

**ತಾತ್ಪರ್ಯ:-** ಪುನಃ ಪುನಃ ಜನನ ಮರಣರೂಪ ದುಃಖದಿಂದ ರಕ್ಷಿಸು ವಂಥಾ ಗುರುವರ್ಯನೇ! ತಾವು ನಾನು ಹೇಳುವದನ್ನು ಏಕಾಗ್ರ ಚಿತ್ತದಿಂದ ಕೇಳಿ, ನನಗೆ ಸರಿಯಾದ ಉತ್ತರವನ್ನು ಕೊಟ್ಟು, ರಕ್ಷಿಸಬೇಕೆಂದು ಬೇಡಿಕೊಳ್ಳು ತ್ತೇನೆ. ತಾವು ಜಗತ್ತು, ಈಶ, ಜೀವರೆಲ್ಲರು ತಾನೆಂದು ತಿಳದವನು ದೊಡ್ಡಾತನು, ಅಧಿಕನೆಂದು ಹೇಳಿದಿರಿ. ನನಗೆ ಇದು ಸರಿಯಾಗಿ ಕಾಣಿಸುವದಿಲ್ಲ. ಯಾಕಂದರೆ; ನನಗೆ ಪ್ರತ್ಯಕ್ಷವಾಗಿ ಅನೇಕಾತ್ಮರು ಭೇದವಾಗಿ ತೋರುತ್ತಿರುತ್ತಾರೆ. ಆದ್ದರಿಂದ ಏಕಾತ್ಮನೆಂಬುದು ಹೇಗೆ ಆಗುವದು? ಇದನ್ನು ನನಗೆ ತಿಳಿಸಬೇಕು. ಎಂಬ ಭಾವವು.

ಬಳಿಕ, ಇದೇ ವಿಷಯುವನ್ನು ವರ್ಣಿಸುತ್ತಾ ಪ್ರಶ್ನೆಯನ್ನು ಮಾಡುತ್ತಾನೆ.

**ಮುಂದೆ ಕಾಣಿಸುತೆ ಪಲವಂದದಿಂದಾತ್ಮರಿರ ।**
**ಲೊಂದೆಂಬುದಾಗ ದದು ಯುಕ್ತಿಯಿಂ ಪ್ರಸಿ ।**
**ದ್ಧಂ ದೋರಿ ಭೇದ ವಿಹುದಾಗಿ ||೪||**

**ಟೀಕಾ:**- ಮುಂದೆ=ಎದುರಿಗೆ, ಕಾಣಿಸುತೆ=ತೋರುತ್ತಾ, ಪಲವಂದದಿಂದೆ=ಹಲವು ಪ್ರಕಾರವಾಗಿ, ಆತ್ಮರಿರಲ್=ಅನೇಕಾತ್ಮರು ಇರಲಾಗಿ, ಒಂದೆಂಬುದು=ಒಬ್ಬಾತ್ಮನೆನ್ನುವದು, ಆಗದು=ಆಗುವದಿಲ್ಲ. ಅದು=ಅನೇಕರೆನ್ನುವದು, ಯುಕ್ತಿಯಿಂ=ಯುಕ್ತಿಯಿಂದಲೂ, ಪ್ರಸಿದ್ಧಂದೋರಿ=ಸರ್ವಾನುಭವಕ್ಕೆ ವಿಷಯುವಾಗಿ, ಭೇದವು==ಆತ್ಮರಭೇದವು, ಇಹುದಾಗಿ=ಇರುವದರಿಂದ,

**ತಾತ್ಪರ್ಯ:**- ಹೇ ಗುರುವೇ ! ತಾವು ಶ್ರುತಿರೂಪ ಆಗಮ ಪ್ರಮಾಣದಿಂದ ಆತ್ಮನು ಏಕನು ಎಂದು ಹೇಳಿದರೆ- ಪ್ರತ್ಯಕ್ಷ ಪ್ರಮಾಣದಿಂದ ಆತ್ಮರು ಅನೇಕರಾಗಿ ತೋರುತ್ತಿರುವರು. ಮತ್ತು ಈ ಆತ್ಮಭೇದವು ಪ್ರತ್ಯಕ್ಷವಲ್ಲದೆ ಯುಕ್ತಿ ದೃಷ್ಟಾಂತಗಳಿಂದಲೂ ಸರ್ವಾನುಭವದಿಂದಲೂ ಪ್ರಸಿದ್ಧವಾಗಿರುತ್ತದೆ. ಈ ಕಾರಣದಿಂದ ಏಕಾತ್ಮನೆಂಬುದು ಸಂಭವಿಸುವದಿಲ್ಲ.

ಬಳಿಕ, ಆತ್ಮಭೇದವು ಪ್ರತ್ಯಕ್ಷವಾಗಿರುತ್ತದೆ. ಎಂಬಲ್ಲಿ ಹೇತುರೂಪ ಯುಕ್ತಿಯನ್ನು ಸಾಧಿಸುತ್ತಾನೆ.

**ಬೇರೆ ದೇಹಂ ಮನಂ ಬೇರೆ ಕರ್ಮಂ ಬುದ್ಧಿ ।**
**ಬೇರೆ ಗತಿ ಬೇರೆ ಬೇರೆ ಭೋಗಂಗಳಿರೆ ।**
**ಬೇರಲ್ಲದೇಕ ವೆನಲುಂಟೆ ||೫||**

**ಟೀಕಾ:**- ಬೇರೆದೇಹಂ=ದೇಹಗಳು ಬೇರೆ ಬೇರೆ, ಮನಂಬೇರೆ=ಪ್ರತಿಯೊಂದು ಶರೀರಕ್ಕೆ ಮನಸ್ಸು ಬೇರೆ, ಕರ್ಮಂ ಬುದ್ಧಿಬೇರೆ=ಅವರವರ ಪುಣ್ಯಪಾಪಾದಿ ಕರ್ಮಗಳು ಬುದ್ಧಿಗಳು ಬೇರೆ, ಗತಿಬೇರೆ=ವರ್ತನರೂಪ ಗತಿಗಳು ಬೇರೆ, ಬೇರೆ ಭೋಗಂಗಳಿರೆ=ಸುಖ ದುಃಖಾದಿ ಭೋಗಗಳು ಬೇರೆಯಿರಲಾಗಿ, ಬೇರಲ್ಲದೆ=ಭಿನ್ನರೆಂದು ಹೇಳದೆ, ಏಕವೆನಲುಂಟೆ=ಒಬ್ಬಾತ್ಮನೆಂದು ಹೇಳಬಹುದೆ? ಹೇಳಲಿಕ್ಕೆ ಬರಲಾರದು.

**ತಾತ್ಪರ್ಯ:**- ಪ್ರತಿಯೊಂದು ಶರೀರಗಳು ಬೇರೆ ಬೇರೆ ಇರುತ್ತವೆ. ಆ ಶರೀರಗಳಲ್ಲಿದ್ದ ಮನಸ್ಸು, ಆ ಮನಸ್ಸಿನಲ್ಲಿ ಸಂಸ್ಕಾರರೂಪದಿಂದಿರುವ ಕರ್ಮ, ಆ

ಕರ್ಮಕ್ಕನುಗುಣವಾಗಿ ವಾಸನಾರೂಪದಿಂದ ಉದಯವಾಗುವ ಬುದ್ಧಿ, ಆ ಬುದ್ಧಿಯ ಮೂಲಕ ಅವರ ವ್ಯವಹಾರಗಳ ಪ್ರವೃತ್ತಿರೂಪಗತಿಯು, ಆ ಗತಿಗಳ ಮೂಲಕ ಅವರಿಗಾಗುವ ಸುಖದುಃಖಾದಿ ಭೋಗಗಳು ಬೇರೆ ಬೇರೆ ಇರುವದ ರಿಂದ; ಭೋಕ್ತೃಗಳಾದ ಜೀವಾತ್ಮರಾದರೂ ಅನೇಕರೆಂದು ಹೇಳಬೇಕಲ್ಲದೆ, ಏಕಾತ್ಮನೆಂದು ಹೇಳಲಿಕ್ಕೆ ಬರುವದಿಲ್ಲ. ಅಂದರೆ, ಭೋಗಗಳು ಅನೇಕಗಳಾಗಿವೆ. ಅವುಗಳ ಸಾಧನಗಳು ಅನೇಕಗಳು. ಅವುಗಳಂತೆ ಭೋಕ್ತೃಗಳಾದ ಆತ್ಮರು ಅನೇಕರೆಂದು ಹೇಳುವದು ಉಚಿತವಾಗಿರುತ್ತದೆ.

ಬಳಿಕ; ಜೀವರ ಕರ್ಮಾನುಗುಣ್ಯವಾಗಿ ಅವರ ವರ್ತನಾರೂಪ ಗತಿಗಳಾ ದರೂ ಬೇರೆ ಬೇರೆಯಿರುತ್ತವೆಂದು ಹೇಳುತ್ತಾನೆ.

**ಉಣುವಿಚ್ಛೆಯೋರ್ವನೊಳ್ತಣಿ ವಿಚ್ಛೆಯೋರ್ವನೊ ।**
**ಳ್ಮಣಿವಿಚ್ಛೆಯೋರ್ವನೊಳು ಮಲತು ಗರ್ವಿಸುವ ।**
**ಗುಣದಿಚ್ಛೆಯೋರ್ವನೊಳಗಿರ್ಕು ॥೬॥**

**ಟೀಕಾ:**– ಓರ್ವನೊಳು = ಒಬ್ಬನಲ್ಲಿ; ಉಣುವಿಚ್ಛೆಯು = ಊಟ ಮಾಡ ಬೇಕೆಂಬ ಇಚ್ಛೆಯು, ಓರ್ವನೊಳು=ಒಬ್ಬನಲ್ಲಿ, ತಣಿವಿಚ್ಛೆಯು=ಸಾಕು ಎಂಬ ಇಚ್ಛೆಯು, ಓರ್ವನೊಳು = ಒಬ್ಬನಲ್ಲಿ, ಮಣಿವಿಚ್ಛೆಯು = ವಿನಯದಿಂದಿರುವ ಇಚ್ಛೆಯು, ಓರ್ವನೊಳಗೆ=ಮತ್ತೊಬ್ಬನಲ್ಲಿ, ಮಲತು=ಕೊಬ್ಬಿ, ಗರ್ವಿಸುವ=ಅಭಿ ಮಾನಪಡುವ, ಗುಣದಿಚ್ಛೆಯು=ಅಹಂಕಾರಗುಣದ ಇಚ್ಛೆಯು, ಇರ್ಕು=ಇರುವದು.

**ತಾತ್ಪರ್ಯ:**– ಒಬ್ಬನಲ್ಲಿ ಊಟಮಾಡಬೇಕೆಂಬುವ ಇಚ್ಛೆಯಿದ್ದರೆ, ಇನ್ನೊಬ್ಬನಲ್ಲಿ ಸಾಕು ಎಂಬುದು ಇರುತ್ತದೆ. ಒಬ್ಬನು ವಿನಯಗುಣದಿಂದ ಎಲ್ಲರಲ್ಲಿಯೂ ನಮ್ರದಿಂದಿದ್ದರೆ, ಮತ್ತೊಬ್ಬನು ನನ್ನ ಸಮಾನ ಯಾರಿಲ್ಲರೆಂಬ ಅಹಂಕಾರದಿಂದ ಕೂಡಿರುತ್ತಾನೆ. ಹೀಗೆ ಪ್ರತಿಯೊಂದು ಶರೀರಗಳಲ್ಲಿ ಅವರವರ ಇಚ್ಛೆಗಳು ಬೇರೆ ಬೇರೆಯಿರುತ್ತವೆ. ಇಲ್ಲಿ ಇಚ್ಛಾ ಶಬ್ದ ಮೂಲಕ ಅವರ ವರ್ತನಾ ಗತಿಗಳು ಬೇರೆಯಿರುತ್ತವೆಂದು ಹೇಳಿದಂತಾಯಿತು.

ಬಳಿಕ, ಪಲವಾತ್ಮರಿಗೆ ಬೇರೆ ಬೇರೆ ಭೋಗಗಳು ಆಗುತ್ತವೆ. ಅದರಿಂದ ಅನೇಕ ಆತ್ಮರು ಇರುವರೆಂಬುದು ಸಿದ್ಧವಾಗುತ್ತದೆಂದು ಹೇಳುತ್ತಾನೆ.

**ಜನಿಯೊಬ್ಬನಿಗೆ ಮರಣದನುವೊಬ್ಬನಿಗೆ ನಿಬಂ ।**
**ಧನವದೊಬ್ಬನಿಗೆ ಮುಕುತಿಯೊಬ್ಬನಿಗಪ್ಪ ।**
**ಡನು ನೋಡಲಾತ್ಮರಖಿಳಹರು ॥೭॥**

ಟೀಕಾ:- ಒಬ್ಬನಿಗೆ=ಓರ್ವನಿಗೆ, ಜನಿಯು=ಹುಟ್ಟುವಿಕೆಯು, ಒಬ್ಬನಿಗೆ= ಮತ್ತೊಬ್ಬನಿಗೆ, ಮರಣದನುವು=ಮರಣದ ಸ್ಥಿತಿಯು, ಒಬ್ಬನಿಗೆ=ಇನ್ನೊಬ್ಬನಿಗೆ, ನಿಬಂಧನವದು=ಬಂಧವು, ಒಬ್ಬನಿಗೆ= ಒಬ್ಬನಿಗೆ, ಮುಕುತಿಯು = ಮೋಕ್ಷವು, ಅಪ್ಪುದನು=ಆಗುವದನ್ನು, ನೋಡಲ್=ವಿಚಾರಮಾಡಲು, ಆತ್ಮರು=ಜೀವಾತ್ಮರು, ಅಖಿಳರು=ಅನೇಕರಿರುವರು.

ತಾತ್ಪರ್ಯ:- ಲೋಕದಲ್ಲಿ ಬೇರೆ ಬೇರೆ ಜನರಿಗೆ ಬೇರೆ ಬೇರೆ ಭೋಗಗಳು ಆಗುತ್ತಿರುವದನ್ನು ನಾವು ಪ್ರತ್ಯಕ್ಷವಾಗಿ ಕಾಣುತ್ತಲಿರುತ್ತೇವೆ. ಹೇಗಂದರೆ; ಒಬ್ಬನು ಹುಟ್ಟುತ್ತಿರುವಾಗ ಮತ್ತೊಬ್ಬನು ಸಾಯುತ್ತಿರುತ್ತಾನೆ. ಒಬ್ಬನು ಅಜ್ಞಾನಿಯಾಗಿ ತಾನು ಯಾರು? ಎಂಬುದನ್ನು ತಿಳಿಯದೆ ಬಂಧಾವಸ್ಥೆಯಲ್ಲಿದ್ದರೆ; ಮತ್ತೊಬ್ಬನು ಜ್ಞಾನವನ್ನು ಪಡೆದುಕೊಂಡು ಆನಂದರೂಪ ಮುಕ್ತಿಸ್ಥಿತಿಯಲ್ಲಿರುತ್ತಾನೆ. ಹೀಗೆ ಒಬ್ಬನು ದುಃಖಿಯಾಗಿದ್ದರೆ, ಮತ್ತೊಬ್ಬನು ಸುಖಿಯಾಗಿರುತ್ತಾನೆ. ಇವುಗಳಂತೆ ಪರಸ್ಪರ ವಿರೋಧಗಳಾದ ಭೋಗಗಳನ್ನು ಅನುಭವಿಸುವಂಥಾ, ಭೋಕ್ತೃಗಳನ್ನು ನಾವು ಕಾಣುತ್ತಲಿರುತ್ತೇವೆ. ಆದ್ದರಿಂದ ಆತ್ಮರು ಅನೇಕರೆಂದು ಹೇಳುವದು ಯೋಗ್ಯವಾಗಿದೆ. ಅನೇಕ ದೇಹಗಳಲ್ಲಿ ಒಬ್ಬಾತ್ಮನಿರುವನೆಂದು ಹೇಳುವದು ಸರಿ ಕಾಣುವದಿಲ್ಲ.

ಬಳಿಕ, ಹೇ ಗುರುವೇ! ತಾವು ಪಲವಾತ್ಮರಲ್ಲ. ಏಕಾತ್ಮನೇ ಎಂದು ಹೇಳಿದರೆ, ಒಬ್ಬನಿಗಾದ ಸುಖವು ಸರ್ವರಿಗೂ ಆಗಬೇಕಾಗಿತ್ತೆಂದು ಪ್ರಶ್ನೆಯನ್ನು ಮಾಡುತ್ತಾನೆ.

**ಇಂತಲ್ಲದಿರ್ದೊಡೋರ್ವಂ ತನ್ನ ಸತಿಯು ರ।**
**ತ್ಯಂತ ಸುಖಿಯಾಗಲದು ಗೋಪಿಯರೊಳು ಹರಿ।**
**ಯಂತೆಲ್ಲಕಾಗುತಿರಬೇಕು ॥೮॥**

ಟೀಕಾ:- ಇಂತು = ಈ ಪ್ರಕಾರ, ಅಲ್ಲದಿರ್ದೊಡೆ = ಅಲ್ಲೆಂದು ಹೇಳಿದರೆ, ಓರ್ವಂ=ಒಬ್ಬನು, ತನ್ನ=ಸ್ವಕೀಯ, ಸತಿಯು = ಸ್ತ್ರೀಯಳ, ರತ್ಯಂತ=ರತಿಯ ಅಂತ್ಯದಲ್ಲಿ, ಸುಖಿಯಾಗಲ್ = ಸುಖವುಳ್ಳವನಾಗಲು, ಅದು = ಆ ಸುಖವು, ಗೋಪಿಯರೊಳು=ಗೋಪಿಕಾಸ್ತ್ರೀಯರಲ್ಲಿದ್ದ, ಹರಿಯಂತೆ=ಶ್ರೀಕೃಷ್ಣಪರಮಾತ್ಮನ ಹಾಗೆ, ಎಲ್ಲಕೆ=ಎಲ್ಲರಿಗೂ, ಆಗುತಿರಬೇಕು=ಆಗುತ್ತಿರಬೇಕು.

ತಾತ್ಪರ್ಯ:- ಹೇ ಗುರುವೇ! ತಾವು ಏಕಾತ್ಮನೆಂದು ಹೇಳುವ ಮಾತು ನಿಜವಾಗಿದ್ದರೆ, ಒಬ್ಬನಿಗಾದ ಸುಖವು ಎಲ್ಲರಿಗೂ ಆಗಬೇಕಾಗಿತ್ತು. ಅಂದರೆ,

ಒಬ್ಬಾತ್ಮನೆಂಬುದನ್ನು ಅಂಗೀಕರಿಸಲಿಕ್ಕೆ ಬರುತ್ತದೆ. ಹೇಗಂದರೆ, ಒಂದಾನೊಂದು ದಿವಸ ನಾರದ ಮಹರ್ಷಿಯು ಜಲದಲ್ಲಿರುವ ಮೀನಗಳು ಮಿಥುನವಾಗಿರುವದನ್ನು ಕಂಡು, ತನ್ನೊಳಗೆ ಆಲೋಚನೆಯನ್ನು ಮಾಡಿದನು. ಏನಂದರೆ 'ಬ್ರಹ್ಮಾದಿ ಪಿಪೀಲಿಕಾ ಪರ್ಯಂತರ ಸರ್ವ ಜಂತುಗಳು, ಸ್ವಾಭಾವಿಕವಾಗಿ ಮೈಥುನ ವ್ಯವಹಾರದಲ್ಲಿ ಪ್ರವೃತ್ತಗಳಾಗಿವೆ. ಅದರಿಂದ ಇದರಲ್ಲಿ ಏನಾದರೊಂದು ವಿಶೇಷವಾದ ಸುಖವಿರಲಿಕ್ಕೇಬೇಕು. ಅದನ್ನು ನಾನೂ ಅನುಭವಮಾಡಿ ನೋಡಬೇಕೆಂದು ತನ್ನ ಮನಸ್ಸಿನಲ್ಲಿ ನಿಶ್ಚಯ ಮಾಡಿದನು. ಮತ್ತು ನನಗೆ ಕನ್ಯೆಯನ್ನು ಯಾರು ಕೊಡುವರು? ಯಾರಲ್ಲಿ ಹೋಗೋಣ? ಅನ್ನುವಷ್ಟರಲ್ಲಿ ಅವನಿಗೊಂದು ವಿಚಾರ ಹೊಳೆಯಿತು. ಏನಂದರೆ, ಶ್ರೀಕೃಷ್ಣ ಪರಮಾತ್ಮನಲ್ಲಿ ಅನೇಕ ಜನ ಗೋಪಿಕಾ ಸ್ತ್ರೀಯರಿರುವರು. ಭಗವಂತನೂ ನನಗೆ ಬೇಕಾದವನು. ಅವನ ನಾಮವನ್ನು ಹೊಗಳುತ್ತಾ ಮೂರು ಲೋಕಗಳನ್ನು ಸುತ್ತುತ್ತಿರುತ್ತೇನೆ. ನನಗೆ ಗೋಪಿಕೆಯನೊಬ್ಬಳನ್ನು ಕೊಡು ಎಂದು ಕೇಳಿದರೆ, ಇಲ್ಲೆಂದು ಹೇಳಲಾರನು. ಇದೇ ಸರಿಯಾದ ಸಂಕಲ್ಪವು. ಎಂದು ನಿಶ್ಚೈಸಿ, ಭಗವಂತನ ಬಳಿಗೆ ಹೋದನು. ಹೇ ಭಗವನ್! ನನಗೆ ಒಬ್ಬ ಗೋಪಿಕೆಯನ್ನು ಕೊಡು. ಲಗ್ನಮಾಡಿಕೊಳ್ಳುತ್ತೇನೆಂದು ಕೇಳಿದನು. ಅದಕ್ಕೆ ಶ್ರೀಹರಿಯು 'ಒಳ್ಳೇದು ಹಾಗೆ ಆಗಲಿ. ಆದರೆ, ನಾನಿಲ್ಲದ ಮನೆಯಲ್ಲಿರುವ ಗೋಪಿಯನ್ನು ಲಗ್ನವಾಗು'. ಎಂದು ಹೇಳಿದನು. ನಾರದನು ಬೆಳತನಕ ಯಾವ ಯಾವ ಮನೆಗೆ ಹೋದರೂ, ಅಲ್ಲಿ ಹರಿಯು ವಾಸಮಾಡಿದ್ದನು. ತನ್ನಿಷ್ಟವು ಸಿದ್ಧಿಸದೆ ಚಿಂತಾ ದುಃಖದಲ್ಲಿ ನಾರದರು ಮಗ್ನರಾದರು. ಎಂದು ಪೌರಾಣಿಕ ಕಥೆಯಿದೆ. ಒಬ್ಬ ಗೋಪಿಯ ಮನೆಯಲ್ಲಿದ್ದ ಹರಿಯೇ ಎಲ್ಲ ಗೋಪಿಯರ ಮನೆಯಲ್ಲಿದ್ದಂತೆ, ಒಬ್ಬನಿಗಾದ ಸುಖವು ಸರ್ವರಿಗೂ ಆಗಬೇಕಾಗಿತ್ತು. ಒಬ್ಬನು ಲೋಕದಲ್ಲಿ ತನ್ನ ಸ್ತ್ರೀಯೊಳೊಡನೆ ರತಿಸುಖವನ್ನು ಅನುಭವ ಮಾಡುತ್ತಿರಲು, ಆ ಸುಖವು ಸರ್ವರಿಗೂ ಆಗಬೇಕಾಗಿತ್ತು. ಈ ಪ್ರಕಾರವಾದ ಅನುಭವವು ಲೋಕದಲ್ಲಿ ಇಲ್ಲಿಯು ವರೆಗೆ ಯಾರಿಗೂ ಇಲ್ಲ. ಆದ್ದರಿಂದ ಒಬ್ಬಾತ್ಮನೆಂದು ಹೇಳದೆ ಅನೇಕಾತ್ಮರೆಂದು ಒಪ್ಪಲೇಬೇಕಾಗುವದು.

**ಬಳಿಕ,** ಮತ್ತು ಏಕಾತ್ಮ ಪಕ್ಷದಲ್ಲಿ ಪ್ರಶ್ನೆಯನ್ನು ಮಾಡುತ್ತಾನೆ.

**ಇರಲೋರ್ವನೊಂದೆಡೆಯೊಳಿರಬೇಕು ಸರ್ವರುಂ।**
**ಮರಣವಾಗಲ್ಕೆ ಮರಣವಹುದಿಂತಿದನೆ।**
**ಗುರುವರ್ಯ ತಿಳುಹಿ ಕೊಡಬೇಕು ॥೯॥**

**ಟೀಕಾ:–** ಓರ್ವನು = ಒಬ್ಬನು, ಒಂದೆಡೆಯೊಳು = ಒಂದು ಸ್ಥಾನದಲ್ಲಿ, ಇರಲ್=ಇರಲಾಗಿ, ಸರ್ವರು=ಎಲ್ಲರೂ, ಇರಬೇಕು=ವಾಸಮಾಡಬೇಕು, ಮರಣ

ವಾಗಲ್ಕೆ=ಸತ್ತುಹೋದರೆ, ಮರಣವಹುದು=ಸಾಯಬೇಕು, ಇಂತಿದನೆ=ಈ ರೀತಿಯೊಗುವದನ್ನು, ಗುರುವರ್ಯ = ಗುರುಶ್ರೇಷ್ಠನೇ !, ತಿಳುಹಿಕೊಡಬೇಕು = ತಿಳಿಸಬೇಕು.

**ತಾತ್ಪರ್ಯ**:- ಒಬ್ಬಾತ್ಮನಿದ್ದದ್ದು ನಿಜವಾದರೆ, ಒಬ್ಬನು ಒಂದು ಸ್ಥಾನದಲ್ಲಿ ವಾಸಮಾಡಿದರೆ, ಸರ್ವರೂ ವಾಸಮಾಡಿಕೊಂಡಿರಬೇಕು. ಒಬ್ಬನು ಸತ್ತರೆ, ಸರ್ವರೂ ಸಾಯಬೇಕು. ಹೀಗೆ ಏನಾದರೂ ಲೋಕದಲ್ಲಿ ಆಗಿದ್ದರೆ, ಒಬ್ಬಾತ್ಮನಿದ್ದಾನೆಂದು ತಿಳಿಯುತ್ತಿದ್ದೆವು. ಹೀಗೆ ಇಲ್ಲ, ಆದ್ದರಿಂದ ಒಬ್ಬಾತ್ಮನೆಂದು ತಾವು ಹೇಳುವ ಮಾತು ನಮ್ಮ ಅನುಭವಕ್ಕೆ ಬರುವದಿಲ್ಲ. ತಾವೇ ಈ ನಮ್ಮ ಸಂಶಯವನ್ನು ಬಿಡಿಸಿ, ಸರಿಯಾದ ಜ್ಞಾನವನ್ನುಂಟು ಮಾಡಬೇಕೆಂದು ಶಿಷ್ಯನು ಬೇಡಿಕೊಳ್ಳುತ್ತಾನೆ.

## ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿದೀ ಕ್ಕೆ

**ಬಳಿಕ,** ಪೂರ್ವಸೂತ್ರದಲ್ಲಿ ಶಿಷ್ಯನು ಏಕಾತ್ಮನೆಂಬುದನ್ನು ಕೇಳಿ ಸಂಶಯಚಿತ್ತವುಳ್ಳವನಾಗಿ,ಸುಖ ದುಃಖಾದಿ ಭೋಗಗಳು ಭಿನ್ನ ಭಿನ್ನಗಳಾದ್ದರಿಂದ ಆತ್ಮರು ಅನೇಕರು ಇರಲಿಕ್ಕೇಬೇಕು. ಒಬ್ಬನಾದ ಪಕ್ಷದಲ್ಲಿ ಒಬ್ಬನಿಗಾದ ಭೋಗವು ಎಲ್ಲರಿಗೂ ಆಗಬೇಕಾಗಿತ್ತು. ಹಾಗಿಲ್ಲದ್ದರಿಂದ ತಾವು ಆತ್ಮನು ಒಬ್ಬನಿದ್ದಾನೆಂದು ಹೇಗೆ ಹೇಳುವಿರಿ? ಎಂಬ ಪ್ರಶ್ನೆಗೆ, ಗುರುಗಳು ಈ ಸೂತ್ರದಲ್ಲಿ ಉತ್ತರವನ್ನು ಹೇಳುತ್ತಾರೆ. ಹೇ ಶಿಷ್ಯನೇ! ಕೇಳು. ಏಕಾತ್ಮನೆಂದರೆ ಅನೇಕ ಭೋಗಗಳ ವ್ಯವಸ್ಥೆಯಾಗುವದಿಲ್ಲವೆಂದು ತಿಳಿದು, ಅನೇಕಾತ್ಮರು ಇದ್ದಾರೆಂದು ಒಪ್ಪಿದರೂ, ಭೋಗದ ವ್ಯವಸ್ಥೆಯಾಗುವದಿಲ್ಲವೆಂದು ಹೇಳುತ್ತಾರೆ. ಹೇಗಂದರೆ; ಅನೇಕಾತ್ಮರು ಪೂರ್ಣರೋ ? ಪರಿಚ್ಛಿನ್ನರೋ ? ಪರಿಚ್ಛಿನ್ನರು ಅಂದರೆ ಅನಿತ್ಯತ್ವವನ್ನು ಹೇಳಬೇಕಾಗುತ್ತದೆ. ತನಗೇ ತಾನು ಅನಿತ್ಯವನ್ನು ಯಾರೂ ಒಪ್ಪರು. ಶ್ರುತಿಯೂ ಈ ಮಾತನ್ನು ಸಹನಮಾಡದು. ಪೂರ್ಣರು ಎಂದು ಅನ್ನಬೇಕಾಗುವದು. ಪೂರ್ಣರೂ ನಿತ್ಯರೂ ಆದ ಅನೇಕಾತ್ಮರು ಒಂದೊಂದು ದೇಹದಲ್ಲಿರುವರೆಂದು ಒಪ್ಪಬೇಕಾಗುತ್ತದೆ. ಒಂದು ದೇಹದಲ್ಲಿ ಅನೇಕಾತ್ಮರು ಕೂಡಿರುವದರಿಂದ; ಈ ದೇಹದಲ್ಲಿ ಆದ ಸುಖದುಃಖಗಳನ್ನು ಯಾವ ಆತ್ಮನು ಅನುಭವ ಮಾಡಿದನು ? ಹೇಳು ಎಂದು ಕೇಳಿದರೆ; ಬೇರ್ಪಡಿಸಿ ತೋರಿಸುವದು ನಿನ್ನಿಂದಾಗದು, ಕರ್ಮ ಅಥವಾ ಕರ್ಮದ ಅಭಿಮಾನಗಳು ನಿಮಿತ್ತವಾಗಿವೆಯೆಂದು ನೀನು ಹೇಳಬಹುದು. ಇದು ಆಗದು. ಯಾಕಂದರೆ, ಆ ಕರ್ಮಾದಿಗಳನ್ನು ಮಾಡುವಕಾಲಕ್ಕೆ ಅದರ ಕರ್ತೃತ್ವಾಭಿಮಾನಗಳೆಲ್ಲರಿಗೂ ಉಂಟು.

ಆದ್ದರಿಂದ ಈ ಕಾರಣವು ಸರಿಹೋಗದು. ಭೋಗವನ್ನು ನಿಯಮನ ಮಾಡು ವಂಥಾ ಶಕ್ತಿಯುಂಟು. ಅದು ಈಶ ನಿರ್ಮಿತವಾಗಿದೆ. ಅದು ಅವರವರ ಭೋಗ ಗಳನ್ನು ಅವರಿಗೆ ಕೊಡುತ್ತದೆ. ಒಬ್ಬರ ಭೋಗವನ್ನು ಮತ್ತೊಬ್ಬನಿಗೆ ಕೊಡ ಲಾರದು. ಎಂದು ಹೇಳಿದರೆ, ಕರ್ಮ ಮಾಡುವಾಗ್ಯೆ ದೇಹದಲ್ಲಿ ಎಲ್ಲಾತ್ಮರೂ ಇದ್ದಾರೆ. ಕರ್ಮಫಲವನ್ನು ಊಟಮಾಡುವ ಕಾಲಕ್ಕೂ ಎಲ್ಲರೂ ಉಂಟು. ಅಂದ ಮೇಲೆ, ಆ ಭೋಗನಿಯಾಮಕ ಶಕ್ತಿಯು ಒಬ್ಬರಿಗೆ ಭೋಗವನ್ನು ಕೊಟ್ಟು, ಒಬ್ಬರಿಗೆ ಬಿಡದು. ಕಿಂತು, ಮನೆಯಲ್ಲಿರುವ ದೀಪದಂತೆ ಎಲ್ಲಾತ್ಮ ರಿಗೂ ಭೋಗಕೊಡುತ್ತದೆ. ಹೀಗಾದ ಮೇಲೆ ಯಾವ ಅತ್ಮನು ಈ ದೇಹದಲ್ಲಿ ಭೋಗವನ್ನು ಉಂಡನು, ಯಾವನು ಉಣಲಿಲ್ಲ ಎಂಬುದನ್ನು ಹೇಳಲಿಕ್ಕೆ ಬರದಂತೆ ಆಯಿತು. ಇದರಿಂದ ಭೋಗದ ವ್ಯವಸ್ಥೆಯು ತಪ್ಪಿಹೋಯಿತು. ಯಾಕಂದರೆ; ಯಾವ ಆತ್ಮನು ಕರ್ಮ ಮಾಡಿದನು, ಯಾವನು ಆ ಕರ್ಮದ ಫಲವನ್ನು ಊಟ ಮಾಡಿದನು. ಇದರ ನಿರ್ಣಯವೇ ಆಗದೆ ಹೋಯಿತು- ಏಕಾತ್ಮನೆಂದೊಪ್ಪದೆ, ಅನೇಕಾತ್ಮರೆಂದು ಒಪ್ಪಿದರೂ, ಭೋಗದ **ಅವ್ಯವಸ್ಥೆ ಯಾಯಿತು**- ಅಂದಮೇಲೆ, ಪಲವಾತ್ಮರೆಂದು ಹೇಳುವದರಿಂದ ಪ್ರಯೋಜನ ವೇನುಂಟು? ಆದ್ದರಿಂದ ಅನೇಕಾತ್ಮರೆಂದು ಹೇಳುವದು ಸರಿಯಲ್ಲ. ಎಂಬು ದನ್ನು ಈ ಸೂತ್ರದಲ್ಲಿ ಪ್ರತಿಪಾದಿಸುತ್ತಾರೆ.

**ಸೂತ್ರ ॥ ಪಲವಾತ್ಮರೆಂಬುದಂ ನೆಲೆಗೊಳಿಪೆನೆಂದೊಡದು ।**
**ಫಲಿಸಲರಿಯದು ಯುಕ್ತಿ ಬಾಧ್ಯಮಾಗಿ ॥**

**ಟೀಕಾ:-** ಪಲವಾತ್ಮರೆಂಬುದಂ = ಅನೇಕಾತ್ಮರೆಂಬುದನ್ನು, ನೆಲೆಗೊಳಿಪೆ ನೆಂದೊಡೆ=ಸಿದ್ಧಾಂತಗೊಳಿಸುವೆನು ಅಂದರೆ, ಅದು = ಪಲವರೆಂಬುದು, ಫಲಿಸ ಲರಿಯದು = ಸಿದ್ಧಿಸಲಾರದು, ಯುಕ್ತಿಬಾಧ್ಯಮಾಗಿ = ಮುಕ್ತಿಯಿಂದ ಬಾಧಿಸಿ ಕೊಳ್ಳುವದರಿಂದ.

**ತಾತ್ಪರ್ಯ:-** ಅನೇಕ ನಿತ್ಯಪೂರ್ಣರಾದ ಆತ್ಮರು ಒಂದು ದೇಹದಲ್ಲಿರುವ ರಾದ್ದರಿಂದ ಭೋಗಸಾಂಕರ್ಯದೋಷವು ಬರುತ್ತದೆ. ಆದ್ದರಿಂದ ಪಲವಾತ್ಮ ರೆಂಬುವದು ಯು:ಕ್ತಿಯಿಂದ ಬಾಧಿಸಿಕೊಳ್ಳುತ್ತದೆ. ಆ ಯುಕ್ತಿಯು ಯಾವದು? ಅಂದರೆ, ಅದು ಮುಂದೆ ಹೇಳುವರೀತಿ ಯಾಗಿರುತ್ತದೆ. ಆದ್ದರಿಂದ ಪಲವಾತ್ಮ ರೆನ್ನುವದು ನಿಜವಲ್ಲ.

**ಬಳಿಕ;** ಗುರುಗಳು- 'ಎಲೈ ಶಿಷ್ಯನೇ! ನೀನು ಮಾಡಿದ ಪ್ರಶ್ನೆಯು ಮನೋ ಹರವಾಗಿದೆ. ಅದಕ್ಕೆ ಉತ್ತರವನ್ನು ಕೊಡುತ್ತೇನೆ. ಎಂದು ಹೇಳುತ್ತಾರೆ.

**ಅಹುದು ನಿನ್ನೀ ಪ್ರಶ್ನೆಯಹುದಿದಂ ನಿನ್ನ ಮನ ।**
**ವಹುದೆಂಬ ತೆರದೆ ತಿಳುಪುವೆನು ಕೇಳೆಂದು ।**
**ಮಹಿಮ ಗುರು ಶಿಶುವಿಗರುಪಿದನು ॥೧॥**

ಟೀಕಾ:- ನಿನ್ನೀ ಪ್ರಶ್ನೆಯು ಅಹುದಹುದು=ನೀನುಮಾಡಿದ ಪ್ರಶ್ನೆಯು ಹೌದಾಗಿದೆ, ಇದಂ = ಇದನ್ನು, ನಿನ್ನಮನವಹುದೆಂಬತೆರದೆ = ನಿನ್ನ ಮನಸ್ಸು ಒಡಂಬಡುವಹಾಗೆ, ತಿಳುಪುವೆನು=ಹೇಳುತ್ತೇನೆ. ಕೇಳೆಂದು=ಏಕಾಗ್ರದಿಂದಾಲಿಸೆಂದು, ಮಹಿಮಗುರು=ಮಹಿಮಶಾಲಿಯಾದ ಗುರುಗಳು, ಶಿಶುವಿಗೆ=ಏನೊಂದರಿಯದ ಶಿಷ್ಯನಿಗೆ, ಅರುಪಿದನು=ತಿಳಿಸಿದನು,

ತಾತ್ಪರ್ಯ:- ಹೇ ಶಿಷ್ಯನೇ! ನೀನು ಮಾಡಿದ ಪ್ರಶ್ನೆಯು ಯೋಗ್ಯವದೆ. ಸರಿಯಾದ ಉತ್ತರವನ್ನು ಹೇಳುತ್ತೇನೆ. ಮತ್ತು ನಿನ್ನ ಮನಸ್ಸು ಹೌದು ಎಂದು ಒಡಂಬಡುವಹಾಗೆ ಹೇಳುತ್ತೇನೆ. ಅಂದರೆ ಪುನಃ ಸಂಶಯಗಳು ಉದಯವಾಗದ ಹಾಗೆ ಹೇಳುತ್ತೇನೆ. ನೀನು ಮಾತ್ರ ಏಕಾಗ್ರಚಿತ್ತದಿಂದ ಕೇಳು. ಎಂದು ಗುರುಗಳು ಹೇಳುವಂಥವರಾಗಿದ್ದಾರೆ.

ಬಳಿಕ, ಅನೇಕಾತ್ಮರೆಂದು ಹೇಳುವವನು ಅವರೆಲ್ಲರು ನಿತ್ಯರೆಂದು, ಅವನು ಅಂಗೀಕರಿಸಲಿಕ್ಕೆ ಬೇಕಾಗುವದೆಂದು ಹೇಳುತ್ತಾರೆ.

**ಚಿತ್ತುಗಳನೇಕವಂ ಬಿತ್ತರಿಪೆನೆಂಬವಂ ।**
**ಗುತ್ತರಂ ಗೊಡುವೆನಿಲ್ಲಿ ಪಲವಾತ್ಮರುಂ ।**
**ನಿತ್ಯರೆನ ಬೇಹು ದವನೊಮ್ಮೆ ॥೨॥**

ಟೀಕಾ:- ಚಿತ್ತುಗಳ=ಆತ್ಮರ, ಅನೇಕವಂ=ಬಹುತ್ವವನ್ನು, ಬಿತ್ತರಿಪೆನು=ವಿಸ್ತಾರಮಾಡುವೆನು, ಎಂಬವಂಗೆ=ಅನ್ನುವಂಥವನಿಗೆ, ಇಲ್ಲಿ=ಇದರಲ್ಲಿ, ಉತ್ತರಂಗೊಡುವೆನು=ಉತ್ತರವನ್ನು: ಕೊಡುತ್ತೇನೆ, ಇಲ್ಲಿ=ಈ ವಿಷಯದಲ್ಲಿ, ಅವನು=ಆತನು, ಒಮ್ಮೆ=ಒಂದು ಸಾರೆಯಾದರೂ, ಪಲವಾತ್ಮರು=ಅನೇಕಾತ್ಮರು ನಿತ್ಯರೆನಬೇಹುದು=ನಿತ್ಯರಾದವರೆಂದು ಅಂಗೀಕರಿಸಲಿಕ್ಕೇ ಬೇಕು.

ತಾತ್ಪರ್ಯ:- ಪಲವಾತ್ಮಪಕ್ಷವನ್ನು ಸಿದ್ಧಾಂತ ಗೊಳಿಸುತ್ತೇನೆ. ಎಂಬಾತನನ್ನು ಕುರಿತು; ಇಲ್ಲಿ ಉತ್ತರವನ್ನು ಕೊಡುತ್ತೇವೆ. ಏನಂದರೆ ಅನೇಕಾತ್ಮರು ಅಂದರೆ ಅವರು ಘಟದಂತೆ ಅನಿತ್ಯರೋ? ಅಥವಾ ನಿತ್ಯರೋ? ಎಂದು ಕೇಳಿನರೆ, ಅನಿತ್ಯರೆಂದು ಹೇಳಲಿಕ್ಕೆ ಆಗುವದಿಲ್ಲ. ಪುರುಷಾರ್ಥದಿಂದ ಚ್ಯುತಿಯಾಗ ಬೇಕಾಗುತ್ತದೆ. ಅಂದರೆ ತಾನೇ ಇಲ್ಲದವನಾದ ಮೇಲೆ, ಮೋಕ್ಷವು ಯಾರಿಗೆ ಹೇಳಿ

ಬೇಕು? ಇದರಿಂದ ಲೌಕಿಕ ವೈದಿಕ ಶಾಸ್ತ್ರಾದಿಗಳೆಲ್ಲವು ನಿಷ್ಪ್ರಯೋಜನಗಳೆನ ಬೇಕಾದೀತು. ಆದ್ದರಿಂದ ಆತ್ಮನು ನಿತ್ಯನೆಂದೇ ಹೇಳಬೇಕು. ಪರಿಚ್ಛಿನ್ನವಿದ್ದದ್ದು ಅನಿತ್ಯವಾಗುತ್ತದೆ. ಪೂರ್ಣವಿದ್ದದ್ದು ನಿತ್ಯವೆನಿಸುತ್ತದೆ. ಆತ್ಮನು ನಿತ್ಯರೆಂದು ಹೇಳಿದ ಮೇಲೆ, ಪೂರ್ಣವೆಂಬುದನ್ನು ಅವಶ್ಯ ಅಂಗೀಕಾರಮಾಡಬೇಕು. ಪೂರ್ಣತ್ವನೆಂದು ಒಪ್ಪಿದರೆ, ಆತ್ಮನು ಏಕನೆಂದು ಹೇಳಬೇಕಾಗುತ್ತದೆ. ಒಬ್ಬ ನೆಂದು ಹೇಳಿದರೆ, ಅನೇಕಾತ್ಮರೆಂಬುವದು ಹಾನಿಯಾಗುತ್ತದೆ. ಮತ್ತು ಅನೇಕ ರೆಂದು ಒಪ್ಪಿದರೆ, ಪರಿಚ್ಛಿನ್ನರೆಂದು ಹೇಳಬೇಕಾಗುತ್ತದೆ. ಪೂರ್ಣತ್ವವನ್ನು ಅಂಗೀಕರಿಸದಿದ್ದರೆ ಅನಿತ್ಯತ್ವವು ಬರುತ್ತದೆ. ಆದ್ದರಿಂದ ಅನೇಕಾತ್ಮರು ಪೂರ್ಣರೂ ನಿತ್ಯರೂ ಆಗಿರುತ್ತಾರೆ. ಎಂದು ಒಪ್ಪಬೇಕು.

ಬಳಿಕ ಅನೇಕಾತ್ಮರು ನಿತ್ಯರೂ, ಪೂರ್ಣರೂ ಆದಮೇಲೆ, ಒಂದು ದೇಹ ದಲ್ಲಿ ಎಲ್ಲರೂ ಇರಬೇಕಾಗುತ್ತದೆಂದು ಹೇಳುತ್ತಾರೆ.

**ಎಲ್ಲರುಂ ಪೂರ್ಣರೆಂಬಲ್ಲಿ ಯೊಂದೊಂದೊಡಲೊ|**
**ಳೆಲ್ಲರಿಹರಾಗಿ ಭೋಗಸಾಧನವಪ್ಪು|**
**ದೆಲ್ಲರ್ಗೆ ತನುವಿದೆನಬೇಕು ||೩||**

**ಟೀಕಾ:-** ಎಲ್ಲರುಂ=ಸಕಲಾತ್ಮರು, ಪೂರ್ಣರೆಂಬಲ್ಲಿ = ವ್ಯಾಪಕರಾಗುವ ರೆಂದು ಅನ್ನುವದಾದರೆ, ಒಂದೊಂದು=ಪ್ರತಿಯೊಂದು, ಒಡಲೊಳು=ದೇಹದಲ್ಲಿ, ಎಲ್ಲರಿಹರಾಗಿ=ಎಲ್ಲಾ ಆತ್ಮರು ಇರುವದರಿಂದ, ಎಲ್ಲರ್ಗೆ=ಪಲವಾತ್ಮರಿಗೂ, ತನು ವಿದು= ಈ ಶರೀರವು, ಭೋಗಸಾಧನವಪ್ಪುದು= ಸುಖ ದುಃಖ ಭೋಗಕ್ಕೆ ಸಾಧನ ವಾಗಿರುವದೆಂದು, ಎನಬೇಕು=ಅಂಗೀಕರಿಸಲಿಕ್ಕೇಬೇಕು.

**ತಾತ್ಪರ್ಯ:-** ಪಲವಾತ್ಮರು, ನಿತ್ಯರು, ಪೂರ್ಣರು ಆಗಿರುವರೆಂದು ಹೇಳಿದ ಮೇಲೆ, ಪೂರ್ಣ ಲಕ್ಷಣದಿಂದ ಸಕಲರೂ ಒಂದು ದೇಹದಲ್ಲಿ ಕೂಡಿರಬೇಕಾಯಿತು. ಯಾಕಂದರೆ, ಅನೇಕ ಸಾಕಾರ ಸಾವಯುವ ಘಟಾದಿ ಪದಾರ್ಥಗಳು, ಒಂದು ಸ್ಥಳದಲ್ಲಿ ಕೂಡಿರಲಿಕ್ಕೆ ಬರುವದಿಲ್ಲ. ಕಿಂತು ನಿರಾಕಾರ ನಿರವಯುವಗಳು ಮಾತ್ರ ಒಂದೆಡೆಯಲ್ಲಿ ಕೂಡಿರಲಿಕ್ಕೆ ಬರುತ್ತವೆ. ಹೇಗಂದರೆ, ಪೂರ್ವಾದಿ ದಶದಿಕ್ಕುಗಳು ನಿರೂಪಗಳಾದ್ದರಿಂದ ಒಂದೇ ಸ್ಥಳದಲ್ಲಿ ಕೂಡಿರುವಂತೆ, ಅನೇಕಾತ್ಮರು ನಿರಾ ಕಾರ ನಿರವಯರಾದ್ದರಿಂದ ಒಂದೊಂದು ದೇಹದಲ್ಲಿ ಎಲ್ಲರೂ ಕೂಡಿಯೇ ಇರುವ ರೆಂದು ಹೇಳಬೇಕಾಗುತ್ತದೆ. ಹೀಗೆ ಇದನ್ನು ಒಪ್ಪಿದ ಬಳಿಕ, ಈ ಶರೀರವು ಸಕ ಲಾತ್ಮರಿಗೂ ಸುಖ ದುಃಖ ಭೋಗಗಳನ್ನು ಭೋಗಿಸುವದಕ್ಕೆ ಸಾಧನವಾಗಿದೆ ಯೆಂದು ಅನ್ನಬೇಕಾಗುತ್ತದೆ. ಯಾಕಂದರೆ, ಒಂದು ದೇಹದಲ್ಲಿ ಎಲ್ಲರೂ ಕೂಡಿ

ಋುವ ಕಾರಣದಿಂದ ಎಲ್ಲರಿಗೂ ಸಾಧನವಾಗಿರುತ್ತದೆ. ಒಂದು ಮನೆಯಲ್ಲಿ ಹತ್ತು ಜನ ಕುಟುಂಬಿಗರು ಕೂಡಿರುವದರಿಂದ, ಎಲ್ಲರ ವಾಸಕ್ಕೂ ಮನೆಯು ಸಾಧನವಾದಂತೆ, ಈ ದೇಹವು ಅನೇಕಾತ್ಮರಿಗೆ ಸಾಧನವಾಗಿದೆಯೆಂದು ಒಪ್ಪಬೇಕಾಗುತ್ತದೆ.

ಬಳಿಕ, ದೇಹವು ಎಲ್ಲರ ಭೋಗಕ್ಕೆ ಸಾಧನವಾದಮೇಲೆ, ಈ ದೇಹದಲ್ಲಿ ಋುವ ಸುಖ ದುಃಖ ಭೋಗಗಳನ್ನು ಯಾವಾತನು ಅನುಭವಿಸುತ್ತಾನೆಂದು ತಿಳಿಯದೆ ಹೋಗುತ್ತದೆಂದು ಹೇಳುತ್ತಾರೆ.

**ಅದನೊಪ್ಪಲಾವಾತನಿದರಲ್ಲಿ ಭೋಗಿಸುವ ।**
**ನದನರಿಯಬಾರದಖಿಳರುಂ ಕೂಡಿ ದೇ ।**
**ಹದೊಳಿರ್ಪರಾದ ಕಥದಿಂದ । ॥೪॥**

**ಟೀಕಾ--** ಅದನು = ಒಂದು ದೇಹದಲ್ಲಿ ಎಲ್ಲರು ಕೂಡಿಕೊಂಡಿರುವದನ್ನು, ಒಪ್ಪಲ್=ಅಂಗೀಕಾರ ಮಾಡಿದರೆ, ಆವಾತನು=ಯಾವ ಆತ್ಮನು, ಇದರಲ್ಲಿ = ಈ ದೇಹದಲ್ಲಿ, ಭೋಗಿಸುವನು = ಸುಖ ದುಃಖಗಳನ್ನು ಉಣ್ಣುವನು, ಅದನು=ಈ ಮಾತನ್ನು (ವಿಷಯವನ್ನು), ಅರಿಯಬಾರದು=ತಿಳಿಯುವದಕ್ಕೆ ಬರಲಾರದು, (ಯಾಕಂದರೆ) ಅಖಿಳರುಂ=ಸಕಲಾತ್ಮರು, ಕೂಡಿ=ಬೆರತು, ದೇಹದೊಳು=ದೇಹದಲ್ಲಿ, ಇರ್ಪರಾದ ಕಥದಿಂದ=ಇರುವ ಕಾರಣದಿಂದ.

**ತಾತ್ಪರ್ಯ:-** ಒಂದು ದೇಹದಲ್ಲಿ ಅನೇಕಾತ್ಮರು ಇರುವರೆಂಬುದನ್ನು ಒಪ್ಪಿದಮೇಲೆ; ಇವರಲ್ಲಿ ಯಾವಾತನು ಈ ಶರೀರ ಸಂಬಂಧಗಳಾದ ಸುಖ ದುಃಖಗಳನ್ನು ಅನುಭವಿಸುವನು ? ಹೇಳು. ಬೇರ್ಪಡಿಸಿ ಇಂಥಾ ಆತ್ಮನೇ ಈ ದುಃಖವನ್ನು ಉಣ್ಣುತ್ತಾನೆಂಬುದು ತಿಳಿಯಲಿಕ್ಕೆ ಬಾರದೆ ಹೋಯಿತು. ಈ ಕಾರಣದಿಂದ ಭೋಗಸಾಂಕರ್ಯ ದೋಷವು ಪ್ರಾಪ್ತವಾಗುವದು. ಏಕಾತ್ಮಪಕ್ಷದಲ್ಲಿ ಭೋಗಸಾಂಕರ್ಯವಾಗುವದೆಂದು ನೀನು ಹೇಳಿ, ಅನೇಕಾತ್ಮರೆಂದು ಒಪ್ಪಿದರೂ, ಭೋಗಸಾಂಕರ್ಯ ದೋಷವು ತೊಲಗಲಿಲ್ಲ. ಅಂದಮೆಲೆ; ಅನೇಕ ಆತ್ಮರು ಪೂರ್ಣವಾಗಿರುವರೆನ್ನುವದರಿಂದ ಪ್ರಯೋಜನವೇನು ? ಹೇಳು. ಎಂಬ ಭಾವವು.

ಬಳಿಕ, ಅನೇಕಾತ್ಮವಾದಿಯು- 'ನಮ್ಮ ಮತದಲ್ಲಿ ಭೋಗಸಾಂಕರ್ಯ ದೋಷವು ಬರುವದಿಲ್ಲ. ಯಾಕಂದರೆ, ಯಾವಾತನ ಕರ್ಮದಿಂದ ಈ ದೇಹವು ಜನಿಸಿರುವದೋ, ಅವನಿಗೆ ಈ ದೇಹದ ಭೋಗವಾಗುತ್ತದೆ. ಅನ್ಯರಿಗೆ ಆಗುವದಿಲ್ಲ, ಎಂದು ಉತ್ತರವನ್ನು ಹೇಳುತ್ತಾನೆ.

**ತನ್ನ ಸುಕೃತಾದಿಯಿಂದಂ ನೆಗಳಿದಂಗವಿದು ।**
**ತನ್ನದೇ ಯೆಂದೊಡಾ ಸುಕೃತವಖಿಳರೊಳ ।**
**ಗುಂ ನೋಡಲುಂಟೆನಿಸಿ ತೋರ್ಕು ॥೫॥**

**ಟೀಕಾ:-** ತನ್ನ=ಸ್ವಕೀಯ, ಸುಕೃತಾದಿಯಿಂದಂ=ಪುಣ್ಯ ಪಾಪಗಳಿಂದ, ನೆಗಳಿದ=ರಚಿಸಿದ, ಅಂಗವಿದು=ಈ ಶರೀರವಿರುತ್ತದೆ, ತನ್ನದೇಯೆಂದೊಡೆ=ತನ್ನದೊಬ್ಬನದೇಯೆಂದು ಹೇಳಿದರೆ, ಆ ಸುಕೃತವು=ಆ ಪುಣ್ಯವು, ಅಖಿಳರೊಳಗುಂ=ಎಲ್ಲರಲ್ಲಿಯೂ, ನೋಡಲ್=ವಿಚಾರಮಾಡಲಾಗಿ, ಉಂಟೆನಿಸಿತೋರ್ಕು=ಇರುತ್ತದೆಂದು ತೋರುತ್ತದೆ.

ತಾತ್ಪರ್ಯ:- ಯಾವ ಆತ್ಮನು ಜನ್ಮಾಂತರದಲ್ಲಿ ಪುಣ್ಯ ಪಾಪಗಳನ್ನು ಮಾಡಿರುವನು. ಆ ಪುಣ್ಯ ಪಾಪಕರ್ಮಗಳಿಂದ ಈ ಶರೀರವು ಬಂದಿರುತ್ತದೆ, ಆ ಕರ್ಮಗಳನ್ನು ಮಾಡಿದ ಆತ್ಮನಿಗೆ ಈ ಶರೀರವು ಭೋಗಕ್ಕೆ ಸಾಧನವಾಗಿದೆ. ಅನ್ಯಾತ್ಮರುಗಳಿಗೆ ವಾಸಕ್ಕೆ ಮಾತ್ರ ಸಾಧನವಾಗಿದೆ. ಹೀಗೆ ಹೇಳುವದರಿಂದ ಭೋಗಸಾಂಕರ್ಯವು ಆಗುವದಿಲ್ಲ. ಅನ್ಯ ಅನೇಕಾತ್ಮರು ಶರೀರದಲ್ಲಿದ್ದರೂ, ಅವರು ಕರ್ಮಕ್ಕೆ ಕರ್ತರಲ್ಲದ್ದರಿಂದ ಈ ದೇಹದ ಭೋಕ್ತೃರೂ ಅಲ್ಲ. ಯಾವನು ಕರ್ಮಕ್ಕೆ ಕರ್ತನೋ, ಆವನು ಭೋಕ್ತೃವಾಗಿರುತ್ತಾನೆ. ಅನ್ಯರಲ್ಲ. ಹೇಗಂದರೆ; ಒಂದು ಮನೆಯಲ್ಲಿ ಅನೇಕ ಜನರುಂಟು, ಅವರಲ್ಲಿ ಯಾವನು ಕಳವನ್ನು ಮಾಡಿರುವನೋ, ಅವನೊಬ್ಬನೇ ಅಪರಾಧಿಯು. ಮಿಕ್ಕವರು ನಿರಪರಾಧಿಗಳು ಹೇಗೋ, ಹಾಗೇ ಕರ್ಮಕರ್ತನೇ ಈ ದೇಹದ ಭೋಕ್ತೃವಾಗಿರುವನು. ಅನ್ಯ ಆತ್ಮರು ವಾಸಮಾಡಿಕೊಂಡಿದ್ದರೂ ಭೋಕ್ತೃಗಳಲ್ಲ. ಎಂದು ಹೀಗೆ ವಾದಿಯು ಹೇಳಿದರೂ, ಸರಿಯಾಗುವದಿಲ್ಲ. ಯಾಕಂದರೆ, ಹಿಂದಿನ ಜನ್ಮದಲ್ಲಿ ಯಾವ ಆತ್ಮನು ಈ ದೇಹಕ್ಕೆ ಸಾಧಕ ಕರ್ಮಗಳನ್ನು ಮಾಡಿದನೋ, ಆ ಕಾಲದಲ್ಲಿ ಅನ್ಯಾತ್ಮರು ಇದ್ದರೋ ? ಇಲ್ಲೋ ? ಹೇಳು. ಇಲ್ಲವೆಂದು ಹೇಳಿದರೆ, ಪರಿಚ್ಛಿನ್ನತ್ವ, ಅನಿತ್ಯತ್ವ, ವ್ಯಾಘಾತ ದೋಷಗಳು ಬರುತ್ತವೆ. ಇದ್ದರೆಂದು ಹೇಳಿದರೆ, ಅವರೂ ಆ ಕರ್ಮಕ್ಕೆ ಕರ್ತರಾಗುವರು. ಕರ್ತರಾದ್ದರಿಂದ ಈಗ ಈ ದೇಹದಲ್ಲಿ ಅವರು ಭೋಕ್ತೃಗಳಾಗಿರುವರು. ಎಂದು ಒಪ್ಪಬೇಕಾಗುವದು. ಹೀಗೆ ಒಪ್ಪಿದರೆ, ಭೋಗದ **ಅವ್ಯವಸ್ಥೆಯೇ** ಪ್ರಾಪ್ತವಾಯಿತು. ಎಂದು ಉತ್ತರವಿತ್ತರು.

**ಬಳಿಕ,** ಪಲವಾತ್ಮವಾದಿಯು 'ಹಿಂದಿನ ಜನ್ಮದಲ್ಲಿ ಕರ್ಮಮಾಡುವಾಗ್ಯೆ ಅನೇಕಾತ್ಮರಿದ್ದರೂ ಅವರು ಕರ್ತರಲ್ಲ. ಯಾಕಂದರೆ, ಅವರಲ್ಲಿ ಯಾವನು ಈ ದೇಹದ ಅಭಿಮಾನ ಮಾಡುವನೋ, ಅವನೊಬ್ಬನೇ ಕರ್ತಾ, ಈ ದೇಹದ ಭೋಕ್ತಾ ಆಗಿರುವನು. ಅನ್ಯರಿದ್ದರೂ ಉದಾಸೀನದಿಂದಿರುವರು. ಆದ್ದರಿಂದ

ಅವರು ಕರ್ತರೂ ಅಲ್ಲ. ಭೋಕ್ತರೂ ಅಲ್ಲ. ಎಂದು ಪುನಃ ತನ್ನ ಮತವನ್ನು ಮಂಡನಮಾಡುತ್ತಾನೆ.

**ಮೊದಲ ದೇಹದೊಳು ತಾನೊದವಿ ಮಾಡಿದ ಸುಕೃತ |**
**ವದು ತನ್ನದೆಂದೊಡಾ ದೇಹದಭಿಮಾನ |**
**ದುದಯುವೆಲ್ಲಾತ್ಮರೊಳಗುಂಟು ||೬||**

**ಟೀಕಾ:-** ಮೊದಲ ದೇಹದೊಳು=ಪೂರ್ವಜನ್ಮದಲ್ಲಿ, ತಾನೊದವಿಮಾಡಿದ= ತಾನು ಪ್ರೀತಿಯಿಂದ ಮಾಡಿರುವ, ಸುಕೃತವದು=ಆ ಪುಣ್ಯವು, ತನ್ನದೆಂದೊಡೆ= ತನ್ನದೇ ಅಂದರೆ, ಆ ದೇಹದಭಿಮಾನದುದಯುವು=ಆ ಶರೀರ ನಾನೆಂಬ ಅಭಿ ಮಾನದ ಉತ್ಪತ್ತಿಯು, ಎಲ್ಲಾತ್ಮರೊಳಗುಂಟು=ಸರ್ವಾತ್ಮರಲ್ಲಿಯೂ ಇರುತ್ತದೆ.

**ತಾತ್ಪರ್ಯ:-** ಒಂದು ದೇಹದಲ್ಲಿ ಅನೇಕಾತ್ಮರು ಸೇರಿದ್ದರೂ, ಯಾವಾ ತನು ಈ ದೇಹದ ಮತ್ತು ಈ ದೇಹದಲ್ಲಿರುವ ಸುಖ ದುಃಖಗಳ ಅಭಿಮಾನವನ್ನು ಮಾಡುವನೋ, ಅವನೇ ಭೋಕ್ತೃವಾಗಿರುವನು. ಉಳಿದವರು ನಿರಭಿಮಾನದಿಂದ ಇರುವರು, ಅವರು ಭೋಕ್ತೃಗಳು ಆಗಲಾರರು. ಹೇಗಂದರೆ, ಒಂದು ಛತ್ರದಲ್ಲಿ ಅನೇಕ ಜನರು ಅನೇಕ ಊರುಗಳಿಂದ ಬಂದು ವಾಸಮಾಡಿಕೊಂಡಿರುತ್ತಾರೆ. ಅವ ರೆಲ್ಲರು ಆ ಛತ್ರದ ಅಭಿಮಾನವನ್ನು ಮಾಡುವದಿಲ್ಲ. ಕಿಂತು, ಸುಮ್ಮನೆ ಎರಡು ಮೂರು ದಿವಸ ವಿಶ್ರಾಂತಿಯನ್ನು ಹೊಂದಿ ಹೊರಟು ಹೋಗುತ್ತಾರೆ. ಆದರೆ, ಯಾವಾತನು ಆ ಛತ್ರವನ್ನು ನಿರ್ಮಾಣಮಾಡಿರುವನೋ, ಅವನೇ ಅದರ ರಕ್ಷಣೆ ಗಾಗಿ ಪ್ರಯತ್ನವನ್ನು ಚಿಂತೆಯನ್ನು ಮಾಡುತ್ತಿರುತ್ತಾನೆ. ಈ ದೃಷ್ಟಾಂತದಂತೆ, ಈ ದೇಹದಲ್ಲಿ ಅನೇಕಾತ್ಮರು ಇರುವರು. ಯಾವ ಆತ್ಮನು ಕರ್ತನಾಗಿ ಕರ್ಮ ಮಾಡಿ ಈ ದೇಹವನ್ನು ಪಡೆದಿರುವನೋ, ಅವನೇ ಅಭಿಮಾನ ಮಾಡುವನು. ಅವನು ಭೋಕ್ತೃವಾಗಿರುವನು. ಈ ವಿಧವಾಗಿ ಭೋಗದ ವ್ಯವಸ್ಥೆಯು ಆಗುತ್ತದೆ. ಆದ್ದರಿಂದ ಆತ್ಮರು ಅನೇಕರಿದ್ದಾರೆ. ಎಂದು ವಾದಿಯು ವಾದಿಸಲು, ಏಕಾತ್ಮ ಪಕ್ಷದ ಸಿದ್ಧಾಂತಿಯು ಇದಕ್ಕೆ ಉತ್ತರವನ್ನು ಕೊಡುತ್ತಾನೆ. ಏನಂದರೆ– ಹಿಂದಿನ ಜನ್ಮದಲ್ಲಿ ಕರ್ಮವನ್ನು ಮಾಡುವ ಕಾಲದಲ್ಲಿ ಎಲ್ಲಾತ್ಮರು ಉಂಟು ಎಂದು ಒಪ್ಪುವಿ. ಮತ್ತು ಈಗಲಾದರೂ ಉಪಭೋಗಿಸುವ ಕಾಲದಲ್ಲಿಯೂ ಇದ್ದಾರೆಂದು ಹೇಳುವಿ. ಆದರೆ ಒಬ್ಬಾತ್ಮನಿಗೆ ಅಭಿಮಾನವುಂಟು. ಅನ್ಯರಿಗೆ ಅಭಿಮಾನವಿಲ್ಲ ಅನ್ನುವಲ್ಲಿ ಬಲವಾದ ಹೇತುವನ್ನು ನೀನು ಹೇಳಬಹುದಾಗಿತ್ತು. ನೀನು ಕಾರಣ ವನ್ನು ಹೇಳದೆ ಒಬ್ಬನಲ್ಲಿ ಮಾತ್ರ ಅಭಿಮಾನವುಂಟು. ಅನ್ಯರಲ್ಲಿ ಇಲ್ಲ. ಎಂದು ಹೇಳುವದು ಸರಿಕಾಣುವದಿಲ್ಲ. ಆದ್ದರಿಂದ ನಾವು ಆ ಅಭಿಮಾನವು ಎಲ್ಲಾತ್ಮ ರಲ್ಲಿಯೂ ಉಂಟು. ಎಲ್ಲರೂ ಅಭಿಮಾನಿಸುವರು ಎಲ್ಲಾತ್ಮರೂ ಭೋಕ್ತೃಗಳು

ಆಗಿರುತ್ತಾರೆ ಎಂದು ಹೇಳುತ್ತೇವೆ. ಯಾಕಂದರೆ, ಕರ್ಮ ಮಾಡುವಾಗ್ಯೆ ಇದ್ದವರು ಕರ್ಮಫಲಭೋಗಿಸುವಾಗಲೂ ಇರುವರು. ಅಭಿಮಾನವು ಎಲ್ಲರಿಗೂ ಇದೆ. ಎಲ್ಲರೂ ಭೋಕ್ತೃಗಳು ಆಗಿದ್ದಾರೆ. ಹೇಗಂದರೆ, ಒಂದು ಮನೆಯಲ್ಲಿ ನೂರು ಜನರಿದ್ದ ಒಂದು ಕುಟುಂಬವದೆ. ಆ ಮನೆಯಲ್ಲಿ ಗಂಡು ಕೂಸು: ಜನನವಾದರೆ, ಎಲ್ಲರೂ ಸಂತೋಷವುಳ್ಳವರಾಗಿ ಜಾತಕರ್ಮ ನಾಮಕರಣಾದಿ ವ್ಯವಹಾರವನ್ನು ಮಾಡುತ್ತಾರೆ. ಅದೇ ಕೂಸು ಮೃತವಾದರೆ ಎಲ್ಲರೂ ಶೋಕದಿಂದ ಅಳುವರು. ಆ ಮನೆಯಲ್ಲಿ ವಾಸಮಾಡಿದ ನೂರು ಜನರು ಸುಖ ದುಃಖ ಭೋಗಗಳನ್ನು ಅನುಭವ ಮಾಡುತ್ತಾರೆ. ಮತ್ತು ತತ್ಸಂಬಂಧ ಅಭಿಮಾನವೂ ಉಂಟು. ಇದರಂತೆ, ಈ ದೇಹದಲ್ಲಿರುವ ಪಲವಾತ್ಮರು ಅಭಿಮಾನವುಳ್ಳವರಾಗಿ ಭೋಕ್ತೃಗಳಾಗಿರುವರು. ಭೋಗ **ಸಾಂಕರ್ಯ**ವು ಹಾಗೇ ಉಳಿಯಿತು. ಇದಕ್ಕೆ ಗತಿಯೇನು ?

**ಬಳಿಕ**, ಪಲವಾತ್ಮವಾದಿಯು– ' ಈ ಭೋಗಸಾಂಕರ್ಯವನ್ನು ನಿವಾರಿಸುವದಕ್ಕಾಗಿ, ಪರಮಾತ್ಮನಿಂದ ನಿಯಮಿಸಲ್ಪಟ್ಟ ಒಂದು ನಿಯತಿಯುಂಟು. ಆ ನಿಯತಿ ಶಕ್ತಿಯು ಅವರವರ ಭೋಗವನ್ನು ಅವರಿಗೆ ಕೊಡುತ್ತದೆ. ಒಬ್ಬರ ಭೋಗವು ಒಬ್ಬರಿಗೆ ಆಗದಂತೆ ವ್ಯವಸ್ಥೆಯನ್ನು ಮಾಡುತ್ತದೆ. ಆದ್ದರಿಂದ ಭೋಗ ಸಾಂಕರ್ಯದೋಷವು ಬರಲಾರದೆಂದು ಹೇಳಿದರೆ, ಇದಕ್ಕೂ ದೋಷವು ಬರುತ್ತದೆಂದು ಹೇಳುತ್ತಾರೆ.

**ಇಂತಪ್ಪ ಸಾಂಕರ್ಯಮಂ ತೊಲಗಿಸಲ್ಕೆ ಪರ ।**
**ನಿಂ ತೋರ್ಪುದೊಂದು ನಿಯತಿಯವರವರ ವಿಧಿ ।**
**ಯೆಂತಂತೆ ಮಾಳ್ಪುದೆನೆ ಕೇಳು** ||೭||

**ಟೀಕಾ**:- ಇಂತಪ್ಪ= ಈ ರೀತಿಯ, ಸಾಂಕರ್ಯಮಂ=ಕೂಡಿರುವದೋಷವನ್ನು, ತೊಲಗಿಸಲ್ಕೆ=ಕಳೆಯುವದಕ್ಕಾಗಿ, ಪರನಿಂ=ಪರಮಾತ್ಮನಿಂದ, ಒಂದು ನಿಯತಿಯು=ಒಂದು ಅದೃಷ್ಟವಿಶೇಷವು, ತೋರ್ಪುದು=ಇರುವದು' ಅವರವರ= ಆಯಾಜೀವರ- ವಿಧಿಯೆಂತಂತೆ=ಕರ್ಮವಿರುವಂತೆ, ಮಾಳ್ಪುದು=ಮಾಡುವದು, ಎನೆ=ಹೀಗೆ ಹೇಳಿದರೆ, ಕೇಳು=ಆಲಿಸು,

**ತಾತ್ಪರ್ಯ**:- ಒಂದು ದೇಹದಲ್ಲಿ ಪಲವಾತ್ಮರು ಕೂಡಿದ್ದರೂ, ಅವರವರಿಗೆ ಬೇರೆ ಬೇರೆ ಅವರ ಕರ್ಮಕ್ಕೆ ಅನುಗುಣವಾಗಿ, ಭೋಗಗಳನ್ನುಂಟು ಮಾಡುವದೊಂದು ಅದೃಷ್ಟವಾದ **ನಿಯತಿ** ಇರುತ್ತದೆ. ಅದು ಪರಮಾತ್ಮನಿಂದ ನಿಯಮಿಸಲ್ಪಟ್ಟಿದೆ. ಅದು ಒಬ್ಬರ ಕರ್ಮಫಲವು ಮತ್ತೊಬ್ಬರಿಗೆ ಆಗದಂತೆ ವ್ಯವಸ್ಥೆಯನ್ನು ಮಾಡುತ್ತದೆ. ಆದ್ದರಿಂದ ಭೋಗ ಸಾಂಕರ್ಯವು ಆಗುವದಿಲ್ಲೆಂದು **ಹೇಳಿದರೆ**, ನಿನಗೆ ಉತ್ತರವನ್ನು ಹೇಳುತ್ತೇವೆ ಕೇಳು.

ಬಳಿಕ, ಮನೆಯೊಳಗಿನ ದೀಪವು ಸಕಲ ವಿಷಯಗಳನ್ನು ಸಮಾನವಾಗಿ ಬೆಳಗುವಂತೆ, ಭೋಗಗಳನ್ನುಂಟುಮಾಡುವ ನಿಯಮನ ಶಕ್ತಿಯಾದರೂ, ಸಕಲಾತ್ಮರಿಗೆ ಸಮಾನವಾಗಿಯೇ ಭೋಗವನ್ನುಂಟು ಮಾಡುತ್ತಚೆಂದು ಉತ್ತರವನ್ನು ಕೊಡುತ್ತಾರೆ.

**ಒಂದ ಮನೆಯೊಳಗೆ ಸೊಡರೊಂದು ಪಲವಿರೆ ವಿಷಯ ।**
**ವೃಂದಮಂ ಬೆಳಗದಿರದಂತೆ ತನುವಿನೊಳ ।**
**ಗೊಂದುಂಟು ಭೋಗ್ಯವಹ ಬುದ್ಧಿ ॥೮॥**

**ಟೀಕಾ:-** ಒಂದು ಮನೆಯೊಳಗೆ=ಒಂದುಮನೆಯಲ್ಲಿ, ಸೊಡರೊಂದು=ಒಂದು ದೀಪವು, ವಿಷಯವೃಂದಮಂ=ವಿಷಯಗಳ ಸಮೂಹಗಳು, ಪಲವಿರೆ=ಅನೇಕವಿದ್ದರೂ,ಬೆಳಗದಿರದಂತೆ=ಪ್ರಕಾಶಮಾಡದೆ ಇರದಹಾಗೆ, ತನುವಿನೊಳಗೆ=ಶರೀರದಲ್ಲಿ, ಭೋಗ್ಯವಹಬುದ್ಧಿ=ಭೋಗ್ಯವಸ್ತುಗಳನ್ನು ಒದಗಿಸುವಬುದ್ಧಿಯು, ಒಂದುಂಟು=ಒಂದಿರುವದು.

**ತಾತ್ಪರ್ಯ:-** ಒಂದು ಮನೆಯಲ್ಲಿ ಅನೇಕ ಭೋಗ್ಯವಸ್ತುಗಳಿರುತ್ತವೆ. ಅಂದರೆ, ಘಟಾದಿ ಅನೇಕ ಪದಾರ್ಥಗಳಿರುತ್ತವೆ, ಅವೆಲ್ಲವನ್ನು ಆ ಮನೆಯೊಳಗಿನ ದೀಪವು ಬೆಳಗುತ್ತಿರುವಂತೆ, ಒಂದನ್ನು ಬೆಳಗಿ ಉಳಿದವುಗಳನ್ನು ಬೆಳಗದೆ ಬಿಡದು. ಕಿಂತು; ಎಲ್ಲ ವಿಷಯಗಳನ್ನು ಸಮಾನವಾಗಿಯೇ ಬೆಳಗುತ್ತದೆ. ಹೇಗೋ ಹಾಗೇ ಈಶ್ವರನಿಂದ ನಿಯಮಿಸಲ್ಪಟ್ಟ ಭೋಗ್ಯಾತ್ಮಕ ಬುದ್ಧಿಯಾದರೂ ದೇಹದಲ್ಲಿರುವ ಸಕಲಾತ್ಮರುಗಳಿಗೆ ಸಮಾನವಾಗಿ ಭೋಗಗಳನ್ನುಂಟು ಮಾಡುತ್ತದೆ. ಒಬ್ಬರಿಗೆ ಭೋಗವನ್ನು ಒದಗಿಸಿ, ಅನ್ಯರಿಗೆ ಕೊಡದೆ ಬಿಡಲಾರದು. ಅದರಿಂದ ಭೋಗ ಸಾಂಕರ್ಯದೋಷವು ನಿವಾರಣೆಯಾಗದೆ ಹಾಗೇ ಉಳಿಯಿತು. ಯಾಕಂದರೆ, ಭೋಗ ನಿಯಾಮಕ ಶಕ್ತಿಯಲ್ಲಿ ಪಕ್ಷ ಪಾತ ಬುದ್ಧಿಯಿಲ್ಲೆಂಬ ಭಾವವು.

ಬಳಿಕ, ಆ ಭೋಗವನ್ನುಂಟು ಮಾಡುವ ಬುದ್ಧಿಯು ಈಶನಿರ್ಮಿತವಾಗಿ ಈಶನ ಆಜ್ಞೆಯಂತೆ ಒಬ್ಬರಿಗೆ ಭೋಗವನ್ನುಂಟು ಮಾಡಿ, ಅನ್ಯರಿಗೆ ಕೊಡಲಾರದೆಂದು ಶಂಕೆಯನ್ನು ಮಾಡಿದರೆ, ಇದು ಸರಿಯಲ್ಲ. ಯಾಕಂದರೆ, ಆ ಶಕ್ತಿಯು ಸ್ವವಿಷಯಗಳನ್ನು ತೋರಿಸುವ ಲಕ್ಷಣವುಳ್ಳದ್ದಾಗಿದೆ. ಅದರಿಂದ ಅದು ಎಲ್ಲರಿಗೂ ಭೋಗಗಳನ್ನು ಕೊಡುತ್ತದೆಂದು ಹೇಳುತ್ತಾರೆ.

**ಅದು ವಿಷಯಮಂ ತೋರುವದೇ ಲಕ್ಷಣವೆಯಾಗಿ ।**
**ಯದು ತನ್ನೊಳಿರ್ದ ಪಲವಾತ್ಮರಿಗೆ ಭೋಗ ।**
**ದೊದವೀಯದಿರದು ನಿಜವಿದುವೆ ॥೯॥**

**ಟೀಕಾ:-** ಅದು=ಆ ಬುದ್ಧಿಯು, ವಿಷಯಮಂ=ವಿಷಯವನ್ನು, ತೋರುವದೆ=ತೋರಿಸುವದೇ ಲಕ್ಷಣವೆಯಾಗಿ=ಸ್ವಭಾವವಾಗಿರುವದರಿಂದ, ಅದು=ಆ ಬುದ್ಧಿಯು, ತನ್ನೊಳಿರ್ದ=ತನ್ನಲ್ಲಿರುವ, ಪಲವಾತ್ಮರಿಗೆ ಅನೇಕಾತ್ಮರಿಗೆ, ಭೋಗದೊದವ=ಭೋಗದ ಪ್ರಾಪ್ತಿಯನ್ನು, ಈಯದೆ=ಕೊಡದೆ, ಇರದು=ಇರಲಾರದು, ನಿಜವಿದುವೆ=ಇದು ಸತ್ಯವಾಗಿದೆ.

**ತಾತ್ಪರ್ಯ:-** ಸೂರ್ಯನ ಬೆಳಕು ಎಲ್ಲ ವಸ್ತುಗಳನ್ನು ಹೇಗೆ ಬೆಳಗುತ್ತಿರುವದೋ, ಆಕಾಶವು ಸಕಲ ವಿಷಯಗಳಿರುವದಕ್ಕೆ ಹೇಗೆ ಅವಕಾಶವನ್ನು ಕೊಟ್ಟಿರುವದೋ, ವಾಯು ಸಕಲ ಪದಾರ್ಥಗಳನ್ನು ಹೇಗೆ ಮುಟ್ಟುತ್ತಿರುವದೋ, ಹಾಗೇ ಆ ನಿಯಮನ ಬುದ್ಧಿಯಾದರೂ ಸಕಲ ಭೋಗಗಳನ್ನು ಸಕಲ ಭೋಕ್ತಗಳಿಗೆ ಕೊಡುವ ಸ್ವಭಾವವುಳ್ಳದ್ದಾಗಿದೆ. ಆದ್ದರಿಂದ ಒಬ್ಬಾತ್ಮನಿಗೆ ಭೋಗವನ್ನುಂಟು ಮಾಡಿ, ಅನ್ಯರಿಗೆ ಭೋಗಗಳನ್ನು ಕೊಡದೆ ಬಿಡಲಾರದು. ಕಿಂತು, ಅದು ದೇಹದಲ್ಲಿರುವ ಸಕಲಾತ್ಮರುಗಳಿಗೆ ಸಮಾನವಾಗಿ ಭೋಗಗಳನ್ನು ಕೊಡುತ್ತದೆಂಬ ಭಾವವು.

**ಬಳಿಕ,** (ಯಾಕಂದರೆ) ಆ ಬುದ್ಧಿಯ ಸ್ವಭಾವವೇ ಹಾಗಿರುವದು. ಅದು ಸ್ವಭಾವವು ಬದಲಾಗದೆಂದು ದೃಷ್ಟಾಂತ ಮೂಲಕ ತಿಳಿಸುತ್ತಾರೆ.

> **ಆವುದಕ್ಕಾವುದು ಸ್ವಭಾವವದು ಕೆಡದು ನಭ ।**
> **ವಾವಗಂ ಕುಂಭವಾಗದಂತೀ ಬುದ್ಧಿ ।**
> **ಜೀವರಂ ಮಾಣದರಹುವದು ॥೧೦॥**

**ಟೀಕಾ:-** ಆವುದಕ್ಕೆ=ಯಾವ ವಸ್ತುವಿಗೆ, ಆವುದು ಸ್ವಭಾವವು=ಯಾವ ಸ್ವಭಾವವುಂಟೋ, ಅದು=ಆ ಸ್ವಭಾವವು, ಕೆಡದು=ನಾಶವಾಗದು (ಹೇಗಂದರೆ) ನಭವು=ನಿರವಯವಾದ ಆಕಾಶವು, ಆವಗಂ=ಯಾವ ಕಾಲಕ್ಕಾದರೂ, ಕುಂಭವಾಗದಂತೆ=ಸಾವಯವರೂಪ ಘಟವಾಗದ ಹಾಗೆ, ಈ ಬುದ್ಧಿ=ಭೋಗನಿಯಾಮಕ ಬುದ್ಧಿಯು, ಜೀವರಂ=ಎಲ್ಲ ಜೀವರನ್ನು, ಮಾಣದೆ=ಬಿಡದೆ, ಅರಹುವದು=ತಿಳಿಸುವದು.

**ತಾತ್ಪರ್ಯ:-** ಯಾವ ವಸ್ತುವಿಗೆ ಯಾವ ಸ್ವಭಾವವಿರುವದೋ ಅದು ಕೆಡಲಾರದು. ನಿರಾಕಾರ ಸ್ವಭಾವದಿಂದಿರುವ ಆಕಾಶವು ಸಾಕಾರರೂಪ ಘಟವು ಎಂದೂ ಆಗದು. ಉಷ್ಣ, ಪ್ರಕಾಶ, ದಾಹಕವಾದ ಅಗ್ನಿಯು ಜಲದಂತೆ ಶೀತಳವೆಂದಿಗೂ ಆಗಲಾರದು. ಈ ದೃಷ್ಟಾಂತಗಳಂತೆ, ಈ ಭೋಗನಿಯಾಮಕ ಬುದ್ಧಿ

ಯಾದರೂ, ಸಕಲ ಜೀವರಿಗೆ ಭೋಗಗಳನ್ನು ಕೊಡುವ ಸ್ವಭಾವವುಳ್ಳದ್ದಾಗಿದೆ. ಅದು ತನ್ನ ಸ್ವಭಾವವನ್ನು ಬಿಟ್ಟು ಇರಲಾರದು. ಆದ್ದರಿಂದ ಅದು ಸಕಲಾತ್ಮರಿಗೆ ಭೋಗಗಳನ್ನು ಕೊಡುತ್ತದೆ.

**ಏಕಾತ್ಮ ಪಕ್ಷದೊಳನೇಕ ಭೋಗಂ ಘಟಿಪ ।**
**ಜೋಕೆಯಿಲ್ಲೆಂದು ಪಲವಾತ್ಮರುಂ ಪೇಳ್ದೊ ।**
**ಡೀಕೇಡು ಬರ್ಪುದೆಲೆ ಪುತ್ರ ॥೧೧॥**

**ಟೀಕಾ:-** ಏಕಾತ್ಮಪಕ್ಷದೊಳ್ = ಒಬ್ಬಾತ್ಮನೆಂಬ ಮತದಲ್ಲಿ; ಅನೇಕ ಭೋಗಂ=ಭಿನ್ನ ಭಿನ್ನ ಭೋಗಗಳು; ಘಟಿಪ=ಸಂಭವಿಸುವ, ಜೋಕೆಯಿಲ್ಲೆಂದು= ಯೋಗ್ಯತೆಯಿಲ್ಲೆಂದು, ಪಲವಾತ್ಮರುಂ=ಅನೇಕಾತ್ಮರನ್ನು, ಪೇಳ್ದೊಡೆ=ಹೇಳಿದರೆ, ಎಲೆ ಪುತ್ರ=ಎಲೈ ಶಿಷ್ಯನೇ !, ಈ ಕೇಡು=ಈ ಅನರ್ಥವು, ಬರ್ಪುದು=ಬರುವದು.

ತಾತ್ಪರ್ಯ:- ಅನೇಕ ದೇಹಗಳಲ್ಲಿ ದೇಹಿಯಾದ ಆತ್ಮನು ಒಬ್ಬನಿದ್ದಾನೆಂಬ ಉಪನಿಷತ್ ಮತದಲ್ಲಿ ಅನೇಕ ಭೋಗಗಳು ಸಂಭವಿಸಲಾರವು. ಯಾಕಂದರೆ, ಒಂದು ದೇಹದಲ್ಲಿ ಒಬ್ಬನು ಸುಖಿಯಾಗಲು; ಅದೇ ಆತ್ಮನು ಅನ್ಯ ದೇಹಗಳಲ್ಲಿಯೂ ಸುಖಿಯಾಗಿರಬೇಕಾಗಿತ್ತು. ಹಾಗಿಲ್ಲ. ಕಿಂತು, ದುಃಖಿಯಾಗಿರುತ್ತಾನೆ. ಆದ್ದರಿಂದ ಆತ್ಮನು ಒಬ್ಬನಲ್ಲ. ಅನೇಕರೆಂದು ನಿಶ್ಚಯವಾಗುತ್ತದೆ. ಅನೇಕ ಭೋಗಗಳೂ ಸಂಭವಿಸುತ್ತವೆಂದು ಸಾಂಖ್ಯಾದಿ ಪರಮತಾನುಸಾರವಾಗಿ ಅನೇಕಾತ್ಮ ಪಕ್ಷವನ್ನು ಆಶ್ರಯ ಮಾಡಿದ್ದಾಯಿತು. ಹೀಗೆ ಅಂಗೀಕರಿಸಿದರೂ, ಭೋಗವ್ಯವಸ್ಥೆಯು ಉಕ್ತಪ್ರಕಾರ ಆಗಲಿಲ್ಲ. **ಭೋಗ ಸಾಂಕರ್ಯ ದೋಷವು** ಬಂದೇ ಬರುವದು. ಅಂದಮೇಲೆ, ಅನೇಕಾತ್ಮ ಪಕ್ಷದಿಂದ ಏನೂ ಪ್ರಯೋಜನವಾಗಲಿಲ್ಲೆಂಬ ಭಾವವು.

**ಆತ್ಮಂಗೆ ನಾನತ್ವ ನಿರಾಕರಣ ನಿರೂಪಣೆ ಸೂತ್ರ ೨ ಕ್ಕೆ ತ್ರಿವಿದಿ ೨೦.**

---

**ಬಳಿಕ,** ಹಿಂದಿನ ಸೂತ್ರದಲ್ಲಿ; ನ್ಯಾಯಸಾಂಖ್ಯಾದಿ ಮತಗಳ ಅನುಸಾರ ಅನೇಕಾತ್ಮರು, ನಿತ್ಯರು, ಪೂರ್ಣರು, ಆಗಿರುತ್ತಾರೆ. ಅದರಿಂದ ಭಿನ್ನಭಿನ್ನ ಭೋಗವ್ಯವಹಾರವು ನಡೆಯುತ್ತದೆ. ಏಕಾತ್ಮನೆಂದು ಹೇಳಿದರೆ; ಭೋಗಸಾಂಕರ್ಯದೋಷವು ಬರುತ್ತದೆಂದು ಶಂಕೆಯನ್ನು ಮಾಡಲು; ಅನೇಕಾತ್ಮರೆಂದು ಹೇಳುವ ಮತಗಳಲ್ಲಿಯೇ **ಈ ಭೋಗಸಾಂಕರ್ಯವು** ಬರುತ್ತದೆಂದು ಹೇಳಿದರು. ಹೇಗಂದರೆ; ಎಲ್ಲರೂ ಪೂರ್ಣರು, ಅಂದರೆ; ಒಂದು ಶರೀರದಲ್ಲಿ ಎಲ್ಲರೂ ಇರಬೇಕಾಯಿತು.

ಈ ಶರೀರದ ಭೋಗವನ್ನು ಉಣ್ಣುವನು ಯಾವನು ? ಉಣ್ಣದವರು ಯಾರು? ಎಂಬ ವ್ಯವಸ್ಥೆ ತಪ್ಪಿ ಹೋಯಿತು. ಕರ್ಮ, ಅಭಿಮಾನ, ನಿಯತಿ, ಮೊದಲಾದ ಕಾರಣಗಳನ್ನು ಹೇಳಿದರೂ. ಅವು ಒಬ್ಬನಿಗಿದ್ದಂತೆ ಎಲ್ಲರಿಗೂ ಇರುತ್ತವೆ, ಆದ್ದರಿಂದ ಭೋಗದ ಭೋಕ್ತೃವಿನನ್ನು ವಿಭಾಗ ಪಡಿಸಿ ತೋರಿಸಲಿಕ್ಕೆ ಆಗದೇ ಹೋಯಿತು. ಆದರಿಂದ ಅನೇಕಾತ್ಮರೆಂಬ ಮತಗಳಲ್ಲಿ ಭೋಗಸಾಂಕರ್ಯವು ಬಂದಿತು. ಆದರಿಂದ ಈ ಮತಗಳು **ಯೋಗ್ಯವಲ್ಲ** ಎಂಬುದನ್ನು ಹೇಳಿದರು. ಈಗ ಈ ಏಕಾತ್ಮನೆಂದು ಹೇಳುವ ಉಪನಿಷತ್ ಮತದಲ್ಲಿ; ಈ ಭೋಗಸಾಂಕರ್ಯ ದೋಷವು ಬರುವದಿಲ್ಲ. ಯಾಕಂದರೆ, ಆತ್ಮನು ಒಬ್ಬನೇ ಇದ್ದಾನೆ. ಬುದ್ಧಿ ಉಪಾಧಿಗಳು ಅನೇಕ ಅವೆ, ಒಂದು ಉಪಾಧಿಯಲ್ಲಿ ತೋರಿದ ಭೋಗವು ಮತ್ತೊಂದುಪಾಧಿಯಲ್ಲಿ ತೋರದು. ಆದರಿಂದ ಭಿನ್ನ, ಭಿನ್ನ, ಭೋಗಗಳು ಸಂಭವಿಸುತ್ತವೆ. ಉಪಾಧಿ ಬಹುತ್ವಮೂಲಕ ಬಹುಭೋಗ ವ್ಯವಹಾರವು ನಡೆಯುತ್ತದೆ. ಆದ್ದರಿಂದ ಅನೇಕಾತ್ಮರನ್ನು ಕಲ್ಪನೆ ಮಾಡುವದು ಅಯೋಗ್ಯವಾಗಿದೆ. ಮತ್ತು ಅನೇಕಾತ್ಮರೆಂದು ಹೇಳುವದು ಶ್ರುತಿಗೆ ವಿರೋಧವಾಗುತ್ತದೆ. ಶ್ರುತ್ಯುಕ್ತಿಗಳಿಗೆ ವಿರುದ್ಧವಾದ ಅನೇಕಾತ್ಮರೆಂಬ ಕಲ್ಪನೆಯು ಸರಿಯಲ್ಲ. ಇನ್ನು ಆತ್ಮನು ಒಬ್ಬನಾಗಿ ಉಪಾಧಿಗಳು ಹಲವಾದರೆ ಬೇರೆ ಬೇರೆ ಭೋಗಗಳು ಹೇಗೆ ಸಂಭವಿಸುತ್ತವೆ. ಎಂದು ಕೇಳಿದರೆ; ಇದಕ್ಕಾಗಿ ಈ ಸೂತ್ರದಲ್ಲಿ ಅನೇಕ ದೃಷ್ಟಾಂತಗಳನ್ನು ಕೊಡುತ್ತಾ ಮಾಡಿದ ಶಂಕೆಗಳಿಗೆ ಉತ್ತರವನ್ನು ಹೇಳುತ್ತಾ ಹೋಗುತ್ತಾರೆ. ಅವು ಹೇಗೆ? ಅಂದರೆ,

**ಸೂತ್ರ॥ ಏಕಾತ್ಮನೆಂಬುದೇ ಸಹಜವೀ ಕಾಣಿಸುವ ।**
**ನೇಕಾತ್ಮರೆಂಬುದೆಲ್ಲಾ ಕಲ್ಪನೆ ॥**

**ಟೀಕಾ:-** ಏಕಾತ್ಮನೆಂಬುದೇ=ಒಬ್ಬಾತ್ಮನೆಂದು ಹೇಳುವದೇ, ಸಹಜವು=ಯಥಾರ್ಥವಾಗಿರುವದು, ಈ ಕಾಣಿಸುವ=ಪ್ರತ್ಯಕ್ಷವಾಗಿ ಕಾಣುವ, ಅನೇಕಾತ್ಮರೆಂಬುದು=ಹಲವಾತ್ಮರು ಎಂದು ಹೇಳುವದು, ಎಲ್ಲಾ ಕಲ್ಪನೆ=ಇದು ಸುಳ್ಳುಕಲ್ಪನೆಯಾಗಿರುತ್ತದೆ. (ಭ್ರಮಾತ್ಮಕವಾಗಿದೆ)

**ತಾತ್ಪರ್ಯ:-** ಪಾರಮಾರ್ಥಿಕ ದೃಷ್ಟಿಯಿಂದ ವಿಚಾರವನ್ನು ಮಾಡುತ್ತಿರಲು ನಿತ್ಯ, ಶುದ್ಧ, ಬುದ್ಧ, ಮುಕ್ತಸ್ವಭಾವನಾದ ಆತ್ಮನೊಬ್ಬನೇ ಇರುವನು. '**ಏಕಮೇವಾದ್ವಿತೀಯಂ,** ಸ್ವಗತಾದಿ ಭೇದರಹಿತ ಒಂದು ಚೈತನ್ಯವುಂಟೆಂಬ ಶ್ರುತಿಯೂ ಇರುತ್ತದೆ. ಇದೇ ನಿಜವಾಗಿರುತ್ತದೆ. ಯಾಕಂದರೆ; ಶ್ರುತಿ ಪ್ರತಿಪಾದಿತವಾದ ಏಕಾತ್ಮಪಕ್ಷವು ನಿರ್ದೋಷವಾಗಿರುತ್ತದೆ, ಪ್ರತ್ಯಕ್ಷವಾಗಿ ತೋರುವ ಈ ಆತ್ಮಭೇದವು **ಉಪಾಧಿಕೃತವಾದ್ದರಿಂದ** ನಿಜವಲ್ಲ. ಕಿಂತು; ಭ್ರಮಾತ್ಮಕ ಮಿಥ್ಯೆ

ಯಾಗಿರುತ್ತದೆ. ಮತ್ತು ನೇಹನಾನಾಸ್ತಿ ಮೊದಲಾದ ಶ್ರುತಿಗಳು ಭೇದವನ್ನು ನಿರಾಕರಿಸುತ್ತವೆ. ಆದ್ದರಿಂದ ಪಲವಾತ್ಮರೆಂಬ ಭೇದವು ಪ್ರತ್ಯಕ್ಷವಾಗಿ ಕಂಡರೂ ಅದು ಮಿಥ್ಯೆಯಾಗಿದೆ. ರಜ್ಜುವಿನಲ್ಲಿ ಸರ್ಪವು ಪ್ರತ್ಯಕ್ಷವಾಗಿಕಂಡರೂ ಆಪ್ತ ವಚನ ದಿಂದ ಹೇಗೆ ಬಾಧಿಸಿಕೊಳ್ಳುತ್ತದೆಯೋ, ಹಾಗೆ ಆತ್ಮಭೇದವು ಪ್ರತ್ಯಕ್ಷವಾಗಿದ್ದರೂ, ಶ್ರುತಿಯು ಭೇದ ನಿಂದಾಪೂರ್ವಕ ಅಭೇದಸ್ತುತಿಯನ್ನು ಮಾಡುವದರಿಂದ, ಪ್ರತ್ಯಕ್ಷರೂಪ ಆತ್ಮಭೇದವು ಬಾಧಿಸಿಕೊಳ್ಳುತ್ತದೆಂಬ ಅಭಿಪ್ರಾಯವು.

ಬಳಿಕ, ವಾದಿಯು ನಮ್ಮ ನಿಮ್ಮ ಎರಡೂ ಮತಗಳಲ್ಲಿ ಭೋಗ ಸಾಂಕರ್ಯ ದೋಷವು ಬರುತ್ತದೆ. ಆದ್ದರಿಂದ ಸಮವೇ ಆಯಿತು. ಎಂದು ಶಂಕೆಯನ್ನು ಮಾಡಿದರೆ; ನಮ್ಮ ಏಕಾತ್ಮ ಪಕ್ಷದಲ್ಲಿ ಉಪಾಧಿಗಳಾದ ಬಹುಬುದ್ಧಿಗಳನ್ನು ಅಂಗೀಕರಿಸಿದ್ದರಿಂದ, ಭೋಗಸಾಂಕರ್ಯವು ಬರುವದಿಲ್ಲೆಂದು ಉತ್ತರವನ್ನು ಹೇಳುತ್ತಾರೆ.

ಇಂತುಭಯ ಪಕ್ಷದೊಳಗಂ ತೋರ್ಪ ಶಂಕೆ ಸಮ ।
ವಾಂತುದೆನಲಿಲ್ಲ ಬಹುಬುದ್ಧಿಯಿಂ ಭೋಗ ।
ಸಂತತಿಗೆ ಸುಲಭವೆನಲಕ್ಕು ॥೧॥

ಟೀಕಾ:- ಇಂತು = ಈ ಪ್ರಕಾರ, ಉಭಯ ಪಕ್ಷದೊಳಗಂ = ಏಕಾನೇಕ ಎರಡೂ ಮತಗಳಲ್ಲಿ, ತೋರ್ಪ=ತೋರುವ, ಶಂಕೆ=ಭೋಗಸಾಂಕರ್ಯರೂಪ ಶಂಕೆಯು, ಸಮವಾಂತುದು=ಸಮಾನವೇ ಆಯಿತು, ಎನಲ್=ಅಂದರೆ, ಇಲ್ಲ= ಸಮಾನವಲ್ಲ, (ಯಾಕಂದರೆ) ಬಹುಬುದ್ಧಿಯಿಂ=ಅನೇಕವಿಧ ಬುದ್ಧಿಭೇದಗಳಿಂದ, ಭೋಗಸಂತತಿಗೆ = ಭೋಗಸಮೂಹಕ್ಕೆ, ಸುಲಭವು=ಭೋಗವ್ಯವಸ್ಥೆಯು ಅನಾ ಯಾಸದಿಂದ ಆಗುವದೆಂದು, ಎನಲಕ್ಕು=ಅನ್ನಲಿಕ್ಕೆ ಬರುತ್ತದೆ.

ತಾತ್ಪರ್ಯ:-ವಾದಿ 'ಅನೇಕ ದೇಹಗಳಲ್ಲಿ ಒಬ್ಬಾತನು. ಅಂದರೆ, ಒಬ್ಬನು ಸುಖಿಯಾಗಲು ಸರ್ವರು ಸುಖಿಯಾಗಬೇಕಾಯಿತು. ಏಕಾತ್ಮರೆಂಬ ನಿಮಗೂ ಭೋಗಸಾಂಕರ್ಯ ದೋಷವು ಬಂದಿತು. ನಾವು ಅನೇಕರು ನಿತ್ಯರು ಪೂರ್ಣರು ಎಂದು ಹೇಳಿದೆವು. ಆದರೂ ಭೋಗಸಾಂಕರ್ಯ ದೋಷವು ಬಂದಿತು. ಹೀಗೆ ಏಕಾತ್ಮಪಕ್ಷ; ಅನೇಕಾತ್ಮಪಕ್ಷ; ಎರಡು ಪಕ್ಷಗಳಲ್ಲಿಯೂ ಭೋಗಸಾಂಕರ್ಯ ದೋಷವು ಬಂದುದರಿಂದ, ನಮ್ಮ ನಿಮ್ಮ ಮತಗಳೆರಡು ಸಮಾನವೇ ಆದವು' ಎಂದು ಹೇಳುತ್ತಿರಲಿಕ್ಕೆ, ಏಕಾತ್ಮವಾದಿಯು 'ಎರಡೂ ಮತಗಳು ಸಮಾನಗಳಲ್ಲ. ಯಾಕಂದರೆ, ನಮ್ಮ ಏಕಾತ್ಮ ಪಕ್ಷದಲ್ಲಿ ಭೋಗದ ವ್ಯವಸ್ಥೆಯು ಆಗುತ್ತದೆ. ನಾವು ಬಹು ಬುದ್ಧಿಗಳನ್ನು ಅಂಗೀಕಾರಮಾಡುತ್ತೇವೆ. ಉಪಾಧಿಗಳಾದ ಬಹು

ಬುದ್ಧಿಗಳಿಂದ ಬಹು ಭೋಗಗಳ ವ್ಯವಸ್ಥೆಯು ಆಗುತ್ತದೆ. ಒಂದು ಬುದ್ಧಿಯಲ್ಲಿ ತೋರಿದ ಭೋಗವು ಮತ್ತೊಂದು ಬುದ್ಧಿಯಲ್ಲಿ ತೋರಲಾರದು. ಬೇರೆ ಬೇರೆ ದೇಹಗಳಲ್ಲಿ ಭೋಗಗಳು ಸಂಭವಿಸುತ್ತವೆ. ಹೇಗಂದರೆ, ಅನೇಕ ಘಟೋಪಾಧಿಗಳಲ್ಲಿ ಪೂರ್ಣವಾದ ಆಕಾಶವು ಒಂದಾಗಿದೆ. ಉಪಾಧಿಗಳಾದ ಘಟಾದಿಗಳು ಭಿನ್ನಗಳಾಗಿವೆ. ಒಂದು ಘಟದಲ್ಲಿದ್ದ ವಸ್ತು ಮತ್ತೊಂದರಲ್ಲಿರಬೇಕಾಗಿಲ್ಲ. ಬೇರೆ ಬೇರೆ ಘಟಗಳಲ್ಲಿ ಬೇರೆ ಬೇರೆ ಹಾಲು, ತುಪ್ಪ, ಜೇನತುಪ್ಪ, ನೀರು, ಮಜ್ಜಿಗೆ ಮೊದಲಾದ ಭಿನ್ನ ಭಿನ್ನ ಪದಾರ್ಥಗಳನ್ನು ಇಡಲಿಕ್ಕೆ ಬರುತ್ತದೆ. ಒಂದು ಘಟದಲ್ಲಿದ್ದ ಆಕಾಶವೇ ಎಲ್ಲ ಘಟಗಳಲ್ಲಿದ್ದ ಮೇಲೆ, ಒಂದು ಕೊಡದಲ್ಲಿದ್ದ ವಸ್ತುವೇ ಇನ್ನೊಂದರಲ್ಲಿರಬೇಕೆಂಬ ನಿಯಮವಿಲ್ಲ. ಯಾಕಂದರೆ, ಉಪಾಧಿಗಳಾದ ಘಟಗಳು ಅನೇಕವಾಗಿವೆ. ಅದರಿಂದ ಅನೇಕ ಪದಾರ್ಥಗಳನ್ನು ಇರಿಸಬಹುದು. ಇದರಂತೆ; ಪೂರ್ಣನಾದ ಆತ್ಮನು ಏಕವಾಗಿರುವನು, ಉಪಾಧಿಗಳಾದ ಬುದ್ಧಿಗಳು ಅನೇಕಗಳು ಆಗಿವೆ. ಅದರಿಂದ ಒಂದು ಬುದ್ಧಿಯಲ್ಲಿ ಒಂದು ಸುಖಭೋಗ ತೋರಿದರೆ, ಮತ್ತೊಂದು ಬುದ್ಧಿಯಲ್ಲಿ ದುಃಖಭೋಗವು ತೋರಬಹುದು. ಈ ರೀತಿ ನಮ್ಮ ಏಕಾತ್ಮ ಪಕ್ಷದಲ್ಲಿ ಭೋಗದ ವ್ಯವಸ್ಥೆಯು ಆಗುತ್ತದೆ. ನಿಮ್ಮ ಅನೇಕಾತ್ಮ ಪಕ್ಷದಲ್ಲಿ ಎಲ್ಲರೂ ಪೂರ್ಣರಾಗಿ ಒಂದು ದೇಹದಲ್ಲಿರುವವರಿಂದ ಭೋಗ ಸಾಂಕರ್ಯ ದೋಷವು ಬರುತ್ತದೆ. ಆದ್ದರಿಂದ ಏಕಾತ್ಮ ಅನೇಕಾತ್ಮ ಪಕ್ಷಗಳು ಸಮಾನಗಳಾಗುವದಿಲ್ಲ.

ಬಳಿಕ, ತಾವು ಅದ್ವೈತಿಗಳು ಒಬ್ಬನೇ ಆತ್ಮನೆಂದು ಹೇಳುವಿರಿ. ನಿಮ್ಮಲ್ಲಿ ಅನೇಕಾತ್ಮತ್ವವು ಸಂಭವಿಸುವದಿಲ್ಲ. ನಾನಾತ್ಮತ್ವ ಸಂಭವಿಸಿದರೆ, ಭೋಗದ ವ್ಯವಸ್ಥೆಯು ಆಗುತ್ತದೆ. ತಮ್ಮ ಏಕಾತ್ಮಪಕ್ಷದಲ್ಲಿ ನಾನಾತ್ಮತ್ವಕ್ಕೆ ಒಪ್ಪಿಗೆಯಿಲ್ಲದಮೇಲೆ ಭೋಗ ವ್ಯವಸ್ಥೆಯು ಹೇಗಾದೀತು? ನಾನತ್ವವನ್ನು ಅಂಗೀಕರಿಸಿದರೆ, ನಿಮ್ಮ ಏಕಾತ್ಮರೂಪ ಅದ್ವೈತಕ್ಕೆ ಹಾನಿ ಬರುವದಿಲ್ಲವೇ? ಎಂದು ಶಂಕೆಯನ್ನು ಮಾಡಿದರೆ, ಉಪಾಧಿ ನಾನತ್ವದಿಂದ ಆತ್ಮ ನಾನತ್ವವನ್ನು ನಾವು ಅಂಗೀಕರಿಸುತ್ತೇವೆ. ಸ್ವರೂಪತಃ ಆತ್ಮನು ಒಬ್ಬನೆಂದು ಹೇಳುತ್ತೇವೆ. ಆದ್ದರಿಂದ ಭೋಗದ ವ್ಯವಸ್ಥೆಯೂ ಆಗುತ್ತದೆ. ಅದ್ವೈತಕ್ಕೆ ಹಾನಿಯೂ ಬರುವದಿಲ್ಲೆಂದು ಉತ್ತರವನ್ನು ಹೇಳುತ್ತಾರೆ.

**ಚಿತ್ತೊಂದೆ ಬುದ್ಧಿಗಳ ಮೊತ್ತದೊಳನೇಕವಂ।**
**ಪೊತ್ತು ನಾನಾತ್ಮರೆನಿಸಿರ್ಪುದಾಗಿ ಬಹು।**
**ವೃತ್ತಿಯದ್ವೈತ ದೊಳಗಕ್ಕು ॥೨॥**

**ಟೀಕಾ:-** ಚಿತ್ತೊಂದೆ=ಒಂದೇ ಚಿತ್ತು, ಬುದ್ಧಿಗಳ=ಮತಿಗಳ, ಮೊತ್ತದೊಳು=ಸಮೂಹದಲ್ಲಿ, ಅನೇಕಮಂ=ಬಹುಭೇದವನ್ನು, ಪೊತ್ತು=ಹೊಂದಿ, ನಾನಾತ್ಮರೆನಿಸಿರ್ಪುದಾಗಿ=ಅನೇಕಾತ್ಮರೆಂದು ಹೇಳಿಸಿಕೊಳ್ಳುವದಾಗಿ, ಬಹುವೃತ್ತಿಯು=ಅನೇಕಾತ್ಮ ಭೇದವು, ಅದ್ವೈತದೊಳಗೆ=ಒಂದೆಂಬ ಮತದಲ್ಲಿ, ಅಕ್ಕು=ಆಗುವದು.

**ತಾತ್ಪರ್ಯ:-** ಆತ್ಮನು ಒಬ್ಬನೆಂಬ ಅದ್ವೈತ ಮತದಲ್ಲಿಯಾದರೂ, ಅನೇಕ ಉಪಾಧಿಗಳ ಮೂಲಕ ಅನೇಕಾತ್ಮರೆಂಬುವದು ಸಂಭವಿಸುತ್ತದೆ. ಉಪಾಧಿನಾನತ್ವ ಮೂಲಕ ಅದ್ವೈತಕ್ಕೆ ಹಾನಿಯೂ ಬರುವದಿಲ್ಲ. ಸುಖ ದುಃಖ ಮೊದಲಾದ ಭೋಗದ ವ್ಯವಸ್ಥೆಯೂ ಆಗುತ್ತದೆ. ಹೇಗಂದರೆ, ಪರಿಪೂರ್ಣವಾದ ಆಕಾಶವು ಒಂದಾದರೂ, ಘಟಾಕಾಶ, ಬೊಗಸಿ ಆಕಾಶ, ಗೃಹಾಕಾಶಗಳೆಂದು ಹಲವು ಪ್ರಕಾರವಾಗಿ ತೋರುತ್ತದೆ. ತೋರಿದರೂ ಆಕಾಶವು ಒಂದೇ ಆಗಿದೆಯೆ ಹೊರತು ಅನೇಕವಲ್ಲ. ಮತ್ತು ಘಟಾಕಾಶದಲ್ಲಿ ನೀರು ತುಂಬಲಿಕ್ಕೆ ಬರುತ್ತದೆ. ಬೊಗಸಿ ಆಕಾಶವು ನೀರು ಕುಡಿಯಲಿಕ್ಕೆ ಬರುತ್ತದೆ. ಗೃಹಾಕಾಶವು ವಾಸಮಾಡಲಿಕ್ಕೆ ಬರುತ್ತದೆ. ಘಟ ಮೊದಲಾದವುಗಳಲ್ಲಿ ಅವಕಾಶ ಲಕ್ಷಣ ಆಕಾಶವು ಒಂದಾದರೂ ಒಂದರ ವ್ಯವಹಾರವು ಮತ್ತೊಂದರಲ್ಲಿ ನಡೆಯುವದಿಲ್ಲ. ಈ ದೃಷ್ಟಿಯಿಂದ ಆಕಾಶವು ಭಿನ್ನ ಭಿನ್ನವಾಗಿ ತೋರುತ್ತದೆ. ತೋರಿದರೂ ಸ್ವರೂಪತಃ ಒಂದೇ ಆಗಿರುವದು. ಈ ದೃಷ್ಟಾಂತದಂತೆ ಅದ್ವೈತದಲ್ಲಿ ಭೇದರೂಪ ಭೋಗವು ನಡೆದಿರುತ್ತದೆ.

**ಬಳಿಕ,** "ಲೋಕದಲ್ಲಿ ಒಬ್ಬನು ಸುಖಾತ್ಮಾ, ಒಬ್ಬನು ದುಃಖಾತ್ಮಾ ಒಬ್ಬನು ಮೋಹಿತಾತ್ಮಾ ಎಂದು ಭಿನ್ನರಾಗಿ ತೋರುತ್ತಿರುವರು. ಈ ಕಾರಣದಿಂದ ಆತ್ಮರು ಅನೇಕರೆಂದು ಹೇಳುವದು ಯೋಗ್ಯವಾಗಿದೆ. ಒಬ್ಬಾತ್ಮನೆಂದು ಹೇಳಲಿಕ್ಕೆ ಬರುವದಿಲ್ಲ" ಎಂದು ಶಂಕೆಯನ್ನು ಮಾಡಿದರೆ, ಮುಂದೆ ಹೇಳುವ ದೃಷ್ಟಾಂತ ಮೂಲಕ ಭೇದತೋರಿದರೂ, ಒಬ್ಬಾತ್ಮನೆಂದು ಹೇಳಲಿಕ್ಕೆ ಬರುತ್ತದೆಂದು ಸಮಾಧಾನವನ್ನು ಹೇಳುತ್ತಾರೆ.

**ಕದಡು ಕಂಪನವೆಸೆವ ಸದಮಲಾವರ್ತಂಗ ।**
**ಳೊದವಿದುದಕಂಗಳೊಳು ಬೇರೆ ಬೇರೆ ರವಿ ।**
**ಯುದಿಸಲೊಂದಲ್ಲದಖಿಳವೇ ॥೩॥**

**ಟೀಕಾ:** ಕದಡು=ಮಲಿನ, ಕಂಪನವು=ಚಲನ, ಎಸೆವ=ಶೋಭಿಸುವ, ಸದಮಲ=ಪರಿಶುದ್ಧಗಳಾದ, ಆವರ್ತಂಗಳು=ವರ್ತಿಗಳು, ಒದವಿದ=ಅವುಗಳಲ್ಲಿರುವ, ಉದಕಂಗಳೊಳು = ನೀರುಗಳಲ್ಲಿ, ಬೇರೆ ಬೇರೆ = ಭಿನ್ನಭಿನ್ನವಾಗಿ, ರವಿಯು=

ಸೂರ್ಯನು, ಉದಿಸಲ್=ತೋರಲು, ಒಂದಲ್ಲದೆ=ಒಬ್ಬನಲ್ಲದೆ, ಅಖಿಳವೆ=ಅನೇಕ ಸೂರ್ಯರೆ? (ಅಲ್ಲ) ಒಬ್ಬನು.

**ತಾತ್ಪರ್ಯ:-** ಒಂದು ನದಿಯಲ್ಲಿ ಮೂರು ವರ್ತಿಗಳು ಇರುತ್ತವೆ. ಒಂದರಲ್ಲಿದ್ದ ನೀರು ಮಲಿನವಾಗಿದೆ. ಮತ್ತೊಂದರಲ್ಲಿದ್ದ ನೀರು ಚಲನವಲನವಾಗ ಹತ್ತಿದೆ. ಇನ್ನೊಂದರಲ್ಲಿರುವ ನೀರು ಅತ್ಯಂತ ಪರಿಶುದ್ಧವಾಗಿದೆ. ಅವುಗಳಲ್ಲಿ ಸೂರ್ಯನು ಪ್ರತಿಬಿಂಬಿಸಿರುತ್ತಾನೆ. ಮಲಿನ ಜಲದಲ್ಲಿ ಸೂರ್ಯನ ಪ್ರತಿಬಿಂಬವು ಎದ್ದು ಕಾಣಿಸುವದೇ ಇಲ್ಲ. ಚಂಚಲ ಜಲದಲ್ಲಿ ಪ್ರತಿಬಿಂಬು ಅತ್ತಿತ್ತ ಚಲಿಸುತ್ತಿರುತ್ತದೆ. ತಿಳಿ ನೀರಿನಲ್ಲಿ ಸೂರ್ಯನ ಪ್ರತಿಬಿಂಬವು ನಿರ್ಮಲವೂ ನಿಶ್ಚಲವೂ ಆಗಿರುವದಲ್ಲದೆ, ನಿಚ್ಚಳವಾಗಿ ಕಾಣುತ್ತಿರುತ್ತದೆ. ಹೀಗೆ ಬೇರೆ ಬೇರೆ ಕಂಡಾಗ್ಯಾದರೂ ಸೂರ್ಯನು ಏಕವಾಗಿರುವನೇ ಹೊರತು ಅನೇಕವಿಲ್ಲ. ಕಿಂತು, ಉಪಾಧಿಗಳ ಮೂಲಕ ಒಬ್ಬ ಸೂರ್ಯನೇ ಹಲವಾಗಿ ತೋರುತ್ತಿರುತ್ತಾನೆ. ಈ ದೃಷ್ಟಾಂತದಂತೆ, ಅಂತಃಕರಣವು ತ್ರಿಗುಣಗಳ ಮೂಲಕ ಮೂರು ವಿಧವಾಗಿರುತ್ತದೆ. ನಿದ್ರಾಲಸ್ಯಾದಿ ತಮೋಗುಣಗಳಿಂದ ಕೂಡಿದ ಅಂತಃಕರಣವು ಮಲಿನ ಜಲವಿದ್ದ ವರ್ತಿಯ ಸಮಾನವಾಗಿದೆ. ಇದರಲ್ಲಿ ಆತ್ಮನು ಮೋಹಿಯಾಗಿಯೂ **ಮೂಢನಾಗಿಯೂ** ತೋರುತ್ತಾನೆ. ಕಾಮ ಕ್ರೋಧಾದಿ ರಜೋಗುಣಗಳಿಂದ ಕೂಡಿದ ಅಂತಃಕರಣವು ಚಂಚಲವರ್ತಿ ಸಮಾನವಾಗಿದೆ. ಈ ಅಂತಃಕರಣದಲ್ಲಿದ್ದ ಆತ್ಮನು **ದುಃಖಿಯಾಗಿ** ತೋರುತ್ತಾನೆ. ಶಮದಮಾದಿ ಸತ್ವಗುಣಗಳಿಂದ ಕೂಡಿದ ಅಂತಃಕರಣದಲ್ಲಿ ಆತ್ಮನು ಶಾಂತ **ಸುಖಮಯನಾಗಿ** ತೋರುತ್ತಾನೆ. ಹೀಗೆ ಒಬ್ಬಾತ್ಮನು ಸತ್ವ, ರಜ, ತಮಗಳೆಂಬ ತ್ರಿಗಣಾತ್ಮಕ ಅಂತಃಕರಣಗಳಲ್ಲಿ ಪ್ರತಿಬಿಂಬಿಸಿ, ಸುಖಿ, ದುಃಖಿ, ಮೂಢನೆಂದು ಭಿನ್ನ ಭಿನ್ನನಾಗಿ ತೋರಿದರೂ, ಸೂರ್ಯನಂತೆ ಬಿಂಬ ರೂಪದಿಂದ ಆತ್ಮನು ಒಬ್ಬನೇ ಇರುವನು. ಏಕಾತ್ಮನೇ ಉಪಾಧಿಗಳಿಂದ ಅನೇಕಾತ್ಮನಾಗಿ ತೋರುತ್ತಿರುವನೆಂಬ ಭಾವವು.

**ಬಳಿಕ,** ತಾವು ಕೊಟ್ಟ ಸೂರ್ಯನ ದೃಷ್ಟಾಂತವು ಸರಿಯಿಲ್ಲ. ಯಾಕಂದರೆ, ಸೂರ್ಯನು ಪರಿಚ್ಛಿನ್ನನಾಗಿರುವನು. ಪ್ರತಿಬಿಂಬಗಳಾದರೂ ಪೂರ್ಣವಾಗದೆ ಬೇರೆ ಬೇರೆ ವಿರಳಗಳಾಗಿವೆ. ದೃಷ್ಟಾಂತದಲ್ಲಿರುವ ಆತ್ಮನು ಅವಿರಳನಾಗಿರುತ್ತಾನೆ. ಎಲ್ಲ ದೇಹಗಳಲ್ಲಿಯೂ ಪೂರ್ಣನಾಗಿರುವನೆಂದು ಹೇಳುವಿರಿ. ಆದ್ದರಿಂದ ದೃಷ್ಟಾಂತ ಸರಿಯಲ್ಲವೆಂದು ಶಂಕೆಯನ್ನು ಮಾಡಿದರೆ, ಎಲ್ಲೆಡೆಯಲ್ಲಿಯೂ ಬಿಸಿಲು ಅವಿರಳವಾಗಿದೆ. ಸಂದುಬಿಟ್ಟಿಲ್ಲ. ಹೀಗೆ ಪೂರ್ಣವಾಗಿದ್ದರೂ, ಅನೇಕ ಬಣ್ಣದ ರತ್ನಗಳಿಂದ ಬೆಳಕು ಬೇರೆ ಬೇರೆಯಾದಂತೆ, ಅವಿರಳಾತ್ಮನು ಉಪಾಧಿಗಳ ಮೂಲಕ ಏಕವಾಗಿದ್ದರೂ ಅನೇಕವಾದಂತೆ ತೋರುತ್ತಾನೆಂದು ಉತ್ತರವನ್ನು ಹೇಳುತ್ತಾರೆ.

**ಬಿಸಿಲಲ್ಲಿ ಪಲರನ್ನ ವಿಸರವಿಕ್ಕಿದೊಡೆ ಯಾ ।**
**ಬಿಸಿಲು ಬಹುವರ್ಣವೆನಿಪಂತುಪಾಧಿಯಿಂ ।**
**ದೆಸೆವುದರಿವೊಂದೆ ಪಲವಾಗಿ ॥೪॥**

**ಟೀಕಾ:-** ಬಿಸಿಲಲ್ಲಿ=ಸೂರ್ಯಪ್ರಕಾಶದಲ್ಲಿ, ಪಲರನ್ನ=ಅನೇಕ ರತ್ನಗಳ, ವಿಸರವ=ಸಮೂಹವನ್ನು, ಇಕ್ಕಿದೊಡೆ = ಇರಿಸಿದರೆ, ಆ ಬಿಸಿಲು = ಆ ಬೆಳಕು, ಬಹು ವರ್ಣವೆನಿಪಂತೆ=ನಾನಾ ಬಣ್ಣವಾಗಿ ತೋರುವಂತೆ, ಉಪಾಧಿಯಿಂ=ಬುದ್ಧಿಗಳ ಉಪಾಧಿಯಿಂದ, ಅರಿವೊಂದೆ=ಚಿದ್ರೂಪಾತ್ಮವೇ, ಪಲವಾಗಿ=ಅನೇಕವಾಗಿ, ಎಸೆವುದು=ಹೊಳೆಯುವದು.

**ತಾತ್ಪರ್ಯ:-**ಸೂರ್ಯನು ಏಕದೇಶಿಯಾದರೂ ಆ ಸೂರ್ಯನ ಪ್ರಕಾಶವು ಸರ್ವ ದೇಶಗಳಲ್ಲಿ ವ್ಯಾಪಕವಾಗಿರುತ್ತದೆ. ಅಂಥಾ ಪ್ರಕಾಶದಲ್ಲಿ ಹಸರು, ಹಳದಿ, ಕೆಂಪು ಬಣ್ಣಗಳ ರತ್ನಗಳನ್ನು ಇರಿಸಿದರೆ; ಆ ಬೆಳಕಾದರೂ, ಹಸರು ಬೆಳಕು, ಹಳದಿ ಬೆಳಕು, ಕೆಂಪು ಬೆಳಕಾಗಿ ತೋರುತ್ತದೆ. ಹೀಗೆ ಅನೇಕವಾಗಿ ತೋರಿದರೂ ಬಿಸಿಲು ಒಂದೇ ಆಗಿರುತ್ತದೆ. ಈ ದೃಷ್ಟಾಂತದಂತೆ; ಪ್ರಕಾಶರೂಪ ಚಿದ್ರೂಪಾತ್ಮನು ನಾನಾ ಬುದ್ಧಿಗಳ ಉಪಾಧಿ ಮೂಲಕ, ಅನೇಕರೂಪನಾಗಿ ತೋರುತ್ತಾನೆ. ಹೀಗೆ ಅನೇಕನಾಗಿ ತೋರಿದರೂ; ಏಕರೂಪನೆಂದು ತಿಳಿಯತಕ್ಕದ್ದು.

**ಬಳಿಕ,** ತಾವು ಉದಾಹರಿಸಿದ ಬಿಸಿಲು **ರೂಪುಗುಣವುಳ್ಳದ್ದಾ**ಗಿದೆ. ಅದರಿಂದ ಅದು ಉಪಾಧಿ ರತ್ನಗಳ ಮೂಲಕ ಅನೇಕವಾಗಿ ತೋರಬಹುದು. ಆತ್ಮನು **ನಿರೂಪ**ನಿದ್ದಾನೆಂದು ನಿರವಯುವ ನಿರೂಪನಾದ ಆತ್ಮನು ಅನೇಕರೂಪವುಳ್ಳವನಾಗಿ ತೋರಲಾರನು. ಎಂದು ಶಂಕೆಯನ್ನು ಮಾಡುತ್ತಿರಲಿಕ್ಕೆ, ಆಕಾಶವು ನಿರೂಪವಾಗಿದೆ. ಅದರ ಗುಣವಾದ ಶಬ್ದವೂ ನಿರೂಪವಾಗಿದೆ. ಹೀಗಿದ್ದರೂ ಉಪಾಧಿಗಳ ಮೂಲಕ ಅನೇಕವಾಗಿ ತೋರುವಂತೆ, ಆತ್ಮನು ಉಪಾಧಿಗಳ ಮೂಲಕ ಅನೇಕವಾಗಿರುತ್ತಾನೆಂದು ಹೇಳುತ್ತಾರೆ.

**ಧ್ವನಿಯಸಾಧಾರಣಂ ತನಗಾದನಭವಖಿಳ ।**
**ವೆನಿಪ ವಾದ್ಯದೊಳವಚ್ಛಿನ್ನವಾಗಿ ಬಹು ।**
**ನಿನದವಾದಂತೆ ಪಲವಾತ್ಮ ॥೫॥**

**ಟೀಕಾ:-** ಧ್ವನಿಯೆ=ಶಬ್ದವೇ, ಅಸಾಧಾರಣಂ=ಮತ್ತೊಂದಕ್ಕೆಯಿಲ್ಲದೆ, ತನಗಾದ=ತನಗೆಯುಳ್ಳ, ನಭವು=ಆಕಾಶವು, ಅಖಿಳವೆನಿಪ=ಅನೇಕವೆನಿಸುವ ವಾದ್ಯದೊಳು=ವೀಣಾದಿವಾದ್ಯಗಳಲ್ಲಿ, ಅವಚ್ಛಿನ್ನವಾಗಿ=ಆಯಾ ವಾದ್ಯಗಳ ಅಳತೆ

ಯಾಗಿಬಹುನಿನದವಾದಂತೆ=ಅನೇಕ ತರಹದ ಧ್ವನಿಗಳಾಗುವಹಾಗೆ, ಪಲವಾತ್ಮ= ಆತ್ಮನಾದರೂ ಅನೇಕವಾಗಿರುವನು.

ತಾತ್ಪರ್ಯ:- ಶಬ್ದ ಗುಣವುಳ್ಳದ್ದು ಆಕಾಶವು. ಆ ಶಬ್ದವು ಧ್ವನ್ಯಾತ್ಮಕ ವಾಗಿಯೂ ವರ್ಣಾತ್ಮಕವಾಗಿಯೂ ಎರಡು ಪ್ರಕಾರವಾಗಿರುವದು. ಈ ಧ್ವನಿಯು ಆಕಾಶಕ್ಕೆ ಅಸಾಧಾರಣವಾಗಿದೆ. ಯಾವದು ಎಲ್ಲದರಲ್ಲಿಯೂ ಇರುವದೋ, ಅದು ಸಾಧಾರಣವೆನಿಸುವದು. ಯಾವದು ಒಂದರಲ್ಲಿದ್ದು ಮತ್ತೊಂದರಲ್ಲಿರುವದಿಲ್ಲವೋ, ಅದು ಅಸಾಧಾರಣವೆನಿಸುವದು. ಹೇಗಂದರೆ, ಮನುಷ್ಯತ್ವವು ಎಲ್ಲರಲ್ಲಿ ಅದೆ. ಇದು ಸಾಧಾರಣವೆನಿಸುವದು. ವಿಪ್ರತ್ವಾದಿಗಳು ಬ್ರಾಹ್ಮಣರಲ್ಲಿಯೇ ಉಂಟು. ಅನ್ಯ ರಲ್ಲಿ ಇಲ್ಲ. ಅದರಿಂದ ಅಸಾಧಾರಣವೆನಿಸುತ್ತವೆ. ಇದರಂತೆ ಧ್ವನಿಯು ಆಕಾಶಕ್ಕೆ ಅಸಾಧಾರಣ ಗುಣವಾಗಿದೆ. ಆಕಾಶವೂ ನಿರೂಪ. ಅದರ ಗುಣವಾದ ಧ್ವನಿಯೂ ನಿರೂಪವಾಗಿದೆ. ಆದರೂ ವೀಣಾ, ಮದ್ದಳೆ, ಮೃದಂಗ, ಕಾಳೆ, ಭೇರಿ ಮುಂತಾದ ಅನೇಕ ವಾದ್ಯಗಳ ಹವಣಾಗಿರುವ ಆಕಾಶದಲ್ಲಿ, ಒಂದೊಂದು ವಿಧವಾದ ಧ್ವನಿಯು ಉದಯವಾಗುತ್ತದೆ. ಅಂದರೆ, ಸಾಮಾನ್ಯವಾದ ಧ್ವನಿಯು ಆಯಾಯ ವಾದ್ಯಗಳ ಉಪಾಧಿ ತಾರತಮ್ಯ ಮೂಲಕ ನಾನಾರೂಪವಾಗಿ ತೋರುತ್ತದೆ. ಇದರಂತೆ, ಆತ್ಮನು ನಿರೂಪನೂ ಪೂರ್ಣನೂ ಆಗಿರುತ್ತಾನೆ. ಆಯಾ ಬುದ್ಧಿಗಳ ಅವಿಚ್ಛಿನ್ನ ಉಪಾಧಿ ಮೂಲಕ ಹಲವಾತ್ಮನಾಗಿಯೂ ತೋರುತ್ತಾನೆ. ಆದ್ದರಿಂದ ಚಿದ್ರೂ ಪಾತ್ಮನು ಒಬ್ಬನು, ಬುದ್ಧಿ, ಉಪಾಧಿಗಳು ಅನೇಕ ಇವುಗಳಿಂದ ಅನೇಕ ಭೋಗ ಗಳು ಸಂಭವಿಸುತ್ತವೆ.

**ಬಳಿಕ,** ಧ್ವನಿಯೇ ಅಸಾಧಾರಣವಾಗಿರುವ ಆಕಾಶವು ಪ್ರತ್ಯಕ್ಷವಲ್ಲ. ಕಿಂತು, ಶಬ್ದಗುಣದ ಮೇಲಿಂದ ಆಕಾಶವು ಅದೆಯೆಂದು ಅನುಮಾನಮಾಡಲಿಕ್ಕೆ ಬರು ತ್ತದೆ. ಆದ್ದರಿಂದ ಆಕಾಶವು ಅನುಮೇಯವಾಗಿದೆ. ಅಂದರೆ, ಆಕಾಶವು ಅನುಮಾನ ಪ್ರಮಾಣದಿಂದ ನಿಶ್ಚಯಿಸಲ್ಪಡುತ್ತದೆ. ಆತ್ಮನು ಹಾಗಲ್ಲ; ಅಪ ರೋಕ್ಷ ರೂಪ ಪ್ರತ್ಯಕ್ಷನಾಗಿರುತ್ತಾನೆ. ಪ್ರತ್ಯಕ್ಷರೂಪನಾದ ಆತ್ಮನಿಗೆ ಅನುಮೇಯ ಆಕಾಶದ ದೃಷ್ಟಾಂತವನ್ನು ಹೇಳುವದು ಸರಿಯಲ್ಲ; ಎಂದು ಶಂಕೆಯನ್ನು ಮಾಡಿದರೆ, ಅಪರೋಕ್ಷವಾದ ಗಾಯಕನ ಸ್ವರದ ದೃಷ್ಟಾಂತವನ್ನು ಕೊಟ್ಟು ಸಮಾಧಾನವನ್ನು ಹೇಳುತ್ತಾರೆ.

**ಸ್ವರವೊಂದೆ ಗಾಯಕನ ಕರಣ ಭೇದವನೈದಿ ।**
**ಪರಿಪರಿಯ ಗೀತವೆನಿಸಿ ರಂಜಿಸುವಂತೆ ।**
**ಶರಿರಾದಿ ಭೇದವರಿವಿಂಗೆ ॥೬॥**

**ಟೀಕಾ**;- ಸ್ವರವೊಂದೇ = ಒಂದೇ ಸ್ವರವು, ಗಾಯಕನ = ಹಾಡುವವನ, ಕರಣಭೇದವನು=ಕಂಠವೇ ಮೊದಲಾದ ಅವಯವ ಭೇದವನ್ನು, ಐದಿ=ಹೊಂದಿ, ಪರಿಪರಿಯ=ನಾನಾತರದ, ಗೀತವೆನಿಸಿ=ಹಾಡುಗಳಾಗಿ, ರಂಜಿಸುವಂತೆ=ಮನೋಹರವಾಗುವ ಹಾಗೆ, ಅರುವಿಂಗೆ=ಜ್ಞಾನರೂಪ ಆತ್ಮನಿಗೆ, ಶರೀರಾದಿ ಭೇದವು= ದೇಹಾದಿ ಭೇದ ಮೂಲಕ ಆತ್ಮಭೇದವು ತೋರುತ್ತಿರುತ್ತದೆ.

**ತಾತ್ಪರ್ಯ**:- ಹಾಗಾದರೆ, ನಿನಗೆ ಅಪರೋಕ್ಷವಾದ ದೃಷ್ಟಾಂತವನ್ನು ಕೊಡುತ್ತೇನೆ ಕೇಳು. ಗಾಯಕನಲ್ಲಿ ಅವನ ಮೂಲಾಧಾರದಿಂದ ಹೊರಡುವ ಶ್ರುತಿರೂಪ ಸ್ವರವು ಒಂದೇ ವಿಧವಾಗಿರುತ್ತದೆ. ಅದು ನಾಭಿ, ಹೃದಯಗಳಿಂದ ಕಂಠಕ್ಕೆ ಬಂದು, ಪ್ರಾಣವಾಯುವಿನ ಸಂಘಟನೆಯಿಂದ; ಸಡ್ಜ, ಋರುಭ, ಗಾಂಧಾರಿ ಮೊದಲಾದ ಸಪ್ತಸ್ವರಗಳ ರೂಪಾಗಿ, ಮುಂದೆ ಅನೇಕವಿಧ ರಾಗಗಳಾಗಿ ಪರಿಣಮಿಸುತ್ತದೆ. ಆ ರಾಗಗಳು ಕೇಳುವವರ ಚಿತ್ತಗಳನ್ನು ಆಕರ್ಷಣ ಮಾಡುತ್ತವೆ. ಮನಸ್ಸಿಗೆ ಬಹಳ ಮನೋಹರಗಳೂ ಆಗಿರುತ್ತವೆ. ಈ ದೃಷ್ಟಾಂತದಂತೆ, ಅಪರೋಕ್ಷನೂ ಸ್ವಯಂಪ್ರಕಾಶ ಚಿದ್ರೂಪನೂ ಆದ ಆತ್ಮನು ಅನೇಕ ಸೂಕ್ಷ್ಮ ಶರೀರಗಳ ಉಪಾಧಿಗಳ ಮೂಲಕ ಅನೇಕವಾಗಿ ತೋರುತ್ತಾರೆ. ಹಾಗು ಭಿನ್ನ ಭಿನ್ನ ಭೋಗಗಳ ವ್ಯವಹಾರವು ನಡೆದಿರುತ್ತದೆ.

ಬಳಿಕ, ಧ್ವನಿಯೇ ಆಗಲಿ, ಅಥವಾ ಗಾಯಕನ ಸ್ವರವೇ ಆಗಲಿ, **ಶ್ರೋತ್ರೇಂದ್ರಿಯಕ್ಕೆ** ವಿಷಯಗಳಾಗಿವೆ. ಅದರಿಂದ ಅವು ಅನೇಕ ರೂಪವಾಗಿರುವದು ಅನುಭವಕ್ಕೆ ಬರುತ್ತದೆ. ಆತ್ಮನು ಅಶಬ್ದ, ಅಸ್ಪರ್ಶ, ಅರೂಪ, ಅರಸ, ಅಗಂಧನೆಂದು ಶ್ರುತಿಯು ಹೇಳುತ್ತದೆ. ಅಂದರೆ, ಪಂಚಜ್ಞಾನೇಂದ್ರಿಯಗಳಿಂದಲೂ ಆತ್ಮನು **ವಿಷಯನಾಗುವದಿಲ್ಲ**. ಎಂದು ಶ್ರುತಿಯು ಹೇಳುತ್ತದೆ. ಇಂಥಾ ಅತೀಂದ್ರಿಯ ನಿರಾಕಾರನಾದ ಆತ್ಮನು ಅನೇಕ ರೂಪನೆಂಬುದು ಹೇಗೆ ಸಂಭವವಾಗುತ್ತದೆ ? ಎಂದು ಶಂಕೆಯನ್ನು ಮಾಡಿದರೆ, ನಿರಾಕಾರವಾದ ಆಕಾಶವು ಗಜತುರಗಾದಿ ಸಾಕಾರಗಳ ಉಪಾಧಿಗಳಿಂದ, ತಾನೂ ಆಕಾರವುಳ್ಳದ್ದಾಗಿ ಅನೇಕವಾಗಿ ಹೇಗೆ ತೋರುವದೋ, ಹಾಗೆ ಆತ್ಮನು ಸಾಕಾರ ಜಡಗಳಾದ ಉಪಾಧಿಗಳಿಂದ, ಅನೇಕವಾಗಿ ತೋರುತ್ತಾನೆಂದು ಹೇಳುತ್ತಾರೆ.

**ಕದಳೀದಳದೆ ಛಿದ್ರಿಸಿದ ವಾರಣಾದಿ ಭಾ ।**
**ವದಳೊಂದೆ ನಭವೆ ಬಹುರೂಪವಾದಂತೆ ।**
**ಚಿದಚಿತ್ತುಗಳಿಗಖಿಳವಕ್ಕು** ॥೭॥

**ಟೀಕಾ**:- ಕದಳೀದಳದೆ=ಬಾಳೆ ಎಲೆಯಿಂದ, ಛಿದ್ರಿಸಿದ=ಕೊರೆದ, ವಾರಣಾದಿ ಭಾವದಲಿ=ಗಜ ತುರಗಾದಿ ರೂಪದಲ್ಲಿ, ಒಂದೆ ನಭವೆ=ಒಂದು ಆಕಾಶವೆ,

ಬಹು ರೂಪವಾದಂತೆ=ಅನೇಕ ರೂಪುಗಳಾದಂತೆ, ಚಿತ್ತು=ಚೇತನರೂಪ ಆತ್ಮನು, ಅಚಿತ್ತುಗಳಗೆ=ಜಡೋಪಾಧಿಗಳಿಂದ, ಅಖಿಳಕ್ಕು=ಅನೇಕವಾಗುವನು.

**ತಾತ್ಪರ್ಯ:**- ಬಾಳೆಯ ಎಲೆಗಳನ್ನು ಗಜ, ತುರಗಾದಿ, ಗುಡಿ, ಗೋಪುರಾದಿ ಅನೇಕ ಆಕಾರಗಳಿಂದ ಕತ್ತರಿಸಿ, ಚಂದಕಾಣುವ ಹಾಗೆ ಮಂಟಪವನ್ನು ನಿರ್ಮಾಣಮಾಡುತ್ತಾರೆ. ಆ ಮಂಟಪದ ಒಳಗಡೆಯಲ್ಲಿ ದೀಪವನ್ನು ಹಚ್ಚುತ್ತಾರೆ. ಆ ಚಿತ್ರದೊಳಗಿನ ಪೊಳ್ಳು ಅಂದರೆ ನಿರಾಕಾರವಾದ ಆಕಾಶವು, ಗಜ ತುರಗಾದಿ ಆಕಾರವುಳ್ಳದ್ದಾಗಿ ತೋರುತ್ತದೆ. ನಿರಾಕಾರವಾದ ಒಂದು ಆಕಾಶವೇ, ಸಾಕಾರಗಳಾದ ಚಿತ್ರಗಳ ಮೂಲಕ, ಅನೇಕ ಆಕಾರವಾಗಿ ಹೇಗೆ ತೋರುವದೋ, ಹಾಗೆ ನಿರಾಕಾರನಾದ ಚಿದ್ರೂಪಾತ್ಮನು ಜಡಗಳಾದ ದೇಹಾದಿ ಉಪಾಧಿಗಳ ಮೂಲಕ ಅನೇಕವಾಗಿರುತ್ತಾನೆ.

**ಬಳಿಕ,** ಅತೀಂದ್ರಿಯ ನಿರಾಕಾರವಾದ ಆಕಾಶವು ಉಪಾಧಿಗಳಿಂದ ಸಾಕಾರವಾಗಿ ತೋರಬಹುದು. ಆದರೂ ಅದು **ಚಿತ್ತು ಅಲ್ಲ** ಕಿಂತು ಜಡವಾಗಿದೆ, ಆತ್ಮನು ಪ್ರಕಾಶರೂಪ **ಚಿದ್ರೂಪ**ನಾಗಿರುತ್ತಾನೆ. ಆದ್ದರಿಂದ ಸ್ವಯಂ ಪ್ರಕಾಶಸ್ವರೂಪನಾದ ಆತ್ಮನು ಅನೇಕವಾಗಿ ತೋರಲಾರನೆಂದು ಶಂಕೆಯನ್ನು ಮಾಡಿದರೆ; ಆಟದಲ್ಲಿಟ್ಟ ದೀಪದ ಬೆಳಕಿನಂತೆ ಆತ್ಮನು ಅನೇಕವಾಗಿ ತೋರುವನೆಂದು ಹೇಳುತ್ತಾರೆ.

**ಹೂಡಿ ರಾಮಾಯಣವ ನಾಡಲಲ್ಲಿಯ ಸೇವೆ।**
**ಗೀಡಾದ ಸೊಡರ ಬೆಳಗೇಕವಪ್ಪಂತೆ।**
**ನೋಡಾತ್ಮವಖಿಳದೊಳಗೊಂದೆ।** ॥೮॥

**ಟೀಕಾ:** ಹೂಡಿ=ಪ್ರಯತ್ನಿಸಿ, ರಾಮಾಯಣವನಾಡಲ್=ರಾಮಾಯಣದ ಆಟವನ್ನು, ಆಡಲು=ಆಡಲಾಗಿ, ಅಲ್ಲಿಯ=ಆಟದಲ್ಲಿಯ, ಸೇವೆಗೆ=ವ್ಯವಹಾರಕ್ಕೆ ಈಡಾದ=ಕೂಡಿದ, ಸೊಡರಬೆಳಕು=ದೀಪದ ಪ್ರಕಾಶವು, ಏಕವಪ್ಪಂತೆ=ಒಂದೇ ಆಗಿರುವಂತೆ. ಅಖಿಳದೊಳು=ಅನೇಕದೇಹಗಳಲ್ಲಿ, ಒಂದೆಆತ್ಮ=ಒಬ್ಬನೇ ಆತ್ಮನು. ನೋಡು=ವಿಚಾರಿಸು,

**ತಾತ್ಪರ್ಯ:**-ಒಂದು ಊರಲ್ಲಿ ರಾಮಾಯಣದ ಆಟವನ್ನು ಆಡಲಿಕ್ಕೆ ಹತ್ತಿರುವರು. ಆ ಆಟದ ಮಧ್ಯದಲ್ಲಿ ದೀಪವನ್ನು ಇಟ್ಟಿದ್ದಾರೆ. ಆ ದೀಪದ ಬೆಳಕು ಆಟದ ರಂಗಸ್ಥಳವನ್ನು ಪ್ರಕಾಶಮಾಡುತ್ತಿರುತ್ತದೆ. ಆ ರಂಗ ಸ್ಥಳದಮೇಲೆ ರಾಮನ ವೇಷವು ಬಂದರೆ ಬೆಳಕು ರಾಮನಾಕಾರವಾಗುತ್ತದೆ. ಸೀತೆಯವೇಷ ಬಂದರೆ; ಸೀತಾಕಾರವಾಗುತ್ತದೆ. ರಾವಣವೇಷ ಬಂದರೆ, ರಾವಣಾಕಾರ ವಾಗು

ತ್ತದೆ. ಆ ರಂಗ ಮಂಟಪದಲ್ಲಿ ಹೀಗೆ ಯಾವ ವೇಷಗಳು ಬರುತ್ತವೆಯೋ, ಅವುಗಳ ರೂಪವಾಗಿಯೇ ಆ ಬೆಳಕು ತೋರುತ್ತಿರುತ್ತದೆ. ಈ ದೃಷ್ಟಾಂತದಂತೆ; ಸ್ವಯಂ ಪ್ರಕಾಶ ಸ್ವರೂಪನಾದ ಆತ್ಮನು, ದೇವ, ದಾನವ, ಮನುಷ್ಯ, ಪಶು, ಪಕ್ಷಿ, ಕ್ರಿಮಿ, ಕೀಟ, ಮೊದಲೊದ ಅನೇಕ ದೇಹರೂಪ ವೇಷಗಳು ಬರಲಾಗಿ ಅವುಗಳ ಉಪಾಧಿಗಳಿಂದ ಅನೇಕಾತ್ಮರೂಪವಾಗಿ ತೋರುವನು. ಹೀಗೆ ತೋರಿದರೂ ಸ್ವರೂಪತಃ ಒಬ್ಬನೇ ಇರುತ್ತಾನೆ.

ಬಳಿಕ, ಆಟದೊಳಗಿನ ದೀಪವು ನಾನಾ ವೇಷಗಳರೂಪವಾಗಿರುತ್ತದೆಂದು ಹೇಳಿದಿರಿ. ಆದರೆ, ಇದು ನಮಗೆ ಅನುಭವಕ್ಕೆ ಬರುವದಿಲ್ಲ. ನಮ್ಮ ಅನುಭವಕ್ಕೆ ಬರುವಂತೆ ದೃಷ್ಟಾಂತಗಳನ್ನು ಹೇಳಬೇಕೆಂದು ಪ್ರಶ್ನೆಯನ್ನು ಮಾಡುತ್ತಿರಲಿಕ್ಕೆ ಮುಂದೆ ಎರಡು ಪದ್ಯಗಳಿಂದ ದೃಷ್ಟಾಂತಗಳನ್ನು ಕೊಡುತ್ತಾರೆ.

**ಜ್ಞಾನ ಭೇದಂ ಭ್ರಮಾದ್ಯನುಭೇದಂಗಳಿಂ।**
**ದೇ ನೋಡು ಕುಂಭ ಮೊದಲಾದವಂ ಬೆಳಗು।**
**ತಾನಾಮವಾಂತ ಸೊಡರಂತೆ ॥೯॥**

**ಟೀಕಾ:-** ಭ್ರಮಾದಿ = ಭ್ರಮ ಪ್ರಮಾ ಮೊದಲಾದ, ಅನುಭೇದಗಳಿಂದೆ= ಆಯಾ ಭೇದಗಳ ಮೂಲಕ, ಜ್ಞಾನಭೇದಂ=ಜ್ಞಾನವು ಭೇದವಾಗಿ ತೋರುವದು, ಕುಂಭ ಮೊದಲಾದವಂ=ಘಟ ಮೊದಲಾದವುಗಳನ್ನು, ಬೆಳಗುತ=ಪ್ರಕಾಶ ಮಾಡುತ್ತಾ, ಆ ನಾಮವಾಂತ=ಆಯಾ ಹೆಸರುಗಳನ್ನು ಹೊಂದಿದ, ಸೊಡರಂತೆ= ದೀಪದಹಾಗೆ, ನೋಡು=ಅನುಭವ ಮಾಡು.

**ತಾತ್ಪರ್ಯ:-** ಸಾಮಾನ್ಯವಾದ ನಿರ್ವಿಕಲ್ಪ ಜ್ಞಾನವು ಒಂದೇ ವಿಧವಾಗಿರುವದು. ಸವಿಕಲ್ಪಕ ಜ್ಞಾನವು ಮಾತ್ರ ಅನೇಕ ವಿಧವಾಗಿರುತ್ತದೆ. ಹೇಗಂದರೆ – ಭ್ರಾಂತಿಜ್ಞಾನ, ಸಂಶಯಜ್ಞಾನ, ಸ್ಮೃತಿಜ್ಞಾನ, ನಿಶ್ಚಯಜ್ಞಾನ, ಅನುಮೇಯ ಜ್ಞಾನ, ಸಾದೃಶ್ಯಜ್ಞಾನ, ಪರೋಕ್ಷ ಅಪರೋಕ್ಷಜ್ಞಾನವೆಂದು ಇನ್ನೂ ಅನೇಕವಾಗಿದೆ. ಜ್ಞಾನವು ಸ್ವರೂಪತಃ ಒಂದಿದ್ದು ಆಯಾ ಜ್ಞೇಯಗಳ ಅನುಸಾರವಾಗಿ ಜ್ಞಾನವೂ ಭೇದವಾಗಿರುತ್ತದೆ. ಮತ್ತು ಕತ್ತಲೆಯಲ್ಲಿರುವ ಘಟ ಪಟಾದಿ ವಸ್ತುಗಳು ತೋರುವದಿಲ್ಲ. ಕಿಂತು, ಬೆಳಕಿನಲ್ಲಿರುವ ಪದಾರ್ಥಗಳೇ ತೋರುತ್ತವೆ. ಅಂದರೆ, ದೀಪದ ಬೆಳಕು ಆವರಣವಾದ ಕತ್ತಲೆಯನ್ನು ನಿವಾರಿಸಿ, ತಾನು ಆಯಾ ಪದಾರ್ಥಗಳ ಆಕಾರವಾಗುತ್ತದೆ. ಆಗ್ಯೆ ಕಣ್ಣು ಇದು ಘಟ, ಇದು ಪಟವೆಂದು ತಿಳಿಯುತ್ತದೆ. ಆಗ್ಯೆ ನಮಗೆ ಪ್ರಕಾಶರೂಪ ಘಟದ ಜ್ಞಾನವಾದ ಮೇಲೆಯೇ ಮಣ್ಣಿನ ಕೊಡದ ಜ್ಞಾನವಾಗುತ್ತದೆ. ಹೀಗಿದ್ದರೂ ನಮಗೆ ಮಣ್ಣಿನ

ಕೊಡದ ಜ್ಞಾನವಾಯಿತು ಅನ್ನುತ್ತೇವೆ. ಪ್ರಕಾಶ ರೂಪ ಘಟವನ್ನು ಅರತೆವು ಎಂದು ಅರಿಯುವದಿಲ್ಲ. ಬೆಳಕಿನ ಕೊಡದ ಜ್ಞಾನವಿನಾ ಮಣ್ಣಿನ ಕೊಡದ ಜ್ಞಾನ ವಾಗದು. ಈ ಕಾರಣದಿಂದ ದೀಪದ ಬೆಳಕು ಆಯಾ ವಸ್ತುಗಳನ್ನು ಬೆಳಗುತ್ತಾ ಆಯಾಯ ಹೆಸರುಗಳನ್ನು ರೂಪವನ್ನು ಹೊಂದುತ್ತದೆ. ಬೆಳಕು ಒಂದಾದರೂ ಅನೇಕ ವಸ್ತುಗಳ ಉಪಾಧಿಗಳಿಂದ ಅನೇಕ ನಾಮಗಳನ್ನು ಪಡೆದಂತೆ, ಒಬ್ಬ ಆತ್ಮನು ಉಪಾಧಿ ನಾನತ್ವ ಮೂಲಕ ನಾನಾರೂಪವಾಗಿ ತೋರುತ್ತಾನೆ.

ಬಳಿಕ, ಇದೇ ರೀತಿಯ ಜಲದ ದೃಷ್ಟಾಂತವನ್ನು ಹೇಳುತ್ತಾರೆ.

**ಲವಣಾದಿಯೊಡಗೂಡಿ ತನೆ ತೋಯಮಖಿಳವಹ ।**
**ಸವಿಯಾದ ತೆರದಿ ಸಕಲಾತ್ಮರೆನಿಸಿ ತೋ ।**
**ರುವುದಿದಾತಾತ್ವಿಕದಭೇದ ॥೧೦॥**

**ಟೀಕಾ:-** ತೋಯವು=ಜಲವು, ಲವಣಾದಿಯೊಡಗೂಡಿ= ಉಪ್ಪು, ಹುಳಿ, ಸೀ ಮೊದಲಾದ ರಸಗಳಲ್ಲಿ ಬೆರತು, ತವೆ = ಚನ್ನಾಗಿ, ಅಖಿಳವಹ = ಅನೇಕ ವಾಗಿರುವ, ಸವಿಯಾದ ತೆರದಿ = ರುಚಿಯಾಗಿರುವಂತೆ, ಸಕಲಾತ್ಮರೆನಿಸಿ=ಅನೇ ಕಾತ್ಮರೆಂದು ಹೇಳಿಸಿಕೊಂಡು, ತೋರುವದು=ಪ್ರತೀತಿಯಾಗುವದು, ಇದು=ಹೀಗೆ ತೋರುವದು, ಆ ತಾತ್ವಿಕದ ಭೇದ=ಆಯಾ ಶರೀರಗಳ ಸಂಬಂಧವಾದ ಭೇದವು.

**ತಾತ್ಪರ್ಯ:-** ಒಂದೇ ವಿಧವಾದ ಜಲವು ಉಪ್ಪು, ಹುಳಿ, ಸೀ ಮೊದಲಾದ ರಸಗಳಲ್ಲಿ ಬೆರೆತು, ಅನೇಕರೂಪವಾಗಿ ತೋರುವಂತೆ· ಅನೇಕ ದೇಹಾದಿಗಳ ಭೇದ ಮೂಲಕ ಆತ್ಮನು ಭೇದವಾಗಿ ತೋರುತ್ತಿರುತ್ತಾನೆ.

**ಬಳಿಕ,** ತಾವು ಹೇಳಿದ ಅನೇಕ ದೃಷ್ಟಾಂತಗಳ ಮೂಲಕ ಆತ್ಮನು ಒಬ್ಬ ನೆಂದು ಹೇಳಿದಿರಿ. ದೇಹಗಳು ಅನೇಕಗಳಾಗಿವೆ. ಆ ಅನೇಕ ದೇಹಗಳಲ್ಲಿ ಆತ್ಮನು ಒಬ್ಬನೇ ಇರುತ್ತಾನೆಂದು ತಮ್ಮಿಂದ ನಿಶ್ಚಯವಾಗಿ ಹೇಳಲ್ಪಟ್ಟಿತು. ಆದರೆ, ಈ ದೇಹದಲ್ಲಿದ್ದ ಆತ್ಮನೇ ಆ ದೇಹದಲ್ಲಿಯೂ ಇದ್ದರೆ, ಈ ದೇಹದಲ್ಲಿ ಆತ್ಮನು ಹೇಗೆ ಸುಖಿಯಾಗಿರುವನೋ, ಹಾಗೆ ಆ ದೇಹದಲ್ಲಿಯೂ ಇರಬೇಕಾಗಿತ್ತು. ಹಾಗಿಲ್ಲ. ಕಿಂತು, ದುಃಖಿಯಾಗಿರುತ್ತಾನೆ. ಈ ಕಾರಣದಿಂದ ಆತ್ಮರು ಅನೇಕ ರೆಂದು ಹೇಳುವದೇ ಉಚಿತವಾಗಿದೆ. ಎಂದು ಶಂಕೆಯನ್ನು ಮಾಡಿದರೆ, ಔಪಾಧಿಕ ಭೇದದಿಂದ ಭೋಗಗಳು ಬೇರೆ ಬೇರೆ ಸಂಭವಿಸುತ್ತವೆ. ಅದರೂ ಉಪಹಿತ ಆತ್ಮನು ಒಬ್ಬನೇ ಇರುವನು. ಎಂದು ಸಮಾಧಾನವನ್ನು ಹೇಳುತ್ತಾರೆ.

**ಒಂದು ಕುಂಭದ ಬಯಲೊಳೊಂದೆ ಧೂಮಾದಿ ಮ ।**
**ತ್ತೊಂದರೊಳಗಿಲ್ಲದಂತೆ ಜೀವರ್ಗೆ ಭೇ ।**
**ದಂದೋರಿ ಭೋಗಮಿರುತಿರ್ಕು ॥೧೧॥**

**ಟೀಕಾ:-** ಒಂದು ಕುಂಭದ ಬಯಲೊಳು=ಒಂದು ಕೊಡದ ಬಯಲಲ್ಲಿ, ಒಂದೆ ಧೂಮಾದಿ=ಒಂದರಲ್ಲಿ ಹೊಗೆ ಮೊದಲಾದವುಗಳು, ಮತ್ತೊಂದರೊಳಗೆ= ಬೇರೊಂದರಲ್ಲಿ, ಇಲ್ಲದಂತೆ=ಇರದಹಾಗೆ, ಜೀವರ್ಗೆ=ಜೀವರುಗಳಿಗೆ, ಭೇದಂ ದೋರಿ=ಬೇರೆ ಬೇರೆಯಾಗಿ, ಭೋಗಂ=ಭೋಗವು, ಇರುತಿರ್ಕು=ಇರುತ್ತಿರುವದು.

**ತಾತ್ಪರ್ಯ:-** ಮುಂಭಾಗದಲ್ಲಿ ಹತ್ತುಕೊಡಗಳಿವೆ. ಒಂದರಲ್ಲಿ ಧೂಮು ತುಂಬಿದೆ. ಒಂದರಲ್ಲಿ ಧೂಳ, ಒಂದರಲ್ಲಿ ಬೆಂಕಿ, ಮತ್ತೊಂದರಲ್ಲಿ ಹಾಲು, ಒಂದಲ್ಲಿ ನೀರು ಹೀಗೆ ಅನೇಕ ಘಟಾಕಾಶಗಳಲ್ಲಿ ಅನೇಕ ಪದಾರ್ಥಗಳನ್ನು ಕಾಣುತ್ತೇವೆ. ಆದರೂ ಒಂದು ಕೊಡದೊಳಗಿದ್ದ ಆಕಾಶವೇ ಮತ್ತೊಂದು ಕೊಡದಲ್ಲಿರುತ್ತದೆ. ಆಕಾಶವೇನಾದರೂ ಭೇದವಾಗಿದೆಯೇ? ಇಲ್ಲ. ಇದರಂತೆ, ಪ್ರತಿಯೊಂದು ದೇಹಗಳಿಗೆ ಭೋಗಗಳು ಜೇರೆ ಇರುತ್ತವೆ. ಹೀಗಿದ್ದರೂ, ಆತ್ಮನು ಮಾತ್ರ ಎಲ್ಲಾ ದೇಹಗಳಲ್ಲಿ ಒಬ್ಬನೇ ಇರುವನು. **'ದೇಹೀ ನಿತ್ಯಮ ವಧ್ಯೋಽಯಂ ದೇಹೇ ಸರ್ವಸ್ಯ ಭಾರತ'** ಎಲ್ಲಾ ದೇಹಗಳಲ್ಲಿರುವ ದೇಹೀ ನಾಮಕ ಆತ್ಮನು ನಾಶರಹಿತನಾಗಿರುತ್ತಾನೆ. ಎಂದು ಗೀತಾವಚನವಿರುತ್ತದೆ. ಮತ್ತು **'ಸರ್ವಸ್ಯದೇಹೆ'** ದೇಹಕ್ಕೆ ಬಹು ವಚನವದೆ. **'ದೇಹೀ'** ಈ ಆತ್ಮ ಪದವು ಏಕವಚನವಾಗಿರುತ್ತದೆ. ಈ ಏಕವಚನದ ಬಲದಿಂದ ಆತ್ಮನು ಒಬ್ಬನೇ ಎಂಬುದನ್ನು ತಿಳಿಸುತ್ತದೆ. ಹೀಗೆ ಎಲ್ಲಾ ದೇಹಗಳಲ್ಲಿ ಒಬ್ಬಾತ್ಮನಿರಲಾಗಿ ಭಿನ್ನಭಿನ್ನ ಭೋಗಗಳು ಸಂಭವಿಸುತ್ತವೆಂದು ಕೊಟ್ಟ ಉದಾಹರಣವನ್ನು ಮಾಂಡೂಕ್ಯಕಾರಿಕೆಯಲ್ಲಿ ಹೇಳಿದೆ. ಅದನ್ನೇ ಇಲ್ಲಿ ಉದಾಹರಿಸುತ್ತೇವೆ.

**ಯಥೈಕಸ್ಮಿನ್ಘಟಾಕಾಶೇ ರಜೋಧೂಮಾದಿಭಿರ್ಯುತೆ ।**
**ನ ಸರ್ವೇ ಸಂಪ್ರಯುಜ್ಯಂತೆ ತದ್ವಜ್ಜೀವಾಃ ಸುಖಾದಿಭಿಃ ॥**

ಇದು ಮಾಂಡೂಕ್ಯೋಪನಿಷತ್ತಿನ ಮೂರನೇ ಅದ್ವೈತ ಪ್ರಕರಣದ ಐದನೇ ಶ್ಲೋಕವಾಗಿದೆ. ಇದಕ್ಕೆ ಶಾಂಕರಭಾಷ್ಯವು ಹೀಗಿದೆ. ಏನಂದರೆ, ಎಲ್ಲ ದೇಹಗಳಲ್ಲಿಯೂ ಆತ್ಮನು ಒಬ್ಬನಾದರೆ, ಒಬ್ಬನಿಗೆ ಜನನ, ಮರಣ, ಸುಖ, ದುಃಖಾದಿಗಳು ಬಂದಲ್ಲಿ, ಅವು ಎಲ್ಲರಿಗೂ ಆಗಬೇಕಾದೀತು. ಹೀಗಾದಲ್ಲಿ ಕ್ರಿಯಾಫಲವು ಸಾಂಕರ್ಯವಾದೀತು. ಎಂದು ದ್ವೈತಿಗಳು ಹೇಳುತ್ತಾರೆ. ಇದು ಸರಿಯಲ್ಲ. ಯಾಕಂದರೆ, ಒಂದು ಘಟಾಕಾಶದಲ್ಲಿ ರಜೋಧೂಮಾದಿಗಳಿದ್ದರೆ, ಸರ್ವ ಘಟಾಕಾಶಗಳು ರಜೋಧೂಮಾದಿಗಳಿಂದ ಕೂಡಿರುತ್ತವೆಯೋ? ಹೇಳು. ಇಲ್ಲ. ಇದರಂತೆ ಒಬ್ಬನಿಗಾದ ಭೋಗವು ಮತ್ತೊಬ್ಬನಿಗೆ ಆಗುವದಿಲ್ಲೆಂದು ತಿಳಿ. ಎಂದು ಉತ್ತರ ಹೇಳಿರುವರು. ಈ ಶ್ಲೋಕವನ್ನು ಕನ್ನಡ ಪದ್ಯರೂಪ ದಿಂದ ಗ್ರಂಥಕರ್ತರು ಹೇಳಿರುವರು.

ಬಳಿಕ, ಎಲ್ಲ ದೇಹಗಳಲ್ಲಿ ಒಬ್ಬಾತ್ಮನೇ ಇರುವನು. ಎಂಬುದು ನಿಶ್ಚಯ ವಾಯಿತು. ಹೀಗಾದ ಮೇಲೆ, ಆ ದೇಹದಲ್ಲಿರುವ ಸುಖ ದುಃಖಗಳ ಅನುಭವವು ಆಗಬೇಕಿತ್ತು. ಹೀಗೆ ಆಗಿದ್ದರೆ, ಎಲ್ಲ ದೇಹಗಳಲ್ಲಿಯೂ ಒಬ್ಬಾತ್ಮನೇ ಇರುವ ನೆಂದು ನಾವು ನಿಶ್ಚಯ ಮಾಡುತ್ತಿದ್ದೆವು. ಆದರೆ, ಅನುಭವವು ಹಾಗಿಲ್ಲದ್ದರಿಂದ ಆತ್ಮರು ಅನೇಕರಿರಬಹುದೆಂದು ಊಹಿಸುತ್ತೇವೆ. ತನ್ನಲ್ಲಿರುವ ಸುಖ ದುಃಖ ಗಳ ಜ್ಞಾನವು ತನಗಿದ್ದಂತೆ, ಅನ್ಯರ ಸುಖ ದುಃಖಗಳ ಜ್ಞಾನವಿಲ್ಲ. ಇದು ಸರ್ವಾನುಭವಸಿದ್ಧ ಅದೆ. ಮತ್ತು ಯೋಗಿಯು ತನ್ನ ಯೋಗ ಮಹಿಮೆಯಿಂದ ನೂರು ಗ್ರಾಮಗಳಲ್ಲಿ, ನೂರು ಶರೀರಗಳನ್ನು ಏಕಕಾಲದಲ್ಲಿ ಧರಿಸಿ ವ್ಯವಹರಿಸು ತ್ತಾನೆ. ಅವನಿಗೆ ಪ್ರತಿಯೊಂದು ಶರೀರದ ಅನುಭವವು ಪ್ರತಿಯೊಂದು ಶರೀರ ದಲ್ಲಿಯೂ ಇರುತ್ತದೆ. ಆದ್ದರಿಂದ ಯೋಗಿಯ ಶರೀರಗಳು ನೂರಾದರೂ ಯೋಗಿಯು ಮಾತ್ರ ಒಬ್ಬನೇ ಎಂದು ನಿಶ್ಚಯವಾಗುತ್ತದೆ. ಈ ದೃಷ್ಟಾಂತ ದಂತೆ, ಆತ್ಮನು ಏಕನಾದಲ್ಲಿ ಅನ್ಯದೇಹಗಳ ಭೋಗಜ್ಞಾನವು ಇರಲಿಕ್ಕೇಬೇಕು. ಎಂದು ಶಂಕೆಯನ್ನು ಮಾಡಿದರೆ, ಸಮಾಧಾನವನ್ನು ಹೇಳುತ್ತಾರೆ. ಏನಂದರೆ, ಯೋಗಿಗೆ ಯೋಗ ಮಹಿಮೆಯಿಂದ ಅನ್ಯ ದೇಹಗಳ ಜ್ಞಾನವಿರಬಹುದು. ಆ ರೀತಿ ಇಲ್ಲಿ ಸಂಭವಿಸುವದಿಲ್ಲ. ಇದಕ್ಕಾಗಿ ಬೇರೊಂದು ದೃಷ್ಟಾಂತವನ್ನು ಕೊಡು ತ್ತೇವೆಂದು ಹೇಳುತ್ತಾರೆ.

**ತನುವಿಗೋರ್ವಾತ್ಮ ನೆಂದೆನಿಸಿರ್ದು ಕರಣಂಗ ।**
**ಳನುಭವಂ ಬೇರೆ ಬೇರೊಂದಕೊಂದಿಲ್ಲ ।**
**ದನುವಿಂದೆ ಭೇದವಹ ಭೋಗ ॥೧೨॥**

ಟೀಕಾ:- ತನುವಿಗೆ=ಶರೀರಕ್ಕೆ, ಓರ್ವಾತ್ಮನೆಂದು=ಒಬ್ಬನೇ ಆತ್ಮನೆಂದು, ಎನಿಸಿರ್ದು=ಹೇಳಿಸಿಕೊಂಡಿದ್ದರೂ, ಕರಣಂಗಳ=ನೇತ್ರಾದಿ ಇಂದ್ರಿಯಗಳ, ಅನುಭವಂ=ರೂಪಾದಿ ಜ್ಞಾನವು, ಬೇರೆ ಬೇರೆ=ಭಿನ್ನ ಭಿನ್ನವಾಗಿ ಉಂಟು, ಒಂದಕೆ ಒಂದಿಲ್ಲದ ಅನುವಿಂದೆ=ಒಂದು ಇಂದ್ರಿಯ ಅನುಭವವು ಮತ್ತೊಂದಕ್ಕೆ ಇಲ್ಲದಿರು ವಂತೆ, ಭೇದವಹ ಭೋಗ=ಭೋಗಗಳು ಭಿನ್ನಗಳಾದಂತೆ ಅನುಭವವೂ ಭಿನ್ನ ವಾಗಿರುತ್ತದೆ.

ತಾತ್ಪರ್ಯ:- ನೀನೇ ನಿನ್ನಲ್ಲಿ ಅನುಭವದಿಂದ ನೋಡು. ಏನಂದರೆ, ಈ ದೇಹದಲ್ಲಿ ಪಂಚಕರ್ಮೇಂದ್ರಿಯಗಳು ಪಂಚಜ್ಞಾನೇಂದ್ರಿಯಗಳು ಸೇರಿ ದಶೇಂದ್ರಿಯಗಳು ಇರುತ್ತವೆ. ಹತ್ತು ಇಂದ್ರಿಯಗಳಿದ್ದರೂ ಹತ್ತು ಇಂದ್ರಿಯ ಗಳಲ್ಲಿ ಒಬ್ಬಾತ್ಮನು ಇರುತ್ತಾನೆ. ಹಾಗಲ್ಲ-ಹತ್ತು ಆತ್ಮರು ಇದ್ದಾರೆ. ಒಂದೊಂದು ಇಂದ್ರಿಯಕ್ಕೆ ಒಬ್ಬೊಬ್ಬನು ಇದ್ದಾನೆಂದು ಹೇಳಬಹುದು. ಈ

ಮಾತು ಅನುಭವಕ್ಕೆ ವಿರೋಧವಾಗುತ್ತದೆ. ಹೇಗಂದರೆ; ಹಾಗಿದ್ದ ಪಕ್ಷದಲ್ಲಿ ಪ್ರತ್ಯಭಿಜ್ಞಾನವು ಆಗಬಾರದಾಗಿತ್ತು. ಏನಂದರೆ, ಕಿವಿಯಿಂದ ಕೇಳಿದ್ದನ್ನು ಕಣ್ಣಿನಿಂದ ಕಂಡೆನು. ಎಂಬಲ್ಲಿ ಕಿವಿ ಮತ್ತು ಕಣ್ಣುಗಳಿಗೆ ಒಬ್ಬಾತ್ಮನೆಂದು ತೋರುತ್ತದೆ. ಕಿವಿಗೊಬ್ಬನು ಕಣ್ಣಿಗೊಬ್ಬನು ಇದ್ದರೆ; ಉಕ್ತ **ಪ್ರತ್ಯಭಿಜ್ಞಾನವು** ಆಗುತ್ತಿರಲಿಲ್ಲ. ಆಗುತ್ತದೆ. ಅದರಿಂದ **ಆತ್ಮನೊಬ್ಬನು** ಇದ್ದಾನೆ. ಇದರಂತೆಯೇ ಕಣ್ಣಿನಿಂದ ನೋಡಿದ್ದನ್ನು ಕೈಯಿಂದ ಮುಟ್ಟುತ್ತೇನೆ ಎಂಬಲ್ಲಿ, ಕಣ್ಣು ಮತ್ತು ಕೈಗಳು, ಎರಡು ಇಂದ್ರಿಯಗಳು ಬೇರೆಯಾದರೂ, ಕರ್ತಾರೂಪ ಆತ್ಮನು ಒಬ್ಬನೇ ಎಂಬುದು ಸರ್ವಾನುಭವ ಸಿದ್ಧವಾಗಿದೆ. ಬೇರೆ ಬೇರೆ ಕರ್ತಾರೂಪ ಅನೇಕ ಆತ್ಮರು ದೇಹದಲ್ಲಿದ್ದರೆ, ದೇಹದ ವ್ಯವಹಾರವೇ ಲೋಪವಾಗುವ ಪ್ರಸಂಗ ಬಂದೀತು. ಅದರಿಂದ ಹತ್ತು ಇಂದ್ರಿಯಗಳಲ್ಲಿ ಒಬ್ಬ ಆತ್ಮನೇ ಇರುತ್ತಾನೆ. ಅಂದರೆ; ಹತ್ತು ಇಂದ್ರಿಯಗಳಲ್ಲಿದ್ದು ಆ ಹತ್ತು ಇಂದ್ರಿಯಗಳಿಂದ ಹತ್ತು ಪ್ರಕಾರ ವ್ಯವಹಾರ ಮಾಡುವಾತನು **ಒಬ್ಬನೇ** ಆಗಿರುವನೆಂಬುದು ಸರ್ವಾನುಭವ ಸಿದ್ಧವಾಗಿದೆ. ಹೀಗಿದ್ದರೂ ನೇತ್ರಗಳಿಗೆ ರೂಪಜ್ಞಾನವಿದ್ದಂತೆ ಶ್ರೋತ್ರಗಳಿಗೆ ಇರುವದೇನು? ಇಲ್ಲ. ಶ್ರೋತ್ರದ ಶಬ್ದಜ್ಞಾನವು ನೇತ್ರಕ್ಕಿರುವದೇನು? ಇಲ್ಲ. ಗಂಧಾನುಭವವು ನಾಸಿಕಕ್ಕೆ ಇದ್ದಂತೆ ನಾಲಿಗೆಗೆ ಉಂಟೇನು? ಇಲ್ಲ. ರಸಜ್ಞಾನವು ನಾಲಿಗೆಗೆ ಇದ್ದಂತೆ ಹಸ್ತಗಳಿಗುಂಟೇನು? ಇಲ್ಲ. ಇದೇ ರೀತಿಯಾಗಿ ಒಂದು ಇಂದ್ರಿಯ ಜ್ಞಾನವು ಮತ್ತೊಂದಿಂದ್ರಿಯಕ್ಕೆ ಯಿಲ್ಲ. ಹೀಗೆ ಯಿಲ್ಲದ್ದರಿಂದ ಪ್ರತಿಯೊಂದು ಇಂದ್ರಿಯಕ್ಕೆ ಒಬ್ಬೊಬ್ಬನು ಬೇರೆಯಿದ್ದಾನೆಂದು ಹೇಳಲಿಕ್ಕೆ ಬರುವದೇನು? ಇಲ್ಲ. ಒಂದು ಇಂದ್ರಿಯದಲ್ಲಿದ್ದ ಆತ್ಮನೇ ಎಲ್ಲಾ ಇಂದ್ರಿಯಗಳಲ್ಲಿಯೂ ಇದ್ದಾನೆ. ಪರಂತು ಒಂದು ಇಂದ್ರಿಯ ಜ್ಞಾನವು ಮತ್ತೊಂದಕ್ಕೆ ಇಲ್ಲ. ಈ ದೃಷ್ಟಾಂತದಂತೆ, ಒಂದು ದೇಹದಲ್ಲಿದ್ದ ಆತ್ಮನು ಎಲ್ಲಾ ದೇಹಗಳಲ್ಲಿಯೂ ಇರುತ್ತಾನೆ. ಪರಂತು, ಈ ದೇಹದ ಸುಖದುಃಖಗಳ ಜ್ಞಾನವು ಆದಂತೆ, ಅನ್ಯ ದೇಹಗಳ ಭೋಗಜ್ಞಾನವು ಆಗುವದಿಲ್ಲ. ಆದರೂ ಎಲ್ಲಾ ದೇಹಗಳಲ್ಲಿಯೂ ಒಬ್ಬಾತ್ಮನೇ ಇರುವನು. ಆದರೂ ಭೋಗಗಳು ಆ ಭೋಗಗಳ ಜ್ಞಾನವು ಮಾತ್ರ ಭಿನ್ನ ಭಿನ್ನಗಳಾಗಿರುತ್ತವೆ.

ಬಳಿಕ, ಎಲ್ಲಾ ದೇಹಗಳಲ್ಲಿಯೂ ಆತ್ಮನು ಒಬ್ಬನೇ ಇದ್ದಮೇಲೆ; ಒಬ್ಬನ ಮೇಲೆ ಮತ್ತೊಬ್ಬನು ಪ್ರೇಮವನ್ನು ಮಾಡುತ್ತಿರಬೇಕು. ಯಾಕಂದರೆ; ಹತ್ತು ಇಂದ್ರಿಯಗಳಲ್ಲಿ ಒಬ್ಬಾತ್ಮನಿರುವದರಿಂದ, ಒಂದು ಇಂದ್ರಿಯವು **ಇನ್ನೊಂದು ಇಂದ್ರಿಯ ಮೇಲೆ ಪ್ರೇಮವನ್ನೇ** ಮಾಡುತ್ತದೆ ಹೊರತು ದ್ವೇಷ ಮಾಡುವದಿಲ್ಲ. ಇದು ಸರ್ವರ ಅನುಭವ ಉಂಟು. ಇದರಂತೆ, ಆತ್ಮನು ಸರ್ವರಲ್ಲಿಯೂ ವ್ಯಾಪಕನಾಗಿರುವದರಿಂದ, ಸರ್ವರ ಮೇಲೆ ಸರ್ವರು **ಪ್ರೇಮದಿಂದ** ಇರಬೇಕಾ

ಗಿತ್ತು. ಹೀಗಿರದೆ ಒಬ್ಬರಮೇಲೆ ಒಬ್ಬರು ದ್ವೇಷಮಾಡುತ್ತಿರುವದನ್ನು ಕಾಣು ತ್ತೇವೆ. ಅಂದಮೇಲೆ, ಒಬ್ಬಾತ್ಮನೆಂದು ತಾವು ಹೇಳುವದು ಸರಿಯಲ್ಲ. ಎಂದು ಶಂಕೆಯನ್ನು ಮಾಡಿದರೆ, ಆತ್ಮನು ಒಬ್ಬನಿದ್ದರೂ ಉಪಾಧಿಗಳು ಬೇರೆ ಬೇರೆ ಯಿರುವದರಿಂದ ರಾಗದ್ವೇಷಾದಿಗಳು ಆಗುವ ಸಂಭವವುಂಟು. ಆದರೂ ಆತ್ಮ ನೊಬ್ಬನಿದ್ದಾನೆಂದು ದೃಷ್ಟಾಂತ ಮೂಲಕ ತಿಳಿಸುತ್ತಾರೆ.

**ಒಂದು ಸಾಗರದ ತೆರೆಯೊಂದನೊಂದತಿಬಾಧಿ।**
**ಪಂದದಿಂ ದ್ವೇಷ ಮೊದಲಾದ ಧರ್ಮಂಗ।**
**ಳಿಂದೆ ಜೀವರ್ಕಳಿರಲೊಂದೆ ||೧೩||**

**ಟೀಕಾ:-** ಒಂದು = ಒಂದು, ಸಾಗರದ ತೆರೆಯು = ಒಂದು ಸಮುದ್ರದ ತೆರೆಯು, ಒಂದನೊಂದನು= ಒಂದನ್ನು ಒಂದು, ಅತಿಬಾಧಿಪಂದದಿಂ= ಬಹಳ ಹೊಡೆಯುವಂತೆ, ದ್ವೇಷ ಮೊದಲಾದ ಧರ್ಮಂಗಳಿಂದೆ= ರಾಗ, ದ್ವೇಷ ಮತ್ಸರ ಮೊದಲಾದ ಗುಣಗಳಿಂದೆ, ಜೀವರ್ಕಳಿರಲ್=ಜೀವಸಮೂಹವಿದ್ದರೂ, ಒಂದೇ= ಆತ್ಮ ಸ್ವರೂಪವು ಒಂದೇ ಆಗಿರುವದು.

**ತಾತ್ಪರ್ಯ:-**ಸಮುದ್ರವು ಜಲರೂಪದಿಂದ ತುಂಬಿಕೊಂಡು ಒಂದೇ ಸ್ವರೂಪ ದಿಂದ ಇರುತ್ತದೆ. ಅದರಲ್ಲಿ ವಾಯುವಶದಿಂದ ಅನೇಕ ಸಣ್ಣ ದೊಡ್ಡ ತೆರೆಗಳು ಹುಟ್ಟುತ್ತವೆ. ಮುಂದಿನ ತೆರೆಯನ್ನು ಹಿಂದಿನ ತೆರೆಯು ಬಂದು, ಮೇಲೆಹತ್ತಿ ಕೆಡಿಸುವದೂ ಉಂಟು. ಇಲ್ಲವೆ ಅದರೊಡನೆ ತಾನು ಹತ್ತಿಕೊಂಡು ಪ್ರೇಮದಿಂದ ದಂಡೆಯವರೆಗೆ ಬರುವದೂ ಉಂಟು. ಹೀಗೆ ಸಮುದ್ರದ ತೆರೆಗಳಲ್ಲಿ ರಾಗದ್ವೇಷಾದಿ ಗಳು ತೋರಿದರೂ ಜಲರೂದಿಂದ ಒಂದೇ ಸ್ವರೂಪವಾಗಿರುತ್ತದೆ. ಈ ದೃಷ್ಟಾಂತ ದಂತೆ, ಆತ್ಮನು ವ್ಯಾಪಕನಾಗಿ ಎಲ್ಲ ಶರೀರಗಳಲ್ಲಿ ಒಬ್ಬರ ಮೇಲೆ ಒಬ್ಬರು ರಾಗ ದ್ವೇಷಾದಿಗಳನ್ನು ಮಾಡುವದುಂಟು. ಮಾಡಿದರೂ, ಆತ್ಮನು ಒಬ್ಬನೇಯಿರು ತ್ತಾನೆ ಹಲವರಿಲ್ಲ.

ಬಳಿಕ, ಏಕಾತ್ಮನೆಂಬಲ್ಲಿ ಅನೇಕ ಭೋಗಗಳು ಘಟಿಸುತ್ತಿರಲಿಕ್ಕೆ, ಇದನ್ನು ಬಿಟ್ಟು ಅನೇಕ ಭೋಗ ಸಿದ್ಧಿಗಾಗಿ ನಾನಾತ್ಮರನ್ನು ಕಲ್ಪನೆ ಮಾಡುವದು ಗೌರವ ದೋಷವಾಗಿದೆಯೆಂದು ಹೇಳುತ್ತಾರೆ.

**ಒಂದು ಚಿತ್ತಿನೊಳು ಪಲವಂದವಹ ಭೋಗಮಿರೆ।**
**ಮುಂದೆ ನಾನಾತ್ಮರೆನೆ ಕಲ್ಪನಾ ಗೌರ।**
**ವಂ ದೊರೆವುದೆಂದು ತಿಳಿಪುತ್ರ ||೧೪||**

**ಟೀಕಾ:-** ಒಂದುಚಿತ್ತಿನೊಳು=ಒಂದು ಚಿದ್ರೂಪಾತ್ಮನಲ್ಲಿ, ಪಲವಂದವಹ ಭೋಗವಿರೆ=ಅನೇಕ ವಿಧ ಭೋಗಗಳಿದ್ದರೂ, ಮುಂದೆ=ಅನಂತರ, ನಾನಾತ್ಮರು ಎನೆ=ಅನೇಕಾತ್ಮರು ಎಂದು ಹೇಳಿದರೆ, ಕಲ್ಪನಾಗೌರವಂದೊರೆವುದು=ಹೆಚ್ಚಿಗೆ ಅರ್ಥವನ್ನು ಕಲ್ಪಿಸುವ ದೋಷವು ಬರುತ್ತದೆ. ಎಂದು=ಹೀಗೆಂದು, ತಿಳಿಪುತ್ರ= ನೀನು ಅರಿ.

**ತಾತ್ಪರ್ಯ:-** ಒಬ್ಬಾತ್ಮನಲ್ಲಿ ಉಪಾಧಿಗಳ ನಾನಾತ್ವದಿಂದ ಅನೇಕ ಭೋಗ ಗಳ ವ್ಯವಹಾರವು ಸಂಭವಿಸುತ್ತಿರಲಿಕ್ಕೆ, ಇದನ್ನು ಬಿಟ್ಟು ನಾನಾತ್ಮರೆಂದು ಹೆಚ್ಚಿಗೆ ಅರ್ಥವನ್ನು ಕಲ್ಪನೆ ಮಾಡುವದಕ್ಕೆ **ಕಲ್ಪನಾ ಗೌರವದೋಷ ಬರುತ್ತ ದೆಂದು** ಹೇಳಿದರು. ಆದ್ದರಿಂದ ಅನಾಯಾಸವಾಗಿ ಶ್ರುತ್ಯುಕ್ತ ಏಕಾತ್ಮಪಕ್ಷವನ್ನು ತ್ಯಜಿಸಿ, ಅನೇಕಾತ್ಮರೆಂದು ಹೆಚ್ಚಿಗೆ ಅರ್ಥಕಲ್ಪನೆಯನ್ನು ಮಾಡಿದರೂ, ಭೋಗದ ಅವ್ಯವಸ್ಥೆಯೇ ಆಯಿತು. ಆದ್ದರಿಂದ ಇದು ಗೌರವದೋಷವಾಗಿದೆ ಎಂಬ ಭಾವವು.

**ಬಳಿಕ,** ಪ್ರತ್ಯಕ್ಷಪ್ರಮಾಣದಿಂದ ಅನೇಕಾತ್ಮರೆಂದು ಕಂಡಾಗ್ಯಾದರೂ, ಶ್ರುತಿರೂಪ ಶಾಬ್ದಿಪ್ರಮಾಣ ಜನ್ಯಜ್ಞಾನದಿಂದ ಬಾಧಿಸಿಕೊಳ್ಳುತ್ತದೆಂದು ಹೇಳುತ್ತಾರೆ.

> **ಚಿತ್ತಿನೊಳನೇಕವಿದು ಸತ್ಯವಲ್ಲೌಪಾಧಿ ।**
> **ವೊತ್ತದಾರ್ಕೈಕೆಗಳನುಳಿದೊಡದು ಕಾಣಿ ।**
> **ಸುತ್ತ ಮಿಹುದಾಗಿ ನಭದಂತೆ ॥೧೫॥**

**ಟೀಕಾ:-** ಚಿತ್ತಿನೊಳು=ಚಿದ್ರೂಪಾತ್ಮನಲ್ಲಿ, ಅನೇಕವಿದು=ಅನೇಕಾತ್ಮರಾಗಿ ತೋರುವದು, ಸತ್ಯವಲ್ಲ=ಯಥಾರ್ಥವಲ್ಲ, (ಯಾಕಂದರೆ) ಔಪಾಧಿ=ಉಪಾಧಿ, ಸಂಬಂಧಮಾದ, ವೊತ್ತದ=ಸಮೂಹದ, ಆರ್ಕೈಕೆಗಳನು=ವ್ಯವಹಾರಗಳನ್ನು ಉಳಿದೊಡೆ=ತ್ಯಾಗಮಾಡಲು, ಅದು=ಚಿದ್ರೂಪವು, ನಭದಂತೆ=ಆಕಾಶದಹಾಗೆ, ಕಾಣಿಸುತ್ತಮಿಹುದಾಗಿ=ಕಾಣಿಸುವದರಿಂದ.

**ತಾತ್ಪರ್ಯ:-** ಏಕಮೇವಾದ್ವಿತೀಯ ಚಿದ್ರೂಪ ಆತ್ಮನು ಶ್ರುತಿ ಪ್ರಮಾಣ ಜನ್ಯ ಜ್ಞಾನದಿಂದ ಒಬ್ಬನೇಇದ್ದಾನೆ. ಹೀಗಿದ್ದರೂ ಪ್ರತ್ಯಕ್ಷವಾಗಿ ನೋಡುವವರಿಗೆ **ಅನೇಕಾತ್ಮರೆಂದು** ಭಾಸವಾಗುತ್ತದೆ. ಇದು **ಭ್ರಮವಾಗಿದೆ.** ಹೀಗೆ ಅನೇಕವಾಗಿ ತೋರುವದು ಉಪಾಧಿಗಳ ದೃಷ್ಟಿಯಿಂದ ತೋರುತ್ತದೆ. ಆ ಉಪಾಧಿಗಳನ್ನು ಅವುಗಳ ಸಂಬಂಧವಾದ ವ್ಯವಹಾರವನ್ನು ಬಿಟ್ಟು ನೋಡಿದರೆ, **ಗಗನದಂತೆ** ಪರಿಪೂರ್ಣನಾದ ಆತ್ಮನು ಒಬ್ಬನೇ ಇರುವನು. ಇದೇ ನಿಜವಾಗಿದೆ. ನಾನಾತ್ಮತ್ವವು

ಬಾಧಿಸಿಕೊಳ್ಳುವದರಿಂದ ಪ್ರತ್ಯಕ್ಷಕಂಡರೂ, ಭ್ರಮಾತ್ಮಕ ಮಿಥ್ಯೆಯೆಂದು ನಿಶ್ಚಯ ಮಾಡತಕ್ಕದ್ದು ಎಂಬ ಭಾವವು.

ಬಳಿಕ, ಈ ತೋರುವ ಆತ್ಮಭೇದವು ದೇಹೋಪಾಧಿಯಿಂದ ಆಗಿದೆ. ಉಪಾಧಿಗಳನ್ನು ಕಳೆದರೆ; ಒಂದೇ ಅಖಂಡ ಚಿದ್ರೂಪಾತ್ಮನೇ ಉಳಿಯುತ್ತಾನೆಂದು ಹೇಳುತ್ತಾರೆ.

ಈಯಾತ್ಮ ಭೇದವಾ ಕಾಯ ಮುಂತಾದ ಸಮು।
ದಾಯ ಜಡವರ್ಗಮಯದಿನಹುದಾಗಿ ನಿ।
ರ್ಮಾಯ ಸಂವಿತ್ತು ತಿಳಿಯೊಂದೆ ॥೧೬॥

ಟೀಕಾ:- ಈ ಯಾತ್ಮಭೇದವು= ಪ್ರತ್ಯಕ್ಷವಾಗಿ ಕಾಣುವ ಅನೇಕಾತ್ಮತ್ವವು, ಆ ಕಾಯ=ಆಯಾ ಶರೀರಗಳೇ, ಮುಂತಾದ=ಮೊದಲಾದ, ಜಡವರ್ಗಮಯದಿಂ= ಅಹಂಕಾರ ಪರ್ಯಂತರವಿರುವ ಜಡಸಮೂಹಗಳ ರೂಪದಿಂದ, ಅಹುದಾಗಿ=ಆಗಿರುವದರಿಂದ, ನಿರ್ಮಾಯ=ಮಾಯೋಪಾಧಿ ರಹಿತವಾದ, ಸಂವಿತ್ತು=ಚಿದ್ರೂಪಾತ್ಮನು, ಒಂದೇ=ಒಂದೆಂದು, ತಿಳಿ=ಅರಿ.

ತಾತ್ಪರ್ಯ:- ದೇಹವೇ ಮೊದಲಾಗಿ ಅಹಂಕಾರವೇ ಕಡೆಯಾಗಿರುವ ಅನಾತ್ಮ ವರ್ಗವೇನುಂಟೋ, ಇದು ಜಡಾತ್ಮಕವಾಗಿದೆ. ಯಾಕಂದರೆ, ತನ್ನಿಂದ ತಿಳಿಸಿಕೊಳ್ಳುತ್ತದೆ. ತಿಳಿಯುವ ಆತ್ಮನು ಸಾಕ್ಷಿಯಾಗಿ ಬೇರೆಯಿರುತ್ತಾನೆ. ಈ ದೇಹಾದಿ ಜಡೋಪಾಧಿಗಳ ಭೇದದಿಂದಲೇ ಆತ್ಮನು ಭೇದವಾದಂತೆ ತೋರುತ್ತಿರುತ್ತಾನೆ. ಅನೇಕ ಘಟೋಪಾಧಿಯನ್ನು ಬಿಟ್ಟು ನೋಡಿದರೆ, ಆಕಾಶವು ಒಂದೇ ಆಗಿರುವದು. ಇದರಂತೆ ದೇವ, ಗಂಧರ್ವ, ಮನುಷ್ಯ, ಪಶು, ಪಕ್ಷಿ ಮೊದಲಾದ ದೇಹೋಪಾಧಿಯನ್ನು ಕಳೆದರೆ, ಮಾಯಾರಹಿತ ನಿರಾವರಣ ಸ್ವಯಂ ಪ್ರಕಾಶರೂಪ ಅಖಂಡಾತ್ಮನು ಒಬ್ಬನೇ ಇರುತ್ತಾನೆ. ಸಕಲ ಶ್ರುತಿಗಳು ಭೇದವನ್ನು ಬಾಧಿಸಿ, ಅಭೇದರೂಪ ಅಖಂಡಾತ್ಮನನ್ನೇ ಬೋಧಿಸುತ್ತವೆಂದು ತಿಳಿ.

ಭೋಗಸ್ಥಿತಿ ನಿರೂಪಣೆ ಸೂತ್ರ ೩ ಕ್ಕೆ ತ್ರಿವಿದಿ ೩೬.

---

ಬಳಿಕ, ಪೂರ್ವ ಸೂತ್ರಗಳಲ್ಲಿ ಏಕಾತ್ಮ ಅನೇಕಾತ್ಮಗಳೆಂಬ ಎರಡು ಮತಗಳನ್ನು ಹೇಳಿದರು. ಪಲವಾತ್ಮರು ಪಲವು ಶರೀರಗಳ ಒಳಹೊರಗೂ ಪರಿಪೂರ್ಣರಾಗಿರುವರೆಂಬುವದು ಅನೇಕಾತ್ಮ ಪಕ್ಷವು. ಎಲ್ಲ ಶರೀರಗಳ ಒಳಹೊರಗೂ ಒಬ್ಬಾತ್ಮನೆನ್ನುವದು ಏಕಾತ್ಮ ಪಕ್ಷವು. ಏಕಾತ್ಮನೆಂದರೆ ಸುಖದುಃಖಾದಿ ಭೋಗ

ಗಳ ವ್ಯವಸ್ಥೆಯಾಗುವದಿಲ್ಲ. ಅನೇಕಾತ್ಮರೆಂದು ಹೇಳಿದರೆ, ಸರ್ವಭೋಗ ವ್ಯವಸ್ಥೆ ಯಾಗುತ್ತದೆಂದು **ಸಾಂಖ್ಯಾದಿ ಮತಸ್ಥರು** ಒಪ್ಪಿದರು. ಆ ಭೋಗ ಸಿದ್ಧಿಗಾಗಿ ನಾನಾ ಉಪಾಯಗಳನ್ನು ತೋರಿಸಿದರು. ಆದರೆ ಏಕಾತ್ಮನೆಂಬ ಸಿದ್ಧಾಂತಿಯು, ಅನೇಕಾತ್ಮರೆಂಬುವರಿಗೆ ಭೋಗ ಸಾಂಕರ್ಯ ರೂಪ ಅನೇಕ ದೋಷಗಳು ಬರುತ್ತವೆಂಬುದನ್ನು ತೋರಿಸಿ, ಆತ್ಮರು ಅನೇಕರೆನ್ನುವದು ಶ್ರುತಿವಿರುದ್ಧವೂ ಆಗಿದೆ. ಎಂಬುದನ್ನು ತಿಳಿಸಿಹೇಳಿದರು. ಬಳಿಕ ಏಕಾತ್ಮ ಪಕ್ಷದಲ್ಲಿ **ಉಪಾಧಿ ನಾನಾತ್ವ** ಮೂಲಕ ಸಕಲ ಭೋಗ ವ್ಯವಸ್ಥೆಯು ಸಂಭವಿಸುತ್ತದೆಂದು ಅನೇಕ ದೃಷ್ಟಾಂತಗಳನ್ನು ಉದಾಹರಿಸಿದರು. ಅನೇಕಾತ್ಮವಾದಿಯು ಏಕಾತ್ಮ ಪಕ್ಷದಲ್ಲಿ ಅನೇಕ ಶಂಕೆಗಳನ್ನು ಮಾಡಿದನು. ಅವುಗಳಿಗೆಲ್ಲಕ್ಕೂ ಸರಿಯಾದ ಉತ್ತರವನ್ನು ಹೇಳುತ್ತಾ ಆತ್ಮಭೇದವನ್ನು ನಿರಾಕರಿಸುತ್ತ, ಅನೇಕ ದೃಷ್ಟಾಂತಗಳನ್ನು ಹೇಳಿದರು. ಅನಂತರ ಈ ಮುಂದಿನ ಸೂತ್ರದಲ್ಲಿಯೂ ಭೇದವನ್ನು ನಿರಾಕರಿಸುತ್ತಾರೆ. ಅಂದರೆ, ಆತ್ಮರು ನಾನಾ ಅನ್ನುವದು ಇದು ಜೀವ ಜೀವರ ಭೇದವಾಗಿದೆ. ಒಬ್ಬಾತ್ಮನು ಮತ್ತೊಬ್ಬಾತ್ಮನಿಗೆ ಬೇರೆಯಾಗಿದ್ದಾನೆ. ಅನ್ನುವದು ಚೇತನದಲ್ಲಿ ಭೇದವನ್ನು ಹೇಳಿದಂತಾಗುತ್ತದೆ. ಇದು ಸರಿಯಲ್ಲ. ಚೇತನದಲ್ಲಿ ಭೇದವಿಲ್ಲೆಂದು ಹೇಳುವದು ಇದು ಏನೂ ದೊಡ್ಡದಲ್ಲ. ಯಾಕಂದರೆ, ಜಡಗಳಾದ ಘಟಪಟಾದಿಗಳಲ್ಲಿಯೇ ಭೇದವಿಲ್ಲೆಂದು ಹೇಳುತ್ತಿರಲಿಕ್ಕೆ, ಚೇತನರೂಪ ಆತ್ಮರಲ್ಲಿ ಭೇದವಿಲ್ಲೆಂದು ಹೇಳುವದೇನು **ಆಶ್ಚರ್ಯ** ! ಸಾಹುಕಾರನ ಕಾರಕೂನನಿಗೆ ಬಡತನವಿಲ್ಲೆಂದ ಮೇಲೆ, ಸಾಹುಕಾರನಿಗೆ ಬಡತನವೆಲ್ಲಿರುವದು? **ಈ ಕೈಮುತಿಕ ನ್ಯಾಯದಿಂದ** ಜಡದಲ್ಲಿಯೇ ಭೇದವಿಲ್ಲೆಂದಮೇಲೆ, ಚೇತನದಲ್ಲಿ ಭೇದವಿಲ್ಲೆಂದು ಇನ್ನೇನು ಹೇಳತಕ್ಕದ್ದು. ಎಂಬ ಭಾವವು. ಒಂದುವೇಳೆ, ಜಡಗಳಾದ ಘಟಪಟಗಳಲ್ಲಿ ಭೇದ ವುಂಟು. ಅಂದರೆ, ಘಟವು ಪಟಕ್ಕೆ ಭಿನ್ನವಾಗಿದೆ. ಪಟವು ಘಟಕ್ಕೆ ಭಿನ್ನವಾಗಿದೆ. ಎಂಬಲ್ಲಿ ಭೇದವು ತೋರುತ್ತದೆಂದು ಶಂಕೆಯನ್ನು ಮಾಡಿದರೆ; ಅದು ಸರಿಯಲ್ಲ ವೆಂದು ಮುಂದೆ ಯುಕ್ತಿಪೂರ್ವಕ ನಿರೂಪಣ ಮಾಡುತ್ತಾರೆ. ಹೇಗಂದರೆ, ಆ ಭೇದವು ಘಟಾದಿಗಳಲ್ಲಿ ಹಾಲು ನೀರಿನಂತೆ ಅಭೇದ ಸ್ವರೂಪದಿಂದ ಇರುವದೋ? ಅಥವಾ ಅದನ್ನು ಆಶ್ರಯ ಮಾಡಿಕೊಂಡು ಧರ್ಮವಾಗಿರುವದೋ? ಸ್ವರೂಪ ಭೇದವಲ್ಲ. ಕಿಂತು ಧರ್ಮಭೇದವನ್ನು ಒಪ್ಪಿದರೆ, ಧರ್ಮಿಯಾದ ಘಟಕ್ಕೂ ಭೇದಕ್ಕೂ ಭೇದವುಂಟೋ? ಅಭೇದವುಂಟೋ? ಹೇಳು. ಅಭೇದ ವಿಲ್ಲ. ಭೇದವುಂಟೆಂದು ಹೇಳಿದರೆ, ಧರ್ಮಿಯಾದ ಘಟದಿಂದ ಭೇದವನ್ನು ಭೇದ ಮಾಡಿದ್ದು ಯಾವದು? ಇದೇ ಭೇದವೆಂದು ಹೇಳಿದರೆ, ಭೇದ ಮಾಡುವದೂ ಇದೇ ಆಯಿತು. ಮಾಡಿಸಿಕೊಳ್ಳುವದೂ ಇದೇ ಆಯಿತು. ಕರ್ತನೂ ತಾನೇ ಕರ್ಮವೂ ತಾನೇ, ಆದ್ದರಿಂದ ಆತ್ಮಾಶ್ರಯ ದೋಷವು ಬರುತ್ತದೆ. **ಎರಡನೇ**

ಭೇದವು ಬಂದು ಈ ಭೇದವನ್ನು ಭೇದಮಾಡಿದೆ. ಅಂದರೆ ಅನ್ಯೋನ್ಯಾಶ್ರಯ. ಚಕ್ರಿಕಾಪತ್ತಿ, ಅನವಸ್ಥಾ ಮೊದಲಾದ ದೋಷಗಳು ಬರುತ್ತವೆ. ಆದ್ದರಿಂದ ಧರ್ಮ ಭೇದವನ್ನು ಹೇಳುವದು ತರವಲ್ಲ. ಬಳಿಕ, ಸ್ವರೂಪ ಭೇದವುಂಟೆಂದು ಹೇಳಿದರೆ; ಪ್ರತಿಯೋಗಿಯಾದ ಅನ್ಯವಸ್ತುವಿನ ಅಪೇಕ್ಷೆಯನ್ನು ಮಾಡದೆ ಭೇದವು ತೋರಬೇಕಾಗಿತ್ತು. ಹಾಗಿಲ್ಲದ್ದರಿಂದಲೂ, ಮತ್ತು ಪ್ರತಿಯೋಗಿಯನ್ನು ಅಪೇಕ್ಷಾ ಮಾಡದೆ ಘಟವೊಂದರಲ್ಲಿಯೇ ಭೇದವನ್ನು ಹೇಳಿದರೆ, ಘಟವನ್ನು ನಾಶಮಾಡಿ ಭೇದವು ತಾನೂ ನಾಶವಾಗುವದು. ಈ ಕಾರಣದಿಂದಲೂ, ಸ್ವರೂಪ ಭೇದವನ್ನು ಹೇಳಲಿಕ್ಕೆ ಬರುವದಿಲ್ಲ. ಮತ್ತು ಶ್ರುತಿಗಳು ಭೇದವನ್ನು ನಿರಾಕರಿಸು. ತ್ತವೆ. ಆದ್ದರಿಂದ ಜಡದಲ್ಲಿಯೇ ಭೇದವಿಲ್ಲದಮೇಲೆ ಚೇತನದಲ್ಲಿ ಭೇದ ವಿಲ್ಲೆಂಬುದನ್ನು ಏನು ಹೇಳತಕ್ಕದ್ದು. ಎಂದು ಮುಂದಿನ ಸೂತ್ರದಲ್ಲಿ ಭೇದ ನಿರಾಕರಣವನ್ನು ವಿಸ್ತಾರಪೂರ್ವಕ ನಿರೂಪಣ ಮಾಡುತ್ತಾರೆ.

ಸೂತ್ರ॥ **ಭೇದವೆಂಬುದು ಘಟ ಪಟಾದಿಗಕ್ಕುಂ ನೈಜ।**
**ವಾದುದಲ್ಲಂ ದೋಷಮುಳ್ಳುದಾಗಿ॥**

**ಟೀಕಾ:-** ಘಟಪಟಾದಿಗೆ=ಜಡಗಳಾದ ಘಟಪಟಗಳಿಗೆ, ಅಕ್ಕುಂ=ಆಗು ವಂಥಾ ಭೇದವೆಂಬುದು=ಭೇದವೆನ್ನುವಂಥಾದ್ದು. ನೈಜವಾದುದು=ನಿಜವಾದದ್ದು ಅಲ್ಲಂ=ಆಗುವದಿಲ್ಲ( ಯಾಕಂದರೆ, ) ದೋಷಮುಳ್ಳುದಾಗಿ=ಮುಂಡೆ ಹೇಳುವ ದೋಷಗಳಿಂದ ಕೂಡಿರುವಕಾರಣ

**ತಾತ್ಪರ್ಯ:-**ಘಟದಿಂದ ಪಟವು ಭಿನ್ನವಾಗಿದೆ. ಎಂಬಲ್ಲಿ ಧರ್ಮಿಪ್ರತಿ ಯೋಗಿ ಜ್ಞಾನವಾದಮೇಲೆ ಅವುಗಳ ವಿಶಿಷ್ಟಭೇದ ಜ್ಞಾನವಾಗುತ್ತದೆ. ಇಲ್ಲಿ ಧರ್ಮಿಯು ಘಟವಾಗಿದೆ. ಪಟವು ಪ್ರತಿಯೋಗಿಯಾಗಿದೆ. ಇವೆರಡರ ಮಧ್ಯದಲ್ಲಿ ಭೇದವು ತೋರುತ್ತಿರುತ್ತದೆ. ಪಟಸಂಬಂಧವಾದ ಭೇದವು ಘಟದಲ್ಲಿರುತ್ತದೆ. ಎಂಬಲ್ಲಿ ಯಾವುದರ ಭೇದವು ಅದೆ? ಎಂದು ಕೇಳಿದರೆ; ಪಟದ ಭೇದ ಎಂದು ಉತ್ತರಬರುತ್ತದೆ. ಇಲ್ಲಿ ಆ ಭೇದಕ್ಕೆ ಪಟವು ಪ್ರತಿಯೋಗಿಯಾಗಿದೆ. ಆ ಭೇದವು ಎಲ್ಲಿ ಅದೆ? ಎಂದೆನ್ನಲು; ಘಟದಲ್ಲಿ ಅದೆ, ಎಂದುತ್ತರಕೊಡಲು, ಆ ಭೇದಕ್ಕೆ ಆಶ್ರಯವಾದಂಥಾ ಘಟವು ಧರ್ಮಿಯಾಗಿದೆ. ಹೀಗೆ ಧರ್ಮಿಪ್ರತಿಯೋಗಿ ಜ್ಞಾನಾ ಧೀನವಾಗಿ ವಿಶಿಷ್ಟಜ್ಞಾನಕ್ಕೆ ವಿಷಯವಾಗಿ ತೋರುವದು ಭೇದವಾಗಿದೆ. ಹೇಗಂದರೆ. ದಂಡೀ ಪುರುಷನು ಎಂಬ ವಿಶಿಷ್ಟಜ್ಞಾನವಾಗಬೇಕಾದರೆ, ಮೊದಲು ವಿಶೇಷ್ಯನಾದ ಪುರುಷ, ಆ ಮೇಲೆ ವಿಶೇಷಣವಾದದಂಡ, ಇವುಗಳ ಜ್ಞಾನವಾದ ನಂತರ ದಂಡದಿಂದ ಕೂಡಿದ ಪುರುಷನ ಜ್ಞಾನವು ವಿಶಿಷ್ಟಜ್ಞಾನವೆನಿಸುತ್ತದೆ, ಅಂದರೆ, ವಿಶೇಷಣ ವಿಶೇಷ್ಯ ಇವುಗಳ ಜ್ಞಾನವಾದ ಮೇಲೆ ವಿಶಿಷ್ಟಜ್ಞಾನವಾಗು

ತ್ತದೆ. ಇದರಂತೆ, ವಿಶಿಷ್ಟರೂಪ ಭೇದ ಜ್ಞಾನವಾಗಬೇಕಾದರೆ, ಧರ್ಮಿಪ್ರತಿಯೋಗಿಗಳ ಜ್ಞಾನವಾದಮೇಲೆ ಆಗುತ್ತದೆ. ಧರ್ಮಿಪ್ರತಿಯೋಗಿ ಜ್ಞಾನವಿಲ್ಲದೆ ವಿಶಿಷ್ಟವಾದ ಭೇದಜ್ಞಾನವು ಗೋಚರವಾಗುವದಿಲ್ಲ. ಎಂಬ ಭಾವವು ಈ ಕಾರಣದಿಂದ ಭೇದವೆಂಬುದು ನಿಜವಲ್ಲ. ಎಂದು ಹೇಳುತ್ತಿದ್ದಾರೆ. ಅದೊಂದು ನಿಜವಾದ ವಸ್ತು ಆಗಿದ್ದರೆ, ಘಟದಂತೆ ಏಕಕಾಲದಲ್ಲಿ ಗೋಚರವಾಗಬೇಕಾಗಿತ್ತು. ಆಗುವದಿಲ್ಲ. ಮೊದಲು ಧರ್ಮಿಯಾದ ಘಟಜ್ಞಾನ, ಅನಂತರ ಪ್ರತಿಯೋಗಿಯಾದ ಪಟಜ್ಞಾನ, ಆ ಮೇಲೆ ವಿಶಿಷ್ಟವಾದ ಭೇದಜ್ಞಾನವಾಗಿದೆ. ಹೀಗೆ ಆಗಿರುವದರಿಂದ ಧರ್ಮಿಪ್ರತಿಯೋಗಿಗಳ ಜ್ಞಾನಕ್ಕಿಂತ ಪೂರ್ವದಲ್ಲಿ ಭೇದವು ಎಲ್ಲಿ ಗೋಚರವಾಗಿದೆ? ಇಲ್ಲ. ಧರ್ಮಿಪ್ರತಿಯೋಗಿಗಳ ಜ್ಞಾನ ಸಮಕಾಲದಲ್ಲಾದರೂ ಗೋಚರವಾಗಿದೆಯೋ ! ಇಲ್ಲ. ಅದರಿಂದ ಭೇದವು ನಿಜವಲ್ಲ. ನಿಜವಾಗಿದ್ದಲ್ಲಿ ಮೊದಲೇ ಗೋಚರವಾಗುತ್ತಿತ್ತು. ಮೊದಲು ಏಕಕಾಲಕ್ಕೆ ಪ್ರತ್ಯಕ್ಷವಾಗಿ ತೋರದೆ, ಕ್ರಮೇಣ ಭಿನ್ನಕಾಲದಲ್ಲಿ ತೋರಿದ್ದರಿಂದ ಈ ಭೇದವು ನಿಜವಲ್ಲ. ಕಿಂತು ವಿಶಿಷ್ಟ ಗೋಚರ ಅಲೀಕ ಅಂದರೆ, ಮಿಥ್ಯೆಯೆಂದು ತಿಳಿಯಬೇಕು.

**ಶಂಕಾ:-** ಧರ್ಮಿಪ್ರತಿಯೋಗಿ ಇವು ಪ್ರತ್ಯಕ್ಷವಾಗಿ ಏಕಕಾಲಕ್ಕೆ ತೋರಿದಂತೆ, ಭೇದವಾದರೂ ಏಕಕಾಲಕ್ಕೆ ಗೋಚರವಾಗಿದೆ. ಯಾವಾಗ್ಯೆ ಧರ್ಮಿಪ್ರತಿಯೋಗಿಗಳು ತೋರಿದವೋ, ಅದೇ ಕಾಲದಲ್ಲಿ ಭೇದವೂ ತೋರಿತು. ಏಕಕಾಲದಲ್ಲಿ ಏಕೆ ಗೋಚರವಾಗುವದಿಲ್ಲ ? ಗೋಚರವಾಗುತ್ತದೆ.

**ಸಮಾಧಾನ::** ವಿಶಿಷ್ಟ ಜ್ಞಾನಕ್ಕೆ ವಿಶೇಷಣ ವಿಶೇಷ್ಯ ಜ್ಞಾನಗಳ ಅಪೇಕ್ಷೆಯಿರುತ್ತದೆ. ಅವು ಕ್ರಮವಾಗಿ ಭಿನ್ನ ಭಿನ್ನಕಾಲಗಳಲ್ಲಿ ಗೋಚರವಾಗುತ್ತವೇ ಹೊರತು, ಏಕಕಾಲದಲ್ಲಿ ಗೋಚರವಾಗುವದಿಲ್ಲ. ಹೇಗಂದರೆ ? ಕೇಳು '**ಸುರಭಿ ಚಂದನಮಿತಿ,** ಈ ಗಂಧದ ಕೊರಡು ಸುಗಂಧವದೆಯೆಂಬ ಜ್ಞಾನವಾಗಿರುತ್ತದೆ. ಅಂದರೆ ಸುಗಂಧದಿಂದ ವಿಶಿಷ್ಟವಾದ ಚಂದನದ ಜ್ಞಾನವಾಗಿರುತ್ತದೆ. ಈ ಜ್ಞಾನವು ಏಕಕಾಲದಲ್ಲಿ ಆಗಿಲ್ಲ. ಕ್ರಮೇಣ ಭಿನ್ನಕಾಲದಲ್ಲಿ ಆಗಿರುತ್ತದೆ. ಹೇಗಂದರೆ, ಗಂಧವು ಘ್ರಾಣೇಂದ್ರಿಯಕ್ಕೆ ವಿಷಯವಾಗಿದೆ. ಕೊರಡು ನೇತ್ರಕ್ಕೆ ವಿಷಯವಾಗಿದೆ. ಹೀಗೆ ಭಿನ್ನಗಳಾದ ಇಂದ್ರಿಯಗಳಿಂದ ಭಿನ್ನವಿಷಯಗಳು ಆಗಿವೆ. ಗಂಧ ಮತ್ತು ಕೊರಡು ಇವೆರಡು ಒಂದು ಇಂದ್ರಿಯಕ್ಕೆ ಗೋಚರಗಳಾಗಿಲ್ಲ. ಎರಡು ಇಂದ್ರಿಯಗಳಿಂದ ಎರಡು ವಿಷಯಗಳು ಏಕಕಾಲಕ್ಕೆ ಗೋಚರಗಳಾಗಿರುವವೋ ? ಇಲ್ಲ. ಎಲ್ಲಿಯಾದರೂ ಆಗುವದುಂಟೋ ? ಇಲ್ಲ. ಅಂದಮೇಲೆ, ಬೇರೆಕಾಲದಲ್ಲಿ ಕ್ರಮೇಣ ವಿಶೇಷಣವಾದ ಗಂಧಜ್ಞಾನ, ವಿಶೇಷ್ಯವಾದ ಕೊರಡಿನಜ್ಞಾನ, ಇವು ಆಗಿರುತ್ತವೆಂದು ಒಪ್ಪಬೇಕಾಗುತ್ತದೆ. ಆ ಮೇಲೆ

ಸುಗಂಧವುಳ್ಳದ್ದು ಚಂದನಕೊರಡು ಎಂಬ ವಿಶಿಷ್ಟ ಜ್ಞಾನವಾಗುತ್ತದೆ. ಇಲ್ಲಿ ಮೊದಲು ವಿಶೇಷಣ, ಆ ಮೇಲೆ ವಿಶೇಷ್ಯ, ಅನಂತರ ವಿಶಿಷ್ಟಜ್ಞಾನಗಳು ಅದರಂತೆ, ಇದೇ ರೀತಿ ಮೊದಲು ಧರ್ಮಿಜ್ಞಾನ, ಆ ಮೇಲೆ ಪ್ರತಿಯೋಗಿಜ್ಞಾನ, ಅನಂತರ ವಿಶಿಷ್ಟಭೇದಜ್ಞಾನ ಹೀಗೆ ಕ್ರಮವಾಗಿ ಗೋಚರಗಳಾಗುತ್ತವೆಂದು ಒಪ್ಪಲೇಬೇಕಾಗುತ್ತದೆ. ಆದ್ದರಿಂದ ಭೇದವು ಇದೊಂದು ವಸ್ತುವಲ್ಲ. ಏಕಕಾಲದಲ್ಲಿ ಗ್ರಹಿಸಲಿಕ್ಕೆ ಬರುವದಿಲ್ಲ. ಈ ಕಾರಣದಿಂದ ಭೇದವೆಂಬುದು ನೈಜವಾದುದು ಅಲ್ಲ. ಎಂದು ತಿಳಿಯೆಂಬಭಾವವು. ಮತ್ತು ಧರ್ಮಿಪ್ರತಿಯೋಗಿ ವಸ್ತುಗಳ ನಿಶ್ಚಯ ಜ್ಞಾನವಾಗದೆ ಭೇದಜ್ಞಾನವಾಗುವದಿಲ್ಲ. ಈ ಕಾರಣದಿಂದ ಕೇವಲ ಭೇದವು ಪ್ರತ್ಯಕ್ಷಕ್ಕೆ ವಿಷಯವಲ್ಲ. ಆದ್ದರಿಂದಲೇ ಭೇದಪೂರ್ವಕವಸ್ತು ಗ್ರಹಣವಾಗಲಿ ವಸ್ತು ಗ್ರಹಣಪೂರ್ವಕ ಭೇದಗ್ರಹಣವಾಗಲಿ; ಗೋಚರವಾಗುತ್ತದೆಂದು ಹೇಳಲಿಕ್ಕೆಬರುವದಿಲ್ಲ. ಯಾಕಂದರೆ? ಒಂದು ವಸ್ತುವಿನ ಜ್ಞಾನಕಾಲದಲ್ಲಿ ಮತ್ತೊಂದು ವಸ್ತುವಿನ ಜ್ಞಾನವಾಗದು. ಆಗ್ಯೆ ಬುದ್ಧಿಯ ವ್ಯಾಪಾರವು ಅಭಾವವಾಗಿರುತ್ತದೆ. ಮತ್ತು ಭೇದ ಇವೆರಡು ಏಕಕಾಲಕ್ಕೆ ಗೋಚರಗಳು ಆಗಲಾರವು. ಯಾಕಂದರೆ? ಧರ್ಮಿಯು ಸಮೀಪದಲ್ಲಿದ್ದರೂ, ದೂರದಲ್ಲಿದ್ಧ ಪ್ರತಿಯೋಗಿಯ ನಿಶ್ಚಯ ಜ್ಞಾನವಿಲ್ಲದೆ, ಭೇದ ನಿಶ್ಚಯುವಾಗುವದಿಲ್ಲೆಂಬುದು ಎಲ್ಲರಿಗೂ ಸಮ್ಮತವಾಗಿರುತ್ತದೆ. ಇಂಥಾ ವಿಶಿಷ್ಟ ಭೇದವು ಘಟವಸ್ತುವಿನ ಸ್ವಭಾವವೇ ಆಗಿರುವದು. ಎಂದು ಸ್ವರೂಪಭೇದವನ್ನು ಹೇಳಿದರೂ, ಅಥವಾ ಘಟವಸ್ತುವಿನನ್ನು ಆಶ್ರಯಿಸಿಕೊಂಡು ತೋರುತ್ತಿರುವದೆಂದು ಧರ್ಮ ಭೇದವನ್ನು ಹೇಳಿದರೂ, ಅನೇಕ ದೋಷಗಳು ಮುಂದೆ ಹೇಳುವ ಪ್ರಕಾರ ಸಂಭವಿಸುತ್ತವೆ. ಆದ್ದರಿಂದ ಭೇದವು ನಿಜವಲ್ಲ. ಸತ್ಯವಲ್ಲ. ಎಂಬ ಭಾವವು.

**ಬಳಿಕ,** ಇನ್ನೇನು ಹೇಳತಕ್ಕದ್ದು ಎಂಬ ಕೈಮುತಿಕ ನ್ಯಾಯದಿಂದ, ಜಡನಿಷ್ಠ ಭೇದವೇ ಮಿಥ್ಯೆಯಾದ ಬಳಿಕ, ಚೇತನನಿಷ್ಠ ಭೇದವು ಮಿಥ್ಯೆಯೆಂದು ಇನ್ನೇನು ಹೇಳತಕ್ಕದ್ದು ಅದೆ. ಎಂದು ಹೇಳುತ್ತಾರೆ.

**ವರಸೂನು ಕೇಳಿಂತು ಪರಮಾತ್ಮ ಭೇದಮಂ ।**
**ಪರಮಾರ್ಥವಲ್ಲ ವೆಂಬುದೇಂ ಘಟಪಟದೊ ।**
**ಳಿರುತಿರ್ಪ ಭೇದವದು ಮಿಥ್ಯೆ ॥೧॥**

**ಟೀಕಾ:-** ವರಸೂನು ಕೇಳ್=ಎಲೈ ಶಿಷ್ಯನೇ ಕೇಳು, ಇಂತು-ಮುಂದೆ ಹೇಳುವ ಪ್ರಕಾರ, ಪರಮಾತ್ಮ ಭೇದಮಂ=ಚೇತನರೂಪ ಆತ್ಮಸಂಬಂಧವಾದ ಭೇದವು, ಪರಮಾರ್ಥವಲ್ಲವೆಂಬುದೇಂ=ನಿಜವಾದದ್ದು ಅಲ್ಲ ಅನ್ನುವದು ಏನು

ಆಶ್ಚರ್ಯವು ? (ಯಾಕಂದರೆ,)ಘಟಪಟದೊಳಿರುತಿಪ್ಪ=ಧರ್ಮಿ ಪ್ರತಿಯೋಗಿಗಳ ಜ್ಞಾನಕ್ಕೆ ಆಧೀನವಾಗಿ ತೋರುವ, ಭೇದವದುಮಿಥ್ಯೆ=ಜಡನಿಷ್ಠ ಭೇದವಾದರೂ ಮಿಥ್ಯೆಯಾಗಿರುತ್ತದೆ.

**ತಾತ್ಪರ್ಯ:-** ಹೇ ಪುತ್ರನೇ ! ಕೇಳು. ಜಡಗಳಾದ ಘಟಪಟಾದಿ ಉಪಲಕ್ಷಣದಿಂದ, ಜಗತ್ತಿನಲ್ಲಿರುವ ಯಾವತ್ತು ಜಡಭೇದವು; ಮುಂದೆ ಹೇಳುವ ರೀತಿ ಮಿಥ್ಯೆಯಾಗುತ್ತಿರಲಿಕ್ಕೆ; ಚೇತನ ಸಂಬಂಧವಾದ ಭೇದವು ಮಿಥ್ಯೆಯೆಂದು ಹೇಳುವಲ್ಲಿ ಸಂದೇಹವೇನುಂಟು? ಹೇಳು. ಜಡಭೇದವೇ ಇಲ್ಲದಮೇಲೆ, ಚೇತನ ಭೇದವು ಎಲ್ಲಿಂದ ಬಂದೀತು? ಬರಲಾರದೆಂಬ ಭಾವವು.

**ಬಳಿಕ,** ಜಡಗಳಾದ ಘಟಪಟಗಳಲ್ಲಿ ಭೇದವುಂಟೆಂದು ಹೇಳಿದರೆ, ಆ ಭೇದವು ಘಟಪಟಾದಿ ವಸ್ತು ಸ್ವರೂಪವಾಗಿರುವದೋ? ಅಥವಾ ಅವುಗಳನ್ನಾಶ್ರಯಿಸಿರುವ **ಧರ್ಮ**ವಾಗಿರುವದೋ? ಎಂದು ಪ್ರಶ್ನೆಯನ್ನು ಮಾಡುತ್ತಾರೆ.

**ಭೇದವೆಂಬುದು ಘಟಪಟಾದಿ ಭೇದ್ಯಂಗಳೊಳ ।**
**ಭೇದ ಸ್ವರೂಪದಿಂದಿಪ್ಪುದೋ ಧರ್ಮ ।**
**ವಾದುದೋ ಪೇಳು ಧಿಟವೊಂದ ॥೨॥**

**ಟೀಕಾ:-** ಭೇದವೆಂಬುದು=ಉಕ್ತ ಭೇದವು, ಘಟಪಟಾದಿ ಭೇದ್ಯಂಗಳೊಳು=ಭೇದಮಾಡಿಸುವದಕ್ಕೆ ಯೋಗ್ಯವಾದ ಘಟಪಟಾದಿಗಳಲ್ಲಿ, ಅಭೇದ ಸ್ವರೂಪದಿಂದ ಇಪ್ಪುದೋ ? = ಘಟಾದಿ ಸ್ವರೂಪವಾಗಿರುವದೋ, ಧರ್ಮವಾದುದೋ?= ಘಟಾದಿಗಳನ್ನು ಆಶ್ರಯಿಸಿರುವ ಧರ್ಮರೂಪವಾಗಿರುವದೋ?, ಧಿಟವೊಂದು= ಸತ್ಯವಾಗಿ ಒಂದನ್ನು, ಪೇಳು=ಹೇಳು.

**ತಾತ್ಪರ್ಯ:-** ಭೇದವನ್ನುಂಟು ಮಾಡುವದಕ್ಕೆ ಯೋಗ್ಯಗಳಾದ ಆ ಘಟಪಟಾದಿ ಪದಾರ್ಥಗಳಲ್ಲಿ, ಆ ಭೇದವು ಇರುತ್ತದೆ. ಅಂದರೆ, ಯಾವರೂಪವಾಗಿರುವದು ? ಹೇಳು. ಹಾಲಿನಲ್ಲಿ ನೀರು ಕೂಡಿ ಅಭೇದವಾದರೂ, ಎರಡೂ ಭೇದವಾಗಿ ಅವೆ. ಇದ್ದರೂ ಕಾಣಿಸದೆ ಒಂದಾಗಿಯೇ ತೋರುತ್ತವೆ. ಹೀಗೆ ಆ ಭೇದವು ಎಲ್ಲ ಘಟಪಟಾದಿಗಳಲ್ಲಿ **ಅಭೇದಸ್ವರೂಪ**ದಿಂದ ಇರುತ್ತದೆಂದು ಹೇಳುವಿಯೋ? ಅಥವಾ ಪಟ ಸಂಬಂಧಿ ಭೇದವುಳ್ಳದ್ದು ಘಟವು ಎಂಬಲ್ಲಿ ಭೇದವು ಘಟಾಶ್ರಯ ಮಾಡಿಕೊಂಡಿರುತ್ತದೆ. ವಿಶೇಷಣವು ವಿಶೇಷ್ಯವನ್ನು ಆಶ್ರಯಿಸಿರುವಂತೆ; ಭೇದವು ಘಟಾಶ್ರಯ ಮಾಡಿದ್ದರಿಂದ **ಧರ್ಮಭೇದ**ವನ್ನು ಹೇಳುವಿಯೋ ? ಅರ್ಥಾತ್ ಸ್ವರೂಪಭೇದ, ಧರ್ಮಭೇದ, ಇವೆರಡರಲ್ಲಿ ಯಾವ ಭೇದವದೆಯೆಂದು ಹೇಳುವಿ. ನಿನಗೆ ಯಾವದು ಸಮ್ಮತವು ಎಂದು **ಸಿದ್ಧಾಂತಿಗಳು** ಕೇಳುತ್ತಾರೆ.

ಬಳಿಕ, ಭೇದವಾದಿಯು 'ಆ ಘಟಪಟಾದಿಗಳಲ್ಲಿ ಭೇದವು ಅಭೇದಸ್ವರೂಪ ದಿಂದ ಇಲ್ಲ. ಕಿಂತು, ಧರ್ಮಭೇದವಾಗಿದೆಯೆಂದು ಹೇಳುತ್ತಿರಲು; ಅದಕ್ಕೆ ಅಭೇದವಾದಿಯು ಪುನಃ ಪ್ರಶ್ನೆಯನ್ನು ಮಾಡುತ್ತಾನೆ.

ಅಲ್ಲಿ ಭೇದಂ ರೂಪವಲ್ಲವಾ ಘಟ ಪಟದೊ।
ಳುಳ್ಳವಹ ಧರ್ಮವೆನೆ ಧರ್ಮಿಧರ್ಮಂಗ ।
ಳಲ್ಲಿ ನಿನಗಾವು ದನುಮತವು ॥೩॥

ಟೀಕಾ:- ಅಲ್ಲಿ=ಘಟಘಟಾದಿಗಳಲ್ಲಿ, ಭೇದಂ=ಭೇದವು, ರೂಪವಲ್ಲವು= ಸ್ವರೂಪ ಭೇದವಲ್ಲ, ಘಟಪಟದೋಳ್=ಘಟಪಟಗಳಲ್ಲಿ, ಉಳ್ಳವಹ=ಇರತಕ್ಕ, ಧರ್ಮವೆನೆ=ಧರ್ಮಭೇದವನ್ನು ಒಪ್ಪುತ್ತೇನೆ. ಅಂದರೆ, ಧರ್ಮಿಧರ್ಮಂಗಳಲ್ಲಿ= ಧರ್ಮಿ ಮತ್ತು ಧರ್ಮ ಇವೆರಡರ ಮಧ್ಯದಲ್ಲಿ, ನಿನಗೆ=ನಿನಗೆ, ಆವುದು=ಭೇದವೋ? ಅಥವಾ ಅಭೇದವೋ? , ಅನುಮತವು=ಸಮ್ಮತವಾಗಿರುವದು ?

**ತಾತ್ಪರ್ಯ**:- ಭೇದವಾದಿಯು-' ಆ ಘಟಪಟಗಳಲ್ಲಿ ನಾನು ಸ್ವರೂಪ ಭೇದವನ್ನು ಹೇಳುವದಿಲ್ಲ. ಕಿಂತು ಧರ್ಮಭೇದವನ್ನು ಹೇಳುತ್ತೇನೆ., ಅನ್ನು ತ್ತಾನೆ. (†) (ಇಲ್ಲಿ ಘಟ ಅಥವಾ ಪಟ ಇವೆರಡರಲ್ಲಿ ಒಂದನ್ನು ಸ್ವೀಕರಿಸಿ ಅದರಲ್ಲಿ ಮತ್ತೊಂದರ ಭೇದವನ್ನು ಹೇಳಬೇಕಾಗುತ್ತದೆ. ಹಾಗೆ ಹೇಳದೆ, ಘಟಪಟ ಎರಡೂ ಶಬ್ದಗಳನ್ನು ಪ್ರಯೋಗಿಸಿ, ಅವುಗಳಲ್ಲಿ,ಭೇದವದೆ. ಅಂದರೆ, ಇದನ್ನು ನಾವು ಹೇಗೆ ತಿಳಿಯಬೇಕು? ಅಂದರೆ ಅದು ಹೀಗೆ ಉಂಟು. ವಾಕ್ಯ ಪ್ರಯೋ ಗದ ಮೇಲಿಂದ ಎರಡರಲ್ಲಿಯೂ ಭೇದವನ್ನು ಹೇಳಲಿಕ್ಕೆ ಬರುತ್ತದೆ. ಹೇಗಂದರೆ? **ಘಟದಿಂದ ಪಟಭಿನ್ನವಾಗಿದೆ,** ಎಂಬಲ್ಲಿ ಪ್ರತಿಯೋಗಿಯಾದ ಪಟದ ಭೇದವು ಧರ್ಮಿಯಾದ ಘಟದಲ್ಲಿರುತ್ತದೆಂದು ಅರ್ಥವಾಗುವದು. ಇದೇ ರೀತಿ **ಪಟದಿಂದ ಘಟಭಿನ್ನವಾಗಿದೆ,** ಎಂಬಲ್ಲಿ ಪ್ರತಿಯೋಗಿಯಾದ ಘಟದ ಭೇದವು ಧರ್ಮಿಯಾದ ಪಟದಲ್ಲಿರುವದೆಂದು ಅರ್ಥನಾಗುವದು. ಹೀಗೆ ವಾಕ್ಯ ಪ್ರಯೋಗದ ಅನುಸಾರ ವಿಚಾರ ಮಾಡುತ್ತಿರಲಿಕ್ಕೆ, ಎರಡರಲ್ಲಿಯೂ ಭೇದ ವಿರುತ್ತದೆ. ಆದ್ದರಿಂದ ಘಟ ಪಟಗಳಲ್ಲಿ ಭೇದನವೆಯೆಂದು ಹೇಳಿದ್ದಾತೆ. ಮತ್ತು ಯಾವುದರ ಭೇದವೋ ಆ ಭೇದಕ್ಕೆ ಅದೇ **ಪ್ರತಿಯೋಗಿಯು** ಆ ಭೇದವು ಎಲ್ಲಿರುವದೋ ಅದು **ಧರ್ಮಿ,** ಅಥವಾ **ಅನುಯೋಗಿ** ಎಂದು ತಿಳಿಯಬೇಕು. ಹೇಗಂದರೆ? 'ಘಟದಿಂದ ಪಟವು ಭಿನ್ನವಾಗಿವೆ,ಎಂಬಲ್ಲಿ ಪಟದ ಭೇದವನ್ನು ಘಟದಲ್ಲಿ ಹೇಳಿದಂತಾಯಿತು.ಆ ಪಟದ ಭೇದಕ್ಕೆ ಪಟವೇ **ಪ್ರತಿಯೋಗಿಯಾಗಿದೆ.** ಆ ಭೇದವು ಘಟಾಶ್ರಯದಲ್ಲಿರುವ

---

(†) ಇಲ್ಲಿಂದ ಮುಂದಿನ ಕೌಂಸಿನವರೆಗೆ ವಾಚಕರು ತಿಳಿಯಬೇಕಾದ ವಿಷಯ ವಾಗಿದೆ.

ದರಿಂದ ಘಟವು **ಧರ್ಮಿಯಾಗಿದೆ.** ಎಂದು ತಿಳಿಯಬೇಕು. ಮತ್ತು ಮುಂದಾದರೂ ಎಲ್ಲೆಲ್ಲಿ ಧರ್ಮಿ ಪ್ರತಿಯೋಗಿ ಶಬ್ದಗಳ ಪ್ರಯೋಗಗಳು ಬಂದರೆ, ಈ ಅರ್ಥವನ್ನು ಸ್ಮರಿಸಬೇಕು. ಮತ್ತು ಭೇದಕ್ಕೆ ಧರ್ಮ ಎಂಬ ಹೆಸರು ಯಾಕೆ ಬಂದಿರುವದು? ಎಂದು ಕೇಳಿದರೆ, ಭೇದವು ಸ್ವತಂತ್ರವಾಗಿರದೆ, ಒಂದನ್ನು ಆಶ್ರಯಮಾಡಿಕೊಂಡಿರುತ್ತದೆ. ಆದ್ದರಿಂದ ಅದಕ್ಕೆ **ಧರ್ಮಭೇದ** ಎಂಬ ಹೆಸರು ಬಂದಿರುವದು. ಈ ಧರ್ಮರೂಪ ಭೇದವು ಯಾವುದನ್ನು ಆಶ್ರಯ ಮಾಡಿರುವದೋ ಅದಕ್ಕೆ ಧರ್ಮಿಯೆಂಬ ನಾಮವು ಬರುತ್ತದೆ. ಧರ್ಮವುಳ್ಳದ್ದರಿಂದ ಧರ್ಮಿಯೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಆದ್ದರಿಂದ ಆ ಘಟಪಟಗಳಲ್ಲಿ, ಇರತಕ್ಕ ಧರ್ಮಭೇದವನ್ನು ಒಪ್ಪುತ್ತೇನೆ. ಎಂದು ವಾದಿಯು ಪದ್ಯದಲ್ಲಿ ಹೇಳಿದ್ದಾನೆ.) ಈ ಮಾತನ್ನು ಕೇಳಿ ಅಭೇದವಾದಿ ಪ್ರಶ್ನೆಯನ್ನು ಮಾಡುತ್ತಾನೆ. 'ಧರ್ಮಿಯಾದ ಘಟದಲ್ಲಿ ಧರ್ಮವಾದ ಭೇದವು ಇದೆ, ಎಂದು ನೀನು ಹೇಳಿದಿ.. ಅಂದರೆ; ಧರ್ಮಿ ಮತ್ತು ಧರ್ಮ ಇವೆರಡಕ್ಕೆ ಭೇದ ಹೇಳುವಿಯಾ? ಅಥವಾ ಅಭೇದವನ್ನು ಹೇಳುವಿಯಾ? ನಿನಗೆ ಯಾವದು ಸಮ್ಮತವದೆ. ಅದನ್ನು ಹೇಳು, ಎಂದು ಕೇಳುತ್ತಾರೆ.

**ಬಳಿಕ,** ಭೇದವಾದಿಯು 'ಯಾವದು ಅನುಮತವು ? ಎಂದು ಕೇಳಿದಿರಿ. ಇದು ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಇದನ್ನು ಚನ್ನಾಗಿ ತಿಳಿಯುವಂತೆ ಹೇಳಬೇಕು' ಎಂದು ಕೇಳಲು, ಅಭೇದವಾದಿಯು 'ಧರ್ಮಿಯಿಂದ ಧರ್ಮ ಭೇದವು ಭೇದವಾಗಿರುವದೋ ?, ಅಭೇದವಾಗಿರುವದೋ ?, ಎಂದು ಕೇಳಿದನು. ಅದಕ್ಕೆ ಭೇದವಾದಿಯು ಭೇದವು ಭೇದವಾಗಿರುತ್ತದೆ, ಎಂದು ಉತ್ತರವನ್ನು ಕೊಡುತ್ತಲಿದ್ದಾನೆ.

**ಆ ಧರ್ಮಿಯಿಂ ಧರ್ಮಭೇದವೋ ತಿಳಿಯಲ್ಕ ।**
**ಭೇದವೋ ಎಂದೆನಲು ಧರ್ಮಿಯಿಂ ಧರ್ಮ ।**
**ಭೇದವೆಂದೆಂಬೊಡದ ಕೇಳು** ॥೪॥

**ಟೀಕಾ:-** ಆ ಧರ್ಮಿಯಿಂ=ಆ ಘಟಧರ್ಮಿಯಿಂದ, ಧರ್ಮ=ಹೊಂದಿಕೊಂಡ ಭೇದವು, ಭೇದವೋ=ಭಿನ್ನವಾಗಿರುವದೋ? ತಿಳಿಯಲ್ಕೆ=ವಿಚಾರ ಮಾಡಲು, ಅಭೇದವೊ=ಅಭಿನ್ನವಾಗಿರುವದೋ ?, ಎಂದೆನಲು=ಹೀಗೆ ಕೇಳುತ್ತಿರಲಾಗಿ, ಧರ್ಮಿಯಿಂ=ಘಟದಿಂದ, ಧರ್ಮ=ಭೇದವು, ಭೇದವೆಂದೆಂಬೊಡೆ=ಭೇದವಾಗಿರುವದೆಂದು ಹೇಳಿದರೆ, ಅದ ಕೇಳು=ಭೇದವು ಭೇದವೆಂದು ಒಪ್ಪಿದರೆ, ಅದಕ್ಕೆ ಹೇಳುತ್ತೇನೆ ಕೇಳು.

**ತಾತ್ಪರ್ಯ:-** ಹಿಂದಕ್ಕೆ ಸ್ವರೂಪ ಭೇದವನ್ನು ಬಿಟ್ಟು ಧರ್ಮಭೇದವನ್ನು ಸ್ವೀಕಾರ ಮಾಡಿದಿ. ಅಲ್ಲಿ ಧರ್ಮಿಯಾದದ್ದು ಘಟವು. ಅದನ್ನು ಹೊಂದಿ

ಕೊಂಡು ಇದ್ದದ್ದು ಧರ್ಮಭೇದವು. ಈಗ ಧರ್ಮಿಯಾದ ಘಟದಿಂದ ಧರ್ಮವಾದ ಭೇದಕ್ಕೆ ಭೇದ ಹೇಳುವಿಯಾ? ಇಲ್ಲವೆ, ಅಭೇದ ಹೇಳುವಿಯಾ? ಈ ಭೇದ ಮತ್ತು ಅಭೇದ ಇವೆರಡರಲ್ಲಿ ನಿನಗೆ ಯಾವದು ಒಪ್ಪಿಗೆಯುಂಟು? ಅದನ್ನು ಹೇಳು. ಎಂದು ಅಭೇದವಾದಿಯು ಚನ್ನಾಗಿ ಕೇಳುತ್ತಿರಲಿಕ್ಕೆ, ಭೇದವಾದಿಯು **'ಧರ್ಮಿಯಿಂದ ಭೇದವು ಭೇದವಾಗಿದೆ'** ಎಂದು ಉತ್ತರವನ್ನು ಕೊಡುವಂಥವನಾದನು. ಈ ಮಾತನ್ನು ಕೇಳಿ ಅಭೇದವಾದಿಯು ಪುನಃ ಭೇದವಾದಿಯನ್ನು ಕುರಿತು ಪ್ರಶ್ನೆಯನ್ನು ಮಾಡುತ್ತಾನೆ. ಏನಂದರೆ 'ಘಟೋನ ಪಟಃ। ಮತ್ತು ಪಟೋನ ಘಟಃ। ಅಂದರೆ, ಘಟವು ಪಟವಲ್ಲ, ಪಟವು ಘಟವಲ್ಲ. ಹೀಗೆ ಘಟ ಪಟಗಳೆರಡನ್ನು ಬೇರೆ ಬೇರೆ ಭೇದಮಾಡಿದ್ದು ಭೇದವು, ಧರ್ಮಿಯಾದ ಘಟದಿಂದ ಭೇದವನ್ನು ಭೇದಮಾಡಿದ್ದು **ಯಾವ ಭೇದವು?** ಅಂದರೆ, ಧರ್ಮಭೇದವನ್ನು ಭೇದ ಮಾಡಿದ್ದು ಈ ಧರ್ಮಭೇದವೋ? ಅಥವಾ ಈ ಧರ್ಮಭೇದಕ್ಕಿಂತಲೂ ಬೇರೆಯಾದ ಭೇದವುಂಟೋ? ಹೇಳು. ಎಂಬ ಭಾವವು. ಅದಕ್ಕೆ ಭೇದವಾದಿಯು 'ನಮ್ಮ ಮತದಲ್ಲಿ ಇರುವದು. ಒಂದೇ ಭೇದವು. ಮತ್ತೊಂದು ಭೇದವಿಲ್ಲ. ಆ ಇದ್ದೊಂದು ಭೇದವು ಧರ್ಮಿಯಿಂದ **ತನ್ನನ್ನು ತಾನೇ ಭೇದ ಮಾಡುತ್ತದೆ.** ಎಂದು ಉತ್ತರವನ್ನು ಕೊಡುವಂಥವನಾದನು. ಇದನ್ನು ಕೇಳಿ, ಅಭೇದವಾದಿಯು ಮುಂದೆ ಹೇಳುವಪ್ರಕಾರ ಉತ್ತರ ಕೊಡುತ್ತಾನೆ.

ಬಳಿಕ, ಭೇದವು ತನಗೆ ತಾನೇ ಭೇದವನ್ನು ಮಾಡಿದೆ. ಎಂದು ಹೇಳಿದರೆ, ಕರ್ತೃ ಕರ್ಮವು ಒಂದಾದ್ದರಿಂದ ಆತ್ಮಾಶ್ರಯು ದೋಷವು ಬರುತ್ತದೆಂದು ಹೇಳುತ್ತಾರೆ.

**ತನಗೆ ತಾನೇ ಭೇದವೆನಿಸಲಾತ್ಮಾಶ್ರಯುವ।**
**ನನುಕರಿಸಿತಾಗಿ ಬಳಿಕೆರಡನೆಯು ಧರ್ಮ।**
**ವನು ನೀನೊಡಂಬಡಲು ಬೇಕು** ||೫||

**ಟೀಕಾ:-** ತಾನೇ=ಧರ್ಮ ಭೇದವೇ, ತನಗೆ=ತನ್ನನ್ನು, ಭೇದವೆನಿಸಲ್=ಭೇದಮಾಡಿದರೆ, ಆತ್ಮಾಶ್ರಯುವನು=ಕರ್ತೃಕರ್ಮ ಭಾವವನ್ನು, ಅನುಕರಿಸಿತಾಗಿ=ಅಂಗೀಕಾರಮಾಡಿದ್ದರಿಂದ, ಬಳಿಕ=ಆಮೇಲೆ, ಎರಡನೆಯ ಧರ್ಮವನು=ಬೇರೆ ಮತ್ತೊಂದು ಧರ್ಮ ಭೇದವನ್ನು, ನೀನು=ನೀನು, ಒಡಂಬಡಲುಬೇಕು=ಒಪ್ಪಲೇಬೇಕು.

**ತಾತ್ಪರ್ಯ:-** ಘಟಧರ್ಮಿಗಿಂತಲೂ ಧರ್ಮಭೇದವು ಭೇದವಾಗಿದೆ. ಎಂಬಲ್ಲಿ, ಆ ಧರ್ಮ ಭೇದವನ್ನು ಯಾರು ಭೇದಪಡಿಸಿದರು? ಅಂದರೆ, ತಾನೇ ಭೇದ

ಮಾಡಿತು. ಎಂದು ಉತ್ತರ ಬರುತ್ತದೆ. ಇದೇ **ಕರ್ತೃ ಪದವಾಗಿದೆ.** ಬಳಿಕ ಯಾರನ್ನು ಭೇದಮಾಡಿತು ? ಅಂದರೆ **ತನಗೆ ಭೇದಮಾಡಿತು.** ಎಂದು ಉತ್ತರ ಬರುವದು. ಇದು **ಕರ್ಮಪದವಾಗಿದೆ.**ಅರ್ಥಾತ್ **ತಾನೇ ಕರ್ತೃ,ತನಗೆ ಕರ್ಮ,** ಹೀಗೆ ಒಂದೇ ಭೇದವು ತನಗೆ ತಾನೇ ಭೇದಮಾಡುವದರಿಂದ ಆತ್ಮಾಶ್ರಯ ದೋಷವು ಬರುತ್ತದೆ. ಅಂದರೆ, ತನ್ನ ಮೇಲೆ ಕೂತು ತಾನೇ ಹೋಗುತ್ತಾನೆಂಬಂತೆ ಭೇದಮಾಡುವದೂ, ಭೇದಮಾಡಿಸಿಕೊಳ್ಳುವದೂ ಒಂದರಲ್ಲಿ ಆದ್ದರಿಂದ ಇದಕ್ಕೆ **ಆತ್ಮಾಶ್ರಯ ದೋಷವೆಂದು** ಹೇಳುತ್ತಾರೆ. ದೋಷರಹಿತವಾದ ಅರ್ಥವು ಗ್ರಹಿಸ ಲಿಕ್ಕೆ ಯೋಗ್ಯವಾಗಿದೆ. ದೋಷಸಹಿತವಾದರೆ, ಅದನ್ನು ತ್ಯಾಗಮಾಡಬೇಕಾಗು ತ್ತದೆ. ಈ ಕಾರಣದಿಂದ ಬಂದ ಆತ್ಮಾಶ್ರಯ ದೋಷವನ್ನು ಕಳೆದುಕೊಳ್ಳುವದ ಕ್ಕಾಗಿ, ಭೇದವಾದಿಯು ಅವಶ್ಯವಾಗಿ ಎರಡನೇ ಧರ್ಮಭೇದವನ್ನು ಅಂಗೀಕಾರ ಮಾಡಬೇಕಾಗುವದು. ಧರ್ಮಭೇದವು ತನ್ನನ್ನು ತಾನು ಭೇದಮಾಡಿಲ್ಲ, ಇನ್ನೊಂದು ಎರಡನೇ ಧರ್ಮಭೇದವು ಭೇದಮಾಡಿದೆ. ಹೀಗನ್ನುವದರಿಂದ, ಆತ್ಮಾಶ್ರಯ ದೋಷವು ಬರುವದಿಲ್ಲೆಂದು ಭೇದವಾದಿಯು ಹೇಳಬೇಕಾಗುತ್ತದೆ.

**ಬಳಿಕ,** ಅಭೇದವಾದಿಯು–'ಎರಡನೇ ಧರ್ಮಭೇದವನ್ನು ಒಪ್ಪಿದರೆ, ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಅದನ್ನು ಬಿಟ್ಟು ಮೂರನೇ ಧರ್ಮ ಭೇದವನ್ನು ಒಪ್ಪಿದರೆ, ಚಕ್ರಿಕಾಪತ್ತಿದೋಷವು ಬರುತ್ತದೆ. ಎಂದು ಹೇಳುತ್ತಾರೆ.

**ಅದರೊಳನ್ಯೋನ್ಯಾಶ್ರಯದ ಕೂಟವಾಗಿ ಮ ।**
**ತ್ತದನುಳಿದು ಮೂರನೆಯ ಧರ್ಮವಂ ಪೇಳ ।**
**ಲದು ಚಕ್ರಿಕಾಶ್ರಯದ ಭೀತಿ** ॥೬॥

**ಟೀಕಾ:**- ಅದರೊಳು=ಎರಡನೇಧರ್ಮಭೇದವನ್ನು ಅಂಗೀಕಾರ ಮಾಡಿ ದಾಗ್ಯಾದರೂ ಅದರಲ್ಲಿ, ಅನ್ಯೋನ್ಯಾಶ್ರಯದ ಕೂಟವಾಗಿ=ಪರಸ್ಪರ ಅಪೇಕ್ಷಾ ರೂಪ ಅನ್ಯೋನ್ಯಾಶ್ರಯ ದೋಷವು ಬರುತ್ತದೆ, ಮತ್ತೆ=ಬಳಿಕ, ಅದನುಳಿದು= ಆ ಎರಡನ್ನೂ ಬಿಟ್ಟು, ಮೂರನೆಯ ಧರ್ಮವಂ ಪೇಳಲ್=ಮೂರನೇ ಧರ್ಮಭೇದ ವನ್ನು ಅಂಗೀಕಾರಮಾಡಲು, ಅದು ಚಕ್ರಿಕಾಶ್ರಯದಭೀತಿ=ಅದು ಚಕ್ರಿಕಾ ಪತ್ತಿದೋಷಕ್ಕೆ ಕಾರಣವಾಗುವದು.

ತಾತ್ಪರ್ಯ:- ಧರ್ಮಿಘಟದಲ್ಲಿರುವ ಭೇದವನ್ನು ಎರಡನೇ ಧರ್ಮ ಭೇದವು ಬಂದು ಭೇದ ಮಾಡಿದೆ. ಎಂದು ಹೇಳಿದರೆ ಆತ್ಮಾಶ್ರಯ ದೋಷವು ನಿವೃತ್ತಿಯಾಗುತ್ತದೆಂದು ಹೇಳಲ್ಪಟ್ಟಿತು. ಆದರೆ, ಎರಡನೇ ಧರ್ಮಭೇದವನ್ನು ಹೇಳಿದರೆ, ಅದರಲ್ಲಿ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಹೇಗಂದರೆ, ಆ

ಎರಡನೇ ಧರ್ಮಭೇದವು ಧರ್ಮಿಗಿಂತಲೂ ಭಿನ್ನವಾಗಿದೆಯೋ? ಅಭಿನ್ನವಾಗಿದೆಯೋ? ಹೇಳು. ಭಿನ್ನವಾಗಿರುತ್ತದೆಂದು ಹೇಳಿದರೆ, ಅದನ್ನು ಧರ್ಮಿಗಿಂತಲೂ ಭೇದಪಡಿಸಿದವರು ಯಾರು? ಇದೇ ಭೇದವೇನು? ಈ ಎರಡನೇ ಧರ್ಮಭೇದವು ತನ್ನನ್ನು ತಾನೇ ಭೇದಮಾಡಿದೆಯೆಂದು ನೀನು ಹೇಳಿದರೆ! ಪ್ರಥಮ ಭೇದದಲ್ಲಿ ಹೇಳಿದ ರೀತಿ, ಆತ್ಮಾಶ್ರಯ ದೋಷವು ಇಲ್ಲಿಯೂ ಬರುತ್ತದೆ. ಹಾಗಾದರೆ, ಎರಡನೇ ಭೇದವನ್ನು ಭೇದ ಮಾಡಿದ್ದು ಪ್ರಥಮ ಭೇದವಾಗಿದೆ. ಎಂದು ಉತ್ತರ ಹೇಳಬಹುದು. ಹೇಳಿದರೆ, ಪ್ರಥಮ ಭೇದವು ಭೇದವಾಗಬೇಕಾದರೆ ದ್ವಿತೀಯ ಭೇದಬೇಕಾಯಿತು. ದ್ವಿತೀಯ ಭೇದವು ಭಿನ್ನವಾಗಿರಬೇಕಾದರೆ, ಪ್ರಥಮ ಭೇದಬೇಕಾಯಿತು. ಹೀಗೆ ಭಿನ್ನವಾಗುವಲ್ಲಿ ಒಂದರ ಅಪೇಕ್ಷೆ ಒಂದಕ್ಕೆ ಪರಸ್ಪರ ಪ್ರಾಪ್ತವಾಗುವದರಿಂದ, ಇದು **ಅನ್ಯೋನ್ಯಾಶ್ರಯ** ದೋಷವೆನಿಸುತ್ತದೆ. ಭೇದವಾದಿಯು ಈ ದೋಷವನ್ನು ಕಳೆಯುವದಕ್ಕಾಗಿ ಮೂರನೇ ಧರ್ಮ ಭೇದವನ್ನು ಅಂಗೀಕಾರ ಮಾಡುತ್ತೇನೆಂದು ಹೇಳಬಹುದು. ಹೇಗಂದರೆ, ಎರಡನೇ ಧರ್ಮಭೇದವು ಧರ್ಮಿಯಿಂದ ಭಿನ್ನವಾಗಿರುವಲ್ಲಿ ಪ್ರಥಮ ಭೇದದ ಅಪೇಕ್ಷೆಯನ್ನು ಮಾಡಿಲ್ಲ. ಕಿಂತು, ಮೂರನೇ ಧರ್ಮಭೇದವು ಬಂದು ಎರಡನೇ ಭೇದವನ್ನು ಭೇದ ಮಾಡಿದೆ. ಎಂದು ಹೇಳುವದರಿಂದ ಅನ್ಯೋನ್ಯಾಶ್ರಯ ದೋಷವು ಬರುವದಿಲ್ಲೆಂದು ಹೇಳಬಹುದು. ಹೀಗೆ ಹೇಳುವದರಿಂದ ಚಕ್ರಿಕಾಪತ್ತಿ ದೋಷವು ಬರುತ್ತದೆ. ಹೇಗಂದರೆ, ಆ ಮೂರನೇ ಧರ್ಮಭೇದವು ಧರ್ಮಿಗಿಂತಲೂ ಭಿನ್ನವಾಗಿರುವಲ್ಲಿ ತಾನೇ ಭೇದ ಆಗಿದೆಯೆಂದು ಹೇಳಿದರೆ, ಆತ್ಮಾಶ್ರಯ ದೋಷವು ಬರುತ್ತದೆ. ಅದಕ್ಕೇನು ಗತಿ ಹೇಳು. ಎಂದು ಕೇಳಿದರೆ, ಭೇದವಾದಿಯು 'ಮೂರನೇ ಭೇದವು ಭೇದವಾಗಬೇಕಾದರೆ ಪ್ರಥಮ ಭೇದದಿಂದಾಯಿತು' ಅನ್ನುತ್ತೇನೆ. ಆದ್ದರಿಂದ ಆತ್ಮಾಶ್ರಯ ಬರಲಾರದೆಂದು ಹೇಳಬಹುದು. ಹೀಗೆ ಹೇಳುವದರಿಂದ ಚಕ್ರಿಕಾಪತ್ತಿ ದೋಷವು ಬರುತ್ತದೆ. ಹೇಗಂದರೆ, ಮೂರನೇ ಭೇದವನ್ನು ಭೇದಮಾಡಿದ್ದು ಮೊದಲದೇ ಭೇದವು; ಮೊದಲನೇ ಭೇದವನ್ನು ಭೇದ ಮಾಡಿದ್ದು ಎರಡನೇ ಭೇದವು; ಎರಡನೇ ಭೇದವನ್ನು ಭೇದಮಾಡಿದ್ದು ಮೂರನೇ ಭೇದವು, ಮೂರನೇ ಭೇದವನ್ನು ಭೇದ ಮಾಡಿದ್ದು ಪ್ರಥಮ ಭೇದವು. ಹೀಗೆ ರಥದ ಚಕ್ರದಂತೆ ತಿರಿತಿರಿಗಿ ಸುತ್ತುತ್ತಿರುವದರಿಂದ, ಇದಕ್ಕೆ **ಚಕ್ರಿಕಾಪತ್ತಿ ದೋಷ** ಎಂದು ಹೇಳುತ್ತಾರೆ.

ಬಳಿಕ, ಮುಂದೆ ನಾಲ್ಕನೇ ಧರ್ಮ ಭೇದವನ್ನು ಹೇಳುತ್ತಾ ಹೋದರೆ ಅನವಸ್ಥಾ, ಪ್ರಾಗ್ಲೋಪಃ, ವಿನಿಗಮನವಿರಹಃ ಮುಂತಾದ ದೋಷಗಳು ಬರುತ್ತವೆಂದು ಹೇಳುತ್ತಾರೆ.

**ಮುಂದಾವಧರ್ಮವೆನಲಂದಪ್ಪುದನವಸ್ಥೆ ।**
**ಕುಂದದೀ ನಾಲ್ಕು ತೆರದ ದೋಷಂಗಳಿರ ।**
**ಲಂದವಲ್ಲಾತ್ಮಜನೆ ಭೇದ ॥೭॥**

**ಟೀಕಾ:-** ಮುಂದಾವಧರ್ಮವೆನಲ್ = ಅನಂತರ ನಾಲ್ಕನೇ ಧರ್ಮಭೇದ ಹೇಳಿದರೆ, ಅದು=ಆ ಕಾಲಕ್ಕೆ, ಅನವಸ್ಥಾ=ಸ್ಥಿತಿಯಿಲ್ಲದಿರುವಿಕೆ ದೋಷವು, ಅಪ್ಪುದು=ಆಗುವದು, ಕುಂದದೆ=ಕೊರತೆಯಿಲ್ಲದೆ, ಈ ನಾಲ್ಕು ದೋಷಂಗಳಿರಲ್= ಈ ನಾಲ್ಕು ಪ್ರಕಾರದ ದೋಷಗಳು ಬಂದರೆ, ಆತ್ಮಜನೇ=ಹೇ ಪುತ್ರನೇ, ಭೇದ=ಧರ್ಮಭೇದವು, ಅಂದವಲ್ಲ=ಚಂದವಲ್ಲ (ಅಂದರೆ, ದೋಷಗಳಿಂದ ಕೂಡಿದ ಕಾರಣ ನಿಜವಾದದ್ದಲ್ಲ ಎಂಬರ್ಥ.

**ತಾತ್ಪರ್ಯ:-** ಉಕ್ತ ಚಕ್ರಿಕಾಪತ್ತಿ ದೋಷವನ್ನು ಕಳೆದುಕೊಳ್ಳುವದಕ್ಕಾಗಿ, ನಾಲ್ಕನೇ ಧರ್ಮಭೇದವನ್ನು ಅಂಗೀಕಾರ ಮಾಡಬಹುದು. ಮೂರನೇ ಭೇದವನ್ನು ಭೇದ ಮಾಡುವಲ್ಲಿ ಮೊದಲನೇ ಭೇದಮಾಡಿಲ್ಲ. ಕಿಂತು, ನಾಲ್ಕನೇ ಭೇದವು ಬಂದು ಈ ಮೂರನೇ ಭೇದವನ್ನು ಭೇದ ಮಾಡಿದೆ. ಎಂದು ಹೇಳುತ್ತೇನೆ. ಆದ್ದರಿಂದ ಚಕ್ರಿಕಾಪತ್ತಿದೋಷ ಬರಲಾರದೆಂದು ಹೇಳಬಹುದು. ಹೀಗೆ ನಾಲ್ಕನೇ ಭೇದವು ಭೇದವಾಗಬೇಕಾದರೆ, ಐದನೆಯದು, ಐದನೆಯದಕ್ಕೆ ಆರನೆಯದು; ಹೀಗೆ ಹೇಳುತ್ತಾ ಸಂಖ್ಯಾವಾಚಕಗಳು ಇರುವವರೆಗೆ ಹೋಗಬಹುದು. ಇದರಿಂದ ನಿನ್ನ ಮಾತಿನಲ್ಲಿ ಸ್ಥಿತಿಯೇ ಉಳಿಯಲಿಲ್ಲ. ಹೇಗಂದರೆ, ಯಾವ ಭೇದವು ಬಂದು ಯಾವ ಭೇದವನ್ನು ಭೇದಮಾಡಿದೆ. ಎಂಬಲ್ಲಿ ಸ್ಥಿತಿಯೇ ಉಳಿಯದ್ದರಿಂದ ಅನವಸ್ಥಾದೋಷವು ಬರುತ್ತದೆ. ಹೀಗೆ ಒಂದರಿಂದ ಶತಸಂಖ್ಯೆಯುವರೆಗೆ ಹೇಳುತ್ತಾಹೋಗುವದರಿಂದ ಮೊದಲು ಹೇಳಿದ ಧರ್ಮಭೇದವು ಲೋಪವಾಗುವದು. ಇದು ಪ್ರಾಗ್ಲೋಪದೋಷವು ಬರುತ್ತದೆ. ಮತ್ತು ನಿನ್ನ ವಚನದಲ್ಲಿ ನಿಶ್ಚಯದ ಅಭಾವವು ಕಂಡುಬರುತ್ತದೆ. ಇದಕ್ಕೆ ವಿನಿಗಮನವಿರಹ ದೋಷ ಎಂದು ಹೇಳುವರು. ಈ ರೀತಿ ಅನೇಕ ದೋಷಗಳು ಬರುವದರಿಂದ ಧರ್ಮಭೇದವು ನಿಜವಲ್ಲ. ಎಂದು ತಿಳಿ. ಎಂಬದಾಗಿ ಗುರುಗಳು ಶಿಷ್ಯನನ್ನು ಕುರಿತು, ಪ್ರೀತಿಯಿಂದ ಆತ್ಮಜನೆ! ಎಂದು ಸಂಬೋಧಿಸಿದ್ದಾರೆ. ಆದ್ದರಿಂದಲೇ ಶ್ರೀಮತ್ ಚಿತ್ಸುಖಾಚಾರ್ಯರು ತಮ್ಮ ಚಿತ್ಸುಖೀ ಗ್ರಂಥದಲ್ಲಿ ಧರ್ಮಭೇದವು ಪ್ರತ್ಯಕ್ಷವಲ್ಲ. ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

**ಯುಗಪದ್ಗ್ರಹಣಾ ಯೋಗಾದನವಸ್ಥಾ ಪ್ರಸಂಗತಃ ।**
**ಪರಸ್ಪರಾಶ್ರಯತ್ವಾಚ್ಚ ಧರ್ಮಭೇದೋಽಪಿ ನಾಕ್ಷಧೀಃ ॥**

(ಅರ್ಥ) ಧರ್ಮ ಭೇದವಾದರೂ ಪ್ರತ್ಯಕ್ಷಕ್ಕೆ ಗೋಚರವಲ್ಲ. ಯಾಕಂದರೆ, ಧರ್ಮಿ,ಪ್ರತಿಯೋಗಿ, ಭೇದ, ಇವು ಏಕಕಾಲಕ್ಕೆ ಗ್ರಹಿಸಲಿಕ್ಕೆ ಬಾರದ್ದರಿಂದಲೂ, ಧರ್ಮಿಯಿಂದ ಧರ್ಮಭೇದವು ಭೇದವಾಗಿದೆಯೆಂಬಲ್ಲಿ ಆತ್ಮಾಶ್ರಯಾದಿ ಅನವಸ್ಥಾ ದೋಷಗಳು ಬರುವದರಿಂದಲೂ, ಸ್ತಂಭದಿಂದ ಕುಂಭದ ಭೇದವು ಸಿದ್ಧಿಯಾದರೆ,

ಕುಂಭದಿಂದ ಸ್ತಂಭದ ಭೇದವು ಸಿದ್ಧಿಸುತ್ತದೆ. ಹೀಗೆ ಅನ್ನುವದರಿಂದ ಪರಸ್ಪರಾಶ್ರಯ ದೋಷ ಬರುವದರಿಂದಲೂ, ಧರ್ಮಭೇದವು ಪ್ರತ್ಯಕ್ಷವಲ್ಲ. ಎಂದು ಹೇಳಿರುವರು.

ಮತ್ತು **ಅನ್ಯೋನ್ಯ ಅಭಾವ ಲಕ್ಷಣಾತ್ಮಕವಾದದ್ದು** ಭೇದವು ಆಗಿರುತ್ತದೆ. ಎಂದು ಹೀಗೆ ಹೇಳಿದರೂ; ಈ ಧರ್ಮಭೇದಕ್ಕೆ ಅನ್ಯೋನ್ಯ ಅಭಾವ ರೂಪವೂ ಸಂಭವಿಸುವದಿಲ್ಲ. ಯಾಕಂದರೆ, ಪ್ರತಿಯೋಗಿಯುಳ್ಳ ಅನ್ಯೋನ್ಯಾಭಾವರೂಪ **ಧರ್ಮಭೇದವು** ಧರ್ಮಿಯ ಸ್ವಭಾವವುಳ್ಳದ್ದಾದರೆ, ಜಗತ್ಪ್ರತಿಯೋಗಿಯು ಅನ್ಯೋನ್ಯ ಅಭಾವದ್ವಾರಾ ಜಗತ್ತಾದರೂ, ಧರ್ಮಿಭೂತ ವಸ್ತುಮಾತ್ರವಾಗುವದರಿಂದ, **ಅದ್ವೈತವು** ಸಿದ್ಧವಾಗುತ್ತದೆ. ದ್ವೈತವೇ ಇಲ್ಲದಂತಾಗುತ್ತದೆ. ಆ ಅನ್ಯೋನ್ಯ ಅಭಾವರೂಪ ಧರ್ಮ ಭೇದವು ಧರ್ಮಿಗಿಂತಲೂ ಭಿನ್ನವಾಗಿದೆಯೆಂದು ನೀನು ಹೇಳಿದರೆ, ಪೂರ್ವದಲ್ಲಿ ಹೇಳಿದ **ಆತ್ಮಾಶ್ರಯಾದಿ ದೋಷಗಳೇ** ಬರುತ್ತವೆ. ಮತ್ತು ಅನ್ಯೋನ್ಯ ಅಭಾವವೇ ನಿರೂಪಣ ಮಾಡಲಿಕ್ಕೆ **ಬಾರದ್ದರಿಂದ** ತತ್ಸಂಬಂಧವಾದ ಭೇದವಾದರೂ ದುರ್ನಿರೂಪವಾಗಿರುತ್ತದೆ.

**ಬಳಿಕ,** ಘಟಪಟಗಳೆರಡರ ಅಭೇದಕ್ಕೆ **'ತಾದಾತ್ಮ್ಯ'** ಎಂಬ ಹೆಸರುಂಟು. ಈ ಅಭೇದನ್ನು ನಿಷೇಧಮಾಡುವದೇ **ಅನ್ಯೋನ್ಯ ಅಭಾವವಾಗಿದೆ.** ಅಂದರೆ, **'ತಾದಾತ್ಮ್ಯ ಪ್ರತಿಯೋಗಿಯುಳ್ಳ ಅಭಾವವೇ ಅನ್ಯೋನ್ಯ ಅಭಾವವಾಗಿದೆ.** ಎಂದು ನೀನು ಹೇಳಬಹುದು. ಇದು ಸರಿಯಲ್ಲ. ಯಾಕಂದರೆ, ಭೇದವಾದಿಗಳಾದ ತಾರ್ಕಿಕರು ಮೊದಲಾದವರು ಘಟ ಪಟಾದಿಗಳಿಗೆ **'ತಾದಾತ್ಮ್ಯ'** ಅಭೇದವನ್ನು ಒಪ್ಪಿಲ್ಲ. ಒಂದು ವೇಳೆ ಒಪ್ಪಿದರೂ, ಆ ಅಭೇದವನ್ನು ನಿಷೇಧ ಮಾಡುವ ಅನ್ಯೋನ್ಯಾಭಾವವು ಸಂಭವಿಸುವದಿಲ್ಲ. ಯಾಕಂದರೆ, ಘಟಪಟಗಳೆರಡು ಅಭೇದವಾಗಿದ್ದಂತೆ, ಎಲ್ಲಕಡೆ ಎಲ್ಲ ವಸ್ತುಗಳು ಹೀಗೆ ಅವೆ. ಅನ್ನಬೇಕಾಗುವದು. ಹೀಗಾಗುವದರಿಂದ **(ಪ್ರಭಾತ ಘಟ್ಟಕುಟೀನ್ಯಾಯದಂತೆ)** ಬೆಳಗಿನ ಜಕಾತಿಕಟ್ಟೆಯ ನ್ಯಾಯಕ್ಕನುಗುಣವಾಗಿ ಬಲಾತ್ಕಾರದಿಂದ ನೀನು ಅದ್ವೈತವನ್ನು ಒಪ್ಪಬೇಕಾಗುತ್ತದೆ. ಯಾಕಂದರೆ,ಎಲ್ಲವೂ ಅಭೇದವಾಗಿವೆಯೆಂದು ಒಪ್ಪುವಿಯಾದ್ದರಿಂದ, ಇದಕ್ಕೆ ಭಿನ್ನವಾಗಿ ಯಾವದೋ ಒಂದು ಪ್ರತಿಯೋಗಿಯುಳ್ಳದ್ದು ಅನ್ಯೋನ್ಯಾಭಾವವೆಂದು ನೀನು ಹೇಳಬಹುದು. ಈ ಮಾತು ಸರಿಯಲ್ಲ. ಯಾಕಂದರೆ, **ಪ್ರತಿಯೋಗಿಯನ್ನೇ** ನಿನ್ನಿಂದ ನಿರೂಪಣಮಾಡಲಿಕ್ಕೆ ಬರುವದಿಲ್ಲ. ಅಂದಮೇಲೆ, ಅನ್ಯೋನ್ಯ ಅಭಾವವನ್ನು ಹೇಗೆ ಹೇಳುವಿ? ಎಂಬ ಭಾವವು.

**ಶಂಕಾ:**-ಕುಂಭವು ಸ್ತಂಭವಲ್ಲ. ಈ ವಾಕ್ಯದಲ್ಲಿ ಸ್ತಂಭ ಪ್ರತಿಯೋಗಿಯುಳ್ಳ ಯಾವ ಅಭಾವವಿರುವದೋ. ಅದು ಕುಂಭವನ್ನು ಆಶ್ರಯಿಸಿರುತ್ತದೆ. **ಅದೇ**

ಅನ್ಯೋನ್ಯಾ ಅಭಾವವು. ಪ್ರತಿಯೋಗಿಯನ್ನು ಹೇಳಲಿಕ್ಕೆ ಬರುತ್ತದೆ. ಯಾಕೆ ಬರುವದಿಲ್ಲ?

**ಉತ್ತರ:**- ಹಾಗಾದರೆ ? ನೀನು ಅನ್ಯೋನ್ಯಾಭಾವಕ್ಕೆ ಯಾವದು ಪ್ರತಿಯೋಗಿಯೆಂದು ಹೇಳುವಿಯೋ, ಅದೇ ಪ್ರತಿಯೋಗಿಯು ಸಂಸರ್ಗ ಅಭಾವದಲ್ಲಿಯೂ ಇರುತ್ತದೆ. ಎರಡು ಅಭಾವಗಳ ಪ್ರತಿಯೋಗಿಭೇದವಿಲ್ಲದ್ದರಿಂದ ಎರಡೂ ಅಭಾವಗಳು ಒಂದೇ ಆದವು. ಹೇಗಂದರೆ, ಸ್ತಂಭವು ಕುಂಭವಲ್ಲಿಇಲ್ಲ. ಇದು ಸಂಸರ್ಗ ಅಭಾವವಾಗಿದೆ. ಕುಂಭವು ಸ್ತಂಭವಲ್ಲ. ಇದು ಅನ್ಯೋನ್ಯ ಅಭಾವವಾಗಿದೆ. ಇವೆರಡರಲ್ಲಿಯೂ ಸ್ತಂಭವೇ ಪ್ರತಿಯೋಗಿಯಾಗಿದೆ. **'ಯಸ್ಯ ಅಭಾವಃ ಭೇದೋ ವಾ ತಸ್ಯ ಸ ಏವಪ್ರತಿಯೋಗೀತಿ'** ಯಾವಾದರ ಅಭಾವವೋ ಆ ಅಭಾವಕ್ಕೆ ಅದೇ ಪ್ರತಿಯೋಗಿಯು ಆಗಿರುತ್ತದೆ. ಮತ್ತು ಯಾವುದರ ಭೇದವೋ ಆ ಭೇದಕ್ಕೆ ಅದೇ ಪ್ರತಿಯೋಗಿಯಾಗಿರುತ್ತದೆಂದು ತಿಳಿಯಬೇಕು. ಹೀಗೆ ಎರಡು ಅಭಾವಗಳಲ್ಲಿ ಪ್ರತಿಯೋಗಿಯು ಒಂದ್ದಾದ್ದರಿಂದ ಅಭಾವವಾದರೂ ಒಂದೇ ಎಂದು ಹೇಳಬೇಕು. ಎರಡು ಅಭಾವ ಯಾಕೆ ಹೇಳಬೇಕು.

**ಶಂಕಾ:**- ಯಾವ ಅಭಾವವು ಪ್ರತಿಯೋಗಿನಿಷ್ಠವಾಗಿರುವದೋ ಅದು ಅಂತ್ಯಂತಾಭಾವವಾಗಿದೆ. ಯಾವ ಅಭಾವವು ಪ್ರತಿಯೋಗಿಯಲ್ಲಿರದೆ ಯಾವಾಗಲೂ ಇರುತ್ತದೆಯೋ ಆದು ಅನ್ಯೋನ್ಯ ಅಭಾವವಾಗಿದೆ. ಹೀಗೆ ಲಕ್ಷಣಗಳು ಭೇದವಾದ್ದರಿಂದ ಅಭಾವಗಳು ಭೇದವಾಗಿವೆ ಎಂದು ಹೇಳಲಿಕ್ಕೆ ಬರುತ್ತದೆ.

**ಉತ್ತರ:**- ಹಾಗಲ್ಲ. ಯಾವದಾದರೊಂದು ಪ್ರತಿಯೋಗಿಯಲ್ಲಿ ಅನ್ಯೋನ್ಯ ಅಭಾವವೂ ಇರುವದರಿಂದ ಅತಿವ್ಯಾಪ್ತಿ ದೋಷವು ಬರುತ್ತದೆ. ಪ್ರತಿಯೋಗಿನಿಷ್ಠತ್ವ ಅಂತ್ಯಂತಾಭಾವದ ಲಕ್ಷಣವು ಅನೋನ್ಯ ಅಭಾವಕ್ಕೂ ಬರುತ್ತದೆಂಬ ಭಾವವು. **'ಸ್ವಪ್ರತಿಯೋಗಿ ನಿಷ್ಠತ್ವ,** 'ಸ್ವ, ಶಬ್ದದಿಂದ ಅತ್ಯಂತಾಭಾವವು ಹೇಳಲ್ಪಟ್ಟಿದೆ. ಅದು ತನ್ನ ಪ್ರತಿಯೋಗಿಯಲ್ಲಿರುತ್ತದೆಂದು ಹೇಳಿದರೂ ದೋಷ ಬರುತ್ತದೆ. ಯಾಕಂದರೆ, ಯಾವದು ಅಂತ್ಯಾಂತಾಭಾವಕ್ಕೆ ಪ್ರತಿಯೋಗಿಯು ಆಗಿರುವದೋ, ಅದರಲ್ಲಿಯೇ ಅನ್ಯೋನ್ಯ ಅಭಾವವೂ ಇರುವದರಿಂದ ಆ ದೋಷವು ಬಂದೇ ಬರುತ್ತದೆ. ಹೇಗಂದರೆ, ನಿನಗೆ ದೃಷ್ಟಾಂತಕೊಟ್ಟು ಹೇಳುತ್ತೇನೆ. ಕೇಳು **'ಘಟೇ ಪಟೋನಾಸ್ತಿ,** ಘಟದಲ್ಲಿ ಪಟವಿಲ್ಲ ಎಂಬ ವಾಕ್ಯದಲ್ಲಿ ಪಟದ ಅಂತ್ಯಂತಾಭಾವನದೆ. ಪಟವೇ ಪ್ರತಿಯೋಗಿಯಾಗಿರುತ್ತದೆ. ಆ ಅಂತ್ಯಂತಾಭಾವವು ಘಟನಿಷ್ಠವಾಗಿದೆ. **'ಘಟಃ ಪಟೋನ,** ಘಟವು ಪಟವಲ್ಲ ಎಂಬ ಈ ವಾಕ್ಯದಲ್ಲಿ ಪಟಪ್ರತಿಯೋಗಿಯುಳ್ಳ ಅನ್ಯೋನ್ಯಅಭಾವವೂ ಘಟದಲ್ಲಿರುತ್ತದೆ, ಹೀಗೆ ಎರಡು

ಅಭಾವಗಳು ಒಂದೇ ಘಟದಲ್ಲಿರುತ್ತವೆ. ಅವುಗಳಿಗೆ ಭೇದವೇನಿದೆ? ಹೇಳು. ಇಲ್ಲಿ ಎರಡು ಅಭಾವಗಳನ್ನು ಅಂಗೀಕರಿಸುವದರಿಂದ ಪ್ರಯೋಜನವೇನು?

**ಶಂಕಾ:-** ಹಾಗೇ ಬೇರೆ ಅಭಾವಗಳನ್ನು ಅಂಗೀಕಾರ ಮಾಡಿದ್ದರಿಂದ ಆ ಅಭಾವಗಳು ಪ್ರತಿಯೋಗಿಯನ್ನು ನಿರೂಪಕತ್ವ ಮಾಡುತ್ತವೆ. ಇಲ್ಲದೆ ಹೋದರೆ, ಪ್ರತಿಯೋಗಿ ಜ್ಞಾನವಾಗದು ಎಂದು ಹೇಳಿದರೆ,

**ಉತ್ತರ:-** ಹಾಗಾದರೆ ಅಭಾವವು ಪ್ರತಿಯೋಗಿಯನ್ನು ತಿಳಿಸಿದಂತೆ ಧರ್ಮಿಯನ್ನು ನಿರೂಪಕವಮಾಡುತ್ತದೆ. ಅದರಿಂದ ಧರ್ಮಿಗೂ ನೀನು ಪ್ರತಿಯೋಗಿತ್ವವನ್ನು ಅಂಗೀಕಾರ ಮಾಡಲಿಕ್ಕೆ ಬೇಕಾದೀತು. ಯಾಕಂದರೆ, ಅಭಾವ ನಿರೂಪಕತ್ವವು ಧರ್ಮಿಯಲ್ಲಿಯೂ ಇರುತ್ತದೆ.

**ಶಂಕಾ:-** 'ಘಟಃ ಪಟೋ ನ ಭವತೀತಿ, ಘಟವು ಪಟವಾಗುವದಿಲ್ಲ. ಎಂಬ ಈ ಅನ್ಯೋನ್ಯ ಅಭಾವದಲ್ಲಿ ಪಂಚಮಿ ವಿಭಕ್ತಿಪದವನ್ನು ಹೇಳಬಹುದು. ಹೇಗಂದರೆ, ಘಟದಿಂದ ಪಟವು ಆಗುವದಿಲ್ಲ.

**ಉತ್ತರ:-** ಉಕ್ತ ಪ್ರಕಾರ ವಾಕ್ಯ ಪ್ರಯೋಗವಮಾಡಿದರೆ, ಪಟಕ್ಕೆ ಪ್ರತಿಯೋಗಿತ್ವವು ಬರಲಾರದು. ಯಾಕಂದರೆ, ಪಂಚಮೀ ವಿಭಕ್ತಿ ಯುಕ್ತಶಬ್ದದಿಂದ ಎಲ್ಲಿಯೂ ನಿರೂಪಣಮಾಡಿಲ್ಲ.

**ಶಂಕಾ:-** ಧರ್ಮಿಯಿಂದ ಭಿನ್ನವಾಗುತ್ತಿರಲಿಕ್ಕೆ ಪ್ರತಿಯೋಗಿಯನ್ನು ತಿಳಿಸುವದೇ ಅನ್ಯೋನ್ಯ ಅಭಾವವು ಆಗಿದೆ.

**ಉತ್ತರ:-**ಅದೂ ಸಂಭವಿಸುವದಿಲ್ಲ. ಯಾಕಂದರೆ, ಪ್ರತಿಯೋಗಿ ಯಾವದೆಂಬುವದೇ ನಿರೂಪಿಸಲಿಕ್ಕೆ ಬಾರದ್ದರಿಂದ, ಧರ್ಮಿಪ್ರತಿಯೋಗಿಗಳಿಗೆ ಭಿನ್ನವಾಗಿರುವದು ದೂರೇ ಉಳಿಯಿತು. ಆದ್ದರಿಂದಅನ್ಯೋನ್ಯಾಭಾವ ಲಕ್ಷಣಾತ್ಮಕವಾದದ್ದು **ಧರ್ಮಭೇದ** ಅನ್ನುವದು ಸಿದ್ಧಿಸುವದಿಲ್ಲ.

ಬಳಿಕ, ಭೇದವಾದಿಯು 'ಧರ್ಮಭೇದವು ಸಿದ್ಧಿಸದೇ ಹೋದರೂ ಹೋಗಲಿ. ಸ್ವರೂಪ ಭೇದವನ್ನು ನಾನು ಅಂಗೀಕಾರ ಮಾಡುತ್ತೇನೆ. ಹೇಗಂದರೆ ಘಟವು ವಸ್ತುವಾಗಿದೆ. ಆ ಘಟವಸ್ತುವಿನೊಡನೆ ಭೇದವು ಕೂಡಿರುತ್ತದೆ. ಹಾಲಿನಲ್ಲಿ ನೀರುಕೂಡಿ ಹಾಲಾಗಿಯೇ ತೋರುವಂತೆ ಘಟದೊಡನೆ ಭೇದ ಶೇರಿ ತಾನು ಘಟಸ್ವರೂಪವಾಗಿಯೇ ತೋರುತ್ತದೆಂದು ಶಂಕೆಯನ್ನು ಮಾಡಲು; ಅದಕ್ಕೆ ಉತ್ತರ 'ಹಾಗಾದರೆ,ಆ ಸ್ವರೂಪ ಭೇದವು ಪ್ರತಿಯೋಗಿಯನ್ನು ಅಪೇಕ್ಷೆಮಾಡದೆ ತೋರಬೇಕಾಗುತ್ತದೆಂದು ಹೇಳುತ್ತಾರೆ.

**ಭೇದವೆಂಬುದು ಘಟಪಟಾದಿ ಸ್ವರೂಪವೆನೆ ।**
**ಭೇದದಿಂ ತೋರ್ಪ ಘಟದಲ್ಲಿ ಪ್ರತಿಯೋಗಿ ।**
**ಯಾದುದಂ ಪಾರದಿರವೇಳ್ಕುಂ ॥೨॥**

**ಟೀಕಾ:-** ಭೇದವೆಂಬುದು=ಭೇದವೆಂದು ಹೇಳುವದು, ಘಟಪಟಾದಿ ಸ್ವರೂಪವೆನೆ=ಘಟಪಟಾದಿಗಳೊಡನೆ ಅಭೇದರೂಪದಿಂದ ಇರುವದೆಂದು ಹೇಳಿದರೆ, ಭೇದದಿಂದ ತೋರ್ಪ=ಭೇದದಿಂದ ತೋರುವ, ಘಟದಲ್ಲಿ=ಘಟವಸ್ತುವಿನಲ್ಲಿ ಪ್ರತಿಯೋಗಿಯಾದುದಂ=ಪ್ರತಿಯೋಗಿಯಾದ ಅನ್ಯವಸ್ತುವನ್ನು. ಪಾರದಿರವೇಳ್ಕುಂ=ಅಪೇಕ್ಷೆಯನ್ನು ಮಾಡಬಾರದಾಗಿತ್ತು.

**ತಾತ್ಪರ್ಯ:-** ಭೇದವು ಘಟಪಟಾದಿ ವಸ್ತುಗಳ ಸ್ವರೂಪವಾಗಿರುತ್ತದೆಂದು ನೀನು ಹೇಳುವದು ಸರಿಯಲ್ಲ. ಯಾಕಂದರೆ, ಭೇದವು ಘಟದ ಸ್ವರೂಪವಾಗಿದ್ದರೆ, ಘಟದಂತೆ ಪ್ರತ್ಯಕ್ಷ ತೋರಬೇಕಾಗಿತ್ತು. ಮತ್ತು ವಸ್ತು **ನಿರಪೇಕ್ಷ ಪ್ರತೀತಿ**ಯಾಗಿದೆ. ಭೇದವು **ಸಾಪೇಕ್ಷ ಪ್ರತೀತಿ** ಯಾಗಿದೆ. ಆದರಿಂದ ಬೇರೊಂದು ಪ್ರತಿಯೋಗಿಯಾದ ವಸ್ತುವಿನನ್ನು ಸ್ವೀಕಾರಮಾಡಿ ಭೇದಹೇಳಲಿಕ್ಕೆ ಬರುತ್ತದೆಯೇ ಹೊರತು, ಇಲ್ಲದೆ ಬರಲಾರದು. ಹೇಗಂದರೆ, ಘಟದಲ್ಲಿ ಭೇದವು ಘಟದ ಸ್ವರೂಪವಾಗಿದೆ. ಎಂದು ನೀನು ಹೇಳಬಹದು. ಅದು ಯಾವುದರ ಸಂಬಂಧಿ ಭೇದವು? ಎಂದು ಕೇಳಿದರೆ, ಅದಕ್ಕೆ ನೀನು ಪಟದ್ದಾಗಲಿ, ಸ್ತಂಭದ್ದಾಗಲಿ, ಕುಡ್ಯದ್ದಾಗಲಿ, ಯಾವದಾದರೊಂದು ಅನ್ಯವಸ್ತುವಿನ ಭೇದವು ಘಟದ ಸ್ವರೂಪವಾಗಿದೆ. ಎಂದು ಹೇಳಬೇಕಾಗುತ್ತದೆ. ಆ ಘಟದಲ್ಲಿ ಯಾವುದರ ಭೇದವನ್ನು ಹೇಳುವಿಯೋ ಅದೇ ಆ ಭೇದಕ್ಕೆ ಪ್ರತಿಯೋಗಿಯಾಗಿರುತ್ತದೆ. ಪ್ರತಿಯೋಗಿಯ ಭೇದವನ್ನು ಘಟದಲ್ಲಿ ಹೇಳಿದ ಮೇಲೆ, ಅದು **ಸ್ವರೂಪ ಭೇದವೆನಿಸಲಾರದು.** ಎಂಬ ಭಾವವು.

**ಬಳಿಕ,** ಭೇದವಾದಿಯು 'ಪ್ರತಿಯೋಗಿ ಸಹಿತವಾದ ಆ ಭೇದವು, ಘಟದ ಸ್ವರೂಪವಾಗಿರುತ್ತದೆಂದು ಹೇಳುತ್ತೇನೆ. ಹೀಗೆ ಹೇಳುವದರಿಂದ ಸ್ವರೂಪ ಭೇದವು ಸಂಭವಿಸುತ್ತದೆ. ಅಂದರೆ, ನೀನು ಭೇದಸಿದ್ಧಿಮಾಡುವದಕ್ಕೆ ಹೋಗಿ ನಮ್ಮ ಅದ್ವೈತವನ್ನೇ ಸಿದ್ಧಮಾಡಿದಿಯೆಂದು ಉತ್ತರವನ್ನು ಹೇಳುತ್ತಾರೆ.

**ಪ್ರತಿಯೋಗಿಗಳು ತಮ್ಮ ಪ್ರತಿಯೊಂದು ಭೇದಗಳ ।**
**ವತಿಯಿಂದ ವಸ್ತು ರೂಪಾಗಿ ತೋರಲ್ಕೆ ।**
**ಪ್ರತಿಯಿಲ್ಲದೊಂದುವೆನಬೇಕು ॥,,॥**

ಟೀಕಾ:- ಪ್ರತಿಯೋಗಿಗಳು=ಧರ್ಮಿಭಿನ್ನವಸ್ತುಗಳು, ತಮ್ಮ=ಸ್ವಕೀಯ, ಪ್ರತಿಯೊಂದು ಭೇದಗಳ, ತಮ್ಮ ತಮ್ಮ ಭೇದಗಳ, ವತಿಯಿಂದ=ಸಹಕಾರಿದ್ವಾರಾ, ವಸ್ತುರೂಪಾಗಿ=ಧರ್ಮಿಸ್ವರೂಪವಾಗಿ, ತೋರಲ್ಕೆ=ಪ್ರತೀತಿಯಾಗುತ್ತಿರಲು, ಪ್ರತಿಯಿಲ್ಲದೆ=ಬೇರೊಂದಿರದೆ,ಒಂದು ಎನಬೇಕು=ಒಂದೇ ಇರುತ್ತದೆಂದು ಹೇಳಬೇಕು.

ತಾತ್ಪರ್ಯ:- ಘಟಕ್ಕೆ ಭಿನ್ನವಾಗಿ ಪಟಕುಡ್ಯಾದಿ ಸಕಲ ನಾಮರೂಪಾದಿ ಪದಾರ್ಥಗಳು ಪ್ರತಿಯೋಗಿಗಳು ಆಗಿವೆ. ಅವೆಲ್ಲಾ ಪ್ರತಿಯೋಗಿಗಳು ತಮ್ಮ ಭೇದಗಳಿಂದ ಸಹಿತವಾಗಿ, ಧರ್ಮಿಯಾದ ಘಟಸ್ವರೂಪವಾದರೆ, ಧರ್ಮಿಗಿಂತ ಭಿನ್ನವಾಗಿ ಏನೂ ಇಲ್ಲ. ಎಂದು ಹೇಳಬೇಕಾಗುತ್ತದೆ. ಇದನ್ನು ಒಪ್ಪಿದರೆ, ಅದ್ವೈತವನ್ನು ಸ್ವೀಕಾರ ಮಾಡಿದಂತಾಗುವದು. ನಾವು ನಿನಗೆ ಏಕತ್ವರೂಪ ಅದ್ವೈತವನ್ನು ಬೋಧಿಸಬೇಕಾಗಿತ್ತು. ಆದರೆ ನೀನೇ ಅದ್ವೈತವನ್ನು ಸಿದ್ಧ ಮಾಡಿದಿ. ಅಂದಮೇಲೆ, ಇದು ನಮಗೆ ಇಷ್ಟವಾಗಿದೆಯೆಂಬ ಭಾವವು,

ಬಳಿಕ, ಭೇದವಾದಿಯು 'ಅನ್ಯ ಪ್ರತಿಯೋಗಿ ಭೇದಸಹಿತ ಧರ್ಮಿಸ್ವರೂಪ ವೆನ್ನುವದಿಲ್ಲ. ಕಿಂತು, ಆ ಧರ್ಮಿಯಾದ ಘಟವು ತನ್ನಲ್ಲಿ ತಾನೇ ಭೇದವಾಗಿ ಸ್ವರೂಪದಿಂದ ಇರುತ್ತದೆಂದು ಹೇಳುತ್ತೇನೆ. ಆದರಿಂದ ಅದ್ವೈತ ಪ್ರಸಂಗ ಬರಲಾರದೆಂದು ಶಂಕೆಯನ್ನು ಮಾಡಿದರೆ, 'ವೃದ್ಧಿಮಿಚ್ಛತೋ ಮೂಲಮಪಿನಷ್ಟಂ' ಬಡ್ಡಿಯ ಆಶೆಗೆ ಗಂಟು ಕಳಕೊಂಡ ನ್ಯಾಯದಂತೆ, ಸ್ವರೂಪಭೇದ ಸಿದ್ಧಮಾಡುವದಕ್ಕೆಹೋಗಿ ಧರ್ಮಿಯನ್ನೇ ನಾಶಮಾಡಿಕೊಂಡಂತೆ ಆಗುತ್ತದೆಂದು ಹೇಳುತ್ತಾರೆ.

**ತನ್ನ ರೂಪವೆ ಭೇದವೆನ್ನಲ್ತನಗೆ ಹಾನಿ ।**
**ಮುನ್ನಪ್ಪುದಾಗಿ ಸ್ವಭೇದಿತ ದೂಷಣವ ।**
**ದುಂ ನಾಡೆ ಸಂಭವಿಸುತಿರ್ಕು ॥೯॥**

ಟೀಕಾ:- ತನ್ನ ರೂಪವೆ=ಆ ಭೇದ ಸ್ವರೂಪವೇ, ಭೇದವೆನ್ನಲ್=ಭೇದವಾಗಿರುವದೆಂದು ಹೇಳಿದರೆ, ತನಗೆ ಹಾನಿ=ತನ್ನ ನಾಶವೇ, ಮುನ್ನಪ್ಪುದಾಗಿ=ಮೊದಲಿಗೆ ಆಗುವದರಿಂದ, ಸ್ವಭೇದಿತ=ತನ್ನ ನಾಶವನ್ನು ತಾನುಮಾಡಿಕೊಂಡ, ದೂಷಣವದುಂ=ಈ ನಿಂದೆಯಾದರೂ, ನಾಡೆ=ಚನ್ನಾಗಿ, ಸಂಭವಿಸುತಿರ್ಕು=ಪ್ರಾಪ್ತವಾಗುವದು.

ತಾತ್ಪರ್ಯ:- ಅನ್ಯ ಪ್ರತಿಯೋಗಿಗಳ ಭೇದದಿಂದ ಕೂಡಿರದೆ, ಆ ಘಟ ಧರ್ಮಿಯಲ್ಲಿದ್ದ ಸ್ವರೂಪ ಭೇದವು ತನ್ನಿಂದ ತಾನೇ ಭೇದವಾಗಿದೆಯೆಂದು ಹೇಳಿದರೆ, ಮುಂದೆ ಹೇಳುವ ದೋಷವು ಬರುತ್ತದೆ. ಯಾಕಂದರೆ, ಭೇದವು ವಿದಾರಕಾತ್ಮಕ ಸ್ವಭಾವವುಳ್ಳದ್ದಿರುತ್ತದೆ. ಆದ್ದರಿಂದ ಆ ಭೇದವು ತನಗೆ ಆಶ್ರಯವಾದ

ಧರ್ಮಿ ಘಟವನ್ನು ನಾಶಮಾಡಲು ಆಶ್ರಿತವಾದ ಈ ಭೇದವೂ ನಾಶವಾಗುತ್ತದೆ. ಆಗ್ಯೆ ತನ್ನನ್ನು ತಾನೇ ನಾಶಮಾಡಿಕೊಂಡಂತಾಗುತ್ತದೆ. ಅರ್ಥಾತ್ ಲೋಕದಲ್ಲಿ ಆತ್ಮಹತ್ಯ ಮಾಡಿಕೊಂಡವನು ಹೇಗೆ ದೂಷಣಕ್ಕೆ ಪಾತ್ರನಾಗುವನೋ, ಹಾಗೆ ಈ ಭೇದವೂ ದೂಷಣಕ್ಕೆ ಪಾತ್ರವಾಗಿದೆ. ಹೀಗನ್ನುವದರಿಂದ **ಏಕವಾದ** ಧರ್ಮಿಯೇ ಇಲ್ಲದಮೇಲೆ ಅನ್ಯವೇನೂ ಇಲ್ಲವೆನ್ನಬೇಕಾಗುವದು. ಹೀಗೆ ಒಪ್ಪಿದರೆ; **ಶೂನ್ಯವಾದ** ಪ್ರಸಂಗವು ಪ್ರಾಪ್ತವಾಗುತ್ತದೆ. ಅರ್ಥಾತ್ ಭೇದವನ್ನು ಸಿದ್ಧ ಮಾಡುವದಕ್ಕೆ ಹೋಗಿ, ತನ್ನ ಭಾವವಾದವನ್ನು ಬಿಟ್ಟು, ಬೌದ್ಧರ ಅಭಾವರೂಪ **ಶೂನ್ಯವಾದವನ್ನು** ಸ್ವೀಕಾರ ಮಾಡಿದಂತಾಗುವದು. ತನ್ನ ಸಿದ್ಧಾಂತವನ್ನು ತ್ಯಜಿಸಿ, ಅನ್ಯರ ಸಿದ್ಧಾಂತವನ್ನು ಅಂಗೀಕರಿಸುವದರಿಂದ **ಅಪಸಿದ್ಧಾಂತ** ದೋಷವೂ ಬರುತ್ತದೆಂಬ ಭಾವವು.

ಬಳಿಕ್ಕ ಭೇದವಾದಿಯು ' ಆಸ್ವರೂಪಭೇದವು ತನ್ನಲ್ಲಿ ತಾನು ಭೇದವಾಗಿ ಧರ್ಮಿಘಟಸ್ವರೂಪವಾಗಿ ಇರುತ್ತದೆ. ನಾಶವಾಗಿಲ್ಲ. ಎಂದು ಶಂಕೆಯನ್ನು ಮಾಡಿದರೆ, ಹಾಗಾದರೆ ಆ ಭೇದವು ಘಟ ಪ್ರತ್ಯಕ್ಷವಾಗಿ ಕಂಡಂತೆ ಕಾಣಬಹುದಾಗಿತ್ತು. ಕಾಣುವದಿಲ್ಲ. ಅದರಿಂದ ಸ್ವರೂಪಭೇದ ಹೇಳುವದು ಯೋಗ್ಯವಲ್ಲ. ಎಂದು ಹೇಳುತ್ತಾರೆ.

**ವಸ್ತುವಿನ ಭೇದವದು ಸ್ವಸ್ಥಾಗಿ ತೋರಿದರೆ ।**
**ಸಿಸ್ತಿನಿಂ ಮತ್ತೆ ಕಾಣುತ್ತಲಿರಬೇಕು ।**
**ವಸ್ತುವಿನ ಹಾಗೆ ಸರ್ವರಿಗೆ ॥೨೨॥**

**ಟೀಕಾ:-** ವಸ್ತುವಿನ ಭೇದವದು=ಆ ಸ್ವರೂಪ ಭೇದವು, ಸ್ವಸ್ಥಾಗಿ=ಪ್ರತಿಬಂಧಕವಿಲ್ಲದೆ, ತೋರಿದರೆ=ಪ್ರತೀತಿಯಾದರೆ, ಸಿಸ್ತಿನಿಂ=ಚತ್ನಾಗಿ ಇದ್ದಂತೆ, ಮತ್ತೆ=ಆನಂತರ, ವಸ್ತುವಿನಹಾಗೆ=ಘಟದಹಾಗೆ, ಸರ್ವರಿಗೆ=ಎಲ್ಲರಿಗೂ, ಕಾಣುತ್ತಲಿರಬೇಕು=ತೋರುತ್ತಿರಬೇಕಾಗಿತ್ತು.

**ತಾತ್ಪರ್ಯ:-** ಭೇದವು ಘಟದಲ್ಲಿ ಇರುತ್ತದೆಂದು ಹೇಳಿದರೆ, ಘಟವು ಪ್ರತ್ಯಕ್ಷವಾಗಿ ಪ್ರತೀತಿಯಾದಂತೆ, ಆ ಭೇದವು ಸರ್ವರಿಗೂ ಗೋಚರವಾಗಬೇಕಾಗಿತ್ತು-ಹಾಗಿಲ್ಲ. ಇದೆಯೋ? ಇಲ್ಲವೋ? ಎಂಬ ಸಂಶಯ ಜ್ಞಾನಕ್ಕೆ ವಿಷಯವಾಗಿರುತ್ತದೆ. ಆದ್ದರಿಂದ ಘಟಧರ್ಮಿಯಲ್ಲಿ ಸ್ವರೂಪ ಭೇದವದೆ. ಎಂಬುದು **ಸರ್ವರಿಗೂ ಸಂಶಯ ಮತ್ತು ಆಶ್ಚರ್ಯವನ್ನುಂಟು ಮಾಡುತ್ತದೆ.** ಆದ್ದರಿಂದ **ಸ್ವರೂಪ ಭೇದವು ಸರಿಯಲ್ಲ ಎಂಬ ಭಾವವು.**

ಬಳಿಕ, ಗುರುಗಳು–'ಹೇಶಿಷ್ಯನೇ ಈ ರೀತಿ ಭೇದವು ಹೊರಗಿನ ಘಟ ಪಟಾದಿ ಜಡಗಳಲ್ಲಿಯೇ ಇಲ್ಲದ ಮೇಲೆ, ಮಿಥ್ಯೆಯಾಗುತ್ತಿರಲಿಕ್ಕೆ, ಚೈತನ್ಯರೂಪ ಆತ್ಮನಲ್ಲಿ ಭೇದವು ಹೆಜ್ಜೆಯನ್ನು ಕೂಡಾ ಇಡದು ಎಂದು ಹೇಳುತ್ತಾರೆ.

**ಅದು ಕಾರಣಂ ಭೇದವಿದು ಬಾಹ್ಯದಲ್ಲಿ ಘಟ ।**
**ಮೊದಲಾದವಕ್ಕೆ ಮಿಥ್ಯೆಯೆನಲಾತ್ಮನೊ ।**
**ಳ್ಪದವಿಡದು ಸತ್ಯವೆಲೆ ವತ್ಸ ॥೧೦॥**

**ಟೀಕಾ:-** ಅದು ಕಾರಣಂ=ಈ ಕಾರಣದಿಂದ, ಭೇದವಿದು=ಈ ಭೇದವು; ಬಾಹ್ಯದಲ್ಲಿ=ಹೊರಗೆ ತೋರುವ, ಘಟಮೊದಲಾದವಕ್ಕೆ=ಘಟಾದಿ ಪದಾರ್ಥಗಳಿಗೆ, ಮಿಥ್ಯೆಯೆನಲ್=ನಿಜವಲ್ಲೆಂದು ಹೇಳುತ್ತಿರಲಿಕ್ಕೆ, ಆತ್ಮನೊಳ್=ಚೈತನ್ಯರೂಪ ಆತ್ಮನಲ್ಲಿ, ಪದವಿಡದು=ಹೆಜ್ಜೆಯನ್ನು ಕೂಡಾ ಇರಿಸದು. ಎಲೆವತ್ಸ = ಹೇ ಶಿಷ್ಯನೇ; ಸತ್ಯವು=ಈ ಮಾತು ಸತ್ಯವಾಗಿರುತ್ತದೆ.

**ತಾತ್ಪರ್ಯ:-** ಉಕ್ತರೀತಿ ಸ್ವರೂಪ ಭೇದವನ್ನು ನಾಲ್ಕು ವಿಧದಿಂದ ಸಾಧಿಸಿದರೂ ಸಾಧ್ಯವಾಗಲಿಲ್ಲ. ಅವು ಯುಕ್ತಿಯಿಂದ ನಿರಾಕರಿಸಲ್ಪಟ್ಟವು. ಇದಕ್ಕೆ ಚಿತ್ಸುಖಾಚಾರ್ಯರ ವಾಕ್ಯ ಪ್ರಮಾಣವೂ ಉಂಟು.

(ಶ್ಲೋಕ) **ಸಾಪೇಕ್ಷತ್ವಾತ್ಸಾವದೇಶ್ಚ ತತ್ವೇಽದ್ವೈತ ಪ್ರಸಂಗತ: ।**
**ಏಕಾಭಾವಾದಸಂದೇಹಾನ್ನರೂಪಂ ವಸ್ತುನೋಭಿದಾ ॥**

**ಅರ್ಥ:-** ಧರ್ಮಿಯಲ್ಲಿ ಭೇದವು ಸ್ವರೂಪದಿಂದ ಇರುತ್ತದೆಂದು ವಾದಿಯು ಹೇಳಿದರೆ, ಅದು ಸಂಭವಿಸುವದಿಲ್ಲೆಂದು ನಾಲ್ಕು ಹೇತುಗಳನ್ನು ಹೇಳುತ್ತಾರೆ. (ಅವು ಈಗ ನಿರೂಪಿಸಲ್ಪಟ್ಟವೆ. ಆದರೂ ಮತ್ತೊಮ್ಮೆ ಹೇಳುತ್ತೇವೆ.) ಧರ್ಮಿಯಲ್ಲಿ ಸ್ವರೂಪ ಭೇದವು ಪ್ರತಿಯೋಗಿಯನ್ನು **ಅಪೇಕ್ಷೆಮಾಡುವದರಿಂದಲೂ;** ಪ್ರತಿಯೋಗಿಯು ಭೇದ ಸಹಿತ ಧರ್ಮಿಸ್ವರೂಪವಾದರೆ, **ಅದ್ವೈತ ಪ್ರಸಂಗ ಪ್ರಾಪ್ತವಾದ್ದರಿಂದಲೂ;** ತನ್ನಲ್ಲಿ ತಾನೇ ಭೇದವಾಗಿರುವದೆಂದು ಹೇಳಿದರೆ, **ಏನೂ ಇಲ್ಲದಂತಾಗುವದರಿಂದಲೂ;** ಘಟದಲ್ಲಿ ಭೇದವದೆಯೆಂಬುದನ್ನು ಕೇಳಿ ಸಂಶಯ ಬರುವದರಿಂದಲೂ, ಸ್ವರೂಪ ಭೇದ ನಿರೂಪಣ ಮಾಡಲಿಕ್ಕೆ ಬರುವದಿಲ್ಲೆಂದು ಹೇಳಲ್ಪಟ್ಟಿತು.

ಧರ್ಮಿಪ್ರತಿಯೋಗಿಗಳ ಜ್ಞಾನಕ್ಕೆ ಆಧೀನವಾಗಿ ತೋರುವದೇ ಭೇದವಾಗಿದೆ. ಅದು ಧರ್ಮಿಯನ್ನು ಆಶ್ರಯಿಸಿಕೊಂಡಿದೆಯಾದ್ದರಿಂದ ಧರ್ಮಭೇದವೆಂದೂ, ಧರ್ಮಿಯ ಸ್ವರೂಪವಾಗಿರುವದರಿಂದ ಸ್ವರೂಪಭೇದವೆಂದೂ, ಎರಡು ವಿಧವಾಗಿ ವಿಂಗಡಿಸಿದರು. ಬಳಿಕ ಧರ್ಮಭೇದದಲ್ಲಿ ಆತ್ಮಾಶ್ರಯಾದಿ ನಾಲ್ಕು

ದೋಷಗಳನ್ನು ಹೇಳಿದರು. ಮತ್ತು ಸ್ವರೂಪ ಭೇದದಲ್ಲಿಯೂ ಪ್ರತಿಯೋಗಿ ಸಾಪೇಕ್ಷತ್ವಾದಿ ನಾಲ್ಕು ದೋಷಗಳನ್ನು ಹೇಳಿದರು. ಆದ್ದರಿಂದ ಜಡಗಳಾದ ಘಟಪಟ ಮೊದಲಾದವುಗಳಲ್ಲಿಯೇ ಭೇದವು ಸಿದ್ಧಿಸಲಿಲ್ಲ. ಅಂದಮೇಲೆ, ಚೈತನ್ಯ ದಲ್ಲಿ ಭೇದವನ್ನು ಹೇಳಲಿಕ್ಕೆ ಆದೀತೆ? ಎಂದಿಗೂ ಆಗದು. ಅಂದಮೇಲೆ ಪಾರ ಮಾರ್ಥಿಕ ಚೈತನ್ಯಸ್ವರೂಪದಲ್ಲಿ ಭೇದವು ಇಲ್ಲೆಂಬುದನ್ನು ಏನು ಹೇಳಬೇಕು? ಒಂದು ಪಾರಮಾರ್ಥಿಕ ಚೈತನ್ಯದ ವಿನಾ ಸರ್ವ ಭೇದ ಪ್ರಪಂಚವು ಮಿಥ್ಯೆಯಾಗಿ ರುತ್ತದೆಂದು ತಿಳಿ. ಅದಕ್ಕಾಗಿ ನಿಜವಾದುದಲ್ಲ' ಎಂದು ಹೇಳಿದ್ದಾರೆ. ಇದೇ ನಿಜ ವಾದ ಅರ್ಥವೆಂದು ತಿಳಿ. ಸಂಶಯಪಡಬೇಡ ಎಂಬರ್ಥವು.

ಬಳಿಕ, ಪ್ರತ್ಯಕ್ಷ ತೋರುವ ಭೇದವು ಮಿಥ್ಯೆಯಾಗಿದೆಯೆಂಬುದನ್ನು ತಾವು ಯುಕ್ತಿಯಿಂದ ನಿರಾಕರಣ ಮಾಡಿದಿರಿ. ಪ್ರಮಾಣಪೂರ್ವಕ ಹೇಳಲಿಲ್ಲ. ಮತ್ತು ಯುಕ್ತಿಯಿಂದ ಭೇದವು ಮಿಥ್ಯೆಯೆಂದು ಯಾಕೆ ಹೇಳಬೇಕು? ಅದರಿಂದ ನಮಗೆ ಹಾನಿಯಾದರೂ ಏನು? ಭೇದವು ತೋರುತ್ತಾ ಇರಲಿ. ಎಂದು ಶಂಕೆಯನ್ನು ಮಾಡಿದರೆ, ಭೇದದಿಂದಲೇ ಈ ಜನನ ಮರಣಾತ್ಮಕ ದುಃಖವು ಒದಗಿರುತ್ತದೆ. ದುಃಖಕ್ಕೆ ಮೂಲ ಕಾರಣವಾದದ್ದು ಈ ಭೇದವು. ಆದ್ದರಿಂದ ವಿಚಾರಪೂರ್ವಕ ಭೇದಮಿಥ್ಯಾ ನಿಶ್ಚಯ ಮಾಡುವದರಿಂದ, ಅತ್ಯಂತ ದುಃಖ ನಿವೃತ್ತಿಪೂರ್ವಕ ಪರಮಾನಂದ ಪ್ರಾಪ್ತಿರೂಪ ಪರಮ ಪ್ರಯೋಜನವು ಸಿದ್ಧಿಸುತ್ತದೆ. ಆದ್ದರಿಂದ ಭೇದ ನಿರಾಕರಣವನ್ನು ಯುಕ್ತಿಯಿಂದ ತೋರಿಸಿದ್ದೇವೆ. ಮತ್ತು ಅನುಮಾನ ಪ್ರಮಾಣದಿಂದಲೂ ಭೇದವು ಹಿತವಲ್ಲ. ಎಂಬುದನ್ನು ಹೇಳುತ್ತೇವೆ ಕೇಳು.

**ಮತ್ತೆ ತನಗನ್ಯಮಂ ಪೊತ್ತೊಡದು ಬಾಧೆ ಪಡಿ ।**
**ಸುತ್ತಿರ್ಕು ಭೇದವಾಗಿ ತಲೆಹೊರೆಯಾದ ।**
**ಬುತ್ತಿಯಂತೆಂಬುದನುಮಾನ ॥೧೧॥**

**ಟೀಕಾ:-** ಮತ್ತೆ=ಅನಂತರ, ತನಗನ್ಯಮಂ=ತನಗಿಂತಲೂ ಬೇರೆಯಾದ ದ್ದನ್ನು, ಪೊತ್ತೊಡೆ=ಹೊತ್ತುಕೊಂಡರೆ, ಅದು ಬಾಧೆಪಡಿಸುತ್ತಿರ್ಕು=ಅದು ದುಃಖವನ್ನು ಕೊಡುತ್ತದೆ, ಭೇದವಾಗಿ=ಭೇದವಾಗಿರುವದರಿಂದ, ತಲೆಹೊರೆಯಾದ= ತಲೆಯಮೇಲೆ ಹೊತ್ತ, ಬುತ್ತಿಯಂತೆ=ಬುತ್ತಿಯ ಗಂಟಿನ ಹಾಗೆ, ಎಂಬುದು= ಹೀಗೆ ಅನ್ನುವದು, ಅನುಮಾನ=ಅನುಮಾನ ಪ್ರಮಾಣವಾಗಿರುವದು.

**ತಾತ್ಪರ್ಯ:-** ಭೇದಬುದ್ಧಿಯು ದುಃಖವನ್ನು ಕೊಡುತ್ತದೆ. ಅಭೇದವು ಸುಖವನ್ನು ಕೊಡುತ್ತದೆ. ಆದ್ದರಿಂದ ಭೇದವನ್ನು ನಿರಾಕರಿಸಿ ಅಭೇದವಾದ

ಅದ್ವೈತವನ್ನು ಹೊಂದಿದರೆ, ನಿನಗೆ ಸುಖವಾಗುತ್ತದೆ ಎಂಬುದನ್ನು ಅನುಮಾನ ಪ್ರಮಾಣದಿಂದ ತಿಳಿಸುತ್ತಾರೆ. ಅನುಮಾನ ಪ್ರಮಾಣದಲ್ಲಿ ಪ್ರತಿಜ್ಞಾ, ಹೇತು, ದೃಷ್ಟಾಂತ ಈ ಮೂರು ಅಂಗಗಳಿಂದ ಕೂಡಿಕೊಂಡು ಇರುತ್ತದೆ. ಹೇಗಂದರೆ, 'ತನಗನ್ಯಮಂ ಪೊತ್ತೊಡೆ ಬಾಧೆಪಡಿಸುತ್ತಿರ್ಕು' ಇದು ಪ್ರತಿಜ್ಞಾ ವಾಕ್ಯವು. ಭೇದವಾಗಿ ಇದು ಹೇತು ವಾಕ್ಯವಾಗಿದೆ. 'ತಲೆಹೊರೆಯಾದ ಬುತ್ತಿಯಂತೆ' ಇದು ದೃಷ್ಟಾಂತವಾಗಿದೆ. ಹೀಗೆ ಪ್ರತಿಜ್ಞಾ, ಹೇತು, ದೃಷಾಂತಗಳಿಂದ ಕೂಡಿದ ವಾಕ್ಯಕ್ಕೆ ಅನುಮಾನ ಪ್ರಮಾಣವೆಂದು ಕರೆಯುತ್ತಾರೆ. ಊರಿಂದ ಮತ್ತೊಂದು ಊರಿಗೆ ಹೋಗುವ ಪಾಂಥಸ್ಥನು ಬುತ್ತಿಯನ್ನು ಹೊತ್ತುಕೊಂಡು ನಡೆದು ಹೋಗುತ್ತಿರುತ್ತಾನೆ. ಅವನು ಎಲ್ಲಿಯವರೆಗೆ ಒಯ್ಯುತ್ತಾನೆ. ಅವನು ಆ ಗಂಟನ್ನು ತಲೆಯ ಮೇಲೆ ಹೊತ್ತು ಇರುವನೋ, ಅಲ್ಲಿಯತನಕ ಅದು ಗಂಟು ಅವನಿಗೆ ಭಾರವಾಗಿ ದುಃಖ ಕೊಡುತ್ತದೆ. ಹಸಿವೆಯಾದ ಕೂಡಲೇ ದಾರಿಕಾರನು ನೀರನ್ನು ಕಂಡು, ಗಂಟನ್ನು ಬಿಚ್ಚಿ ಬುತ್ತಿಯನ್ನು ಉಂಡು, ಅರಿವೆ ಝಾಡಿಸಿ ಸುಖದಿಂದ ಕೈಗಳನ್ನು ಬೀಸುತ್ತಾ ನಡೆಯುತ್ತಾನೆ. ಆಗ್ಯೆ ಅವನಿಗೆ ಹೊಟ್ಟೆಯೊಳಗಿರುವ ಬುತ್ತಿಯು ಭಾರವಾಗುವದಿಲ್ಲ. ದುಃಖವನ್ನೂ ಕೊಡುವದಿಲ್ಲ. ಇದ್ದ ಹಸಿವೆ, ದುಃಖವನ್ನು ಕಳೆದು ಸುಖವನ್ನು ಕೊಡುತ್ತದೆ. ಇದಕ್ಕೆ ಕಾರಣವೇನಂದರೆ, ಭೇದರೂಪದಿಂದ ತಲೆಯ ಮೇಲೆ ಭಾರವಾದ ಬುತ್ತಿಯು ಈಗ ಹೊಟ್ಟೆಯಲ್ಲಿ ಅಭೇದವಾಗಿರುವದೇ ಕಾರಣವಾಗಿರುತ್ತದೆ. ಈ ದೃಷ್ಟಾಂತದಿಂದ ಅನುಭವಕ್ಕೆ ಬಂದದ್ದು ಏನಂದರೆ, ಬುತ್ತಿಯ ಭೇದವು ದುಃಖವಾಯಿತು. ಅಭೇದವು ಸುಖವಾಯಿತು. ಈ ಅನುಭವದಿಂದಲೂ, ಅನುಮಾನ ಪ್ರಮಾಣದಿಂದಲೂ ವಿಚಾರ ಮಾಡಿ ನೋಡುತ್ತಿರಲಿಕ್ಕೆ, ಭೇದವು ದುಃಖಜನಕವಾದ್ದರಿಂದ ನಿರಾಕರಿಸಲಿಕ್ಕೆ ಯೋಗ್ಯವಾಗಿದೆ. ಅಭೇದವು ಸುಖಮಯವಾದ್ದರಿಂದ ಸ್ವೀಕರಿಸಲಿಕ್ಕೆ ಯೋಗ್ಯವಾಗಿದೆ ಎಂಬ ಭಾವವು. ಈ ಅನುಮಾನ ಪ್ರಮಾಣವನ್ನು ಶ್ರೀ ಶಂಕರ ಭಗವತ್ಪಾದಾಚಾರ್ಯರು ಸ್ವಾನುಭೂತಿನಾಮಕ ಗ್ರಂಥದಲ್ಲಿ ಹೇಳಿದ್ದಾರೆ. ಅದೇ ಇಲ್ಲಿ ಉದಾಹರಿಸಲ್ಪಟ್ಟಿರುತ್ತದೆ.

ಬಳಿಕ, ಭೇದವಾದಿಯು 'ತಾವು ಇಲ್ಲಿಯ ಪರ್ಯಂತರ ನಾನಾಯುಕ್ತಿ ಅನುಮಾನಗಳಿಂದ ಭೇದವು ಸಂಭವಿಸುವದಿಲ್ಲೆಂದೂ, ಅದು ದುಃಖಕರವೆಂದೂ, ಪ್ರತಿಪಾದನೆಯನ್ನು ಮಾಡಿದಿರಿ. ಹೀಗೆ ತಾವು ಹೇಳುವದು ನಿಜವೇ ! ಆದರೆ, ಭೇದವು ಹೇಗೆ ಸಿದ್ಧಿಯಾಗಲಿಲ್ಲೊ, ಹಾಗೆ ಅಭೇದವೂ ಸಿದ್ಧಿಸುವದಿಲ್ಲ. ಯಾಕಂದರೆ, ಭೇದಾಭೇದಗಳೆರಡು ಕಾದಾಡುವ ಟಗರುಗಳಂತೆ ಪರಸ್ಪರ ವಿರೋಧಿಗಳಾಗಿರುತ್ತವೆ. ಒಮ್ಮೆ ಭೇದಕ್ಕೆ ಜಯವಾಗುತ್ತದೆ. ಭೇದವನ್ನು ಕಂಡು ಅಭೇದವೆಂದು ತಾವು ಹೇಳುವಂತೆ, ನಾವು ಅಭೇದವನ್ನು ಕಂಡು ಭೇದವೆಂದು

ಹೇಳುತ್ತೇವೆ. ಆದ್ದರಿಂದ ಭೇದಾಭೇದ ಶಬ್ದಗಳ ಪ್ರವೃತ್ತಿಯು ಗುಣಾಗುಣ ಗಳಂತೆ ಪರಸ್ಪರ ಸಾಪೇಕ್ಷಗಳಾಗಿವೆ. ಅದರಿಂದ ಸಮಾನ ಬಲಸತ್ತಾವುಳ್ಳವು ಗಳಾಗಿವೆ. ಭೇದಸಿದ್ಧಿಯಾಗಿದ್ದರೆ, ಅಭೇದವೂ ಸಿದ್ಧಿಯಾಗುತ್ತಿತ್ತು. ಭೇದ ಸಿದ್ಧಿಸದೆ ಹೋದ್ದರಿಂದ ಅಭೇದವು ಸಿದ್ಧಿಸುವದಿಲ್ಲ. ಹೇಗಂದರೆ, ಅಭೇದವೆಂಬ ಈ ನಾಮವು ಬರಬೇಕಾದರೆ, ಪೂರ್ವದಲ್ಲಿ ಎರಡುವಸ್ತುಗಳು ಬೇರೆಯಾಗಿರಲಿಕ್ಕೆ ಬೇಕು. ಅನಂತರ ಅಭೇದ ಶಬ್ದವು ಬರುತ್ತದೆ. ಹಾಲು ಮತ್ತು ನೀರು, ಎರಡು ಪದಾರ್ಥಗಳು ಬೇರೆ ಬೇರೆ ಇದ್ದು ಕೂಡಿದರೆ, ಅಭೇದ ಹೆಸರು ಬರು ತ್ತದೆ. ಶಿವಜೀವರು ಬೇರೆಯಿದ್ದು ಕೂಡಿಸಿದಮೇಲೆ ಜೀವಶಿವೈಕ್ಯವೆಂಬ ಹೆಸರು ಬರುವದು. ಇದೇರೀತಿ ಅಭೇದವಾಚಕಪದವು ಎರಡುವಸ್ತುಗಳ ಸಂಬಂಧದಿಂದ ಬಂದಿರುತ್ತದೆ. ಧರ್ಮಿಪ್ರತಿಯೋಗಿ ಸಂಬಂಧದಿಂದ ಭೇದವು ತೋರಿದಂತೆ, ಅಭೇದವಾದರೂ ಎರಡು ವಸ್ತುಗಳ ಸಂಬಂಧದಿಂದ ತೋರುತ್ತದೆ. ಹಾಲಿನಲ್ಲಿ ನೀರು ಸೇರುತ್ತವೆ. ನೀರಿನಲ್ಲಿ ಹಾಲು ಸೇರಿಲ್ಲ. ಆದ್ದರಿಂದ ಲೌಕಿಕರು ಹಾಲಿ ನಲ್ಲಿ ನೀರು ಕೂಡಿವೆ. ಎಂದು ಹೇಳುವರು. ಅರ್ಥಾತ್ ನೀರಿನ ಭೇದವು ಹಾಲಿನಲ್ಲಿ ಆಗಿದೆ. ಆದ್ದರಿಂದ ಪ್ರತಿಯೋಗಿಯಾದ ನೀರಿನ ಅಭೇದವು ಧರ್ಮಿ ಯಾದ ಹಾಲಿನಲ್ಲಿರುತ್ತದೆ. ಎಂದು ಹೇಳಿದಂತಾಯಿತು. ಧರ್ಮಿಯಾದ ಹಾಲಿ ನಲ್ಲಿರುವ ಅಭೇದವು, ಸ್ವರೂಪ ಅಭೇದವೋ, ಧರ್ಮ ಅಭೇದವೋ ? ಹೇಳಿರಿ. ಧರ್ಮ ಅಭೇದವೆಂದು ಹೇಳಬೇಕಾಗುತ್ತದೆ. ಸ್ವರೂಪ ಅಭೇದವೆಂದು ಹೇಳ ಲಿಕ್ಕೆ ಬರುವದಿಲ್ಲ. ಯಾಕಂದರೆ ಆ ಅಭೇದವು ನೀರಿನದಾಗಿದ್ದು ಹಾಲಿನಲ್ಲಿರು ತ್ತದೆ. ಅಂದರೆ, ಧರ್ಮಿಯಾದ ಹಾಲಿನಗಿಂತಲೂ ಭೇದವೋ ? ಅಭೇದವೊ? ಎಂದು ಕೇಳಿದರೆ, ಅಭೇದವೆಂದೇ ಹೇಳಬೇಕಾಗುತ್ತದೆ. ಯಾಕಂದರೆ, ಅಭೇದವು ಭೇದವಾಗಿದೆ. ಅಂದರೆ ನಿಮ್ಮ ಅಭೇದ ಪಕ್ಷವು ಹೋಗುತ್ತದೆ. ಅದರಿಂದ ಅಭೇದ ಅಭೇದವಾಗಿದೆಯೆಂದು ಹೇಳಬೇಕಾಗುತ್ತದೆ. ಧರ್ಮಿಯಾದ ಹಾಲಿನಲ್ಲಿ ನೀರಿನ ಅಭೇದವು ಅಭೇದವಾಗಿದೆ ಎಂಬಲ್ಲಿ ಅಭೇದದ ಅಭೇದವನ್ನು ಈ ಅಭೇದವೇ ಮಾಡಿತೋ ಬೇರೊಂದು ಅಭೇದವು ಬಂದು ಮಾಡಿತೋ ? ಎಂದು ಕೇಳಿದರೆ, ಇದರಲ್ಲಿರುವ ಅಭೇದವೇ ಅಭೇದವನ್ನು ಮಾಡಿತು. ಎಂದು ಹೇಳಬಹುದು. ಹೀಗೆ ಹೇಳುವದರಿಂದ ಅಭೇದವನ್ನು ಮಾಡಿದ್ದು ತಾನೇ, ಮಾಡಿಸಿಕೊಂಡದ್ದು ತಾನೇ ಆಯಿತು. ಇದರಿಂದ ಆತ್ಮಾಶ್ರಯ ದೋಷವು ಬರುತ್ತದೆ. ಯಾಕಂದರೆ, ತಾನೇಕರ್ತೃ, ತಾನೇ ಕರ್ಮ, ಕರ್ಮಕರ್ತೃ ತಾನೇಯಾದ್ದರಿಂದ ಆತ್ಮಾಶ್ರಯ ದೋಷವು ಬರುತ್ತದೆಂದು ತಿಳಿಯತಕ್ಕದ್ದು. ಈ ದೋಷವನ್ನು ಕಳೆಯುವದ ಕ್ಕಾಗಿ ತಾವುಬೇರೊಂದು ಅಭೇದವನ್ನು ಹೇಳಿದರೆ, ಅನ್ಯೋನ್ಯಾಶ್ರಯ, ಮೂರನೆ ಯದು ಚಕ್ರಿಕಾಪತ್ತಿ, ನಾಲ್ಕನೆಯದು ಅನವಸ್ಥಾ ಈ ರೀತಿ ದೋಷಗಳು ಬರು ವುದರಿಂದ ಅಭೇದವೂ ಭೇದದಂತೆ ಸಂಭವಿಸುವದಿಲ್ಲ. ಮತ್ತು ಹಾಲಿನಲ್ಲಿ ಅಭೇ

ದವು ಸ್ವರೂಪದಿಂದ ಇರುತ್ತದೆಂದು ಹೇಳಿದರೆ, ಪ್ರತಿಯೋಗಿಯಾದ ನೀರಿನ ಅಪೇಕ್ಷೆಯನ್ನು ಮಾಡಬಾರದಾಗಿತ್ತು. ಮಾಡುತ್ತದೆ. ಅದರಿಂದ ಧರ್ಮಿಯಾದ ಹಾಲಿನಲ್ಲಿ ಸ್ವರೂಪ ಅಭೇದವನ್ನು ಹೇಳುವದು ಸರಿ ಕಾಣುವದಿಲ್ಲ.

ಮತ್ತು ಘಟಪಟಾದಿ ಸಕಲ ಜಡಗಳಲ್ಲಿ ಭೇದವೇ ಇಲ್ಲೆಂದು ತಾವು ಹೇಳಿದರೆ, ಸಕಲ ವ್ಯವಹಾರಗಳು ಲೋಪವಾಗುವ ಪ್ರಸಂಗಬರಬಹುದು. ಘಟವನ್ನು ತೆಗೆದುಕೊಂಡು ಬಾ ಎಂದು ಹೇಳಲು; ಅವನು ಪಟವನ್ನು ತಂದರೆ, ಅದಕ್ಕೆ ತಾವು ಒಪ್ಪಲೇ ಬೇಕಾಗುವದು. ಯಾಕಂದರೆ; ಎರಡಕ್ಕು ಭೇದವಿಲ್ಲ. ಎಂದು ತಾವೇ ಹೇಳಿರುವಿರಿ. ಘಟವು ನೀರನ್ನು ತರಲಿಕ್ಕೆ ಬರುತ್ತದೆ. ಪಟವು ಶೀತನಿವಾರಣೆಗೆ ಹೊರಲಿಕ್ಕೆ ಬರುತ್ತದೆ. ಹೀಗೆ ಪ್ರಯೋಜನಗಳಿಂದ ಭಿನ್ನ ಭಿನ್ನವಾಗಿವೆ. ಆದ್ದರಿಂದ ಅಭೇದವೆಂದು ಹೇಳಲಿಕ್ಕೆ ಬರುವದಿಲ್ಲ. ಹೇಳಿದರೆ, ವ್ಯವಹಾರವು ಲೋಪವಾಗುತ್ತದೆ.

ಮತ್ತು ತಾವು **'ತಲೆ ಹೊರೆಯಾದ ಬುತ್ತಿಯಂತೆ'** ಎಂಬ ಅನುಮಾನ ಪ್ರಮಾಣವನ್ನು ಉದಾಹರಿಸಿ, ಭೇದವು ದುಃಖಕ್ಕೆ ಕಾರಣವಾಗಿದೆ. ಎಂದು ಹೇಳಿದಿರಿ. ಇದರಂತೆ ಅಭೇದವು ದುಃಖಕ್ಕೆ ಕಾರಣವಾಗಿದೆ. ಮತ್ತು ಭೇದವು ಸುಖಕ್ಕೆ ಹೇತುವಾಗಿದೆ. ಎಂಬಲ್ಲಿ ನಾವು **ಅನುಮಾನ** ಪ್ರಮಾಣವನ್ನು ಹೇಳುತ್ತೇವೆ. ಹೇಗಂದರೆ; ಯಾವದು ತನ್ನಲ್ಲಿ ಅಭೇದವಾಗಿದ್ದರೆ ದುಃಖಕೊಡುತ್ತದೆ. **(ಪ್ರತಿಜ್ಞಾ)** ಅಭೇದವಾಗಿರುವದರಿಂದ **(ಹೇತು)** ಹೊಟ್ಟೆಯೊಳಗಿನ ಜಂತಿನಂತೆ **(ದೃಷ್ಟಾಂತ)** ಈ ಪ್ರತಿಜ್ಞಾ, ಹೇತು, ದೃಷ್ಟಾಂತಗಳಿಂದ ಕೂಡಿದ ಈ ಅನುಮಾನವು ನಿಮ್ಮ ಅನುಮಾನಕ್ಕೆ **ಸತ್ಪ್ರತಿ ಪಕ್ಷ**ವಾಗಿರುತ್ತದೆ. ಎಲ್ಲಿಯವರೆಗೆ ಹೊಟ್ಟೆಯಲ್ಲಿ ಜಂತುಗಳು ಅಭೇದವಾಗಿರುವವೋ, ಅಲ್ಲಿಯ ತನಕ ತನಗೆ ಅವುಗಳಿಂದ ದುಃಖವಾಗುತ್ತದೆ. ಬಳಿಕ ಜಂತಿನ ಪುಡಿಯನ್ನು ಸೇವಿಸಿ, ಮರುದಿನ ಔಡಲ ಎಣ್ಣೆಯನ್ನು ಕುಡಿದು, ಭೇದಿದ್ವಾರಾ ಜಂತುಗಳನ್ನು ಹೊರಗೆ ಹಾಕಿದಾಕ್ಷಣಕ್ಕೆ ಸುಖವಾಗುತ್ತದೆ. ಜಂತುಗಳು ಹೊಟ್ಟೆಯಲ್ಲಿ ಅಭೇದವಾಗಿರುವಾಗ ದುಃಖವಾಯಿತು. ಭೇದಿದ್ವಾರಾ ಹೊರಗೆ ಹಾಕಿದಾಗ್ಯೆ ಸುಖವಾಯಿತು. ಇದರಿಂದ ನಮಗೆ ನಿಶ್ಚಯವಾದದ್ದೇನಂದರೆ, ಅಭೇದದಿಂದ ಸುಖವಿಲ್ಲ. ಭೇದದಿಂದಲೇ ಸುಖವಾಗುತ್ತದೆಂಬ ಅನುಭವವಾಯಿತು. ಆದ್ದರಿಂದ ಭೇದವೇ ಪ್ರಯೋಜನವುಳ್ಳದ್ದಾಗಿದೆ. ಎಂದು ಭೇದವಾದಿಯು ಉಕ್ತರೀತಿ ಅನೇಕ ಊಹಾಪೋಹ ಕಲ್ಪನೆಯನ್ನುಮಾಡಿ, ಅನೇಕ ವಿಧದಿಂದ ಶಂಕೆಗಳನ್ನುಮಾಡಿದನು. ಅದನ್ನು ಕೇಳಿ, ಅಭೇದವಾದಿ ಸಿದ್ಧಾಂತಿಯು ಮುಂದೆ ಹೇಳುವ ಪ್ರಕಾರ ಭೇದವಾದಿಗೆ ಉತ್ತರಗಳನ್ನು ಕೊಡುತ್ತಲಿದ್ದಾರೆ.

**ಅಭೇದವಾದಿ ಸಿದ್ಧಾಂತಿಯು** 'ನೀನು ಹೇಳಿದ ಯುಕ್ತಿ ಅನುಮಾನಗಳು ಸರಿಯೆ! ಆದರೆ, ನಿನ್ನ ಯುಕ್ತಿ ಅನುಮಾನಗಳು ಶ್ರುತಿಪ್ರಮಾಣ ಹೀನ

ಗಳಾದ್ದರಿಂದ **ಅಬಲಗಳಾಗಿವೆ.** ನಮ್ಮ ಯುಕ್ತಿ ಅನುಮಾನಗಳು ಶ್ರುತಿಪ್ರಮಾಣ ಸಮ್ಮತಗಳಾದ್ದರಿಂದ **ಪ್ರಬಲಗಳಾಗಿವೆ.** ಪ್ರಬಲಯುಕ್ತಿ ಅನುಮಾನಗಳಿಂದ ಅಬಲಯುಕ್ತಿ ಅನುಮಾನಗಳು **ಬಾಧಿಸಿಕೊಳ್ಳುತ್ತವೆ.** ಅದರಿಂದ ನಾವು ಉದಾಹರಿಸಿದ ಯುಕ್ತ್ಯನುಮಾನಗಳು ಸಮೀಚೀನಗಳು ಆಗಿವೆ. **'ಶ್ರುತಿಮತಸ್ತರ್ಕೋಽನುಸಂಧೀಯತಾಂ'** ತರ್ಕ, ಅನುಮಾನ, ಯುಕ್ತಿ, ಇವು ಶ್ರುತಿ ಸಮ್ಮತವಾಗಿದ್ದರೆ ಗ್ರಹಿಸಬೇಕು. ಇಲ್ಲದಿದ್ದರೆ ತ್ಯಜಿಸಬೇಕು. ಎಂದು ಶ್ರೀ. ಶಂಕರಾಚಾರ್ಯರು ಹೇಳಿರುವರು. ಮತ್ತು **'ಶ್ರುತಿವಿರಹಿತ ಮತವನುಳಿವುದೆ ಛಂದ'** ಶ್ರುತಿಪ್ರಮಾಣವಿಲ್ಲದ ಮತವನ್ನು ಬಿಡುವದೇ ಒಳ್ಳೇದು. ಎಂದು ನಿಜಗುಣರು ಹೇಳಿರುವರು. ಆದ್ದರಿಂದ ಶ್ರುತಿಪ್ರಮಾಣವಿಲ್ಲದ ನೂರಾರು ಯುಕ್ತ್ಯನುಮಾನಗಳನ್ನು ಹೇಳಿದರೂ; ಅವುಗಳಿಂದ ಏನು ಪ್ರಯೋಜನವಿಲ್ಲ. **ಭೇದವು ದುಃಖರೂಪವಾಗಿದೆ. ಅಭೇದವು ಸುಖರೂಪವಾಗಿದೆ.** ಎಂಬುವದಕ್ಕೆ ನಿನಗೆ ಶ್ರುತಿ ಪ್ರಮಾಣವನ್ನು ಹೇಳುತ್ತೇನೆ ಕೇಳು. ಎಂದು ಹೇಳುತ್ತಲಿದ್ದಾರೆ.

**ವೇದನಿವಹಂ ದ್ವಿತೀಯಾದ್ವೈಭಯಂ ಭವ ।**
**ತ್ಯಾದಿ ವಾಕ್ಯಂಗಳಿಂದೆ ಸಾರುವದಾಗಿ ।**
**ಭೇದವದು ಭೀತಿಕರವಕ್ಕು** ॥೧೨॥

**ಟೀಕಾ:-** ವೇದನಿವಹಂ=ವೇದಸಮೂಹವು, ದ್ವಿತಿಯಾತ್=ಭೇದದಿಂದ, ವೈ=ನಿಶ್ಚಯವಾಗಿ, ಭಯಂ=ದುಃಖವು, ಭವತಿ=ಆಗುತ್ತದೆ, ಆದಿವಾಕ್ಯಂಗಳಿಂದೆ=ಇವೇ ಮೊದಲಾದ ವಾಕ್ಯಗಳಿಂದ, ಸಾರುವದಾಗಿ=ಹೇಳುವದರಿಂದ, ಭೇದವದು=ಭೇದವು, ಭೀತಿಕರವಕ್ಕು=ದುಃಖವನ್ನುಂಟು ಮಾಡುವದಾಗಿರುತ್ತದೆ.

**ತಾತ್ಪರ್ಯ:-** ನಾವು ಪ್ರತಿಪಾದಿಸಿದ ಅಭೇದವು ಸುಖವಾಗಿದೆ. ಎಂಬಲ್ಲಿ ಹಾಗು ಭೇದವು ದುಃಖಕರವೆನ್ನುವದಕ್ಕೂ ಶ್ರುತಿಯಿದೆ. ಆ ಶ್ರುತಿಯು ಯಾವದು ? ಅಂದರೆ, **'ದ್ವಿತೀಯಾತ್ ವೈ ಭಯಂ ಭವತಿ'** ಜೀವೇಶ್ವರರ ಭೇದವನ್ನಾಗಲಿ, ಯಾವದೇ ಭೇದವನ್ನಾಗಲಿ, ನಿಜವೆಂದು ಯಾವನು ತಿಳಿಯುತ್ತಾನೋ, ಅವನು ದುಃಖದಿಂದ ಕೂಡುತ್ತಾನೆ. ಅವನಿಗೆ **ದುಃಖವು** ಅವಶ್ಯವಾಗುತ್ತದೆ. ಹೀಗೆ ಶ್ರುತಿಯು ಭೇದದರ್ಶಿಗೆ ದುಃಖವೇ ಫಲವೆಂದು ಹೇಳಿರುತ್ತದೆ. ಮತ್ತು ಯಾವನು ಅಭೇದ ನಿಶ್ಚಯ ಜ್ಞಾನವುಳ್ಳವನಾಗುವನೋ, **ಅವನು ಸುಖವುಳ್ಳವನಾಗುತ್ತಾನೆಂದೂ** ಹೇಳಿದೆ. ಆದ್ದರಿಂದ ಅಭೇದ ದುಃಖಕರವೆಂದು ಹೇಳಿದ ನಿನ್ನ ಯುಕ್ತ್ಯನುಮಾನುಗಳು ಪ್ರಮಾಣವಿಲ್ಲದ್ದರಿಂದ ನಿರಾಕರಿಸಲ್ಪಟ್ಟವೆಂದು ತಿಳಿ.

**ಬಳಿಕ,:-** ಭೇದವು ದುಃಖರೂಪವಾಗಿರುವದಲ್ಲದೆ, ಮಿಥ್ಯೆಯೂ ಆಗಿರುತ್ತದೆ. ಅಭೇದವು ಸತ್ಯವಾಗಿದೆ. ಅದು ಸುಖರೂಪ ಆತ್ಮಸ್ವರೂಪವೇ ಆಗಿದೆ, ಇದು ನಿಮಗೆ ಹೇಗೆ ಗೊತ್ತಾಯಿತು? ಎಂದು ಕೇಳಬಹುದು. ಇದನ್ನು ಶ್ರುತಿಯೇ ಪ್ರತಿಪಾದನೆಯನ್ನು ಮಾಡುತ್ತದೆಂದು ಹೇಳುತ್ತಾರೆ.

**ದೇಹಾದಿ ಭೇದವಿದನೂಹಿಸಿದೊಡಂ ಮಹಾ ।**
**ಮೋಹಮಯ ಕಲ್ಪಿತವೆಯ್ಸೆ ವೇದವೇ ।**
**ನೇಹ ನಾನಾಸ್ತಿ ಯೆನಲಾಗಿ ॥೧೩॥**

**ಟೀಕಾ:-** ದೇಹಾದಿ ಭೇದವಿದನು=ಈದೇಹಾದಿಗಳ ಮೂಲಕವಾದ ಆತ್ಮಭೇದವನ್ನು, ಊಹಿಸಿದೊಡಂ=ವಿಚಾರಮಾಡಿನೋಡಿದರೆ, ಮಹಾಮೋಹಮಯ ಕಲ್ಪಿತವೆಯ್ಸೆ = ಅಜ್ಞಾನ ಕಲ್ಪಿತವಾಗಿರುತ್ತದೆಂದು ನಿಶ್ಚಯಿಸಲ್ಪಡುತ್ತದೆ, ವೇದವೇ=ಶ್ರುತಿಯೇ, ಇಹ=ಬ್ರಹ್ಮದಲ್ಲಿ, ನಾನಾ=ಅನೇಕತ್ವವು, ನಾಸ್ತಿ=ಇರುವದಿಲ್ಲ, ಎನಲಾಗಿ=ಹೀಗೆ ಹೇಳುವದರಿಂದ.

**ತಾತ್ಪರ್ಯ:-** "**ನೇಹನಾನಾಸ್ತಿಕಿಂಚನ**" ಎಂಬ ಶ್ರುತಿಯು ಚೈತನ್ಯ ಬ್ರಹ್ಮದಲ್ಲಿ ಈ ತೋರುವ ನಾನಾಭೇದಗಳು ಇಲ್ಲೆಂದು ನಿರಾಕರಿಸುತ್ತದೆ. ಹೀಗೆ ಶ್ರುತಿಯು ಭೇದವನ್ನು ನಿರಾಕರಿಸುವದರಿಂದ ಭೇದವು **ಕಲ್ಪಿತ ಮಿಥ್ಯೆಯಾಗಿರು**ತ್ತದೆಂಬ ಅರ್ಥವನ್ನು ಕಲ್ಪನಾ ಮಾಡಬೇಕಾಗುತ್ತದೆ. ಭೇದವು ಸತ್ಯವಾಗಿದ್ದರೆ ಶ್ರುತಿಯು ನಿರಾಕರಿಸುತ್ತಿರಲಿಲ್ಲ. ನಿರಾಕರಿಸುವದರಿಂದ ಭೇದವು ಅಜ್ಞಾನಕಲ್ಪಿತವಾದದ್ದು ಎಂಬ ಅರ್ಥದ **ಕಲ್ಪನೆ**ಯಾಗುತ್ತದೆ. ಭೇದನಿರಾಕರಣದ ಶ್ರುತಿಯನ್ನು ಕೇಳಿ ಮಿಥ್ಯಾರ್ಥವನ್ನು ಕಲ್ಪನೆಮಾಡುವದರಿಂದ ಇದು **ಶ್ರುತಾರ್ಥಾಪತ್ತಿ** ಪ್ರಮಾಣವೆನಿಸುವದು.

ಭೇದವು ಅಜ್ಞಾನಕಲ್ಪಿತವಾದ್ದರಿಂದ ರಜ್ಜುಸರ್ಪದಂತೆ ಮಿಥ್ಯೆಯಾಗಿರುತ್ತದೆ. ಈಕಾರಣದಿಂದಲೇ ಭೇದವು ನೈಜವಾದುದಲ್ಲಂ ಎಂದು ಹೇಳುತ್ತಾಬಂದಿದ್ದಾರೆ. ಭೇದಕ್ಕೆ ಮಿಥ್ಯೆಯೆಂದು ಹೇಳಿ ಅಭೇದವನ್ನು ಅಂಗೀಕರಿಸಿದರೆ, ವ್ಯವಹಾರಕ್ಕೆ ಲೋಪಬರುತ್ತದೆಂದು ನೀನು ಏನು ಶಂಕೆಯನ್ನು ಮಾಡಿದ್ದೆಯೋ. ಅದಕ್ಕೆ ಉತ್ತರವನ್ನು ಕೊಟ್ಟಂತಾಯಿತು. ಏನಂದರೆ; ಅಭೇವ ಅದ್ವೈತರೂಪ ಪಾರಮಾರ್ಥಿಕ ಸತ್ಯತ್ವವನ್ನು ಸ್ವೀಕರಿಸಿ, ಅದಕ್ಕೆ ಭಿನ್ನಗಳಾದ ಅನ್ಯಗಳು ಸತ್ಯವಲ್ಲ. ಎಂದು ನಿರಾಕರಿಸುತ್ತೇವೆ. ಅಂದರೆ ಭೇದವು ನೈಜವಲ್ಲ. ಎಂಬಲ್ಲಿ ಭೇದಕ್ಕೆ ಪಾರಮಾರ್ಥಿಕ ಸತ್ಯತ್ವವನ್ನು ನಿಷೇಧ ಮಾಡಿರುತ್ತವೆಂದುತಿಳಿ. ವ್ಯಾವಹಾರಿಕ ಕಲ್ಪಿತ ಭೇದವು ಸತ್ಯವಾಗಿದೆ, ಮಿಥ್ಯಾರೂಪದಿಂದ ತೋರುತ್ತಿರುತ್ತದೆ. ಅದರಿಂದ ವ್ಯವಹಾ-

ರಕ್ಕೆ ಲೋಪವೂ ಬರುವದಿಲ್ಲ. ಸತ್ಯವಾದರೆ ವ್ಯವಹಾರವಿರುವದು. ಮಿಥ್ಯೆಯಾದರೆ ವ್ಯವಹಾರ ಸಂಭವಿಸದು. ಎಂದು ನೀನು ಶಂಕೆಯನ್ನು ಮಾಡಬಹುದು. ಇದು ಯೋಗ್ಯವಲ್ಲ. ಯಾಕಂದರೆ, ಸ್ವಪ್ನದಲ್ಲಿ ಪದಾರ್ಥಗಳು ಕಲ್ಪಿತ ಮಿಥ್ಯೆಗಳಾಗಿದ್ದರೂ ವ್ಯವಹಾರವು ನಡೆದಿರುವದಿಲ್ಲವೇನು? ಇದರಂತೆ ಈ ದೃಶ್ಯಮಾನ ನಾನಾ ಪ್ರಕಾರದ ಭೇದವಾದರೂ ಕಲ್ಪಿತ ಮಿಥ್ಯೆಯಾಗಿದೆ. ವ್ಯವಹಾರವು ನಡೆದಿರುತ್ತದೆ. ಅದರಿಂದ ಯಾವ ಬಾಧಕವು ಇಲ್ಲ. ಅರ್ಥಾತ್ ಶ್ರುತಿಯು ಭೇದ ನಿರಾಕರಿಸಿದಂತೆ; ಅಭೇದವನ್ನು ನಿರಾಕರಣ ಮಾಡಲಿಲ್ಲ. ಇದರಿಂದ ಅಭೇದರೂಪ ಅದ್ವೈತವು ಸತ್ಯವೆಂದೂ, ಭೇದರೂಪ ದ್ವೈತಪ್ರಪಂಚವು ಮಿಥ್ಯೆಯೆಂದು ನಿಶ್ಚಯಿಸಲ್ಪಡುತ್ತದೆ.

**ಬಳಿಕ,:-** ಭೇದವು ದುಃಖರೂಪ, ಕಲ್ಪಿತವಾದ್ದರಿಂದ ಮಿಥ್ಯೆಯೆಂಬುದನ್ನು ಹೇಳುವದಲ್ಲದೆ, ಭೇದಕ್ಕೆ ಶ್ರುತಿಯು **ನಿಂದೆಯನ್ನು** ಮಾಡುತ್ತದೆಂದು ಹೇಳುತ್ತಾರೆ.

**ಮೃತ್ಯೋಃ ಸ್ಸಮೃತ್ಯುವೆಂದುತ್ತಮ ಶ್ರುತಿ ನಿಂದಿ।**
**ಸುತ್ತಿರ್ಪುದಾಗಿ. ಭೇದವೆಂಬುದು ನಿಜಂ।**
**ಬೆತ್ತುದಲ್ಲೆಂದು ತಿಳಿಪುತ್ರ ॥೧೪॥**

**ಟೀಕಾ:-** ಸಃ=ಆ ಭೇದದರ್ಶಿಯು, ಮೃತ್ಯೋಃ=ಅವಿದ್ಯಾರೂಪ ಮೃತ್ಯುವಿನಿಂದ, ಮೃತ್ಯುಂ=ಜನನ ಮರಣ ರೂಪ ಮೃತ್ಯುವನ್ನು, ಆಪ್ನೋತಿ=ಹೊಂದುತ್ತಾನೆಂದು, ಉತ್ತಮ ಶ್ರುತಿ=ಪ್ರಬಲ ಶ್ರುತಿ ಪ್ರಮಾಣವು, ನಿಂದಿಸುತ್ತಿರ್ಪುದಾಗಿ=ತಿರಸ್ಕಾರ ಮಾಡುವದರಿಂದ, ಭೇದವೆಂಬುದು=ಭೇದವೆಂದು ಹೇಳಿಸಿಕೊಳ್ಳುವಂಥಾದ್ದು, ನಿಜಂ ಬೆತ್ತುದು=ಸತ್ಯವನ್ನು ಹೊಂದುವಂಥಾದ್ದು, ಅಲ್ಲೆಂದು=ಆಗುವದಿಲ್ಲೆಂದು, ತಿಳಿಪುತ್ರ=ಎಲೈ ಶಿಷ್ಯನೇ ನೀನು ತಿಳಿ.

**ತಾತ್ಪರ್ಯ:-** 'ಅಭಯಂ ವೈಜನಕ ಪ್ರಾಪ್ನೋಸಿ, ಎಂಬ ಶ್ರುತಿಯು ಅಭೇದ ದರ್ಶಿಯು ಯಾವಾಗಲೂ ಸುಖವುಳ್ಳವನಾಗುತ್ತಾನೆಂದು ಸ್ತುತಿಸುತ್ತದೆ. ಭೇದದರ್ಶಿಯು ಪುನಃ ಪುನಃ ಜನನ ಮರಣಾತ್ಮಕ ದುಃಖವನ್ನೇ ಹೊಂದುತ್ತಾನೆಂದು ನಿಂದಿಸುತ್ತದೆ. **'ಮೃತ್ಯೋಃಸಮೃತ್ಯುಂ'** ಈ ಶ್ರುತಿಯು ಭೇದದರ್ಶಿಗೆ ದುಃಖವಾಗುತ್ತದೆಂದು ಹೇಳುತ್ತದೆ. ಅರ್ಥಾತ್ ಶ್ರುತಿಯು ಅಭೇದದಸ್ತುತಿಯನ್ನೂ ಭೇದನಿಂದೆಯನ್ನೂ ಮಾಡಿರುತ್ತದೆ. ಈ ಕಾರಣದಿಂದ ಭೇದವು ನಿಜವಲ್ಲ. ಎಂಬುದನ್ನು ನಿಶ್ಚಯಮಾಡು. ಎಂದು ಗುರುಗಳು ಶಿಷ್ಯನನ್ನು ಕುರಿತು ಹೇಳಿರುವರು. ಶ್ರುತಿಗಳ ವಿಶೇಷವಾದ ಅರ್ಥಗಳನ್ನು ಶ್ರುತ್ಯರ್ಥ ಪ್ರಕಾಶಿಕೆಯಲ್ಲಿ ನೋಡಬೇಕು. ಅವನ್ನು ಗ್ರಂಥದ ಅಂತ್ಯದಲ್ಲಿ ಕೊಟ್ಟಿರುತ್ತೇವೆ.)

**ಭೇದವಾದಿಯು** 'ಭೇದವು ಇಲ್ಲ. ಅದು ಮಿಥ್ಯೆಯಾಗಿದೆ. ದುಃಖಕ್ಕೆ ಕಾರಣವಾಗಿದೆ. ನಿರಾಕರಿಸಲ್ಪಟ್ಟಿದೆ. ಹೀಗೆ ಶ್ರುತಿಗಳು ಸಾರುತ್ತವೆಂದು ಹೇಳಿದಿರಿ. ಇದೇನು ಸರಿಯೆ; ಆದರೆ, ಅಭೇದವು ಶ್ರುತಿಗಳಿಂದ ಪ್ರತಿಪಾದಿಸಲ್ಪಟ್ಟಂತೆ, ಭೇದವೂ ಪ್ರತಿಪಾದಿಸಲ್ಪಡುತ್ತದೆ. ಆದ್ದರಿಂದ **ಭೇದವು ಸಪ್ರಮಾಣವಾಗಿದೆ.** ಭೇದ ಹೇಳುವ ಶ್ರುತಿಗಳು ಅನೇಕವುಂಟು. ಅವು ಯಾವು? ಅಂದರೆ, ಸೃಷ್ಟಿಯ ಉತ್ಪತ್ತಿಯಲ್ಲಿಯೂ, ಉತ್ಪತ್ತಿಗೋಸ್ಕರವಾಗಿಯೂ ಕರ್ಮಕಾಂಡಗತ ಶ್ರುತಿ ವಾಕ್ಯಗಳಿಂದ ಜೀವೇಶ್ವರರ ಭೇದವು ಪ್ರತಿಪಾದಿಸಲ್ಪಟ್ಟಿದೆ. ಹೇಗಂದರೆ, ಅನೇಕ ಕಾಮನೆಗಳ ಭೇದದಿಂದ ಜೀವರ ಭೇದವೆಂದು ಕಂಡು ಬರುತ್ತದೆ. ಒಬ್ಬನು ಒಂದನ್ನು ಇಚ್ಛಿಸಿದರೆ; ಮತ್ತೊಬ್ಬನು ಬೇರೊಂದನ್ನು ಇಚ್ಛಿಸುತ್ತಾನೆ. ಹೀಗೆ ಕಾಮನಾಭೇದದಿಂದ ಜೀವರು ಅನೇಕರು ಇರುತ್ತಾರೆಂದು ಶ್ರುತಿಯು ಹೇಳುತ್ತದೆ. ಆ ಪರಮಾತ್ಮನು ಆಕಾಶ ಪೃಥ್ವಿಗಳನ್ನು ಧರಿಸಿದ್ದಾನೆ. ಅವನಿಂದ ಈ ಭೂತಗಳು ಜನಿಸಿವೆ. ಅಗ್ನಿಯಿಂದ ಕಿಡಿಗಳು ಉದಯಿಸುವಂತೆ, ಪರಮಾತ್ಮನಿಂದ ಜೀವರು ಜನಿಸಿರುವರು. ಆ ಪರಮಾತ್ಮನು ಈ ಜಗತ್ತನ್ನು ಹುಟ್ಟಿಸಿದನು. ಬಹಳ ಜೀವರನ್ನು ಹುಟ್ಟಿಸಬೇಕೆಂದು ಸಂಕಲ್ಪ ಮಾಡಿದನು. ಹೀಗೆ ಅಲ್ಲಲ್ಲಿ ಉಪನಿಷದ್ವಾಕ್ಯಗಳಲ್ಲಿ; ಸೃಷ್ಟಿಪ್ರಕ್ರಿಯೆಯಲ್ಲಿ ಜೀವಾತ್ಮ ಪರಮಾತ್ಮರ ಭೇದವೂ, ಜೀವರ ಭೇದವೂ ನಿರೂಪಿಸಲ್ಪಟ್ಟಿವೆ. ಕರ್ಮೋಪಾಸನಾ ಕಾಂಡಗಳಲ್ಲಿ ಭೇದವು ಹೇಳಲ್ಪಟ್ಟಿದೆ. ಜ್ಞಾನಕಾಂಡದಲ್ಲಿ ಅಭೇದವು ಹೇಳಲ್ಪಟ್ಟಿದೆ. ಹೀಗೆ ಕರ್ಮ ಮತ್ತು ಜ್ಞಾನ ಇವೆರಡು ಕಾಂಡಗಳಿಗೆ ಪರಸ್ಪರ ವಾಕ್ಯಗಳಿಗೆ ವಿರೋಧವು ಬರುತ್ತಿರಲಿಕ್ಕೆ ಜ್ಞಾನಕಾಂಡದಲ್ಲಿ ಹೇಳುವ ಅಭೇದವೇ ಸಮಂಜಸವೆಂದು ಹೇಗೆ ಹೇಳುತ್ತೀರಿ? ನಿಮ್ಮ ಅಭೇದಕ್ಕೆ ಶ್ರುತಿಗಳಿದ್ದಂತೆ ನಮ್ಮ ಭೇದಕ್ಕೂ ಶ್ರುತಿಗಳಿವೆ. ಆದ್ದರಿಂದ ನಾವು ಉದಾಹರಿಸಿದ ಯುಕ್ತ್ಯನುಮಾನಗಳು **ಸಮಿಚೀನಗಳೇ** ಎಂದು ಶಂಕೆಯನ್ನು ಮಾಡಿದರೆ, ಉತ್ತರವನ್ನು ಹೇಳುತ್ತಾರೆ.

**ಅಭೇದವಾದಿಯು** 'ಕರ್ಮಕಾಂಡದಲ್ಲಿಯಾಗಲೀ, ಅಥವಾ ಸೃಷ್ಟಿ ಕಥನದಲ್ಲಿಯಾಗಲಿ, ಯಾವ ಭೇದವು ನಿರೂಪಿಸಲ್ಪಟ್ಟಿರುವದೋ, ಅದು ಸತ್ಯವಲ್ಲ. ಕಿಂತು, **ಗೌಣವಾಗಿದೆ.** ಹೇಗಂದರೆ, ಮಹಾಕಾಶ ಘಟಾಕಾಶಾದಿಗಳ ಭೇದದಂತೆ, ಭೇದ ಹೇಳಿರುತ್ತದೆ. **'ಓದನಂ ಪಚತೀತಿ ವಾಕ್ಯವತ್'** ಅನ್ನವನ್ನು ಮಾಡುತ್ತಾನೆ. ಈ ವಾಕ್ಯದಲ್ಲಿ ವರ್ತಮಾನ ವಾಚಕವಿದ್ದರೂ, ಅನ್ನವು ಭಾವಿ ಕಾಲದಲ್ಲಿ ಸಿದ್ಧವಾಗುತ್ತದೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು, ಅನ್ನ ಮಾಡುತ್ತಾನೆಂಬ ವಾಕ್ಯ ಪ್ರಯೋಗದಂತೆ, ಭಾವಿಕಾಲದಲ್ಲಿ ಶಿವಜೀವರ ಐಕ್ಯವನ್ನು ಲಕ್ಷಿಸಿ, ವರ್ತಮಾನಕಾಲದಲ್ಲಿ ಸೃಷ್ಟಿಪರಶ್ರುತಿಗಳು ಶಿವಜೀವರ ಭೇದವನ್ನು ಹೇಳಿವೆ. ಆದ್ದರಿಂದ ಭೇದವಾಕ್ಯಗಳಿಗೆ ಯಾವಕಾಲಕ್ಕಾದರೂ ಮುಖ್ಯವಾದ

ಭೇದಾರ್ಥವು ಸಂಭವಿಸುವದಿಲ್ಲ. ಕಿಂತು, ಆ ಭೇದಪರವಾಕ್ಯಗಳು ಸ್ವಾಭಾವಿಕ ವಾಗಿ ಅವಿದ್ಯೆಯುಳ್ಳ ಪ್ರಾಣಿಗಳ ಭೇದದೃಷ್ಟಿಯನ್ನು ಅನುವಾದ ಮಾಡಿರುತ್ತವೆ. ಉಪನಿಷದ್ಗತ ಉತ್ಪತ್ತಿ ಪ್ರಳಯಾದಿ ವಾಕ್ಯಗಳಿಂದ ಜೀವಬ್ರಹ್ಮರ ಐಕ್ಯವೇ ಹೇಳಲ್ಪಟ್ಟಿರುತ್ತದೆ. **'ತತ್ತ್ವಮಸಿ, ಅನ್ಯೋಽಸಾವನ್ಯೋಽಹಮಸ್ಮೀತಿ ನ. ಸ. ವೇದ** ಆ ಬ್ರಹ್ಮವೇ ನೀನಿದ್ದಿ, ಅವನು ಬೇರೆ ನಾನು ಬೇರೆಯಿದ್ದೇನೆ. ಹೀಗೆ ತಿಳಿದರೆ, ಅವನು ತಿಳಿಡವನಲ್ಲ. ಪಶು ಇದ್ದಾನೆ· ಹೀಗೆಂಬ ಶ್ರುತಿಗಳು ಭೇದದರ್ಶಿಗೆ ನಿಂದೆಮಾಡಿ ಮುಂದೆ ಏಕತ್ವವನ್ನು ಬೋಧಿಸುತ್ತವೆ. ಎಂಬುದನ್ನು ಅರತು, ಲೋಕದೃಷ್ಟಿ ಅನುಸಾರ ಜೀವೇಶ್ವರರ ಭೇದವನ್ನು ಕೆಲವು ಶ್ರುತಿಗಳು ಅನುವಾದ ಮಾಡಿವೆ. ಅವು **ಗೌಣಗಳಾಗಿವೆ,** ಯಾಕಂದರೆ, **ಸೃಷ್ಟಿಪೂರ್ವ ದಲ್ಲಿ 'ಏಕಮೇವಾದ್ವಿತೀಯಂ'** ಒಂದೇ ಇತ್ತೆಂದು ಹೇಳುತ್ತದೆ. ಬಳಿಕ **ಕಡೆಯಲ್ಲಿ (ತತ್ತ್ವಮಸಿ)** ನೀನೆ ಬ್ರಹ್ಮನಿದ್ದಿಯೆಂದು ಹೇಳುತ್ತದೆ. ಮಧ್ಯದಲ್ಲಿ ಕೆಲವು ವಾಕ್ಯಗಳಿಂದ **ಭೇದವು** ಹೇಳಿದೆ. ಅದರಿಂದ ಅದು **ಗೌಣವಾಗಿದೆಯೆಂದು** ತಿಳಿಯತಕ್ಕದ್ದು. ಎಲ್ಲ ನದಿಗಳು ಸಮುದ್ರವನ್ನು ಕೂಡುವಂತೆ ಎಲ್ಲ ವೇದವಾಕ್ಯ ಗಳು ಸಾಕ್ಷಾತ್ ಅಥವಾ ಪರಂಪರಾ ರೂಪದಿಂದ ಅಭೇದವನ್ನು ಬೋಧಿಸುವದರ ಲ್ಲಿಯೇ ಪರ್ಯವಸಾನಗಳಾಗಿವೆ. ಆದ್ದರಿಂದ ಶ್ರುತಿಯಲ್ಲಿ ಹೇಳಿದ ಭೇದವು **ಗೌಣ, ಮಿಥ್ಯಾ** ಮತ್ತು **ಅನುವಾದ**ವಾಗಿರುತ್ತದೆಂದು ತಿಳಿ ಎಂಬ ಭಾವವು.

ಬಳಿಕ, ಭೇದ ನಿರಾಕರಣ ಪೂರ್ವಕ ಅಭೇದವನ್ನು ಪ್ರತಿಪಾದಿಸುತ್ತ ಬಂದ ವಿಷಯವನ್ನು ಉಪಸಂಹಾರ ಮಾಡುತ್ತಾರೆ.

**ಇಂತು ಶ್ರುತ್ಯನುಮಾನ ಸಂತತಿಗಳೊಡನೆ ಯು।**
**ಕ್ತ್ಯಂತರಂ ದೋರಿ ಭೇದವೆಂಬುದು ಜಡ ।**
**ಭ್ರಾಂತಿಮಯ ವೆಂದೊರೆದೆವಿಲ್ಲಿ ॥೧೫॥**

**ಟೀಕಾ:-** ಇಂತು=ಈ ಪ್ರಕಾರ, ಶ್ರುತಿಅನುಮಾನ ಸಂತತಿಗಳೊಡನೆ=ಶ್ರುತಿ ಅನುಮಾನ ಸಮೂಹಗಳೊಡನೆ, ಯುಕ್ತ್ಯಂತರಂದೋರಿ=ಕೆಲವು ಯುಕ್ತಿಗಳನ್ನು ತೋರಿಸಿ, ಇಲ್ಲಿ=ಈ ಸಂಧಿಯಲ್ಲಿ, ಭೇದವೆಂಬುದು=ಭೇದವೆಂದು ಹೇಳಿಸಿಕೊಳ್ಳು ವದು, ಭ್ರಾಂತಿಮಯವೆಂದು=ಕೇವಲ ಅಜ್ಞಾನ ಕಲ್ಪಿತವಾಗಿರುವುದೆಂದು, ಒರೆದೆವು=ತಿಳಿಸಿದೆವು,

**ತಾತ್ಪರ್ಯ:-** ಈ ಸೂತ್ರದಲ್ಲಿ ಭೇದ ನಿಂದಾಪೂರ್ವಕ ಅಭೇದ ಪ್ರತಿ ಪಾದಕ ಶ್ರುತಿಗಳನ್ನು ಹೇಳಿದೆವು. ಆ ಶ್ರುತ್ಯರ್ಥಕ್ಕೆ ಅನುಸಾರಿಗಳಾದ ಅನುಮಾನ ಪ್ರಮಾಣವನ್ನು ಯುಕ್ತಿಗಳನ್ನೂ ನಿರೂಪಣೆ ಮಾಡಿದೆವು. ಈ ಕಾರಣದಿಂದ ಭೇದ

ವೆನ್ನುವದು ಭ್ರಾಂತಿರೂಪವಾಗಿದೆ. ಮೃಗಜಲವು ತೋರಿದರೂ ಭ್ರಾಂತಿಸ್ವರೂಪ ವಾಗಿರುವಂತೆ, ಭೇದವು ಜಡಬುದ್ಧಿಗೆ ಪ್ರತ್ಯಕ್ಷವಾಗಿ ತೋರಿದರೂ ಭ್ರಾಂತಿ ಸ್ವರೂಪವಾಗಿದೆ. ಎಂಬುದನ್ನು ವಿಸ್ತಾರಪೂರ್ವಕ ತಿಳಿಸಿದೆವು. ಅರ್ಥಾತ್ ಈ ಸೂತ್ರವು ಭೇದ ಖಂಡನ ಪೂರ್ವಕ ಅಭೇದಮಂಡನ ಮಾಡುವದಕ್ಕಾಗಿಯೇ ಆರಂಭವಾಗಿರುವದೆಂಬ ಭಾವವು.

ಬಳಿಕ, ಈ ಸಂಧಿಯಲ್ಲಿರುವ ಸೂತ್ರ ಪದಗಳ ಸಂಖ್ಯೆಯನ್ನು ತಿಳಿಸುತ್ತಾ, ಸಂಧಿಯನ್ನು ಸಮಾಪ್ತ ಮಾಡುತ್ತಾರೆ.

**ಉತ್ತಮ ತ್ರಿವಿಧಿಯೈವತ್ತೆರಡರೊಡನೆ ಮೃದು।**
**ವೆತ್ತ ಸೂತ್ರಂಗ ಳೆರಡೆರಡರಿಂದೆ ಪೇ।**
**ಳಿತ್ತಿಂತು ಮೂರನೆಯ ಸಂಧಿ ॥೧೬॥**

ಟೀಕಾ:- ಉತ್ತಮ=ಶ್ರೇಷ್ಠಗಳಾದ, ತ್ರಿವಿಧಿಯೈವತ್ತೆರಡರೊಡನೆ=ಐವತ್ತೆರಡು ತ್ರಿವಿಧಿಗಳಿಂದಕೂಡಿದ, ಮೃದುವೆತ್ತ=ಕೋಮಲಗಳಾದ, ಸೂತ್ರಂಗಳೆರಡೆರಡರಿಂದೆ=ನಾಲ್ಕು ಸೂತ್ರಗಳಿಂದ. ಇಂತು=ಈ ಪ್ರಕಾರ, ಮೂರನೆಯ ಸಂಧಿ= ಮೂರನೆಯ ಸಂಧಿಯು, ಪೇಳಿತ್ತು=ಹೇಳಿದ್ದಾಯಿತು.

ತಾತ್ಪರ್ಯ:- ಈ ಮೂರನೇ ಸಂಧಿಯಲ್ಲಿ ಕೇಳುವದಕ್ಕೆ ಮನೋಹರಗಳಾದ ಸೂತ್ರಗಳು ನಾಲ್ಕುಯಿರುತ್ತವೆ. ಅವುಗಳಲ್ಲಿ ಅತ್ಯುತ್ತಮಗಳಾದ ತ್ರಿವಿಧಿಗಳು ಐವತ್ತೆರಡು ಇರುತ್ತವೆ. ಈ ರೀತಿ ಮೂರನೆಯ ಸಂಧಿಯು ಸಮಾಪ್ತವಾಗಿರುತ್ತದೆ.

**ಭೇದ ನಿರಾಕರಣ ಸೂತ್ರ ೪ಕ್ಕಂ ತ್ರಿವಿಧಿ ೫೨ ಅಂತು ಸಂಧಿ**
**೩ಕ್ಕಂ ಸೂತ್ರ ೨೦ಕ್ಕಂ ತ್ರಿವಿಧಿ ೨೩೨ಕ್ಕಂ**

**-ಃಮಂಗಳ ಮಸ್ತುಃ-**

ಶ್ರೀ॥ **ಸಾರತರವನುಭವದ ಸಾರಾರ್ಥ ಬರೆದಿದನು।**
**ಸಾರಿದನು ಗುರುವಿ ನಡಿಗೆರಗಿ ಶಿವಪುತ್ರ।**
**ಸೂರಿಗಳು ಕಂಡು ಸುಖಿಸುವದು॥**



ಶ್ರೀ ಶಂಭುಲಿಂಗಾಯನಮಃ

# ಅನುಭವಸಾರ

## ನಾಲ್ಕನೆಯ ಸಂಧಿ

ಬಳಿಕ, ಎರಡನೇ ಸಂಧಿಯ ಅಂತ್ಯದಲ್ಲಿ ಶಿವಜೀವ ಜಗದಾದಿಗಳೆಲ್ಲವು ತಾನೆಂದೆವನು ಉತ್ತಮನೆಂದು ಹೇಳಲ್ಪಟ್ಟಿತು. ಅದಕ್ಕೆ ಸಂಶಯವು ಪ್ರಾಪ್ತವಾಯಿತು. ಏನಂದರೆ–'ಪ್ರತಿಯೊಂದು ಶರೀರಕ್ಕೆ ಒಬ್ಬೊಬ್ಬ ಆತ್ಮನು ಭಿನ್ನನಾಗಿರಲಿಕ್ಕೆ, ಎಲ್ಲಾ ಶರೀರಗಳಲ್ಲಿ ಒಬ್ಬಾತ್ಮನಿರುವದು ಹೇಗೆ ? ಇದ್ದರೆ; ಸುಖದುಃಖಾದಿ ಭೋಗಗಳ ವ್ಯವಸ್ಥೆಯು ಆಗಲಾರದು. ಆದ್ದರಿಂದ ಅನೇಕಾತ್ಮರೆಂದು ಹೇಳುವದು ಒಳ್ಳೇದಾಗಿದೆ. ಎಂದು ಸಂಶಯ ಬಂದಿತು. ಒಬ್ಬಾತ್ಮನಿದ್ದರೂ ಉಪಾಧಿಗಳು ಅನೇಕವಿರುವದರಿಂದ, ಉಪಾಧಿನಾನತ್ವ ಮೂಲಕ ಅನೇಕ ಭೋಗಗಳ ವ್ಯವಹಾರವು ಸಂಭವಿಸುತ್ತದೆ. ಅನೇಕಾತ್ಮರು ನಿತ್ಯಪೂರ್ಣರು ಅನ್ನುವದರಿಂದ, ಒಂದು ದೇಹದಲ್ಲಿ ಎಲ್ಲರು ಇರುವದರಿಂದ, ಯಾವನು ಯಾವ ಭೋಗವನ್ನು ಅನುಭವ ಮಾಡಿದನು ? ಭೋಗಿಸದೆ ಇದ್ದವನು ಯಾರು ? ಎಂಬುದು ತಿಳಿಯದೆ ಹೋದ್ದರಿಂದ ಭೋಗ ಸಾಂಕರ್ಯ ದೋಷವು ಬರುತ್ತದೆಂದು ಹೇಳಿದರು. ಅನೇಕಾತ್ಮರು ಭೇದವಾಗಿ ಕಾಣಿಸುತ್ತಾರೆ. ಹೀಗಿದ್ದು ಏಕಾತ್ಮನೆಂದು ಹೇಗೆ ಹೇಳುತ್ತೀರಿ ? ಎಂದು ಕೇಳಲು; ಪ್ರತ್ಯಕ್ಷವಾಗಿ ಕಾಣುವ ಜಡ ಭೇದವೆ. ನಿಜವಲ್ಲ. ಭ್ರಮಾತ್ಮಕವಾಗಿದೆ. ಅಂದಮೇಲೆ ಚೈತನ್ಯ ಸ್ವರೂಪವಲ್ಲಿ ಕಾಣುವ ಆತ್ಮಭೇದವಾದರೂ ಭ್ರಮವಾಗಿದೆ. ಅನ್ನುವಲ್ಲಿ ಶ್ರುತ್ಯನುಸಾರಿಗಳಾದ ಅನುಮಾನ ಯುಕ್ತಿಗಳನ್ನು ಪ್ರತಿಪಾದಿಸಿ, ಆತ್ಮನು ಒಬ್ಬನೇ ಇದ್ದಾನೆಂಬುದನ್ನು ಸಿದ್ಧಾಂತ ಮಾಡಿದರು.

ಈಗ ಈ ನಾಲ್ಕನೇ ಸಂಧಿಯಲ್ಲಿ ಶಿಷ್ಯನು ತಾನು ಮೊದಲನೆ ಸಂಧಿಯಲ್ಲಿ; ಈ ನಾಮರೂಪಾತ್ಮಕ ಜಗತ್ತೆಲ್ಲವು ಚಿತ್ತಿನ ವಿವರ್ತವಾಗಿದೆ. ಇದೆಲ್ಲವೂ ತನ್ನ

ರೂಪವೇ ಆಗಿದೆ. ಎಂಬುದನ್ನು ಕೇಳಿದ್ದನು. ಮತ್ತು ಎರಡನೇ ಸಂಧಿಯ ಅಂತ್ಯದಲ್ಲಿ 'ಜಗವೆಂದೊಡಂತಾನೆ' ಜಗತ್ತಾದರೂ ತಾನೇ ಆಗಿರುವನೆಂಬುದನ್ನು ಮತ್ತೊಮ್ಮೆ ಕೇಳಿ, ತನ್ನಲ್ಲಿ ತಾನು ವಿಚಾರಪರನಾಗಿ ಸಂಶಯ ಚಿತ್ತವುಳ್ಳವನಾದನು. ಏನಂದರೆ— 'ಜಗತ್ತೆಲ್ಲವೂ ತಾನಾದ ಮೇಲೆ, ಈ ದೇಹಾದಿ ಅನಾತ್ಮಗಳು ಕೂಡಾ ಆತ್ಮಸ್ವರೂಪವೆಂದೇ ತಿಳಿಯಬೇಕಾಯಿತು. ಹೀಗೆ ತಿಳಿದರೆ; ಚಾರ್ವಾಕಾದಿ ಬೌದ್ಧಾಂತವರೆಗಿರುವ ಮತಗಳಿಗೂ ವೇದಾಂತಕ್ಕೂ ಭೇದವಿಲ್ಲದೆ ಹೋಗುವದು. ದೇಹಾದಿಗಳು ಆತ್ಮಸ್ವರೂಪವಲ್ಲ. ಅಂದರೆ, ಸರ್ವಾತ್ಮಕ ಬೋಧಕ್ಕೆ ಹಾನಿ ಬರುತ್ತದೆ. 'ಸರ್ವಂ ಖಲ್ವಿದಂಬ್ರಹ್ಮ' ಇದೆಲ್ಲವು ಬ್ರಹ್ಮವೆಂದು ಶ್ರುತಿಯು ಸಾರುತ್ತದೆ. ಶ್ರುತಿ ಗುರುಗಳು ಹೇಳಿದಂತೆ ನಿಶ್ಚಯ ಮಾಡಿದರೆ; ಚಾರ್ವಾಕರಾಗಬೇಕಾಗುವದು. ದೇಹಾದಿಗಳು ತಾನಲ್ಲವು. ಅಂದರೆ, ಉಪದೇಶವು ಸುಳ್ಳಾಗಬೇಕಾಗುತ್ತದೆ, ಎಂಬ ಸಂಶಯಗ್ರಸ್ತ ಚಿತ್ತನಾಗಿ ಪ್ರಶ್ನೆಗಳನ್ನು ಈ ಸಂಧಿಯ ಆರಂಭದಲ್ಲಿ ಮಾಡುತ್ತಲಿರುತ್ತಾನೆ.

**ಬಳಿಕ,** ಗುರುಗಳು ಶಿಷ್ಯನು ಮಾಡುವ ಪ್ರಶ್ನೆಗಳಮೇಲಿಂದ ಅವನ ಮನೋಭಾವವನ್ನು ಅರಿತವರಾಗಿ, ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಾರೆ. ಏನಂದರೆ 'ಎಲ್ಲವೂ ಭಂಗಾರವೇ' ಎಂದು ಹೇಳಿದರೆ ಆಭರಣಗಳ ನಾಮರೂಪುಗಳನ್ನು ಕಳೆದು, ಉಳಿದ ಗುರುತ್ವ ಲಕ್ಷಣವಾದದ್ದೇ ಭಂಗಾರವೆಂದು ಹೇಗೆ ತಿಳಿಯಬೇಕೋ ,ಹಾಗೇ ಎಲ್ಲವೂ ಬ್ರಹ್ಮ ಎಂಬಲ್ಲಿಯೂ ನಾಮರೂಪುಗಳನ್ನು ಬಾಧಿಸಿ ಬ್ರಹ್ಮವೆಂದು ತಿಳಿಯಬೇಕು. ಹೀಗೆ ಶಿಷ್ಯನು ತಿಳದಿದ್ದರೆ, ಇವನಿಗೆ ಈ ಸಂಶಯ ಬರುತ್ತಿರಲಿಲ್ಲ. ತಿಳಿಯದ ಕಾರಣ ವಿಪರೀತ ಜ್ಞಾನವೆಂಬ ರೋಗವಾಗಿದೆ. ಎಂದು ತಮ್ಮ ಮನಸ್ಸಿನಲ್ಲಿ ಆಲೋಚನೆಮಾಡಿ, ಅವನಿಗೆ ಮೊದಲು ಬಾಧಾಸಾಮಾನಾಧಿಕರಣ್ಯವೆಂಬ ಭೇದಿಕೊಟ್ಟು ಬೋಧಮಾಡುತ್ತಾರೆ. ಹೇಗಂದರೆ, 'ಹಾವೆಂದು ತಿಳದದ್ದು ಹಗ್ಗವೇ, ಕಳ್ಳನೆಂದು ತಿಳದದ್ದು ಕೊರಡೇ, ಎಂಬಲ್ಲಿ ಹಾವಿನ, ಕಳ್ಳನ ನಾಮರೂಪಗಳನ್ನು ಬಾಧಿಸಿ, ಉಳದದ್ದು ಹಗ್ಗ, ಕೊರಡು, ಎಂಬದಾಗಿ ಹೇಳಿರುತ್ತೇವೆ. ಇದರಂತೆ ಇದೆಲ್ಲವು ಬ್ರಹ್ಮವೆಂದು ಹೇಳಿದರೆ, ಈ ನಾಮರೂಪ ಅಂಶವನ್ನು ಬಾಧಿಸಿ, ಉಳಿದ ಅಸ್ತಿ, ಭಾತಿ ಲಕ್ಷಣವಾದದ್ದು ಬ್ರಹ್ಮವೆಂದು ಬೋಧಿಸುವಲ್ಲಿ, ಸರ್ವಾತ್ಮ ಬೋಧೆಯ ಅಭಿಪ್ರಾಯವಿರುವದೆಂದು ಚನ್ನಾಗಿ ಬೋಧಿಸಿದರು.ಮತ್ತು ಇವನಿಗೆ ಈ ಸರ್ವಾತ್ಮಕ ಬೋಧದಿಂದ ದೇಹಾದಿ ಅನಾತ್ಮ ವಸ್ತುಗಳಲ್ಲಿ ಆತ್ಮತ್ವಭ್ರಮ ಹೋಗಿಲ್ಲ. ಅದರಿಂದ ವಿಪರೀತ ಜ್ಞಾನವು ಬಂದಿರುತ್ತದೆ. ಇದನ್ನು ಹೋಗಲಾಡಿಸುವದಕ್ಕಾಗಿ **ನೇತ್ಯಾತ್ಮಕ ಜ್ಞಾನವೇ** ಯೋಗ್ಯ ಔಷಧವಾಗಿರುವದೆಂದು ತಿಳಿಕೊಂಡು;ದೇಹಾದಿ ಅಹಂಕಾರ ಪರ್ಯಂತರವಿರುವ ಅನಾತ್ಮವರ್ಗವನ್ನು ನೇತಿಗೆಳೆಯುತ್ತಾರೆ. ಅಂದರೆ, ಸರ್ವಾತ್ಮಕೋಪ

ದೇಶದಿಂದ ಬಂದ ಸಂಶಯುವನ್ನು ನೇತ್ಯಾತ್ಮಕೋಪದೇಶದಿಂದ ನಿರಾಕರಿಸುತ್ತಾರೆಂಬ ಭಾವವು. ಅರ್ಥಾತ್ ಈ ನಾಲ್ಕನೇ ಸಂಧಿಯಲ್ಲಿ ಅನ್ನಮಯ ಕೋಶವೇ ಮೊದಲುಗೊಂಡು, ವಿಜ್ಞಾನಮಯಕೋಶ ಪರ್ಯಂತರ, **ನಾಲ್ಕು ಕೋಶಗಳ** ವಿಚಾರಮಾಡಿ ನೇತಿಗಳೆದು, **ಆನಂದಮಯಕೋಶದ** ವಿಚಾರವನ್ನು ಮುಂದೆ **ಐದನೇ ಸಂಧಿಯಲ್ಲಿ** ಹೇಳುತ್ತಾರೆಂದು ಲಕ್ಷಿಸತಕ್ಕದ್ದು.

ನಾಲ್ಕು ಐದು ಈ ಎರಡು ಸಂಧಿಗಳಲ್ಲಿ ತ್ವಂಪದ ವಾಚ್ಯ ಪಂಚಕೋಶ ವಿವೇಕ ಮಾಡಿ, ·ನೇತಿಗಳೆದು ತ್ವಂಪದ ಲಕ್ಷ್ಯರೂಪ **ಆತ್ಮಸ್ವರೂಪವನ್ನು** ಬೋಧಿಸುವರು.

ಆದ್ದರಿಂದ ನಾಲ್ಕನೇ ಸಂಧಿಯ ಆರಂಭದ ಪ್ರಥಮ ಸೂತ್ರದಲ್ಲಿ ಶಿಷ್ಯನು ತನಗೆ ಬಂದ ಸಂಶಯುವನ್ನು ಗುರುಗಳಿಗೆ ತಿಳಿಸುತ್ತಲಿದ್ದಾನೆ.

ಸೂತ್ರ:- **ತನು ಮುಖ್ಯವಾದ ವಿಷಯಂಗಳೆಲ್ಲವನು ಚಿ ।**
**ತ್ತಿನಲೊಡಂ ಬಡಲು ತಾಂ ಬಹುದು ಗುರುವೆ ॥**

**ಟೀಕಾ;-** ಗುರುವೇ=ಭೋ ಸದ್ಗುರುವೇ, ತನುಮುಖ್ಯವಾದ=ಶರೀರವೇ ಮೊದಲಾದ, ವಿಷಯಂಗಳೆಲ್ಲವನು=ತನಗೆ ತೋರುವ ತೋರಿಕೆಗಳನ್ನು, ಚಿತ್ತಿನಲ್=ಚಿದ್ರೂಪಗಳೆಂದು, ಒಡಂಬಡಲು ತಾಂ ಬಹುದು=ತಾವು ಅಂಗೀಕಾರ ಮಾಡಲಿಕ್ಕೆ ಬೇಕಾಗುವದು.

**ತಾತ್ಪರ್ಯ:-** ಹೇ ಗುರುದೇವನೇ! ತಾವು ಮೊದಲು ನನಗೆ ಜಗವೆಲ್ಲವು ತಾನೆ ಆಗಿರುವನೆಂದು ಹೇಳಿದಿರಿ. ಹೀಗೆ ಹೇಳಿದಮೇಲೆ, ತನಗೆ ದೃಶ್ಯವಾಗಿ ತೋರುವ ದೇಹ ಮೊದಲು ಅಹಂಕಾರವೇ ಕಡೆಯಾಗಿರುವ, ಅನಾತ್ಮಗಳಿಗೂ ಆತ್ಮಸ್ವರೂಪವೆಂದು ಅಂಗೀಕಾರ ಮಾಡಲಿಕ್ಕೆ ಬೇಕಾಗುತ್ತದೆಂದು ತಿಳಿಸುತ್ತಲಿರುತ್ತಾನೆ.

**ಬಳಿಕ;** ಸಂಧಿಯ ಆರಂಭದಲ್ಲಿ ಗ್ರಂಥಕರ್ತರು ಇಷ್ಟದೇವತೆಯಾದ ಶ್ರೀ. ಶಂಭುಲಿಂಗನನ್ನು ಕುರಿತು ನಮಸ್ಕಾರರೂಪ ಮಂಗಳವನ್ನು ಮಾಡುತ್ತಲಿದ್ದಾರೆ.

**ನತಸುರ ಪ್ರಕರಂಗೆ ನುತವೇದ ನಿಕರಂಗೆ ।**
**ಕ್ರತುಮಹಾದಾನ ಸುಕರಂಗೆ ಶೈಲಜಾ ।**
**ಪತಿ ಶಂಭುವಿಂಗೆ ನತನಪ್ಪೆ** ॥೧॥

**ಟೀಕಾ:-** ನತಸುರಪ್ರಕರಂಗೆ=ನಮಸ್ಕಾರಮಾಡಲ್ಪಟ್ಟ ದೇವತೆಗಳ ಸಮೂಹವುಳ್ಳಂಥಾ, ನುತವೇದನಿಕರಂಗೆ = ಸ್ತುತಿಸಲ್ಪಟ್ಟ ವೇದಸಮೂಹವುಳ್ಳಂಥಾ,

ಕ್ರತು ಮಹಾದಾನ ಸುಕರಂಗೆ=ಯಜ್ಞಮಾಡಿದವರಿಗೆ ಫಲವನ್ನು ಕೊಡುವ ವರದ ಹಸ್ತವುಳ್ಳವನಿಗೆ. ಶೈಲಜಾ ಪತಿ ಶಂಭುವಿಂಗೆ=ಪಾರ್ವತಿ ಪತಿಯಾದ ಶಂಭು ಲಿಂಗನಿಗೆ, ನತನು=ನಮಸ್ಕಾರ ಮಾಡುವಂಥವನು, ಅಪ್ಪೆ=ಆಗುತ್ತೇನೆ.

**ತಾತ್ಪರ್ಯ:-** ಶ್ರೀ ಶಂಭುಲಿಂಗನು ಇಂದ್ರಾದಿ ದೇವತೆಗಳಿಂದ ನಿತ್ಯ ದಲ್ಲಿಯೂ ನಮಸ್ಕಾರ ಮಾಡಿಸಿಕೊಳ್ಳತಕ್ಕವನು ಆಗಿರುವನು. ಮತ್ತು ನಾಲ್ಕು ಋಗಾದಿ ವೇದಗಳಿಂದ ಸ್ತುತಿ ಮಾಡಿಸಿಕೊಳ್ಳುವವನೂ ಆಗಿರುವನು. ಮತ್ತು ಯಜ್ಞಾದಿ ಕರ್ಮಗಳನ್ನು ಮಾಡಿದವರಿಗೆ ಆ ಕರ್ಮಾದಿಗಳ ಫಲವನ್ನು ಕೊಡ ತಕ್ಕ ಕೈಗಳುಳ್ಳವನು ಆಗಿರುವನು. ಅರ್ಥಾತ್ ವರದಹಸ್ತವುಳ್ಳವನಾಗಿರುವ ನೆಂಬ ಭಾವವು. ಪಾರ್ವತಿಗೆ ಪತಿಯಾದ ಶ್ರೀ ಶಂಭುಲಿಂಗನನ್ನು ಕುರಿತು ನಮಸ್ಕಾರರೂಪ ಮಂಗಳವನ್ನು ಮಾಡುವಂಥವರಾಗಿರುತ್ತಾರೆ.

ಈ ಸಂಧಿಯಲ್ಲಿ ಪಂಚಕೋಶ ವಿಚಾರ ಮಾಡುತ್ತಾ, ಅವುಗಳನ್ನು ನೇತಿ ಗಳೆದು ಸಾಕ್ಷಿಸ್ವರೂಪವನ್ನು ತಿಳಿಸುವದಾಗಿದೆ. ಅಂದರೆ, ತ್ವಂಪದ ಲಕ್ಷ್ಯರೂಪ ಪ್ರತ್ಯಗಾತ್ಮನನ್ನು ಬೋಧಿಸುವರು. ಆದ್ದರಿಂದ ಪ್ರತ್ಯಗಾತ್ಮನೇ ಇಲ್ಲಿ ಶಂಭು ಲಿಂಗನಾಗಿರುವನು. ಸಕಲ ವೇದವಾಕ್ಯಗಳು ಈ ಸಾಕ್ಷಿ ಪ್ರತ್ಯಗಾತ್ಮನನ್ನು ಬೋಧಿಸುವಲ್ಲಿಯೇ ಅಭಿಪ್ರಾಯವುಳ್ಳವುಗಳಾಗಿವೆ. ಆದ್ದರಿಂದ 'ನುತವೇದನಿಕ ರಂಗೆ' ಎಂದು ಹೇಳಲ್ಪಟ್ಟಿರುತ್ತದೆ. ಮತ್ತು ನೇತ್ರಶ್ರೋತ್ರಾದಿ ಸಕಲೇಂದ್ರಿಯ ಗಳೆಂಬ ದೇವತೆಗಳು ನಿದ್ರೆಯಲ್ಲಿ ಸಾಕ್ಷಿ ಪ್ರತ್ಯಗಾತ್ಮನನ್ನು ಹೊಂದಿ, ವಿಶ್ರಾಂತಿ ಯನ್ನು ಪಡೆದು, ಜಾಗ್ರತದಲ್ಲಿ ಹೊರಗೆ ಬಂದು ವ್ಯವಹರಿಸುತ್ತವೆ. ಆದ್ದರಿಂದ ಪ್ರತ್ಯಗಾತ್ಮನು 'ನತಸುರ ಪ್ರಕರಂಗೆ, ಎಲ್ಲ ದೇವತೆಗಳಿಂದ ನಮಸ್ಕಾರ ಮಾಡಿಸಿ ಕೊಳ್ಳುತ್ತಾನೆಂದು ಹೇಳಲ್ಪಟ್ಟಿದೆ. ಸಕಲೇಂದ್ರಿಯಗಳಿಗೂ ಸುಖಪ್ರದಾತನು ಪ್ರತ್ಯಗಾತ್ಮನೇ ಆಗಿರುವದರಿಂದ 'ಕ್ರತುಮಹಾದಾನ ಸಕರಂಗೆ' ಎಂದು ಹೇಳಲ್ಪ ಟ್ಟಿದೆ. ಮತ್ತು ಪಂಚಕೋಶಗಳೆಂಬ ಕಾರ್ಯವರ್ಗವು ಕಾರಣವಾದ ಅವಿದ್ಯಾ ನಾಮಕ ಶಕ್ತಿಯಿಂದಲೇ ಉತ್ಪನ್ನವಾಗಿರುತ್ತದೆ. ಇಂಥಾ ಅವಿದ್ಯೆಯೆಂಬ ಶಕ್ತಿಗೆ ಆಶ್ರಯನಾಗಿರುವದರಿಂದ 'ಶೈಲಜಾಪತಿ' ಎಂದು ಹೇಳಿದ್ದಾರೆ. ಅರ್ಥಾತ್ ಕಾರ್ಯಕಾರಣರೂಪ ಪ್ರಪಂಚಕ್ಕೆ ಆಶ್ರಯನೂ ವಿಷಯನೂ ಆಗಿರುವ ಸಾಕ್ಷಿ ಪ್ರತ್ಯಗಾತ್ಮನೇ ನಾನು ಇದ್ದೇನೆ. ನನ್ನಿಂದ ಅರಿಸಿಕೊಳ್ಳುವ ಅನ್ನಮಯಾದಿ ಆನಂದಮಯ ಪರ್ಯಂತವಿರುವ ಈ ಐದು ಕೋಶಗಳು ನಾನಲ್ಲ. ಹೀಗೆ ನಿಶ್ಚಯಜ್ಞಾನವಾಗುವದೇ ಇಲ್ಲಿ 'ನತನಪ್ಪೆ' ಎಂದು ಹೇಳಲ್ಪಟ್ಟಿರುತ್ತದೆ. ಪಂಚ ಕೋಶ ವಿಲಕ್ಷಣ ಸಾಕ್ಷಿ ಸ್ವಯಂಪ್ರಕಾಶ ಪ್ರತ್ಯಗಾತ್ಮನೇ ಶಂಭುಲಿಂಗನಾಗಿರು ತ್ತೇನೆ ಎಂಬುದೇ ಇಲ್ಲಿಯ ಮಂಗಲದ ತಾತ್ಪರ್ಯವದೆ.

ಈ ರೀತಿ ಪ್ರತ್ಯಗಾತ್ಮ ಶಂಭುಲಿಂಗನ ಮಂಗಳ ಮಾಡಿ ಸಂಧಿಯನ್ನು ಉಪಕ್ರಮ ಮಾಡುತ್ತಾರೆ.

**ಬಳಿಕ,** ಶಿಷ್ಯನು; ಗುರುಗಳಲ್ಲಿರುವ ಅಸಾಧಾರಣ ಲಕ್ಷಣ ಗುರುತ್ವವನ್ನು ಹೊಗಳುತ್ತಾ ರಕ್ಷಿಸು ಎಂದು ಬೇಡಿಕೊಳ್ಳುತ್ತಾನೆ.

**ನೋಡಿ ಕೆಲರಂ ಮಾತನಾಡಿ ಕೆಲರಂ ಮುಟ್ಟಿ।**
**ಕೂಡೆ ಕೆಲ ಜೀವರನು ದೇವರಾಗಿ ಮಿಗೆ।**
**ಮಾಡುವಾಚಾರ್ಯ ಶರಣಾಗು ॥೨॥**

ಟೀಕಾ:- ಕೆಲರಂ=ಕೆಲವು ಅಧಿಕಾರಿಗಳನ್ನು, ನೋಡಿ=ಕೃಪಾದೃಷ್ಟಿಯಿಂದ ಅವಲೋಕಿಸಿ, ಕೆಲರಂ=ಕೆಲವರನ್ನು, ಮಾತನಾಡಿ=ಉಪದೇಶಿಸಿ, ಕೆಲಜೀವರನು=ಕೆಲವರನ್ನು, ಮುಟ್ಟಿ=ಸ್ಪರ್ಶಮಾಡಿ, ಕೂಡೆ=ಬೇಗನೆ, ಮಿಗೆ=ಹೆಚ್ಚಾದ, ದೇವರಾಗಿ=ದೇವರನ್ನಾಗಿ, ಮಾಡುವ=ಮಾಡುತ್ತಿರುವಂಥಾ, ಆಚಾರ್ಯ=ಗುರುಶ್ರೇಷ್ಠನೇ, ಶರಣಾಗು=ನನ್ನನ್ನು ರಕ್ಷಿಸುವಂಥವನಾಗು.

ತಾತ್ಪರ್ಯ:- ಹೇ ಗುರುವೇ ? ಜೀವರನ್ನು ದೇವರನ್ನಾಗಿ ಮಾಡುವಂಥಾ ಬಹು ದೊಡ್ಡ ಸಾಮರ್ಥ್ಯವು ನಿನ್ನಲ್ಲಿ ಇರುತ್ತದೆ. ಈ ಅಸಾಧಾರಣರೂಪ ಸಾಮರ್ಥ್ಯವು ನಿನ್ನಲ್ಲಿದ್ದಂತೆ ಬೇರೆ ಯಾರಲ್ಲಿಯೂ ಇಲ್ಲ. ಅದರಿಂದ **ನಗುರೋಽಧಿಕಂ** ಎಂಬ ಶ್ರುತಿಯು ನಿನ್ನನ್ನು ಹೊಗಳುತ್ತಿರುತ್ತದೆ. ನೀನು ಕೆಲವರನ್ನು ಕೃಪಾದೃಷ್ಟಿಯಿಂದ ಅವಲೋಕನಮಾಡಿ, ಅವರ ಅಜ್ಞಾನವನ್ನು ಕಳೆದು ದೇವರನ್ನಾಗಿ ಮಾಡುವಿ. ಹೇಗಂದರೆ, ಆಮೆಯು ತನ್ನ ಮರಿಗಳನ್ನು ನೋಟಮಾತ್ರದಿಂದ ರಕ್ಷಿಸಿದಂತೆ ರಕ್ಷಣಮಾಡುವಿ. ಕಾಗೆಯಿಂದ ರಕ್ಷಿತವಾದ ಕೋಗಿಲೆಯ ಮರಿಯು; ಕೋಗಿಲದ ಧ್ವನಿಯನ್ನು ಕೇಳಿದಾಕ್ಷಣವೇ ಕೋಗಿಲೆಯನ್ನು ಹಿಂಬಾಲಿಸುತ್ತದೆ. ಇದರಂತೆ; ನೀನು ಕೆಲವು ಅಧಿಕಾರಿಗಳಿಗೆ ಮಹಾವಾಕ್ಯರೂಪ ಉಪದೇಶವನ್ನು ಬೋಧಿಸಿ, ಅವರನ್ನೂ ದೇವರನ್ನಾಗಿ ಮಾಡುವಿ, ಕೋಳಿಗಳು ತಮ್ಮ ರೆಕ್ಕೆಗಳಿಂದ ಮರಿಗಳನ್ನು ಕಾಪಾಡಿದಂತೆ; ನೀನು ಕೆಲವರನ್ನು ಸ್ಪರ್ಶಮಾಡುವ ಮಾತ್ರದಿಂದ ಉದ್ಧಾರಮಾಡುವಿ. ಅಂದರೆ ನೋಟಮಾತ್ರದಿಂದಾ ಎಂಬಲ್ಲಿ ಚಾಕ್ಷುಷದೀಕ್ಷೆಯೆಂದು ಗ್ರಹಿಸಬೇಕು. ಮುಟ್ಟಿ ಅನ್ನುವದರಿಂದ ತ್ವಾಚದೀಕ್ಷೆಯಾಗಿರುವದು. ಮಾತನಾಡಿ ಅನ್ನುವದರಿಂದ ಬೋಧದೀಕ್ಷಾ ಆಗಿರುತ್ತದೆಂದು ತಿಳಿಯಬೇಕು. ಅಂದರೆ, ಗುರುಗಳು ಶಿಷ್ಯರನ್ನು ಆಯಾ ಸಾಧನಗಳ ಮೂಲಕ, ಪರಂಪರೆಯಿಂದಾದರೂ ಅವರನ್ನು ಸಾಕ್ಷಾತ್ ಶಿವರೂಪರನ್ನಾಗಿ ಮಾಡುತ್ತಾರೆ. ಅಜ್ಞಾನದ ವಶದಿಂದ ಬಂದ ಜೀವಭಾವವನ್ನು ಬಿಡಿಸಿ; ನೀವು ಶಿವ ಸ್ವರೂಪರೇ ಇದ್ದೀರಿ.

ಎಂಬ ನಿಶ್ಚಯ ಜ್ಞಾನವನ್ನುಂಟುಮಾಡುತ್ತಾರೆಂಬ ಭಾವವು. ಸಕಲ ಜೀವರ ಜೀವತ್ವವನ್ನು ಬಿಡಿಸಿದಂತೆ, ನನಗೆ ಬಂದ ಸಂಶಯವನ್ನು ಬಿಡಿಸಿ, ನಿಶ್ಚಯ ಜ್ಞಾನವನ್ನುಂಟು ಮಾಡಿ ರಕ್ಷಿಸಬೇಕೆಂದು ಶಿಷ್ಯನು ಗುರುಗಳನ್ನು ಕುರಿತು ಬೇಡಿಕೊಂಡನು.

ಬಳಿಕ, ಶಿಷ್ಯನು ತನಗೆ ಬಂದ ಸಂಶಯವನ್ನು ತಿಳಿಸುವ ಉದ್ದೇಶವನ್ನಿಟ್ಟು ಕೊಂಡು, ನೀವು ಹೇಳಿರುವದು ನಿಜವೆಂದು ಸಮ್ಮತವನ್ನು ಕೊಡುತ್ತಲಿದ್ದಾನೆ.

**ದೇವ ಚಿತ್ತೈಸು ಮುನ್ನಾವಾವ ಯುಕ್ತಿಯಿಂ ।**
**ದೀವಿಶ್ವವೆಲ್ಲವರಿವೆಂದು ಪೇಳಿದನು ।**
**ಭಾವದಿಂ ನೋಡಲದು ಸತ್ಯ ॥೩॥**

**ಟೀಕಾ:-** ದೇವ=ಗುರುದೇವನೇ! ಚಿತ್ತೈಸು=ಏಕಾಗ್ರದಿಂದ ಆಲಿಸಿರಿ, ಮುನ್ನ=ಮೊದಲು, ಆವಾವಯುಕ್ತಿಯಿಂ=ಯಾವ ಯಾವ ಯುಕ್ತಿಗಳಿಂದ, ಈ ವಿಶ್ವವೆಲ್ಲವು=ಈ ಜಗತ್ತೆಲ್ಲವು, ಅರಿವೆಂದು=ಬ್ರಹ್ಮವೆಂದು, ಪೇಳಿದ=ಹೇಳಿದ, ಅನು ಭಾವದಿಂ=ಅನುಭಾವದಿಂದ, ನೋಡಲು=ವಿಚಾರಿಸಲು, ಅದು ಸತ್ಯ=ಅದು ನಿಜ ವಿರುತ್ತದೆ.

**ತಾತ್ಪರ್ಯ:-** ಹೇ ದೇಶಿಕನೆ! ತಾವು ನನ್ನ ಪ್ರಶ್ನೆಯನ್ನು ಏಕಾಗ್ರ ಬುದ್ಧಿ ಯಿಂದ ಕೇಳಿರಿ. ಏನಂದರೆ, ತಾವು ಮೊದಲನೇ ಸಂಧಿಯಲ್ಲಿ ಈ ಜಗತ್ತೆಲ್ಲವು ಚಿತ್ತಿನ ವಿವರ್ತವಾಗಿದೆ. ಇದೆಲ್ಲವೂ ಚಿದ್ರೂಪ ಬ್ರಹ್ಮವೇ ಆಗಿರುತ್ತದೆಂದು; ಸುವರ್ಣ, ರಜ್ಜುಸರ್ಪ, ಸಮುದ್ರ ತೆರೆ ಮೊದಲಾದ ಅನೇಕ ದೃಷ್ಟಾಂತಗಳನ್ನು ಯುಕ್ತಿಗಳನ್ನೂ ಹೇಳಿದಿರಿ. ಅವೆಲ್ಲಾ ನಿಜವಾಗಿವೆ.

ಬಳಿಕ, ಶಿಷ್ಯನು ತನ್ನ ಸಂಶಯವನ್ನು ಪ್ರಕಟಮಾಡುತ್ತಾನೆ.

**ಆದೊಡೀದೇಹ ಮೊದಲಾದವೆಲ್ಲಂ ಬೋಧ ।**
**ವಾದವೆನಬೇಹುದದನೊಪ್ಪೆ ಲೋಕಾಯ ।**
**ತಾದಿ ಮತವಾಗದಿಹುದೆಂತು ॥೪॥**

**ಟೀಕಾ:-** ಆದೊಡೆ = ಆದಾಗ್ಯಾದರೂ, ಈ ದೇಹ ಮೊದಲಾದವೆಲ್ಲಂ= ಈ ದೇಹವೇ ಮೊದಲಾಗಿ ಅನಾತ್ಮವೆಲ್ಲವು, ಬೋಧವಾದವೆನಬೇಹುದು=ಚಿದ್ರೂ ಪಾತ್ಮ ಸ್ವರೂಪಗಳೆಂದು ಅಂಗೀಕರಿಸಬೇಕು, ಅದನೊಪ್ಪೆ=ಈ ಮಾತನ್ನು ಅಂಗೀ ಕರಿಸಿದರೆ, ಲೋಕಾಯತಾದಿ = ಚಾರ್ವಾಕಾದಿ, ಮತವಾಗದಿಹುದೆಂತು = ಮತ ವಾಗದೆ ಹೇಗೆ ಇದ್ದೀತು ?

**ತಾತ್ಪರ್ಯ:-** ತಾವು ಪೂರ್ವದಲ್ಲಿ ಹೇಳಿದ ಪ್ರಕಾರವಾದರೆ, ಈ ದೇಹಾದಿಗಳೆಲ್ಲವು ಆತ್ಮಸ್ವರೂಪಗಳು ಆಗಿರುತ್ತವೆಂದು ತಿಳಿಯಬೇಕಾಗುತ್ತದೆ. ಹೀಗೆ ಅಂಗೀಕಾರಮಾಡಿದರೆ; ಚಾರ್ವಾಕ ಮೊದಲಾದವರು ದೇಹ, ಇಂದ್ರಿಯ, ಮನ, ಬುದ್ಧಿ ಮೊದಲಾದವು ಆತಸ್ವರೂಪವೆಂದು ತಿಳದಿರುವರು. ಆ **ಚಾರ್ವಾಕಾದಿ**ಗಳ ಮತವನ್ನು ನಾವು ಸ್ವೀಕಾರ ಮಾಡಿದಂತಾಗುವದು. ಆಗಲಿ. ಅಂದರೆ, ವೇದಾಂತಕ್ಕೂ ಚಾರ್ವಾಕಾದಿ ಮತಕ್ಕೂ **ವೈಲಕ್ಷಣ್ಯ**ವಿಲ್ಲದಾಗುವದು. ಪುರುಷಾರ್ಥವೂ ಇಲ್ಲದ್ದಾಗುವದು. ಇದಕ್ಕೆ ಗತಿಯೇನು ?

ಬಳಿಕ, ಚಾರ್ವಾಕಾದಿಗಳ ಮತವಾಗದೆಂದು ಹೇಳಿದರೆ, ಮೊದಲು ಹೇಳಿದ್ದೆಲ್ಲವು ಸುಳ್ಳು ಎನಬೇಕಾಗುವದೆಂದು ಶಿಷ್ಯನು ಕೇಳುತ್ತಲಿದ್ದಾನೆ.

**ಅರಿವಲ್ಲವೆನೆ ಮುನ್ನವರುಹಿದರ್ಥಂಗಳಂ |**
**ತೊರೆಯಬೇಕಾಯ್ತು ಗುರುವರ್ಯ ನೀವೆಯಿಾದ |**
**ನರುಹೆಂದು ನಮಿಸಿದನು ಸೂನು ||೫||**

**ಟೀಕಾ:-** ಅರಿವು=ಚಿದ್ರೂಪು, ಅಲ್ಲವೆನೆ=ಅಲ್ಲವೆಂದು ಹೇಳಿದರೆ, ಮುನ್ನ=ಮೊದಲು, ಅರುಹಿದ=ತಿಳಿಸಿದ, ಅರ್ಥಂಗಳಂ=ಅರ್ಥಗಳನ್ನು, ತೊರೆಯಬೇಕಾಯ್ತು=ಬಿಡಬೇಕಾಗುವದು, ಗುರುವರ್ಯ=ಗುರು ಶ್ರೇಷ್ಠನೇ !, ನೀವೆ=ನೀವು, ಇದನು=ಈ ವಿಷಯವನ್ನು, ಅರುಹೆಂದು=ತಿಳಿಸಬೇಕೆಂದು, ಸೂನು=ಶಿಷ್ಯನು, ನಮಿಸಿದನು=ನಮುಸ್ಕಾರ ಮಾಡಿದನು.

**ತಾತ್ಪರ್ಯ:-** ಜಡವಾದ ದೇಹಾದಿಗಳು ಅರುರೂಪ ಆತ್ಮಸ್ವರೂಪುಗಳು ಆಗಲಾರವು. ಎಂದು ತಾವು ಹೇಳಿದರೆ; ಮೊದಲು ಜಗತ್ತೆಲ್ಲವು ತಾನೆ ಎಂದು ಹೇಳಿದ ಅರ್ಥಗಳನ್ನು ತ್ಯಾಗಮಾಡಬೇಕಾಗುತ್ತದೆ. ಈ ರೀತಿಯಾದ ಸಂಶಯವು ನನ್ನನ್ನು ಬಾಧಿಸುತ್ತದೆ. ಆದ್ದರಿಂದ, ಹೇ ಗುರುವೇ ! ನಿಮ್ಮ ಹೊರತು ಈ ಸಂಶಯವನ್ನು ನಿವಾರಣ ಮಾಡುವಂಥವರು ಯಾರೂ ಇಲ್ಲದ್ದರಿಂದ; ತಾವೇ ಈ ವಿಷಯವನ್ನು ತಿಳಿಸಬೇಕೆಂದು ಶಿಷ್ಯನು ಬೇಡಿಕೊಳ್ಳುತ್ತಾ ನಮುಸ್ಕಾರವನ್ನು ಮಾಡುವಂಥವನಾದನು.

## ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೫

**ಬಳಿಕ,** ಹಿಂದಿನ ಸೂತ್ರದ ಸರ್ವಾತ್ಮಕೋಪದೇಶದಲ್ಲಿ; ತನಗೆ ಕಂಡುಬಂದ ಸಂಶಯವನ್ನು ನಿವೇದನ ಮಾಡಿದನು. ಅದಕ್ಕೆ ಗುರುಗಳು ಶಿಷ್ಯನನ್ನು

ಕುರಿತು— 'ಸರ್ವ ಖಲ್ವಿದಂ ಬ್ರಹ್ಮ, ಆತ್ಮೈವೇದಂ ಸರ್ವಂ' ಇದೆಲ್ಲವೂ ಬ್ರಹ್ಮವೇ ಅಥವಾ ಆತ್ಮನೇ ಎಂದು ಸರ್ವಾತ್ಮಕೋಪದೇಶವು ಹೇಳಲ್ಪಡುತ್ತದೆ. ಅಲ್ಲಲ್ಲಿ ನೀನು ಕಾಣುವ ನಾಮರೂಪಗಳನ್ನು ಕಳೆದು ಉಳಿದ ಸತ್ತು ಚಿತ್ತಾನಂದ ಬ್ರಹ್ಮವೇ ನಾನೆಂದು ತಿಳಿ, ಅರ್ಥಾತ್ ಈ ಸೂತ್ರದಲ್ಲಿ ಜಗನ್ಮಿಥ್ಯಾ ಬ್ರಹ್ಮ ಸತ್ಯ ಎಂಬ ಸಿದ್ಧಾಂತವನ್ನು ತಿಳಿಸುತ್ತಾರೆ. ಜಗತ್ತು ಮಿಥ್ಯೆಯಾದರೆ, ಸಾಧನಗಳೂ ಮಿಥ್ಯೆಯಾದವು ಅವುಗಳಿಂದ ಮೋಕ್ಷವಾಗದು. ಎಂದು ಶಂಕೆಯನ್ನು ಮಾಡಿದರೆ, ಪುಸಿಯ ಸಾಧನದಿಂದಲೂ ಸತ್ಯ ಮೋಕ್ಷವು ಸಿದ್ಧಿಸುತ್ತದೆಂದು ನಿರೂಪಣ ಮಾಡುತ್ತಾರೆ. ಮತ್ತು ಈ ಸೂತ್ರದಲ್ಲಿ 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೆತ್ಯೇವ ಸತ್ಯಂ, ಎಂಬ ಛಾಂದೋಗ್ಯ ಶ್ರುತಿಯನ್ನು ಆಧಾರವಾಗಿಟ್ಟುಕೊಂಡು. ಅದರ ಮೇಲೆ ಎರಡು ಅನುಮಾನ ಪ್ರಮಾಣಗಳನ್ನು ಹೇಳುತ್ತಾರೆ. ಜಗತ್ತು ಮಿಥ್ಯಾ ಅನ್ನುವಲ್ಲಿ ಒಂದು, ಬ್ರಹ್ಮವು ಸತ್ಯವೆಂದು ಹೇಳುವಲ್ಲಿ ಒಂದು, ಹೀಗೆ ಎರಡು ಅನುಮಾನಗಳು ಹೇಳಲ್ಪಡುತ್ತವೆ.

**ಸೂತ್ರ || ನಾಮರೂಪಗಳೆಲ್ಲಮಂ ಮಿಥ್ಯೆಯೆಂದು ತಿಳಿ |**
**ಯಾ ಮಹಾ ಸಂವಿತ್ತಿನಲ್ಲಿ ತೋರ್ಪ ||**

**ಟೀಕಾ:-** ಆ ಮಹಾಸಂವಿತ್ತಿನಲ್ಲಿ=ಅಖಂಡ ಚಿದ್ರೂಪ ಲಕ್ಷಣಾತ್ಮಕ ಬ್ರಹದಲ್ಲಿ, ತೋರ್ಪ=ತೋರುವ, ನಾಮರೂಪಗಳೆಲ್ಲಮಂ=ಎಲ್ಲ ನಾಮರೂಪುಗಳನ್ನು, ಮಿಥ್ಯೆಯೆಂದು=ಸುಳ್ಳೆಂದು, ತಿಳಿ=ಅರಿ.

**ತಾತ್ಪರ್ಯ:-** ಅಖಂಡ ಸಚ್ಚಿದಾನಂದರೂಪ ಬ್ರಹ್ಮದಲ್ಲಿ ಈ ನಾಮರೂಪಾತ್ಮಕ ಜಗತ್ತು ಕಲ್ಪಿತವಾಗಿರುತ್ತದೆ. ರಜ್ಜುವಿನಲ್ಲಿ ಸರ್ಪ, ಶುಕ್ತಿಯಲ್ಲಿ ರಜತ ಇವುಗಳಂತೆ; ಆದ್ದರಿಂದ ಮಿಥ್ಯೆಯೆಂದು ತಿಳಿ.

ಬಳಿಕ, ಎಲ್ಲಿ ಇದೆಲ್ಲವಾತ್ಮನೆಂದು ಹೇಳಿತೋ, ಅಲ್ಲಿ ನೀನು ನಾಮರೂಪುಗಳನ್ನು ಮಿಥ್ಯೆಯೆಂದು ತಿಳಿ. ಎಂಬುದನ್ನು ಹೇಳುತ್ತಾರೆ.

**ಸೂನು ಕೇಳಾ ಜಗಂ ತಾನಾತ್ಮನೆಂಬುದ |**
**ಕ್ಕಾ ನಾಮರೂಪುಗಳ ತೋರ್ಕೆ ಪುಸಿಯೆಂಬು |**
**ದೇ ನಿಶ್ಚಿತಾರ್ಥವೆನಬೇಕು ||೧||**

**ಟೀಕಾ:-** ಸೂನು ಕೇಳ್ = ಮಗನೇ ಆಲಿಸು, ಆ ಜಗಂ = ಆ ಜಗತ್ತು, ತಾನಾತ್ಮನೆಂಬುದಕ್ಕೆ = ಅದು ಆತ್ಮಸ್ವರೂಪವೆಂದು ಹೇಳುವದಕ್ಕೆ, ಆ ನಾಮರೂಪಗಳ ತೋರ್ಕೆ = ಆ ನಾಮರೂಪಗಳ ಪ್ರತೀತಿಯು, ಪುಸಿಯೆಂಬುದೇ =

ಸುಳ್ಳೆಂದು ತಿಳಿಯುವದೇ, ನಿಶ್ಚಿತಾರ್ಥವೆನಬೇಕು=ಇದೇ ನಿಜವಾದ ಅರ್ಥವೆಂದು ತಿಳಿಯಬೇಕು.

**ತಾತ್ಪರ್ಯ:-** ಆಭರಣಗಳು ಭಂಗಾರವೆಂದರೆ ತೆರೆನೊರೆಗಳು. ಜಲವು ಅಂದರೆ, ಅಲ್ಲಿ ಆ ನಾಮರೂಪಗಳನ್ನು ಬಾಧಿಸಿ ಭಂಗಾರ, ಮತ್ತು ನೀರನ್ನು ತಿಳಿಯುವಂತೆ; ಇದೆಲ್ಲಾ ಬ್ರಹ್ಮವೆಂದು ಹೇಳಿದರೆ, ನೀನು ಕಾಣಿಸುವ ನಾಮ ರೂಪಗಳು ಮಿಥ್ಯೆಯೆಂದು ಅರ್ಥವನ್ನು ಮಾಡು. ಎಂದುಹೇಳುತ್ತಾರೆ.

**ಬಳಿಕ,** ಪರಮಾತ್ಮನೇ ಜಗತ್ತಾದರೂ, ಜಗತ್ತಿಗೆ ಸತ್ಯತ್ವ ಬರಲಾರ ದೆಂದು ರಜ್ಜುಸರ್ಪ ದೃಷ್ಟಾಂತವನ್ನು ಕೊಟ್ಟು ಹೇಳುತ್ತಾರೆ.

**ಸರ್ಪಾದಿ ಭಾವದಿಂ ತೋರ್ಪುದೇ ರಜ್ಜುವೆನೆ ।**
**ಸರ್ಪಾದಿ ಭಾವದಲ್ಲಿ ಯಾರಜ್ಜುತ್ವ ।**
**ಮಿರ್ಪುದೇ ಲೋಕದೊಳಗಿಂತು ॥೨॥**

**ಟೀಕಾ:-** ಸರ್ಪಾದಿ ಭಾವದಿಂ= ಹಾವು ಮುಂತಾದ ರೂಪದಿಂದ, ತೋರ್ಪುದೇ=ತೋರುವದೇ, ರಜ್ಜುವೆನೆ=ಹಗ್ಗವೆಂದು ಹೇಳಿದರೆ, ಸರ್ಪಾದಿ ಭಾವ ದಲ್ಲಿ=ಆ ಹಾವು ಮೊದಲಾದ ಆಕಾರಗಳಲ್ಲಿ, ಲೋಕದೊಳು=ಜಗತ್ತಿನಲ್ಲಿ ರಜ್ಜುತ್ವ=ಹಗ್ಗವು, ಇರ್ಪುದೇ=ಇರುವದೇ ? (ಇಲ್ಲ)

**ತಾತ್ಪರ್ಯ:-** ಹಗ್ಗವೇ ಹಾವಾಗಿ ತೋರುತ್ತದೆ. ಪರಂತು ಹಾವಿಗೆ ರಜ್ಜು ವಿನಲ್ಲಿರುವ ರಜ್ಜುತ್ವ ಬರಲಾರದು. ಅಂದರೆ, ವ್ಯಾವಹಾರಿಕ ಸತ್ತೆಯು ಬರ ಲಾರದು. ಇದು ಹೇಗೋ, ಹಾಗೇ ಪರಮಾತ್ಮನೇ ಜಗತ್ತಾದರೂ, ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವು ಬರಲಾರದು. ಕಿಂತು; ಜಗತ್ತು ಮಿಥ್ಯೆಯೇ ಆಗಿರುತ್ತ ದೆಂಬ ಭಾವವು.

ಮತ್ತು; ಈ ವಿಷಯಕ್ಕೆ ಮತ್ತೊಂದು ದೃಷ್ಟಾಂತವನ್ನು ಕೊಡುತ್ತಾರೆ.

**ಪರಮನೇ ಜಗವೆನಿಸುತಿರಲೀ ಜಗತ್ತಿಗಾ ।**
**ಪರಮಾರ್ಥವೆಂತು ನಿಜವಕ್ಕು ತಸ್ಕರಂ ।**
**ಕೊರಡಾಗ ದೊಪ್ಪುತಿಹ ಪಾಂಗು ॥೩॥**

**ಟೀಕಾ:-** ಪರಮನೇ = ಪರಮಾತ್ಮನೇ, ಜಗವೆನಿಸುತಿರಲ್=ಜಗತ್ತೆಂದು ಹೇಳಿಸಿಕೊಂಡರೂ, ಈ ಜಗತ್ತಿಗೆ=ಈ ಜಗತ್ತಿಗೆ, ಆ ಪರಮಾರ್ಥವೆಂತು=ಆ ತ್ರಿಕಾಲ ಅಬಾಧ್ಯರೂಪ ಸತ್ಯತ್ವವು ಹೇಗೆಬಂದೀತು ? ಬರಲಾರದು. ಹೇಗಂದರೆ?

ತಸ್ಕರಂ=ಕಳ್ಳನು, ಕೊರಡಾಗದೆ=ಮೋಟುಮರವಾಗದೆ, ಒಪ್ಪುತಿಹ ಪಾಂಗು= ಶೋಭಿಸುವ ಹಾಗೆ.

ತಾತ್ಪರ್ಯ:- ಮೋಟುಮರವೇ ನಸುಗತ್ತಲೆಯಲ್ಲಿ ಕಳ್ಳನಂತೆ ಕಾಣುತ್ತಿರುತ್ತದೆ. ಅಂದರೆ, ಮೋಟಮರದಲ್ಲಿ ಕಳ್ಳನ ಭ್ರಾಂತಿಯಾಗಿದೆ. ಮೋಟಮರವು ಕಳ್ಳನಾದರೂ ಕಳ್ಳನು ಮಾತ್ರ ಮೋಟುಮರದಂತೆ ಸತ್ಯವಾಗಲಾರನು. ಈ ದೃಷ್ಟಾಂತದಂತೆ, ಬ್ರಹ್ಮವೇ ಜಗತ್ತಾದರೂ, ಜಗತ್ತು ಪಾರಮಾರ್ಥಿಕ ಸತ್ಯವುಳ್ಳದ್ದಾಗದು. ಕಿಂತು, ಮಿಥ್ಯಾ ಪ್ರತೀತಿಯಾಗಿದೆಯೆಂಬ ಭಾವವು.

ಬಳಿಕ, ಜಗತ್ತು ಮಿಥ್ಯೆಯಾಗಿದೆ ಎಂಬುದಕ್ಕೆ ರಜ್ಜುಸರ್ಪ, ಸ್ಥಾಣುಚೋರ, ನ್ಯಾಯಗಳನ್ನು ಉದಾಹರಿಸಿ, ಈಗ ಛಾಂದೋಗ್ಯೋಪನಿಷತ್ತಿನ ಶ್ರುತಿ ಪ್ರಮಾಣವನ್ನು ಕೊಡುತ್ತಾರೆ.

ನೀನಿಂತು ತಿಳಿ ವಿಕಾರೋ ನಾಮ ರೂಪವೆನುತ |
ಈ ನಾಮ ರೂಪಗಳನೆ ಪುಸಿಯೆಂದು ಶ್ರುತಿ |
ತಾನೊರೆವುದಾದ ಕಥದಿಂದ ||೪||

ಟೀಕಾ:-ನೀನು ಇಂತುತಿಳಿ=ನೀನು ಹೀಗೆ ತಿಳಿ, ವಿಕಾರೋನಾಮರೂಪವೆನುತ=ನಾಮ ರೂಪಗಳೆಲ್ಲವು ಕಾರ್ಯಗಳೆಂದು ಹೇಳುತ್ತಾ, ಈ ನಾಮರೂಪುಗಳನೆ ಪುಸಿಯೆಂದು=ಈ ನಾಮರೂಪುಗಳು ಸುಳ್ಳೆಂದು, ಶ್ರುತಿ=ಉಪನಿಷದ್ವಾಕ್ಯವು, ತಾನೊರೆವುದಾದ ಕಥದಿಂದ=ತಾನು ಹೇಳುವಕಾರಣ.

ತಾತ್ಪರ್ಯ:-ಪ್ರತ್ಯಕ್ಷವಾಗಿ ತೋರುವ ನಾಮರೂಪಗಳು ಕಾರ್ಯಗಳಾದ್ದರಿಂದ ಮಿಥ್ಯೆಗಳಾಗಿರುತ್ತವೆ. ಕಾರಣವಾದ ಸದ್ಬ್ರಹ್ಮವು ಸತ್ಯವಾಗಿರುತ್ತದೆ. ಹೀಗೆಂದು ಶ್ರುತಿಯು ಕಾರ್ಯಗಳಾದ ನಾಮರೂಪಾತ್ಮಕ ಪ್ರಪಂಚಕ್ಕೆ ಮಿಥ್ಯತ್ವವನ್ನೂ, ಕಾರಣವಾದ ಸದ್ರೂಪ ಬ್ರಹ್ಮಕ್ಕೆ ಸತ್ಯತ್ವವನ್ನು ಹೇಳುತ್ತದೆ. ಶ್ರುತಿಯು ಕಾರ್ಯ ಪ್ರಪಂಚಕ್ಕೆ ಮಿಥ್ಯತ್ವ ಹೇಳುವದರಿಂದ ಅದು ಕಲ್ಪಿತವಾಗಿರುತ್ತದೆಂದು ಅರ್ಥವನ್ನು ಮಾಡಬೇಕಾಗುತ್ತದೆ. ಅದಕ್ಕಾಗಿ ಮೇಲೆ ರಜ್ಜು ಸರ್ಪಾದಿ ದೃಷ್ಟಾಂತಗಳನ್ನು ಉದಾಹರಿಸಿರುತ್ತಾರೆ. ಶ್ರುತಿಯಲ್ಲಿ ವಿಕಾರ ಶಬ್ದಕ್ಕೆ ಕಾರ್ಯವೆಂದು ತಿಳಿಯಬೇಕು. ಆ ಶ್ರುತಿಯು ಹೀಗೆ ಹೇಳಿದೆ. '**ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೆತ್ಯೇವ ಸತ್ಯಂ**, ಏನಂದರೆ ಕಾರಣವಾದ ಮೃತ್ತಿಕೆಯು ಸತ್ಯವಾಗಿರುತ್ತದೆ. ಕಾರ್ಯಗಳಾದ ಹರಿವೆ, ಮುಚ್ಚಳ, ಗಡಿಗೆ, ಕೊಡಗಳೆಂಬ ರೂಪುಗಳು ಮತ್ತು ಆ ಹೆಸರುಗಳು ಇವುವಾಣಿಯಿಂದ ಮಾತ್ರ ಅವೆ. ವಸ್ತುತಃ ಇಲ್ಲ. ಆದ್ದರಿಂದ ಮಿಥ್ಯೆಗಳಾಗಿರುತ್ತವೆ. ಕೊಡಗಡಿಗೆಗಳೆಂಬ ನಾಮರೂಪುಗಳು

ತೋರುವದಕ್ಕಿಂತ ಪೂರ್ವದಲ್ಲಿ ಮೃತ್ತಿಕೆಯು ಇದೆ. ಅವು ಒಡೆದು ನಾಶವಾದ ಮೇಲೆಯೂ ಮಣ್ಣು ಇರುತ್ತದೆ. ಆದರಿಂದ ಸತ್ಯವಾಗಿದೆ. ಅಂದರೆ ಆದ್ಯಂತಗಳಲ್ಲಿ ಇದ್ದದ್ದು ಮಧ್ಯದಲ್ಲಿಯೂ ಇರುತ್ತದೆ. ಅದು ಸತ್ಯವಾಗಿದೆ. ಯಾವದು ಮಧ್ಯೆ ದಲ್ಲಿದ್ದು ಆದ್ಯಂತಗಳಲ್ಲಿರುವದಿಲ್ಲವೋ, ಅದು ಮಿಥ್ಯೆಯಾಗಿರುತ್ತದೆ. ಇದರಂತೆ, ಸದ್ರೂಪ ಬ್ರಹ್ಮವು ಆದ್ಯಂತಗಳಲ್ಲಿ ಇರುವದರಿಂದ ಸತ್ಯವಾಗಿದೆ ನಾಮರೂಪಾ ತ್ಮಕ ಪ್ರಪಂಚವು ಆದ್ಯಂತಗಳಲ್ಲಿರದೆ ಮಧ್ಯದಲ್ಲಿಮಾತ್ರ ಇರುವದರಿಂದ ಮಿಥ್ಯೆ ಯಾಗಿರುತ್ತದೆ. ಮತ್ತು ಕೊಡಗಡಿಗೆಗಳು ಒಂದರಲ್ಲೊಂದು ಇಲ್ಲದ್ದರಿಂದ ಮಿಥ್ಯೆ ಗಳಾಗಿವೆ- ಮಣ್ಣು ಎಲ್ಲ ಕೊಡಗಡಿಗೆಗಳಲ್ಲಿರುವದರಿಂದ ಸತ್ಯವಾಗಿದೆ. ಇದರಂತೆ ಘಟಪಟಾದಿಗಳು ಒಂದರಲ್ಲಿ ಒಂದು ಇಲ್ಲದ್ದರಿಂದ ಮಿಥ್ಯೆಗಳಾಗಿರುತ್ತವೆ. 'ಸತ್ತು, ಅದೆಯೆಂಬ ಸದ್ರೂಪ ಬ್ರಹ್ಮವು ಘಟವದೆ. ಪಟವದೆ ಎಂದು ಎಲ್ಲದರಲ್ಲಿರು ವದರಿಂದ ಸತ್ಯವಾಗಿರುತ್ತದೆ. ಈ ಕಾರಣದಿಂದ ಗ್ರಂಥಕರ್ತರು ಪ್ರಪಂಚಕ್ಕೆ ಒಂದು ಮಿಥ್ಯಾಪರವಾದ ಅನುಮಾನವನ್ನು ಹೇಳುತ್ತಾರೆ. ಮತ್ತು ಸದ್ರೂಪ ಬ್ರಹ್ಮವು ಸತ್ಯವದೆ ಎಂಬುದಕ್ಕೊಂದು ಅನುಮಾನವನ್ನು ಹೇಳುತ್ತಾರೆ.

ಬಳಿಕ, ನಾಮರೂಪಾತ್ಮಕ ಪ್ರಪಂಚವು ಮಿಥ್ಯೆಯೆಂಬುದಕ್ಕೆ ಅನುಮಾನ ಪ್ರಮಾಣವನ್ನು ಉದಾಹರಿಸುತ್ತಾರೆ.

**ಕುವರ ಕೇಳೀ ಪ್ರಪಂಚವೆ ಮಿಥ್ಯೆಯರಿವಿಗ |**
**ನ್ಯವೆಯಾಗಿ ಕಾಣಿಸುವದರಿಂ ಕನಸಿನಿಂ |**
**ದವೆ ತೋರ್ಪದೃಶ್ಯ ಚಯದಂತೆ ||೩||**

**ಟೀಕಾ:-** ಕುವರ ಕೇಳ್=ಎಲೈ ಪುತ್ರನೇ ಕೇಳು, ಈ ಪ್ರಪಂಚವೆ ಮಿಥ್ಯೆ= ಈ ಜಗತ್ತು ಮಿಥ್ಯಾ, ಅರುವಿಗೆ=ಚಿತ್ತಿಗೆ, ಅನ್ಯವೆಯಾಗಿ=ಭಿನ್ನವಾಗಿ, ಕಾಣಿಸುವ ದರಿಂ-ತೋರುವದರಿಂದ, ಕನಸಿನಿಂದವೆ = ಸ್ವಪ್ನದಿಂದ, ತೋರ್ಪ=ತೋರುವ, ದೃಶ್ಯಚಯದಂತೆ=ಸ್ವಪ್ನ ಪ್ರಪಂಚದ ಹಾಗೆ.

ತಾತ್ಪರ್ಯ:- ಈ ಪ್ರಪಂಚವು ಮಿಥ್ಯೆ, ಇದು ಪ್ರತಿಜ್ಞಾ ವಾಕ್ಯವಾಗಿರು ತ್ತದೆ. ಅರುವಿಗೆ ಅನ್ಯವೆಯಾಗಿ, ಇದು ಹೇತುಪದವಾಗಿರುತ್ತದೆ. ಸ್ವಪ್ನದ ಹಾಗೆ, ಇದು ದೃಷ್ಟಾಂತವಾಗಿರುತ್ತದೆ. ಈ ರೀತಿ ಪ್ರತಿಜ್ಞಾ, ಹೇತು ದೃಷ್ಟಾಂತಗಳಿಂದ ಕೂಡಿರುವದು ಅನುಮಾನ ಪ್ರಮಾಣವಾಗಿರುತ್ತದೆ. ಸ್ವಪ್ನವು ತನಗೆ ದೃಶ್ಯ ವಾಗಿ ಕಾಣಿಸಿಕೊಳ್ಳುವದರಿಂದ ಹೇಗೆ ಮಿಥ್ಯೆಯಾಗಿರುವದೋ, ಹಾಗೆ ಈ ನಾಮ ರೂಪಾತ್ಮಕ ಜಗತ್ತಾದರೂ ಅರುವಿಗೆ ಭಿನ್ನವಾದ್ದರಿಂದ ಮಿಥ್ಯೆಯಾಗಿರುತ್ತದೆ. ಇಲ್ಲಿ ಮಿಥ್ಯತ್ವವು ಸಾಧ್ಯವಾಗಿದೆ. ಪ್ರಪಂಚವು ಪಕ್ಷವಾಗಿದೆ. ಸಾಧ್ಯಪಕ್ಷ ಪ್ರತಿ

ಪಾದಕ ವಾಕ್ಯವು ಪ್ರತಿಜ್ಞಾ ವಾಕ್ಯವೆನಿಸುತ್ತದೆ. ಆ ಮಿಥ್ಯತ್ವರೂಪ ಸಾಧ್ಯವನ್ನು ಸಾಧಿಸುವಂಥಾ ವಾಕ್ಯವೇ **ಹೇತು**ವಾಗಿರುತ್ತದೆ. ಎಲ್ಲೆಲ್ಲಿ ಹೊಗೆಯಿರುವದೋ, ಅಲ್ಲಲ್ಲಿ ಅಗ್ನಿಯುಂಟು ಎಂಬಂತೆ. ಎಲ್ಲೆಲ್ಲಿ ದೃಶ್ಯತ್ವ ಅಲ್ಲಲ್ಲಿ ಮಿಥ್ಯತ್ವವಿರುತ್ತದೆ ಎಂದು **ವ್ಯಾಪ್ತಿ**ಯಾಗುತ್ತದೆ. ಈ ವ್ಯಾಪ್ತಿಯನ್ನು ಬೋಧಕ ವಾಕ್ಯವೇ **ಹೇತು**ವಾಗಿರುತ್ತದೆ.ವಾದಿಪ್ರತಿವಾದಿಗಳಿಬ್ಬರಿಗೂ ಸಂಮತವಾದದ್ದಕ್ಕೆ **ದೃಷ್ಟಾಂತ**ವೆಂದು ಹೇಳುತ್ತಾರೆ. ಸಾಧ್ಯ ಮತ್ತು ಹೇತು ಇವೆರಡು ಪ್ರತ್ಯಕ್ಷವಾಗಿ ತೋರುವದರಿಂದ ದೃಷ್ಟಾಂತವೆಂದು ಹೇಳುವರು. ಅಡಿಗೆ ಮನೆಯಲ್ಲಿ ವ್ಯಾಪ್ತಿರೂಪ ಧೂಮವದೆ. ಮತ್ತು ಸಾಧ್ಯವಾದ ಅಗ್ನಿಯೂ ಇರುತ್ತದೆ. ಇದರಂತೆ ಸ್ವಪ್ನದಲ್ಲಿ ವ್ಯಾಪ್ತಿರೂಪ ದೃಶ್ಯತ್ವವದೆ. ಹಾಗು ಮಿಥ್ಯತ್ವ ರೂಪ ಸಾಧ್ಯವೂ ಉಂಟು. ಆದ್ದರಿಂದ ಸ್ವಪ್ನವು ದೃಷ್ಟಾಂತವಾಗಿರುತ್ತದೆ.ಅರ್ಥಾತ್ ಸ್ವಪ್ನದಂತೆ ಜಗತ್ತು ಮಿಥ್ಯೆಯಾಗಿರುತ್ತದೆಂಬ ಭಾವವು.

**ಬಳಿಕ,** ಸಚ್ಚಿದ್ರೂಪ ಬ್ರಹ್ಮವು ಸತ್ಯವೆಂಬುದಕ್ಕೆ ಅನುಮಾನವನ್ನು ಉದಾಹರಿಸುತ್ತಾರೆ.

**ಸೂನು ತಿಳಿ ಪುಸಿಯಾಗದೇನುಂಟದರಿವಿಂಗೆ ।**
**ತಾನನ್ಯವಲ್ಲ ವಾತ್ಮನಂತೆಂಬುದನು ।**
**ಮಾನವಿಂತಿದು ಸಹಜ ಸಿದ್ಧ** ||೬||

**ಟೀಕಾ:-** ಸೂನು ತಿಳಿ=ಪುತ್ರನೇ ನೀನರಿ, ಏನು ಉಂಟು=ಯಾವದಿರುವದೋ, ಅದು=ಸದ್ರೂಪ ಬ್ರಹ್ಮವು, ಪುಸಿಯಾಗದು=ಮಿಥ್ಯೆಯಾಗಲಾರದು, ತಾನು ಅನ್ಯವಲ್ಲಾಗಿ=ತಾನುಬೇರೆಯಾಗದ ಕಾರಣದಿಂದ, ಆತ್ಮನಂತೆ=ತನ್ನಂತೆ, ಎಂಬುದು=ಹೀಗೆಹೇಳುವದು,ಸಹಜಸಿದ್ಧ=ಯಥಾರ್ಥವಾದ,ಅನುಮಾನವಿಂತಿದು= ಇದು ಅನುಮಾನ ಪ್ರಮಾಣವಾಗಿರುತ್ತದೆ.

**ತಾತ್ಪರ್ಯ:-** ಯಾವದಿರುವದೋ ಅದು ಪುಸಿಯಾಗದು. ಇದು **ಪ್ರತಿಜ್ಞಾ ವಾಕ್ಯವು.** ಇರುವದು ಅಂದರೆ, ಸದ್ರೂಪು ಎಂಬರ್ಥವು. ಯಾವ ಸದ್ರೂಪ ಬ್ರಹ್ಮವು ಸರ್ವ ಘಟಪಟಾದಿ ವಸ್ತುಗಳಲ್ಲಿ ಮಣಿಗಣದೊಳಗಿನ ಸೂತ್ರದಂತೆ ವ್ಯಾಪಕವಾಗಿರುತ್ತದೆ. ಎಲ್ಲದರಲ್ಲಿಯೂ ಇರುವದಾಗಿದೆ. ಅದೇ ಸದ್ವಸ್ತು ಪುಸಿಯಾಗದೆಂದು ಇಲ್ಲಿ ಹೇಳಲ್ಪಡುತ್ತದೆ. ಯಾಕಂದರೆ, ಅದು ಬೇರೆಯಾಗದೆ ಇರುವದರಿಂದ ಎಂಬುದು **ಹೇತುವಾಗಿರುತ್ತದೆ.** ಅಂದರೆ ಅದೆ. ಎಂಬ ಸತ್ತು ಬ್ರಹ್ಮಸ್ವರೂಪವೇ ಹೊರತು ಬ್ರಹ್ಮಕ್ಕೆ ಅನ್ಯವಲ್ಲ. ಹೇಗಂದರೆ, ಆತ್ಮನಂತೆ ಎಂಬುದು ದೃಷ್ಟಾಂತವಾಗಿರುತ್ತದೆ. ನಾನು ಇದ್ದೇನೆಂದು ಆತ್ಮನು ಅನ್ನುತ್ತಾನೆ. ಅದರಿಂದ **ಸದ್ರೂಪನು.** ನಾನು ತಿಳಿಯುತ್ತೇನೆ. ಅನ್ನುವದರಿಂದ

ಚಿದ್ರೂಪನಾಗಿರುವನು. ಸತ್ತು ಚಿತ್ತು ಇವೆರಡು ಆತ್ಮನ ಸ್ವರೂಪಗಳಾಗಿರುವವೇ ಹೊರತು ಬೇರೆಯಿಲ್ಲ. ಈ ದೃಷ್ಟಾಂತವು ಸರ್ವಾನುಭವಸಿದ್ಧವಾಗಿರುತ್ತದೆ. ಇರುವವನು, ತಿಳಿಯುವವನು, ನಾನಾಗಿರುವೆನೆಂಬುದು ಸರ್ವರ ಅನುಭವವಾಗಿದೆ. ಈ ಅಪರೋಕ್ಷನಾದ ಆತ್ಮನು ಸದ್ರೂಪ ಚಿದ್ರೂಪನಾಗಿರುವದರಿಂದ ಹೇಗೆ ಪುಸಿಯಾಗದೆ ಸತ್ಯನಾಗಿರುವನೋ; ಹಾಗೆ ಸದ್ರೂಪವಾದ ಬ್ರಹ್ಮವು ಸತ್ಯವಾಗಿರುತ್ತದೆ. ಎಂಬುದು ಬ್ರಹ್ಮಸತ್ಯ ಎಂಬುದಕ್ಕೆ ಅನುಮಾನ ಪ್ರಮಾಣವಾಗಿರುತ್ತದೆ.

ಸರ್ವ ನಾಮರೂಪಾದಿ ವಸ್ತುಗಳಲ್ಲಿ ಅನುಸ್ಯೂತವಾಗಿರುವ ಬ್ರಹ್ಮವು ಸತ್ತಾಗಿದೆ. ಇದು ಅಕಲ್ಪಿತವಾಗಿದೆ. ಒಂದರೊಳಗೊಂದಿಲ್ಲದ ಘಟಪಟಾದಿಗಳು ಕಲ್ಪಿತಗಳಾಗಿರುತ್ತವೆ. ಭಿನ್ನ ಭಿನ್ನಗಳಾಗಿರುವ ಘಟಪಟಾದಿಗಳಲ್ಲಿ ಅಭಿನ್ನವಾಗಿರುವದೇ ಪಾರಮಾರ್ಥಿಕವಾದ ಸತ್ತು ಆಗಿದೆ. ಕಲ್ಪಿತಗಳಾದ ಸರ್ಪ, ದಂಡ, ಮಾಲಾದಿಗಳಲ್ಲಿ ಅನುಸ್ಯೂತವಾದ ಇದಮಂಶದಂತೆ ತಿಳಿಯಬೇಕು. ಸರ್ಪ ದಂಡಾದಿಗಳಂತೆ ಘಟಪಟಾದಿಗಳು ವ್ಯಾವೃತ್ತಗಳಾದ್ದರಿಂದ ಕಲ್ಪಿತಗಳು ಆಗಿರುತ್ತವೆ. ಎಲ್ಲದರಲ್ಲಿ ಅನುಸ್ಯೂತವಾಗಿ ಅಕಲ್ಪಿತವಾದದ್ದು ಸತ್ಯವಾಗಿದೆ. ವ್ಯಾವೃತ್ತವಾಗಿ ಕಲ್ಪಿತವಾದದ್ದು ಮಿಥ್ಯೆಯಾಗಿರುತ್ತದೆ. ಈ ರೀತಿ ಸತ್ಯ ಮತ್ತು ಮಿಥ್ಯೆಯೆಂದು ಬುದ್ಧಿಯಿಂದ ತಿಳಿಯಲಿಕ್ಕೆ ಬರುತ್ತವೆ.

**ಶಂಕಾ:-** ತಾವು ಅದ್ವೈತಿಗಳು ಎರಡು ಬುದ್ಧಿಗಳು ಇಲ್ಲ. ಆದ್ದರಿಂದ ಸತ್ಯ ಮಿಥ್ಯಜ್ಞಾನವು ತಮಗೆ ಆಗದೆಂದು ಶಂಕೆಯನ್ನು ಮಾಡುತ್ತಾನೆ. ಅಂದರೆ, ಬ್ರಹ್ಮವು ಸತ್ಯವೆಂಬ ಬುದ್ಧಿಯೊಂದು ಜಗತ್ತು ಮಿಥ್ಯೆಯೆಂಬ ಬುದ್ಧಿಯೊಂದು ಹೀಗೆ ಎರಡು ಬುದ್ಧಿಗಳು ಆಗುತ್ತವೆ ಹೀಗಾದ್ದರಿಂದ ಅದ್ವೈತಕ್ಕೆ ವಿರೋಧವಾಗುತ್ತದೆ.

**ಸಮಾಧಾನ:-** ಎಲ್ಲ ಕಡೆಗೆ ವ್ಯವಹಾರಕಾಲದಲ್ಲಿ ಕಲ್ಪಿತಗಳಾದ ಸದಸತ್ತ ವಿಭಾಗಾತ್ಮಕ ಎರಡು ಬುದ್ಧಿಗಳು ತೋರುತ್ತವೆಂದು ಎಲ್ಲರೂ ಒಪ್ಪಿರುವರು.

**ಶಂಕಾ:-** ಹಾಗಾದರೆ, ಎಲ್ಲ ಕಡೆಗೆ ಇದ್ದದ್ದು ಸಾಮಾನ್ಯಸತ್ತೆಂದೂ ಕಲ್ಪಿತ ವಸ್ತುವಿನೊಡನೆ ಬೆರತುಕೊಂಡಿರುವದು ವಿಶೇಷಸತ್ತೆಂದೂ, ಹೀಗೆ ಸಾಮಾನ್ಯ ವಿಶೇಷಗಳೆಂಬ ಎರಡು ಸತ್ತೆಗಳಾಗಬೇಕಾಯಿತು. ಹೀಗೆ ಇದಕ್ಕೆ ಒಪ್ಪಿದರೆ, ದ್ವೈತಾಪತ್ತಿಯು ಬರುತ್ತದೆ. ಆದರಿಂದ ಅದ್ವೈತಕ್ಕೆ ಹಾನಿಯಲ್ಲವೆ?

**ಸಮಾಧಾನ:-** ಘಟ ಪಟಗಳಂತೆ ಎರಡು ಸತ್ತೆಗಳು ಭಿನ್ನಗಳಾಗಿಲ್ಲ. ಕಿಂತು; ಸೋಽಯಮಿತ್ಯಾದಿ ವಾಕ್ಯದಂತೆ, ಘಟ ಸನ್ ಎಂಬಲ್ಲಿ ಸಾಮಾನಾಧಿಕರಣ್ಯವು.

ಅಂಗೀಕರಿಸಲ್ಪಡುತ್ತದೆ. ಅಂದರೆ, ಸಾಮಾನ್ಯ ವಿಶೇಷ ಎಂಬ ಹೆಸರುಗಳು ಮಾತ್ರ ಭೇದವಲ್ಲದೆ **ವಸ್ತು ಭೇದವಿಲ್ಲ.** ಕಿಂತು ಅಭೇದವದೆ. ಯಾವದು ಸಾಮಾನ್ಯವೋ ಅದೇ ಉಪಾಧಿಯಿಂದ ವಿಶೇಷವಾಗಿದೆ. ಯಾವದು ವಿಶೇಷವೋ ಅದೇ ಸಾಮಾನ್ಯ ವಾಗಿದೆ. ಆದ್ದರಿಂದ **ವಸ್ತುವೊಂದಾಗಿದೆ.**

**ಶಂಕಾ:**-ಸಾಮಾನಾಧಿಕರಣ್ಯ ಸಂಬಂಧದಿಂದ ಏಕನಿಷ್ಠತ್ವವನ್ನು ಹೇಳದೆ, ನೀಲೋತ್ಪಲ ವಾಕ್ಯದಂತೆ, ಎರಡು ಬುದ್ಧಿಗಳಿಗೆ ಧರ್ಮಧರ್ಮಿ ವಿಷಯವಾಗಿ ಪ್ರತಿಪಾದನೆ ಮಾಡುವದು ಸುಲಭವಲ್ಲವೆ ?

**ಸಮಾಧಾನ:**-ಸಾಮಾನಾಧಿಕರಣ್ಯಕ್ಕೆ ನೀಲೋತ್ಪಲದಂತೆ ಧರ್ಮ ಧರ್ಮಿ ವಿಷಯವು **ಗೌಣವಾಗಿದೆ.** ಅದಕ್ಕಿಂತಲೂ ಪೂರ್ಣವಸ್ತುವಿನಲ್ಲಿ. ಪರಿಚ್ಛಿನ್ನಗಳು ಕಲ್ಪಿತಗಳಾದ್ದರಿಂದ ಐಕ್ಯತ್ವವನ್ನು ಹೇಳುವದೇ **ಮುಖ್ಯವಾಗಿರುತ್ತದೆ.** ಹಾಗು ಘಟಸನ್ ಪಟಸನ್, ಸನ್‌ಹಸ್ತಿ, ಸನ್‌ಅಶ್ವ, ಇವುಗಳಲ್ಲಿ ಎರಡು ಬುದ್ಧಿಗಳು ತೋರುತ್ತವೆ. ಒಂದು ಘಟ ಬುದ್ಧಿ, ಮತ್ತೊಂದು ಸನ್ ಬುದ್ಧಿ, ಹೀಗೆ ಎರಡು ಬುದ್ಧಿಗಳು ತೋರುತ್ತವೆ. ಅವುಗಳಲ್ಲಿ ಘಟಬುದ್ಧಿಯು **ವ್ಯಭಿಚಾರವಾಗುತ್ತದೆ.** ಯಾಕಂದರೆ; ಘಟಾದಿ ವಿಕಾರಗಳು ಕಾರ್ಯಗಳಾದ್ದರಿಂದ ವ್ಯಭಿಚಾರಿಗಳಾಗಿವೆ ಯೆಂದು ಪೂರ್ವದಲ್ಲಿ ಹೇಳಿರುತ್ತದೆ.

**ಶಂಕಾ:**- ಘಟವದೆ. ಪಟವದೆ. ಎಂಬಲ್ಲಿ ಘಟಬುದ್ಧಿಯು ವ್ಯಭಿಚಾರಿ ಯಾದಂತೆ ಸತ್ (ಅದೆ) ಯೆಂಬ ಬುದ್ಧಿಯೂ ವ್ಯಭಿಚಾರವಾಗುತ್ತದೆ. ಅಂದರೆ ಘಟವಿದ್ದರೆ, ಅದೆಯೆಂಬ ಬುದ್ಧಿಯು ತೋರುತ್ತದೆ. ಘಟವಿಲ್ಲದಿರಲು ತೋರುವದಿಲ್ಲ.

**ಸಮಾಧಾನ:**- ಘಟನಷ್ಟವಾಗುತ್ತಿರಲಿಕ್ಕೆ ಘಟವೆಂಬ ಬುದ್ಧಿಯು ಮಾತ್ರ ನಷ್ಟವಾಗುತ್ತದೆ. ಅದೆ ಎಂಬ ಸದ್ಬುದ್ಧಿಯು ವ್ಯಭಿಚಾರವಾಗುವದಿಲ್ಲ. ಅದು ಅದೆಯೆಂಬುದು ಪಟಾದಿಗಳಲ್ಲಿಯೂ ತೋರುತ್ತಿರುತ್ತದೆ. ಆದ್ದರಿಂದ ಸದ್ಬುದ್ಧಿಯು **ಅವ್ಯಭಿಚಾರಿ**ಯಾಗಿರುತ್ತದೆ. ಆದ್ದರಿಂದ ಘಟಾದಿ ಬುದ್ಧಿಯು ಅಸತ್ತಾಗಿದೆ. **ಪ್ರತಿಜ್ಞಾ;** ವ್ಯಭಿಚಾರಿಯಾದ್ದರಿಂದ **ಹೇತು; ರಜ್ಜುಸರ್ಪದಂತೆ ದೃಷ್ಟಾಂತ** ವಾಗಿದೆ. ಸದ್ಬುದ್ಧಿ ವಿಷಯವು ಸತ್ಯವಾಗಿದೆ. **ಪ್ರತಿಜ್ಞಾ** ಅವ್ಯಭಿಚಾರಿಯಾದ್ದ ರಿಂದ **ಹೇತು;** ರಜ್ಜುಸರ್ಪಾದಿಗಳಲ್ಲಿದ್ದ ಇದಮಂಶದಂತೆ **ದೃಷ್ಟಾಂತ.** ಈ ರೀತಿ ಬ್ರಹ್ಮ ಸತ್ಯ ಜಗನ್ಮಿಥ್ಯಾ ಅನ್ನುವದಕ್ಕೆ ಅನುಮಾನಗಳು ಅವೆ.

**ಶಂಕಾ:**-ಘಟನಾಶವಾಗಲು ಅದೆಯೆಂಬ ಸದ್ಬುದ್ಧಿಯು ಪಟಗಳಲ್ಲಿ ತೋರಿದಂತೆ; ಘಟಬುದ್ಧಿಯಾದರೂ ಘಟನಷ್ಟವಾಗಲು ಘಟಾಂತರಗಳಲ್ಲಿ ತೋರುತ್ತದೆ.

**ಸಮಾಧಾನ:-** ಹಾಗಲ್ಲ. ಘಟನಷ್ಟವಾಗಲು ಘಟಬುದ್ಧಿಯು ಪಟಾದಿಗಳಲ್ಲಿ ತೋರುವದಿಲ್ಲ. ಆದ್ದರಿಂದ ವ್ಯಭಿಚಾರಿಯಾಗಿರುತ್ತದೆ.

**ಶಂಕಾ:-** ಘಟ ನಷ್ಟವಾಗಲು ಅದೆಯೆಂಬ ಸದ್ಬುದ್ಧಿಯಾದರೂ ತೋರುವದಿಲ್ಲ. ಆದರಿಂದ ಅದಕ್ಕೂ ವ್ಯಭಿಚಾರಿತ್ವ ಬರುವದಿಲ್ಲವೇ ?

**ಸಮಾಧಾನ:-** ಹಾಗೆ ಆಗುವದಿಲ್ಲ. ಯಾಕಂದರೆ, ಘಟವ್ಯಕ್ತಿನಾಶವಾದರೂ ಘಟತ್ವರೂಪ ಜಾತಿಯು ನಾಶವಾಗದೇ ಇರುತ್ತದೆಂದು ನೈಯಾಯಿಕರು ಅಂಗೀಕಾರಮಾಡಿದಂತೆ ಘಟನಷ್ಟವಾಗಲು ಅದೆಯೆಂಬ ಸದ್ಬುದ್ಧಿಯು ನಾಶವಾಗದೆ ಇರುತ್ತದೆ. ಘಟವಿದ್ದರೆ ಅದೆಯೆಂಬುದು ಉಂಟು. ಘಟವಿಲ್ಲದಿರಲು ಅದೆಯೆಂಬುದು ಇಲ್ಲದಾಗಿದೆಯೆಂದು ನೀನು ಹೇಳಬಹುದು. ಇದು ಸರಿಯೆ, ಆದರೆ ಇಲ್ಲ ಅನ್ನುವದು ಅದೆಯೋ? ಇಲ್ಲೋ? ಹೇಳು. ಎಂದು ಕೇಳಿದರೆ, ಅದಕ್ಕೆ ನೀನು ಘಟ ಇಲ್ಲವೆನ್ನುವದು ಅದೆಯೆಂದು ಉತ್ತರಕೊಡುವಿ. ಅದೆ ಅನ್ನುವದೇ ಸದ್ಬುದ್ಧಿಯು ಇರುತ್ತದೆ. ಘಟವಿದ್ದಾಗ್ಯೆ ಘಟದೊಡನೆ ಕೂಡಿ ಅದೆಯೆಂಬುದು ತೋರಿತು. ಘಟವಿಲ್ಲದಾಗ್ಯೆ ಘಟದ ಅಭಾವದೊಡನೆ ಕೂಡಿ ಅದೆಯೆಂಬುದು ತೋರುತ್ತದೆ. ಹೀಗೆ ಘಟಭಾವ ಅಭಾವ ಎರಡು ಕಾಲಗಳಲ್ಲಿಯೂ ಅದೆಯೆಂಬ ಸದ್ಬುದ್ಧಿಯು ತೋರುವದರಿಂದ **ಅವ್ಯಭಿಚಾರಿಯು** ಆಗಿರುತ್ತದೆ. ಅದರಿಂದ ಸತ್ಯವಾಗಿದೆ. ಆದ್ದರಿಂದ ವಿಶೇಷಣಭೂತವಾದ ಸತ್ತೆಯನ್ನು ಪ್ರಕಟಮಾಡಿ ತೋರಿಸುವಂಥಾ ಅಭಿವ್ಯಂಜಕ ವಿಶೇಷ್ಯವಾದ ಘಟದ ಅಭಾವದಿಂದಲೇ ಸತ್ತೆಯು ಇಲ್ಲದಂತೆ ತೋರಿತು. ಆದರೆ ವಸ್ತುತಃ ಸತ್ತೆಯು ಅಭಾವವಿಲ್ಲ. ಯಾವಾಗಲೂ ಭಾವವಾಗಿದೆ.

**ಶಂಕಾ:-** ಎರಡು ಪದಾರ್ಥಗಳು ಇದ್ದರೆ ಅವುಗಳಲ್ಲಿ ನಿಲೋತ್ಪಲ ವಾಕ್ಯದಂತೆ ವಿಶೇಷಣ ವಿಶೇಷ್ಯ ಭಾವವು ಸಂಭವಿಸುತ್ತದೆ. ಇದರಂತೆ ಸತ್ತಿಗೂ ಘಟಕ್ಕೂ ತಾವು ವಿಶೇಷಣ ವಿಶೇಷ್ಯ ಭಾವವನ್ನು ಅಂಗೀಕಾರ ಮಾಡಿದರೆ, ಎರಡೂ ಅವೆಯೆಂದು ಎರಡಕ್ಕೂ ಅಸ್ತಿತ್ವವನ್ನು ಅವಶ್ಯ ಅಂಗೀಕಾರ ಮಾಡಬೇಕಾಗುತ್ತದೆ. ಆಗಲಿ, ಅಂದರೆ, ಘಟಾದಿಗಳು ಕಲ್ಪಿತಗಳಾಗಿವೆಯೆಂಬ ಅನುಮಾನವು ಮತ್ತು ಸಾಮಾನಾಧಿಕರಣ್ಯ ಬುದ್ಧಿಯು ಬಾಧಿಸಿಕೊಳ್ಳುತ್ತವೆ. ಯಾಕಂದರೆ, ಘಟಾದಿಗಳಿಗೆ ಕಲ್ಪಿತತ್ವವನ್ನು ಅಂಗೀಕಾರ ಮಾಡಿದರೆ, ಅವು ಇಲ್ಲದವುಗಳಾಗುತ್ತವೆ. ಆಗ್ಯೆ ತಾವು ಸಾಮಾನಾಧಿಕರಣ್ಯವನ್ನು ಹೇಳುವದು ಅಯುಕ್ತವಾಗುತ್ತದೆ. ಆದ್ದರಿಂದ ಘಟಕ್ಕೂ ಸತ್ತಿಗೂ ಎರಡು ಅವೆಯೆಂದು ಹೇಳಬೇಕಾಗುತ್ತದೆ.

**ಸಮಾಧಾನ:-** ಸಾಮಾನಾಧಿಕರಣ್ಯವು ಎರಡು ವಸ್ತುಗಳ ಸತ್ಯತ್ವವನ್ನು ಅಪೇಕ್ಷೆ ಮಾಡುವದಿಲ್ಲ. ಕಿಂತು, ಎರಡು ವಸ್ತುಗಳು ಪ್ರತೀತಿಮಾತ್ರವಾದರೆ,

ಸಾಕು. ಸಾಮಾನಾಧಿಕರಣ್ಯವು ಸಂಭವಿಸುತ್ತದೆ. ಹೇಗೆಂದರೆ, 'ಸತ್ ಇದಂ ಉದಕಂ' ಈ ಮೃಗಜಲವು ಅದೆ. ಎಂಬಲ್ಲಿ ಸಾಮಾನಾಧಿಕರಣ್ಯವು ಸಂಭವಿಸಿದೆ. ಇಲ್ಲಿ ಮೃಗಜಲವು ಸತ್ಯವಾಗದೆ ಪ್ರತೀತಿ ಮಾತ್ರವಾಗಿದೆ. ಇದರಂತೆ ಪ್ರತೀತಿ ಮಾತ್ರವಿದ್ದರೆ ಸಾಕು, ಸರ್ವ ವ್ಯವಹಾರಗಳು ಸಂಭವಿಸುತ್ತವೆ. ಆದ್ದರಿಂದ ನಿನ್ನ ಶಂಕೆಗಳು ಸಮೀಚೀನಗಳಲ್ಲ. ಎಂಬ ಭಾವವು.

ಆದ್ದರಿಂದ ಕಲ್ಪಿತ ಪದಾರ್ಥಗಳಿಗೆ ಪಾರಮಾರ್ಥಿಕ ಸತ್ತೆಯು ಸಂಭವಿಸುವದಿಲ್ಲ. ಉತ್ಪತ್ತಿ ಪೂರ್ವ, ನಾಶಾನಂತರ ಕಾಲಗಳಲ್ಲಿಯೂ, ವಸ್ತ್ವಂತರಗಳಲ್ಲಿಯೂ, ದೇಶಾಂತರಗಳಲ್ಲಿಯೂ, ಇಲ್ಲದಿರುವದರಿಂದ ಅಸತ್ತುಗಳಾಗಿವೆ. ಅಂದರೆ ಮಿಥ್ಯೆಗಳಾಗಿರುತ್ತವೆ. ಪಾರಮಾರ್ಥಿಕ ಸತ್ತು ಸರ್ವದೇಶ, ಸರ್ವಕಾಲ, ಸರ್ವವಸ್ತುಗಳಲ್ಲಿ ಇರುವದರಿಂದ ಸತ್ಯವಾಗಿದೆ.

ಬಳಿಕ, ಎಲ್ಲವೂ ಮಿಥ್ಯೆಯಾದ ಮೇಲೆ; ಮಿಥ್ಯೆಯಾದ ಶರೀರದಿಂದ ಸತ್ಯವಸ್ತು ಪ್ರಾಪ್ತಿಯಾಗದೆಂದು ಶಂಕೆಯನ್ನು ಮಾಡುತ್ತಾನೆ.

**ಎನೆ ಸರ್ವಮಂ ಮಿಥ್ಯೆಯೆನಬೇಹುದಂತಾಗೆ ।**
**ತನಗೆ ನಿಜಸಿದ್ಧಿಯನು ಸಾಧಿಸಲ್ಕೆ ಪುಸಿ ।**
**ತನು ಮುಖ್ಯವಾಗದೆನೆ ಕೇಳು ॥೭॥**

**ಟೀಕಾ:-** ಎನೆ=ಹೀಗೆ ಹೇಳಿದರೆ, ಸರ್ವಮಂ=ಎಲ್ಲವನ್ನು, ಮಿಥ್ಯೆಯೆನಬೇಹುದು=ಮಿಥ್ಯೆಯೆಂದು ಹೇಳಬೇಕಾಗುವದು, ಅಂತಾಗೆ=ಹಾಗೆ ಅದರೆ, ತನಗೆ=ತನಗೆ, ನಿಜಸಿದ್ಧಿಯನು=ಮೋಕ್ಷವನ್ನು, ಸಾಧಿಸಲ್ಕೆ=ಪ್ರಾಪ್ತಿ ಮಾಡಿಕೊಳ್ಳುವದಕ್ಕೆ, ಪುಸಿ ತನು=ಮಿಥ್ಯೆಯಾದ ಶರೀರವು, ಮುಖ್ಯವಾಗದು=ಸಾಧನವಾಗಲಾರದು, ಎನೆ=ಹೀಗೆಂದರೆ, ಕೇಳು=ಆಲಿಸು.

**ತಾತ್ಪರ್ಯ:-** ಉಕ್ತ ಸದಸದ್ವಿಚಾರವನ್ನು ಕೇಳಿ, ಶಿಷ್ಯನಿಗೆ ಸಂಶಯವು ಬಂದಿತು. ಏನಂದರೆ; ಪಾರಮಾರ್ಥಿಕ ಚೈತನ್ಯ ವ್ಯತಿರಿಕ್ತವಾದ ಸಕಲವು ಮಿಥ್ಯೆಯಾಗಿರುತ್ತದೆ. ಅಂದರೆ ಗುರು, ಶಾಸ್ತ್ರ, ಬೋಧ್ಯ, ಬೋಧಕತ್ವ ಶರೀರಾದಿಗಳೆಲ್ಲಕ್ಕೂ ಮಿಥ್ಯೆಯೆಂದು ಹೇಳಿದಂತಾಯಿತು. ಪುಸಿಯಾದ ಸಾಧನಗಳಿಂದೆ ನಿಜವಾದ ಮೋಕ್ಷವಾದರೂ ಸಿದ್ಧಿಸದೆ; ಅದು ಕೂಡಾ ಪುಸಿಯಾಗಿಯೇ ಹೋಗಬೇಕಾಯಿತು. ಹೀಗಾದ್ದರಿಂದ ಪುರುಷಾರ್ಥವು ಇಲ್ಲದಂತಾಯಿತು. ಪ್ರಯೋಜನವೇ ಇಲ್ಲದ ಮೇಲೆ ಮೋಕ್ಷಕ್ಕಾಗಿ ನಾವು ವ್ಯರ್ಥ ಪ್ರಯತ್ನವನ್ನಾದರೂ ಏಕೆ ಮಾಡಬೇಕು? ಎಂದು ಕೇಳಲು; ಅದಕ್ಕೆ ಗುರುಗಳು ಮುಂದೆ ಹೇಳುವ ರೀತಿ ಉತ್ತರಕೊಡುತ್ತಾರೆ.

ಬಳಿಕ, ಸಾಧನ ಮಿಥ್ಯೆಯಾದರೂ ಫಲವು ಸತ್ಯವಾಗುತ್ತದೆಂದು ಹೇಳುತ್ತಾ ದೃಷ್ಟಾಂತವನ್ನು ಕೊಡುತ್ತಾರೆ.

**ಶಿಲೆಯ ಭೈರವನಲ್ಲಿ ಪಲವು ಸಿದ್ಧಿಗಳಾಗೆ।**
**ನೆಲಸಿ ತೋರ್ಪಂತೆ· ಪುಸಿಯ ಸಾಧನದಿಂದೆ।**
**ಫಲಿಸುವದು ಸತ್ಯವಹ ಮುಕ್ತಿ ॥೮॥**

**ಟೀಕಾ:-** ಶಿಲೆಯ=ಕಲ್ಲಿನ, ಭೈರವನಲ್ಲಿ=ಭೈರವ ಮೂರ್ತಿಯಲ್ಲಿ, ಪಲವು= ಅನೇಕ, ಸಿದ್ಧಿಗಳಾಗೆ=ಸಿದ್ಧಿಗಳು ಉಂಟಾಗುವದು, ನೆಲಸಿ=ನಿಶ್ಚಯವಾಗಿ, ತೋರ್ಪಂತೆ=ತೋರುವ ಹಾಗೆ, ಪುಸಿಯಸಾಧನದಿಂದೆ=ಮಿಥ್ಯೆಯಾದ ಸಾಧನ ದಿಂದಲೂ, ಸತ್ಯವಹಮುಕ್ತಿ=ನಿಜವಾದ ಮುಕ್ತಿಯು, ಫಲಿಸುವದು=ಪ್ರಾಪ್ತ ವಾಗುವದು.

**ತಾತ್ಪರ್ಯ:-** ಯಾವದಾದರೊಂದು ಸಿದ್ಧಿಪ್ರಾಪ್ತಿ ಮಾಡಿಕೊಳ್ಳಬೇಕೆಂದು ಇಚ್ಛೆಯುಳ್ಳವನು; ಕಲ್ಲಿನದೊಂದು ಭೈರವಮೂರ್ತಿಯನ್ನು ಪೂಜಿಸಿ ಧ್ಯಾನ ಮಾಡುತ್ತಾನೆ. ಅಂದರೆ; ಶಿವನ ದ್ವಾರಪಾಲಕನಾದವನೇ ಭೈರವನು. ಇವನ ಭಾವನೆಯನ್ನು ಆ ಕಲ್ಲಿನಲ್ಲಿ ಮಾಡುತ್ತಾನೆ. ಕಲ್ಲಿನ ಮೂರ್ತಿಯೇನೋ ಸಾಕ್ಷಾತ್ ಭೈರವನಲ್ಲ. ಆದರೂ ಅದರಲ್ಲಿ ಶ್ರದ್ಧಾ ಮೂಲಕ ಭೈರವಮೂರ್ತಿ ಧ್ಯಾನ ಪೂಜಾದಿ ಗಳನ್ನು ಮಾಡುವದರಿಂದ, ಅವನಿಗೆ ಅನೇಕ ಸಿದ್ಧಿಗಳು ಪ್ರಾಪ್ತಗಳಾಗುತ್ತವೆ. ಪುಸಿಯ ಭೈರವಮೂರ್ತಿ ಉಪಾಸನೆಯಿಂದ ಸತ್ಯವಾದ ಸಿದ್ಧಿಯು ಪ್ರಾಪ್ತವಾಗು ವಂತೆ, ಪುಸಿ ಸಾಧನದಿಂದ ಸತ್ಯವಾದ ಮೋಕ್ಷವು ಆಗುತ್ತದೆ.

ಬಳಿಕ, ಪುಸಿಸಾಧನದಿಂದ ನಿಜ ಫಲವಾಗುವದೆಂಬಲ್ಲಿ ಭೈರವಮೂರ್ತಿ ಉಪಾಸನೆಯನ್ನು ಹೇಳಿದಿರಿ. ಇದು ನಿಯಮವಲ್ಲ. ಯಾಕಂದರೆ, ಲೋಕದಲ್ಲಿ ಎಷ್ಟೋ ಜನರು ಅನೇಕ ದೇವತೆಗಳ ಉಪಾಸನೆಗಳನ್ನು ಮಾಡುತ್ತಾರೆ. ಮಾಡಿ ದರೂ ಅವರಿಗೆ ಫಲಗಳು ಆಗುವದಿಲ್ಲ. ಎಷ್ಟೋ ಜನರು—'ನಾವು ಬಹಳ ಉಪಾಸನಾ ಅನುಷ್ಠಾನ ಮಾಡಿದೆವು. ಆದರೂ ನಮಗೆ ಸಿದ್ಧಿಗಳು ಆಗಲಿಲ್ಲ; ಎಂದು ತಮ್ಮ ಅನುಭವವನ್ನು ಹೇಳುತ್ತಾರೆ. ಆದ್ದರಿಂದ ಉಪಾಸನಾ ಫಲವು ಶ್ರದ್ಧೆಯನ್ನು ಅವಲಂಬಿಸಿದೆ. ಕೆಲವರಿಗೆ ಕೊಡಬಹುದು, ಕೆಲವರಿಗೆ ಬಿಡಬಹುದು, ಅದರಿಂದ ಕೊಟ್ಟ ದೃಷ್ಟಾಂತವು ಸರಿಯಲ್ಲ. ಎಂದು ಶಂಕೆಯನ್ನು ಮಾಡಿದರೆ, ಮತ್ತೊಂದು ದೃಷ್ಟಾಂತವನ್ನು ಹೇಳುತ್ತಾರೆ.

**ಕನಸು ಪುಸಿಯಾದೊಡಂ ತನಗಲ್ಲಿ ಸುರತದಿಂ।**
**ಜನಿತವಹ ರೇತುವದು ಸತ್ಯವಾದಂತೆ।**
**ತನುಜ ಪುಸಿಯಲ್ಲಿ ಥಿಟವುಂಟು ॥೯॥**

**ಟೀಕಾ:-** ಕನಸು=ಸ್ವಪ್ನವು, ಪುಸಿಯಾದೊಡಂ=ಮಿಥ್ಯೆಯಾದರೂ, ತನಗೆ=ತನಗೆ, ಅಲ್ಲಿ=ಸ್ವಪ್ನದಲ್ಲಿ, ಸುರತದಿಂ=ಸಂಭೋಗದಿಂದ, ಜನಿತವಹ=ಉತ್ಪನ್ನವಾದ ರೇತುವದು=ರೇತಸ್ಸು, ಸತ್ಯವಾದಂತೆ=ಸತ್ಯವಾಗಿರುವ ಹಾಗೆ, ತನುಜ=ಪುತ್ರನೇ! ಪುಸಿಯಲ್ಲಿ=ಸುಳ್ಳಿನಿಂದಾದರೂ, ಧಿಟಮುಂಟು=ಸತ್ಯಫಲವಾಗಿದೆ.

**ತಾತ್ಪರ್ಯ:-** ಸ್ವಪ್ನವು ಮಿಥ್ಯೆಯಾಗಿದೆ. ಅದರಲ್ಲಿ ಸ್ತ್ರೀಯಳೊಡನೆ ಸುರತ ಭೋಗಮಾಡಿರುವದೂ ಮಿಥ್ಯೆಯೇ ಆಗಿರುತ್ತದೆ. ಆದರೂ ರೇತಃಪತನವು ಸತ್ಯವಾಗಿರುತ್ತದೆ. ಅಂದರೆ, ಸ್ತ್ರೀ ಸಂಭೋಗ ಮಿಥ್ಯೆಯಾದರೂ ರೇತಃಪತನವು ಸತ್ಯವಾಗಿರುವದು ಅನುಭವ ಸಿದ್ಧವಿದೆ. ಇದರಂತೆ ಪುಸಿಸಾಧನದಿಂದ ನಿಜವಾದ ಮೋಕ್ಷವು ಆಗುತ್ತದೆ.

ಬಳಿಕ, ತಾವು ಸ್ವಪ್ನದ ದೃಷ್ಟಾಂತವನ್ನು ಹೇಳಿದಿರಿ. ಇದು ಸರಿಯಾಗಿದೆ. ಆದರೂ, ಇದು ಸರ್ವರ ಅನುಭವಕ್ಕೆ ಬರುವದಿಲ್ಲ. ಅಂದರೆ, ಸರ್ವರಿಗೂ ಇಂಥಾ ಸಪ್ನಗಳು ಸರ್ವಕಾಲದಲ್ಲಿ ತೋರುವದಿಲ್ಲ. ಕ್ವಚಿತ್ ಯಾರಾದರೊಬ್ಬರಲ್ಲಿ ಒಂದು ಸಮಯದಲ್ಲಿ ತೋರಬಹುದು. ಅದು ನಿದ್ರಾದೋಷ ಮೂಲಕವಾಗಲಿ, ಅಥವಾ ಆಹಾರ ದೋಷದಿಂದಾಗಲಿ, ಇಲ್ಲವೆ; ಮನಸ್ಸಿನ ಸ್ತ್ರೀವಾಸನಾ ಪ್ರಾಬಲ್ಯದಿಂದಾಗಲಿ ತೋರಬಹುದು. ಇಂಥಾ ಕ್ವಚಿತ್ ಕಾಲದಲ್ಲಿ ಸಂಭವಿಸುವ ಸ್ವಪ್ನ ದೃಷ್ಟಾಂತವು ದ್ರಾಷ್ಟಾಂತಕ್ಕೆ ಸರಿಹೋಗದು. ಎಂದು ಶಂಕೆಯನ್ನು ಮಾಡಿದರೆ, ಜಾಗ್ರತ್ಕಾಲದಲ್ಲಿ ಸರ್ವಾನುಭವ ಸಿದ್ಧವಾದ ದೃಷ್ಟಾಂತವನ್ನು ಹೇಳುತ್ತಾರೆ.

**ಮುಕುರಬಿಂಬಂ ಮುಖದ ಸಕಲ ಸೌಂದರತೆಯಂ ।**<br>
**ಪ್ರಕಟಿಸುವ ಪಾಂಗು ನಿಜ ಸಿದ್ಧಿಯಂ ಪುಸಿಯ ।**<br>
**ನಿಕರದಿಂ ಪಡೆಯಲಹುದಿಂತು ॥೧೦॥**

**ಟೀಕಾ:-** ಮುಕುರಬಿಂಬಂ=ಕನ್ನಡಿಯಲ್ಲಿ ತೋರುವ ಪ್ರತಿಬಿಂಬವು, ಮುಖದ=ನಿಜಮುಖದ, ಸಕಲ=ಎಲ್ಲ, ಸೌಂದರತೆಯಂ=ಸುಂದರತ್ವವನ್ನು ಪ್ರಕಟಿಸುವ, ಪಾಂಗು=ತೋರಿಸಿಕೊಡುವ ಹಾಗೆ, ಪುಸಿಯನಿಕರದಿಂ=ಪುಸಿಯ ಸಾಧನ ಸಮೂಹದಿಂದೆ, ಇಂತು=ಈ ಪ್ರಕಾರ, ನಿಜಸಿದ್ಧಿಯಂ=ಮೋಕ್ಷವನ್ನು, ಪಡೆಯಲಹುದು=ಹೊಂದಬಹುದು.

**ತಾತ್ಪರ್ಯ:-** ಹಾಗಾದರೆ ಆ ಸ್ವಪ್ನವನ್ನು ಬಿಡು. ಜಾಗ್ರದವಸ್ಥೆಯಲ್ಲಿ ಯಾವಾಗಲೂ ಸರ್ವರಿಗೂ ಪ್ರಸಿದ್ಧವಾಗಿ ಅನುಭವಕ್ಕೆ ಬರುವಂಥಾ ದೃಷ್ಟಾಂತವನ್ನು ಕೊಡುತ್ತೇನೆ ಕೇಳು. ಏನಂದರೆ, ಕನ್ನಡಿಯಲ್ಲಿ ತೋರುವ ತನ್ನ ಪ್ರತಿಬಿಂಬವು ಮಿಥ್ಯೆಯಾಗಿದೆ. ಆದರೂ ತನ್ನ ಬಿಂಬ ಮುಖದ ಯಾವತ್ತೂ ಸೌಂದರ್ಯ

ವನ್ನು ಹೇಗೆ ತೋರಿಸುತ್ತದೆಯೋ, ಹಾಗೆ ದೇಹ, ಗುರು, ಶಾಸ್ತ್ರಾದಿ ವ್ಯವಹಾರ ಗಳೆಲ್ಲವೂ ಮಿಥ್ಯೆಯಾದರೂ ಸತ್ಯವಾದ ಮೋಕ್ಷವಾಗುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ತಿಳಿ

## ಜಗದನಿತ್ಯತ್ವ ನಿರೂಪಣೆ ಸೂತ್ರ ೨ಕ್ಕೆ ತ್ರಿವಿದಿ ೧೫

**ಬಳಿಕ,** ಪೂರ್ವ ಸೂತ್ರದಲ್ಲಿ ನಾಮರೂಪಾತ್ಮಕ ಜಗತ್ತು ಮಿಥ್ಯೆಯೆಂದೂ, ಅಸ್ತಿ, ಭಾತಿ, ಪ್ರಿಯರೂಪ ಬ್ರಹ್ಮವು ಸತ್ಯವೆಂದೂ, ನಿರೂಪಿಸಲ್ಪಟ್ಟಿತು. ಯಾಕಂದರೆ ಸರ್ವವು ಬ್ರಹ್ಮವೆಂದು **ಸರ್ವಾತ್ಮಕೋಪದೇಶವನ್ನು** ಮಾಡಿದರು. ಅದರಿಂದ ನಾಮರೂಪ ಸಹಿತ ಬ್ರಹ್ಮವೆಂಬ ಭ್ರಾಂತಿಯಾಯಿತು. ಅದರಿಂದ ಅನಾತ್ಮಗಳಾದ ದೇಹಾದಿಗಳಲ್ಲಿಯೂ ಆತ್ಮತ್ವ ಭ್ರಾಂತಿಯಾಯಿತು. ಆದ್ದರಿಂದ ನಾಮರೂಪುಗಳನ್ನು ಬಾಧಾಸಾಮಾನಾಧಿಕರಣ್ಯದಿಂದ ಬಾಧಿಸಿ, ಬ್ರಹ್ಮವೆಂದು ತಿಳಿ. ಎಂಬದಾಗಿ ನಿರೂಪಣಮಾಡಿದರು. ಈಗ ಈ ಮುಂದಿನ ಸೂತ್ರದಿಂದ, ಅನಾತ್ಮಗಳಾದ ಅನ್ನಮಯಕೋಶ ಮೊದಲುಗೊಂಡು ಆನಂದಮಯಕೋಶ ಪರ್ಯಂತರವಿರುವ; ಅನಾತ್ಮಗಳನ್ನು ಯುಕ್ತ್ಯನುಭವಗಳಿಂದ ನೇತಿಗಳೆದು, ನೇತಿ ಗಳೆಯುವದಕ್ಕೆ ಬಾರದ ಸ್ವರೂಪವೇ ತನ್ನ ನಿಜವಾಗಿರುತ್ತದೆಂಬುದನ್ನು ಈ ಸೂತ್ರ ದಿಂದ ಸೂಚಿಸುತ್ತಾರೆ.

ಸೂತ್ರ॥ **ತನುಕರಣ ಮೊದಲಾದವನಿತಾತ್ಮ ತಾನಲ್ಲ |**
**ತನಗೆ ಬೇರೆನಿಸಿ ಕಾಣಿಪುದರಿಂದ ||**

**ಟೀಕಾ:-** ತನು=ಶರೀರ, ಕರಣ=ಇಂದ್ರಿಯ, ಮೊದಲಾದವು=ಮುಂತಾದವು ಗಳು, ಅನಿತು=ಅಷ್ಟು, ಆತ್ಮತಾನಲ್ಲ=ಚೈತನ್ಯರೂಪುಗಳಲ್ಲ, ತನಗೆ=ಅರುರೂಪ ನಾದ ತನಗೆ, ಬೇರೆನಿಸಿ=ಭಿನ್ನವಾಗಿ, ಕಾಣಿಪುದರಿಂದ=ತೋರುವದರಿಂದ.

**ತಾತ್ಪರ್ಯ:-** ಹೇ ಶಿಷ್ಯನೇ! ಕೇಳು. ಶರೀರ, ಇಂದ್ರಿಯ, ಪ್ರಾಣ, ಮನ ಬುದ್ಧ್ಯಾದಿಗಳು ಆತ್ಮಸ್ವರೂಪಗಳು ಅಲ್ಲ. (**ಪ್ರತಿಜ್ಞಾ**) ಯಾಕಂದರೆ; ತನ ಗಿಂತಲೂ ಬೇರೆಯಾಗಿ ತಿಳಿಸಿಕೊಳ್ಳುವದರಿಂದ (**ಹೇತು**) ಘಟಪಟಾದಿಗಳಂತೆ (**ದೃಷ್ಟಾಂತ**)ಆಗಿರುತ್ತದೆ. ಈ ಪ್ರಕಾರ ಅನುಮಾನ ಪ್ರಮಾಣ ಮೂಲಕ ದೇಹಾದಿ ಗಳು ಆತ್ಮರೂಪಗಳಲ್ಲ. ಕಿಂತು; ಅನಾತ್ಮರೂಪಗಳಾಗಿರುತ್ತವೆಂಬ ಭಾವವು.

**ಬಳಿಕ;** ದೇಹ ಮೊದಲು ಅಹಂಕಾರ ಕಡೆಯಾಗಿರುವ ಅನಾತ್ಮಗಳು ಜಡ ಗಳಾಗಿರುತ್ತವೆ. ಜಡಗಳಾದರೂ ಚೇತನ ಸಂಬಂಧದಿಂದ ಚೇತನದಂತೆ ಭಾಸ ವಾಗುತ್ತವೆ. ಅದರಿಂದ ಅಜ್ಞಾನಿಗಳಾದ ಜನರು ಈ ದೇಹಾದಿಗಳೇ ತಾವೆಂದು

ತಿಳಿದುಕೊಂಡು ಭ್ರಾಂತರಾಗಿರುವರು. ಪಾರಮಾರ್ಥಿಕ ಚೈತನ್ಯ ಸ್ವರೂಪರು ನಾವು ಇದ್ದೇವೆ. ಎಂಬುದನ್ನು ಮರೆತಿರುವರು. ಅಂದರೆ, ಅನಾತ್ಮಗಳಲ್ಲಿ ಆತ್ಮತ್ವ ಅಧ್ಯಾಸದಿಂದ ಕೂಡಿರುವರು. ಆದ್ದರಿಂದ ಆತ್ಮಾನಾತ್ಮ ವಿವೇಕವನ್ನು ಮಾಡಿ ತೋರಿಸುತ್ತೇವೆಂಬುದನ್ನು ನಾಲ್ಕು ಶ್ಲೋಕಗಳ ಪರ್ಯಂತರ ಹೇಳುತ್ತಾರೆ.

ಇನ್ನು ಕೇಳೆಲೆ ವತ್ಸ ಚಿನ್ನವನರಿಯದಂಗೆ।
ಚಿನ್ನದಿಂದಾದ ಕಡಗವಂ ಕಾಣುತ್ತ।
ಚಿನ್ನದ ವಿಚಾರವಿರದಂತೆ ॥೧॥

ಟೀಕಾ:- ಎಲೆವತ್ಸ=ಎಲೈ ಪುತ್ರನೇ ! ಇನ್ನು ಕೇಳು=ಬಳಿಕಾಲಿಸು, ಚಿನ್ನವನು=ಭಂಗಾರವನ್ನು, ಅರಿಯದಂಗೆ=ವಿಚಾರ ಮಾಡದವನಿಗೆ, ಚಿನ್ನದಿಂದಾದ=ಭಂಗಾರದಿಂದಾದ, ಕಡಗವಂ=ಕಡೆಯನ್ನು, ಕಾಣುತ್ತ=ನೋಡುತ್ತ, ಚಿನ್ನದ ವಿಚಾರವಿರದಂತೆ==ಭಂಗಾರದ ಜ್ಞಾನವಿಲ್ಲದಂತೆ,

ತಾತ್ಪರ್ಯ:- ಭಂಗಾರವನ್ನು ಅರಿಯದವನು ಭಂಗಾರದಿಂದಾಗಿರುವ ಆಭರಣಗಳನ್ನು ಕಂಡು, ಇವು ಭಂಗಾರ ಎಂದು ತಿಳಿಯದೆ, ಆಭರಣಗಳೆಂದು ವ್ಯವಹರಿಸುವಂತೆ, ಹೀಗೆಂದು ಇಲ್ಲಿ ದೃಷ್ಟಾಂತವನ್ನು ಹೇಳಿ, ಈ ಅರ್ಥವನ್ನು ದಾರ್ಷ್ಟಾಂತದಲ್ಲಿ ಮುಂದಿನ ಶ್ಲೋಕದಿಂದ ಯೋಜನೆಯನ್ನು ಮಾಡುತ್ತಾರೆ.

ಪಾರಮಾರ್ಥಿಕ ಚಿತ್ತನಾರೈಯ್ಯದೀ ವ್ಯಾವ।
ಹಾರಿಕಾಕಾರವಾದ ತನು ಮೊದಲಾದ।
ಭೂರಿ ಜಡವರ್ಗವನು ನೋಡೆ ॥೨॥

ಟೀಕಾ:- ಪಾರಮಾರ್ಥಿಕ ಚಿತ್ತನು=ತ್ರಿಕಾಲ ಅಬಾಧ್ಯವಾದ ಚಿದ್ರೂಪಾತ್ಮನನ್ನು, ಆರೈಯ್ಯದೆ=ವಿಚಾರಮಾಡದೆ, ಈ ವ್ಯಾವಹಾರಿಕಾಕಾರವಾದ=ವ್ಯಾವಹಾರಿಕಸತ್ತಾವುಳ್ಳ, ತನುಮೊದಲಾದ=ದೇಹವೇ ಮೊದಲಾದ, ಭೂರಿ=ಬಹಳ, ಜಡವರ್ಗವನು=ಜಡ ಸಮೂಹವನ್ನು, ನೋಡೆ=ವಿಚಾರಿಸಲು,

ತಾತ್ಪರ್ಯ:- ಉಕ್ತದೃಷ್ಟಾಂತದಂತೆ, ತ್ರಿಕಾಲಗಳಲ್ಲಿಯೂ ಇರುವಂಥಾ ಪಾರಮಾರ್ಥಿಕ ಚಿತ್ತನ್ನು ಅರಿಯದೆ ವ್ಯಾವಹಾರಿಕಗಳಾದ ದೇಹಾದಿ ಜಡವರ್ಗವನ್ನು ಕಂಡು, ಇವೇ ಆತ್ಮನೆಂದು ಭ್ರಾಂತರಾಗಿರುವರು. ಆತ್ಮತ್ವಭ್ರಾಂತಿಗೆ ಕಾರಣವೇನಂದರೆ; ಸದ್ರೂಪ ಚಿದ್ರೂಪನಾದ ಆತ್ಮನ ಸಾನ್ನಿಧ್ಯದಿಂದ, ಜಡಗಳಾದ ದೇಹಾದಿಗಳೂ ಚಿದ್ರೂಪದಂತೆ ತೋರುವದೇ ಕಾರಣವಾಗಿರುತ್ತದೆಂದು ಮುಂದೆ ನಿರೂಪಿಸುತ್ತಾರೆ.

**ವಾರಿ ಸಂಪರ್ಕದಿಂ ಧಾರುಣಿ ದ್ರವಿಸುವಂ।**
**ತಾರೈಯ್ಯಲಾತ್ಮ ಸನ್ನಿವೇಶದಿ ನಹಂ।**
**ಕಾರಾದಿ ಚಿತ್ತಿನಿಸುತಿರ್ಕು ॥೩॥**

**ಟೀಕಾ:**- ವಾರಿ ಸಂಪರ್ಕದಿಂ = ನೀರಿನ ಸಂಬಂಧದಿಂದ, ಧಾರುಣಿ = ಭೂಮಿಯು, ದ್ರವಿಸುವಂತೆ=ಕರಗುವಂತೆ, ತಾರೈಯ್ಯಲ್ = ವಿಚಾರಮಾಡಲು, ಆತ್ಮಸನ್ನಿವೇಶದಿಂ= ಚಿದ್ರೂಪಾತ್ಮನ ಸಾನ್ನಿಧ್ಯದಿಂದ, ಅಹಂಕಾರಾದಿ = ಅಹಂಕಾರಾದಿ ಜಡವರ್ಗವು, ಚಿತ್ತಿನಿಸುತಿರ್ಕು=ಚಿದ್ರೂಪಗಳೆಂದು ತೋರುವವು.

**ತಾತ್ಪರ್ಯ:**- ಭೂಮಿಯಲ್ಲಿ ಕಠಿಣತ್ವವದೆ. ದ್ರವಿಸುವದು ಇಲ್ಲ. ಆದರೆ, ಜಲದ ಸಂಬಂಧದಿಂದ ಭೂಮಿಯು ಕರಗುತ್ತದೆ. ಆದರೆ, ಇದನ್ನು ತಿಳಿಯದವರು ಭೂಮಿಯೇ ದ್ರವಿಸುತ್ತದೆಂದು ತಿಳಿಯುತ್ತಾರೆ. ಇದು ಅಜ್ಞಾನವಾಗಿರುತ್ತದೆ. ಇದರಂತೆ, ಅಹಂಕಾರಾದಿ ದೇಹಪರ್ಯಂತರವಿರುವ ಜಡಗಳು; ಸ್ವತಃ ಸತ್ತಾಸ್ಫೂರ್ತಿರಹಿತಗಳಾಗಿರುತ್ತವೆ. ಆದರೆ, ಆತ್ಮನ ಸಾನ್ನಿಧ್ಯ ಮೂಲಕ ಅವುಗಳಿಗೆ ಇರುವಿಕೆ ತಿಳಿಯುವಿಕೆ ಬಂದಿರುತ್ತವೆ. ಇದನ್ನು ಅಜ್ಞಾನಿಗಳು ತಿಳಿಯದೆ, ಅಹಂಕಾರ, ಮನ, ಬುದ್ಧಿ, ಇಂದ್ರಿಯಾದಿಗಳೇ ತಿಳಿಯುತ್ತವೆ. ಇವೇ ಆತ್ಮಸ್ವರೂಪಗಳಾಗಿವೆ. ಎಂದು ತಿಳಿದು; ಭ್ರಾಂತಚಿತ್ತರಾಗಿರುವರು. ಸೂಜಿಗಲ್ಲಿನ ಸಾನ್ನಿಧ್ಯದಿಂದ ಸೂಜಿಗಳು ಚಲಿಸುವಂತೆ, ಚಿದ್ರೂಪಾತ್ಮನ ಸಾನ್ನಿಧ್ಯದಿಂದ ಜಡಗಳಾದ ಅಹಂಕಾರಾದಿಗಳು ತಿಳಿಯುತ್ತಿರುತ್ತವೆ. ಇದನ್ನು ಮೂಢರು ತಿಳಿಯುವದಿಲ್ಲ. ಆದ್ದರಿಂದ ಜಡಗಳಾದ ಅಹಂಕಾರಾದಿಗಳೇ ಆತ್ಮನೆಂದು ತಿಳಿದಿದ್ದಾರೆ. ಅವು ಆತ್ಮಸ್ವರೂಪಗಳು ಅಲ್ಲ.

**ಅದು ನೈಜವೆಂದಜ್ಞರೊದವಿ ನುಡಿವುತ್ತಿರ್ಪ।**
**ರದಿದೆಂದು ತೋರುತಿಹುದಾತ್ಮನಲ್ಲವೆಂ।**
**ಬುದನೆ ಕೇಳಾತ್ಮಜನೆ ಪೇಳ್ವೆ ॥೪॥**

**ಟೀಕಾ:**- ಆತ್ಮಜನೆ ಕೇಳು=ಹೇ ಪುತ್ರನೇ ಆಲಿಸು, ಅದು ನೈಜವೆಂದು= ಆ ದೇಹಾದಿಗಳೇ ಆತ್ಮರೂಪಗಳೆಂದು, ಅಜ್ಞಾನಿ= ಅಜ್ಞಾನಿಗಳು, ಒದವಿ= ಚನ್ನಾಗಿ, ನುಡಿಯುತ್ತಿರ್ಪರು=ಹೇಳುತ್ತಿರುವರು, ಅದಿದೆಂದು=ಪರೋಕ್ಷ ಪ್ರತ್ಯಕ್ಷಗಳಿಗೆ ವಿಷಯಗಳೆಂದು, ತೋರುತಿಹುದು=ಪ್ರತೀತಿಯಾಗುತ್ತಿರುವದು, ಆತ್ಮನಲ್ಲವೆಂಬುದನು=ಆತ್ಮಸ್ವರೂಪವಲ್ಲವೆಂಬುವದನ್ನು, ಪೇಳ್ವೆ=ಹೇಳುತ್ತೇನೆ.

**ತಾತ್ಪರ್ಯ:**- ಜಡಗಳಾದ ದೇಹಾದಿಗಳು ಚೈತನ್ಯ ಸಾನ್ನಿಧ್ಯದಿಂದ ಚೇತನಗಳಂತೆ ವ್ಯವಹಾರವನ್ನು ಮಾಡುತ್ತಿರಲು; ಅಜ್ಞಾನಿಗಳು ದೇಹಾದಿಗಳೇ

ತಾವೆಂದು ತಿಳಿಯುತ್ತಾರೆ. ತಾವಲ್ಲದ ದೇಹಾದಿಗಳಲ್ಲಿ ತಾವೆಂದು ತಿಳಿಯುವದಕ್ಕೆ ಅವರ ಅಜ್ಞಾನವೇ ಕಾರಣವಾಗಿರುತ್ತದೆ. ಯಾಕಂದರೆ, ಘಟವು ಪ್ರತ್ಯಕ್ಷಕ್ಕೆ ವಿಷಯವಾಗಿದೆ. ಆ ಘಟವೇ ನಾನು ಎಂದು ಯಾರಾದರೂ ಲೋಕದಲ್ಲಿ ತಿಳಿಯುತ್ತಾರೋ? ಇಲ್ಲ. ತನ್ನಿಂದ ಕಾಣಿಸಿಕೊಂಡದ್ದು ತಾನಾಗುವದಿಲ್ಲ. ಇದು ಸರ್ವಾನುಭವಸಿದ್ಧವಾಗಿದೆ. ಇದರಂತೆ, ಯಾವದು ವಿಷಯವಾಗಿರುವದೋ, ಅದು ತಾನಾಗುವದಿಲ್ಲ. ದೇಹೇಂದ್ರಿಯಗಳು ಪ್ರತ್ಯಕ್ಷಗಳಾಗಿವೆ. ಮನ, ಬುದ್ಧಿ, ಅಹಂಕಾರಗಳು ಅವುಗಳ ವ್ಯವಹಾರದ ಮೇಲಿಂದ ಅನುಮಾನ ಮಾಡಲಿಕ್ಕೆ ವಿಷಯಗಳಾಗಿವೆ. ಆದ್ದರಿಂದ ಅದು ಇದು ಎಂದು ತೋರುತಿಹುದು. ಆತ್ಮನಾಗುವದಿಲ್ಲ. ಎಂದು ಗ್ರಂಥಕರ್ತರು ಹೇಳಿರುವರು. ಅರ್ಥಾತ್ ಪ್ರತ್ಯಕ್ಷ ಪರೋಕ್ಷಬುದ್ಧಿಗೆ ವಿಷಯಗಳಾಗಿ ತೋರುವ; ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ ಅಹಂಕಾರ ಮೊದಲಾದವುಗಳು ತಾನಾಗುವದಿಲ್ಲ. **(ಪ್ರತಿಜ್ಞಾ)** ವಿಷಯಗಳಾಗಿ ತೋರುವದರಿಂದ **(ಹೇತು)** ಘಟದಂತೆ **(ದೃಷ್ಟಾಂತ)** ಈ ರೀತಿ ಅನುಮಾನ ಪ್ರಮಾಣದಿಂದ ದೇಹಾದಿಗಳು ಅನಾತ್ಮಗಳೆಂದೇ ನಿಶ್ಚಯವಾಗುತ್ತದೆ. ಆತ್ಮನು ಅಂದರೆ ತಾನು ಅರಿಯುವವನು; ಅನಾತ್ಮಾ ಅಂದರೆ ಅರಿಸಿಕೊಳ್ಳುವದು. ಅರಿಯುವವನು ಅರಿಸಿಕೊಳ್ಳುವದು ಹೇಗೆ ಆಗುವನು? ಎಂದೂ ಆಗನು. ಅರಿಯುವ ಆತ್ಮನು ಅರಿಸಿಕೊಳ್ಳುವ ದೇಹಾದಿಗಳೇ ನಾವೆಂದು ನಂಬಿರುವರು. ಹಾಗು ನುಡಿಯುವರು. ಇದಕ್ಕೆ ಅಜ್ಞಾನವೇ ಹೇತುವಾಗಿರುತ್ತದೆ. **'ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ'** ಅಜ್ಞಾನದಿಂದ ಜ್ಞಾನವು ಆವೃತವಾದ್ದರಿಂದ ಜಂತುಗಳು ಮೋಹಿತರಾಗಿರುವರೆಂದು ಗೀತಾವಾಕ್ಯವು ಇರುತ್ತದೆ. ತಾನಾಗದ ದೇಹಾದಿಗಳಲ್ಲಿ ತಾನೆಂದು ತಿಳಕೊಂಡು ಇರುವದು ತಪ್ಪು ತಿಳವಳಿಕೆಯಾಗಿದೆ ಎಂಬ ಭಾವವು.

**ಬಳಿಕ,** ನಾನು ಹುಟ್ಟಿದ್ದೇನೆ, ಹೋಗುತ್ತೇನೆ, ಸೊರಗಿದ್ದೇನೆ, ಸಾಯುತ್ತೇನೆ ಎಂಬಲ್ಲಿ ನಾನು ನಾನು ಅನ್ನುವದು ದೇಹದಲ್ಲಿ ವರ್ತಿಸುವದರಿಂದ ದೇಹವೇ ತಾನಾಗಿರುವದು ಅನುಭವಸಿದ್ಧವಾಗಿದೆ, ಎಂದು ಶಂಕೆಯನ್ನು ಮಾಡಿದರೆ; ಪಂಚಭೂತಗಳ ಕಾರ್ಯವಾದ ದೇಹವು ತಾನಾಗುವದಿಲ್ಲೆಂದು ಉತ್ತರವನ್ನು ಹೇಳುತ್ತಾರೆ.

**ಭೂತ ಪಂಚೀಕರಣ ಜಾತ ದೇಹಾದಿ ಸಂ।**
**ಘಾಂತಗಳಾತ್ಮನಲ್ಲ ವೆಂದರಿವುದೆಲೆ।**
**ತಾತ ಚಿತ್ರದ ರಚನೆಯಂತೆ** ॥೫॥

**ಟೀಕಾ:**-ಎಲೆತಾತ=ಎಲೈ ಮಗನೇ, ಭೂತ=ಪಂಚಭೂತಗಳ, ಪಂಚೀಕರಣ=ಇಪ್ಪತ್ತೈದು ತತ್ವಗಳ ವಿಭಾಗದಿಂದ, ಜಾತ=ಉತ್ಪನ್ನವಾದ, ದೇಹಾದಿ=ತನುವೇ

ಮೊದಲಾದ, ಸಂಘಾತಂಗಳ್=ಸಮೂಹಗಳು, ಚಿತ್ರದ ರಚನೆಯಂತೆ=ಬಣ್ಣಗಳಿಂದ ಬರೆಯಲ್ಪಟ್ಟ ಗೊಂಬೆಗಳಂತೆ, ಆತ್ಮನಲ್ಲವೆಂದು=ಆತ್ಮಸ್ವರೂಪವಲ್ಲೆಂದು, ಅರಿವುದು=ತಿಳಿಯುವದು,

ತಾತ್ಪರ್ಯಃ-ಮೊದಲು ಅನ್ನಮಯಕೋಶವಾದ ಸ್ಥೂಲಶರೀರದ ವಿಚಾರವನ್ನು ಮಾಡುತ್ತಾರೆ. ಹೇಗಂದರೆ, ಈ ಸ್ಥೂಲ ಶರೀರವು ಪಂಚ ಭೂತಗಳ ಕಾರ್ಯವಾಗಿರುತ್ತದೆ. ಒಂದೊಂದು ಭೂತಗಳು ಎರಡೆರಡು ಭಾಗಗಳು ಆದವು. ಆ ಎರಡರಲ್ಲಿ ಒಂದು ಭಾಗವು ಹಾಗೇ ಇದ್ದು, ಉಳಿದೊಂದು ಭಾಗವು ನಾಲ್ಕು ಭಾಗವಾಯಿತು. ಈ ನಾಲ್ಕು ಭಾಗಗಳು ಅನ್ಯ ಭೂತಗಳ ಮುಖ್ಯಭಾಗಗಳಲ್ಲಿ ಶೇರಿಕೊಂಡವು. ಇದರಂತೆ ಪ್ರತಿಯೊಂದು ಭೂತಗಳು ಆದವು. ಹೀಗೆ ಆಗುವದರಿಂದ ಇಪ್ಪತ್ತೈದು ತತ್ವಾತ್ಮಕ ಸ್ಥೂಲಶರೀರವಾಯಿತು, ಇದಕ್ಕೆ ಪಂಚೀಕರಣವೆಂಬ ನಾಮವು ಬಂದಿತು. ಇದೇ ರೀತಿಯಾಗಿ ಕಾಣುವ ಶರೀರಗಳೆಲ್ಲಾ ಆಗಿರುತ್ತವೆ. ಹೇಗಂದರೆ, ಚಿತ್ರದ ರಚನೆಯಂತೆ; ಎಂದು ಹೇಳಿರುವರು. ಆಕಾಶದ್ದು ಕಪ್ಪು, ವಾಯುವಿನದು ಹಸರು, ಅಗ್ನಿಯದು ಕೆಂಪು, ಜಲದ್ದು ಬಿಳಿದು, ಭೂಮಿದು ಹಳದಿ, ಈ ರೀತಿ ಐದು ಬಣ್ಣಗಳಿರುತ್ತವೆ. ಆ ಬಣ್ಣಗಳನ್ನು ಹೆಚ್ಚು ಕಡಿಮೆ ಮಾಡಿಕೊಂಡು, ಒಂದರಲ್ಲೊಂದು ಕೂಡಿಸುವದರಿಂದ ಅನೇಕ ಬಣ್ಣಗಳಾಗುತ್ತವೆ. ಚಿತ್ರಗಾರನು ಐದು ಭೂತಗಳ ಸಂಬಂಧಿ ಐದು ಬಣ್ಣಗಳನ್ನು ತಕ್ಕೊಂಡು, ಗೋಡೆಯ ಮೇಲೆಯಾಗಲಿ ಪಡದೆಯ ಮೇಲೆಯಾಗಲಿ ಚಿತ್ರಗಳನ್ನು ಬರೆಯುತ್ತಾನೆ. ಆ ಚಿತ್ರಗಳು ಮನೋಹರಗಳಾಗಿ ತೋರುತ್ತಿರುತ್ತವೆ. ದೇವತೆ, ರಾಜರು, ಮನುಷ್ಯರು, ಪಶು, ಪಕ್ಷಿ, ಗಿರಿ, ನದಿ ಮೊದಲಾದ ಚಿತ್ರಗಳು ತೋರುತ್ತವೆ. ಆದರೆ ಅವು ಆತ್ಮರೂಪಗಳು ಹೇಗೆ ಆಗುವದಿಲ್ಲವೋ, ಹಾಗೇ ಈ ದೇಹಾದಿಗಳು ಪಂಚಭೂತಗಳ ಕಾರ್ಯಗಳಾದ್ದರಿಂದ ಆತ್ಮಸ್ವರೂಪಗಳು ಆಗಲಾರವು. ಎಂಬ ಭಾವವು.

ಬಳಿಕ, ನೀರಿನ ಮೇಲಿನ ಗುರುಳೆಗಳಂತೆ, ಈ ದೇಹವು ರೇತೋರಕ್ತಗಳ ಪರಿಣಾಮದಿಂದ ತೋರಿ, ಚೇತನದಿಂದೊಡಗೂಡಿ ವ್ಯವಹರಿಸಿ, ಮತ್ತೆ ಅಡಗಿ ಇಲ್ಲದ್ದಾಗುವದು. ಆದರಿಂದ ಆಶ್ಚರ್ಯಕರವಾಗಿದೆ. ಆಶ್ಚರ್ಯದಿಂದ ಕೂಡಿದ್ದು ಮಾಯಾಮಯ ಮಿಥ್ಯೆಯಾಗಿರುತ್ತದೆಂದು ಹೇಳುತ್ತಾರೆ.

**ಒಂದು ಹನಿ ಬಿಂದು ಪೊಡೆಯಿಂ ದೇಹವೆನಿಸುತ್ತೈ |**
**ತಂದು ಬೆಳೆದುಂಡು ಬದುಕಿ ಕೆಡುವಿದಕೆ ಬೇ |**
**ರೊಂದಿಂದ್ರಜಾಲವೆನಲುಂಟೆ ॥೬॥**

**ಟೀಕಾ:-** ಒಂದು ಹನಿ ಬಿಂದು=ಒಂದು ರೇತಸ್ಸಿನ ತಟಕು, ಪೊಡೆಯಿಂ= ಹೊಟ್ಟೆಯಿಂದ, ದೇಹವೆನಿಸುತ = ದೇಹವೆಂದು ಹೇಳಿಸಿಕೊಳ್ಳುತ್ತ, ಐತಂದು = ಬಂದು, ಬೆಳೆದು=ದೊಡ್ಡದಾಗಿ, ಉಂಡು=ಅನ್ನವನ್ನು ಊಟಮಾಡಿ, ಬದುಕಿ= ಕೆಲವು ದಿವಸವಿದ್ದು, ಕೆಡುವ= ನಾಶವಾಗುವಂಥಾ, ಇದಕೆ = ಈ ಶರೀರಕ್ಕೆ, ಬೇರೊಂದು = ಮತ್ತೊಂದು, ಇಂದ್ರಜಾಲವು = ಆಶ್ಚರ್ಯಕಾರಕ ಆಟವು, ಎನಲುಂಟೆ=ಅದೆಯೆಂದು ಹೇಳುವದಕ್ಕಾದೀತೆ? (ಆಗಲಾರದು.)

**ತಾತ್ಪರ್ಯ:-** ಜಡವಾದ ರೇತಸ್ಸಿನ ಬಿಂದು ಹೋಗಿ ಚೇತನರೂಪ ದೇಹ ವಾಗಿ ತೋರಿತು. ಇದು ಆಶ್ಚರ್ಯವಲ್ಲವೆ? ಮತ್ತು ಇದ್ದಂತೆ ತೋರಿ ಇಲ್ಲ ದಂತಾಗುತ್ತದೆ. ಇದೂ ಒಂದು ಆಶ್ಚರ್ಯವೆ ಆಗಿರುತ್ತದೆ. ಆದ್ದರಿಂದ ಈ ದೇಹಕ್ಕೆ ವ್ಯತಿರಿಕ್ತವಾಗಿ ಬೇರೊಂದು ಇಂದ್ರಜಾಲವಿಲ್ಲ. 'ಏತಾವತ್ಕಿಮಪೀಂದ್ರಜಾಲ ಮಪರಂ' ಅಂದರೆ, ಇದೆ ದೇಹವೇ **ಇಂದ್ರಜಾಲವಾಗಿದೆ.** ಎಂದು ಯೋಗ ವಾಸಿಷ್ಠದಲ್ಲಿ ಹೇಳಿದೆ. ಆದ್ದರಿಂದ ಮಾಯಾಸ್ವರೂಪು ಮಿಥ್ಯೆಯೆಂದು ತಿಳಿ. ಜಡ ವಾದ ರೇತದ ಹನಿಯು, ಸುರತಕ್ರೀಡೆಯಿಂದ ಸ್ತ್ರೀಯಳ ಗರ್ಭದಲ್ಲಿ ಶೇರಿಕೊಂಡು, ಒಂಭತ್ತು ತಿಂಗಳ ವರೆಗೆ ಬೆಳೆದು ಶರೀರವಾಗಿ ಪರಿಣಾಮಹೊಂದಿತು. ಅಲ್ಲಿಂದ ಹೊರಗೆ ಬಂದು, ಉಂಡು, ತಿಂದು, ಬೆಳೆದು ದೊಡ್ಡದಾಗಿ ನಾಲ್ಕು ದಿನ ಬದುಕಿ ಸಂಸಾರವನ್ನು ಮಾಡಿತು. ಅನಂತರ ನಾಶವನ್ನು ಹೊಂದಿ ಇಲ್ಲವೆಂದು ಹೇಳಿಸಿ ಕೊಳ್ಳುತ್ತದೆ. ಅರ್ಥಾತ್ ತೋರಿ, ವ್ಯವಹರಿಸಿ, ಇಲ್ಲದ್ದಾಗುವದರಿಂದ **ಆಶ್ಚರ್ಯ!** ಆಶ್ಚರ್ಯಲಕ್ಷಣವಾದ್ದರಿಂದಲೇ **ಮಿಥ್ಯೆ**ಯಾಗಿರುತ್ತದೆಂದು ನಿಶ್ಚಯವನ್ನು ಮಾಡ ತಕ್ಕದ್ದು.

**ಬಳಿಕ,** ದೇಹವು ಪರಿಣಾಮವಾಗಿಯೂ ಅನಿತ್ಯವಾಗಿಯೂ ಇರುವದರಿಂದ ಆತ್ಮಸ್ವರೂಪವಲ್ಲ. ಎಂಬುದನ್ನು ಹೇಳುತ್ತಾರೆ.

**ಪದ ಪಾಣಿ ಶಿರಗಳಿವು ರುಧಿರ ರೇತಂಗಳಿಂ ।**
**ದೊದವಿರ್ಪವಾಗಿ ಜಲದ ಬೊಬ್ಬುಳಿಕೆಯಂ ।**
**ತುದಿಸಿ ತನುವಡಗುತಿಹುದಿಂತು** ॥೭॥

**ಟೀಕಾ:-** ಪದ–ಪಾಣಿ–ಶಿರಗಳು=ಕಾಲು–ಕೈ–ತಲೆಗಳು, ಇವು=ಇವು, ರುಧಿರ ರೇತಂಗಳಿಂದೆ=ಸ್ತ್ರೀಪುರುಷರ ರಕ್ತ ವೀರ್ಯಗಳಿಂದ, ಒದವಿರ್ಪವಾಗಿ=ಪ್ರಾಪ್ತ ಗಳಾದ್ದರಿಂದ, ಜಲದ=ನೀರಿನ, ಬೊಬ್ಬುಳಿಕೆಯಂತೆ=ಗುರುಳಿಗಳಹಾಗೆ, ಉದಿಸಿ= ಉತ್ಪನ್ನವಾಗಿ, ತನುವು=ದೇಹವು, ಇಂತು=ಈ ರೀತಿ, ಅಡಗುತಿಹುದು=ಇಲ್ಲದಂತಾ ಗುವದು.

**ತಾತ್ಪರ್ಯ:-** ಪಾದಾದಿ ಸರ್ವಾವಯುವಗಳಿಂದ ಕೂಡಿರುವ ಈ ದೇಹವು; ತಾಯಿ ತಂದೆಗಳ ರೇತೋರಕ್ತ ಪರಿಣಾಮಾತ್ಮಕವಾಗಿರುತ್ತದೆ. ಅಂದರೆ, ರೂಪಾಂತರವಾಗಿರುವದು; ಅದರಿಂದ **ವಿಕಾರಿಯಾಗಿರುತ್ತದೆ.** ವಿಕಾರವಾದ್ದರಿಂದ ಅನಿತ್ಯತ್ವವು ಅವಶ್ಯವಾಗುತ್ತದೆ. ನೀರಮೇಲಿನ ಗುರುಳಿಯು ಲಿಂಗಾಕಾರವಾಗಿಯೂ ಮನೋಹರವಾಗಿಯೂ ತೋರಿ; ಹೇಗೆ ಅಡಗಿ ಇಲ್ಲದ್ದಾಗುವದೋ; ಹಾಗೇ ಈ ಶರೀರವಾದರೂ ನಾಶವಾಗಿ ಹೋಗುತ್ತದೆ. ಈ ದೇಹವು ಅನಿತ್ಯವಾದ್ದರಿಂದ ತಾನಲ್ಲ ಎಂದು ತಿಳಿ.

**ಬಳಿಕ,** ಈ ದೇಹವು ಭೂತಕಾರ್ಯ ಭೌತಿಕವಾಗಿಯೂ, ಆಶ್ಚರ್ಯಕರವಾಗಿಯೂ, ಅನಿತ್ಯವಾಗಿಯೂ, ತಿಳಿಸಿಕೊಂಡದ್ದರಿಂದ ಆತ್ಮನ ಸ್ವರೂಪು ಆಗಲಾರದು. ಇದಕ್ಕೆ ಆತ್ಮನು ಬೇರೆಯಾಗಿ ಅರಿಯುತ್ತಾ ಇರುತ್ತಾನೆಂದು ಹೇಳುತ್ತಾ ಅನುಮಾನ ಪ್ರಮಾಣವನ್ನು ಉದಾಹರಿಸುತ್ತಾರೆ.

**ಅರಿವಲ್ಲ ವೀಕಾಯ ವರುಹಿಕೊಳುತಿಹುದಾಗಿ ।**
**ಯರುಹಿಕೊಳುತಿರ್ಪುದರಿವಲ್ಲವದು ಬಚ್ಚ ।**
**ಬರಿಯ ಘಟದಂತಿದನುಮಾನ ॥೮॥**

**ಟೀಕಾ:-**ಈ ಕಾಯವು= ಈ ಶರೀರವು, ಅರಿವಲ್ಲವು=ಚಿದ್ರೂಪಾತ್ಮನಲ್ಲ, ಅರುಹಿಕೊಳುತಿಹುದಾಗಿ=ತಿಳಿಸಿಕೊಳ್ಳುವದರಿಂದ, ಅರುಹಿಕೊಳುತಿರ್ಪುದು=ತಿಳಿಸಿಕೊಳ್ಳುವದು; ಅರಿವಲ್ಲವದು=ಅದು ಆತ್ಮನಾಗದು, ಬಚ್ಚ ಬರಿಯ ಘಟದಂತೆ=ನೀರಿಲ್ಲದ ಕೊಡದಹಾಗೆ, ಇದು ಅನುಮಾನ=ಇದು ಅನುಮಾನ ಪ್ರಮಾಣವೆನಿಸುತ್ತದೆ.

ತಾತ್ಪರ್ಯ:- ಈ ದೇಹವು ಆತ್ಮಸ್ವರೂಪವಲ್ಲ. ವೆಂಬುದು **ಪ್ರತಿಜ್ಞಾ**ವಾಕ್ಯವಾಗಿದೆ. ಯಾಕಂದರೆ, ತಿಳಿಸಿಕೊಳ್ಳುವದರಿಂದ ಎಂಬುದು **ಹೇತುವಾಕ್ಯ**ವಾಗಿದೆ. ಯಾವದು ತಿಳಿಸಿಕೂಳ್ಳುವದೋ ಅದು ಅರುವಾಗಲಾರದು. ಹೇಗಂದರೆ, ಘಟದಹಾಗೆ ಇದು **ದೃಷ್ಟಾಂತವಾಗಿದೆ** ಘಟವು ನೀರು ಇಲ್ಲದೆ ಆದೆ ಬರೀ ಕೊಡವು ಎಂದು ತಿಳಿಸಿಕೊಳ್ಳುತ್ತದೆ. ಅದರಿಂದ ಅದು ಜಡವಾಗಿದೆ, ಹಾಗೆ, ದೇಹವಾದರೂ ಉಕ್ತಪ್ರಕಾರ ತಿಳಿಸಿಕೊಳ್ಳುವದರಿಂದ **ಜಡ ಅನಾತ್ಮವಾಗಿದೆ.** ಇದನ್ನು ಅರಿಯುವವನು ಆತ್ಮನಾಗಿದ್ದಾನೆ. ಆದ್ದರಿಂದ ದೇಹವು ಆತ್ಮವಲ್ಲ.

ಬಳಿಕ, ನೋಡುತ್ತೇನೆ. ನುಡಿಯುತ್ತೇನೆ. ಅನ್ನುವದರಿಂದ ಇಂದ್ರಿಯಗಳು ಆತ್ಮಸ್ವರೂಪಗಳಾಗಿರುವಂತೆ ತೋರುತ್ತವೆ, ಆದರೂ; ದೇಹದಂತೆ ದಶೇಂದ್ರಿಯಗಳೂ ಆತ್ಮರೂಪಗಳಲ್ಲ. ಎಂಬುದನ್ನು ನಿರೂಪಣ ಮಾಡುತ್ತಾರೆ.

ಶ್ರವಣಾದಿ ಬುದ್ಧೀಂದ್ರಿಯುವನು ವಾಕ್ಕರ ಮುಖ್ಯ |
ವಿವಿಧ ಕರ್ಮೇಂದ್ರಿಯುವನು ಸಂವಿತ್ತೆಂಬು |
ದವಿರತಂ ಘಟಿಸದೊಡಲಂತೆ ||೯||

ಟೀಕಾ:- ಶ್ರವಣಾದಿ=ಶ್ರೋತ್ರವೇ ಮೊದಲಾದ, ಬುದ್ಧೀಂದ್ರಿಯುವನು=ಜ್ಞಾನೇಂದ್ರಿಯಗಳನ್ನು, ವಾಕ್ಕರ ಮುಖ್ಯ=ವಾಣಿ ಹಸ್ತಗಳೇ ಮೊದಲಾದ, ವಿವಿಧ=ನಾನಾಪ್ರಕಾರದ, ಕರ್ಮೇಂದ್ರಿಯುವನು=ಕರ್ಮೇಂದ್ರಿಯಗಳನ್ನು, ಒಡಲಂತೆ=ಶರೀರದ ಹಾಗೆ, ಸಂವಿತ್ತೆಂಬುವದು=ಚಿದ್ರೂಪಾತ್ಮರೆಂಬುವದು,ಅವಿರತಂ=ಯಾವಾಗಲೂ, ಘಟಿಸದು=ಸಂಭವಿಸದು.

ತಾತ್ಪರ್ಯ:- ಈ ದೇಹದಲ್ಲಿ ಪಂಚ ಶ್ರೋತ್ರ ನೇತ್ರಾದಿ ಜ್ಞಾನೇಂದ್ರಿಯಗಳು, ಹಾಗು ವಾಕ್ಕು, ಪದ, ಪಾಣಿ, ಮೊಲಾದ ಪಂಚ ಕರ್ಮೇಂದ್ರಿಯಗಳು, ಇರುತ್ತವೆ. ತಿಳಿಯುವದರಿಂದ ಜ್ಞಾನೇಂದ್ರಿಯಗಳೆಂದೂ, ಕ್ರಿಯೆಯನ್ನು ಮಾಡುವದರಿಂದ ಕರ್ಮೇಂದ್ರಿಯಗಳೆಂದೂ ಹೆಸರುಗಳು ಬಂದಿರುತ್ತವೆ. ಇವು ದೇಹದಲ್ಲಿದ್ದು ವ್ಯವಹಾರ ಮಾಡುವಾಗ್ಗೆ ನಾನು:ಕೇಳುತ್ತೇನೆ. ನಾನು ನುಡಿಯುತ್ತೇನೆ. ಹೀಗೆ ನಾವು ಅನ್ನುವದು ಇಂದ್ರಿಯಗಳಲ್ಲಿಯೂ ವರ್ತಿಸುತ್ತವೆ. ಆದ್ದರಿಂದ ಇಂದ್ರಿಯಗಳು ಆತ್ಮರೂಪಗಳೆಂದು ಭ್ರಾಂತಿಯಾಗುತ್ತದೆ. ವಿಚಾರಮಾಡಿದರೆ, ದೇಹವು ಹೇಗೆ ಆತ್ಮರೂಪವಲ್ಲವೋ, ಹಾಗೆ ಇಂದ್ರಿಯಗಳೂ **ಆತ್ಮರೂಪಗಳಲ್ಲ**. ಯಾಕಂದರೆ, ದೇಹದಂತೆ ಇಂದ್ರಿಗಳಾದರೂ ಆಂಧ್ಯ, ಮಾಂದ್ಯ ಪಟುತ್ವಾದಿಗಳಿಂದ ತಿಳಿಸಿಕೊಳ್ಳುತ್ತವೆ. ಅದರಿಂದ ಆತ್ಮವಲ್ಲ. ಕಣ್ಣು, ಬಾಯಿ, ಕಿವಿಗಳಿಲ್ಲದ ಕುರುಡ, ಮೂಕ, ಕಿವುಡರು; ಇಂದ್ರಿಯಗಳಿಲ್ಲದಿದ್ದರೂ, ಜೀವಿಸಿಕೊಂಡು ಇರುತ್ತಾರೆ. ಅವರು ನಿರಾತ್ಮರಾಗಿರುವರೇನು ? ಇದರಮೇಲಿಂದ ಇಂದ್ರಿಯಗಳು **ಆತ್ಮರೂಪವಲ್ಲ**. ಮತ್ತು ನನ್ನ :ಕಣ್ಣು, ನನ್ನ ಕಾಲು, ಎಂದು ಮಮಕಾರಕ್ಕೂ ವಿಷಯಗಳಾಗಿವೆ. ನನ್ನ ಮನೆ, ಎಂಬಲ್ಲಿ ಮನೆಯು ತಾನು ಹೇಗೆ ಆಗುವದಿಲ್ಲವೋ, ಹಾಗೆ ಕಣ್ಣು ಮೊದಲಾದವುಗಳು ಆತ್ಮಗಳಲ್ಲ. ಮತ್ತು ಎಲ್ಲಾ ಇಂದ್ರಿಯಗಳು ಕೂಡಿ ಒಬ್ಬಾತ್ಮನಿರುವನೋ? ಒಂದೊಂದು ಇಂದ್ರಿಯಕ್ಕೆ ಒಬ್ಬೊಬ್ಬನಿರುವನೋ? ಹೇಳು. ಇಂದ್ರಿಯ ಸಮೂಹವೇ ಆತ್ಮರೂಪವು ಅಂದರೆ ಅದು ಘಟಿಸುವದಿಲ್ಲ. ಯಾಕಂದರೆ, ಎಲ್ಲಾ ಇಂದ್ರಿಯಗಳು ಏಕಕಾಲಕ್ಕೆ ವ್ಯವಹಾರಮಾಡುವ ಪ್ರಸಂಗ ಬರುವದು. ದಶೇಂದ್ರಿಯಗಳು ಏಕಕಾಲದಲ್ಲಿ ವ್ಯವಹಾರಮಾಡಿದ್ದು ಯಾರೂ ಕಂಡಿಲ್ಲ. ಒಂದು ವೇಳೆ ಏಕಕಾಲಕ್ಕೆ ಮಾಡುತ್ತವೆಂದು ಒಪ್ಪಿದರೂ ದೇಹಸ್ಥಿತಿಯು ಉಳಿಯಲಾರದು. ಹೇಗಂದರೆ, ಒಂದು ಬಾಳೆಯ ಗಿಡಕ್ಕೆ ಹತ್ತು ಆನೆಗಳನ್ನು ಕಟ್ಟಿದ್ದೇವೆ. ಅವು ಹತ್ತು ದಿಕ್ಕಿಗೆ

ಹತ್ತು ಆನೆಗಳು ಎಳೆಯಲಿಕ್ಕೆ ಹತ್ತಿದರೆ, ಆ ಬಾಳೆಯ ಕಂಬದ ಸ್ಥಿತಿಯು ಹೇಗೆ ಉಳಿಯದೋ, ಹಾಗೆ ದೇಹಸ್ಥಿತಿಯಾದರೂ ಉಳಿಯದು. ಹಾಗಾದರೆ, ಒಂದೊಂದು ಇಂದ್ರಿಯಕ್ಕೆ ಒಬ್ಬೊಬ್ಬ ಆತ್ಮನಿದ್ದಾನೆಂದು ಬೇರೆ ಬೇರೆ ಹೇಳಿದರೆ, ಕಣ್ಣಿನಿಂದ ನೋಡಿದ್ದನ್ನು ಕೈಯಿಂದ ಮುಟ್ಟುತ್ತೇನೆ. ಎಂಬಲ್ಲಿ ಪ್ರತ್ಯಭಿಜ್ಞಾನವು ಆಗಬಾರದಾಗಿತ್ತು. ಕಿಂತು; ನೋಡಿದವನೇ ಮುಟ್ಟುತ್ತೇನೆಂದು ಹೇಳುತ್ತಿರುವನು. ಅದರಿಂದ ಕಣ್ಣಿನಲ್ಲಿದ್ದವನು ಕೈಗಳಲ್ಲಿರುವನು. ಎಂಬ ಅರ್ಥವಾಗುತ್ತದೆ. ನೋಡುವನೊಬ್ಬ ಬೇರೆ, ಮುಟ್ಟುವನೊಬ್ಬ ಬೇರೆಯಾಗಿದ್ದರೆ, ನೋಡಿದ್ದನ್ನೇ ಮುಟ್ಟುತ್ತೇನೆಂದು ಹೇಳುವದಕ್ಕೆ ಬರುವದಿಲ್ಲ. ಬರುತ್ತದೆ. ಆದ್ದರಿಂದ ಯಾವನು ಕಣ್ಣಿನಿಂದ ನೋಡಿರುವನೋ, ಅವನೇ ಕೈಗಳಿಂದ ಮುಟ್ಟಿರುವನು. ಈ ಕಾರಣದಿಂದ ಆತ್ಮನು ಒಬ್ಬನೆಂದು ಅರ್ಥವಾಗುತ್ತದೆ. ಮತ್ತು ದಶೇಂದ್ರಿಯಗಳಿಗಿಂತಲೂ ಬೇರೆಯಿದ್ದಾನೆಂದೂ ಇದರಿಂದಲೇ ನಿಶ್ಚಯಿಸಲ್ಪಡುತ್ತದೆ. ಆದ್ದರಿಂದ **ಇಂದ್ರಿಯಗಳು ಆತ್ಮಸ್ವರೂಪಗಳಲ್ಲ.**

ಬಳಿಕ, ದಶೇಂದ್ರಿಯಗಳಲ್ಲಿ ಆತ್ಮತ್ವವಿಲ್ಲೆಂಬುದನ್ನು ಮತ್ತೊಂದು **ರೀತಿ**ಯಿಂದಲೂ ಪ್ರತಿಪಾದನ ಮಾಡುತ್ತಾರೆ.

**ಬಲ್ಲಹನೆ ಶಬ್ದಾದಿಯಲ್ಲಿಯೋ ವಚನಾದಿ ।**
**ಯಲ್ಲಿಯೋ ನಿಯಮ ವಿಡಿದಿಂದ್ರಿಯಪ್ರಕರ ।**
**ವಲ್ಲಿಯಾತ್ಮತ್ವವಿಹುದೆಂತು ॥೧೦॥**

**ಟೀಕಾ:-** ಬಲ್ಲಹನೇ = ಅರುವುಳ್ಳವನೇ !, ಶಬ್ದಾದಿಯಲ್ಲಿಯೋ = ಶಬ್ದಸ್ಪರ್ಶಾದಿಗಳಲ್ಲಿ, ವಚನಾದಿಯಲ್ಲಿಯೋ = ನುಡಿ, ನಡಿ ಮೊದಲಾದವುಗಳಲ್ಲಿ, ನಿಯಮವಿಡಿದು=ಕ್ರಮವಾಗಿ, ಇಂದ್ರಿಯ ಪ್ರಕರದಲ್ಲಿ=ಇಂದ್ರಿಯ ಸಮೂಹದಲ್ಲಿ, ಎಂತು=ಹೇಗೆ, ಆತ್ಮತ್ವವಿಹುದು=ಆತ್ಮತ್ವವಿರುತ್ತದೆ.

**ತಾತ್ಪರ್ಯ:-** ಶ್ರೋತ್ರಾದಿ ಪಂಚ ಜ್ಞಾನೇಂದ್ರಿಯಗಳು ಶಬ್ದ, ಸ್ಪರ್ಶ, ರೂಪಾದಿ ವಿಷಯಗಳನ್ನು ಗ್ರಹಣ ಮಾಡುತ್ತವೆ. ! ವಾಕ್ಯಾದಿ ಪಂಚ ಕರ್ಮೇಂದ್ರಿಯಗಳು ನುಡಿ, ನಡೆ, ಹಿಡಿಯುವ ಮೊದಲಾದ ವ್ಯವಹಾರಗಳನ್ನು ಮಾಡುತ್ತವೆ. ಈ ದಶೇಂದ್ರಿಯಗಳಲ್ಲಿ ಆತ್ಮತ್ವವು ಎಲ್ಲಿರುವದು ಹೇಳು. ಇವು ಆತ್ಮಸ್ವರೂಪಗಳು ಆಗಿದ್ದರೆ; ಶ್ರೋತ್ರವು ಶಬ್ದವನ್ನು ಕೇಳಿದಂತೆ ರೂಪವನ್ನು ಯಾಕೆ ಕಾಣುವದಿಲ್ಲ? ಕಣ್ಣು ರೂಪವನ್ನು ಕಂಡಂತೆ ರಸವನ್ನು ಕಾಣಬಹುದಾಗಿತ್ತು. ಇದರಂತೆ; ವಾಣಿಗೆ ನುಡಿಯುವದಕ್ಕೆ ಬಂದಂತೆ ನಡೆಯುವದಿಲ್ಲವೇಕೆ? ಅಂದರೆ; ಆತ್ಮಸ್ವರೂಪಗಳು ಆಗಿದ್ದರೆ; ಎಲ್ಲವನ್ನು ಅರಿಯಬೇಕಿತ್ತು. ಹಾಗಲ್ಲ. ತಮ್ಮ ತಮ್ಮ ಒಂದೊಂದು ವಿಷಯ, ಒಂದೊಂದು ಕೆಲಸ ಮಾತ್ರ ಮಾಡುವದರಿಂದ ಇಂದ್ರಿಯ ಸಮೂಹವು ಆತ್ಮನೆಂಬುದು ಸಿದ್ಧಿಸುವದಿಲ್ಲ.

ಬಳಿಕ, ಇಂದ್ರಿಯ ಸಮೂಹವು ತಮ್ಮ ತಮ್ಮ ವಿಷಯವನ್ನೇ ತಾವು ತಿಳಿಯದೇ ಹೋಗುವದರಿಂದ ಮತ್ತು ಮರೆಯುತ್ತಿರುವದರಿಂದ ಇವು ಅನಾತ್ಮಗಳೆಂದು ಹೇಳುತ್ತಾರೆ.

ತಮ್ಮ ವಿಷಯಾಕಾರಮಂ ಮರವೆವಾಗಿ ಬಳಿ |
ಕಂ ಮನನವಿಲ್ಲವಾಗಿ ಕರಣಂಗಳಿವ |
ನೊಮ್ಮೆ ಚಿತ್ತೆಂಬುದರಿದಲ್ತೆ ||೧೧||

**ಟೀಕಾ:-** ತಮ್ಮ=ತಮ್ಮ ತಮ್ಮ, ವಿಷಯಾಕಾರಮಂ=ವಿಷಯಗಳ ಆಕಾರವನ್ನು, ಮರವೆವಾಗಿ=ಮರೆಯುತ್ತಿರುವದರಿಂದ, ಬಳಿಕಂ=ಅನಂತರ, ಮನನವಿಲ್ಲವಾಗಿ=ಸ್ಮರಣವನ್ನು ಮಾಡದ್ದರಿಂದ, ಕರಣಂಗಳಿವನು=ಈ ಇಂದ್ರಿಯಗಳನ್ನು, ಒಮ್ಮೆ=ಒಂದು ಕಾಲಕ್ಕಾದರೂ, ಚಿತ್ತೆಂಬುದು=ಆತ್ಮನೆಂದು ಹೇಳುವದು, ಅರಿದಲ್ತೆ=ಆಶ್ಚರ್ಯವಲ್ಲವೆ?

**ತಾತ್ಪರ್ಯ:-** ನೇತ್ರಾದಿ ಇಂದ್ರಿಯಗಳು ಒಮ್ಮೊಮ್ಮೆ ತಮ್ಮ ತಮ್ಮ ವಿಷಯಗಳನ್ನು ಕಂಡರೂ, ಅವುಗಳ ಆಕಾರವಾಗಿ ಅವುಗಳನ್ನು ತಿಳಿಯದೆ ವಿಪರೀತವಾಗಿ ತಿಳಿಯುವದೂ ಉಂಟು. ಒಂದು ವೇಳೆ ಸರಿಯಾಗಿ ತಿಳಿದರೂ ತಿಳಿದ ಮೇಲೆ, ಕೆಲವು ಹೊತ್ತಿನ ಮೇಲೆ ಆ ವಿಷಯದ ಸ್ಮರಣೆಯನ್ನು ಮಾಡುವದಿಲ್ಲ. ಸ್ಮರಿಸುವದು ಮನಸ್ಸಿಗೆ ಇರುವದು. ಇಂದ್ರಿಯಗಳಿಗಿಲ್ಲ ಎಂಬ ಭಾವವು. ಅರುವು ಮರವು ಇವುಗಳಿಂದ ಬೆರತು ಇರುವ ಕಾರಣ ಇಂದ್ರಿಯಗಳಿಗೆ ಆತ್ಮಾ ಎಂದು ಹೇಳುವದು ಆಶ್ಚರ್ಯವಲ್ಲವೇನು? ಆದ್ದರಿಂದ ಆತ್ಮತ್ವವಿಲ್ಲೆಂದು ನಿಶ್ಚಯ ಮಾಡು.

**ಬಳಿಕ,** ಅನ್ನಮಯ ಕೋಶವಾದ ಶರೀರಕ್ಕಾಗಲಿ, ಅಥವಾ ಆ ಶರೀರದೊಳಗಿರುವ ಇಂದ್ರಿಯಗಳಿಗಾಗಲಿ ಆತ್ಮತ್ವವು ಇಲ್ಲದೆ ಹೋದರೂ ಹೋಗಲಿ. ದೇಹೇಂದ್ರಿಯಾದಿಗಳಿಗೆ ಬಲವನ್ನು ಕೊಟ್ಟು, ಅವು ವ್ಯವಹಾರ ಮಾಡುವಂಥ ಸಾಮರ್ಥ್ಯವನ್ನುಂಟು ಮಾಡುವದು ಪ್ರಾಣವಾಗಿರುತ್ತದೆ. ಅಂದರೆ, ದೇಹೇಂದ್ರಿಯಾದಿಗಳ ಸ್ಥಿತಿಗತಿಗೆ ಪ್ರಾಣವೇ ಕಾರಣವಾಗಿರುತ್ತದೆ. ಪ್ರಾಣವು ಶರೀರದಲ್ಲಿರುವವರೆಗೆ ಆತ್ಮನು ಇದ್ದಾನೆಂದೂ, ಪ್ರಾಣವು ಪ್ರಯಾಣ ಮಾಡಿದರೆ, ಆತ್ಮನು ಹೋದನೆಂದೂ ತಿಳಿಯುತ್ತಾರೆ. ನಿದ್ರೆಯಲ್ಲಿ ಸಕಲ ಕರಣಗಳು ವ್ಯಾಪಾರ ಬಿಟ್ಟರೂ ಪ್ರಾಣವು ಮಾತ್ರ ಜಾಗರೂಕತೆಯಿಂದ ಸಂಚರಿಸಿ ದೇಹವನ್ನು ರಕ್ಷಿಸುತ್ತದೆ. ಆದ್ದರಿಂದ **ಪ್ರಾಣಕ್ಕೆ** ಆತ್ಮಾ ಎಂದು ಹೇಳಬಹುದು. ಎಂದು ಶಂಕೆಯನ್ನು ಮಾಡಿದರೆ; ಈ ರೀತಿ ವ್ಯವಹಾರ ಮಾಡಿದರೂ, ಇದು ಜಡತ್ವ ಲಕ್ಷಣದಿಂದ ಕೂಡಿದ್ದರಿಂದ ಇದು **ಆತ್ಮನಾಗದೆಂದು** ಉತ್ತರವನ್ನು ಹೇಳುತ್ತಾರೆ.

**ಪ್ರಾಣಾನಿಲಂಗಳಂ ಮಾಣಾತ್ಮನೆಂಬುದಂ।**
**ಜಾಣನಿಂದೂದು ತಿಹವಾಸದುಸುರಂತೆ।**
**ಕಾಣಿಸುತ್ತೊಡಲೊಳಿಹವಾಗಿ ॥೧೨॥**

**ಟೀಕಾ:-** ಪ್ರಾಣಾನಿಲಂಗಳಂ= ಪ್ರಾಣಾಪಾನಾದಿ ವಾಯುಗಳಾದರೂ, ಆತ್ಮನೆಂಬುದಂ= ಆತ್ಮನೆಂಬುವದನ್ನು, ಮಾಣು= ಬಿಟ್ಟುಬಿಡು, ಜಾಣನಿಂದ= ಕುಶಲ ಪುರುಷರಿಂದ, ಊದುತಿಹ=ಊದುತ್ತಿರುವ, ವಾಸದ=ತಿದಿಯ, ಉಸುರಂತೆ=ಗಾಳಿಯಹಾಗೆ, ಒಡಲೊಳು=ಶರೀರದಲ್ಲಿ, ಕಾಣಿಸುತ್ತ=ತೋರುತ್ತ, ಇಹವಾಗಿ=ಇರುವದರಿಂದ.

**ತಾತ್ಪರ್ಯ:-** ಜಡಗಳಾದ ದೇಹೇಂದ್ರಿಯಾದಿಗಳನ್ನು ಪ್ರಾಣಾಪಾನಾದಿಗಳು ಪ್ರೇರಿಸಿ ಚಲಿಸುವಂತೆ ಮಾಡುತ್ತವೆ. ಆದರೂ ಇವು ಆತ್ಮಗಳಲ್ಲ. ಯಾಕಂದರೆ; ಒಬ್ಬಾನೊಬ್ಬ ಭಿಕ್ಷುಕನಿಂದ ವಾಸನಾಮಕ ತಿದಿಯು ಸ್ವರವನ್ನು ಮಾಡುವದಕ್ಕಾಗಿ ಉಪಯೋಗ ಮಾಡಲ್ಪಡುತ್ತದೆ. ಅದರಲ್ಲಿ ಮೊದಲು ಗಾಳಿಯನ್ನು ತುಂಬುವರು. ಅನಂತರ ಅದರೊಳಗಿಂದ ವಾಯು ಮಂದಗತಿಯಿಂದ ಹೊರಗೆ ಹೋಗಲಿಕ್ಕೆ ಹತ್ತುತ್ತದೆ. ಗಾಳಿ ಹೋದಂತೆ ಅದು ಸ್ವರವನ್ನು ಮಾಡುತ್ತದೆ. ಆ ಸ್ವರದ ಕೂಡ ರಾಗಮಾಡುತ್ತಾರೆ. ಆ ತಿದಿಯು ಶ್ವಾಸವನ್ನು ಹೇಗೆ ಬಿಡುತ್ತದೆಯೋ, ಹಾಗೇ ಈ ದೇಹದಲ್ಲಿ ಪ್ರಾಣವು ಶ್ವಾಸೋಚ್ಛ್ವಾಸಗಳನ್ನು ಬಿಡುತ್ತಿರುತ್ತದೆ. ತಿದಿಯಲ್ಲಿದ್ದ ಗಾಳಿಯಂತೆ ದೇಹದಲ್ಲಿರುವ ಪ್ರಾಣವು ಗಮನಾಗಮನ ಮಾಡುತ್ತಿರುತ್ತದೆ. ಆದರೆ, ಅದಕ್ಕೆ ಯಾವದೊಂದನ್ನು ಅರಿಯುವದು ಇಲ್ಲ. ಅದರಿಂದ ಅದು ಜಡವಾಗಿದೆ, ಪ್ರಾಣಾಪಾನಾದಿಗಳು ಜಡಗಳಾಗಿ ಗಮನಾಗಮನ ಮಾಡುವವನ್ನು, ಅರಿಯುವ ಆತ್ಮನು; ಈ ಪ್ರಾಣಕ್ಕಿಂತಲೂ ಬೇರೆಯಾಗಿ ಇರುತ್ತಾನೆ. ಆದ್ದರಿಂದ **ಪ್ರಾಣವು** ಆತ್ಮನಾಗದು.

ಬಳಿಕ, ಪ್ರಾಣಾದಿಗಳು ಜಡಗಳಾಗಿವೆಯೆಂಬುದು, ಪ್ರಾಣಾಯಾಮವನ್ನು ಮಾಡುವಂಥಾ ಹಠಯೋಗಿಗಳಿಗೆ, ಪ್ರತ್ಯಕ್ಷ ಅನುಭವ ಸಿದ್ಧವಾಗಿರುತ್ತದೆಂದು ನಿರೂಪಣ ಮಾಡುತ್ತಾರೆ.

**ರೇಚಕಾದಿತ್ರಯುವ ನಾಚರಿಸುತಂ ಜಯದ।**
**ಸೂಚನೆಯನುಳ್ಳ ಯಮಿಗಳಿಂ ಜಾಡ್ಯವೇ।**
**ಪ್ರಾಚುರ್ಯ ವನಿಲ ನಿವಹಕ್ಕೆ ॥೧೩॥**

**ಟೀಕಾ:-** ರೇಚಕಾದಿ ತ್ರಯವನು= ರೇಚಕ, ಪೂರಕ, ಕುಂಭಕ ಈ ಮೂರನ್ನೂ, ಆಚರಿಸುತ=ಅಭ್ಯಾಸವನ್ನು ಮಾಡುತ್ತಾ, ಜಯದ ಸೂಚನೆ

ಯುಳ್ಳ=ಪ್ರಾಣನಿರೋಧರೂಪ ಜಯವನ್ನು ತಿಳಿಸುತ್ತಿರುವಂಥಾ; ಯಮಿಗಳಿಂ= ಹಠಯೋಗಿಗಳಿಂದ, ಅನಿಲ ನಿವಹಕ್ಕೆ=ವಾಯುಸಮೂಹಕ್ಕೆ, ಜಾಡ್ಯವೇ=ಜ್ಞಾನ ಹೀನ ಜಡತ್ವವೇ, ಪ್ರಾಚುರ್ಯವು=ಮುಖ್ಯವಾಗಿರುತ್ತದೆ.

**ತಾತ್ಪರ್ಯ:**- ಪ್ರಾಣಾದಿ ವಾಯುಗಳು ಜಡಗಳಾಗಿರುತ್ತವೆಂಬದು ಹಠಯೋಗಿ ಗಳಿಂದ ನಿಶ್ಚಯವಾಗಿರುತ್ತದೆಂದು ಹೇಳುತ್ತಾರೆ. ಹೇಗಂದರೆ, ಹಠಯೋಗಿಗಳು ಪೂರಕ, ಕುಂಭಕ ರೇಚಕತ್ರಯವನ್ನು ಅಭ್ಯಾಸಮಾಡುತ್ತಾರೆ. ಅಂದರೆ ಹೊರಗಿನ ವಾಯುವನ್ನು ಒಳಗೆ ಎಳೆಯುವದಕ್ಕೆ **ಪೂರಕ**ವೆನ್ನುತ್ತಾರೆ. ಆದನ್ನು ಭ್ರುಕುಟಿಯಲ್ಲಿ ನಿಲ್ಲಿಸುವದಕ್ಕೆ **ಕುಂಭಕ**ವೆನ್ನುತ್ತಾರೆ. ಬಳಿಕ, ಅದನ್ನು ಕ್ರಮವಾಗಿ ಹೊರಗೆ ಹಾಕುವದಕ್ಕೆ **ರೇಚಕ**ವೆಂದು ಹೇಳುತ್ತಾರೆ. ಈ ರೀತಿ ಯೋಗಿಗಳು ವಾಯು ವನ್ನು ಹಿಡಿಯುವದನ್ನು ಬಿಡುವುದನ್ನು ಮಾಡುತ್ತಾರೆ. ಈ ಅನುಭವದಿಂದ ವಿಚಾರಮಾಡಿ ನೋಡಿದರೆ, ಪ್ರಾಣವಾಯುಗಳು ಜಡಗಳಾಗಿರುತ್ತವೆಂದು ಕಂಡು ಬರುತ್ತದೆ. ಆದ್ದರಿಂದ **ಪ್ರಾಣಮಯಕೋಶವು** ಆತ್ಮವಲ್ಲ.

**ಬಳಿಕ,** ಮನ, ಬುದ್ಧಿ, ಚಿತ್ತು, ಅಹಂಕಾರಗಳೆಂಬ ನಾಲ್ಕು ವೃತ್ತಿಗಳಿಂದ ಯುಕ್ತವಾದ ಅಂತಃಕರಣವು ಆತ್ಮಸ್ವರೂಪವಲ್ಲ. ಯಾಕಂದರೆ, ಅದು ಕೂಡಾ ಅರುರೂಪ ಆತ್ಮನಿಂದ ತಿಳಿಸಿಕೊಳ್ಳುವದಾಗಿರುತ್ತದೆ. ಆದ್ದರಿಂದ ಅನಾತ್ಮವಾಗಿದೆ ಎಂದು ಹೇಳುತ್ತಾರೆ.

**ಚಿತ್ತು ಮನಮೊದಲಾದ ವೃತ್ತಿ ನಾಲ್ಕರ ರೂಪು ।**
**ವೆತ್ತುದಂತಃಕರಣವಾತ್ಮನಾಗದಾ ।**
**ಚಿತ್ತಿಂಗೆ ವೇದ್ಯಮಹುದಾಗಿ** ॥೧೪॥

**ಟೀಕಾ:**- ಚಿತ್ತು=ಸ್ಮರಣಮಾಡುವದು, ಮನ=ಸಂಕಲ್ಪ ವಿಕಲ್ಪ ಮಾಡು ವದು, ಮೊದಲಾದ=ಮುಂತಾದ, ವೃತ್ತಿ ನಾಲ್ಕರರೂಪು=ನಾಲ್ಕು ವೃತ್ತಿಗಳ ಆಕಾರವನ್ನು, ವೆತ್ತುದು=ಹೊಂದುವದು, ಅಂತಃಕರಣವು=ಅಂತಃಕರಣವಾಗಿದೆ. ಆ ಚಿತ್ತಿಂಗೆ=ಚಿದ್ರೂಪನಾದ ಆತ್ಮನಿಗೆ, ವೇದ್ಯವಹುದಾಗಿ=ಅರುಹಿಕೊಳ್ಳುವದ ರಿಂದ, ಆತ್ಮನಾಗದು=ಆತ್ಮಸ್ವರೂಪವಲ್ಲ.

**ತಾತ್ಪರ್ಯ:**- ಜಡವಾದ ಪ್ರಾಣಾದಿಗಳನ್ನು ಅಂತಃಕರಣವು ಅರಿಯು ತ್ತದೆ. ಆದು ಆತ್ಮನಾಗಬಹುದು. ಅಂದರೆ, ಅಂತಃಕರಣವೂ ಆತ್ಮವಲ್ಲ. ಯಾಕಂದರೆ; ಅದು ಮನ, ಬುದ್ಧಿ, ಚಿತ್ತು, ಅಹಂಕಾರಗಳೆಂಬ ನಾಲ್ಕುವಿಧ ವೃತ್ತಿ ಗಳಿಂದ ತಿಳಿಸಿಕೊಳ್ಳುತ್ತದೆ. ಘಟದಂತೆ ದೃಶ್ಯವಾಗಿ ಚಿದ್ರೂಪಾತ್ಮನಿಂದ ತಿಳಿಸಿ ಕೊಳ್ಳುತ್ತಿರುವದರಿಂದ ಆತ್ಮನಾಗದು.

**ಬಳಿಕ,** ದೇಹ, ಇಂದ್ರಿಯ, ಪ್ರಾಣ, ಅಂತಃಕರಣಗಳು ಇವು ಯಾಕೆ ಆತ್ಮರೂಪಗಳಲ್ಲ? ಎಂದು ಶಂಕೆಯನ್ನು ಮಾಡಿದರೆ, ಶ್ರುತಿಯು ಹೀಗೆ ಹೇಳುತ್ತದೆ. ಏನಂದರೆ:— ಯಾವದು ಇದು ಎಂದು ವೇದ್ಯವಾಗುವದೋ, ಅದು ಆತ್ಮನಲ್ಲ. ಎಂದು ನಿರಾಕರಿಸುತ್ತದೆ. ಅದರಿಂದ ಇವು ಆತ್ಮಗಳಲ್ಲ. ಎಂದು ಶ್ರುತಿಪ್ರಮಾಣವನ್ನು ಕೊಟ್ಟು ಹೇಳುತ್ತಾರೆ.

**ನೇತಿ ನೇತೀತಿ ನೇತೀತಿ ನಿಗಮಂಗಳಿರೆ |**
**ಭೂತ ದೇಹೇಂದ್ರಿಯ ಪ್ರಕರವರಿವೆಂಬ |**
**ಮಾತು ತಾನೆತ್ತಣದು ಪುತ್ರ ॥೧೫॥**

**ಟೀಕಾ:-** ಹೇ ಪುತ್ರ=ಮಗುವೇ!, ಭೂತ=ಪಂಚಭೂತಗಳು, ನ ಇತಿ= ಇವು ಆತ್ಮವಲ್ಲ, ದೇಹ=ದೇಹವು, ನೇತೀತಿ=ಇದು ಆತ್ಮವಲ್ಲ, ಇಂದ್ರಿಯ ಪ್ರಕರವು=ಇಂದ್ರಿಯಗಳ ಸಮೂಹವು, ನೇತೀತಿ=ಇವು ಆತ್ಮರೂಪಗಳಲ್ಲೆಂದು, ನಿಗಮಂಗಳಿರೆ=ಶ್ರುತಿಗಳಿರಲಾಗಿ, ಅರಿವೆಂಬ ಮಾತು=ಆತ್ಮನೆನ್ನುವ ಮಾತು, ತಾನೆತ್ತಣದು=ಅದೆಲ್ಲಿಯದು.

**ತಾತ್ಪರ್ಯ::-** ಶ್ರುತಿಯು— "ಯಾವದು ಇದು ಎಂದು ಗೋಚರವಾಗುವದೋ, ಅದು ಆತ್ಮವಲ್ಲ. ಎಂದು ಹೇಳುತ್ತದೆ. ಆದ್ದರಿಂದ ದೇಹೇಂದ್ರಿಯಾದಿ ಚಿತ್ತ, ಮನ, ಬುದ್ಧಿ, ಅಹಂಕಾರಗಳು ಆತ್ಮಸ್ವರೂಪಗಳು ಆಗಲಾರವು. ಇವು ತನಗೆ ವೇದ್ಯಗಳಾಗಿರುತ್ತವೆ.

## ದೇಹಾದಿಗಳಿಗನಾತ್ಮತ್ವ ನಿರೂಪಣೆ ಸೂತ್ರ ೩೯ಕ್ಕೆ ತ್ರಿಪದಿ ೩೦.

**ಬಳಿಕ,** ಹಿಂದಿನ ಸೂತ್ರದಲ್ಲಿ ಅನ್ನಮಯಕೋಶ ಮತ್ತು ಪ್ರಾಣಮಯಕೋಶಗಳ ವಿಚಾರವನ್ನು ಹೇಳಿ; ಮನೋಮಯ ಮತ್ತು ವಿಜ್ಞಾನಮಯ ಕೋಶಗಳ ಸ್ವರೂಪವನ್ನು ಸಂಕ್ಷೇಪವಾಗಿ ತಿಳಿಸುತ್ತಾ, ಈ ಸೂತ್ರದಲ್ಲಿ ವಿಶೇಷವಾಗಿ ಆ ಮನ ಬುದ್ಧ್ಯಾದಿ ವೃತ್ತಿಗಳನ್ನು ವರ್ಣಿಸುತ್ತಾರೆ.

**ಸೂತ್ರ ॥ ವೃತ್ತಿ ನಾಲ್ಕೆನಿಸುವಂತಃಕರಣ ವಾತ್ಮನಾ |**
**ಗುತ್ತಿರದು ವೇದ್ಯವಹುದಾಗಿ ತಾನು ॥**

**ಟೀಕಾ:-** ವೃತ್ತಿ ನಾಲ್ಕೆನಿಸುವ=ನಾಲ್ಕು ಪ್ರಕಾರದ ವೃತ್ತಿಗಳುಳ್ಳಂಥಾ, ಅಂತಃಕರಣವು=ಒಳಗಿನ ಸಾಧನವು, ತಾನು ವೇದ್ಯವಹುದಾಗಿ=ತಾನು ದೃಶ್ಯವಾಗಿ ತೋರುವದರಿಂದ, ಆತ್ಮನಾಗುತ್ತಿರದು=ಆತ್ಮ ಸ್ವರೂಪವಾಗುವದಿಲ್ಲ.

**ಟೀಕಾ:-** ಎನೆ=ಶಿಷ್ಯನು ಹೀಗೆ ಕೇಳಲು; ಕೇಳು=ಗುರುಗಳು ಶಿಷ್ಯನಿಗೆ ಕೇಳು ಎಂದರು, ನಾಲ್ಕೆನಿಸಿಕೊಂಡ=ನಾಲ್ಕು ಪ್ರಕಾರಗಳೆಂದು ಹೇಳಿಸಿಕೊಂಡ. ವೃತ್ತಿ=ವೃತ್ತಿಯು, ಚಿತ್ತ, ಮನ, ಹಂತೆ ಬುದ್ಧಿಯೆಂಬ=ಚಿತ್ತ, ಮನ, ಅಹಂಕಾರ, ಬುದ್ಧಿಗಳೆಂಬ, ಪೆಸರಿಂದೆ. ಇರ್ಕು=ಇರುವದು, ಬೋಧ್ಯ=ತಿಳಿಯು ಲಿಕ್ಕೆ ಯೋಗ್ಯನಾದ ಶಿಷ್ಯನೇ, ಅದಂ=ಆ ವಿಷಯವನ್ನು, ನಿನಗೆ=ನಿನಗೋಸ್ಕರ, ತಿಳಪುವೆನು=ತಿಳಿಸುತ್ತೇನೆ.

**ತಾತ್ಪರ್ಯ:-** ಹೇ ಶಿಷ್ಯನೇ! ಕೇಳು. ಒಂದು ಅಂತಃಕರಣವೇ ವ್ಯವಹಾರಭೇದದಿಂದ ನಾಲ್ಕು ಪ್ರಕಾರದ ವೃತ್ತಿಗಳುಳ್ಳದ್ದಾಗುತ್ತದೆ. ಹೇಗಂದರೆ, ವೃತ್ತಿಯು ಯಾವದೊಂದು ವಿಷಯಕ್ಕೆ ಸಂಬಂಧವಾಗಿ ಸಾಮಾನ್ಯ ಜ್ಞಾನವಾಗಲು, ಚಿತ್ತೆಂದು ಹೇಳಿಸಿಕೊಳ್ಳುವದು. ಸಂಶಯವುಳ್ಳದ್ದಾಗಲು ಮನವೆನಿಸುವದು. ಅಭಿಮಾನಪಡಲು ಅಹಂಕಾರವೆನಿಸುವದು. ನಿಶ್ಚಯಮಾಡಲು ಬುದ್ಧಿಯೆನಿಸುವದು. ಈ ರೀತಿ ಭೇದವಾಗಿ ಅಂತಃಕರಣವು ನಾಲ್ಕು ವೃತ್ತಿಗಳುಳ್ಳದ್ದು. ಎಂದು ಹೇಳಿಸಿಕೊಳ್ಳುತ್ತದೆ.

**ಬಳಿಕ, ಚಿತ್ತ ಎಂಬ ವೃತ್ತಿಯ ಸ್ವರೂಪವನ್ನು ಹೇಳುತ್ತಾರೆ.**

**ಬೀದಿಯ ಗಸದಂತೆ ಘಟಾದಿ ವಿಷಯದ ನಿರುಗೆ।**
**ವೇದಿಸದೆ ತೋರ್ಪ ನಿರ್ವಿಕಲ್ಪಜ್ಞಾನ।**
**ವಾದುದೇ ಚಿತ್ತವೆನಿಸುವದು ॥೪॥**

**ಟೀಕಾ:-**ಬೀದಿಯಗಸದಂತೆ=ದಾರಿಯಮೇಲೆ ಬಿದ್ದ ಕಸದ ಹಾಗೆ, ಘಟಾದಿ ವಿಷಯದನಿರುಗೆ=ಘಟಾದಿ ವಿಷಯಗಳ ಸಮೂಹವು, ವೇದಿಸದೆ=ಇದೇಯೆಂದು ಹೊಳೆಯದೆ, ತೋರ್ಪ = ತೋರುವ, ನಿರ್ವಿಕಲ್ಪಜ್ಞಾನವಾದುದೇ = ನಿರ್ವಿಕಲ್ಪ ಅಂದರೆ ಸಾಮಾನ್ಯ ಜ್ಞಾನವಾದದ್ದೇ, ಚಿತ್ತೆನಿಸುವದು = ಚಿತ್ತೆಂದು ಹೇಳಿಸಿಕೊಳ್ಳುವದು.

**ತಾತ್ಪರ್ಯ:-** ನಾವು ದಾರಿಹಿಡಿದು ಹೋಗುವಾಗ್ಯೆ ದಾರಿಯಲ್ಲಿ ಅನೇಕ ತರದ ಕಸಕಡ್ಡಿಗಳು ಬಿದ್ದಿರುತ್ತವೆ. ಕಸಬಿದ್ದದೆಯೆಂದು ಆ ಕಸದ ಸಾಮಾನ್ಯ ಜ್ಞಾನವಾಗುತ್ತದೆ. ಇಂಥಾ ಕಸವೇ ಇದು ಎಂಬ ವಿಶೇಷ ಜ್ಞಾನವಾಗುವದಿಲ್ಲ. ಈ ದೃಷ್ಟಾಂತದಂತೆ; ಘಟಾದಿ ವಿಷಯಗಳು ಇವೆಯೆಂಬ ಸಾಮಾನ್ಯ ಇದಂರೂಪ ಜ್ಞಾನವಾಗುತ್ತದೆ. ಇಂಥಾ ವಿಷಯವೇ ಇದುಯೆಂಬ ವಿಶೇಷ ಜ್ಞಾನೋದಯವಾಗುವದಿಲ್ಲ. ಈ ಸಾಮಾನ್ಯ ಜ್ಞಾನಾಕಾರ ವೃತ್ತಿಗೆ ಚಿತ್ತ ಎಂದು ಕರೆಯುತ್ತಾರೆ.

**ಬಳಿಕ, ಸಂಶಯಯುಕ್ತ ಮನಸ್ಸಿನ ಸ್ವರೂಪವನ್ನು ಹೇಳುತ್ತಾರೆ.**

**ಕೊರಡಿದೋ ನರನೋ.ಗೋಚರಿಸದೆನಗೆಂದು ನಿ ।**
**ರ್ಧರಿಸದಾರೈವ ಚೈತನ್ಯವೇ ಮನಂ ।**
**ತರುಣ ನೀನರಿವುದಿದನಿಂತು ॥೫॥**

**ಟೀಕಾ:** ಕೊರಡಿದೋ=ಮೋಟಮರವೋ, ನರನೋ=ಮನುಷ್ಯನೋ, ಎನಗೆ ಗೋಚರಿಸದೆಂದು=ನನಗೆ ತಿಳಿಯದೆಂದು, ನಿರ್ಧರಿಸದೆ=ನಿಶ್ಚಯ ಮಾಡದೆ, ಆರೈವ=ಹುಡುಕುವ, ಚೈತನ್ಯವೇ=ವೃತ್ತಿಯೇ, ಮನಂ=ಮನವೆನಿಸುವದೆಂದು, ತರುಣ=ಪ್ರೌಢನೇ, ಇದನು=ಈ ಮನಸ್ಸನ್ನು, ಇಂತು=ಈ ಪ್ರಕಾರ, ಅರಿವುದು= ತಿಳಿಯುವದು.

**ತಾತ್ಪರ್ಯ:-** ಸಾಯಂಕಾಲ ಸಮಯದಲ್ಲಿ ಮಾರ್ಗ ಹಿಡಿದು ಹೋಗುವವನಿಗೆ ಮೋಟಮರವು ಕಾಣಿಸುತ್ತದೆ. ನಸುಗತ್ತಲೆಯಿದ್ದದರಿಂದ ಅವನಿಗೆ ಆ ವಸ್ತುವಿನ ಜ್ಞಾನವಾಗದೆ, ಇದು ಮೋಟಮರವಿರಬಹುದೋ? ಅಥವಾ ಕಳ್ಳನಿರಬಹುದೋ? ಎಂಬ ಸಂಶಯವು ಉತ್ಪನ್ನವಾಗುತ್ತದೆ. ದಾರಿಗೆ ಅಡ್ಡ ಬಂದ ಟೊಂಗೆಗಳನ್ನು ಸವರಿದ್ದರಿಂದ, ಕೈಗಳನ್ನು ಮೇಲಕ್ಕೆ ಎತ್ತಿಕೊಂಡು ನಿಂತಂತೆ ತೋರುತ್ತಿತ್ತು. ಈತನು ಕಳ್ಳನಿರಬಹುದು; ನಾನು ಸಮೀಪಕ್ಕೆ ಹೋದೊಡನೆ ನನ್ನನ್ನು ಹಿಡಿಯಬೇಕೆಂದು, ಈತನು ಕೈಗಳನ್ನು ಮೇಲಕ್ಕೆತ್ತಿಕೊಂಡು ನಿಂತಿರುವನು. ಅದರಿಂದ ಮನುಷ್ಯನಿರಬಹುದೋ? ಇಲ್ಲವೆ, ಹೀಗೆ ನಿಂತುಕೊಂಡು ಬಹಳ ಹೊತ್ತಾಯಿತು. ಮನುಷ್ಯನಿದ್ದರೆ ಇಷ್ಟು ಕಾಲ ಇರಲಾರನು. ಬಹಳ ಕಾಲ ನಿಂತಿರುವದರಿಂದ, ಬಹುಶಃ ಇದು ಮೋಟಮರವಿರಬಹುದೋ? ಎಂಬ ಸಂಶಯವು ತೋರುತ್ತದೆ. ಈ ಸಂಶಯಾಕಾರ ವೃತ್ತಿಗೆ ಮನಸ್ಸು ಎಂದು ಕರೆಯುತ್ತಾರೆ. ಇದು ಎರಡನೆಯ ವೃತ್ತಿಯಾಗಿದೆ.

**ಬಳಿಕ,** ಅಹಂಕಾರ ವೃತ್ತಿಯ ಸ್ವರೂಪವನ್ನು ಹೇಳುತ್ತಾರೆ.

**ಇದನರಿದವನೇ ನಾನಿದೆನಗೆನ್ನದೆಂಬ ಮೋ ।**
**ಹದೊಳಿರ್ಪ ಮತಿಯೆ ಹಮ್ಮೆನಿಸುತಿಹುದು ನೀ ।**
**ನಿದನಿಂತು ತಿಳಿವುದೆಲೆ ವತ್ಸ ॥೬॥**

**ಟೀಕಾ:-** ಇದನರಿದವನೇ ನಾನು=ಇದನ್ನು ತಿಳಿದವನು ನಾನು, ಇದು ಎನಗೆ ಎನ್ನದು = ಈ ವಸ್ತು ನನಗೆ ಬೇಕು. ನನ್ನದು ಆಗಿದೆ, ಎಂಬ= ಹೀಗೆಂಬುವ, ಮೋಹದೊಳಿರ್ಪ=ಅಭಿಮಾನದಿಂದ ಕೂಡಿದ, ಮತಿಯೆ=ವೃತ್ತಿಯೆ,

ಹಮ್ಮೆನಿಸುತಿಹುದು = ಅಹಂಕಾರವೆನಿಸುವದು, ಎಲೆವತ್ಸ = ಹೇ ಶಿಷ್ಯನೇ! ಇದನು ಈ ಅಹಂವೃತ್ತಿಯನ್ನು, ಇಂತು=ಈ ಪ್ರಕಾರ, ತಿಳಿವುದು=ತಿಳಿಯುವದು.

ತಾತ್ಪರ್ಯ:- ಇದು ಯಾರಿಗೂ ತಿಳಿಯಲಿಲ್ಲ. ಇದನ್ನು ನಾನ್ನು ಅರಿತೆನು. ಇದು ನನಗೆ ಬೇಕು, ನನ್ನದು ಅದೆ. ಎಂದು ವ್ಯವಹರಿಸುವದರಿಂದ ಅಹಂಕಾರ ಮಮಕಾರಗಳು ಪ್ರತೀತಿಗಳಾಗುತ್ತವೆ. ಇಂಥಾ ಅಭಿಮಾನ ರೂಪ ವೃತ್ತಿಯಿಂದ ಕೂಡಿರುವಕಾರಣ ಇದಕ್ಕೆ ಅಹಂಕಾರವೆಂಬ ಹೆಸರು ಬಂದಿರುತ್ತದೆಂದು ತಿಳಿ.

ಬಳಿಕ, ನಿಶ್ಚಯರೂಪ ಬುದ್ಧಿಯ ಸ್ವರೂಪವನ್ನು ಹೇಳುತ್ತಾರೆ.

ಇದು ಚೋರನಲ್ಲ ವಿಂತಿದು ಕೊರಡು ಸಂದೇಹ ।
ವಿದಕೆ ಬೇಡೆಂಬರಿವೆ ಬುದ್ಧಿಯಹುದು ನೋ ।
ಡಿದರಲ್ಲಿ ವೃತ್ತಿಗಳನಿಂತು ॥೭॥

ಟೀಕಾ:- ಇದು ಚೋರನಲ್ಲ=ಇದು ಕಳ್ಳನಲ್ಲ, ಇಂತಿದು=ಹೀಗಿರುವದು. ಕೊರಡು=ಮೋಟಮರವು, ಸಂದೇಹವಿದಕೆಬೇಡ=ಇದಕ್ಕೆಸಂಶಯವುಬೇಡ, ಎಂಬ ಅರಿವೆ=ಹೀಗೆಂಬಜ್ಞಾನವೇ,ಬುದ್ಧಿಯಹುದು=ಬುದ್ಧಿಯೆಂದುಹೇಳಿಸಿಕೊಳ್ಳುವದು. ಇದರಲ್ಲಿ=ಅಂತಃಕರಣದಲ್ಲಿ, ಇಂತು=ಈ ಪ್ರಕಾರ, ವೃತ್ತಿಗಳನು=ವೃತ್ತಿಗಳನ್ನು, ನೋಡು=ಅರಿ.

ತಾತ್ಪರ್ಯ:- ಇದು ಕಳ್ಳನು ಆಗಿದ್ದರೆ, ಅತ್ತಿತ್ತ ಚಲಿಸುತ್ತಿತ್ತು. ಚಲಿಸುವದಿಲ್ಲವಾದ್ದರಿಂದ ಕಳ್ಳನಲ್ಲ. ಕಿಂತು ಕೊರಡೇ ಆಗಿರುತ್ತದೆ. ಈ ವಿಷಯದಲ್ಲಿ ಸಂಶಯವೇ ಬೇಡ..ಎಂಬ ನಿಶ್ಚಯಾತ್ಮಕ ಜ್ಞಾನಾಕಾರ ವೃತ್ತಿಯೇ ಬುದ್ಧಿಯೆನಿಸುವದು. ಈ ರೀತಿ ಒಂದು ಅತಃಕರಣವು ವೃತ್ತಿಭೇದದಿಂದ ನಾಲ್ಕು ರೂಪವಾಗಿ ತೋರುತ್ತಿರುತ್ತದೆಂದು ತಿಳಿ.

ಬಳಿಕ, ಈ ನಾಲ್ಕು ವೃತ್ತಿಗಳು ತನಗೆ ಹೇಗೆ ವಿಷಯಗಳಾಗುತ್ತವೆಂಬುದನ್ನು ತಿಳಿಸುತ್ತಾರೆ.

ಎನ್ನದೀ ಚಿತ್ತು ತಾನೆನ್ನದೀ ಮನ ಹಮ್ಮಿ ।
ದೆನ್ನದೀ ಬುದ್ಧಿ ಯೆಂಬನುಭವದ ತೋರ್ಕೆ ।
ಯಿಂ ನೋಡೆ ವೇದ್ಯವಿವು ತಾವು ॥೮॥

ಟೀಕಾ:- ಈ ಚಿತ್ತು=ಈ ಚಿತ್ತು, ಎನ್ನದು=ನನ್ನದು, ಈ ಮನ ತಾನೆ ಎನ್ನದು=ಈ ಮನಸ್ಸಾದರೂ ನನ್ನದು, ಹಮ್ಮಿದು= ಈ ಅಹಂಕಾರವು, ಈ ಬುದ್ಧಿಯು=ಈ ಮತಿಯು, ಎನ್ನದು=ನನ್ನದು, ಎಂಬ=ಹೀಗೆಂಬ, ಅನುಭವದ ತೋರ್ಕೆಯಿಂ = ಜ್ಞಾನಕ್ಕೆ ವಿಷಯುಗಳಾಗುವದರಿಂದ, ನೋಡೆ = ವಿಚಾರ ಮಾಡಲು, ವೇದ್ಯವಿವು ತಾವು=ಇವು ತಿಳಿಸಿಕೊಳ್ಳುತ್ತಿರುವವು.

ತಾತ್ಪರ್ಯ:- ಆ ಮಾತು ನನ್ನ ಚಿತ್ತಕ್ಕೆ ಬರಲಿಲ್ಲ. ನನ್ನ ಮನಸ್ಸು ಚಂಚಲವಾಗಿದೆ. ನನ್ನ ಮನಸ್ಸಿಗೆ ಸಂತೋಷವಿಲ್ಲ. ನನ್ನ ಅಹಂಕಾರದ ಪರಿಣಾಮವೇ ನನಗೆ ದುಃಖಕ್ಕೆ ಕಾರಣವಾಯಿತು. ನನ್ನ ಬುದ್ಧಿಯು ಹೋಯಿತು. ಹೀಗೆ ಅನ್ನುವದರಿಂದ ಉಕ್ತ ನಾಲ್ಕು ವೃತ್ತಿಗಳು ತನಗೆ ಗೋಚರಗಳಾಗಿ ತೋರುತ್ತವೆ. ಆದರಿಂದ ಅವು ಆತ್ಮರೂಪಗಳಲ್ಲ.

ಬಳಿಕ, ಈ ನಾಲ್ಕು ವೃತ್ತಿಗಳಿಂದ ಯುಕ್ತವಾದ ಅಂತಃಕರಣದ ಸ್ವರೂಪವನ್ನು ಪ್ರತಿಪಾದಿಸುತ್ತಾರೆ.

**ಇಂತು ವೃತ್ತಿಗಳುಳ್ಳದಂತಃಕರಣವಿದಾ ।**
**ಹಂತೆಯೊಂದಂಶವಹುದು ಜಾಗರಣ ಕನೆ ।**
**ಸಂ ತಾನೆ ರಚಿಸು ತರಿಯುವದು ॥೯॥**

ಟೀಕಾ: ಇಂತು=ಈ ಪ್ರಕಾರ, ವೃತ್ತಿಗಳುಳ್ಳದು=ವೃತ್ತಿಗಳಿಂದ ಕೂಡಿಕೊಂಡಿರುವದು ಅಂತಃಕರಣವು=ಅಂತಃಕರಣವಾಗಿದೆ, ಇದು ಆ ಹಂತೆಯ ಒಂದಂಶವಹುದು=ಇದು ಮೂಲಾಹಂಕಾರದ ಒಂದು ಭಾಗವಾಗಿರುವದು, ಜಾಗರಣ ಕನಸಂ=ಜಾಗ್ರತ್ಸ್ವಪ್ನಗಳನ್ನು, ತಾನೆ ರಚಿಸುತ=ತಾನೆಮಾಡುತ್ತ, ಅರಿಯುವದು=ತಿಳಿಯುವದು ಆಗಿದೆ.

ತಾತ್ಪರ್ಯ:- ಉಕ್ತ ನಾಲ್ಕು ಪ್ರಕಾರದ ವೃತ್ತಿಗಳ ವ್ಯವಹಾರಗಳಿಂದ ಕೂಡಿರುವದು ಅಂತಃಕರಣವಾಗಿದೆ. ಇದು ಮೂಲಾಹಂಕಾರದ ಒಂದು ಭಾಗವಾಗಿದೆ. ಈ ಅಂತಃಕರಣವು ಜಾಗ್ರತ್ಸ್ವಪ್ನಗಳನ್ನು ರಚನೆಮಾಡುತ್ತದೆ. ಅಂದರೆ, ಈ ಅಂತಃಕರಣವು ಇಂದ್ರಿಯಗಳಿಂದ ಹೊರಗೆ ಹೋಗಿ ವಿಷಯಗಳಿಗೆ ಸಂಬಂಧವಾದರೆ, ಜಾಗ್ರದವಸ್ಥೆಯೆನಿಸುವದು. ಹೊರಗೆ ಹೋಗದೆ ಒಳಗೆ ವಿಷಯಾಕಾರ ಭಾವನೆಯುಳ್ಳದ್ದಾಗಲು ಸ್ವಪ್ನವೆನಿಸುವದು. ಈ ರೀತಿ ಜಾಗ್ರತ್ಸ್ವಪ್ನಗಳನ್ನು ರಚಿಸುತ್ತಾ ತತ್ತತ್ ವಿಷಯಗಳನ್ನು ಅರಿಯುವದೂ ಆಗಿದೆ. ಅಂದರೆ ಸ್ವತಃ ತಾನು ಜಡವಾದರೂ ಅಭಾಸ ಚೈತನ್ಯದಿಂದೊಡಗೂಡಿದ ಕಾರಣ ವಿಷಯಗಳನ್ನು ತಿಳಿಯುತ್ತಿರುತ್ತದೆಂಬ ಭಾವವು.

ಬಳಿಕ, ಆ ಅಂತಃಕರಣವು ಸತ್ವಾದಿ ಮೂರು ಗುಣಗಳಿಂದ ಕೂಡಿಕೊಂಡು, ಸಾತ್ವಿಕ, ರಾಜಸ, ತಾಮಸವೆಂದು ಮೂರು ವಿಧವಾಗಿ ತೋರುತ್ತಿರುತ್ತದೆಂದು ಹೇಳುತ್ತಾರೆ.

**ಅಣಿಯರದೆ ಸತ್ವಾದಿ ಗುಣದೇಳ್ಗೆಯಿಂ ವಿಷಯ ।**
**ಗಣಮಂ ಬಿಡುತ್ತೆ ಪಿಡಿಯುತ್ತೆ ತೊಳಲುತ್ತೆ ।**
**ತಣಿಯದದು ಬಾಧೆ ಗೊಳುತಿರ್ಕು ॥೧೦॥**

**ಟೀಕಾ:-** ಅಣಿಯರದೆ=ಕ್ರಮವಾಗಿ, ಸತ್ವಾದಿಗುಣದೇಳ್ಗೆಯಿಂ=ಸತ್ವಾದಿ ಮೂರು ಗುಣಗಳ ಹೆಚ್ಚು ಕಡಿಮೆಯಿಂದ, ವಿಷಯಗಣಮಂ=ವಿಷಯ ಸಮೂಹವನ್ನು, ಬಿಡುತ್ತೆ=ತ್ಯಾಗಮಾಡುತ್ತಾ, ಪಿಡಿಯುತ್ತೆ=ಹಿಡಿಯುತ್ತಾ, ತೊಳಲುತ್ತೆ=ತಿರುಗುತ್ತಾ, ಅದು=ಆ ಅಂತಃಕರಣವು, ತಣಿಯದು=ತೃಪ್ತಿಯನ್ನು ಹೊಂದದು, ಬಾಧೆಗೊಳುತಿರ್ಕು=ಕಷ್ಟಪಡುತ್ತಿರುವದು.

**ತಾತ್ಪರ್ಯ:-** ಆ ಅಂತಃಕರಣವು ತ್ರಿಗುಣಾತ್ಮಕವಾಗಿದೆ. ಅದು ನೆಗ್ಗಲ ಮುಳ್ಳಿನಂತಿರುತ್ತದೆ. ನೆಗ್ಗಲ ಮುಳ್ಳು ಯಾವ ಭಾಗವಾಗಿ ಬಿದ್ದರೂ, ಎರಡು ಮುಳ್ಳುಗಳು ಕೆಳಗಾಗಿ ಒಂದು ಮೇಲಕ್ಕೆ ಎದ್ದಂತೆ, ಅಂತಃಕರಣದಲ್ಲಿ ಎರಡು ಗುಣಗಳು ಬಿದ್ದು, ಒಂದು ಗುಣವು ಮೇಲಕ್ಕೆ ಎದ್ದು ಕಾಣುತ್ತದೆ. ಈ ರೀತಿಯಾಗಿರಲಾಗಿ ಯಾವಾಗ್ಯೆ ಸತ್ವಗುಣದಿಂದ ವೃತ್ತಿಯು ಕೂಡಿತೋ, ಆಗ್ಯೆ ಆ ಸಾತ್ವಿಕ ಅಂತಃಕರಣವು ವಿಷಯಗಳನ್ನು ದುಃಖವೆಂದು ಬಿಡುತ್ತದೆ. ಅಂದರೆ, ವೈರಾಗ್ಯದಿಂದಿರುತ್ತದೆ. ರಜೋಗುಣದಿಂದ ಕೂಡಿದ ಕಾಲಕ್ಕೆ ವಿಷಯಗಳು ಸುಖವೆಂದು ವಿಷಯಗಳನ್ನು ಹಿಡಿಯುತ್ತದೆ. ತಮೋಗುಣರೂಪ ಮೋಹದಿಂದ ಕೂಡಿದ ಕಾಲಕ್ಕೆ, ಆ ವಿಷಯಗಳಲ್ಲಿಯೇ ತಿರಗುತ್ತಿರುತ್ತದೆ. ಹೀಗೆ ವ್ಯವಹಾರ ಮಾಡಿದರೂ, ಅದಕ್ಕೆ ಸಂತೋಷವಿಲ್ಲ. ಕಿಂತು, ಅನೇಕ ವಿಧ ಚಿಂತೆಗಳಿಂದ ಯಾವಾಗಲೂ ದುಃಖಪಡುತ್ತಿರುತ್ತದೆ.

ಬಳಿಕ, ಉಕ್ತರೀತ್ಯಾ ಸಾತ್ವಿಕಾದಿ ಭೇದದಿಂದ ತೋರುವದರಿಂದ ಅಂತಃಕರಣವು ವೇದ್ಯವಾಗಿದೆ. ಅಂದರೆ ತಿಳಿಸಿಕೊಳ್ಳುವದಾಗಿದೆ. ಆದರಿಂದ ಆತ್ಮಸ್ವರೂಪವಲ್ಲೆಂದು ನಿರೂಪಣ ಮಾಡುತ್ತಾರೆ.

**ಇಂತೀಪರಿಯೊಳವಸ್ಥಾಂತರಂ ಗೊಳುತಿರ್ಪು ।**
**ದಂತಃಕರಣವೆ ಯದುಕಾರಣಂ ವೇದ್ಯ ।**
**ವಾಂತುದಂತಾಗಿ ನಿಜವಲ್ಲ ॥೧೧॥**

ಟೀಕಾ:- ಇಂತು=ಹೀಗೆ, ಈ ಪರಿಯೊಳು=ಈ ರೀತಿಯಲ್ಲಿ,ಅವಸ್ಥಾಂತರಂ=ರೂಪಾಂತರವನ್ನು, ಗೊಳುತಿರ್ಪುದು=ಹೊಂದುತಿರ್ಪುದು,ಅಂತಃಕರಣವು=ಅಂತಃ ಕರಣವೆಂದೆನಿಸುವದು, ಅದು ಕಾರಣಂ=ಆದ್ದರಿಂದ, ನಿಜವಲ್ಲ=ನಿಜವಾದ ಆತ್ಮ ಸ್ವರೂಪವಲ್ಲ.

ತಾತ್ಪರ್ಯ:- ಸಾತ್ವಿಕಾದಿ ಗುಣತ್ರಯಗಳಿಂದ ರೂಪಾಂತರ ಹೊಂದು ವದರಿಂದ, ಸುಖದುಃಖರೂಪಾಗುವದರಿಂದ, ಮಮಕಾರಕ್ಕೆ ವಿಷಯವಾದ್ದರಿಂದ, ಭಾವಾಭಾವರೂಪದಿಂದ, ದೃಶ್ಯವಾಗಿದೆ. ಈ ವಿಧವಾಗಿ ವೇದ್ಯವಾಗುವದರಿಂದ ಅಂತಃಕರಣವು ನಿಜವಾದ ಆತ್ಮವಲ್ಲ. ಎಂದು ತಿಳಿ.

## ಅಂತಃಕರಣಕ್ಕನಾತ್ಮತ್ವ ನಿರೂಪಣೆ ಸೂತ್ರ ೪ ಕ್ಕೆ ತ್ರಿವಿದಿ ೪೧

ಬಳಿಕ, ಪೂರ್ವ ಸೂತ್ರಗಳಲ್ಲಿ ಸರ್ವಾತ್ಮಕೋಪದೇಶವನ್ನು ಯಥಾರ್ಥ ವಾಗಿ ತಿಳಿಸಿ, ಅನಂತರ ನೇತ್ಯಾತ್ಮಕ ಬೋಧವನ್ನು ಹೇಳುವದಕ್ಕೆ ಆರಂಭ ಮಾಡಿ ದರು. ಅದರಲ್ಲಿ ಅನ್ನಮಯಕೋಶ ಪ್ರಾಣಮಯಕೋಶಗಳು ಅನಾತ್ಮರೂಪ ಗಳೆಂಬುದನ್ನು ಚನ್ನಾಗಿ ತಿಳಿಸಿ, ಮನೋಮಯಕೋಶವೂ ಆತ್ಮಸ್ವರೂಪವಲ್ಲ ಎಂಬುದನ್ನು ನಿರೂಪಣ ಮಾಡಿದರು. ಈಗ ಈ ಸೂತ್ರದಿಂದ ವಿಜ್ಞಾನಮಯ ಕೋಶವು ಆತ್ಮಸ್ವರೂಪವಲ್ಲವೆಂಬುದನ್ನು ವಿಸ್ತಾರಪೂರ್ವಕ ನಿರೂಪಣಮಾಡುತ್ತ ಲಿದ್ದಾರೆ. ಹೇಗಂದರೆ, ಅಜ್ಞಾನದಿಂದ ವಿಪರೀತಜ್ಞಾನದ ಮಸುಕು ಆಗಲು, ಮಹತ್ತು ಆಯಿತು. ಅದರಲ್ಲಿ ಸವಿಕಲ್ಪಕ ಜ್ಞಾನೋದಯವಾಗಲು **ಹಮ್ಮು** ಯೆನಿಸಿತು. ಈ ಅಹಂಕಾರವು ಚಿಚ್ಛಾಯೆಯಿಂದೊಡಗೂಡಿ ಜಾಗ್ರತಾದಿಗಳನ್ನರಿ ಯುತ್ತದೆ. ಇದೇ **ವಿಜ್ಞಾನಮಯಕೋಶವೆನಿಸುತ್ತದೆ.** ಇದು ನವಗುಣ ಗಳಿಂದಲೂ ಅನೇಕ ವಿಶೇಷಣಗಳಿಂದಲೂ ವೇದ್ಯವಾಗುತ್ತಿರುತ್ತದೆ. ತಪ್ತಜಲ ದಂತೆ **ಜಡಾಜಡಸ್ವರೂಪವುಳ್ಳದ್ದಾಗಿ** ಜಾಗ್ರತ್ಸ್ವಪ್ನಗಳಲ್ಲಿ ಭಾವವಾಗಿದೆ. ಸುಪ್ತಿಯಲ್ಲಿ ಅಡಿಗಿ **ಅಭಾವವಾಗುತ್ತದೆ.** ಇದು ನೀನಲ್ಲ. ಎಂದು ಹೇಳುತ್ತಾರೆ.

ಸೂತ್ರ|| **ಅಹಮಾತ್ಮನಲ್ಲ ಬುಧ್ಯಾದಿ ಗುಣಮುಳ್ಳದಾ|**
**ಗಿಹುದಾದ ಕಥದಿಂದೆ ಜಾಡ್ಯವೈಸೆ||**

ಟೀಕಾ:- ಅಹಂ=ಅಹಂಕಾರವು, ಆತ್ಮನಲ್ಲ=ಆತ್ಮ ಸ್ವರೂಪವಲ್ಲ, ಬುದ್ಧ್ಯಾದಿ ಗುಣ ಮುಳ್ಳದಾಗಿಹುದಾದ ಕಥದಿಂದೆ=ಬುದ್ಧಿ, ಸುಖ, ದುಃಖಾದಿ ಒಂಭತ್ತು ಗುಣಗಳಿಂದ ಕೂಡಿರುವಕಾರಣ, ಜಾಡ್ಯವೆಸೆ=ಜ್ಞಾನ ಶೂನ್ಯವಾಗಿದೆ.

**ತಾತ್ಪರ್ಯ**:- ಅಹಂಕಾರವು ಚಿದ್ರೂಪಾತ್ಮವಾಗುವದಿಲ್ಲ. (ಪ್ರತಿಜ್ಞಾ) ಬುದ್ಧ್ಯಾದಿ ಒಂಭತ್ತು ಗುಣಗಳಿಂದ ಕೂಡಿರುವಕಾರಣ ಜಡವಾಗಿದೆ. (ಹೇತು) ಘಟದಂತೆಂಬುದು ದೃಷ್ಟಾಂತವಾಗಿರುತ್ತದೆ. ನೀಲೋಘಟಃ ಎಂಬಲ್ಲಿ ನೀಲ ಗುಣದಿಂದ ಕೂಡಿದ ಗುಣಿಯಾದ ಘಟವು ಪ್ರತ್ಯಕ್ಷವಾಗಿ ಹೇಗೆ ಜಡವಾಗಿರುವದೋ, ಹಾಗೇ ಈ ಅಹಂಕಾರವಾದರೂ ಬುದ್ಧ್ಯಾದಿ ಒಂಭತ್ತು ಗುಣಗಳಿಂದ ಕೂಡಿ ಗುಣಿಯಾಗಿರುತ್ತದೆ. ಆದ್ದರಿಂದ ಜಡವಾಗಿದೆ. ಮತ್ತು ವೇದ್ಯವೂ ಆಗಿದೆ. ಆದ್ದರಿಂದ ಅಹಂಕಾರವು ಚಿನ್ಮಯಾತ್ಮಸ್ವರೂಪು ಆಗಲಾರದು. ಎಂದು ಸೂಚಿಸುತ್ತಾರೆ.

ಬಳಿಕ, ಶಿಷ್ಯನು ಗುರುಗಳನ್ನು ಕುರಿತು, ಅವರ ಕೃಪಾದೃಷ್ಟಿಯನ್ನು ವರ್ಣಿಸುತ್ತಾ ಪ್ರಶ್ನೆಯನ್ನು ನಿವೇದನ ಮಾಡುತ್ತಾನೆ

**ಪರಿಪೂರ್ಣನಾಗಿ ಶಿವನಿರೆ ಜಗಂ ಶಿವನಾಗ।**
**ದಿರಲದಂ ನೋಟಮಾತ್ರದಿಂ ಶಿವನೆನಿಪ।**
**ಗುರುವೆ ಬಿನ್ನಪವನವಧರಿಸು** ॥೧॥

**ಟೀಕಾ**:- ಪರಿಪೂರ್ಣನಾಗಿ=ತುಂಬಿಕೊಂಡು, ಶಿವನಿರೆ=ಪರಮಾತ್ಮನಿದ್ದರೂ ಜಗಂ=ಜಗತ್ತು, ಶಿವನಾಗದಿರಲ್=ಶಿವರೂಪವಾಗದೆ ಇರುತ್ತಿರಲಾಗಿ, ಅದಂ= ಅದನ್ನು, ನೋಟಮಾತ್ರದಿಂ=ದೃಷ್ಟಿಮಾತ್ರದಿಂದಲೇ ಶಿವನೆನಿಪ=ಶಿವಸ್ವರೂಪವನ್ನಾಗಿ ಮಾಡುವ, ಗುರುವೇ=ಗುರುನಾಥನೇ! ಬಿನ್ನಪವನು=ಪ್ರಶ್ನೆಯನ್ನು, ಅವಧರಿಸು=ಕೇಳು.

**ತಾತ್ಪರ್ಯ**:- ಹೇ ಗುರುವೇ! ನಿನ್ನಲ್ಲಿ ಒಂದು ಅಸಾಧಾರಣ ಶಕ್ತಿಯು ಇರುತ್ತದೆ. ಏನಂದರೆ ಶಿವನು ಪರಿಪೂರ್ಣನಾಗಿರುವನು. ಆದರೂ ಜಗವು ಶಿವರೂಪವಾಗದೆ ಭಿನ್ನವಾಗಿ, ಜಡವಾಗಿಯೇ ಕಾಣಿಸುತ್ತಿತ್ತು. ಆದರೆ ನಿನ್ನ ಕೃಪಾದೃಷ್ಟಿಯು ನಮ್ಮ ಮೇಲೆ ಪಾತವಾದೊಡನೆ ಜಗತ್ತೆಲ್ಲವು ಶಿವರೂಪವಾಗಿಯೆ ತೋರಲಿಕ್ಕೆ ಹತ್ತಿತು. ಇದು ನಿನ್ನಿಂದಾಯಿತೇ ಹೊರತು ಅನ್ಯರಿಂದ ಆಗುವದು ಶಕ್ಯವಿಲ್ಲ ಎಂಬ ಭಾವವು. ಶಿವನು ಪೂರ್ಣನಾದ ಮೇಲೆ, ಜಗತ್ತಾದರೂ ಶಿವನಾಗಿಯೇ ಇರಲಿಕ್ಕೇಬೇಕು.ಜಗವು ಶಿವರೂಪವಾಗಿದ್ದರೂ ನಮಗೆಮಾತ್ರ ಶಿವನಿಗೆ ಭಿನ್ನವಾಗಿ ತೋರುತ್ತಿತ್ತು. ಶಿವನಿಗೂ ಜಗತ್ತನ್ನು ಶಿವರೂಪವಾಗಿ ತೋರಿಸಲು ಬರಲಿಲ್ಲ. ತಾವು ಮಾತ್ರ ಆ ಶಿವಜ್ಞಾನವನ್ನುಂಟುಮಾಡಿ, ಜಗತ್ತೆಲ್ಲವು ಶಿವಮಯವಾಗಿ ಕಾಣುವಂತೆ ಮಾಡಿದಿರಿ. ಆದ್ದರಿಂದ ತಮ್ಮಲ್ಲಿ ಶಿವನಿಗಿಂತಲೂ ಅಧಿಕವಾದ ಶಕ್ತಿಯಿರುತ್ತದೆಂದು ಬೇರೆಹೇಳಬೇಕಾಗಿಲ್ಲ.ಶಿವನಿಂದಾಗದ ಕಾರ್ಯವು ನಿನ್ನಿಂದಾಗಿದೆ. ಇಂಥಾ ಮಹಿಮೆಯುಳ್ಳ **ಗುರುವೇ!** ನನ್ನದೊಂದು ಪ್ರಶ್ನೆಯುಂಟು. ಅದನ್ನು ತಾವು ಸಾವಧಾನವಾಗಿ ಶ್ರವಣ ಮಾಡಿರಿ ಎಂದು ಕೊಂಡಾಡುತ್ತಾನೆ.

ಮತ್ತು **'ವೃತ್ತಿಂ ಜ್ಞಾನಮಯೀಂ ಕೃತ್ವಾ ಪಶ್ಯೇದ್ಬ್ರಹ್ಮಮಯಂ ಜಗತ್'** ವೃತ್ತಿಯನ್ನು ಅಪರೋಕ್ಷ ಬ್ರಹ್ಮಜ್ಞಾನಾಕಾರ ಮಾಡಿದರೆ, ಜಗತ್ತೆಲ್ಲವೂ ಬ್ರಹ್ಮ ಮಯವಾಗಿಯೇ ಕಾಣುತ್ತದೆ. ಕಣ್ಣಿಗೆ ಹಸರು ಬಣ್ಣದ ಕನ್ನಡಕವನ್ನು ಹಾಕಿದರೆ, ಎಲ್ಲ ಪದಾರ್ಥಗಳು ಹಸರಾಗಿಯೆ ಕಾಣುವಂತೆ, ಪಾದಕ್ಕೆ ಪಾದರಕ್ಷೆಯನ್ನು ಹಾಕಿದರೆ ಭೂಮಿಗೆಲ್ಲಾ ಚರ್ಮವನ್ನು ಹಾಸಿದಂತೆ, ವೃತ್ತಿ ಬ್ರಹ್ಮಾಕಾರವಾದರೆ, ಜಗತ್ತೆಲ್ಲವು ಬ್ರಹ್ಮಮಯವಾಗಿಯೇ ಕಾಣುತ್ತದೆಂಬ ಭಾವವು. ನಮ್ಮಗಳಿಗೆ ಇಂಥಾ ಬ್ರಹ್ಮಾಕಾರ ವೃತ್ತಿಯನ್ನುಂಟು ಮಾಡುವ ಬೋಧಸಾಮರ್ಥ್ಯವು ನಿನ್ನಲ್ಲಿ ಉಂಟು. ಆದ್ದರಿಂದ ಶ್ರುತಿಯು 'ನಗುರೋಽಧಿಕಂ' ಗುರುವಿಗಿಂತಲೂ ಅಧಿಕರು ಇಲ್ಲ ಎಂದು ಹೇಳುತ್ತಿರುತ್ತದೆ. ಇಂಥಾ ಮಹಾಮಹಿಮನಾದ ಗುರುದೇವನೇ ! ನನ್ನ ಪ್ರಶ್ನೆಯನ್ನು ಕೇಳಿ, ಅದರುತ್ತರವನ್ನು ತಿಳಿಸುವದು ನಿನಗೆ ಅಸಾಧ್ಯವಲ್ಲ. ಎಂಬ ಭಾವವನ್ನು ಸೂಚಿಸುತ್ತಾನೆ.

ಬಳಿಕ, ಶಿಷ್ಯನು ಗುರುಗಳ ಚಿತ್ತವನ್ನು ಪ್ರಸನ್ನೀಕರಿಸಿದ ನಂತರ, ಅವರ ಮುಂದೆ ತನ್ನ ಪ್ರಶ್ನೆಯನ್ನು ಇಡುತ್ತಿರುತ್ತಾನೆ.

**ಮೊದಲೊಳಂತಃಕರಣವದು ಹಮ್ಮಿನಂಶವೆಂ ।**
**ದೊದವಿ ನೀವೆನ್ನೊಳೊರದಿರಾ ಹಂತೆಯೆಂ ।**
**ಬುದರಂದವಾವುದೆಲೆದೇವ ॥೨॥**

**ಟೀಕಾ:-** ಮೊದಲು=ಪೂರ್ವದಲ್ಲಿ, ಅಂತಃಕರಣವದು=ಆ ಅಂತಃಕರಣವು, ಹಮ್ಮಿನಂಶವೆಂದು=ಅಹಂಕಾರದ ಭಾಗವೆಂದು, ಒದವಿ=ಚನ್ನಾಗಿ, ನೀವು=ನೀವು, ಎನ್ನೊಳು=ನನ್ನಲ್ಲಿ, ಒರದಿರಿ=ತಿಳಿಸಿದಿರಿ, ಎಲೆ ದೇವ=ಭೋ ಗುರುವೆ!, ಆ ಹಂತೆಯೆಂಬುದರ=ಆ ಅಹಂಕಾರವೆನ್ನುವದರ, ಅಂದವಾವುದು=ಸ್ವರೂಪಯಾವುದು ?

**ತಾತ್ಪರ್ಯ:-** ಭೋ ಗುರುದೇವ !, ತಾವು ಪೂರ್ವದಲ್ಲಿ ಅಂತಃಕರಣವು ಅಹಂಕಾರದ ಒಂದು ಭಾಗವಾಗಿರುತ್ತದೆಂದು ಹೇಳಿದಿರಿ. ಆದರೆ ಆ ಮೂಲ ಅಹಂಕಾರದ ಸ್ವರೂಪವೇನು ? ಎಂಬುದು ನನಗೆ ತಿಳಿಯಲಿಲ್ಲ. ಅಹಂಕಾರವೆಂದು ಯಾವುದಕ್ಕೆ ಹೇಳಬೇಕು ? ಅದು ಎಲ್ಲಿಂದ ಉತ್ಪನ್ನವಾಗಿರುತ್ತದೆ ? ಅದನ್ನು ನಾವು ಇದೇ ಅಹಂಕಾರವೆಂದು ಹೇಗೆ ಗುರ್ತಿಸಬೇಕು ? ಅದು ಯಾವ ವ್ಯವಹಾರವನ್ನು ಮಾಡುತ್ತದೆ ? ಅದು ಜಡವೋ ? ಅಥವಾ ಚೇತನವೋ ? ಅಥವಾ ಜಡಚೇತನ ಉಭಯಾತ್ಮಕವೋ ? ಗುಣಿಯಾಗಿದೆಯೋ ? ಅಥವಾ ನಿರ್ಗುಣವಾಗಿರುವದೋ ? ಅದು ಆತ್ಮವೋ ? ಅಥವಾ ಅನಾತ್ಮವೋ ? ಭಾವರೂಪವೋ ? ಅಭಾವರೂಪವೋ ? ಅದರ ಸ್ವರೂಪವೇನು ? ಎಂಬುದನ್ನು ನನಗೆ ಚನ್ನಾಗಿ ತಿಳಿಯುವಂತೆ ಹೇಳಬೇಕೆಂದು ಶಿಷ್ಯನು ಕೇಳಿಕೊಳ್ಳುತ್ತಾನೆ.

ಬಳಿಕ, ಗುರುಗಳು ಶಿಷ್ಯನ ಪ್ರಶ್ನೆಯ ಅಭಿಪ್ರಾಯವನ್ನು ತಿಳಕೊಂಡು; ಹೇ ಶಿಷ್ಯನೇ ! ನಿನಗೆ ಆ ಅಹಂಕಾರದ ಸ್ವರೂಪವನ್ನು ಚನ್ನಾಗಿ ಹೇಳುತ್ತೇನೆ ಕೇಳು. ಎಂದು ಶಿಷ್ಯನಿಗೆ ಅಭಯವನ್ನು ಕೊಡುತ್ತಲಿದ್ದಾರೆ-

**ಎನೆ ಕೇಳು ವೃತ್ತಿನಾಲ್ಕೆನಿಸುವಂತಃಕರಣ |**
**ವನು ತನ್ನದೊಂದವಸ್ಥೆಯೆನಿಸಿರ್ಪಹಂ |**
**ಮ್ಮಿನ ಪರಿಯನೊರವೆನೆಲೆ ಪುತ್ರ ||೩||**

**ಟೀಕಾ:-** ಎನೆ=ಶಿಷ್ಯನು ಹೇಳಲಾಗಿ, ಕೇಳು=ಆಲಿಸು, ವೃತ್ತಿನಾಲ್ಕೆನಿಸುವ=ನಾಲ್ಕುವಿಧ ವೃತ್ತಿಗಳೆಂದು ಹೇಳಿಸಿಕೊಳ್ಳುವ, ಅಂತಃಕರಣವನು=ಅಂತಃಕರಣವನ್ನು, ತನ್ನದೊಂದು ಅವಸ್ಥೆಯೆನಿಸಿರ್ಪ=ತನ್ನದೊಂದು ರೂಪಾಂತರವೆನಿಸಿದ, ಹಮ್ಮಿನ=ಅಹಂಕಾರದ, ಪರಿಯನು=ಸ್ವರೂಪವನ್ನು, ಎಲೆ ಪುತ್ರ=ಎಲೈ ಶಿಷ್ಯನೇ!, ಒರವೆನು=ತಿಳಿಸುತ್ತೇನೆ.

**ತಾತ್ಪರ್ಯ:-**ಹಿಂದೆ ಹೇಳಿದ ಪ್ರಕಾರ ಶಿಷ್ಯನು ಪ್ರಶ್ನೆಗಳನ್ನು ಮಾಡಲು; ಅದಕ್ಕೆ ಗುರುಗಳು ಉತ್ತರವನ್ನು ಹೇಳುತ್ತಾರೆ. ಹೇ ಶಿಷ್ಯನೇ ಕೇಳು. ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ನಾಲ್ಕು ವೃತ್ತಿಗಳಿಂದ ಯುಕ್ತವಾದದ್ದು ಅಂತಃಕರಣವು. ಇದು ಆ ಅಹಂಕಾರದ ಒಂದು ಭಾಗವೆಂತಲೂ ಅಥವಾ ಅವಸ್ಥೆಯೆಂತಲೂ ಹೇಳಿಸಿಕೊಳ್ಳಲ್ಪಡುತ್ತದೆ. ನಾಲ್ಕು ವೃತ್ತಿಗಳಲ್ಲಿದ್ದ ಅಹಂಕಾರಕ್ಕೆ **ಕಾರ್ಯರೂಪ ಅಹಂಕಾರವೆಂದು** ತಿಳಿಯಬೇಕು. ಅಂತಃಕರಣಕ್ಕೆ ಮೂಲಕಾರಣವಾದ ಅಹಂಕಾರಕ್ಕೆ **ಮೂಲಾಹಂಕಾರವೆಂದು** ತಿಳಿಯಬೇಕು. ಯಾಕಂದರೆ; ಇಲ್ಲಿ ಆಹಂಕಾರವೆಂಬ ಶಬ್ದವು ಎರಡು ಸ್ಥಾನಗಳಲ್ಲಿ ವ್ಯವಹರಿಸಲ್ಪಟ್ಟಿದೆ. ಈಗ ಇಲ್ಲಿ ವಿಚಾರಮಾಡುವದು ಮೂಲಾಹಂಕಾರವಾಗಿದೆ. ಇಂಥಾ ಅಹಂಕಾರದ ಸ್ವರೂಪವನ್ನು ನಿನಗೆ ತಿಳಿಯುವಹಾಗೆ ನಿರೂಪಣೆ ಮಾಡುತ್ತೇನೆ. ಕೇಳು.

**ಬಳಿಕ,** ಶುಕ್ತಿಯಲ್ಲಿ ರಜತಾಧ್ಯಾಸದಂತೆ ನಿಜದಲ್ಲಿ ಹಮ್ಮು ಕಲ್ಪಿತ, ಅಧ್ಯಾಸವಾಗಿರುತ್ತದೆಂದು ಹೇಳುತ್ತಾರೆ.

**ಅಜ್ಞಾನದಿಂದನ್ಯಥಾ ಜ್ಞಾನದೆವೆದೆರೆಯೆ |**
**ಸೌಂಜ್ಞೆಯಿಂದದು ಮಹತ್ತಲ್ಲಿಸವಿಕಲ್ಪ |**
**ಕಜ್ಞಾನವಾಗಲದೆ ಹಮ್ಮು ||೪||**

**ಟೀಕಾ:-** ಅಜ್ಞಾನದಿಂದ=ಪ್ರತ್ಯಗಾತ್ಮಸ್ವರೂಪದ ಅಜ್ಞಾನದಿಂದ, ಅನ್ಯಥಾ ಜ್ಞಾನದ=ವಿಪರೀತ ಜ್ಞಾನದ, ಎವೆದೆರೆಯೆ=ಕಣ್ಣೆನರೆಪ್ಪೆ ತೆಗೆದಂತೆ ಕಿಂಚಿತ್

ಮಿಸಕು ಹುಟ್ಟಲು, ಸೌಂಜ್ಞೆಯಿಂದ=ಈ ಚಿನ್ಹದಿಂದ, ಅದು ಮಹತ್ತು=ಮಧ್ಯಸ್ಥಿತಿಯಿಂದಿರಲು ಮಹತ್ತು, ಅಲ್ಲಿ=ಆ ಮಹತ್ತಿನಲ್ಲಿ, ಸವಿಕಲ್ಪಕ ಜ್ಞಾನವಾಗಲ್=ಅಹಂ ಎಂಬ ಸವಿಕಲ್ಪ ಜ್ಞಾನೋದಯುವಾಗಲು, ಅದೆಹವು್ಮ=ಅದೇ ಅಹಂಕಾರವೆನಿಸುತ್ತದೆ.

**ತಾತ್ಪರ್ಯ:-** ಅಂತಃಕರಣ ವೃತ್ತಿಯು ನೇತ್ರದ್ವಾರಾ ಬಿಸಲಲ್ಲಿ ಬಿದ್ದ ಶುಕ್ತಿಗೆ ಸಂಬಂಧವಾಯಿತು. ಆದರೆ, ನೀಲಪೃಷ್ಟ ತ್ರಿಕೋಣಾಕೃತಿಯ ವಿಶೇಷಾಂಶ ಜ್ಞಾನವಾಗದೆ, ಇದು ಎಂಬ ಸಾಮಾನ್ಯ ರೂಪಜ್ಞಾನವಾಯಿತು. ಆಗ್ಯೆ ಆಶುಕ್ತ್ಯವಚ್ಛಿನ್ನಚೇತನಾಶ್ರಿತವಾದ ಅಜ್ಞಾನವು ಕ್ಷೋಭವಾಯಿತು. ಕಿಂಚಿತ್ ಚಲಿಸಿತು ಎಂಬರ್ಥವು. ಇದಕ್ಕೆ ಗ್ರಂಥಕರ್ತರು ಎವೆದೆರೆಯೆ ಎಂದು ಹೇಳಿರುವರು. ಅಂದರೆ ಆ ಅಜ್ಞಾನದಲ್ಲಿ ಮಿಸಕು ಆಯಿತು. ಅದರಿಂದ ಇದು ರಜತವೆಂಬ ಅಧ್ಯಾಸವಾಯಿತು. ಈ ದೃಷ್ಟಾಂತದಂತೆ; ದ್ರಾಷ್ಟಾಂತದಲ್ಲಿಯೂ ತಿಳಿಯತಕ್ಕದ್ದು. ಹೇಗಂದರೆ, ಅಸಂಗ, ಚಿದ್ರೂಪ, ಪ್ರತ್ಯಗಾತ್ಮ ವಿಶೇಷಾಂಶ ಸ್ವರೂಪದ ಅಜ್ಞಾನವಾಯಿತು. ಇದ್ದೇನೆಂಬ ಸಾಮಾನ್ಯ ಅಂಶದ ಜ್ಞಾನವಾಗಲು; ಆಗ್ಯೆ ವಿಪರೀತ ಜ್ಞಾನದ ಮಿಸಕು ಆಯಿತು. ಅಂದರೆ, ಅಜ್ಞಾನವು ಕ್ಷೋಭೆಯನ್ನು ಹೊಂದಿ ಭ್ರಮ ಜ್ಞಾನಕ್ಕೆ ಅಭಿಮುಖವಾಯಿತು. ಅದಕ್ಕೆ ಅಲ್ಲಿ **ಮಹತ್ತ**ಯೆಂಬ ಹೆಸರು ಬಂದಿತು. ಮಹತ್ ಅಂದರೆ, ಕಾರಣವಾದ ಅಜ್ಞಾನದವಸ್ಥೆಯೂ ಅಲ್ಲ. ಕಾರ್ಯವಾದ ಭ್ರಮದ ಅವಸ್ಥೆಯೂ ಅಲ್ಲ. ಕಿಂತು; ಮಧ್ಯಸ್ಥಿತಿಯಿಂದ ಇರತಕ್ಕ ಅವಸ್ಥೆಯಾಗಿರುತ್ತದೆ. ಇಂಥಾ ಮಹತ್ತಿನಲ್ಲಿ (ಅಹಂ) ನಾನು ಎಂಬ ಸವಿಕಲ್ಪಕ ಜ್ಞಾನೋದಯವಾಯಿತು. ಇದಕ್ಕೆ **ಅಹಂಕಾರ**ವೆಂದು ಕರೆಯುತ್ತಾರೆ. ಅರ್ಥಾತ್ ಸ್ವಯಂ ಶಬ್ದಾರ್ಥರೂಪನಾದ ತನ್ನಲ್ಲಿ ಅಹಂಕಾರವು ಅದರರ್ಥರೂಪವಾದ ಜೀವತ್ವವೂ ಕಲ್ಪಿತವಾಗಿರುತ್ತದೆಂಬ ಭಾವವು.

ಬಳಿಕ, ಇಂಥಾ ಅಹಂಕಾರವನ್ನೇ ಕುರಿತು ಕೆಲವು ಗ್ರಂಥಕಾರರು ಹಲ ಕೆಲವು ನಾಮುಗಳಿಂದ ಕರೆಯುತ್ತಿರುವರೆಂದು ಹೇಳುತ್ತಾರೆ.

**ಅದನೆ ಪ್ರಥಮಾಧ್ಯಾಸವದನೆ ಕಲ್ಪಿತ ಪುರುಷ ।**
**ನದನೆ ವ್ಯವಹಾರಿ ಜೀವನೆನುತಿಹರು ಕೇ ।**
**ಳದು ತಾನೆ ಮೂಲವಖಿಳಕ್ಕೆ ॥೩॥**

**ಟೀಕಾ:-** ಅದನೆ = ಆ ಅಹಂಕಾರವನ್ನೆ ಕುರಿತು, ಪ್ರಥಮಾಧ್ಯಾಸವು = ಮೊದಲನೇ ಅಧ್ಯಾಸವೆಂದೂ, ಅದನೆ = ಆ ಅಹಂಕಾರವನ್ನೆ ಕುರಿತು, ಕಲ್ಪಿತ ಪುರುಷನು = ಕಲ್ಪಿತವಾದ್ದರಿಂದ ಕಲ್ಪಿತ ಪುರುಷನೆಂದೂ, ಅದನೆ ವ್ಯವಹಾರಿ ಜೀವನು = ಅದನ್ನೇ ಲಕ್ಷಿಸಿ ವ್ಯವಹಾರಿ ಜೀವನೆಂದೂ, ಎನುತಿಹರು = ಹೇಳುತ್ತಿ

ಶುವರು. ಕೇಳು = ಆಲಿಸು, ಅದು ತಾನೆ = ಆ ಅಹಂಕಾರವೆ, ಅಖಿಳಕ್ಕೆ = ಸರ್ವಕ್ಕೆ, ಮೂಲವು = ಮೂಲಕಾರಣವಾಗಿರುವದು.

**ತಾತ್ಪರ್ಯ:-** ಆ ಮೂಲಾಹಂಕಾರವನ್ನು ಕುರಿತು ಕೆಲವರು ಕೆಲವು ಬೇರೆ ಬೇರೆ ಹೆಸರುಗಳನ್ನು ಕೊಟ್ಟಿರುತ್ತಾರೆ. ಹೇಗೆಂದರೆ; ನಿಜವಾದ ತನ್ನ ಸ್ವರೂಪ ದಲ್ಲಿ, ಇದಕ್ಕಿಂತಲೂ ಪೂರ್ವದಲ್ಲಿ ಯಾವ ಅಧ್ಯಾಸವಾಗದೇ, ಇದೇ ಮೊದಲಾದ್ದ ರಿಂದ ಇದಕ್ಕೆ **ಪ್ರಥಮಾಧ್ಯಾಸವೆಂಬ** ಹೆಸರು ಬಂದಿತು. ಇದು ಪುರುಷ ಅಂದರೆ, ಆತ್ಮನಂತೆ ತೋರುತ್ತದೆ. ತೋರಿದರೂ ಇದು ಕಲ್ಪಿತವಾಗಿರುತ್ತದೆ. ಆದ್ದರಿಂದ **ಕಲ್ಪಿತ ಪುರುಷನೆಂಬ** ಹೆಸರು ಬಂದಿರುವದು. ಮತ್ತು ಇದರಿಂದಲೇ ಬಂಧ ಮೋಕ್ಷಾದಿ ವ್ಯವಹಾರಗಳೆಲ್ಲವು ನಡೆದಿರುವದರಿಂದ ಇದಕ್ಕೆ **ವ್ಯವಹಾರಿ ಜೀವ ನೆಂದು** ಕೆಲವರು ಕರೆಯುತ್ತಾರೆ. **ಚಿಚ್ಛಕ್ತಿ, ತಲ್ಲೀಲೆ, ಲಿಂಗಾಕೃತಿ, ಪರನಾದ ಗಳೆಂಬ** ಹೆಸರುಗಳು ಬಂದಿರುತ್ತವೆಂದು ಪರಮಾನುಭವಬೋಧೆಯಲ್ಲಿಯೂ ಹೇಳಿದ್ದಾರೆ. ಕೆಲವರು ಗ್ರಂಥಕಾರರು ತಮ್ಮ ಮನಸ್ಸಿಗೆ ತೋರಿದ ಹಾಗೆ, ಅನೇಕ ಹೆಸರುಗಳನ್ನು ಕೊಟ್ಟರೂ, ನಾಮೀಯಾದ **ಅಹಂಕಾರವು** ಒಂದೇ ಆಗಿರುತ್ತದೆಂಬ ಭಾವವು.

**ಬಳಿಕ,** ಈ ಅಹಂಕಾರವು ಆತ್ಮನೇನೋ ಅನ್ನುವಂತೆ ತೋರಿದರೂ ಕಾರ್ಯರೂಪ ವೃತ್ತಿಗಳಿಂದ ತಿಳಿಸಿಕೊಳ್ಳುವದರಿಂದ **ಅನಾತ್ಮವಾಗಿದೆಯೆಂದು** ನಿರೂಪಣ ಮಾಡುತ್ತಾರೆ.

**ಕುಟೆಯೊಡನೆ ವೇದ್ಯವಾ ಪಟವೆಂಬ ವೊಲು ತನ್ನ ।**
**ಪಟುವೃತ್ತಿಯರುಹಿ ಕೊಳುತಿರ್ಪಕಥದಿ ನಿದು ।**
**ಘಟದಂತೆ ವಿಷಯುವೆನಬೇಕು ॥೬॥**

**ಟೀಕಾ:-** ಕುಟೆಯೊಡನೆ=ಡೇರೆಯೊಡನೆ, ವೇದ್ಯವು=ವಿಷಯುವು, ಆ ಪಟ ವೆಂಬವೊಲು=ಆ ಪಟವೆಂಬ ಹಾಗೆ, ತನ್ನ=ಸ್ವಕೀಯ, ಪಟುವೃತ್ತಿ=ಬುದ್ಧಿ, ಸುಖ, ದುಃಖಾದಿವೃತ್ತಿಗಳಿಂದ, ಅರುಹಿಕೊಳುತಿರ್ಪಕಥದಿಂ= ತಿಳಿಸಿಕೊಳ್ಳುವದರಿಂದ, ಇದು=ಈ ಅಹಂಕಾರವು, ಘಟದಂತೆ=ಘಟದಹಾಗೆ, ವಿಷಯುವೆನಬೇಕು=ಗೋಚರ ವಾಗುತ್ತದೆಂದು ಹೇಳಲಿಕ್ಕೆ ಬೇಕಾಗುತ್ತದೆ.

**ತಾತ್ಪರ್ಯ:-** ಕಾರಣವಾದ ಪಟವು ತನ್ನ ಕಾರ್ಯವಾದ ಡೇರೆಯು ಆಕಾರದಿಂದ ಹೇಗೆ ಗೋಚರವಾಗುತ್ತಿರುವದೋ; ಹಾಗೇ ಈ ಅಹಂಕಾರ ವಾದರೂ, ತನ್ನ ಒಂಭತ್ತು ಗುಣಾತ್ಮಕ ಕಾರ್ಯರೂಪವೃತ್ತಿಗಳಿಂದ ವಿಷಯು ವಾಗುತ್ತದೆ. ಆದರಿಂದ ಘಟದಂತೆ ಅಹಂಕಾರವಾದರೂ **ದೃಶ್ಯವೆಂದೇ** ಹೇಳ

ಬೇಕು. ದೃಶ್ಯತ್ವ ಲಕ್ಷಣಯುಕ್ತವಾದ್ದರಿಂದ ಅಹಂಕಾರವು ಅನಾತ್ಮವಾಗಿದೆ. ರಾಜಸನ್ನಿಧಿಯಲ್ಲಿದ್ದ ಮಂತ್ರಿಯು ರಾಜನಂತೆ ತೋರಿದರೂ, ರಾಜ ಲಕ್ಷಣಕಿರೀಟ ಶ್ವೇತಛತ್ರಿಗಳಿಲ್ಲದ್ದರಿಂದ ಹೇಗೆ ರಾಜನೆನಿಸನೋ, ಹಾಗೆ ಅಹಂಕಾರವು ಅಹ ಮೆಂದು ಪ್ರತ್ಯಗಾತ್ಮ ಸನ್ನಿಧಿಯಲ್ಲಿದ್ದು ಆತ್ಮನಂತೆ ತೋರಿದರೂ, ಆತ್ಮನಾಗದು. ಯಾಕಂದರೆ, ಆತ್ಮನ ಅಸಂಗತ್ವ, ನಿರ್ವಿಷಯತ್ವ, ಸ್ವಯಂಪ್ರಕಾಶ, ಮೊದಲಾದ ಲಕ್ಷಣಗಳು ಇಲ್ಲದ್ದರಿಂದ ಅದು ಆತ್ಮರೂಪವಲ್ಲ ಎಂಬಭಾವವು.

ಬಳಿಕ, ಅರುರೂಪನಾದ ಆತ್ಮನಂತೆ, ಅಹಂಕಾರವಾದರೂ ಜಾಗ್ರತ್ಸ್ವಪ್ನ ಗಳಲ್ಲಿ ಪ್ರಸಿದ್ಧವಾಗಿ ಸರ್ವಾನುಭವಸಿದ್ಧವಾಗಿ ಅರಿಯುತ್ತಿರುತ್ತದೆ. ಅದರಿಂದ ಅದಕ್ಕೆ ಆತ್ಮನೆಂದು ಹೇಳಬೇಕಾಗುವದೆಂದು ಶಂಕೆಯನ್ನು ಮಾಡಿದರೆ, ಅದು ಅರುರೂಪವಾಗಿರುವದು. ನಿಜವಲ್ಲ. ಕಿಂತು ಅರುವಿನ ಹೋಲಿಕೆಯಾಗಿರುತ ದೆಂದು ನಿರೂಪಣ ಮಾಡುತ್ತಾರೆ.

**ಈಯಹಮು ತಾನುಭಯ ಕಾಯದೊಳಗರಿವಿನ ವಿ।**
**ಡಾಯಮಂ ಪಡೆದು ಪೊರಗುಳ್ಳ ವಿಷಯ ಸಮು।**
**ದಾಯಮಂ ಕಾಣುತಿಹುದಿಂತು ॥೭॥**

**ಟೀಕಾ:-** ಈ ಅಹಮು=ಈ ಅಹಂಕಾರವು, ತಾನು=ತಾನು, ಉಭಯಕಾಯ ದೊಳಗೆ=ಎರಡು ಶರೀರಗಳಲ್ಲಿ, ಅರಿವಿನ=ಜ್ಞಾನದ, ವಿಡಾಯಮಂ=ರೀತಿಯನ್ನು (ಅದರಂತಿರುವದನ್ನು) ಪಡೆದು=ಹೊಂದಿ, ಪೊರಗುಳ್ಳ=ಹೊರಗಿರುವ, ವಿಷಯ ಸಮುದಾಯಮಂ=ವಿಷಯ ಸಮುದಾಯವನ್ನು ಕುರಿತು; ಇಂತು ಈ ಪ್ರಕಾರ, ಕಾಣುತಿಹುದು=ಗೋಚರಿಸುತ್ತಿಹುದು,

**ತಾತ್ಪರ್ಯ:-** ಈ ಅಹಂಕಾರವು ಸ್ವರೂಪತಃ ಜಡವಾಗಿದ್ದರೂ, ಆತ್ಮನ ಪ್ರತಿಚ್ಛಾಯೆಯನ್ನು ಪಡೆದು, ತಾನು ಆತ್ಮನಂತೆ ಅರುರೂಪವಾಗಿ ತೋರು ತ್ತದೆ, ಆದರೂ ಅದು ಅರು ಸ್ವರೂಪವಲ್ಲ. ಜಾಗ್ರತ್ ಮತ್ತು ಸ್ವಪ್ನ ಈ ಎರಡು ಅವಸ್ಥೆಗಳಲ್ಲಿ ಸ್ಥೂಲ ಸೂಕ್ಷ್ಮದೇಹದ್ವಯಗಳಲ್ಲಿ ಅಹಂಕಾರವು ಅರುವಿನ ವೇಷ ವನ್ನು ಧರಿಸಿ ಆತ್ಮನಂತೆ ತೋರುತ್ತದೆ. ದೇಹದ ಹೊರಗೆ ಜಾಗ್ರದ್ವಿಷಯಗಳನ್ನು, ಒಳಗೆ ವಾಸನಾಮಯ ವಿಷಯಗಳನ್ನೂ, ಅರಿಯುತ್ತಾ ಇರುತ್ತದೆ. ಆದರೂ; ಇದು ಅರುರೂಪ ಆತ್ಮವಲ್ಲ. ಹೇಗಂದರೆ; ನಾಟಕದಲ್ಲಿ ಶ್ರೀರಾಮಚಂದ್ರನ ವೇಷ ವನ್ನು ಧರಿಸಿ, ರಾಮಚಂದ್ರನಂತೆ ನೋಡುವವರ ಕಣ್ಣಿಗೆ ನಟನೆ ಮಾಡಿ ತೋರಿ ದರೂ, ಅವನು ನಿಜವಾದ ಶ್ರೀರಾಮಚಂದ್ರನಾಗಲಾರನು. ಇದರಂತೆ, ಅಹಂಕಾರವು ಜಾಗ್ರತ್ಸ್ವಪ್ನಂಗಳಲ್ಲಿ ಅರುವಿನಂತೆ ತೋರಿದರೂ, ನಿದ್ರೆಯಲ್ಲಿ

ಇಲ್ಲದ್ದಾಗುತ್ತದೆ. ಮತ್ತು ಇದಕ್ಕೆ ಸ್ವಂತ ಅರುವಿಲ್ಲ. ಇನ್ನೊಬ್ಬರಿಂದ ಸಾಲತಂದು ತಾನು ಬೇರೊಬ್ಬರಿಗೆ ಸಾಲಕೊಟ್ಟು ಧನಿಕನೆನ್ನಿಸಿಕೊಂಡರೂ; ನಿಜವಾದ ಧನಿಕನೆನಿಸಲಾರನು. ಇದರಂತೆ; ಅಹಂಕಾರವು ಜಡವಾಗಿದೆ ಅರುವಲ್ಲ.

ಬಳಿಕ, ಶಿಷ್ಯನು ಅಹಂಕಾರವು ಜಡವಾಗಿದೆ. ಇದಕ್ಕೆ ಅರುವಿಲ್ಲ ಎಂಬುದನ್ನು ಕೇಳಿ, ಒಂದು ಜಡವಾದ ಗಡಿಗೆಯು ಮತ್ತೊಂದು ಗಡಿಗೆಯನ್ನು ಹೇಗೆ ತಿಳಿಯಲಾರದೋ, ಹಾಗೆ ಅಹಂಕಾರವು ಜಡವಾಗಿ, ಜಾಗ್ರತ್ಸ್ವಪ್ನಗಳಲ್ಲಿ ಅರಿಯಬಾರದಾಗಿತ್ತು. ಅರಿಯುತ್ತದೆ. ಅಂದಮೇಲೆ ಜಡಹೇಗೆ? ಎಂದು ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

**ಜಡವರಿವ ಪರಿಯೆಂತು ಮಡಕೆಯಂ ಬೇರೊಂದು ।**
**ಮಡಕೆಯರಿವುತ್ತಮಿಹುದೆ ನೀವಿದನರುಹಿ ।**
**ಕೊಡುವುದೆನೆ ಪೇಳುವೆನು ಕೇಳು ॥೮॥**

**ಟೀಕಾ:-** ಜಡವು=ಅಚೇತನವು, ಅರಿವ=ತಿಳಿಯುವ, ಪರಿಯೆಂತು=ರೀತಿ ಹೇಗೆ, ಮಡಿಕೆಯಂ=ಗಡಿಗೆಯನ್ನು, ಬೇರೊಂದು ಮಡಿಕೆಯು=ಮತ್ತೊಂದು ಗಡಿಗೆಯು, ಅರಿವುತ್ತಮಿಹುದೆ=ಅರಿವುತ್ತಿರುವದೆ? ನೀವು=ತಾವು, ಇದನು=ಈ ವಿಷಯವನ್ನು, ಅರುಹಿ ಕೊಡುವುದು ಎನೆ=ತಿಳಿಸಿ ಹೇಳಬೇಕೆಂದು ಕೇಳಲಾಗಿ, ಪೇಳುವೆನು=ಉತ್ತರ ಹೇಳುತ್ತೇನೆ, ಕೇಳು=ಆಲಿಸು.

**ತಾತ್ಪರ್ಯ:-** ಜಡವು ಅಂದರೆ, **'ಸ್ವೇತರಜ್ಞಪ್ತಿ ಶೂನ್ಯತ್ವಂ ಜಡತ್ವಂ'** ತಾನು ಇತರರು ಎಂಬ ಅರುವಿಲ್ಲದಿರುವದೇ ಜಡವೆನಿಸುವದು. ಕಲ್ಲಿನಂತೆ ಅಹಂಕಾರವು ಜಡವಾಗಿ ಅದೆ. ಅಂದಮೇಲೆ, ಅದು ಅರಿಯಬಾರದಾಗಿತ್ತು. ಮತ್ತು ಅರಿಯುತ್ತದೆಂದೂ ಹೇಳುವಿರಿ. ಜಡವಾಗಿದ್ದು ಅರಿಯುವದೆಂದು ಹೇಳುವ ತಮ್ಮ ಮಾತನ್ನು ಕೇಳಿ ನನಗೆ ಆಶ್ಚರ್ಯವಾಗಿದೆ. ಗಡಿಗೆಯ ಮೇಲೊಂದು ಗಡಿಗೆಯನ್ನು ಹೇರಿದರೆ, ಮೇಲಿನ ಗಡಿಗೆಯು ಬುಡದ ಗಡಿಗೆಯನ್ನು ಹೇಗೆ ತಿಳಯುವದಿಲ್ಲವೋ, ಹಾಗೆ ಅಹಂಕಾರವಾದರೂ ಅರಿಯಬಾರದಾಗಿತ್ತು. ಸ್ಥೂಲಸೂಕ್ಷ್ಮ ಶರೀರಗಳಲ್ಲಿ ಅರಿಯುತ್ತದೆಂದೂ ಹೇಳುವಿರಿ. ಈ ಮಾತು ಹೇಗೆ ಯೋಗ್ಯವಾಗುತ್ತದೆ. ತಾವು ಈ ವಿಷಯವನ್ನು ದಯವಿಟ್ಟು ತಿಳಿಸಬೇಕೆಂದು ಶಿಷ್ಯನು ಪ್ರಶ್ನೆಯನ್ನು ಮಾಡಲು, ಗುರುಗಳು ಅದಕ್ಕೆ ಮುಂದೆ ಉತ್ತರವನ್ನು ನೀಯುತ್ತಲಿದ್ದಾರೆ.

**ಬಳಿಕ,** ಸೂಜಿಗಲ್ಲಿನ ಗುಣವನ್ನು ಪಡೆದ ಸೂಜಿಯು ಮತ್ತೊಂದು ಸೂಜಿಯನ್ನು ಚಲಿಸುವಂತೆ, ಚಿತ್ತಿನಿಂದ ಯುಕ್ತವಾದ ಹಮ್ಮು ಬೇರೊಂದನ್ನು ಅರಿಯುತ್ತಿರುವದೆಂದು ಹೇಳುತ್ತಾರೆ.

ಸೂಜಿಗಲ್ಲಂ ಪಿಡಿದ ಸೂಜಿಯದು ಬೇರೊಂದು ।
ಸೂಜಿಗಾ ಸೂಜಿ ಕಲ್ಲಗುಣಮಂ ತಾಳ್ದು ।
ರಾಜಿಸುತ್ತಿರ್ಪತೆರನಂತೆ ॥೯॥

ಚಿತ್ತುವಿಡಿದಿರ್ಪಹಮು ಚಿತ್ತಲ್ಲದಿರ್ದೊಡಂ ।
ಚಿತ್ತೆನಿಸಿ ದೇಹ ಮೊದಲಾದವಂ ಚೇಷ್ಟಿ ।
ಸುತ್ತಿರಿವುದೆಂದು ತಿಳಿ ಪುತ್ರ ॥೧೦॥

**ಟೀಕಾ:-** ಸೂಜಿಗಲ್ಲಂ ಪಿಡಿದ=ಸೂಜಿಕಲ್ಲನ್ನು ಹಿಡಿದಿರುವ, ಸೂಜಿಯದು= ಆ ಸೂಜಿಯು, ಬೇರೊಂದು ಸೂಜಿಗೆ=ಮತ್ತೊಂದು ಸೂಜಿಗೆ, ಆ ಸೂಜಿಗಲ್ಲ ಗುಣಮಂ=ಆ ಸೂಜಿಕಲ್ಲಿನ ಗುಣವನ್ನು, ತಾಳ್ದು=ಹೊಂದಿ, ರಾಜಿಸುತ್ತಿರ್ಪ ತೆರನಂತೆ=ಹೊಳೆಯುತ್ತಿರುವ ಹಾಗೆ, (೯). ಚಿತ್ತುವಿಡಿದಿರ್ಪಹಮು=ಚಿದ್ರೂಪ ವನ್ನು ಗ್ರಹಿಸಿರುವ ಅಹಂಕಾರವು, ಚಿತ್ತಲ್ಲದಿರ್ದೊಡಂ=ಚಿದ್ರೂಪವಾಗದಿದ್ದರೂ, ಚಿತ್ತೆನಿಸಿ= ಜ್ಞಾನರೂಪವೆನಿಸಿ, ದೇಹ ಮೊದಲಾದವಂ= ದೇಹೇಂದ್ರಿಯಾದಿ ಗಳನ್ನು, ಚೇಷ್ಟಿಸುತ್ತಿರಿವುದೆಂದು = ವ್ಯವಹಾರ ಮಾಡಿಸುತ್ತಿರುವುದೆಂದು, ತಿಳಿ ಪುತ್ರ=ಮಗನೇ। ತಿಳಿಯುವಂಥವನಾಗು. (೧೦).

**ತಾತ್ಪರ್ಯ:-** ಸೂಜಿಗಲ್ಲಿನ ಸಮೀಪದಲ್ಲಿದ್ದ ಸೂಜಿಯು, ಆ ಸೂಜಿಗಲ್ಲಿ ನಲ್ಲಿರುವ ಆಕರ್ಷಕವಾದ ಕಲ್ಲಿನ ಗುಣವನ್ನು ಗ್ರಹಿಸಿ, ತಾನು ಮತ್ತೊಂದು ಸೂಜಿ ಯನ್ನು ಚಲಿಸುತ್ತಿರುತ್ತದೆ. ಚಾಲಕ ಶಕ್ತಿಯು ಸೂಜಿಗೆ ಇಲ್ಲದಿದ್ದರೂ, ಕಲ್ಲಿ ನಿಂದ ಚಾಲಕಶಕ್ತಿಯನ್ನು ಪಡೆದುಕೊಂಡು; ತಾನೂ ಸೂಜಿಕಲ್ಲವೇನೋ ಎಂಬಂತೆ ಹೇಗೆ ತೋರುತ್ತಿರುವದೋ; ಹಾಗೇ ಈ ಅಹಂಕಾರವಾದರೂ, ಸ್ವತಃ ಅರಿಯುವದು ತನ್ನಲ್ಲಿ ಇರದಿದ್ದರೂ, ಚಿದ್ರೂಪಾತ್ಮನಿಂದ ಅರಿಯುವದನ್ನು ಪಡಕೊಂಡು, ತಾನು ಅರಿವಿನಂತೆ ತೋರುತ್ತ, ದೇಹೇಂದ್ರಿಯಾದಿಗಳನ್ನು ಅರಿ ಯುತ್ತಿರುವದು. ಬೆಲ್ಲದೊಳಗಿನ ಸೀಗುಣವನ್ನು ಹೂರಣವು ಪಡಕೊಂಡ ಸೀಯಾಗಿ ತೋರಿದಂತೆ, ಆತ್ಮನ ಅರುವನ್ನು ಹೊಂದಿ, ಜಡವಾದ ಅಹಂಕಾರವು ಅರುವಿನಂತೆ ತೋರುತ್ತಿರುವುದೆಂಬ ಭಾವವು.

**ಬಳಿಕ,** ಅಹಂಕಾರವು ಒಂಭತ್ತು ಗುಣಗಳಿಂದ ಕೂಡಿ, ಘಟದಂತೆ ವೇದ್ಯ ವಾಗುವದರಿಂದ ಆತ್ಮನಲ್ಲ. ಎಂದು ಹೇಳುತ್ತಾರೆ.

ಕುವರ ಕೇಳಿನ್ನಿದರ ನವಗುಣಂ ವೇದ್ಯವೆನಿ ॥
ಸುವ ಕಥದಿನಹಮು ನಿಜವಾಗದಾ ಗುಣಿ ।
ತ್ವವ ನಾಂತುದಾಗಿ ಘಟದಂತೆ ॥೧೧॥

**ಟೀಕಾ:-** ಕುವರ ಕೇಳ್=ಹೇ ಪುತ್ರನೇ; ಆಲಿಸು. ಇನ್ನು=ಅನಂತರ, ಇದರ=ಈ ಅಹಂಕಾರದ, ನವಗುಣಂ=ಒಂಭತ್ತು ಗುಣಗಳು, ವೇದ್ಯವೆನಿಸುವ ಕಥದಿಂ=ತೋರುವ ಕಾರಣದಿಂದ, ಅಹಮು=ಅಹಂಕಾರವು, ನಿಜವಾಗದು=ಆತ್ಮ ವಾಗಲಾರದು. ಘಟದಂತೆ=ಘಟದಹಾಗೆ, ಆ ಗುಣಿತ್ವವನು=ಆ ಗುಣವುಳ್ಳತನ ವನ್ನು, ಆಂತುದಾಗಿ=ಹೊಂದಿರುವದರಿಂದ,

**ತಾತ್ಪರ್ಯ:-** ಹೇಶಿಷ್ಯನೇ! ಕೇಳು. ಅಹಂಕಾರವು ಮುಂದೆ ಹೇಳುವ ಒಂಭತ್ತು ಗುಣಗಳಿಂದ ಕೂಡಿರುವ ಕಾರಣ, ಗುಣಿಯೆಂದು ಹೇಳಿಸಿಕೊಂಡು ಘಟ ದಂತೆ ತೋರುತ್ತದೆ. ಅಂದರೆ; ನೀಲಗುಣದಿಂದ ಕೂಡಿದ ಗುಣಿಯಾದ ಘಟವು ತೋರಿದಂತೆ, ಬುದ್ಧ್ಯಾದಿ ಒಂಭತ್ತು ಗುಣಗಳಿಂದ ಕೂಡಿಕೊಂಡು ಗುಣಿಯಾದ ಅಹಂಕಾರವು ತೋರುತ್ತದೆ. ಆದ್ದರಿಂದ **ಅಹಂಕಾರವು** ಆತ್ಮನಾಗದು.

ಬಳಿಕ, ಆ ಒಂಭತ್ತು ಗುಣಗಳು ಯಾವವು? ಅಂದರೆ ಅವುಗಳನ್ನು ಈ ಪದ್ಯದಿಂದ ಹೇಳುತ್ತಾರೆ.

**ಆವಧರ್ಮಾ ಧರ್ಮವೋವಿ ಯತ್ನ ದ್ವೇಷ ।**
**ಭಾವನಾ ರಾಗ ಸುಖ ದುಃಖ ಮತಿಗಳಿವು ।**
**ತಾವೆ ನವಗುಣವೆನಿಸುತಿರ್ಕು ॥ ೧೨ ॥**

**ಟೀಕಾ:-** ಆವಧರ್ಮಾಧರ್ಮಂ=ಯಾವ ಪುಣ್ಯಪಾಪಗಳು, ಓವಿ=ಚೆನ್ನಾಗಿ, ಯತ್ನ=ಪ್ರಯತ್ನ, ದ್ವೇಷ=ವೈರತ್ವವು, ಭಾವನಾ=ಸಂಸ್ಕಾರವು, ರಾಗ=ಇಚ್ಛೆಯು, ಸುಖ=ಇಷ್ಟಬುದ್ಧಿ, ದುಃಖ=ಅನಿಷ್ಟಬುದ್ಧಿ, ಮತಿಗಳು=ಬುದ್ಧಿಗಳು, ಇವುತಾವೆ= ಇವುಗಳೇ, ನವಗುಣವೆನಿಸುತಿರ್ಕು=ಒಂಬತ್ತು ಗುಣಗಳೆನಿಸುವವು.

**ತಾತ್ಪರ್ಯ:-** ವಿಹಿತ ಕ್ರಿಯೆಗಳಿಂದ ಜನ್ಯವಾದದ್ದು ಧರ್ಮವು, ನಿಷಿದ್ಧ ಕ್ರಿಯೆಗಳಿಂದ ಜನ್ಯವಾದದ್ದು ಅಧರ್ಮವು, ಉತ್ಸಾಹ ರೂಪವೃತ್ತಿಯೇ ಪ್ರಯ ತ್ನವು, ಪ್ರಜ್ವಲನಾತ್ಮಕ ವೃತ್ತಿಯಿಂದ ಕೂಡಿದ ಕ್ರೋಧವೇ ದ್ವೇಷವು, ಪೂರ್ವ ದಲ್ಲಿ ಅನುಭವ ಮಾಡಿದ್ದರಿಂದ ಜನ್ಯವಾಗಿಯೂ, ಸ್ಮರಣಕ್ಕೆ ಹೇತುವಾಗಿರುವ ಸಂಸ್ಕಾರವೇ ಭಾವನಾಯೆನಿಸುವದು, ಯಾವದಾದರೊಂದನ್ನು ಪಡೆಯುವ ಇಚ್ಛೆಯೇ ರಾಗವು, ಅನುಕೂಲವಾಗಿ ತಿಳಿಯುವದೇ ಸುಖವು, ಪ್ರತಿಕೂಲವಾಗಿ ತಿಳಿಯುವದೇ ದುಃಖವು, ಸರ್ವವ್ಯವಹಾರಗಳಿಗೆ ಕಾರಣವಾಗಿರುವದೇ ಬುದ್ಧಿಯು ಇವು ಒಂಭತ್ತು ಗುಣಗಳೆಂದು ಹೇಳಿಸಿ ಕೊಳ್ಳಲ್ಪಡುತ್ತವೆ. ಈ ಒಂಭತ್ತು ಗುಣ ಗಳಿಂದ ಕೂಡಿದ ಗುಣಿಯಾದ ಅಹಂಕಾರವು ವೇದ್ಯ ವಾಗುವದರಿಂದ ಆತ್ಮವಲ್ಲ. ಎಂದು ತಿಳಿ.

**ಬಳಿಕ:-** ಮತ್ತು ಈ ಅಹಂಕಾರವು ಯಾವ ರೀತಿ ವೇದ್ಯವಾಗುವದೆಂದು ಕೇಳಿದರೆ! ವಿಶೇಷಣಗಳೊಡನೆ ಕೂಡಿ ವಿಶೇಷ್ಯರೂಪದಿಂದಲೂ ವೇದ್ಯವಾಗುತ್ತದೆಂದು ನಿರೂಪಣ ಮಾಡುತ್ತಾರೆ.

**ಶ್ರೋತಾಹಮೆಂಬಲ್ಲಿ ಧ್ಯಾತಾಹಮೆಂಬಲ್ಲಿ ।**
**ಮಾತೇನು ಹಮ್ಮು ತತ್ತದಿಂದ್ರಿಯದೊಡನೆ ।**
**ಶ್ವೇತೋತ್ಪಲದ ತೆರದಿ ವೇದ್ಯ ॥೧೩॥**

**ಟೀಕಾ:-** ಶ್ರೋತಾಹಮೆಂಬಲ್ಲಿ=ನಾನು ಕೇಳುತ್ತೇನೆ ಎನ್ನುವಲ್ಲಿ, ಧ್ಯಾತಾಹಮೆಂಬಲ್ಲಿ= ನಾನು ಧ್ಯಾನ ಮಾಡುತ್ತೇನೆ ಎಂಬಲ್ಲಿಯು, ಹಮ್ಮು=ಅಹಂಕಾರವು, ತತ್‌ತತ್=ಆಯಾಯ, ಇಂದ್ರಿಯದೊಡನೆ=ಇಂದ್ರಿಯದಿಂದ, ಶ್ವೇತ=ಶುಭ್ರವಾದ ಉತ್ಪಲದ=ಕಮಲದ, ತೆರದೆ=ರೀತಿಯಿಂದ, ವೇದ್ಯ = ಕಾಣಿಸಿಕೊಂಬುದು, ಮಾತೇನು=ಇನ್ನೇನು ಹೇಳತಕ್ಕದ್ದು.

**ತಾತ್ಪರ್ಯ:-** ನಾನು ಕೇಳುತ್ತೇನೆ ಎಂಬಲ್ಲಿ ಶ್ರವಣೇಂದ್ರಿಯದೊಡನೆ, ನಾನು ನೋಡುತ್ತೇನೆ ಎಂಬಲ್ಲಿ ನೇತ್ರ ಇಂದ್ರಿಯದೊಡನೆ, ಧ್ಯಾನಮಾಡುತ್ತೇನೆ ಎಂಬಲ್ಲಿ ಮನಸ್ಸಿನೊಡನೆ, ಕೂಡಿಕೊಂಡು ಈ ಅಹಂಕಾರವೇ ವೇದ್ಯವಾಗುತ್ತದೆ. ಹೇಗಂದರೆ, ಶ್ವೇತೋತ್ಪಲ ಎಂಬಲ್ಲಿ ಶ್ವೇತ ವಿಶೇಷಣದೊಡನೆ ವಿಶೇಷ್ಯವಾದ ಉತ್ಪಲವು ಗೋಚರಿಸಿದಂತೆ, ಶ್ರೋತಾ, ಧ್ಯಾತಾ, ದ್ರಷ್ಟಾರೂಪ ವಿಶೇಷಣಗಳೊಡನೆ ವಿಶೇಷ್ಯವಾದ ಅಹಂಕಾರವೇ ಕಾಣಿಸುತ್ತಿರುತ್ತದೆ. ಅಹಂಕಾರವು ದೃಶ್ಯ, ಜಡ ಎಂಬಲ್ಲಿ ಇನ್ನೇನು ಹೇಳತಕ್ಕದ್ದು ಅದೆ. ಎಂಬ ಭಾವವು.

ಬಳಿಕ, ಅಹಂಕಾರವು ವಿಶೇಷ್ಯರೂಪದಿಂದ ವೇದ್ಯವಾಗುತ್ತದ. ಅದರಿಂದ ಜಡವಾಗಿದೆಯೆಂದು ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ 'ಅಹಂ ಜಾನಾಮಿ' ನಾನು ತಿಳಿಯುತ್ತೇನೆ. ಹೀಗೆಂದು ಅಹಂಕಾರದಲ್ಲಿ ತಿಳಿಯುವತನವೂ, ಹಾಗು ದೃಕ್‌ರೂಪಾಗಿರುವದೂ ತೋರುತ್ತದೆ. ಆದ್ದರಿಂದ ಅಹಂಕಾರವು ಆತ್ಮರೂಪವಾಗಿದೆಯೆಂದು ಶಂಕೆಯನ್ನು ಮಾಡಿದರೆ, ಇದು ಸರಿಯಲ್ಲ. ಆ ಅಹಂಕಾರದಲ್ಲಿ ವೇದ್ಯವು ವೇದಕತ್ವವು ಎರಡೂ ಉಂಟೆಂದು ಹೇಳುತ್ತಾರೆ.

**ಸೂನು ತಿಳಿ ನೀನಹಂ ಜಾನಾಮಿಯೆಂಬುವಭಿ ।**
**ಮಾನಕ್ಕೆ ವೇದ್ಯ ವೇದಕತ್ವವನೆ ಯನು ।**
**ಮಾನಿಪುದು ತಪ್ತ ಜಲದಂತೆ ॥೧೪॥**

**ಟೀಕಾ:-** ಸೂನು ತಿಳಿ = ಎಲೈ ಮಗನೇ ! ನೀನರಿ, ಅಹಂ ಜಾನಾಮಿ = ನಾನು ತಿಳಿಯತ್ತೇನೆ, ಎಂಬುವ=ಅನ್ನುವ, ಅಭಿಮಾನಕ್ಕೆ=ಅಹಂಕಾರಕ್ಕೆ, ತಪ್ತ

ಜಲದಂತೆ=ಕಾದ ನೀರಿನ ಹಾಗೆ, ವೇದ್ಯ=ತಿಳಿಸಿಕೊಳ್ಳುವದು, ವೇದಕತ್ವವನೆ=ತಿಳಿಸಿಕೊಳ್ಳುವದನ್ನು, ನೀನು = ನೀನು, ಅನುಮಾನಿಪುದು = ಊಹೆಯನ್ನು ಮಾಡತಕ್ಕದ್ದು.

**ತಾತ್ಪರ್ಯ:-** ನೀರು ಬೆಂಕಿಯಿಂದ ಸುಡಿಸಿಕೊಂಡು ತಾನು ತನ್ನನ್ನು ಮುಟ್ಟಿದವರನ್ನು ಸುಡುತ್ತಿರುತ್ತದೆ. ಅಂದರೆ, ದಾಹ್ಯದಾಹಕವೂ ಆಗಿರುವಂತೆ, ಅಹಂ ಜಾನಾಮಿ ನಾನು ತಿಳಿಯುತ್ತೇನೆಂಬ ಅಹಂಕಾರವಾದರೂ, **ವೇದ್ಯ ವೇದಕತ್ವವಾಗಿದೆಯೆಂದು** ತಿಳಿ. ಅಂದರೆ, ಆತ್ಮನಿಂದ ತಾನು ತಿಳಿಸಿಕೊಂಡು, ತಾನು ಅನ್ಯದೇಹಾದಿಗಳನ್ನು ಅರಿಯುತ್ತದೆ. ಆದ್ದರಿಂದ ಉಭಯರೂಪವಾಗಿದೆ. ಅರುವಿನಿಂದರಿಸಿಕೊಳ್ಳುವದರಿಂದ ವೇದ್ಯವಾಗಿದೆ. ತಾನು ಅನ್ಯಗಳನ್ನರಿಯುವದರಿಂದ ವೇದಕತ್ವವಾಗಿದೆ. ದರ್ಪಣದ ಹಿಂಭಾಗವು ಅಪ್ರಕಾಶವಾಗಿದ್ದು ಮುಂಭಾಗವು ಪ್ರಕಾಶವಾಗಿರುವಂತೆ, ಈ ಹಂಕಾರವು ವೇದ್ಯವೇದಕತ್ವವುಳ್ಳದ್ದಾಗಿದೆ. ಎಂದು ತಿಳಿ.

ಬಳಿಕ, ಈ ಅಹಂಕಾರವು ವೇದ್ಯವೇದಕತ್ವವಾಗಿರುವುದು. ಆತ್ಮ ಮತ್ತು ಅನಾತ್ಮ ಜಡಚೇತನಾತ್ಮಕ ಉಭಯಸ್ವರೂಪವಾಗಿದೆಯೆಂದು ಹೇಳೋಣವಾಯಿತು. ಆದರೂ ಆಗಲಿ. ಈ ಅಹಂಕಾರವು ದೇಹದಲ್ಲಿ ಎಲ್ಲ ತತ್ವಗಳಿಗೂ ಮಿಗಿಲಾಗಿರುವದರಿಂದ ಇದಕ್ಕೆ ಆತ್ಮ ಎಂದು ತಾವು ಒಪ್ಪಬೇಕಾತ್ತದೆಂದು ಶಂಕೆಯನ್ನು ಮಾಡಿದರೆ, ಆತ್ಮನೆಂದು ಹೇಳುವದಕ್ಕೆ ಬರುವದಿಲ್ಲ. ಯಾಕಂದರೆ, ಇದು ಜಾಗ್ರತ್ಸ್ವಪ್ನಂಗಳಲ್ಲಿ ತೋರಿ ಸುಪ್ತಿಯಲ್ಲಿ **ಅಡಗುತ್ತದೆ.** ಅಂದರೆ, ಅಭಾವರೂಪದಿಂದ ಅರಿಸಿಕೊಳ್ಳುತ್ತದೆ. ಆದ್ದರಿಂದ ಇದು **ಆತ್ಮವಲ್ಲ** ಎಂದು ಹೇಳುತ್ತಾರೆ.

**ಜಡವಜಡವಿಂತು ತನ್ನೊಡಲಾಗಿ ಜಾಗ್ರಾದಿ ।**
**ಯೊಡನೆಯಹನೆಂದು ತೋರಿ ಸುಪ್ತಿಯೊಳಹಮಿ ।**
**ದಡಗಿ ದೃಶ್ಯತ್ವವಹುದೈಸೆ ॥೧೫॥**

**ಟೀಕಾ:-** ಜಡವಜಡವು=ಜ್ಞಾನಾಜ್ಞಾನರೂಪಾಗಿರುವದು, ಇಂತು=ಈರೀತಿ ತನ್ನೊಡಲಾಗಿ=ತನ್ನ ಸ್ವರೂಪವಾಗಿ, ಜಾಗ್ರಾದಿಯೊಡನೆ=ಜಾಗ್ರಾಸ್ವಪ್ನಂಗಳಲ್ಲಿ ಅಹಮೆಂದುತೋರಿ=ನಾನು ಎಂದು ತೋರುತ್ತ, ಸುಪ್ತಿಯೊಳು=ನಿದ್ರೆಯಲ್ಲಿ, ಅಹಮಿದು = ಅಹಂಕಾರವಿದು, ಅಡಗಿ=ಲೀನವಾಗಿ, ದೃಶ್ಯತ್ವವಹುದೈಸೆ=ಹೀಗೆ ಅರಿಸಿಕೊಳ್ಳುತ್ತಿರುವದು.

**ತಾತ್ಪರ್ಯ:-** ಅಹಂಕಾರವು ಜಡಾಜಡರೂಪವಾಗಿ ಜಾಗ್ರತ್ಸ್ವಪ್ನಗಳಲ್ಲಿ ವ್ಯವಹರಿಸುತ್ತದೆ. ನಿದ್ರೆಯಲ್ಲಿ ತನಗೆ ಕಾರಣವಾದ ಅವಿದ್ಯೆಯಲ್ಲಿ **ಅಡಗುತ್ತದೆ.**

ಅಂದರೆ ಜಾಗ್ರಸ್ವಪ್ನಂಗಳಲ್ಲಿ ಭಾವವಾಗಿಯೂ, ನಿದ್ರೆಯಲ್ಲಿ ಅಭಾವವಾಗಿಯೂ ಇರುತ್ತದೆ. ಘಟವು ಭೂತಳದಲ್ಲಿ ಭಾವಾಭಾವರೂಪದಿಂದ ಅರಿಸಿಕೊಳ್ಳುವಂತೆ, ಅಹಂಕಾರವು ಭಾವಾಭಾವರೂಪವಾಗಿ ಅರಿಸಿಕೊಳ್ಳುತ್ತದೆ. ಆದ್ದರಿಂದ ಆತ್ಮ ಸ್ವರೂಪವೆಂದು ಹೇಳಲಿಕ್ಕೆ ಬರುವದಿಲ್ಲ.

ಬಳಿಕ, ಅಹಂಕಾರವು ಜಡಾಜಡರೂಪದಿಂದಲೂ, ದೃಶ್ಯದೃಕ್‌ರೂಪದಿಂದಲೂ ಅರಿಸಿಕೊಳ್ಳುತ್ತಾ ಉತ್ಪತ್ತಿನಾಶಗಳಿಂದ ಕೂಡಿರುವಕಾರಣ ಇದು **ಆತ್ಮ ವಲ್ಲೆಂದು** ಹೇಳುತ್ತಾರೆ.

**ಇಂತುದಿಸಿ ಯಡಗುತಿಹುದಂತಾಗಿ ಯಾತ್ಮನೆಂ |**
**ದೆಂತೊರೆಯ ಬರ್ಪುದಹಮನೀ ಪರಿಯೊಳರಿ |**
**ಸಂತ ನೀನೀ ಕ್ರಮವನಿಲ್ಲಿ ||೧೬||**

**ಟೀಕಾ:-** ಇಂತು=ಈ ಪ್ರಕಾರ, ಉದಿಸಿ=ಉತ್ಪನ್ನವಾಗಿ, ಅಡಗುತಿಹು ದಂತಾಗಿ=ಲಯುವಾಗುವದರಿಂದ, ಅಹಮನು=ಅಹಂಕಾರವನ್ನು, ಆತ್ಮನೆಂದು= ಆತ್ಮಸ್ವರೂಪವೆಂದು, ಎಂತು=ಹೇಗೆ, ಒರೆಯಬರ್ಪುದು=ಹೇಳಲಿಕ್ಕೆ ಬರುವದು, ಸಂತ=ಎಲೈ ಸಜ್ಜನನೇ!, ನೀನು=ನೀನು, ಇಲ್ಲಿ=ಇದರಲ್ಲಿ, ಈ ಕ್ರಮವನು= ಈ ರೀತಿಯನ್ನು, ಈ ಪರಿಯೊಳು=ಈ ವಿಧದಿಂದ, ಅರಿ=ತಿಳಿ.

**ತಾತ್ಪರ್ಯ:-** ಹೇ ಶಿಷ್ಯನೇ! ಕೇಳು. ಅಹಂಕಾರವು ಜಾಗ್ರ ತ್ಸ್ವಪ್ನಂಗಳಲ್ಲಿ ಉತ್ಪತ್ತಿಯಾಗಿ, ನಿದ್ರೆಯಲ್ಲಿ ಅಡಗಿ ಇಲ್ಲದಂತಾಗುತ್ತದೆ. ಈ ವಿಧವಾಗಿ ತೋರುವ ಅಹಂಕಾರಕ್ಕೆ ಆತ್ಮನೆಂದು ಹೇಗೆ ಹೇಳಲಿಕ್ಕೆ ಬರುತ್ತದೆ. ನೀನೇಹೇಳು. ಭಾವಾಭಾವರೂಪವಾದ ಅಹಂಕಾರಕ್ಕೆ ಆತ್ಮನೆಂದು ಹೇಳುವದು ಅನುಚಿತವಾಗಿರುತ್ತದೆಂಬ ಭಾವವು.

ಬಳಿಕ, ಸಂಧಿ, ಸೂತ್ರ, ಪದಗಳ ಸಂಖ್ಯೆಯನ್ನು ಹೇಳುತ್ತಾ ಈ ನಾಲ್ಕ ನೆಯ ಸಂಧಿಯನ್ನು ಸಮಾಪ್ತಮಾಡುತ್ತಾರೆ.

**ಉತ್ತಮರು ಮೆಚ್ಚುವೈವತ್ತೆಂಟು ಪದದೊಡನೆ |**
**ಬಿತ್ತರಂ ಬಡೆದ ಸೂತ್ರಂ ಗಳೈದು ರಚಿ |**
**ಸಿತ್ತು ನಾಲ್ಕನೆಯುದಿದು ಸಂಧಿ ||೧೭||**

**ಟೀಕಾ:-** ಉತ್ತಮರು=ಸಜ್ಜನರು, ಮೆಚ್ಚುವ=ಒಪ್ಪುವ, ಐವತ್ತೆಂಟು ಪದದೊಡನೆ=ಐವತ್ತೆಂಟು ಪದಗಳಿಂದ, ಬಿತ್ತರಂಬಡೆದ=ವಿಸ್ತಾರವನ್ನು

ಹೊಂದಿದ, ಸೂತ್ರಂಗಳ್=ಸೂತ್ರಗಳು, ಐದು=ಐದು, ಇದು ನಾಲ್ಕನೆಯ ಸಂಧಿ= ಇದು ನಾಲ್ಕನೆಯ ಸಂಧಿಯು, ರಚಿಸಿತ್ತು=ಮಾಡಲ್ಪಟ್ಟಿತು.

ತಾತ್ಪರ್ಯ:- ಬಲ್ಲವರು ಮೆಚ್ಚುವಂಥಾ ಐವತ್ತೆಂಟು ಪದ್ಯಗಳಿಂದ ಐದು ಸೂತ್ರಗಳು ನಿರ್ಮಾಣವಾಗಿವೆ. ಆ ಐದು ಸೂತ್ರಗಳಿಂದ ಕೂಡಿ ಈ ನಾಲ್ಕನೇ ಸಂಧಿಯು ರಚಿಸಲ್ಪಟ್ಟಿರುತ್ತದೆ.

**ಅಹಂಕಾರಕ್ಕನಾತ್ಮತ್ವ ನಿರೂಪಣೆ ಸೂತ್ರ ೫ ಕ್ಕೆ ತ್ರಿವಿದಿ ೫೮**

**ಅಂತು ಸಂಧಿ ೪ ಕ್ಕಂ ಸೂತ್ರ ೨೫ ಕ್ಕಂ ತ್ರಿ॥ ೨೯೦**
**ಮಂಗಳಮಸ್ತು**





ಶ್ರೀ ಶಂಭುಲಿಂಗಾಯನಮಃ

# ಅನುಭವಸಾರ

## ಐದನೆಯ ಸಂಧಿ

ಓಲೆಕ, ಐದನೆಯ ಸಂಧಿಯ ಆರಂಭದಲ್ಲಿ, ಮೊದಲು ಹೇಳಿದ ಸಂಧಿಗಳ ಅರ್ಥವನ್ನು ಸಂಕ್ಷೇಪವಾಗಿ **ಅನುವಾದ** ಮಾಡಿ, ಈಗ ಹೇಳುವ ಸಂಧಿಯ ವಿಷಯಕ್ಕೆ **ಸಂಬಂಧವನ್ನು** ತೋರಿಸುತ್ತೇವೆ.

ಮೊದಲನೆಯ ಸಂಧಿಯಲ್ಲಿ, ಚಿತ್ತಿನ ವಿವರ್ತವಾದ ಜಗತ್ತು ಚಿದ್ರೂಪ ಬ್ರಹ್ಮವೇ ಆಗಿದೆಯೆಂದು ಹೇಳಲ್ಪಟ್ಟಿತು. ಎರಡನೆಯ ಸಂಧಿಯಲ್ಲಿ, ಈಶ, ಜೀವ, ಜಗದಾದಿಗಳ ಸ್ವರೂಪವನ್ನು ಹೇಳಿ, **ತಾನೆಂದು ತಿಳಿದವನು** ಉತ್ತಮಾಧಿಕಾರಿ ಯೆಂದು ನಿರೂಪಣ ಮಾಡಿತು. ಮೂರನೇ ಸಂಧಿಯಲ್ಲಿ, ಜೀವೇಶ್ವರ ಭೇದವಾಗಲಿ, ಜೀವ ಜೀವರ ಭೇದವಾಗಲಿ, ಕಲ್ಪಿತವಾಗಿರುತ್ತದೆ. ಸತ್ಯವಲ್ಲವೆಂದು ಶ್ರುತಿ ಯುಕ್ತಿಗಳ ಮೂಲಕ **ಭೇದವು** ನಿರಾಕರಿಸಲ್ಪಟ್ಟಿತು. ನಾಲ್ಕನೇ ಸಂಧಿಯಲ್ಲಿ, ಎಲ್ಲವೂ ಬ್ರಹ್ಮವಾದ ಮೇಲೆ ದೇಹಾದಿಗಳೂ ಬ್ರಹ್ಮವಾಗಬೇಕಾಯಿತು. ಹೀಗಾದರೆ ವೇದಾಂತ ಮತವು ಚಾರ್ವಾಕಮತವಾಯಿತು. ಎಂಬದಾಗಿ ಸಂಶಯ ಬಂದಿತು. ಅದಕ್ಕಾಗಿ ಕಾಣಿಸಿಕೊಳ್ಳುವದು ಬ್ರಹ್ಮವಾಗದೆಂದು ನೇತ್ಯಾತ್ಮಕ ಉಪದೇಶವನ್ನು ಹೇಳುತ್ತಾ, ಅನ್ನಮಯಕೋಶ ಮೊದಲು ವಿಜ್ಞಾನಮಯಕೋಶ ಪರ್ಯಂತರ **ಅನಾತ್ಮತ್ವವನ್ನು** ಪ್ರತಿಪಾದಿಸಿದರು. ಈಗ ಐದನೆಯ ಸಂಧಿಯಲ್ಲಾದ್ಯರೂ, ಉಳಿದ ಆನಂದಮಯಕೋಶವಾದರೂ ತೋರಿ ಅಡಗುತ್ತ ಅರಿಸಿಕೊಳ್ಳುವದರಿಂದ ಆತ್ಮಸ್ವರೂಪವಲ್ಲ. ಕಿಂತು, ಅನಾತ್ಮರೂಪವೇ ಆಗಿರುತ್ತದೆ. ಎಂದು ವಿಸ್ತಾರವಾಗಿ ವರ್ಣನ ಮಾಡುತ್ತಾರೆ. ಮತ್ತು ವಿಜ್ಞಾನಮಯ ಕೋಶದಲ್ಲಿ ಅಂತಃಪಾತಿಯಾದ ಅಹಂಕಾರವು ಸುಷ್ಟಿಯ ಆನಂದಮಯ

ಕೋಶದಲ್ಲಿ ಅಡಗುತ್ತದೆ. ಆಗ್ಯೆ ಆತ್ಮನು ಆ ಅಹಂಕಾರದ ಅಭಾವವನ್ನು ಅರಿಯುತ್ತಾನೆ. ಎಂಬುದನ್ನು ಶ್ರುತಿ ಯುಕ್ತಿ ಸ್ವಾನುಭವಗಳಿಂದ ಸಿದ್ಧಮಾಡಿ ತೋರಿಸುತ್ತಾರೆ. ಮತ್ತು ನಿದ್ರೆಯಲ್ಲಿ ಆತ್ಮನು ಅರಿಯುವದಿಲ್ಲ. ಪಾಷಾಣಪ್ರಾಯ ಜಡನಾಗಿರುತ್ತಾನೆಂಬ **ನೈಯಾಯಿಕ** ಮತವು ಅಸಂಗತವಾಗಿದೆಯೆಂಬುದನ್ನು ಚನ್ನಾಗಿ ಹೇಳುತ್ತಾರೆ. ಆನಂದಮಯ ಕೋಶವು ಕ್ಷಣಿಕವಾಗಿ ಅರಿಸಿಕೊಳ್ಳುತ್ತದೆ. ಅದನ್ನರಿಯುವ ಆತ್ಮನು ನಿತ್ಯನಾಗಿ ಬೇರೆಯಾಗಿ ತಾನೇ ಯಿರುವನೆಂಬುದನ್ನು ಹೇಳುತ್ತಾರೆ.

ಆದ್ದರಿಂದ ನಿದ್ರೆಯಲ್ಲಿ ಅಹಂಕಾರದ ಅಭಾವವು ಹೇಗೆ ಅರಿಸಿಕೊಂಡಿತು? ಯಾಕಂದರೆ ನಿದ್ರೆಯಲ್ಲಿ ಅರುವಿಲ್ಲ. ಏಕೆ ಇಲ್ಲ ಅಂದರೆ? ಆತ್ಮ ಮನಸ್ಸುಗಳ ಸಂಯೋಗವಿಲ್ಲ. ಆದ್ದರಿಂದ ಅರುವಿಲ್ಲ. ಅರುವೇ ಇಲ್ಲದಮೇಲೆ; ಅಹಂಕಾರದ ಅಭಾವವು ಹೇಗೆ ಅರಿಸಿಕೊಳ್ಳುತ್ತದೆ? ಎಂಬದಾಗಿ ನೈಯಾಯಿಕ ಮತರೀತ್ಯಾ **ಶಂಕೆಯನ್ನು** ಉತ್ಥಾಪನಮಾಡಿ, ಮುಂದೆ ಉತ್ತರವನ್ನು ಹೇಳುತ್ತಾರೆ.

ಸೂತ್ರ|| **ಅಹಮಿಗಿಲ್ಲವೆ ನಿದ್ರೆಯೊಳಗರುಹಿಕೊಂಬುದೆಂ |**
**ತಹುದರಿವು ಸಂದಿಲ್ಲದಿರ್ಪುದಾಗಿ**

**ಟೀಕಾ:-** ಅಹಮಿಗಿಲ್ಲವೆ=ಅಹಂಕಾರವಿಲ್ಲವೆಂಬ ಅಭಾವವು, ನಿದ್ರೆಯೊಳಗೆ= ಸುಪ್ತಿಯಲ್ಲಿ, ಅರುಹಿಕೊಂಬುದು=ತಿಳಿಸಿಕೊಳ್ಳುವದು, ಅರಿವು=ತಿಳಿಯುವದು, ಎಂತು=ಹೇಗೆ, ಅಹುದು=ಆಗುವದು (ಯಾಕಂದರೆ?) ಸಂದು=ಆತ್ಮ ಮತ್ತು ಮನಸ್ಸು, ಇವುಗಳ ಸಂಯೋಗವು, ಇಲ್ಲದಿರ್ಪುದಾಗಿ=ಇಲ್ಲದಿರುವದರಿಂದ,

**ತಾತ್ಪರ್ಯ:-** ಜಾಗ್ರತ್ಸ್ವಪ್ನಗಳಲ್ಲಿ ಆತ್ಮಮನಸ್ಸುಗಳ ಸಂಯೋಗ ವಿರುತ್ತದೆ. ಅದರಿಂದ ಜ್ಞಾನವಿರುತ್ತದೆ. ನಿದ್ರೆಯಲ್ಲಿ ಸಂಯೋಗವಿಲ್ಲದ್ದರಿಂದ ಅರುವಿಲ್ಲ. ಆತ್ಮನಿದ್ದರೂ **ಜಡವಾಗಿರುತ್ತಾನೆ.** ಆದ್ದರಿಂದ ನಿದ್ರೆಯಿಂದ ಎಚ್ಚತ್ತ ನಂತರ ನಾನು ನಿದ್ರೆಯಲ್ಲಿ ಏನೂ ತಿಳಿಯಲಿಲ್ಲ ಎಂಬ ತನ್ನ **ಅನುಭವವನ್ನು** ಹೇಳುತ್ತಾನೆ. ಅದರಿಂದ ನಿದ್ರೆಯಲ್ಲಿ ಜ್ಞಾನವಿಲ್ಲ. ಜ್ಞಾನವಿಲ್ಲದ ಮೇಲೆ; ಅಹಂಕಾರದ ಅಭಾವವು ತಿಳಿಸಿಕೊಳ್ಳುವದು ಹೇಗೆ ಎಂಬದಾಗಿ ಶಿಷ್ಯನು ಪ್ರಶ್ನೆಯನ್ನು ಮಾಡಿದ್ದಾನೆ. ಈ ರೀತಿ ನೈಯಾಯಿಕರು ಹೇಳುತ್ತಾರೆ. ಅದೃಷ್ಟ**ವಶಾತ್** ಜಾಗ್ರತ್ಸ್ವಪ್ನಗಳಲ್ಲಿ ಆತ್ಮಮನಸ್ಸುಗಳ ಸಂಯೋಗವಾಗುವದು. ಆಗ್ಯೆ **ಈ ಜ್ಞಾನ ಗುಣವು** ಜನಿಸುತ್ತದೆ. ಬಳಿಕ ಮನಸ್ಸು ಇಂದ್ರಿಯಗಳಿಗೆ ಸಂಬಂಧ**ವಾಗುವದು.** ಅನಂತರ ಇಂದ್ರಿಯ ವಿಷಯಗಳಿಗೆ ಸಂಯೋಗ ಸಂಬಂಧವಾಗುವದು. ಆಮೇಲೆ ಸಂಯುಕ್ತ ಸಮವಾಯ ಸಂಬಂಧ, ಸಂಯುಕ್ತ ಸಮವೇತ

ಸಮವಾಯ ಸಂಬಂಧಗಳಾಗುವವು. "ಘಟಕ್ಕೂ ನೇತ್ರಕ್ಕು **ಸಂಯೋಗ** ಸಂಬಂಧವು, ಘಟದಲ್ಲಿ ರೂಪವು ನಿತ್ಯ ಸಂಬಂಧವಾದ್ದರಿಂದ ಅದರ ಜ್ಞಾನವು **ಸಂಯುಕ್ತ ಸಮವಾಯ ಸಂಬಂಧವೆನಿಸುವದು.** ಘಟತ್ವರೂಪತ್ವ ಜಾತಿಗಳ ಜ್ಞಾನವು **ಸಮವೇತ ಸಮವಾಯ ಸಂಬಂಧವೆನಿಸುವದು.,,** ಹೀಗೆ ಘಟ, ಅದರ ರೂಪು, ರೂಪತ್ವ ಜಾತಿಗಳ ಜ್ಞಾನಗಳಾಗುತ್ತವೆಂದು ಹೇಳುವರು. ಬಳಿಕ ನಿದ್ರೆಯಲ್ಲಿ ಅದೃಷ್ಟ ಕ್ಷಯವಾದ್ದರಿಂದ ಆತ್ಮ ಮನಸ್ಸುಗಳ ಸಂಯೋಗವು ವಿಯೋಗವಾಗುತ್ತದೆ. ಅದರಿಂದ ಜ್ಞಾನಗುಣವು ನಾಶವಾಗುತ್ತದೆ. ಅದರಿಂದ ಯಾವ ಜ್ಞಾನವು ಆಗುವದಿಲ್ಲ. ಜ್ಞಾನವಿಲ್ಲದ್ದರಿಂದ ಅಭಾವವು ಹೇಗೆ ಅರಿಸಿಕೊಳ್ಳುವದು? ಎಂಬದಾಗಿ ನ್ಯಾಯಮತಾನುಸಾರವಾಗಿ ಪ್ರಶ್ನೆಯಿರುತ್ತದೆ.

**ಬಳಿಕ,** ಸಂಧಿಯ ಆರಂಭದಲ್ಲಿ ಗ್ರಂಥಕರ್ತರು ತಮ್ಮ ಇಷ್ಟ ದೇವತೆಯಾದ ಶಂಭುವಿನನ್ನು ಕುರಿತು. ನಮಸ್ಕಾರ ರೂಪ ಮಂಗಲವನ್ನು ಮಾಡುತ್ತಾರೆ.

ತ್ರಿವಿದಿ॥ **ಅಳಿಯದುಳಿಯದ ಮರವೆ ದಳೆಯದೆಚ್ಚರದ ಕಳ।**
**ವಳಿಸದರಿವರಿವೆ ನಿಜವಾದ ಶಂಭುಪದ।**
**ನಳಿನವಂ ಕೂರ್ತು ನತನಪ್ಪೇ** ॥೧॥

**ಟೀಕಾ:-** ಅಳಿಯದ=ಅಸದ್ವಿಲಕ್ಷಣವಾದ, ಉಳಿಯದ=ಸದ್ವಿಲಕ್ಷಣವಾದ, ಮರವೆ=ಅಜ್ಞಾನವನ್ನು, ದಳೆಯದ=ಹೊಂದದಿರುವಂಥಾ, ಎಚ್ಚರದ=ಜಾಗ್ರದವಸ್ಥೆಯ, ಕಳವಳಿಸದ=ಸುಖರೂಪ ಸುಪ್ತಿಯ, ಅರಿವ=ತಿಳಿಯುವ ವಿಶ್ವಪ್ರಾಜ್ಞ ಜೀವರನ್ನು, ಅರಿವೆ=ಸಾಕ್ಷಿಯಾಗಿ ಪ್ರಕಾಶಮಾಡುವಂಥಾ, ನಿಜವಾದ=ಸತ್ಯವಾದ, ಶಂಭುಪದ ನಳಿನವಂ=ಶಂಭುಲಿಂಗನ ಕಮಲಸದೃಶಗಳಾದ ಪಾದಗಳನ್ನು, ಕೂರ್ತು=ಕುರಿತು, ನತನು=ನಮಸ್ಕಾರಮಾಡುವಾತನು, ಅಪ್ಪೆ=ಆಗುತ್ತೇನೆ.

**ತಾತ್ಪರ್ಯ:-** ಈ ಸಂಧಿಯ ಸುಪ್ತಿವಿಚಾರದಲ್ಲಿ ಜ್ಞಾನ ಮತ್ತು ಅಜ್ಞಾನ ಇವೆರಡರ ಸದ್ಭಾವವನ್ನು ನಿರೂಪಣಮಾಡುವರು. ಈ ಸಂಧಿಯ ವಿಷಯವನ್ನೇ ಸ್ವೀಕಾರಮಾಡಿಕೊಂಡು ಶಂಭುವಿನ ಮಂಗಲವನ್ನು ಮಾಡಿದ್ದಾರೆ. ಜ್ಞಾನಾಜ್ಞಾನಗಳೆರಡಕ್ಕೂ ಸಾಕ್ಷಿಯಾದ ಚೈತನ್ಯವೇ **ಶಂಭುವಿನ ಸ್ವರೂಪವಾಗಿರುವದು.** ಎಂಬ ಭಾವವು ಹೇಗಂದರೆ, ಶಂಭು ಮರವೆಯಿಂದ ಬೆರೆಯದವನೂ, ಅರುವಿಗೆ ಅರುವಾದವನೂ, ಆಗಿರುವನು. ಅಂದರೆ, ಅರುಮರುಗಳಿಗೆ **ಸಾಕ್ಷಿಯೆಂದು** ಹೇಳಿದಂತಾಯಿತು. ಆ ಮರವೆಯು ಅನಿರ್ವಚನೀಯವಾದದ್ದೆಂದು ಹೇಳುತ್ತಾರೆ. ಇಲ್ಲದ್ದು ಅಳಿಯುವದು. ಇದ್ದದ್ದು ಉಳಿಯುವದು, ಈ ಮರವೆ ಇಲ್ಲದ್ದೂ ಅಲ್ಲ. ಇದ್ದದ್ದೂ ಅಲ್ಲ. ಇದ್ದಿಲ್ಲದ್ದೂ ಅಲ್ಲ, ಕಿಂತು, ಸದಸದ್ವಿಲಕ್ಷಣ ಅನಿರ್ವಚನೀಯ

ವಾದ ಮರವೆಯೆಂದು ಹೇಳಿದಂತಾಯಿತು. ಇಂಥಾ ಮರವೆಯಿಂದ ಶಂಭು ಬೆರೆಯದವನಾಗಿದ್ದಾನೆ.

ಮತ್ತು 'ಎಚ್ಚರದ ಅರವು, ಅಂದರೆ ಜಾಗ್ರದವಸ್ಥೆಯನ್ನು ಅರಿಯುವ ವಿಶ್ವ ಜೀವನು, ಕಳವಳಿಸದ ಅರವು, ಏನೊಂದು ಚಿಂತೆ ದುಃಖಗಳಿಂದ ರಹಿತವಾದದ್ದು ನಿದ್ರೆಯು ಆಗಿರುವದು. ಅಂಥಾ ನಿದ್ರೆಯನ್ನು ಅರಿಯುವವನು ಪ್ರಾಜ್ಞಜೀವನು, ಮಧ್ಯದಲ್ಲಿರುವ ಸ್ವಪ್ನಾವಸ್ಥೆಯು ತೈಜಸ ಜೀವನನ್ನು ಇಲ್ಲಿ ಗ್ರಹಿಸಬೇಕು. ಅರ್ಥಾತ್ ಜಾಗ್ರತ್, ಸ್ವಪ್ನ, ಸುಪ್ತಿಗಳೆಂಬ ಅವಸ್ಥೆಗಳನ್ನರಿಯುವ ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವರನ್ನು ಬೆಳಗುವಂಥಾ ಪ್ರತ್ಯಗಾತ್ಮ ಸಾಕ್ಷಿಯಾಗಿರುವನೆಂಬ ಭಾವವು. ಶಂಭು ಮರವೆಯನ್ನು ಹೊದ್ದದವನೂ ಅರುವನ್ನು ಅರಿಯುವವನೂ ಆಗಿರುವನು. ಅಂದರೆ, ಸ್ವಯಂಪ್ರಕಾಶ ರೂಪ ಸಾಕ್ಷಿ ಚೈತನ್ಯವೇ ನಿಜವಾದ **ಶಂಭುಲಿಂಗವಾಗಿರುವನು.** ಅವನ ಪಾದಗಳನ್ನು ಕುರಿತು ನಮಸ್ಕಾರ ಮಾಡುತ್ತೇನೆ. ಹೀಗನ್ನುವದರಿಂದ, ಆ ಸಾಕ್ಷಿ ಶಂಭು ತನಗೆ ಅನ್ಯವಲ್ಲ. ಕಿಂತು ಸರ್ವದಾ ಅಭೇದ ವಿರುವನೆಂಬ ನಿಶ್ಚಯ ಜ್ಞಾನವೇ **ನಮಸ್ಕಾರ** ವಾಗಿರುತ್ತದೆ. ಈ ರೀತಿ ಗ್ರಂಥಕರ್ತರು ಶಂಭುವಿನ ಮಂಗಳವನ್ನು ಮಾಡಿರುವರು.

ಬಳಿಕ, ಶಿಷ್ಯನು ಶ್ರೀಗುರುವಿನನ್ನು ಸ್ತುತಿಸುತ್ತಾ ತನ್ನ ಪ್ರಶ್ನೆಯನ್ನು ಗುರುವಿಗೆ ತಿಳಿಸುತ್ತಾನೆ.

**ಅಜ್ಞಾನ ನಿರ್ಹರಣ ಸುಜ್ಞಾನ ಸುಖಕರಣ ।**
**ತಜ್ಞ ನತಚರಣ ಗುರುವರ್ಯ ನೀವೆನ್ನ ।**
**ವಿಜ್ಞಾಪನವನೊಲಿದು ಕೇಳು** ॥೨॥

**ಟೀಕಾ:-** ಅಜ್ಞಾನ = ನಾನು ಆರೆಂದು ತಿಳಿಯದಿರುವ ಮರವೆಯನ್ನು, ನಿರ್ಹರಣ=ಅತ್ಯಂತವಾಗಿ ನಾಶ ಮಾಡುವಂಥಾ, ಸುಜ್ಞಾನ=ನಾನೇ ಬ್ರಹ್ಮನೆಂಬ ಅಪರೋಕ್ಷಜ್ಞಾನವನ್ನು, ಸುಖ=ನಿರತಿಶಯವಾದ ಜೀವನ್ಮುಕ್ತಿ ವಿಲಕ್ಷಣಾನಂದವನ್ನು, ಕರಣ=ಉಂಟು ಮಾಡುವಂಥಾ, ತಜ್ಞನತಚರಣ=ಪರೋಕ್ಷಜ್ಞಾನವುಳ್ಳ ಮುಮುಕ್ಷುಗಳಿಂದ ನಮಸ್ಕಾರ ಮಾಡಲ್ಪಟ್ಟ ಪಾದಗಳುಳ್ಳಂಥಾ, ಗುರುವರ್ಯ= ಗುರೂತ್ತಮರೇ !, ನೀವು=ತಾವುಗಳು, ಎನ್ನ=ನನ್ನ, ವಿಜ್ಞಾಪನವನು=ಪ್ರಶ್ನೆಯನ್ನು, ಒಲಿದು=ಪ್ರೀತಿಯಿಂದ, ಕೇಳು=ಆಲಿಸತಕ್ಕದ್ದು.

**ತಾತ್ಪರ್ಯ:-** ಹೇ ಗುರುವರ್ಯ! ತಾವು ಅಸಾಧಾರಣ ಸಾಮರ್ಥ್ಯವುಳ್ಳವರು ಇರುವಿರಿ. ಯಾಕಂದರೆ? ಜನನ ಮರಣ ರೂಪ ಸಂಸಾರಕ್ಕೆ ಕಾರಣವಾದ, ದುಃಖಮಯವಾದ ಮರವೆಯನ್ನು ಅತ್ಯಂತ ನಾಶಮಾಡಿ, ನಿರತಿಶಯಾ

ನಂದರೂಪ ಮೋಕ್ಷವನ್ನುಂಟು ಮಾಡುವಂತೆ; ಯಾರೂ ಮಾಡರು. ಅರ್ಥಾತ್ ಪರಮ ಪುರುಷಾರ್ಥರೂಪ ಪ್ರಯೋಜನ ಮೋಕ್ಷವನ್ನು ಕೊಡುವಿ. ಎಂಬ ಭಾವವು. ಆದ್ದರಿಂದಲೇ ನಿನ್ನನ್ನು ಕುರಿತು ಮುಮುಕ್ಷುಗಳು ಶರಣಾಗತರಾಗುತ್ತಾರೆ. ಆಪ್ತ ವಚನೋಪದೇಶದಿಂದ ನಾನು ದಶಮನೆಂಬ ಅಪರೋಕ್ಷ ಜ್ಞಾನವಾದಂತೆ, ನಿನ್ನ ಮಹಾವಾಕ್ಯೋಪದೇಶದಿಂದಲೇ ಅಹಂಬ್ರಹ್ಮಾಸ್ಮಿಯೆಂಬ ಅಪರೋಕ್ಷ ಜ್ಞಾನವಾಗುತ್ತದೆ. ಈ ನಿನ್ನ ಕೃಪೆಯಿಂದ ಜನಿತವಾದ ಅಪರೋಕ್ಷ ಜ್ಞಾನದಿಂದ; ದುಃಖರೂಪ ಮರವೆಯ ನಿವೃತ್ತಿಯೂ, ಪರಮಾನಂದ ಪ್ರಾಪ್ತಿಯೂ ಆಗುತ್ತದೆ. ಆದ್ದರಿಂದಲೇ "ನಗುರೋರಧಿಕಂ" ಗುರುವಿಂದ ಅಧಿಕರು ಯಾರೂ ಇಲ್ಲವೆಂದು ಶ್ರುತಿಯು ಸಾರುತ್ತದೆ. ತಾವು ನನ್ನ ಪ್ರಶ್ನೆಯನ್ನು ಚನ್ನಾಗಿ ಆಲಿಸಿ ಅದಕ್ಕೆ ಸರಿಯಾದ ಉತ್ತರವನ್ನು ಹೇಳಬೇಕೆಂದು ಕೋರುತ್ತಲಿದ್ದೇನೆ.

**ಬಳಿಕ,** ನಿದ್ರೆಯಲ್ಲಿ ಅಹಂಕಾರವಿಲ್ಲೆಂದು ಹೇಳಿದರೆ, ಆ ಇಲ್ಲದತನದ ಅಭಾವವನ್ನು ಅರಿಯುವ ಅರುವು ಇರಬೇಕಾಗುತ್ತದೆ. ಅದು ಅರುವು ಸಂಯೋಗವಿಲ್ಲದ್ದರಿಂದ ಇಲ್ಲ. ಅಂದಮೇಲೆ ಆ ಹಮ್ಮಿನ ಅಭಾವವು ಹೇಗೆ ಅರಿಸಿಕೊಂಡಿತು? ಎಂದು ಪ್ರಶ್ನೆ ಮಾಡುತ್ತಾನೆ.

**ಅಹಮು ನಿದ್ರೆಯೊಳಿಲ್ಲದಿಹರೂಪಿನಿಂ ದೃಶ್ಯ ।**
**ವಹುದೆಂದೊಡರಿವು ತಿಹುದೊಂದು ಬೇಕದೆಂ ।**
**ತಹುದು ಪೇಳೆನೆಗೆ ನಿಜವಾಗಿ ॥೩॥**

**ಟೀಕಾ** - ಅಹಮು=ಅಹಂಕಾರವು, ನಿದ್ರೆಯೊಳು=ಸುಪ್ತಿಯಲ್ಲಿ, ಇಲ್ಲದಿಹ ರೂಪಿನಿಂ=ಅಭಾವರೂಪದಿಂದ, ದೃಶ್ಯವಹುದು=ತೋರುತ್ತಿರುವದು, ಎಂದೊಡೆ= ಹೀಗೆ ಹೇಳಿದರೆ, ಅರಿವುತಿಹುದೊಂದುಬೇಕು=ತಿಳಿಯುವದೊಂದು ಬೇಕಾಗುತ್ತದೆ, ಅದೆಂತಹುದು=ಅದು ಹೇಗೆ ಆಗುವದು ? ನಿಜವಾಗಿ=ಸತ್ಯವಾಗಿ, ಎನಗೆ ಪೇಳು=ನನಗೆ ಹೇಳು.

**ತಾತ್ಪರ್ಯ:-** ಅಹಂಕಾರವು ಜಾಗ್ರತ್, ಮತ್ತು ಸ್ವಪ್ನ ಇವುಗಳಲ್ಲಿ ಸಂಚರಿಸಿ ನಿದ್ರೆಯಲ್ಲಿ ಅಡುಗುತ್ತದೆ. ಆಗ್ಯೆ ಅಹಂಕಾರದ ಅಭಾವವು ಅರಿಸಿಕೊಳ್ಳುತ್ತದೆಂದು ಹೇಳಿದಿರಿ. ಅದು ಹೇಗೆ ಅರಿಸಿಕೊಳ್ಳುತ್ತದೆ? ಯಾಕಂದರೆ, ನಿದ್ರೆಯಲ್ಲಿ ಅರಿಯುವದೊಂದು ಬೇಕಾಗುತ್ತದೆ. ಆ ಅರುವು ನಿದ್ರೆಯಲ್ಲಿ ಇಲ್ಲದ್ದರಿಂದ ಅರಿಸಿಕೊಳ್ಳುವದು ಹೇಗೆ ಆಗುವದು ? ಎಂಬದಾಗಿ ನನಗೆ ತೋರುತ್ತದೆ. ಇದರ ನಿಜವಾದ ಅರ್ಥವನ್ನು ನನಗೆ ತಿಳಿಸಬೇಕು. ಎಂದು ಶಿಷ್ಯನು ಕೇಳುತ್ತಾನೆ.

ಬಳಿಕ, ನಿದ್ರೆಯಲ್ಲಿ ಅರುವು ಇರುವದೆಂದು ಹೇಳಿದರೆ, ಎಲ್ಲರಿಗೂ ನಿದ್ರೆಯಲ್ಲಿ ಕಳ್ಳನ ಅರುವು ಯಾಕೆ ಆಗುವದಿಲ್ಲ? ಎಂದು ಪ್ರಶ್ನೆ ಮಾಡುತ್ತಾನೆ.

**ಚಿರನಿದ್ರೆಯಲ್ಲಿಯರಿವಿರೆ ತನ್ನ ದೇಹದಾ।**
**ಭರಣಮಂ ಚೋರ ನೊಯ್ವಾಗಲಾದೊಡಂ।**
**ನರನರಿಯನೇತಕೆಲೆ ದೇವ ||೪||**

**ಟೀಕಾ:-** ಚಿರನಿದ್ರೆಯಲ್ಲಿ = ಗಾಢನಿದ್ರೆಯಲ್ಲಿ, ಅರಿವಿರೆ = ಜ್ಞಾನವಿದ್ದರೆ, ಚೋರನು=ಕಳ್ಳನು, ತನ್ನ ದೇಹದಾಭರಣಮಂ=ತನ್ನ ಮೈಮೇಲಿನ ದಾಗೀನುಗಳನ್ನು, ಒಯ್ವಾಗಲಾದೊಡಂ= ಒಯ್ಯುವಕಾಲಕ್ಕಾದರೂ, ಎಲೆದೇವ = ಹೇ ಗುರುವೇ!, ನರನು=ಮನುಷ್ಯನು, ಏತಕರಿಯನು=ಯಾಕೆ ತಿಳಿಯುವದಿಲ್ಲ?

**ತಾತ್ಪರ್ಯ:-** ಒಂದು ವೇಳೆ ತಾವು ಆ ಗಾಢವಾದ ನಿದ್ರೆಯಲ್ಲಿಯೂ ಕೂಡಾ ಅರುವು ಇರುತ್ತದೆಂದು ಹೇಳಿದರೆ; ಚೋರನು ಮೈಮೇಲಿನ ಆಭರಣಗಳನ್ನು ಒಯ್ಯುವ ಕಾಲಕ್ಕೆ ಎಲ್ಲರಿಗೂ ತಿಳಿಯಬೇಕಾಗಿತ್ತು. ತಿಳಿಯುವದಿಲ್ಲ. ಮತ್ತು ನಾನು ಮಲಗಿ ನಿದ್ರೆಮಾಡುವಾಗ ಕಳ್ಳನು ಆಭರಣವನ್ನು ಕದ್ದಿದ್ದಾನೆ. ನನಗೆಅದು ತಿಳಿಯದೆ ಹೋಯಿತು. ಎಂಬದಾಗಿ ಲೋಕಾನುಭವವಿರುತ್ತದೆ. ತಾವು ಅರುವು ಇರುವದೆಂದು ಹೇಳಿದರೆ; ಕಳ್ಳನ ಅರುವು ಆಗಬೇಕಾಗಿತ್ತು. ಆಗದ್ದರಿಂದ ನಿದ್ರೆಯಲ್ಲಿ ಅರುವಿಲ್ಲವೆಂದು ಸಿದ್ಧವಾಗುವದು.

ಬಳಿಕ- ನ್ಯಾಯಮತಸ್ಥರು ನಿದ್ರೆಯಲ್ಲಿ ಅರುವಿಲ್ಲವೆಂಬುದನ್ನು ಯುಕ್ತಿಯಿಂದಲೂ ಸಿದ್ಧಮಾಡುತ್ತಾರೆಂದು ಹೇಳುತ್ತಾನೆ.

**ಮತ್ತೆ ನಿದ್ರೆಯೊಳು ಸಂವಿತ್ತಿಲ್ಲವೆಂದು ಕೆಲ।**
**ರುತ್ತರಂ ಗೊಡುವ ರಹಮಿಗಿಲ್ಲವೆ ಕಾಣಿ।**
**ಸುತ್ತಿಮಿಹದೆಂತು ಕರುಣಿಪುದು ||೫||**

**ಟೀಕಾ:-** ಮತ್ತೆ=ಬಳಿಕಾದರೂ, ನಿದ್ರೆಯೊಳು=ಸುಷುಪ್ತಿಯಲ್ಲಿ, ಸಂವಿತ್ತಿಲ್ಲವೆಂದು=ಜ್ಞಾನವಿಲ್ಲವೆಂದು, ಕೆಲರು=ನೈಯಾಯಿಕರು, ಉತ್ತರಂ=ಉತ್ತರವನ್ನು, ಕೊಡುವರು=ಹೇಳುತ್ತಾರೆ, (ಆದ್ದರಿಂದ) ಅಹಮಿಗಿಲ್ಲವೆ=ಅಹಂಕಾರದ ಅಭಾವವು, ಎಂತು=ಹೇಗೆ, ಕಾಣಿಸುತ್ತಮಿಹುದು=ಗೋಚರವಾಗುತ್ತಿರುವದು, ಕರುಣಿಪುದು= ತಿಳಿಸಬೇಕು.

**ತಾತ್ಪರ್ಯ-** ಸರ್ವಲೋಕಾನುಭವವಿರುವದಲ್ಲದೆ, ಕುಶಲಬುದ್ಧಿಯುಳ್ಳ, ತಾರ್ಕಿಕರು ಕೂಡಾ ನಿದ್ರೆಯಲ್ಲಿ ಅರುವಿಲ್ಲವೆಂಬ ಮಾತನ್ನು ಯುಕ್ತಿಯಿಂದಲೂ

ಸಿದ್ಧಮಾಡಿ ತೋರಿಸುತ್ತಾರೆ. ಹೇಗಂದರೆ? ನಿದ್ರೆಯಲ್ಲಿ ನೀನು ಏನನ್ನು ಅರಿದೆ? ಎಂದು ಕೇಳಿದರೆ, ಅದಕ್ಕೆ ನಾನು ಏನೂ ತಿಳಿಯಲಿಲ್ಲ. ಎಂದು ಪ್ರತಿಯೊಬ್ಬನು ಹೇಳುತ್ತಾನೆ. ಈ ನಿದ್ರಾನುಭವದ ಮೇಲಿಂದಲೇ ನಿದ್ರೆಯಲ್ಲಿ ಅರುವಿಲ್ಲವೆಂಬುದು ನಿಶ್ಚಯವಾಗುತ್ತದೆ. ಮತ್ತು ಆತ್ಮ ಮನಸ್ಸುಗಳ ಸಂಯೋಗ ವಿಯೋಗವಾದ್ದರಿಂದಲೂ ಜ್ಞಾನವಿರುವದಿಲ್ಲೆಂದು ಶಾಸ್ತ್ರವಿರುತ್ತದೆ. ಈ ರೀತಿ ನೈಯಾಯಿಕರು ಯುಕ್ತ್ಯನುಭವಗಳಿಂದ ನಿದ್ರೆಯಲ್ಲಿ ಅರುವಿಲ್ಲವೆಂದು ಹೇಳುವರು. ಅಂದಮೇಲೆ. ಆ ಹಮ್ಮಿನ ಅಭಾವವು ಹೇಗೆ ಅರಿಸಿಕೊಂಡಿತು? ಎಂಬುದನ್ನು ನನಗೆ ತಿಳಿಸಬೇಕು. ಹೀಗೆಂದು ಶಿಷ್ಯನು ಇಲ್ಲಿ ಪ್ರಶ್ನೆಯನ್ನು ಮಾಡಿದ್ದಾನೆ.

## ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿಧಿ ೫

ಬಳಿಕ, ಶ್ರೀ ಗುರುಗಳು ಶಿಷ್ಯನ ಪ್ರಶ್ನೆಯನ್ನು ಕೇಳಿ; ಹರ್ಷಚಿತ್ತರಾಗಿ, ನಿದ್ರೆಯಲ್ಲಿ ಅಹಮಿನ ಅಭಾವವನ್ನು ಆತ್ಮನು ಅರಿಯುತ್ತಾ ಇದ್ದಾನೆಂಬುದಕ್ಕೆ; ನಿನಗೆ ಅನುಭವ, ದೃಷ್ಟಾಂತ, ಅರ್ಥಾಪತ್ತಿ ಪ್ರಮಾಣ, ಶ್ರುತಿ ಪ್ರಮಾಣ ವೊದಲಾದವುಗಳನ್ನು ಕೊಟ್ಟು ಹೇಳುತ್ತೇನೆ. ನಿದ್ರೆಯಲ್ಲಿ ಅರುವಿಲ್ಲವೆಂಬುದು ಯಾವ ರೀತಿ ವಿಚಾರಮಾಡಿದರೂ ಸಿದ್ಧಿಸುವದಿಲ್ಲ. ಎಂಬುದನ್ನು ಹೇಳುತ್ತೇನೆ ಕೇಳು. ಎಂದು ನುಡಿದರು.

ಸೂತ್ರ ॥ **ಅರುವಿಲ್ಲವಾ ನಿದ್ರೆಯೊಳಗೆಂಬುದಾವಾವ ।**
**ತೆರದೊಳು ವಿಚಾರಿಸಲು ದೊರಕೊಳ್ಳದು ॥**

**ಟೀಕಾ:-** ಆ ನಿದ್ರೆಯೊಳಗೆ = ಸುಷ್ಟಿಯಲ್ಲಿ, ಅರುವಿಲ್ಲವು = ಜ್ಞಾನವಿಲ್ಲ, ಎಂಬುದು=ಅನ್ನುವದು, ಅವಾವ ತೆರದೊಳು=ಯಾವ ಯಾವ ಪ್ರಕಾರವಾಗಿ, ವಿಚಾರಿಸಲು=ವಿಚಾರಮಾಡಿದರೂ, ದೊರಕೊಳ್ಳದು=ಸಂಭವಿಸದು.

**ತಾತ್ಪರ್ಯ:-** ನಿದ್ರೆಯಲ್ಲಿ ಅರುವಿಲ್ಲವೆಂಬುದು ಶ್ರುತ್ಯಾದ್ಯನುಭವಗಳಿಂದ ಯಾವ ರೀತಿ ವಿಚಾರಮಾಡಿ ನೋಡಿದರೂ ಸಿದ್ಧಿಸುವದಿಲ್ಲ. ಕಿಂತು; ಸರ್ವವಿಧದಿಂದಲೂ ಅರುವು ಉಂಟೆಂಬುದೇ ಸಿದ್ಧವಾಗುತ್ತದೆ. ಆ ಅನುಭವ ದೃಷ್ಟಾಂತಗಳು ಮುಂದೆ ಹೇಳಲ್ಪಡುತ್ತವೆ. ಅವುಗಳನ್ನು ಏಕಾಗ್ರ ಬುದ್ಧಿಯಿಂದ ಕೇಳು.

ತ್ರಿ ॥ **ಕಂಡ ಕೇಳಹಮಿಲ್ಲದಂದಮಂ ನಿದ್ರೆಯೊಳ ।**
**ಗೊಂದಿ ಯರಿವಾತ್ಮ ನಿಹುದು ನಿಜವಿದನೆ ಕುಶ ।**
**ಲಂದೋರಿ ನಿನ್ನೊಳೊರೆಯುನೆನು ॥೧॥**

**ಟೀಕಾ:**- ಕಂದ=ಮಗುವೇ !, ಕೇಳ್=ಆಲಿಸು, ಅಹವಿಲ್ಲದ=ಅಹಂಕಾರ ಅಭಾವದ,ಆಂದಮಂ=ಸ್ವರೂಪವನ್ನು, ನಿದ್ರೆಯೊಳಗೆ=ಸುಪ್ತಿಯಲ್ಲಿ, ಒಂದಿ= ಹೊಂದಿಕೊಂಡು, ಅರಿವಾತ್ಮನು=ಜ್ಞಾನ ಸ್ವರೂಪನಾದ ಆತ್ಮನು, ಇಹುದು= ಇರುವದು, ನಿಜವು=ಸತ್ಯವು, ಇದನೆ=ಈ ವಿಷಯವನ್ನೇ, ಕುಶಲಂದೋರಿ=ನೀನು ಆಶ್ಚರ್ಯಪಡುವಂತೆ, (ಅನುಭವಕ್ಕೆ ಬಂದು ಒಡಂಬಡುವಹಾಗೆ) ನಿನ್ನೊಳು= ನಿನ್ನಲ್ಲಿ, ಒರೆಯುವೆನು=ತಿಳಿಸುತ್ತೇನೆ.

**ತಾತ್ಪರ್ಯ:**- 'ಕಂದ ಕೇಳು' ಎಂದು ಇಲ್ಲಿ ಸಂಬೋಧನ ಮಾಡಿದ್ದಾರೆ. 'ಕಂದ' ಅಂದರೆ, ಮೊಲೆ ಹಾಲು ಕುಡಿಯುವ ಕೂಸು ಎಂಬರ್ಥವಲ್ಲ. ಮತ್ತೇ ನಂದರೆ, ನಿದ್ರೆಯಲ್ಲಿ ಅರುವಿರುವದೆಂಬ ವಿಚಾರದನುಭವವಿಲ್ಲದ್ದರಿಂದ 'ಕಂದ' ಎಂದು ಕರೆದಿರುತ್ತಾರೆ. ನಿದ್ರೆಯಲ್ಲಿ ಅಹಂಕಾರದ ಅಭಾವವನ್ನು ಅರಿಯುವ ಆತ್ಮನು ಇರುವದು ನಿಜವಾಗಿದೆ. ಅರಿಯುವಾತ್ಮನು ಉಂಟು ಎಂಬುದು ನಿನ್ನ ಅನುಭವಕ್ಕೆ ತಂದುಕೊಟ್ಟು ಹೇಳುತ್ತೇವೆ. ಆ ಮೇಲೆ ಅರುವಿಲ್ಲವೆಂದನ್ನುವಂಥಾ ನೀನು ಅರುವುಂಟು ಎಂದು ನಿಶ್ಚಯಿಸಿ, ನಿನ್ನಲ್ಲಿ ನೀನೇ ಆಶ್ಚರ್ಯವುಳ್ಳವನಾಗುವ ಹಾಗೆ ಹೇಳುತ್ತೇನೆ. ಅಂದರೆ, ಆಶ್ಚರ್ಯವೂ, ಸಂತೋಷವೂ ಎರಡೂ ಆಗಿರಬೇಕು. ಹಾಗೆ ಈ ವಿಷಯವನ್ನು ತಿಳಿಸುತ್ತೇವೆ ಎಂದು ಅಭಯವನ್ನು ಕೊಡುತ್ತಾರೆ.

ಬಳಿಕ, ಜಾಗ್ರವಸ್ಥೆಯಲ್ಲಿ ಆಗುವ ನಿನ್ನ ನಿದ್ರಾನುಭವದ ಸ್ಮರಣದಿಂದಲೇ ನಿದ್ರೆಯಲ್ಲಿ ಅರುವು ಉಂಟೆಂಬುದು ಸಿದ್ಧವಾಗುತ್ತದೆಂದು ಹೇಳುತ್ತಾರೆ.

**ಅರುವಿಲ್ಲ ವೆನಲೇನುಮರಿಯದೆ ಸುಖದಿಂದಾ ।**
**ನೊರಗಿರ್ದೆನೆಂಬ ನೆನಹಿರ್ದ ಬಳಿಕ ಕೇ ।**
**ಳರಿವುಂಟು ನಿದ್ರೆಯೊಳು ಪುತ್ರ ॥೨॥**

**ಟೀಕಾ:**- ಪುತ್ರಕೇಳ್=ಶಿಷ್ಯನೇ ಆಲಿಸು, ಅರುವಿಲ್ಲವೆನಲ್=ಜ್ಞಾನ ವಿಲ್ಲವೆಂದು ಅಂದರೆ, ಏನುಂ=ಏನನ್ನು, ಅರಿಯದೆ=ತಿಳಿಯದೆ, ಸುಖದಿಂದ= ಆನಂದದಿಂದ, ಆನು=ನಾನು, ಒರಗಿರ್ದೆನು=ಮಲಗಿದ್ದೆನು, ಎಂಬನೆನಹು= ಹೀಗೆಂಬ ಸ್ಮರಣವು, ಇರ್ದಬಳಿಕ=ಇದ್ದಮೇಲೆ, ನಿದ್ರೆಯೊಳು=ನಿದ್ರೆಯಲ್ಲಿ, ಅರಿವುಂಟು=ಜ್ಞಾನಉಂಟೆಂದು ತಿಳಿ

**ತಾತ್ಪರ್ಯ:**- ಪ್ರತಿಯೊಬ್ಬನು ನಿದ್ರೆಯಿಂದ ಎದ್ದಮೇಲೆ, ಹೀಗೆ ಸ್ಮರಣ ಮಾಡುತ್ತಾನೆ. ಏನೆಂದರೆ; ನಾನು ನಿದ್ರೆಯಲ್ಲಿ ಏನನ್ನು ತಿಳಿಯದೆ ಸುಖವಾಗಿ ಮಲಗಿದ್ದೆನು. ಎಂಬ ಸ್ಮರಣವಾಗುತ್ತದೆ. ಈ ಸ್ಮೃತಿಯು ಜ್ಞಾನದಮೇಲಿಂದ ನಿದ್ರೆ

ಯಲ್ಲಿ ಅರುವು ಇರುತ್ತದೆ. ಎಂಬುದು ಸಿದ್ಧವಾಗುತ್ತದೆ. ಯಾಕಂದರೆ; ಯಾವದಾದರೊಂದು ಪದಾರ್ಥದ ಸ್ಮೃತಿಯಾಗಬೇಕಾದರೆ. ಆ ಪದಾರ್ಥದ ಅನುಭವವಾಗಬೇಕಾಗುತ್ತದೆ. ಅನಂತರ ಆ ಅನುಭವದ ಸಂಸ್ಕಾರವು ಚಿತ್ತದಲ್ಲಿರುತ್ತದೆ. ಕೆಲವು ಕಾಲಾನಂತರ ಸಜಾತೀಯ ವಸ್ತುವಿನ ದರ್ಶನದಿಂದಲೂ, ಶ್ರವಣದಿಂದಲೂ ಆ ಸಂಸ್ಕಾರವು ಉದ್ಬುದ್ಧವಾಗಿ ಸ್ಮರಣವಾಗುತ್ತದೆ.'ಸಂಸ್ಕಾರ ಜನ್ಯ ಜ್ಞಾನಂ ಸ್ಮೃತಿ, ಸಂಸ್ಕಾರದಿಂದ ಜನ್ಯವಾದ ಜ್ಞಾನವೇ ಸ್ಮೃತಿಯೆನಿಸುತ್ತದೆ. ಆ ಸಂಸ್ಕಾರವು ಅನುಭವದಿಂದ ಆಗುತ್ತದೆ. ಹೀಗೆ ನಿಯಮವುಂಟು. ಜಾಗರಣದಲ್ಲಿ ಸುಖದಿಂದ ಇದ್ದೆನೆಂಬ ಸ್ಮರಣವಾದ ಮೇಲೆ ನಿದ್ರೆಯಲ್ಲಿ ಸುಖದ ಅನುಭವವು ಆಗಿರಲಿಕ್ಕೇಬೇಕು. ಅನುಭವವಾಗದೆ ಸ್ಮರಣವು ಬರಲಾರದು. ಈ ಅನುಭವವು ಸರ್ವರಲ್ಲಿಯೂ ಪ್ರಸಿದ್ಧವಾಗಿರುತ್ತದೆ. ಆದ್ದರಿಂದ ನಿದ್ರೆಯಲ್ಲಿ ಅರುವು ಉಂಟೆಂದು ತಿಳಿ

**ಬಳಿಕ,** ಈ ಸ್ಮೃತಿಯ ಜ್ಞಾನವು ನಿನ್ನ ಅನುಭವಕ್ಕೆ ಬರುವಹಾಗೆ ದೃಷ್ಟಾಂತಗಳನ್ನು ಉದಾಹರಿಸುತ್ತೇನೆಂದು ಹೇಳುತ್ತಾರೆ.

**ಏನೊಂದರಿಯದಿರ್ದೆ ನಾನು ಸುಖಮಯನಾದೆ ।**
**ನಾನಿದ್ರೆಯಲ್ಲಿ ಯೆನಲಾತ್ಮನಿರ್ಪುದ ।**
**ಕ್ಕೇನು ದೃಷ್ಟಾಂತವೆನೆ ಕೇಳು ॥೩॥**

**ಟೀಕಾ:-** ಆ ನಿದ್ರೆಯಲ್ಲಿ= ಆ ಸುಷುಪ್ತಿಯಲ್ಲಿ, ಏನೊಂದರಿಯದಿರ್ದೆನು= ಏನನ್ನು ತಿಳಿಯದೆ ಇದ್ದೆನು, ಆನು ಸುಖಮಯನಾದೆನು=ನಾನು ಆನಂದಮಯನಾಗಿದ್ದೆನು, ಎನಲ್=ಅನ್ನಲಾಗಿ, ಆತ್ಮನಿರ್ಪುದಕ್ಕೆ=ಆತ್ಮನು ಇದ್ದಾನೆಂಬುದಕ್ಕೆ, ಏನು ದೃಷ್ಟಾಂತವೆನೆ=ದೃಷ್ಟಾಂತವೇನೆಂದು ಕೇಳಿದರೆ, ಕೇಳು=ಆಲಿಸು.

**ತಾತ್ಪರ್ಯ:-** ಸುಷುಪ್ತಿಯ ಅನುಭವವು ಎರಡು ವಿಧವಾಗಿದೆ. ಒಂದು ಏನನ್ನು ಅರಿಯಲಿಲ್ಲ, ಎಂಬುದು; ಮತ್ತೊಂದು ಸುಖದಿಂದ ಇದ್ದೆನು. ಎಂಬುದು; ಇವೆರಡಕ್ಕೂ ನಿನಗೆ ಬೇರೆ ಬೇರೆ ದೃಷ್ಟಾಂತಗಳನ್ನು ಉದಾಹರಿಸಿ; ಅರುವು ಇರುವದೆಂಬುದನ್ನು ತಿಳಿಸುತ್ತೇವೆ ಕೇಳು.

**ಬಳಿಕ,** ನಾನು ಏನು ಅರಿಯಲಿಲ್ಲ. ಎಂಬುದಕ್ಕೆ ನಿರುದ್ಯೋಗಿ ಪುರುಷನ ದೃಷ್ಟಾಂತವನ್ನು ಕೊಡುತ್ತಾರೆ.

**ಏನು ಮಾಡಿದೆಯೆಂದೊಡೇನು ಮಿಲ್ಲೆಂಬವಂ ।**
**ಹಾನಿ ತನಗಿಲ್ಲದಾ ನಿರುದ್ಯೋಗಾಭಿ ।**
**ಮಾನದಿಂದಹುದ ನೊರೆವಂತೆ ॥೪॥**

**ಟೀಕಾ:**- ಏನು ಮಾಡಿದೆಯೆಂದೊಡೆ=ನೀನು ಈ ಹೊತ್ತು ಏನು ಮಾಡಿದೆ? ಎಂದು ಕೇಳಲು; ಏನುಮಿಲ್ಲೆಂಬವಂ=ಏನೂ ಮಾಡಲಿಲ್ಲವೆಂದು ಹೇಳುವನು, ಹಾನಿತನಗಿಲ್ಲದೆ=ತನಗೆ ನಾಶವಿಲ್ಲದೆ, (ತನ್ನ ಅಭಾವವನ್ನು ಹೇಳದೆ) ನಿರುದ್ಯೋಗಾಭಿಮಾನದಿಂದಿಹುದನು = ಉದ್ಯೋಗವಿಲ್ಲದೆ ಸುಮ್ಮನಿದ್ದೆ ಎಂಬುದನ್ನು, ಒರೆವಂತೆ=ತಿಳಿಸುವ ಹಾಗೆ.

**ತಾತ್ಪರ್ಯ:**- ಹೇ ದೇವದತ್ತ ! ನೀನು ಈ ಹೊತ್ತು ಮನೆಯಲ್ಲಿ ಏನು ಕೆಲಸವನ್ನು ಮಾಡಿದೆ? ಎಂದು ಕೇಳಲು, ಅದಕ್ಕೆ ದೇವದತ್ತನು- "ಏನೂ ಮಾಡಲಿಲ್ಲ ಸುಮ್ಮನಿದ್ದೆನು" ಎಂದು ಉತ್ತರವನ್ನು ಕೊಡುವನು. 'ಏನು ಮಾಡಲಿಲ್ಲ, ಎಂಬ ಮಾತಿನ ಮೇಲಿಂದ ದೇವದತ್ತನೇ ಇಲ್ಲೆಂದು ಹೇಳಲಿಕ್ಕೆ ಬರುವದೇ? ಬರಲಾರದು. ಯಾಕೆ ಉದ್ಯೋಗ ಮಾಡಲಿಲ್ಲ? ಎಂದು ಕೇಳಿದರೆ, ಉದ್ಯೋಗವಿರಲಿಲ್ಲ ಎಂದು ಹೇಳುವನು. ಇದರಿಂದ ಉದ್ಯೋಗದ ಅಭಾವವನ್ನು ಹೇಳಿದಂತಾಯಿತೇ ಹೊರ್ತು, ತನ್ನ ಅಭಾವವನ್ನು ತಾನು ಹೇಳಲಿಲ್ಲ ಎಂಬುದು ನಿಶ್ಚಯಿಸಲ್ಪಡುತ್ತದೆ.

ಬಳಿಕ, ದೃಷ್ಟಾಂತವನ್ನು ದ್ರಾಷ್ಟಾಂತದಲ್ಲಿ ಯೋಜನೆ ಮಾಡಿ ತೋರಿಸುತ್ತಾರೆ.

**ಒಂದುವಂ ಕಾಣೆ ನಾನೆಂದುದಾ ಹಂತೆ ಲಯ |**
**ವೊಂದಿರ್ಪ ಸುಪ್ತಿಯಲ್ಲಿ ತಾನಿರ್ದನೆನ |**
**ಹಿಂದೆ ನೀನರಿವುದೆಲೆವತ್ಸ** ||೫||

**ಟೀಕಾ:**- ಒಂದುವಂ=ಒಂದನ್ನಾದರೂ, ಆನು=ನಾನು, ಕಾಣೆನು=ತಿಳಿಯೆನು, ಎಂದುದು=ಅಂದದ್ದು, ಆಹಂತೆ=ಆ ಅಹಂಕಾರವು; ಲಯವೊಂದಿರ್ಪ=ಲೀನವಾಗಿರುವ, ಸುಪ್ತಿಯಲ್ಲಿ=ನಿದ್ರೆಯಲ್ಲಿ, ತಾನಿರ್ದನೆನಹಿಂದೆ=ತಾನಿದ್ದ ಸ್ಮರಣ ಮೂಲಕ, ಎಲೆವತ್ಸ=ಎಲೈ ಪುತ್ರನೆ !, ನೀನರಿವುದು=ನೀನು ತಿಳಿಯುವದು.

**ತಾತ್ಪರ್ಯ:**- ನಿದ್ರೆಯಲ್ಲಿ ನಾನು ಏನು ಕಾಣಲಿಲ್ಲ. ತಿಳಿಯಲಿಲ್ಲ. ಎಂಬ ಅನುಭವವೇನು ಆಯಿತೋ, ಅದು ಅರುವಿನ ಅಭಾವವನ್ನು ಹೇಳಲಿಲ್ಲ. ಅರಿಸಿಕೊಳ್ಳುವ ಅಹಂಕಾರದ ಅಭಾವವನ್ನು ಹೇಳಿದಂತಾಗುತ್ತದೆ. ಹೇಗಂದರೆ; ಅಮಾವಾಸ್ಯೆಯ ದಿನದ ಗಾಢವಾದ ಕತ್ತಲೆಯಲ್ಲಿ ಏನು ಕಾಣಿಸುತ್ತದೆ? ಎಂದು ಕೇಳಿದರೆ; ಏನೂ ಕಾಣಿಸುವದಿಲ್ಲ. ಎಂದು ಉತ್ತರಕೊಡುತ್ತಾನೆ. ಕಾಣಿಸುವದಿಲ್ಲ ಅನ್ನುತ್ತಾನೆ. ಆದರಿಂದ ಅವನಿಗೆ ಕಣ್ಣೇ ಇಲ್ಲ. ಕುರುಡನೆಂದು ಕರೆಯಬಹುದೇನು? ಇಲ್ಲ. ಆವನಿಗೆ ಕಣ್ಣುಗಳು ಉಂಟು. ಹಾಗಾದರೆ ಕಾಣಿಸುವ

ದಿಲ್ಲ ಎಂದು ಏಕೆ ನುಡಿದನು? ಅಂದರೆ; ಕಾಣಿಸುವ ಪದಾರ್ಥಗಳ ಅಭಾವವನ್ನು ಹೇಳಿದಂತಾಗುತ್ತದೆ. ಅಥವಾ ಕಾಣಿಸುವದಿಲ್ಲ ಎಂಬುದಕ್ಕೆ ಕತ್ತಲೆಯನ್ನು ಕಾಣುತ್ತಾನೆಂಬ ಅರ್ಥವು ಆಗುತ್ತದೆ- ಇದರಂತೆ; ನಿದ್ರೆಯಲ್ಲಿ ಏನು ತಿಳಿಯುಲಿಲ್ಲ ಎಂಬುದಕ್ಕೆ ತಿಳಿಸಿಕೊಳ್ಳುವ ಅಹಂಕಾರಾದಿಗಳ ಅಭಾವವನ್ನು ಹೇಳಬಹುದು. ಅಥವಾ ಏನು ತಿಳಿಯಲಿಲ್ಲ ಎಂಬುದಕ್ಕೆ ಕತ್ತಲೆಯ ಸದೃಶವಾದ ಅಜ್ಞಾನವನ್ನು ತಿಳಿಯುತ್ತಾನೆಂದು ಅರುವಿನ ಭಾವವೇ ಸಿದ್ಧವಾಗುತ್ತದೆ. ಆದ್ದರಿಂದ ನಿದ್ರೆಯಲ್ಲಿ ಅರುವುಂಟೆಂದು ತಿಳಿ '**ಸೌಷುಪ್ತತಮೋಬೋಧೋಭವೇತ್ ಸ್ಮೃತಿಃ**' ಸುಪ್ತಿ ಸಂಬಂಧವಾದ ಅಜ್ಞಾನದ ಜ್ಞಾನವಾಗಿ ಅದರ ಸ್ಮರಣವು ಜಾಗ್ರದಲ್ಲಿ ಆಗಿರುತ್ತದೆಂದು ಪಂಚದಶಿ ಗ್ರಂಥದಲ್ಲಿ ಶ್ರೀಮದ್ವಿದ್ಯಾರಣ್ಯರು ಹೇಳಿರುತ್ತಾರೆ. ಆದ್ದರಿಂದ ತಿಳಿಯುಲಿಲ್ಲ ಎಂಬುದಕ್ಕೆ ಅಜ್ಞಾನದ ಜ್ಞಾನವಿದೆಯೆಂಬ ಅರ್ಥವಾಗುತ್ತದೆ. ಹೀಗೆ ಇರಲಾಗಿ; ತಿಳಿಯಲಿಲ್ಲ ಎಂಬುದಕ್ಕೆ ಜ್ಞಾನಗುಣವಿಲ್ಲ. ಆತ್ಮನು ಜಡನಾಗಿರುತ್ತಾನೆಂದು ನೈಯಾಯಿಕರು ಹೇಳುತ್ತಾರೆ. ಆದರೆ ಆ ನೈಯಾಯಿಕರ ಬುದ್ಧಿಗೆ ಭ್ರಮವಾಗಿರುತ್ತದೆಂಬ ತಾತ್ಪರ್ಯವು.

**ಬಳಿಕ,** ನಾನು ಸುಖದಿಂದ ಇದ್ದೆನು. ಎಂಬುದಕ್ಕೆ ಲಂಬಿಕಾಯೋಗಿಯ ದೃಷ್ಟಾಂತವನ್ನು ಕೊಡುತ್ತಾರೆ.

**ಲಂಬಿಕಾಯೋಗಿ ತಾನೆಂಬ ಬಗೆದೋರದ|**
**ಲ್ಲುಂಬಮೃತದಿಂದೆ ಚಿರಕಾಲ ಸುಖಮಿರ್ದು|**
**ದಂ ಬಳಿಕ ನೆನೆದುಸುರುವಂತೆ ||೬||**

**ಟೀಕಾ:-** ಲಂಬಿಕಾಯೋಗಿ=ಲಂಬಿಕಾ ಯೋಗವನ್ನು ಮಾಡುವ ಯೋಗಿಯು, ತಾನೆಂಬ = ನಾನು ಇದ್ದೇನೆಂಬ, ಬಗೆದೋರದೆ = ಭಾವನೆಯು ತೋರದೆ, ಅಲ್ಲಿ=ಯೋಗಕಾಲದಲ್ಲಿ, ಉಂಬ ಅಮೃತದಿಂದೆ=ಊಟಮಾಡುವ ಅಮೃತದಿಂದೆ, ಚಿರಕಾಲ = ಬಹಳಹೊತ್ತು, ಸುಖಮಿರ್ದುದಂ = ಸುಖವಾಗಿ ಇದ್ದುದನ್ನು, ಬಳಿಕ= ಆ ಮೇಲೆ, ನೆನೆದು=ಸ್ಮರಿಸಿ, ಉಸುರುವಂತೆ=ಹೇಳುವಹಾಗೆ,

**ತಾತ್ಪರ್ಯ:-** ಲಂಬಿಕಾಯೋಗಿಯು ಅಂದರೆ; ನಾಲಿಗೆಯನ್ನು ಉದ್ದ ಮಾಡಿ, ಕಿರಿನಾಲಿಗೆಯ ಮೇಲಿನ ತೂತಿನಲ್ಲಿ ಸೇರಿಸಿಕೊಂಡು ಇರುವದಕ್ಕೆ, ಲಂಬಿಕಾಯೋಗಿಯೆಂದು ಕರೆಯುತ್ತಾರೆ. ಹೇಗಂದರೆ, ವಿಶ್ವಾಮಿತ್ರ ನಾಮಕ ಹುಲ್ಲುಗರಿ ಕರಗಸದಂತೆ ಹದನಾಗಿರುತ್ತದೆ. ಅದರಿಂದ ನಾಲಿಗೆಯ ಬುಡದಲ್ಲಿರುವ ನರವನ್ನು ಸ್ವಲ್ಪ ಸ್ವಲ್ಪವಾಗಿ ಕೊಯ್ಯುತ್ತಾ ಹೋಗಬೇಕು. ಬಾಧೆ ಯಾಗಬಾರದೆಂದು ಅರಿಷಿಣ ಮತ್ತು ಬೆಣ್ಣೆ ಇವೆರಡನ್ನು ಕಲಿಸಿ, ಅದಕ್ಕೆ ಲೇಪಿಸುತ್ತಿರಬೇಕು.

ಮತ್ತು ನಾಲಿಗೆಯನ್ನು ದಿನಾಲು ಜಗ್ಗುತ್ತಾ ಉಕ್ತ ಬೆಣ್ಣೆಯಿಂದ ತೀಡುತ್ತಾ ಹೋಗಬೇಕು. ಹೀಗೆ ಮೂರು ನಾಲ್ಕು ತಿಂಗಳವರೆಗೆ ಮಾಡುತ್ತಾ ಹೋಗುವದರಿಂದ, ನಾಲಿಗೆಯು ಬಾಯಿಯ ಹೊರಗೆ ಚೇಟುದ್ದ ಬರುವದು. ಅದನ್ನು ಒಳಗಿನ ಛಿದ್ರದಲ್ಲಿ ಸೇರಿಸಲು; ಅದು ಬ್ರಹ್ಮರಂಧ್ರದ ಪರ್ಯಂತರ ಪ್ರವೇಶಮಾಡುತ್ತದೆ. ಆ ಸ್ಥಾನ ಪ್ರವೇಶ ಬಲದಿಂದ ಆನಂದವಾಗುವದು; ಆ ಸುಖಕ್ಕೆ ಅಮೃತಪಾನವೆಂದು ಕರೆಯುತ್ತಾರೆ. ಹೀಗೆ ಮಾಡಿದ ಲಂಬಿಕಾ ಯೋಗಿಯ ನಾಲಿಗೆಯು ಯಾವ ಹುಣ್ಣನ್ನು ನೆಕ್ಕಲು ಆ ಹುಣ್ಣು ಮಾಯ್ದು ಹೋಗುತ್ತದೆ. ಇದಕ್ಕೆ ಲಂಬಿಕಾ ಯೋಗವೆಂದು ಹೇಳುವರು. ಈ ಯೋಗವುಳ್ಳ ಲಂಬಿಕಾಯೋಗಿಯು ಅಮೃತಪಾನವನ್ನು ಮಾಡುವಾಗ್ಯೆ ಅವನಿಗೆ'ನಾನು ಅಮೃತ ಪಾನಮಾಡುತ್ತೇನೆ., ಎಂಬ ಎಚ್ಚರವಿರುವದಿಲ್ಲ. ಆ ಯೋಗವನ್ನು ಬಿಟ್ಟ ಬಳಿಕ ನಾನು ಇಷ್ಟು ಹೊತ್ತಿನವರೆಗೆ ಸುಖದಿಂದೆ ಇದ್ದೆನು ಎಂಬ ಸ್ಮರಣವಾಗುತ್ತದೆ. ಆ ಯೋಗಕಾಲದಲ್ಲಿ ಅವನಿಗೆ ಯೋಗಸುಖದ ಅರುವಾದ್ದರಿಂದಲೇ, ಯೋಗ ಬಿಟ್ಟ ಬಳಿಕ ಆ ಸುಖವನ್ನು ಸ್ಮರಣಮಾಡುತ್ತಾನೆ. ಅದರಿಂದ ಅನುಭವವಾದರೇನೇ ಸ್ಮರಣವಾಗುತ್ತದೆಂಬ ನಿಯಮವುಂಟು.

ಬಳಿಕ, ದೃಷ್ಟಾಂತದಲ್ಲಿ ಹೇಳಿದ ಅರ್ಥವನ್ನು ದ್ರಷ್ಟಾಂತದಲ್ಲಿ ತೋರಿಸುತ್ತಾರೆ.

**ಪರಮ ಸುಖನಿದ್ರೆಯೊಳಗಿರುತಿರ್ದೆನೆಂಬ ಸಂ।**
**ಸ್ಮರಣವಾ ಸುಪ್ತಿ ಸತಿಯ ಸಂಯೋಗದಿಂ।**
**ದೊರಕೊಂಡ ಸುಖವ ನರಹುವದು ॥೭॥**

**ಟೀಕಾ:–** ನಿದ್ರೆಯೊಳಗೆ=ನಿದ್ರೆಯಲ್ಲಿ, ಪರಮಸುಖ=ಪರಮಾನಂದದಿಂದೆ, ಇರುತಿರ್ದೆನೆಂಬ=ಇದ್ದೆನೆಂಬ, ಸಂಸ್ಮರಣವು=ಸ್ಮೃತಿಯು, ಆ ಸುಪ್ತಿಸತಿಯ= ಆ ನಿದ್ರೆಯೆಂಬ ಹೆಂಡತಿಯ, ಸಂಯೋಗದಿಂ=ಕೂಡುವಿಕೆಯಿಂದ, ದೊರಕೊಂಡ= ಪ್ರಾಪ್ತವಾದ, ಸುಖವನು=ಆನಂದವನ್ನು; ಅರಹುವದು=ತಿಳಿಸುತ್ತದೆ.

**ತಾತ್ಪರ್ಯ:-** ನಿದ್ರೆಯಲ್ಲಿ ತೋರುವ ಸುಖವು ಯಾವದೊಂದು ವಿಷ ಯೋಪಭೋಗದಿಂದ ಬಂದದ್ದು ಅಲ್ಲ, ಕಿಂತು; ನಿರ್ವಿಷಯವಾನಂದವಿರುವದು. ಸೂಕ್ಷ್ಮವಾದ ಅವಿದ್ಯಾವೃತ್ತಿಯಲ್ಲಿ ಪ್ರಕಟವಾದ ಆತ್ಮಸ್ವರೂಪದ ಪ್ರತಿಬಿಂಬ ವಾದ ಸುಖವಿರುತ್ತದೆ. ಆದ್ದರಿಂದ ಅದಕ್ಕೆ ಪರುಮ ಸುಖವೆಂದು ಹೇಳಿರುವರು. ಇಂಥಾ ಸುಖವನ್ನು ನಿದ್ರೆಯಲ್ಲಿ ಅನುಭವ ಮಾಡಿರುತ್ತಾನೆ. ಆದ್ದರಿಂದಲೇ ಜಾಗರಣದಲ್ಲಿ ಸುಖವಾಗಿದ್ದೆನೆಂಬ ಸ್ಮರಣವಾಗುತ್ತದೆ. ಅಂದರೆ ಪುರುಷನು ಸತಿಯ ಕ್ರೀಡಾಸುಖದಿಂದ ಇದ್ದು, ಕ್ರೀಡೆಯಿಂದ ವಿಯೋಗವಾದನಂತರ, ಇಷ್ಟೊತ್ತಿನವರೆಗೆ ಸುಖದಿಂದ ಇದ್ದೆನೆಂದು ರತಿಸುಖವನ್ನು ಸ್ಮರಿಸುವಂತೆ; ಈ

ಜೀವನು ನಿದ್ರಾಂಗನೆಯೊಡನೆ ಕೂಡಿ ಸುಖವಾಗಿದ್ದು, ಬಳಿಕ ಜಾಗರಣದಲ್ಲಿ ಆ ಸುಖದ ಸ್ಮರಣವನ್ನು ಮಾಡುತ್ತಾನೆ. ಅರ್ಥಾತ್ ಈ ಸ್ಮರಣಮೂಲಕ ನಿದ್ರೆಯಲ್ಲಿ ಸುಖದ ಅರುವು ಇರುತ್ತದೆಂಬುದು ಸಿದ್ಧವಾಗುತ್ತದೆ.

**ಬಳಿಕ,** ಜಾಗರಣದಲ್ಲಿ ಆಗುವ ಸ್ಮರಣವನ್ನು ಕಂಡು, ಇದರ ಮೇಲಿಂದ ನಿದ್ರೆಯಲ್ಲಿ ಸುಖದ ಅನುಭವವಾಗಿದೆ. ಎಂಬುದನ್ನು ನಿಶ್ಚಯಮಾಡುವದರಿಂದ ಇದು ಅರ್ಥಾಪತ್ತಿ ಪ್ರಮಾಣವೆನಿಸುತ್ತದೆಂದು ನಿರೂಪಣ ಮಾಡುತ್ತಾರೆ.

**ನೆನಹಿದರ್ಥಾಪತ್ತಿಯೆನಿಸುವ ಪ್ರಾಮಾಣ್ಯ ।**
**ವನೆ ಸೂಚಿಸುತ್ತ ಮಿಹುದಾದ ಕಥದಿ ನಾ ।**
**ತನಿ ನಿದ್ರೆಯಲ್ಲಿ ಯರಿವುಂಟು ॥೮॥**

**ಟೀಕಾ:-** ಇದು ನೆನಹು=ಈ ಸ್ಮರಣವು, ಅರ್ಥಾಪತ್ತಿಯೆನಿಸುವ=ಅರ್ಥದ ಕಲ್ಪನೆಯನ್ನು ಮಾಡುವದೆಂದು ಹೇಳಿಸಿಕೊಳ್ಳುವ, ಪ್ರಾಮಾಣ್ಯವನೆ=ಪ್ರಮಾಣವನ್ನು, ಸೂಚಿಸುತ್ತಮಿಹುದಾದ ಕಥದಿಂ = ಸೂಚನೆಯನ್ನು ಮಾಡುವ ಕಾರಣದಿಂದ, ಆ ತನಿನಿದ್ರೆಯಲ್ಲಿ=ಆ ಗಾಢವಾದ ನಿದ್ರೆಯಲ್ಲಿ, ಅರಿವುಂಟು=ಜ್ಞಾನವುಂಟು.

**ತಾತ್ಪರ್ಯ:-**ನಾನು ಏನನ್ನು ತಿಳಿಯದೆ ಸುಖವಾಗಿದ್ದೆನೆಂಬ ಈ ಸುಪ್ತಿಯ ಸ್ಮರಣವು, ಅರ್ಥಾಪತ್ತಿ ಪ್ರಾಮಾಣ್ಯವನ್ನು ಸೂಚಿಸುತ್ತದೆ. ಹೇಗಂದರೆ, ಹಗಲುಣ್ಣದ ದೇವದತ್ತನ ಪೀನತ್ವವನ್ನು ಕಂಡು, ರಾತ್ರಿ ಭೋಜನದ ಅರ್ಥವನ್ನು ಕಲ್ಪನೆಮಾಡುವಂತೆ; ಜಾಗರಣದಲ್ಲಿ ಆಗುವ ಸ್ಮರಣವನ್ನು ಕಂಡು, ನಿದ್ರೆಯಲ್ಲಿ ಅರುವು ಇರುವದೆಂಬ ಅರ್ಥವನ್ನು ಕಲ್ಪನೆಮಾಡಬೇಕಾಗುವದು. ಅರ್ಥದ **ಆಪತ್ತಿ** ಅಂದರೆ ಕಲ್ಪಿಸುವದಕ್ಕೆ **ಅರ್ಥಾಪತ್ತಿ**ಯೆಂಬ ಹೆಸರು ಬಂದಿರುತ್ತದೆ. ದೇವದತ್ತನ ಶರೀರವು ದಪ್ಪವದೆ. ಇದು ಭೋಜನದಿಂದ ಲಭ್ಯವಾದದ್ದು. ಅವನು ಹಗಲಿನಲ್ಲಿ ಊಟಮಾಡುವದಿಲ್ಲ. ಅಂದರೆ ರಾತ್ರಿಯಲ್ಲಾದರೂ ಊಟಮಾಡಲಿಕ್ಕೇಬೇಕು. ಇಲ್ಲದಿದ್ದರೆ, ಅವನ ದೇಹವು ಸ್ಥೂಲವಿರಲಾರದು. ಎಂಬ ಅರ್ಥದ ಕಲ್ಪನೆಯಾಗುತ್ತದೆ. ಇದರಂತೆ; ಜಾಗ್ರದಲ್ಲಿ ಆಗುವ ಸ್ಮರಣ ಮೂಲಕ, ನಿದ್ರೆಯಲ್ಲಿ ಸುಖ ಮತ್ತು ಅಜ್ಞಾನ ಇವೆರಡರ ಅರುವು ಆಗಿರುತ್ತದೆಂಬುದು ಸಿದ್ಧವಾಗುತ್ತದೆ. ಇದು **ಅರ್ಥಾಪತ್ತಿ**ಯೆಂಬ ಪ್ರಮಾಣವೆನಿಸುತ್ತದೆ. ನಿದ್ರೆಯಲ್ಲಿ ಅರಿವುಂಟೆಂಬುದು ಅರ್ಥಾಪತ್ತಿ ಪ್ರಮಾಣದಿಂದಲೂ ಸಿದ್ಧವಾಗುತ್ತದೆಂಬುದನ್ನು ಸೂಚಿಸಿದರೆಂಬ ಭಾವವು.

**ಬಳಿಕ,** ಉಕ್ತ ಅನುಭವ, ದೃಷ್ಟಾಂತ, ಪ್ರಮಾಣಗಳಿಗೆ ಬಲವನ್ನು ಕೊಡುವ ಶ್ರುತಿ ಪ್ರಮಾಣವನ್ನು ಉದಾಹರಿಸುತ್ತಾರೆ.

**ಸಂದೇಹವಿಲ್ಲದಾನಂದಮಯ ಚಿತ್ತು ತಂ ।**
**ನಿಂದೆ ತಾನೊಪ್ಪಿಹುದಲ್ಲಿ ನಹಿದ್ರಷ್ಟು ।**
**ವೆಂದು ಶ್ರುತಿ ಪೇಳುತಿಹುದಾಗಿ ॥೯॥**

**ಟೀಕಾ:-** ಸಂದೇಹವಿಲ್ಲದ=ಸಂಶಯವಿಲ್ಲದ, ಆನಂದಮಯ=ಆನಂದಸ್ವರೂಪವಾದ, ಚಿತ್ತು=ಜ್ಞಾನಸ್ವರೂಪಾತ್ಮನು, ತನ್ನಿಂದೆ=ಏನೊಂದನ್ನು ಅಪೇಕ್ಷೆಮಾಡದೆ, ತಾನೊಪ್ಪಿಹುದು = ತನ್ನ ಮಹಿಮೆಯಲ್ಲಿ ತಾನಿರುವದು, ಅಲ್ಲಿ=ನಿದ್ರೆಯಲ್ಲಿ, (ನಹಿದ್ರಷ್ಟುರ್ದೃಷ್ಟೇರ್ವಿಪರಿಲೋಪೋವಿದ್ಯತೆ) ದ್ರಷ್ಟು=ಆತ್ಮನ, ದೃಷ್ಟೇ=ಜ್ಞಾನಕ್ಕೆ, ವಿಪರಿಲೋಪಃ=ನಾಶವು, ಹಿ=ನಿಶ್ಚಯವಾಗಿ, ನ ವಿದ್ಯತೆ=ಇರುವದಿಲ್ಲ, ಎಂದು=ಹೀಗೆಂದು, ಬೃಹದಾರಣ್ಯಕ ಶ್ರುತಿಯು, ಪೇಳುತಿಹುದಾಗಿ=ಹೇಳುವದರಿಂದ.

**ತಾತ್ಪರ್ಯ:-** ನಿದ್ರೆಯಲ್ಲಿ ಯಾವನಿಗಾದರೂ ನಾನು ಇದ್ದೆನೋ ಇಲ್ಲೊ? ಎಂಬ ಸಂದೇಹವೇ ಇಲ್ಲ. ಕಿಂತು; ನಾನು ಇರುತ್ತೇನೆ, ಇದ್ದೆನೆಂಬ ನಿಶ್ಚಯವೇ ಇರುತ್ತದೆ. ಸುಖದಿಂದ ಇದ್ದೆನೆಂದು ಹೇಳುವದರಿಂದ ತಾನು ಸದ್ರೂಪನೂ, ಆನಂದಮಯನೂ, ಚಿದ್ರೂಪನೂ ಆಗಿರುವನು. ಇಂಥಾ ಲಕ್ಷಣನಾದ ಆತ್ಮನು ಎಲ್ಲಿರುವನೆಂದು ಕೇಳಿದರೆ; ಆತ್ಮನಿಗೆ ದೇಶ ನಿರ್ದೇಶವಿಲ್ಲ. ಯಾಕಂದರೆ? ಆತ್ಮನು ದೇಶ ಕಾಲ ಪರಿಚ್ಛಿನ್ನರಹಿತನಾಗಿರುತ್ತಾನೆ. ಅದ್ದರಿಂದ ಎಲ್ಲಕ್ಕೂ ತಾನು ಆಶ್ರಯನಾಗಿದ್ದಾನೆ. ತನಗೆ ಯಾವದೂ ಆಶ್ರಯವಿಲ್ಲ. ಅದರಿಂದ ತನ್ನಿಂದ ತಾನೊಪ್ಪಿಹುದೆಂದು ಹೇಳಿರುತ್ತಾರೆ. ಈ ಮಾತನ್ನು ನಾರದರು ಸನತ್ಕುಮಾರರನ್ನು ಕುರಿತು ಕೇಳಿದ್ದಾರೆ. ಏನಂದರೆ– "ಹೇ ಭಗವನ್ **ಭೂಮಾಕ್ವ ಪ್ರತಿಷ್ಠಿತಃ**" ಸುಖಮಯನಾದ ಆತ್ಮನು ಎಲ್ಲಿರುವನು? ಎಂದು ಕೇಳಲು ಸನತ್ಕುಮಾರರು– '**ಸ್ವೇ ಮಹಿಮ್ನಿ**' ಆತ್ಮನು ತನ್ನ ಮಹಿಮೆಯಲ್ಲಿಯೇ ತಾನಿದ್ದಾನೆ. ಇನ್ನೊಂದನ್ನು ಆಶ್ರಯಮಾಡುವಾತನಲ್ಲ ಎಂದು ಹೇಳಿರುವರು. ಆದ್ದರಿಂದ ಸಚ್ಚಿದಾನಂದಸ್ವರೂಪನಾದ ಆತ್ಮನು ಸ್ವತಃಸಿದ್ಧ ಸ್ವಯಂಪ್ರಕಾಶನಿರುವನೆಂಬ ಭಾವವು. ಇದಕ್ಕೆ ಬ್ರಹ್ಮದಾರಣ್ಯಕೋಪನಿಷತ್ತಿನ ಶ್ರುತಿಯೂ ಉಂಟು. ಏನಂದರೆ ದ್ರಷ್ಟಾರೂಪನಾದ ಆ ಆತ್ಮನ ದೃಷ್ಟಿ ಅಂದರೆ, ಜ್ಞಾನವು ನಿದ್ರೆಯಲ್ಲಿ ನಾಶರಹಿತವಾಗಿರುತ್ತದೆಂದು ಹೇಳುತ್ತದೆ. ಈ ಶ್ರುತ್ಯರ್ಥವು ಬೇರೆ ಬರೆಯಲ್ಪಟ್ಟಿರುತ್ತದೆ. ಈ ರೀತಿ **ಅನುಭವ, ದೃಷ್ಟಾಂತ, ಶ್ರುತಿ** ಇವುಗಳಿಂದ ನಿದ್ರೆಯಲ್ಲಿ ಅರುವು ಇರುತ್ತದೆಂಬುದನ್ನು ತಿಳಿಸಿ ಹೇಳಿರುತ್ತೇವೆ.

**ಜ್ಞಾನ ಸದ್ಭಾವ ನಿರೂಪಣೆ ಸೂತ್ರ ೨ ಕ್ಕೆ ತ್ರಿ ೧೪**

**ಬಳಿಕ**, ನಿದ್ರೆಯಲ್ಲಿ ಆತ್ಮಮನಸ್ಸುಗಳ ಸಂಯೋಗವಿಲ್ಲದ್ದರಿಂದ ಜ್ಞಾನ ವಿಲ್ಲ. ಎಂದು ನೈಯಾಯಿಕರು ಹೇಳುತ್ತಾರೆ. ಈ ಮತಾನುಸಾರ ಶಿಷ್ಯನು ನಿದ್ರೆಯಲ್ಲಿ ಅರುವಿಲ್ಲವೆಂದು ಪ್ರಶ್ನೆಮಾಡಿದನು. ನಿದ್ರೆಯಲ್ಲಿ ಅರುವು ಇರುತ್ತ ದೆಂಬುದನ್ನು ಶ್ರುತ್ಯನುಸಾರಿಗಳಾದ ಅನುಭವ ದೃಷ್ಟಾಂತಗಳಿಂದಲೂ, ಅರ್ಥಾ ಪತ್ತಿ ಪ್ರಮಾಣದಿಂದಲೂ, ಸಿದ್ಧಮಾಡಿ ತೋರಿಸಿವರು. ಇದನ್ನು ಕೇಳಿ ಒಪ್ಪದೆ; ನ್ಯಾಯಮತಾನುಸಾರವಾಗಿ ಅರುವಿಲ್ಲವೆಂಬುದನ್ನು **ಯುಕ್ತಿಯಿಂದ** ಸಿದ್ಧ ಮಾಡುತ್ತೇನೆಂದು ವಾದಮಾಡಲುದ್ಯುಕ್ತನಾಗಿರುವನು. ಇದಕ್ಕೆ ಗುರುಗಳು **ಯಥಾ ಯಕ್ಷಃ ತಥಾ ಬಲಿ** ಎಂಬ ನ್ಯಾಯಾನುಸಾರವಾಗಿ, ನೈಯಾಯಿಕರ ಮತಾನುಸಾರವಾಗಿಯೇ ಯುಕ್ತಿಯಿಂದಲೇ ಉತ್ತರವನ್ನು ಕೊಡುತ್ತಾರೆ.

**ಸೂತ್ರ:- ಅರಿವಿಗಿಲ್ಲವೆಯನರಿವುದು ಘಟಿಸದಾಗಿ ಕೇ ।**
**ಳರಿವುಂಟು ನಿದ್ರೆಯೊಳಗಿದು ಸಿದ್ಧವು ॥**

**ಟೀಕಾ**:-ಅರಿವಿಗಿಲ್ಲವೆಯನು=ಅರುವಿನ ಅಭಾವವನ್ನು, ಅರಿವುದು=ತಿಳಿ ಯುವದು, ಘಟಿಸದಾಗಿ=ಸಂಭವಿಸದ್ದರಿಂದ, ನಿದ್ರೆಯೊಳಗೆ=ನಿದ್ರೆಯಲ್ಲಿ, ಅರಿ ವುಂಟು=ಜ್ಞಾನವುಂಟು. ಇದುಸಿದ್ಧವು=ಈ ಮಾತು ನಿಜವಿರುವದು. ಕೇಳ್= ಏಕಾಗ್ರದಿಂದ ಆಲಿಸು.

**ತಾತ್ಪರ್ಯ**:- ನಿದ್ರೆಯಲ್ಲಿ ಅರುವಿಲ್ಲ ಎಂದು ಹೇಳುವ ಮಾತು ಸಿದ್ಧವಾಗ ಲಾರದು ಕಿಂತು; ಅರುವಿಲ್ಲ. ಎಂದು ಹೇಳುವದರಿಂದ ಅರುವುಂಟೆಂಬುದೇ ಸಿದ್ಧ ವಾಗುತ್ತದೆ. ಯಾಕಂದರೆ, ಅರುವಿಲ್ಲ ಎಂಬುದನ್ನು ಅರತು ಹೇಳುವಿಯಾ? ಅಥವಾ ಅರಿಯದಲೆ ಹೇಳುವಿಯಾ? ಅರಿಯದಲೆ ಅರುವಿಲ್ಲೆಂದು ಹೇಳುವದು ಯೋಗ್ಯವಲ್ಲ. ಅರತು ಹೇಳುತ್ತೇನೆಂದು ಹೇಳಿದರೆ; ನಿನ್ನಿಂದಲೇ ಅರುವುಂಟೆಂದ್ಸ ಒಪ್ಪಿದಂತಾಯಿತು. ನಿದ್ರೆಯಲ್ಲಿ ಅರುವಿಲ್ಲ ಎಂಬ ನಿನ್ನ ಮಾತಿನಿಂದಲೇ ಅರು ವುಂಟು ಎಂಬುದನ್ನು ನೀನೇ ಸಿದ್ಧಮಾಡಿದಂತಾಗುವದು. ಹೇಗಂದರೆ; ನನ್ನ ಬಾಯಲ್ಲಿ ನಾಲಿಗೆಯು ಇಲ್ಲ ಎಂಬದಾಗಿ ಒಬ್ಬನು ನುಡಿದನು. ನಾಲಿಗೆಇಲ್ಲೆಂಬ ಅನವ ಮಾತಿನಿಂದಲೇ **ನಾಲಗೆಯು** ಇರುವದೆಂಬುದು ಸಿದ್ಧವಾಗುತ್ತದೆ. ನಾಲಿಗೆ ಯಿಲ್ಲೆಂಬುದನ್ನು ನಾಲಿಗೆಯಿಂದಲೇ ನುಡಿಯ ಬೇಕಾದಂತೆ; ಅರುವಿಲ್ಲವೆಂಬು ದನ್ನು ನೀನು ಅರುವಿನಿಂದಲೇ ಹೇಳಬೇಕಾಗಿರುತ್ತದೆ. ಆದ್ದರಿಂದ ಅರು ವಿಲ್ಲೆಂಬುದು ಘಟಿಸದು. ಪ್ರತಿಯಾಗಿ **ಅರಿವುಂಟೆಂಬುದು** ಸಿದ್ಧವಾಗುತ್ತದೆ. ಅಥವಾ ನನ್ನ ತಾಯಿ ವಂಧ್ಯಾ ಎಂದು ಒಬ್ಬನು ಹೇಳಿದನು. ಹೀಗೆ ಹೇಳುವದ ರಿಂದ ಅವನ ತಾಯಿ( ವಂಧ್ಯಾ ) ಬಂಜೆಯು ಅಲ್ಲಯೆಂಬುದು ಸಿದ್ಧವಾಗುತ್ತದೆ. ಆಕೆಯೇ ವಂಧ್ಯಾ ಆಗಿದ್ದರೆ, ಈತನೆಲ್ಲಿ ಇರುತ್ತಿದ್ದನು? ಈತನಿದ್ದು ನನ್ನ ತಾಯಿ

ವಂಧ್ಯಾ ಎನ್ನುವದರಿಂದ ತಾಯಿಯು ಬಂಜಿಯಲ್ಲಯೆಂಬುದೇ ಸಿದ್ಧವಾಗುತ್ತದೆ. ನಿದ್ರೆಯಲ್ಲಿ ಅರುವಿಲ್ಲವೆಂದು ಹೇಳುವದರಿಂದಲೇ ಅರುವುಂಟೆಂಬುದು ಸಿದ್ಧವಾಗುತ್ತದೆ. ನಾಲಿಗೆಯು ಅದೆ. ಇಲ್ಲ, ಎಂಬುದನ್ನು ನಾಲಿಗೆಯಿಂದಲೇ ನುಡಿಯಬೇಕಾದಂತೆ; ಅರವುಂಟು- ಇಲ್ಲ ಎಂಬುದನ್ನು ಅರುವಿನಿಂದಲೇ ಹೇಳಬೇಕಾಗಿರುತ್ತದೆ. ಆದ್ದರಿಂದ ನಿದ್ರೆಯಲ್ಲಿ ಅರುವುಂಟು.

ಬಳಿಕ, ಸೂರ್ಯನ ಪ್ರಕಾಶವು ಸೂರ್ಯನ ಸ್ವರೂಪವಾಗಿ ಸಾಮಾನ್ಯ ರೂಪದಿಂದ ಸರ್ವತ್ರವಿರುತ್ತದೆ. ಅದೇ ಸಾಮಾನ್ಯವಾದ ಪ್ರಕಾಶವೇ ಸೂರ್ಯಕಾಂತ ಶಿಲಾದಿ ಕನ್ನಡಿಗಳಲ್ಲಿ ವಿಶೇಷವಾಗಿಯೂ ಇರುತ್ತದೆ. ಇದರಂತೆ ಅಗ್ನಿಯಾದರೂ ಸಾಮಾನ್ಯವಾಗಿ ಎಲ್ಲೆಡೆಯಲ್ಲಿಯೂ ಉಂಟು, ವಿಶೇಷ ರೂಪದಿಂದ ಕಾಷ್ಠಾದಿಗಳಲ್ಲಿಯೂ ಇರುತ್ತದೆ. ಈ ಪ್ರಕಾರ ಆತ್ಮನ ಸ್ವರೂಪಭೂತವಾದ ಅರುವೊಂದುಂಟು. ಮನುಬುದ್ಧ್ಯಾದಿಗಳಲ್ಲಿ ತೋರುವ ವಿಶೇಷವಾದ ಅರುವೊಂದುಂಟು. ಅರ್ಥಾತ್ ನಿರುಪಾಧಿಕವಾದ ಅರುವು ಒಂದು; ಸೋಪಾಧಿಕವಾದ ಅರುವು ಒಂದು; ಹೀಗೆ ಅರುವು ಎರಡು ರೀತಿಯಾಗಿರುತ್ತದೆ, ಇವುಗಳಲ್ಲಿ ನೀನು ಯಾವ ಅರುವು ಇಲ್ಲೆಂದು ಅದರ ಅಭಾವವನ್ನು ಹೇಳುವವನು? ಎಂದು ಕೇಳುತ್ತಾರೆ.

ತ್ರಿವಿದಿ ॥ **ತರುಣ ಕೇಳಾ ತೆರದೊಳೊರೆಯಲಂತದನೊಪ್ಪ ।**
**ದಿರೆ ಚಿತ್ತನಿಲ್ಲನೆಯದಲ್ಲಿ ನಿನಗೆ ಗೋ ।**
**ಚರಿಸಿತೆನಲಿಂತು ಬೆಸಸುವೆನು** ॥೧॥

**ಟೀಕಾ:-** ತರುಣಕೇಳ್=ವಿವೇಕದ ಪ್ರೌಢಾವಸ್ಥೆಯುಳ್ಳ ಶಿಷ್ಯನೇ! ಕೇಳು, ಆ ತೆರದೊಳು=ಪೂರ್ವದಲ್ಲಿ ಹೇಳಿದ ರೀತಿಯಿಂದ, ಒರೆಯಲ್=ಉಪದೇಶಮಾಡಿದರೂ, ಅಂತದನು=ಹಾಗೆ ಹೇಳಿದ್ದನ್ನು, ಒಪ್ಪದಿರೆ=ಅಂಗೀಕರಿಸದಿರಲು, ಚಿತ್ತ ನಿಲ್ಲನೆಯದು=ಸಾಮಾನ್ಯ ಅರುರೂಪ ಚಿತ್ತಿನ ಅಭಾವವು; ಅಲ್ಲಿ=ಸುಪ್ತಿಯಲ್ಲಿ, ನಿನಗೆ=ನಿನಗೆ, ಗೋಚರಿಸಿತೆನಲ್=ವಿಷಯವಾಗಿದೆಯೆಂದು ಹೇಳಿದರೆ, ಇಂತು= ಮುಂದೆ ಹೇಳುವ ಪ್ರಕಾರ, ಬೆಸಸುವೆನು=ತಿಳಿಸುತ್ತೇನೆ.

**ತಾತ್ಪರ್ಯ:-** ಸಾಮಾನ್ಯ ರೂಪವಾದ ಅರವು ಆತ್ಮನ ಸ್ವರೂಪವಾಗಿರುತ್ತದೆ. ಸೂರ್ಯನ ಪ್ರಕಾಶವು ಸೂರ್ಯನ ಸ್ವರೂಪವಾಗಿರುವಂತೆ; ಅಗ್ನಿಯ ಉಷ್ಣ ಪ್ರಕಾಶಗಳು ಅಗ್ನಿಯ ಸ್ವರೂಪಗಳಾಗಿರುವಂತೆ; ಆತ್ಮನ ಅರವು ಆತ್ಮನ ಸ್ವರೂಪವಾಗಿರುತ್ತದೆ. ಇಂಥಾ ಆತ್ಮನ ಸ್ವರೂಪವಾದ ಸಾಮಾನ್ಯ ಅರವಿಗೆ ಅಭಾವವು ಎಂದೂ ಸಂಭವಿಸಲಾರದು. ಯಾಕಂದರೆ; ಧರ್ಮಿನಾಶವಾಗದ ವಿನಾ ಧರ್ಮಕ್ಕೆ ನಾಶವಿಲ್ಲ. ಅಗ್ನಿಯು ನಾಶವಾಗದೆ ಉಷ್ಣವು ನಾಶವಾಗಲಾರದು.

ಸೂರ್ಯನು ನಾಶವಾಗದೆ ಪ್ರಕಾಶ ನಾಶವಾಗಲಾರದು. ಇವುಗಳಂತೆ ಆತ್ಮ ನಾಶದ ವಿನಾ ಅರುವಿಗೆ ನಾಶವು ಸಂಭವಿಸಲಾರದು. ಆತ್ಮನಾಶತ್ವವನ್ನು ಅಂಗೀಕರಿಸಿದರೆ, ಶ್ರುತಿ ಸ್ಮೃತಿಗಳಿಗೆ ವಿರೋಧವಾಗುವದು. ಯಾಕಂದರೆ, 'ಆತ್ಮಾ ಆಕಾಶವತ್ಸರ್ವ ಗತಶ್ಚ ನಿತ್ಯಃ' ಆತ್ಮನು ಆಕಾಶದಂತೆ ವ್ಯಾಪಕನಾಗಿ ನಿತ್ಯನಾಗಿರುವನು ಎಂದು ಶ್ರುತಿಯುಂಟು. ಮತ್ತು 'ಅಜೋನಿತ್ಯಃ ಶ್ಶಾಶ್ವತಃ' ಆತ್ಮನು ಹುಟ್ಟು ಸಾವುಗಳಿಲ್ಲದವನಾಗಿ ಯಾವಾಗಲೂ ಒಂದೇ ವಿಧವಾಗಿ ನಿರ್ವಿಕಾರ ನಿತ್ಯನಾಗಿರುವನೆಂದು ಸ್ಮೃತಿಯೂ ಉಂಟು. ಆದ್ದರಿಂದ ಆತ್ಮನಿಗೆ ನಾಶವಿಲ್ಲ. ಆತ್ಮನು ನಾಶನಾಗದ್ದರಿಂದ ಅವನ ಸ್ವರೂಪವಾದ ಸಾಮಾನ್ಯ ಅರುವಿಗೂ ನಾಶವಿಲ್ಲ. ಆದರೂ, ಇಂಥಾ ಸಾಮಾನ್ಯ ಅರುವಿನ ಅಭಾವವು ನನಗೆ ತೋರಿತು. ಎಂದು ಹೇಳಿದರೆ, ಮುಂದೆ ಹೇಳುವ ಪ್ರಕಾರ ನಿನಗೆ ಉತ್ತರವನ್ನು ಹೇಳುತ್ತೇವೆ.

ಬಳಿಕ, ಮನ ಬುದ್ಧ್ಯಾದಿಗಳಿಂದ ಕೂಡಿದ ಸೋಪಾಧಿಕವಾದ ವಿಶೇಷ ಅರುವಿನ ಅಭಾವವು ನಿದ್ರೆಯಲ್ಲಿ ಗೋಚರವಾಯಿತೆಂದು ಹೇಳಿದರೆ, ಅದಕ್ಕೂ ಉತ್ತರವನ್ನು ಹೇಳುತ್ತಾರೆ.

> ಜ್ಞಾನದಿಲ್ಲವೆಯುಸಂತಾ ನಿದ್ರೆಯಲ್ಲಿಯೆ |
> ನೀನರಿದೆನೆಂಬೊಡದು ಘಟಿಸಲರಿಯುದೆಂ|
> ದಾನಿಲ್ಲಿ ಪೇಳುವೆನು ಕೇಳು ||೨||

ಟೀಕಾ:-ಜ್ಞಾನದಿಲ್ಲವೆಯನು = ವಿಶೇಷಜ್ಞಾನದ ಅಭಾವವನ್ನು, ಅಂತಾನಿದ್ರೆಯಲ್ಲಿಯೆ=ಆ ಸುಪ್ತಿಯಲ್ಲಿಯೆ, ನೀನು ಅರಿದೆನೆಂದೊಡೆ=ನಾನು ಅರಿದೆನು ಎಂದು ಹೇಳಿದರೆ, ಅದು=ಅಭಾವವನ್ನರಿಯುವದು, ಘಟಿಸಲರಿಯದೆಂದು=ಸಂಭವಿಸಲಾರದೆಂದು, ಆನು=ನಾನು, ಇಲ್ಲಿ=ಜಾಗ್ರದಲ್ಲಿ, ಪೇಳುವೆನು=ಹೇಳುವೆನು, ಕೇಳು=ಏಕಾಗ್ರದಿಂದಾಲಿಸು,

ತಾತ್ಪರ್ಯ:-ಜಾಗ್ರತ್ಸ್ವಪ್ನಂಗಳಲ್ಲಿ ನಾನು ಕಂಡೆ, ಕೇಳಿದೆ, ಎಂಬದಾಗಿ ಸಕಲ ಶಬ್ದಾದಿ ವಿಷಯಗಳ ಅರಿವುಂಟು. ಈ ಮನೋಪಾಧಿಯಿಂದ ಕೂಡಿದ ಅರುವು ನಿದ್ರೆಯಲ್ಲಿ ಇರುವದಿಲ್ಲ. ಆದ್ದರಿಂದ ನಿದ್ರೆಯಲ್ಲಿ ನಾನು ಏನು ಕೇಳಲಿಲ್ಲ, ನೋಡಲಿಲ್ಲ, ತಿಳಿಯಲಿಲ್ಲ ಎಂದು ಸಕಲರೂ ಹೇಳುವರು. ಆದ್ದರಿಂದ ಈ ಅನುಭವದ ಬಲದಿಂದ ನಿದ್ರೆಯಲ್ಲಿ ವಿಶೇಷಜ್ಞಾನದ ಅಭಾವವು ಅನುಭವಸಿದ್ಧವಾಗಿದೆ. ಇಂಥಾ ಉಪಾಧಿಯುಳ್ಳ ವಿಶೇಷಜ್ಞಾನದ ಅಭಾವವನ್ನು ನಾನು ನಿದ್ರೆಯಲ್ಲಿ ಕಂಡೆನು ಎಂದು ಹೇಳಬಹುದು. ಹೀಗೆ ವಿಶೇಷಜ್ಞಾನದ ಅಭಾವವನ್ನು ನೀನು ನಿದ್ರೆಯಲ್ಲಿ ಅರಿಯುವದು ಕೂಡಾ ಸಂಭವಿಸುವದಿಲ್ಲ. ಎಂಬದಾಗಿ ಇದಕ್ಕೂ ನಾವು ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತೇವೆ. ಕೇಳು-

ಬಳಿಕ, ನಿದ್ರೆಯಲ್ಲಿ ಸಾಮಾನ್ಯ ಅಥವಾ ವಿಶೇಷ ಅರುವಿನ ಅಭಾವವನ್ನು ಕಂಡೆ ಎಂದು ನೀನು ಹೇಳುವಿ. ಆದರೆ; ಮೊದಲು ಅಭಾವದ ಸ್ವರೂಪು ಎಂಥಾದ್ದು? ಅದು ಎಲ್ಲಿರುತ್ತದೆ? ಹೇಗೆ ಅರಿಸಿಕೊಳ್ಳುತ್ತದೆ? ಎಂಬುದನ್ನು ವಿಚಾರಮಾಡಿದ ನಂತರ ನೀನು ಅಭಾವವನ್ನು ಕಂಡೆನು. ಎಂದು ಹೇಳಬಹುದು. ಅಭಾವ ಸ್ವರೂಪ ವನ್ನು ವಿಚಾರಮಾಡದೆ, ಅಭಾವವನ್ನು ಕಂಡೆನು ಅನ್ನುವದು ಅಯೋಗ್ಯವಾಗಿದೆ. ಆದ್ದರಿಂದ ನೀನು ಮೊದಲು ಅಭಾವ ಸ್ವರೂಪವನ್ನು ಅರಿ. ಎಂದು ಅಭಾವದ ಸ್ವರೂಪ ಅಥವಾ ಲಕ್ಷಣವನ್ನು ಹೇಳುತ್ತಾರೆ.

ಆವುದಿಲ್ಲವೆಯದಂ ಭಾವಿಸಲ್ಪ್ರತಿಯೋಗ್ಯ|
ಭಾವವದೆಯಾಗಿ ತದ್ವಿಶೇಷಣವಾದ|
ಠಾವಿನೊಳಗರುಹಿಕೊಳುತಿರ್ಕುಂ ||೩||

ಟೀಕಾ:- ಆವುದಿಲ್ಲವೆ=ಯಾವದು ಇಲ್ಲವೋ, ಅದಂ=ಆ ಅಭಾವವನ್ನು, ಭಾವಿಸಲ್= ವಿಚಾರ ಮಾಡಲಾಗಿ, ಪ್ರತಿಯೋಗಿ=ಯಾವದಾದರೊಂದು ಭಾವ ಪದಾರ್ಥದ, ಅಭಾವವು=ಇಲ್ಲೆಂಬುದು, ಅದೆಯಾಗಿ=ಇರುವದರಿಂದ, ತತ್=ಆ ಪ್ರತಿಯೋಗಿಯ ಅಭಾವವು, ವಿಶೇಷಣವಾದ=ವ್ಯಾವರ್ತ್ಯವನ್ನುಂಟು ಮಾಡು ವಂಥಾ, ಠಾವಿನೊಳಗೆ=ಯಾವದಾದರೊಂದು ಸ್ಥಳದಲ್ಲಿ, ಅರುಹಿಕೊಳುತಿರ್ಕುಂ= ತಿಳಿಸಿಕೊಳ್ಳುವದಾಗಿರುತ್ತದೆ.

ತಾತ್ಪರ್ಯ:- ಯಾವದಾದರೂ ಒಂದು ಪದಾರ್ಥವಿಲ್ಲೆಂದು ಹೇಳಿದರೆ; ಅದು ಪ್ರತಿಯೋಗಿಯ ಅಭಾವವು ಆಗಿರುತ್ತದೆ. [ಇಲ್ಲಿ ಪ್ರತಿಯೋಗಿಯು ಅಂದರೆ- 'ಯಸ್ಯಾಭಾವಃ ತಸ್ಯ ಸ ಏವ ಪ್ರತಿಯೋಗಿ'' ಯಾವುದರ ಅಭಾವ ವಿರುವದೋ ಅದರ ಅಭಾವಕ್ಕೆ ಆ ವಸ್ತುವೇ ಪ್ರತಿಯೋಗಿಯೆನಿಸುವದು. ಹೇಗಂದರೆ; ಘಟದ ಅಭಾವಕ್ಕೆ ಘಟವೇ ಪ್ರತಿಯೋಗಿಯು, ಪಟದ ಅಭಾವಕ್ಕೆ ಪಟವೇ ಪ್ರತಿಯೋಗಿಯಾಗಿರುವುದೆಂದು ತಿಳಿಯಬೇಕು. ಮತ್ತು ಆ ಆ ಭಾವವು ಯಾವ ಸ್ಥಳದಲ್ಲಿರುವದೋ ಅದಕ್ಕೆ ಅನುಯೋಗಿಯೆಂದು ಹೇಳುವರು. ಅಧ್ಯಾ ಸಕ್ಕೆ ಹೇಗೆ ಅಧಿಷ್ಠಾನಬೇಕೋ; ಹಾಗೆ ಅಭಾವಕ್ಕೆ ಅಧಿಕರಣಬೇಕು. ಅಧಿಕರಣ ಅಂದರೆ, ಸ್ಥಳ; ಅದರಲ್ಲಿಯೇ ಅಭಾವವು ತೋರುವದು.) ಹೀಗೆ ಪ್ರತಿಯೋಗಿ ಯಾದ ಯಾವದೊಂದು ವಸ್ತು ಇಲ್ಲೆಂದು ಹೇಳಿದರೆ; ಅದರ ಅಭಾವವು ಇರುತ್ತದೆ. "ಭೂತಳೇ ಘಟೋನಾಸ್ತಿ" ಭೂತಳದಲ್ಲಿ ಘಟವಿಲ್ಲ ಎಂದು ಹೇಳಲು; ಪ್ರತಿ ಯೋಗಿಯಾದ ಘಟವು ಇಲ್ಲವೆನಲು; ಆ ಘಟದ ಅಭಾವವು ಅನುಯೋಗಿಯಾದ ಭೂತಳದಲ್ಲಿ ಇರುತ್ತದೆಂದು ಹೇಳಿಸಿಕೊಳ್ಳುವದು. ಆದ್ದರಿಂದ ನಿಷೇಧ ಮುಖ ಪ್ರತೀತಿಗೆ ವಿಷಯುವಾಗಿಯೂ, ಸಂಬಂಧ, ಸಾದೃಶ್ಯ, ಇವುಗಳಿಂದ ಭಿನ್ನ

ವಾಗಿಯೂ, ಪ್ರತಿಯೋಗಿ ಸಾಪೇಕ್ಷ ಪ್ರತೀತಿಗೆ ವಿಷಯವಾದದ್ದೇ **ಅಭಾವವೆನಿ ಸುವದು.** ಇಲ್ಲಿ ಸಂಬಂಧ ಮತ್ತು ಸಾದೃಶ್ಯ ಇವುಗಳಿಂದ ಭಿನ್ನವೆಂದು ಏಕೆ ಹೇಳಿರುವುದು? ಅಂದರೆ, ಅವು ಪ್ರತಿಯೋಗಿ ಅಪೇಕ್ಷೆಯಿಂದಲೇ ತೋರುತ್ತವೆ. ಈ ಅಭಾವದ ಲಕ್ಷಣವು ಸಂಬಂಧ ಸಾದೃಶ್ಯಗಳಲ್ಲಿ ಹೋಗಬಾರದೆಂದು 'ಭಿನ್ನ' ಎಂಬ ಪದವನ್ನು ಪಯೋಗ ಮಾಡಿರುತ್ತದೆ. ಇದನ್ನು ವೃತ್ತಿಪ್ರಭಾಕರದ ಅಭಾವ ಪ್ರಕರಣದಲ್ಲಿ ಅವಲೋಕನ ಮಾಡಿರಿ. ಅರ್ಥಾತ್ ಪ್ರತಿಯೋಗಿಯನ್ನು ಬಿಟ್ಟು ಅಭಾವವು ಎಲ್ಲಿಯೂ ತೋರುವದಿಲ್ಲ ಎಂಬ ಭಾವವು. ಈ ಲಕ್ಷಣಾತ್ಮಕವಾದ ಅಭಾವವು ಯಾವದಾದರೊಂದು ಸ್ಥಳದಲ್ಲಿ ತಿಳಿಸಿಕೊಳ್ಳಬೇಕಾಗುತ್ತದೆ. ವಿಶೇಷಣ ಮಾದ ತಾವಿನಲ್ಲಿ ತತ್ ಅಂದರೆ ವಿಶೇಷ್ಯಮಾದ ಅಭಾವವು ತಿಳಿಸಿಕೊಳ್ಳುವದಾಗಿ ರುತ್ತದೆ. ಇಲ್ಲಿ ಸ್ಥಳಕ್ಕೆ ವಿಶೇಷಣವೆಂದೂ ಅಭಾವಕ್ಕೆ ವಿಶೇಷ್ಯವೆಂದೂ ಹೇಳಿ ದ್ದಾರೆ. ಯಾಕಂದರೆ; ಘಟವಿಟ್ಟ ಸ್ಥಳವನ್ನು ಕಂಡನಂತರ ಘಟವಿಲ್ಲೆಂಬ ಅಭಾವಜ್ಞಾನವಾಗುತ್ತದೆ. ಆದ್ದರಿಂದ ವ್ಯಾವರ್ತಕ ಮಾಡಿ ತಿಳಿಸುವದು ಸ್ಥಳ ವಾದ್ದರಿಂದ ವಿಶೇಷಣವಾಗಿದೆ. ವ್ಯಾವರ್ತ್ಯ 'ರೂಪದಿಂದ ಅರಿಸಿಕೊಳ್ಳುವದರಿಂದ ಅಭಾವವು ವಿಶೇಷ್ಯವಾಗಿರುತ್ತದೆ. ವ್ಯಾವರ್ತಕ ಅಂದರೆ, ಬೇರೆ ಮಾಡುವಂಥಾದ್ದು. ಹೇಗಂದರೆ 'ಯಾವನಿಗಾದರೂ ಘಟವನ್ನಿಟ್ಟ ಸ್ಥಳವನ್ನು ಕಂಡಮೇಲೆ, ಘಟದ ಅಭಾವ ಜ್ಞಾನವಾಗುತ್ತದೆ. ಆದ್ದರಿಂದ ಸ್ಥಳವು ತನ್ನಲ್ಲಿ ಅನೇಕ ಅಭಾವಗಳಿ ದ್ದರೂ, ಅವುಗಳಿಂದ ಬೇರೆಮಾಡಿ, ಘಟದ ಅಭಾವವನ್ನು ಮಾತ್ರ ತಿಳಿಸುವ ದಾಗಿದೆ. ಅದರಿಂದ ಸ್ಥಳವು ವ್ಯಾವರ್ತಕವಾಗಿದೆ. ಘಟದ ಅಭಾವವು ಅನ್ಯ ಅನೇಕ ಅಭಾವಗಳಿಂದ ಬೇರೆಯಾಗಿ ತಿಳಿಸಿಕೊಂಡಿತು. ಅದರಿಂದ ಅಭಾವವು ವ್ಯಾವರ್ತ್ಯವೆಂದು ಹೇಳಲ್ಪಡುತ್ತದೆ. ವ್ಯಾವರ್ತಕವು **ವಿಶೇಷಣವಾಗಿದೆ. ವ್ಯಾವರ್ತ್ಯವು ವಿಶೇಷ್ಯವಾಗಿದೆ.** ಆದ್ದರಿಂದಲೇ ಗ್ರಂಥಕರ್ತರು '**ವಿಶೇಷಣ ಮಾದ ತಾವಿನೊಳಗೆ** ತತ್ ಅರುಹಿಕೊಳುತಿರ್ಕು" ಎಂದು ಹೇಳಿರುವರು.

**ಬಳಿಕ,** ಇದರಂತೆ; ಎಲ್ಲ ಅಭಾವಗಳು ಪ್ರತಿಯೋಗಿ ಸಾಪೇಕ್ಷವುಳ್ಳವು ಗಳಾಗಿ ಸಾಮಗ್ರಿಗಳಿಂದ ತಿಳಿಸಿಕೊಳ್ಳುತ್ತವೆಂದು ಹೇಳುತ್ತಾರೆ.

**ಸಕಲಂ ವಿಶೇಷಣಾತ್ಮಕವಾದ ಬೋಧವಾ |**
**ಸಕಲ ದೊಡನೊಂದು. ನೆಲೆಯಲ್ಲಿ ಸಾಮಗ್ರಿ |**
**ನಿಕರದಿಂದರುಹಿ ಕೊಳಬೇಕು** ||೪||

**ಟೀಕಾ:-** ಸಕಲಂ=ಎಲ್ಲ, ವಿಶೇಷಣಾತ್ಮಕವಾದಬೋಧವು=ವಿಶೇಷಣತಾ ಸಂಬಂಧದಿಂದ ತೋರುವ ಅಭಾವಜ್ಞಾನವು, ಆಸಕಲದೊಡನೆ=ಆಯಾ **ಪ್ರತಿ** ಯೋಗಿಗಳ ಜ್ಞಾನಸಹಿತವಾಗಿ, ಒಂದುನೆಲೆಯಲ್ಲಿ=ಯಾವದಾದರೊಂದು **ಅನು**

ಯೋಗಿಯಾದ ಸ್ಥಳದಲ್ಲಿ, ಸಾಮಗ್ರಿನಿಕರದಿಂದ=ಸಾಮಗ್ರಿಗಳ ಸಮೂಹದಿಂದ, ಅರುಹಿಕೊಳಬೇಕು=ತಿಳಿಸಿಕೊಳ್ಳುತ್ತಿರಬೇಕು.

**ತಾತ್ಪರ್ಯ:-** ಉಕ್ತ ಘಟದ ಅಭಾವದಂತೆ ಪ್ರತಿಯೊಂದು ಅಭಾವಗಳು ಇರುತ್ತವೆ. ಇಲ್ಲಿ 'ವಿಶೇಷಣಾತ್ಮಕ ಬೋಧವು, ಅಂದರೆ, ಅಭಾವಜ್ಞಾನವೆಂದು ತಿಳಿಯಬೇಕು. ಯಾಕಂದರೆ, ಈ ವಿಷಯವು ವೃತ್ತಿ ಪ್ರಭಾಕರದ ಪ್ರತ್ಯಕ್ಷ ಪ್ರಮಾಣದಲ್ಲಿ ಹೇಳಿದೆ. ಏನಂದರೆ– ಯಾವ ಭೂತಳದಲ್ಲಿ ಘಟಾಭಾವವು ಚಾಕ್ಷುಷ ಪ್ರತ್ಯಕ್ಷವಾಗುವದೋ, ಆ ಭೂತಳದಲ್ಲಿ ನೇತ್ರದ ಸಂಯೋಗ ಸಂಬಂಧವಿರುತ್ತದೆ. ಆದ್ದರಿಂದ ನೇತ್ರ ಸಂಬಂಧ ಭೂತಳದಲ್ಲಿ ಘಟಾಭಾವಕ್ಕೆ ವಿಶೇಷಣತಾ ಸಂಬಂಧ ವಿರುತ್ತದೆ. ಎಂದು ಹೇಳಿರುವರು. ಆದ್ದರಿಂದ ಇಲ್ಲಿ ವಿಶೇಷಣಾತ್ಮಕ ಬೋಧವು ಅಂದರೆ ಅಭಾವಜ್ಞಾನವೆಂದು ಅರ್ಥವಾಗುತ್ತದೆ. ಹೀಗೆ ಪ್ರತಿಯೊಂದು ಅಭಾವ ಗಳು ತಮ್ಮ ತಮ್ಮ ಪ್ರತಿಯೋಗಿಗಳ ಜ್ಞಾನಾಧೀನಗಳಾಗಿ ತೋರುತ್ತಿರುತ್ತವೆ. ಅಭಾವಗಳು ಪ್ರತ್ಯಕ್ಷವಾಗಬೇಕಾದರೆ, ಯಾವದಾದರೊಂದು ಸ್ಥಳದಲ್ಲಿ ಅವು ಮುಂದೆ ಹೇಳುವ ಸಾಮಗ್ರಿಗಳಿಂದ ತಿಳಿಸಿಕೊಳ್ಳುತ್ತಿರುತ್ತವೆ. ಅಂದರೆ, ಗೋಚರ ಗಳಾಗುತ್ತವೆಂಬ ಭಾವವು.

**ಬಳಿಕ,** ಅಭಾವವು ಪ್ರತ್ಯಕ್ಷವಾಗಬೇಕಾದರೆ, ಸಾಮಗ್ರಿಗಳು ಯಾವು ಇರು ವವು ? ಎಂದು ಕೇಳಿದರೆ? ಅಭಾವ ಜ್ಞಾನದ ಸಾಮಗ್ರಿಗಳನ್ನು ನಿರೂಪಣ ಮಾಡುತ್ತಾರೆ.

**ಭಾವವೊಂದಿಲ್ಲದಿಹ ಠಾವು ಕರಣಾದಿ ತ ।**
**ದ್ಭಾವದ ಸ್ಮರಣೆಗಳು ಕೂಡೆ ಸಾಮಗ್ರಿ ।**
**ಯಾವದೆಂದೆಂಬೊಡಿದು ತಾನೆ ।** ॥೫॥

**ಟೀಕಾ:-** ಸಾಮಗ್ರಿಯು=ಅಭಾವವನ್ನು ಅರಿಯುವ ಸಾಧನವು, ಯಾವದು= ಯಾವದಿರುವದು ? ಎಂದೊಂಬೊಡೆ=ಹೀಗೆ ನೀನು ಕೇಳಿದರೆ, ಕರಣಾದಿ=ನೇತ್ರ, ಮತ್ತು ಮನಸ್ಸು ಕರಣಗಳಿಗೆ. ಭಾವವೊಂದಿಲ್ಲದಿಹಠಾವು=ಪ್ರತಿಯೋಗಿಯಾದ ಘಟವಿಲ್ಲದ ಅನುಯೋಗಿಯಾದ ಸ್ಥಳದ ಜ್ಞಾನವು,(ನೇತ್ರಕ್ಕಾಗಲು) ತದ್ಭಾವದ ಸ್ಮರಣೆಗಳು= ಆ ಪ್ರತಿಯೋಗಿಯಾದ ಘಟವಿಲ್ಲ ಇತ್ತು. ಈಗ ಅದಿಲ್ಲವೆಂಬ ಅದರ ಸ್ಮೃತಿಯು (ಮನಸ್ಸಿಗಾಗಲು) ಕೂಡೆ=ಹೀಗೆ ಎರಡು ಜ್ಞಾನಗಳು ಏಕಕಾಲಕ್ಕೆ ಆಗಲು, ಇದು ತಾನೆ=ಇದೇ ಸಾಮಗ್ರಿಯೆನಿಸುವದು.

**ತಾತ್ಪರ್ಯ:-** ಅಭಾವವನ್ನು ಅರಿಯುವ ಸಾಧನಸಾಮಗ್ರಿಯು ಯಾವದು? ಎಂದು ನೀನು ಕೇಳಿದರೆ, ಇದಕ್ಕೆ ನಾವು ಉತ್ತರವನ್ನು ಹೇಳುತ್ತೇವೆ. ಕೇಳು.

ಏನಂದರೆ, "**ಧರ್ಮಿಗ್ರಹಣ ಪ್ರತಿಯೋಗಿಸ್ಮರಣ ಜ್ಞಾನಂ ವಿನಾ ಅಭಾವಸ್ಯ ಅನುಭವಿತುಮಶಕ್ಯತ್ವಾತ್**" ನೇತ್ರಕ್ಕೆ ಧರ್ಮಿಯಾದ ಭೂತಳದ ಪ್ರತ್ಯಕ್ಷ ಗ್ರಹಣವಾಗಬೇಕು. ಅನಂತರ ಮನಸ್ಸಿಗೆ ಪ್ರತಿಯೋಗಿಯಾದ ಘಟದ ಸ್ಮರಣ ಜ್ಞಾನವಾಗಬೇಕು. ಹೀಗೆ **ಅನುಯೋಗಿಯ ಪ್ರತ್ಯಕ್ಷಜ್ಞಾನ,** ಮತ್ತು **ಪ್ರತಿಯೋಗಿಯ ಸ್ಮೃತಿಜ್ಞಾನ,** ಎರಡು ಜ್ಞಾನಗಳು ಕೂಡಿದರೇನೇ ಅಭಾವದ ಜ್ಞಾನವಾಗುವದು, ಇಲ್ಲದಿದ್ದರೆ, ಅಭಾವದ ಜ್ಞಾನವು ಆಗುವದು ಶಕ್ಯವಿಲ್ಲ. ಎಂಬದಾಗಿ ಶ್ರೀಮತ್ಸುರೇಶ್ವರಾಚಾರ್ಯರಿಂದ ವಿರಚಿತವಾದ ನೈಷ್ಕರ್ಮ್ಯಸಿದ್ಧಿಯ ಟೀಕಾಕಾರರು ಸ್ಪಷ್ಟವಾಗಿ ಹೇಳಿದ್ದಾರೆ. ಇದೇ ಅರ್ಥದ ಭಾವವು ಉಕ್ತ ಪದ್ಯದಲ್ಲಿಯೂ ಇರುತ್ತದೆ. ಧರ್ಮಿ, ಮತ್ತು ಅನುಯೋಗಿ ಈ ಶಬ್ದಗಳು ಪರ್ಯಾಯ ವಾಚಕಗಳಾಗಿವೆ. **ಭಾವವೊಂದಿಲ್ಲದಿಹಠಾವು** ಅಂದರೆ ಅನುಯೋಗಿಯಾದ ಭೂತಳವಾಗಿದೆ. **ತದ್ಭಾವದ ಸ್ಮರಣೆ** ಅಂದರೆ ಪ್ರತಿಯೋಗಿಯಾದ ಘಟದ ಸ್ಮೃತಿಯಾಗಿದೆ. ಇವೆರಡೂ ಪದಗಳ ಮಧ್ಯದಲ್ಲಿ 'ಕರಣಾದಿ' ಎಂಬ ಪದವು ದೇಹಳೀದೀಪದಂತೆ ಮಧ್ಯದಲ್ಲಿ ಇರಿಸಿರುವರು. ಆದ್ದರಿಂದ ಭೂತಳ ಪ್ರತ್ಯಕ್ಷಕ್ಕೆ ನೇತ್ರಕರಣಬೇಕು. ಘಟದ ಸ್ಮರಣಕ್ಕೆ ಮನೋಕರಣಬೇಕು. ಹೀಗೆ ಪ್ರತ್ಯಕ್ಷ ಜ್ಞಾನ, ಸ್ಮೃತಿಜ್ಞಾನಗಳು ಎರಡು ಕೂಡಿದರೇನೆ ಒಂದು ಅಭಾವದ ಜ್ಞಾನವಾಗುವದೆಂಬ ಭಾವವು. ಆದ್ದರಿಂದ ಎರಡು ಜ್ಞಾನಗಳು ಆಗುವದೇ ಅಭಾವ ಜ್ಞಾನದ **ಸಾಮುಗ್ರಿ**ಯೆನಿಸುವದು.

**ಬಳಿಕ,** ಅದೆಯೆಂಬ ಭಾವಜ್ಞಾನಕ್ಕೆ ಯಾವ ಕರಣಾದಿ ಸಾಮುಗ್ರಿಯು ಬೇಕೋ; ಇಲ್ಲ ಎಂಬ ಅಭಾವ ಜ್ಞಾನಕ್ಕೂ ಅವೇ ಕರಣಗಳು ಬೇಕಾಗುತ್ತವೆ. ಎಂದು ನಿರೂಪಣ ಮಾಡುತ್ತಾರೆ.

**ವಸ್ತು ಸದ್ಭಾವಮಂ ವಿಸ್ತರಿಪೊಡಾವಾವ ।**
**ವಸ್ತುವಿರಬೇಹು ದದನೆ ಮತ್ತಿಲ್ಲೆಂಬ ।**
**ಪ್ರಸ್ತುತಕ್ಕನಿತುಮಿರವೇಳ್ಕು ॥೬॥**

**ಟೀಕಾ:-** ವಸ್ತುಸದ್ಭಾವಮಂ=ವಸ್ತುವಿನ ಇರುವಿಕೆಯನ್ನು, ವಿಸ್ತರಿಪೊಡೆ= ಅರಿಯಬೇಕಾದರೆ, ಆವಾವ ವಸ್ತುವಿರಬೇಹುದು=ಯಾವ ಯಾವ ಸಾಧನಗಳು ಇರಬೇಕೋ, ಅದನೆ=ಆ ಪದಾರ್ಥವನ್ನೇ, ಮತ್ತೆ ಇಲ್ಲೆಂಬ=ತಿರಿಗಿ ಇರುವದಿಲ್ಲವೆಂಬ ಅಭಾವದ, ಪ್ರಸ್ತುತಕ್ಕೆ=ಜ್ಞಾನಕಾಲದಲ್ಲಿಯಾದರೂ, ಅನಿತುಂ=ಅಷ್ಟು ಸಾಮುಗ್ರಿಯು, ಇರವೇಳ್ಕುಂ=ಇರಲಿಕ್ಕೆ ಬೇಕು.

**ತಾತ್ಪರ್ಯ:-** ಘಟವು ಇರುತ್ತದೆಯೆಂಬ ಭಾವ ವಸ್ತುವಿನ ಜ್ಞಾನಕಾಲದಲ್ಲಿ ಯಾವ ನೇತ್ರ ಮನಸ್ಸುಗಳ ವ್ಯಾಪಾರವು ಹೇಗೆ ಬೇಕಾಗಿರುತ್ತದೆಯೋ;

ಹಾಗೇ ಆ ಘಟವಿಲ್ಲವೆಂದು ಘಟದ ಅಭಾವವನ್ನು ಅರಿಯುವ ಕಾಲದಲ್ಲಿ ಯಾದರೂ. ನೇತ್ರಮನಸ್ಸುಗಳು ಅವಶ್ಯವಾಗಿ ಬೇಕಾಗುತ್ತವೆ. ಘಟದ ಭಾವವನ್ನು ಅರಿಯುವದಕ್ಕೆ ಬೇಕಾದ ಸಾಮಗ್ರಿಯು ಅದರ ಅಭಾವವನ್ನು ಅರಿಯುವದಕ್ಕೂ ಬೇಕಾಗಿರುತ್ತದೆ. ಅರ್ಥಾತ್ ಭಾವ ಮತ್ತು ಅಭಾವ ಇವುಗಳಿಗೆ ಸಾಧನಗಳಾದ ನೇತ್ರ ಮನಸ್ಸುಗಳ ವ್ಯಾಪಾರವು ಅವಶ್ಯ ಬೇಕಾಗಿರುತ್ತದೆಂಬ ಭಾವವು.

ಬಳಿಕ, ಇಲ್ಲಿಯು ವರೆಗೆ ಅಭಾವದ ಲಕ್ಷಣ, ಸ್ವರೂಪು, ಸಾಮಗ್ರಿ, ಇವುಗಳನ್ನು ಹೇಳಿದರು. ಇನ್ನು ಮೇಲೆ, ಪೂರ್ವದಲ್ಲಿ ಹೇಳಿದ ಅರುವಿನ ಅಭಾವಜ್ಞಾನಕ್ಕೂ ನೇತ್ರ ಮನಸ್ಸುಗಳ ವ್ಯಾಪಾರವು ಬೇಕಾಗುತ್ತದೆ. ವ್ಯಾಪಾರವನ್ನೊಪ್ಪಿದರೆ. ಅದು ನಿದ್ರೆಯಲ್ಲ. ಜಾಗರಣವೆಂದು ಹೇಳಬೇಕಾಗುತ್ತದೆ. ಹೀಗೆ ಹೇಳಿದರೆ, ನಿದ್ರೆಯಲ್ಲಿ ಜ್ಞಾನದ ಅಭಾವವನ್ನು ನಾನು ಕಂಡೆ, ಎಂದು ನೀನು ಹೇಳಿದ್ದು ಅಸಿದ್ಧವಾಗುತ್ತದೆ. ಆದ್ದರಿಂದ ನಿದ್ರೆಯಲ್ಲಿ ಅರುವಿನ ಅಭಾವವನ್ನು ಹೇಳುವದು ಯೋಗ್ಯವಲ್ಲವೆಂದುಉತ್ತರವನ್ನು ಹೇಳುತ್ತಾರೆ.

**ಅಲ್ಲಿ ಚಿದಭಾವ ಮಿಂತಿಲ್ಲ ದರುಹಿಸದು ಕೇ ।**
**ಳಲ್ಲಿ ಸಾಮುಗ್ರಿಗಳನುಳ್ಳೊಡದು ನಿದ್ರೆ ।**
**ಯಲ್ಲವೀ ಜಾಗರವ್ವೆಸೆ ॥೭॥**

**ಟೀಕಾ:-** ಅಲ್ಲಿ=ನಿದ್ರೆಯಲ್ಲಿ, ಚಿದಭಾವಂ=ಅರುವಿನ ಅಭಾವವು, ಇಂತಿಲ್ಲದೆ= ಹೇಳಿದ ಸಾಮುಗ್ರಿಯಿರದೆ, ಅರುಹಿಸದು=ತಿಳಿಸಿಕೊಳ್ಳಲಾರದು, ಕೇಳ್=ವಿಚಾರ ಮಾಡಿ ನೋಡು, ಅಲ್ಲಿ=ನಿದ್ರೆಯಲ್ಲಿ, ಸಾಮುಗ್ರಿಗಳನುಳ್ಳೊಡೆ=ನೇತ್ರ ಮನಸ್ಸುಗಳ ವ್ಯಾಪಾರವುಂಟೆಂದು ಹೇಳಿದರೆ, ಅದು ನಿದ್ರೆಯಲ್ಲವು=ಅದುನಿದ್ರೆಯಾಗುವದಿಲ್ಲ. ಈ ಜಾಗರಣವ್ವೆಸೆ=ಈ ಜಾಗ್ರದವಸ್ಥೆಯೆನಿಸುವದು.

**ತಾತ್ಪರ್ಯ:-** ಪೂರ್ವದಲ್ಲಿ ಹೇಳಿದ ಘಟಾಭಾವದಂತೆ ನಿದ್ರೆಯಲ್ಲಿ ಅರುವಿನ ಅಭಾವವನ್ನು ಕಂಡೆನು. ಎಂದು ನೀನು ಹೇಳಬೇಕಾಗುತ್ತದೆ. ಇಲ್ಲಿ ಅರುವಿನ ಅಭಾವಕ್ಕೆ ಅರುವೇಪ್ರತಿಯೋಗಿಯಾಗಿರುವದು. ಆ ಜ್ಞಾನದ ಅಭಾವವನ್ನು ನಿದ್ರೆಯಲ್ಲಿ ಕಂಡೆನೆಂದು ಹೇಳುವದರಿಂದ; ಸುಪ್ತಿಯು **ಅನುಯೋಗಿ** ಯೆನಿಸುವದು. ಅನುಯೋಗಿಯಾದ ಸುಪ್ತಿಗೆ ನೇತ್ರ ಸಂಬಂಧವಾಗಿ **ಪ್ರತ್ಯಕ್ಷ** ಜ್ಞಾನವಾಗಬೇಕು. ಬಳಿಕ ಪ್ರತಿಯೋಗಿಯಾದ ಅರುವಿನ **ಸ್ಮೃತಿ**ಜ್ಞಾನವು ಮನಸ್ಸಿಗೆ ಆಗಬೇಕು. ಅನಂತರ ನಿನಗೆ ಅರುವಿನ ಅಭಾವವು ಗೋಚರವಾಗುವದು. ಈರೀತಿ ಅನುಯೋಗಿಯಾದ ಸುಪ್ತಿಯ ಪ್ರತ್ಯಕ್ಷಜ್ಞಾನ, ಪ್ರತಿಯೋಗಿಯಾದ ಅರುವಿನ ಸ್ಮೃತಿಜ್ಞಾನ, ಹೀಗೆ ಎರಡು ಜ್ಞಾನಗಳಾದ ಮೇಲೆ ನಿನಗೆ ಅಭಾವಜ್ಞಾನವಾಗು

ವದು. **ನೇತ್ರ ಮತ್ತು ಮನಸ್ಸು** ಇವುಗಳ ವ್ಯವಹಾರ ವಿಲ್ಲದೆ ಅಭಾವ ಪ್ರತ್ಯಕ್ಷ ವಾಗಲಾರದು. ನೇತ್ರಾದಿಕರಣ ಸಾಮಗ್ರಿಗಳನ್ನು ನೀನು ಉಂಟೆಂದು ಅಂಗೀಕರಿಸಿದರೆ, ಅದು ನಿದ್ರೆಯಾಗಲಿಲ್ಲ. ಕಿಂತು ಜಾಗ್ರದವಸ್ಥೆಯಾಯಿತು. ನಿದ್ರೆಯಲ್ಲಿ ಅರುವಿನ ಅಭಾವವನ್ನು ಕಂಡೆನು. ನನಗೆ ಗೋಚರವಾಯಿತು. ಎಂಬ ನಿನ್ನ ಮಾತುಗಳು ಸುಳ್ಳಾಗುತ್ತವೆ. ನಿದ್ರೆಯಲ್ಲಿ ನೇತ್ರ ಮನಸ್ಸುಗಳ ವ್ಯಾಪಾರವನ್ನು ಅಂಗೀಕಾರಮಾಡದೆ ಹೋದರೆ, ಅಭಾವ ಗೋಚರವಾಗುವದಿಲ್ಲ. ಅಂಗೀಕರಿಸಿದರೆ ಅದು ನಿದ್ರೆಯಾಗುವದಿಲ್ಲ. ಆದ್ದರಿಂದ ಸುಷುಪ್ತಿಯಲ್ಲಿ ಅರುವಿನ ಅಭಾವವನ್ನು ಕಂಡೆನೆಂದು ಹೇಳುವದು ಸಮೀಚೀನವಲ್ಲ. ಮತ್ತು '**ಮೇ ಮುಖೇ ಜಿಹ್ವಾ ನಾಸ್ತಿ**, ನನ್ನ ಬಾಯಲ್ಲಿ ನಾಲಿಗೆಯಿಲ್ಲೆಂಬ ವಾಕ್ಯದಂತೆ ವ್ಯಾಘಾತ ದೋಷವುಳ್ಳದ್ದಾಗಿರುತ್ತದೆಂಬ ಭಾವವು.

ಬಳಿಕ,ಮತ್ತೂ ಗೃಹದಲ್ಲಿ ಘಟಾಭಾವವನ್ನು ಸಿದ್ಧ ಮಾಡಬೇಕಾದರೆ, ಬೇರೆ ಸ್ಥಳದಲ್ಲಿ ಘಟವನ್ನು ತೋರಿಸಬೇಕಾಗುವದು. ಇದರಂತೆ; ನಿದ್ರೆಯಲ್ಲಿ ಜ್ಞಾನದ ಅಭಾವವನ್ನು ಸಿದ್ಧಮಾಡಿ ತೋರಿಸಬೇಕಾದರೆ, ಬೇರೆ ಸ್ಥಳದಲ್ಲಿ ಜ್ಞಾನದ ಭಾವವನ್ನು ಹೇಳಬೇಕಾಗುತ್ತದೆ. ಅದು ನಿನ್ನಿಂದ ಹೇಳಲಿಕ್ಕೆ ಬರುವದಿಲ್ಲೆಂದು ಹೇಳುತ್ತಾರೆ.

**ಇಲ್ಲವೆಯ ನಾರಯ್ಯೆ ಲುಳ್ಳ ನೆಲೆಯೊಂದು ಬೇ।**
**ಕಲ್ಲಿ ಚಿತ್ತಿಲ್ಲ ದುದನರಿಯೆ ಬೇರೆ ನೆಲೆ ।**
**ಯೆಲ್ಲಿಯುಂ ತೋರದುದರಿಂದ** ॥೮॥

**ಟೀಕಾ:**-ಇಲ್ಲವೆಯನು = ಅಭಾವವನ್ನು ಆರಯ್ಯಲ್=ವಿಚಾರಮಾಡಲು; ಉಳ್ಳನೆಲೆಯೊಂದುಬೇಕು=ಅರುವು ಇರುವ ಸ್ಥಳವೊಂದು ಬೇಕಾಗುತ್ತದೆ, ಅಲ್ಲಿ= ನಿದ್ರೆಯಲ್ಲಿ, ಚಿತ್ತಿಲ್ಲದುದನು=ಅರುವಿನ ಅಭಾವವನ್ನು,ಅರಿಯೆ=ವಿಚಾರಮಾಡಲು, ಬೇರೆನೆಲೆಯೆಲ್ಲಿಯುಂ=ಎರಡನೇ ಸ್ಥಳವು ಎಲ್ಲಿಯಾದರೂ, ತೋರದುದರಿಂದ= ಪ್ರತೀತಿ ಯಾಗದೆ ಇರುವದರಿಂದ,

**ತಾತ್ಪರ್ಯ:**- ಘಟವು ಮನೆಯಲ್ಲಿ ಇಲ್ಲವೆಂದು ಅದರ ಅಭಾವವನ್ನು ಹೇಳಬೇಕಾದರೆ, ಪ್ರತಿಯೋಗಿಯಾದ ಘಟವು ನೀರನ್ನು ತರಲಿಕ್ಕೆ ಅನ್ಯತ್ರ ಒಯ್ದು ಇರುವರು ಅಥವಾ ಬೇರೆಯವರ ಮನೆಯಲ್ಲಿ ಉಂಟು. ಎಂದು ಸಿದ್ಧ ಮಾಡಿಕೊಡಬೇಕಾಗುತ್ತದೆ. ಹಾಗಾದರೇನೇ ಘಟದ ಅಭಾವವು ಅನುಯೋಗಿಯಾದ ಮನೆಯಲ್ಲಿ ಸಂಭವಿಸುತ್ತದೆ. ಇದರಂತೆ ನಿದ್ರೆಯಲ್ಲಿ ಅರುವಿಲ್ಲವೆಂದು ಅರುವಿನ ಅಭಾವವನ್ನು ಹೇಳಬೇಕಾದರೆ, ಪ್ರತಿಯೋಗಿಯಾದ ಅರುವು ಇಂಥಾ ಬೇರೆ ಸ್ಥಳದಲ್ಲಿ ಉಂಟೆಂದು ನೀನು ತೋರಿಸಬೇಕಾಗುತ್ತದೆ. ನಿದ್ರೆಯಲ್ಲಿ ಬೇರೆ

ಸ್ಥಳವು ಯಾವದೂ ಇಲ್ಲ. ಒಂದೇ ನಿದ್ರೆಯಲ್ಲಿಯೇ ಪೂರ್ವ ನಿದ್ರೆಯಲ್ಲಿ ಅರುವುಂಟು. ಉತ್ತರ ನಿದ್ರೆಯಲ್ಲಿ ಅರುವಿಲ್ಲೆಂದು ನೀನು ಹೇಳಬಹುದು. ಹೀಗೆ ಹೇಳಿದರೆ; ನಿದ್ರೆಯಲ್ಲಿ ಅರುವುಂಟೆಂದು ಒಪ್ಪಬೇಕಾಗುತ್ತದೆ. ಅಭಾವವು ಗೋಚರವಾಯಿತೆನ್ನುವದು ಸುಳ್ಳಾಗುತ್ತದೆ. ಉತ್ತರ ನಿದ್ರೆಯಲ್ಲಿ ಅರುವಿಲ್ಲ ಯೆಂದು ನೀನು ಅನ್ನಬಹುದು. ಇದು ಯೋಗ್ಯವಲ್ಲ. ಯಾಕಂದರೆ; ನಿದ್ರೆಯು ಒಂದೇ ಅದೆ. ಅದರಲ್ಲಿ ಭಾಗವಿಲ್ಲ. ಒಂದು ವೇಳೆ ಭಾಗ ಮಾಡಿ ಉತ್ತರದಲ್ಲಿ ಅಭಾವವನ್ನು ಹೇಳಿದರೆ, ನಿನಗೆ '**ಅರ್ಧಜರತೀಯ ನ್ಯಾಯವು**' ಸಂಭವಿಸುವದು. ಅಂದರೆ, ಒಂದೇ ಕೋಳಿಯ ಮುಖದ ಕಡೆಗಿರುವ ಅರ್ಧ ಭಾಗವನ್ನು ತಿನ್ನಲಿಕ್ಕೆ ತಕ್ಕೊಂಡು, ಬಾಕಿಕಡೆಗಿರುವ ಅರ್ಧ ಭಾಗವನ್ನು ಮತ್ತೆ ತತ್ತಿ ಹಾಕಲಿಕ್ಕೆ ಇಟ್ಟನಂತೆ; ಇದು ಅರ್ಧಜರತೀಯ ನ್ಯಾಯವು. ಇದರಂತೆ ನಿನ್ನ ಮಾತು ಆದ್ದರಿಂದ ಅಪಹಾಸ್ಯಕ್ಕೆ ಗುರಿಯಾಗಬೇಕಾಗುತ್ತದೆ. ಆದ್ದರಿಂದ ನಿದ್ರೆಯಲ್ಲಿ ಬೇರೆ ಸ್ಥಳವು ಯಾವದೂ ಇಲ್ಲವೆಂದು ಗ್ರಂಥಕಾರರು ಹೇಳಿದ್ದಾರೆ. ಒಂದೇ ನಿದ್ರೆಯಲ್ಲಿ ಅಂದರೆ ಒಂದೇ ಸ್ಥಳದಲ್ಲಿ ಭಾವ, ಮತ್ತು ಅಭಾವ, ಎರಡನ್ನು ಕಥನ ಮಾಡುವದು ಯೋಗ್ಯವಲ್ಲ. ಯಾಕಂದರೆ, ಭಾವಾಭಾವಗಳು ಪರಸ್ಪರ ಬೆಳಕು ಕತ್ತಲೆಗಳಂತೆ ವಿರೋಧಗಳಾಗಿರುತ್ತವೆ.

**ಶಿಷ್ಯನು:**– "ಜಾಗ್ರತ್ಸ್ವಪ್ನಂಗಳಲ್ಲಿ ಅರುವಿನ ಭಾವವುಂಟು. ಆದ್ದರಿಂದ ನಿದ್ರೆಯಲ್ಲಿ: ಅರುವಿನ ಅಭಾವವನ್ನು ಹೇಳುತ್ತೇನೆ. ಬೇರೆ ಸ್ಥಳದಲ್ಲಿ ಪ್ರತಿಯೋಗಿಯನ್ನು ತೋರಿಸಲಿಕ್ಕೆ ಬರುತ್ತದೆ. ಪ್ರತಿಯೋಗಿಯಾದ ಅರುವು ಜಾಗ್ರಾದಿ ಬೇರೆ ಸ್ಥಳದಲ್ಲಿ ಅದೆ. ಆದರಿಂದ ನಿದ್ರೆಯಲ್ಲಿ ಅದರ ಅಭಾವವು ಇರುತ್ತದೆ" ಎಂದು ಹೇಳಬಹುದು.

**ಗುರು:**– ನೀನು ನಿದ್ರೆಯಲ್ಲಿ ಅರುವಿನ ಅಭಾವವನ್ನು ಹೇಳುವಿ. ಆದರೆ ಪ್ರತಿಯೋಗಿಯಾದ ಅರುವನ್ನು ನಿದ್ರಾಸಮಕಾಲದಲ್ಲಿಯೇ ಅನ್ಯತ್ರ ನೀನು ತೋರಿಸಲಿಕ್ಕೆ ಬೇಕಾಗುತ್ತದೆ. ನಿದ್ರೆಯ ಸಮಕಾಲಕ್ಕೆ ಜಾಗ್ರತ್ ಸ್ವಪ್ನಗಳು ಇಲ್ಲವೇ ಇಲ್ಲ. ಕಿಂತು ಭಿನ್ನ ಕಾಲ, ಭಿನ್ನ ದೇಶಗಳಲ್ಲಿರುತ್ತವೆ. ಆದ್ದರಿಂದ ಭಿನ್ನ ಕಾಲದಲ್ಲಿರುವ ಜಾಗ್ರಾದಿಗಳಲ್ಲಿ ಪ್ರತಿಯೋಗಿಯಾದ ಅರುವನ್ನು ತೋರಿಸುವದು ಸಮೀಚೀನವಾಗದು. ಆದ್ದರಿಂದ ಬೇರೆ **ನೆಲೆಯೆಲ್ಲಿಯೂ** ಇಲ್ಲವೆಂದು ಹೇಳಿರುವದು ಯೋಗ್ಯವದೆ. ಅದರಿಂದ ನಿದ್ರೆಯಲ್ಲಿ ಅರುವಿನ ಅಭಾವವನ್ನು ಹೇಳುವದು ತನ್ನ ಅಜ್ಞಾನವನ್ನು ದ್ಯೋತಕ ಮಾಡುವದಾಗಿದೆ. ಹೀಗನ್ನುವದ ಸರಿಯಲ್ಲ.

**ಬಳಿಕ,** ಜಾಗರಣ ಸ್ವಪ್ನಗಳಲ್ಲಿ ನಾನು ನಾನು ಎಂದು ಅಹಂಕಾರಪೂರ್ವಕ ಅರಿಯುತ್ತಿರುವಂತೆ, ನಿದ್ರೆಯಲ್ಲಿ ಅಹಂಕಾರದಿಂದೊಡಗೂಡಿದ ಅರುವಿಲ್ಲ. ಆದ್ದ

ರಿಂದ ನಿದ್ರೆಯಲ್ಲಿ ಅರುವಿನ ಅಭಾವವನ್ನು ಹೇಳುತ್ತಲಿದ್ದೇನೆ. ಎಂದು ಶಂಕೆಯನ್ನು ಮಾಡಲು, ಅರುವು ಸ್ವತಃಸಿದ್ಧ ಅನುಭವ ರೂಪವಾಗಿರಲು, ಇಲ್ಲೆಂದು ಹೇಳುವದು ಅಯುಕ್ತವಾಗಿದೆ. ಬಾಯಲ್ಲಿ ಸಕ್ಕರಿಯನ್ನು ಮುಕ್ಕಿ, ಸೀರುಚಿಯನ್ನು ಪೀರುತ್ತಲಿದ್ದು, ಸಕ್ಕರಿ ಸೀಯಿಲ್ಲವೆಂಬುವನಂತೆ, ಅಯೋಗ್ಯವಾಗಿದೆ. ಆದ್ದರಿಂದ ಅರುವಿರುವದೆಂಬುದನ್ನು ಅನುಭವಕೊಟ್ಟು ಹೇಳುತ್ತಾರೆ.

**ಅರುವಿಲ್ಲವೆನಬಾರದರಿವೆಂಬ ನಿಯಮದಿಂ ।**
**ತರಿವ ಹಮ್ಮಿಲ್ಲದಿರೆ ನಿದ್ರೆಯದನೆ ಚಿ ।**
**ತ್ತರಿವುತಿಹುದಲ್ಲಿ ನಿಜದಿಂದ ॥೯॥**

**ಟೀಕಾ:-** ಅರುವಿಲ್ಲವೆನಬಾರದು=ನಿದ್ರೆಯಲ್ಲಿ ಅರುವಿಲ್ಲವೆಂದು ಹೇಳಬಾರದು, ಅರಿವೆಂಬ ನಿಯಮದಿಂ=ನಿದ್ರೆಯಿಂದೆದ್ದವನು ನಿತ್ಯದಲ್ಲಿಯೂ ಅರಿಯುತ್ತೇನೆಂಬ ಅನುಭವವಿದ್ದುದರಿಂದ, ಅರಿವಹಮ್ಮು ಇಲ್ಲದಿರೆ=ಜಾಗ್ರಾದಿಗಳಲ್ಲಿ ಅರಿಯುವಂಥಾ ಅಹಂಕಾರವು ನಿದ್ರೆಯಲ್ಲಿ ಇಲ್ಲದಿದ್ದರೂ, ನಿದ್ರೆಯದನೆ=ಆ ತಮೋರೂಪ ನಿದ್ರೆಯನ್ನು, ಅಲ್ಲಿ=ನಿದ್ರೆಯಲ್ಲಿ, ನಿಜದಿಂದ=ಸತ್ಯವಾಗಿ, ಚಿತ್ತು=ಚಿದ್ರೂಪವು, ಅರಿವು ತಿಹುದು=ತಿಳಿಯುತ್ತಿರುವದು

**ತಾತ್ಪರ್ಯ:-**ಜಾಗ್ರತ್ಸ್ವಪ್ನಂಗಳಲ್ಲಿ ಅರಿಯುವ ಅಹಂಕಾರವು ಇಲ್ಲದ್ದರಿಂದ; ನಿದ್ರೆಯಲ್ಲಿ ಅರುವಿಲ್ಲವೆಂದು ಹೇಳಬಾರದು. ಯಾಕಂದರೆ, ಹೀಗೆ ಹೇಳುವದು ಅನುಭವ ವಿರೋಧವಾಗುತ್ತದೆ. ಅದು ಅನುಭವವು ಯಾವದು ? ಅಂದರೆ, ನಿದ್ರೆಯಲ್ಲಿ ಏನು ತಿಳಿಯದೆ ಸುಖವಾಗಿ ಮಲಗಿದ್ದೆನೆಂಬ ಸ್ಮೃತಿಜ್ಞಾನ ಮೂಲಕ ನಿದ್ರೆಯಲ್ಲಿ ಅರುವು ಇರುತ್ತದೆ. ನಿದ್ರೆಯಲ್ಲಿ ಅರಿಯದ ವಿನಾ ಸ್ಮರಣ ಬರಲಾರದು. ಸುಖವಾಗಿದ್ದೆನೆಂಬ ಅರವು ನಿತ್ಯದಲ್ಲಿ ಸರ್ವರಿಗೂ ತಪ್ಪದೆ ಆಗುತ್ತದೆ. ಆದ್ದರಿಂದ ನಿದ್ರೆಯಲ್ಲಿ ಅರುವಿಲ್ಲವೆಂದು ಹೇಳಬಾರದು. ನಿದ್ರೆಯಲ್ಲಿ ಅಹಂಕಾರವು ತನಗೆ ಕಾರಣವಾದ ಅವಿದ್ಯೆಯಲ್ಲಿ ಲಯವಾಗಿರುತ್ತದ. ಆ ತಮೋರೂಪ ಅವಿದ್ಯೆಯನ್ನು ಚಿದ್ರೂಪಾತ್ಮನು ತನ್ನ ಸ್ವಯಂ ಪ್ರಕಾಶ ಸ್ವರೂಪದಿಂದಲೇ ಬೆಳಗುತ್ತಿರುತ್ತಾನೆ. ಆದ್ದರಿಂದ ನಿದ್ರೆಯಲ್ಲಿ ಅರುವಿಲ್ಲವೆಂಬುವದು ಅನುಭವಕ್ಕೆ ವಿರೋಧವಾಗುತ್ತದೆ. ಅರ್ಥಾತ್ ನಿದ್ರೆಯಲ್ಲಿ ಸಾಮಾನ್ಯರೂಪ ಅರುವಿದೆ. ಅದೇ ಜಾಗರಣದಲ್ಲಿ ಅಹಂಕಾರ ಉಪಾಧಿಯೊಡನೆ ಕೂಡಿಕೊಂಡು ವಿಶೇಷವಾದ ಅರುವಾಗಿರುತ್ತದೆ. ನಿದ್ರೆಯಲ್ಲಿ ಸಾಮಾನ್ಯವಾದ ಅರುವೇ ಇಲ್ಲದೆ ಹೋದರೆ, ಜಾಗ್ರಾದಿಗಳಲ್ಲಿಯೂ ಅರುವು ತೋರಬಾರದಾಗಿತ್ತು. ತೋರುತ್ತದೆ. ಆದ್ದರಿಂದ ಅರುವಿಲ್ಲವೆಂದು ನುಡಿಯುವದು ಅಸಂಗತವಾಗಿದೆ.

**ಬಳಿಕ,** ಶಿಷ್ಯನು 'ನಿದ್ರೆಯಲ್ಲಿ ಸಾಮಾನ್ಯರೂಪ ಅರುವುಂಟು. ಎಂಬುದನ್ನು ನಾನು ಒಪ್ಪುತ್ತೇನೆ. ಅಹಂಕಾರ ವಿಶಿಷ್ಟಮಾದ ಅರುವು ನಿದ್ರೆಯಲ್ಲಿ ಇಲ್ಲ. ಎಂಬುದನ್ನು ನೀವು ಒಪ್ಪಬೇಕು. ಹೀಗಾದರೆ; ನಾನು ಅರುವಿಲ್ಲವೆಂಬುದು, ನೀವು ಅರುವುಂಟು ಎಂಬುದು ಎರಡೂ ಸರಿಹೋಗುತ್ತವೆ; ಎಂದು ಪ್ರಶ್ನೆಯನ್ನು ಮಾಡಲು, ಅರುಹಿಕೊಂಬ ಅರವು ಇಲ್ಲವೆಂದು ಅರಿಯಬೇಡ. ಅದು ಕೂಡಾ ನಿದ್ರೆಯಲ್ಲಿ ಇರುತ್ತದೆಂದು ಉತ್ತರವನ್ನು ಹೇಳುತ್ತಾರೆ.

**ಅರುವಿರ್ಪುದುರುಹಿಕೊಂಬರಿವೆ ತಾನಿಲ್ಲವೆಂ ।**
**ದರಿಯ ಬೇಡೆನಲು ಗುರುವರ್ಯ ನೀನೆಯಿದ ।**
**ನರುಹೆಂದೊಡಿಂತು ತಿಳುಪಿದನು ॥೧೦॥**

**ಟೀಕಾ:-** ಅರುವಿರ್ಪುದು=ಸಾಮಾನ್ಯರೂಪ ಅರುವುಂಟು, ಅರಹಿಕೊಂಬರಿವೆ ತಾನಿಲ್ಲವೆಂದರಿಯಬೇಡ=ಅಹಂಕಾರ ವಿಶಿಷ್ಟಮಾದ ಅರುವಾದರೂ ಇಲ್ಲವೆಂದು ತಿಳಿಯಬೇಡ, ಎನಲು=ಹೀಗೆ ಗುರುಗಳು ನುಡಿಯಲು, ಗುರುವರ್ಯ=ಹೇ ಗುರುನಾಥನೇ! ನೀನೇ=ನೀವೇ, ಇದನು=ಅರುಹಿಕೊಂಬರವು ಇರುವದನ್ನು, ಅರುಹು=ತಿಳಿಸು, ಎಂದೊಡೆ ಶಿಷ್ಯನು ಕೇಳಿದೊಡನೆ, ಇಂತು=ಮುಂದೆ ಹೇಳುವ ಪ್ರಕಾರ, ತಿಳುಪಿದನು=ತಿಳಿಸಿದನು.

**ತಾತ್ಪರ್ಯ:-** ನಿದ್ರೆಯಲ್ಲಿ ಸಾಮಾನ್ಯವಾದ ಅರುವುಂಟು. ಇದಲ್ಲದೆ ಅಹಂಕಾರೋಪಾಧಿಯಿಂದೊಡಗೂಡಿದ ವಿಶೇಷಮಾದ ಅರುವೂ ಉಂಟು. ಇದು ಕೂಡಾ ಇಲ್ಲವೆಂದು ನೀನು ಅರಿಯಬೇಡ, ಎಂದು ಗುರುಗಳು ಹೇಳಲು; ಆ ವಿಶೇಷಮಾದ ಅರುಹಿಕೊಂಬರಿವು ಹೇಗೆ ಇರುತ್ತದೆಂದು ಶಿಷ್ಯನು ಪ್ರಶ್ನೆಯನ್ನು ಮಾಡಿದ್ದಾನೆ. ಆ ಅಹಂಕಾರದಿಂದ ಕೂಡಿದ ಅರುವೂ ನಿದ್ರೆಯಲ್ಲಿರುತ್ತದೆ. ಹೇಗಂದರೆ, ಕನ್ನಡಿಯ ಉಪಾಧಿಯಿಂದ ತೋರುವ ವಿಶೇಷಮಾದ ಸೂರ್ಯನ ಪ್ರಕಾಶವು; ಕನ್ನಡಿ ಇರುವವರೆಗೆ ಇದ್ದಂತೆ ತೋರುತ್ತದೆ. ಕನ್ನಡಿಯನ್ನು ತೆಗೆಯಲು ಹೋದಂತೆ ತೋರುತ್ತದೆ. ಆ ವಿಶೇಷ ಪ್ರಕಾಶವು ಬಂದಂತೆ ಹೋದಂತೆ ಕನ್ನಡಿ ಉಪಾಧಿಯಿಂದ ತೋರಿದರೂ, ಬಂದಿಲ್ಲ. ಹೋಗಿಲ್ಲ. ಕಿಂತು, ಇದ್ದಂತೆಯೇ ಇರುತ್ತದೆ. ಕನ್ನಡಿ ಬಂದರೆ ಬಂದಂತೆ, ಹೋದರೆ ಹೋದಂತೆ, ತೋರುವದು **ಉಪಾಧಿಯ ಧರ್ಮವಾಗಿದೆ.** ಬಾರದೆ ಹೋಗದೆ **ಯಾವಾಗಲೂ** ಇರುವದು ಆ ಪ್ರಕಾಶದ **ಸ್ವರೂಪವಾಗಿದೆ.** ಇದು ಹೇಗೋ; ಹಾಗೇ ಈ ಅಹಂಕಾರ ವಿಶಿಷ್ಟಮಾದ ವಿಶೇಷ ಅರುವಾದರೂ, ಯಾವಾಗಲೂ ಇದ್ದೇ ಇರುವದು. ಜಾಗರಣ ಸ್ವಪ್ನಂಗಳಲ್ಲಿ ಅಹಂಕಾರವು ಇದ್ದರೆ; ಅರವು ಇದ್ದಂತೆ ತೋರುವದು.

ನಿದ್ರೆಯಲ್ಲಿ ಅಹಂಕಾರವಡಗಲು; ಅರುವು ಹೋದಂತೆ ತೋರುವದು. ಇದು ಆ ಅಹಂಕಾರದ ಧರ್ಮವಾಗಿದೆ ಹೊರ್ತು, ಅರುವಿನ ಧರ್ಮವಲ್ಲ. ಯಾಕಂದರೆ, ಅರುವು ಯಾವಾಗಲೂ ನಿತ್ಯ ನಿರ್ವಿಕಾರವಾಗಿರುತ್ತದೆ. ಬರುವದು, ಹೋಗುವದು ಅಹಂಕಾರವಲ್ಲದೆ ಅರುವಲ್ಲ. ನೀನು ಅಹಂಕಾರದ ಧರ್ಮವನ್ನು ಭ್ರಾಂತಿಯಿಂದ ಅರುವಿನಲ್ಲಿ ಆಕ್ಷೇಪಮಾಡುವಿ. ಅಹಂಕಾರೋಪಾಧಿಯು ಅಡಗಲು, ಅದರಲ್ಲಿರುವ ವಿಶೇಷವಾದ ಅರುವು ಸಾಮಾನ್ಯ ಅರುವಿನ ಸ್ವರೂಪದಿಂದ ಇರುತ್ತದೆ. ಜಾಗ್ರತ್ತಿನಲ್ಲಿ ಅಹಂಕಾರ ಬರಲು ಆ ಸಾಮಾನ್ಯವಾದ ಅರುವೇ ವಿಶೇಷ ರೂಪದಿಂದ ಪ್ರಕಟವಾಗುತ್ತದೆ. ಆದ್ದರಿಂದ ಉಪಾಧಿವಶದಿಂದ ಇರುವ ಅರುವಿಗೆ ಪ್ರಕಟ ಅಪ್ರಕಟ ಹೇಳಬೇಕಲ್ಲದೆ ಅರುವಿಲ್ಲವೆಂದು ಅಭಾವವನ್ನು ಹೇಳಕೂಡದು. ಅರುವು ಯಾವಾಗಲೂ ಇರುವದಾದ್ದರಿಂದ ಚಿದ್ರೂಪವೆನಿಸಿಕೊಂಡಿರುವದು. ಆದ್ದರಿಂದ ಅರುವಿಲ್ಲವೆಂಬ ಮಾತೇ ಅಲ್ಲವೆಂದು ತಿಳಿ.

ಬಳಿಕ, ಉಪಾಧಿಯಾದ ಅಹಂಕಾರವು ತೋರಿ ಅಡಗುವಂತೆ, ಅರುವಾದರೂ ತೋರಿ ಅಡಗುತ್ತದೆಂದು ಶಂಕೆಯನ್ನು ಮಾಡಲು; ಉಪಾಧಿಯಾದ ಅಹಂಕಾರವೇ ತೋರುತ್ತ ಅಡಗುತ್ತಲಿರುತ್ತದೆ. ಅರುವಲ್ಲ ಎಂಬುದನ್ನು ತಿಳಿಸುವದಕ್ಕಾಗಿ ಕೋಳಿಯ ದೃಷ್ಟಾಂತವನ್ನು ಕೊಟ್ಟು, ಎರಡು ಪದಗಳಿಂದ ಉತ್ತರವನ್ನು ಕೊಡುತ್ತಾರೆ.

ಪರೆದಿರ್ದ ಶಿಶುಗಳಂ ಬರಿಸಿ ಪಕ್ಕದೊಳು ಸಂ।
ಚರಿಸದಂತಿರಿಸಿ ಚರಣಾಯುಧಂ ನಿದ್ರೆ।
ವೆರಸುತೊಂದೆಡೆಯೊಳಿಹ ಪಾಂಗು ॥೧೧॥

ವಿಕರಿಸಿದ ಬುದ್ಧ್ಯಾದಿ ಸಕಲ ತತ್ತ್ವಂಗಳಂ।
ಪ್ರಕೃತಿಯೊಳಕೊಂಡವಸ್ಥೆಯಿಲ್ಲದೆ ಸದಾ।
ತ್ಮಕ ಚಿದಾಶ್ರಯದೊಳಿರುತಿರ್ಕುೞ ॥೧೨॥

ಟೀಕಾ:- ಪರೆದಿರ್ದ=ಹರಿದು ಮೇಯುತ್ತಿದ್ದ, ಶಿಶುಗಳಂ=ಮರಿಗಳನ್ನು, ಬರಿಸಿ=ಕರೆದು, ಪಕ್ಕದೊಳು=ರೆಕ್ಕೆಗಳಲ್ಲಿ, ಸಂಚರಿಸದಂತೆ=ಅತ್ತಿತ್ತ ತಿರಗದಂತೆ, ಇರಿಸಿ=ಇಟ್ಟುಕೊಂಡು, ಚರಣಾಯುಧಂ=ಕೋಳಿಯು, ನಿದ್ರೆವೆರಿಸುತ=ನಿದ್ರೆಯನ್ನು ಮಾಡುತ್ತಾ, ಒಂದೆಡೆಯೊಳಿಹ ಪಾಂಗು=ಒಂದು ಸ್ಥಳದಲ್ಲಿರುವ ಹಾಗೆ.

ವಿಕರಿಸಿದ=ಕಾರ್ಯಗಳಾದ, ಬುದ್ಧ್ಯಾದಿ ಸಕಲ ತತ್ತ್ವಂಗಳಂ=ಬುದ್ಧಿ ಮೊದಲಾದ ಇಂದ್ರಿಯಗಳನ್ನು, ಪ್ರಕೃತಿ=ಕಾರಣವಾದ ಅವಿದ್ಯೆಯು, ಒಳ

ಕೊಂಡು=ತನ್ನಲ್ಲಿ ವಿಲೀನಮಾಡಿಕೊಂಡು, ಅನವಸ್ಥೆಯಿಲ್ಲದೆ=ಕಾರ್ಯೋನ್ಮುಖ ವಾಗದೆ, ಸದಾತ್ಮಕ=ಸದ್ರೂಪವಾದ, ಚಿದಾಶ್ರಯದೊಳು=ಚಿದ್ರೂಪದ ಆಶ್ರಯ ದಲ್ಲಿ, ಇರುತಿರ್ಕು=ಇರುತ್ತಿರುವದು.

**ತಾತ್ಪರ್ಯ:-** ಪಾದಗಳೇ ಆಯುಧವಾಗಿವುಳ್ಳದ್ದರಿಂದ ಚರಣಾಯುಧ ವೆಂಬ ಹೆಸರು ಬಂದಿರುವದು. ಅಂದರೆ ಕೋಳಿಯು ತನ್ನ ಮರಿಗಳನ್ನು ಹಗಲಿ ನಲ್ಲಿ ಮೇಯುವದಕ್ಕಾಗಿ ಅತ್ತಿತ್ತ ತಿರುಗಿಸುತ್ತದೆ. ಸಾಯಂಕಾಲವಾದೊಡನೆ ಒಂದು ತರದ ಕೂಗಿನಿಂದ ಸಂಜ್ಞೆಯನ್ನು ಮಾಡಿ, ಮರಿಗಳನ್ನು ಕೂಡಹಾಕು ತ್ತದೆ. ಬಳಿಕ ಅವುಗಳನ್ನು ತನ್ನ ಎರಡೂ ರೆಕ್ಕೆಗಳಿಂದ ಮುಚ್ಚಿಕೊಳ್ಳುತ್ತದೆ. ಅವುಗಳನ್ನು ತಿರಗಲಿಕ್ಕೆ ಬಿಡುವದಿಲ್ಲ. ಮತ್ತು ಒಂದು ಗೂಡನ್ನು ಆಶ್ರಯಿಸಿ ಸುಖವಾಗಿ ನಿದ್ರೆಮಾಡಿಕೊಂಡಿರುತ್ತದೆ. ಈ ದೃಷ್ಟಾಂತದಂತೆ; ಕಾರಣವಾದ ಅವಿದ್ಯೆಯೆಂಬ ಕೋಳಿಯು, ಜಾಗ್ರತ್ಸ್ವಪ್ನಂಗಳಲ್ಲಿ ತನ್ನ ಕಾರ್ಯಗಳಾದ ಮನ ಬುದ್ಧ್ಯಾದಿ ಕರಣಗಳನ್ನು ವ್ಯವಹಾರಕ್ಕಾಗಿ ಬಿಡುತ್ತದೆ. ನಿದ್ರೆಯ ಕಾಲ ಬಂದೊಡನೆ, ತನ್ನ ಕಾರ್ಯಗಳಾದ ಬುದ್ಧ್ಯಾದಿ ಮರಿಗಳನ್ನು ತನ್ನಲ್ಲಿ ವಿಲೀನ ಮಾಡಿಕೊಂಡು, ನಿರ್ವ್ಯಾಪಾರ ಸ್ಥಿತಿಯಿಂದ ಇರುತ್ತದೆ. ಮತ್ತು ಅದು ಸ್ವತಂತ್ರ ವಾಗಿರುವದಿಲ್ಲ. ಕಿಂತು, ಸದ್ರೂಪ ಚಿದ್ರೂಪನಾದ ಆತ್ಮನನ್ನು ಆಶ್ರಯ ಮಾಡಿಕೊಂಡಿರುತ್ತದೆ. ಅಂದರೆ, ತ್ರಿಗುಣಾತ್ಮಕ ಸಮಾನಾವಸ್ಥೆಯಿಂದಿರುವ ಪ್ರಕೃ ತಿಯು, ತನ್ನ ಕಾರ್ಯಗಳಾದ ವಿಕೃತಿರೂಪ ಅಹಂಕಾರಾದಿಗಳನ್ನು ಜಾಗರಣಾದಿ ಗಳಲ್ಲಿ ವ್ಯವಹಾರಮಾಡುವದಕ್ಕೆ ಬಿಟ್ಟು, ನಿದ್ರಾಸಮಯದಲ್ಲಿ ತನ್ನಲ್ಲಿ ಲೀನ ಮಾಡಿಕೊಳ್ಳುತ್ತದೆ. ಆದ್ದರಿಂದ ಕರಣಗಳು ತೋರುತ್ತ ಅಡಗುತ್ತಲಿರುತ್ತವೆ. ಆ ಕರಣಗಳ ಮೂಲಕ ನಿನಗೆ ಅರವು ತೋರುತ್ತ ಅಡಗುತ್ತಲಿದ್ದಂತೆ ತೋರಿತು. ಹಾಗೇನು ಇಲ್ಲ. ಆ ಪ್ರಕೃತಿಗೆ ಆಶ್ರಯನಾಗಿ ಸದ್ರೂಪ ಚಿದ್ರೂಪನಾದ ಆತ್ಮನು ಇದ್ದೇ ಇರುವನು. ಚಿದ್ರೂಪಾತ್ಮನು ಇಲ್ಲದೆ ಹೋದರೆ, ಆ ಪ್ರಕೃತಿಗೆ ಆಶ್ರಯ ವೇನಿದೆ? ಆದ್ದರಿಂದ ನಿದ್ರೆಯಲ್ಲಿ ಅರುಹಿಕೊಂಬ **ಅರುವಾದರೂ** ಸದ್ರೂಪ ಚಿದ್ರೂಪನಾದ ಆತ್ಮನ ಸ್ವರೂಪವಾಗಿ ಇರುತ್ತದೆ. ಇಲ್ಲೆಂದು ಹೇಳಲಿಕ್ಕೆ ಬರುವ ದಿಲ್ಲ. ಇಲ್ಲಿ ಸದ್ರೂಪ ಚಿದ್ರೂಪಗಳೆಂದು ಯಾಕೆ ಹೇಳಿದರು? ಅಂದರೆ, ಆತ್ಮನು ಸತ್ತಾರೂಪದಿಂದ ಪ್ರಕೃತಿಗೆ ಆಶ್ರಯನಾಗಿದ್ದಾನೆ. ಮತ್ತು ಚಿದ್ರೂಪದಿಂದ ಆ ಪ್ರಕೃತಿಯನ್ನು ಅರಿಯುತ್ತಾ ಇದ್ದಾನೆ. ಎಂಬುದನ್ನು ತಿಳಿಸುವಗೋಸ್ಕರ ಎರಡು ವಿಶೇಷಣಗಳನ್ನು ಹೇಳಿರುವರು ಎಂಬ ಭಾವವಾಗಿದೆ.

ಬಳಿಕ, ತಮೋರೂಪವಾದ ಅವಿದ್ಯೆಯು ಸದ್ರೂಪಾತ್ಮನನ್ನು ಆಶ್ರಯಿಸಿ ಕೊಂಡು ನಿದ್ರೆಯಲ್ಲಿರುತ್ತದೆಂದು ಹೇಳಿದಿರಿ. ಆ ಅವಿದ್ಯೆಯು ಸದ್ರೂಪಾತ್ಮನನ್ನು

ಆಶ್ರಯ ಮಾಡಿ, ಅವನನ್ನೇ, ಮುಚ್ಚಿ ಬಿಡಬಹುದು. ಅಗ್ನಿಯನ್ನು ಆಶ್ರಯ ಮಾಡಿದ ಧೂಮವು ಅಗ್ನಿಯನ್ನು ಮುಚ್ಚುವಂತೆ; ಆವರಣವನ್ನು ಮಾಡಬಹುದು. ಆದರಿಂದ ಆತ್ಮನು ಚಿದ್ರೂಪನಾದರೂ, ಏನನ್ನು ಅರಿಯದೆ ಇರಬಹುದು. ಆದ ರಿಂದ ಅರುವಿಲ್ಲವೆಂದು ಹೇಳಬಹುದು. ಎಂದು ಶಂಕೆಯನ್ನು ಮಾಡಲು; ಇದ್ಯ ಸರಿಯಲ್ಲ. ಯಾಕಂದರೆ? ಸೂರ್ಯನನ್ನು ಮೇಘ ಮಂಡಲಗಳು ಮುಚ್ಚಿದರೂ, ಮುಚ್ಚಿದ ಮೇಘಗಳನ್ನೇ ಸೂರ್ಯನು ಪ್ರಕಾಶಮಾಡುತ್ತಲಿರುವನು. ನೋಡುವ ಅಜ್ಞರು ಮಾತ್ರ ಸೂರ್ಯನು ಈ ಹೊತ್ತು ಪ್ರಕಾಶಹೀನನಾಗಿರುವನು. ಮೇಘ ಗಳು ಮುಚ್ಚಿವೆಯೆಂದು ಹೇಳುವರು. ಬಲ್ಲವರು ಹಾಗನ್ನುವದಿಲ್ಲ. ಮೇಘ ಗಳು ಸೂರ್ಯನನ್ನು ಮುಚ್ಚಿದರೂ ಸೂರ್ಯನು ಪ್ರಕಾಶಮಾನನಾಗಿರುವನು. ಆ ಮೇಘ ಮಂಡಲಗಳನ್ನು ಬೆಳಗುತ್ತಿರುತ್ತಾನೆಂದು ಹೇಳುವರು. ಇದರಂತೆ, ಚಿದ್ರೂಪಾತ್ಮನು ನಿದ್ರೆಯಲ್ಲಿ ಆ ಅವಿದ್ಯೆ ಮುಚ್ಚಿದರೂ ಅದನ್ನು ಅರಿಯುತ್ತಿರು ತ್ತಾನೆಂದು. ರಾಹುಗ್ರಸ್ತ ಚಂದ್ರನ ದೃಷ್ಟಾಂತದಿಂದ ಸಮಾಧಾನ ಹೇಳುತ್ತಾರೆ.

**ರಾಹುವಿಡಿದಿಂದುವಾ ರಾಹುವಂ ಬೆಳಗುವಂ ।**
**ತೂಹಿಸಲ್ನಿದ್ರೆ ಮುಸುಕಲಂತಾ ಮಹಾ ।**
**ಮೋಹಮಂ ಚಿತ್ತರಿವುದಲ್ಲಿ ॥೧೪॥**

**ಟೀಕಾ:-** ರಾಹು ವಿಡಿದ ಇಂದುವು=ರಾಹುವಿನಿಂದ;ಗ್ರಸ್ತನಾದ ಚಂದ್ರನು, ಆ ರಾಹುವಂ=ಆ ರಾಹುವಿನನ್ನು, ಬೆಳಗುವಂತೆ=ಪ್ರಕಾಶಮಾಡುವ ಹಾಗೆ, ಊಹಿ ಸಲ್=ವಿಚಾರಮಾಡಲು, ನಿದ್ರೆಮುಸುಕಲ್=ನಿದ್ರೆಯು ಮುಚ್ಚಿದರೂ, ಆ ಮಹಾ ಮೋಹಮಂ=ಆ ತಮೋರೂಪ ಅಜ್ಞಾನವನ್ನು, ಅಲ್ಲಿ=ನಿದ್ರೆಯಲ್ಲಿ, ಚಿತ್ತರಿವುದು= ಚಿದ್ರೂಪಾತ್ಮನು ಅರಿಯುತ್ತಿರುವನು.

**ತಾತ್ಪರ್ಯ:-** ಅಹಂಕಾರಾದಿ ವಿಕೃತಿಗಳಿಗೆ ಕಾರಣವಾದ ಪ್ರಕೃತಿನಾಮಕ ಅಜ್ಞಾನವು, ಸಚ್ಚಿದ್ರೂಪ ಆತ್ಮನನ್ನು ಆವರಣಮಾಡಿದರೂ ಆತ್ಮನು ಆ ಅಜ್ಞಾನ ವನ್ನು ಅರಿಯುತ್ತಲಿರುತ್ತಾನೆ. ಹೇಗಂದರೆ, ರಾತ್ರಿಯಲ್ಲಿ ಕತ್ತಲೆಯು ಸರ್ವ ಪದಾರ್ಥಗಳನ್ನು ಮುಚ್ಚಿದರೂ, ಕಣ್ಣು ಮಾತ್ರ ಏನೂ ಕಾಣುವದಿಲ್ಲ. ಅಂದರೂ, ಆ ಕತ್ತಲೆಯನ್ನು ಕಾಣುತ್ತಿರುವಂತೆ, ನಿದ್ರೆಯಲ್ಲಿ ಅವಿದ್ಯಾರೂಪ ಕತ್ತಲೆಯು ಎಲ್ಲವನ್ನಡಗಿಸಿಕೊಂಡಿರಲು, ಏನೂ ಅರಿಯಲಿಲ್ಲ ಅಂದರೂ, ಆತ್ಮನು ಆ ಅಜ್ಞಾನ ವನ್ನು ಅರಿಯುತ್ತಿರುವನೆಂದು ತಿಳಿಯತಕ್ಕದ್ದು. ಆದ್ದರಿಂದಲೇ ಜಾಗರಣದಲ್ಲಿ ಏನನ್ನು ನಾನು ನಿದ್ರೆಯಲ್ಲಿ ಅರಿಯಲಿಲ್ಲೆಂಬ ಸ್ಮೃತಿಜ್ಞಾನವಾಗುತ್ತದೆ. ಆದ್ದ ರಿಂದ ಚಿದ್ರೂಪಾತ್ಮನು ನಿದ್ರೆಯಲ್ಲಿ ಅವಿದ್ಯೆಯನ್ನು ಅರಿಯುತ್ತಿರುತ್ತಾನೆ. ಮತ್ತು ಚಂದ್ರನಿಗೆ ಗ್ರಹಣ ಹಿಡಿದಿರುತ್ತದೆ. ರಾಹು ಚಂದ್ರನನ್ನು ಮುಚ್ಚಿರುವನು. ಮುಚ್ಚಿದರೂ ಚಂದ್ರನು ಆ ರಾಹುವಿನನ್ನು ಬೆಳಗುತ್ತಿರುವನು. ಬೆಳಗದ

ಹೋದರೆ, ಚಂದ್ರನಿಗೆ ಗ್ರಹಣ ಹಿಡಿದಿದೆ ಎಂಬುದನ್ನು ಹೇಳಬೇಕಾದರೆ, ಆ ರಾಹು ವನ್ನು ಕಾಣಬೇಕಾಗುತ್ತದೆ. ಆಗ್ಗೆ ಆ ರಾಹುವಿನನ್ನು ಯಾರ ಬೆಳಕಿನಿಂದ ಕಂಡಿಯೆಂದು ಕೇಳಿದರೆ, ಚಂದನ ಬೆಳಕಿನಿಂದಲೇ ರಾಹುವಿನನ್ನು ಕಂಡೆನೆಂದು ಹೇಳುವನು. ಇದರ ಮೇಲಿಂದ ಚಂದ್ರನು ರಾಹುವಿನನ್ನು ಬೆಳಗುತ್ತ ಇರುತ್ತಾ ನೆಂದು ನಿಶ್ಚಯಿಸಲ್ಪಡುತ್ತದೆ. ರಾಹು ಚಂದ್ರನನ್ನು ಹೊಂದಿ ಚಂದ್ರನನ್ನು ಮುಸಿಕಿದರೂ, ಚಂದ್ರನು ರಾಹುವಿನನ್ನು ಬೆಳಗುವಂತೆ, ಅವಿದ್ಯೆಯು ಸದ್ರೂ ಪಾತ್ಮನನ್ನು ಆಶ್ರಯಿಸಿ, ಅವನನ್ನು ಮುಸುಕಿದರೂ, ಆ ಚಿದ್ರೂಪಾತ್ಮನು ಆ ಅವಿದ್ಯೆಯನ್ನು ಅರಿಯುತ್ತಿರುವನು. **'ರಾಹುಗ್ರಸ್ತ ದಿವಾಕರೇಂದು ಸದೃಶಃ',** ಎಂಬದಾಗಿ ಶ್ರೀದಕ್ಷಿಣಾ ಮೂರ್ತಿಸ್ತೋತ್ರದಲ್ಲಿ **ಶ್ರೀ ಶಂಕರಾಚಾರ್ಯ**ರು ಹೇಳಿರುತ್ತಾರೆ. ಪ್ರಕಾಶ ಸ್ವರೂಪನೇ ಸೂರ್ಯನಿರುವಂತೆ ಅರು ಸ್ವರೂಪನೇ ಆತ್ಮನಿರುವನು ಸದಾ ಅರಿಯುವವನು ಆಗಿರುತ್ತಾನೆಂದು ತಿಳಿಯತಕ್ಕದ್ದು.

**ಬಳಿಕ,** ಆತ್ಮನು ಜಾಗ್ರದಲ್ಲಿ ಅರಿಯುತ್ತಿರುವಂತೆ, ನಿದ್ರೆಯಲ್ಲಿಯೂ ಅರಿ ಯುತ್ತಿರುವನೆಂದು ಹೇಳೋಣವಾಯಿತು. ಯಾಕಂದರೆ? ಆತ್ಮನು ಚಿದ್ರೂಪ ನಾಗಿರುವನು. ಅದರಿಂದ ಅರಿಯುವವನಾಗಿರುವನು. ಅ ವಿದ್ಯೆಯು ಅರಿಸಿಕೊಳ್ಳುವ ದಾಗಿದೆ. ಹೀಗೆ ನಿದ್ರೆಯಲ್ಲಿ ಅರಿಯುವದು ಅರಿಸಿಕೊಳ್ಳುವದಿದ್ದರೆ, ಆ ನಿದ್ರೆ ಯಲ್ಲಿಯೇ ನಾನು ಅಜ್ಞಾನವನ್ನು ಅರಿಯುತ್ತಲಿದ್ದೇನೆಂಬ ಅರುವು ಇರಬೇಕಾ ಗಿತ್ತು. ಅದು ಅಲ್ಲಿಲ್ಲ. ಆ ನಿದ್ರೆಯನ್ನು ಬಿಟ್ಟು ಜಾಗ್ರಕ್ಕೆ ಬಂದ ಬಳಿಕ ಸ್ಮರಣ ವಾಯಿತು. ಜಾಗ್ರದಲ್ಲಿ ಘಟವನ್ನು ಅರಿಯುತ್ತೇನೆಂಬ ಅರುವಿದ್ದಂತೆ, ನಿದ್ರೆ ಯಲ್ಲಿಯೂ ಅವಿದ್ಯೆಯನ್ನು ಅರಿಯುತ್ತೇನೆಂಬುದು ಇರಬೇಕಾಗಿತ್ತು. ಹಾಗಿರುವ ದಿಲ್ಲ; ಇದಕ್ಕೆ ಏನು ಕಾರಣವಿರುತ್ತದೆ? ಅದನ್ನು ತಿಳಿಸಬೇಕೆಂದು ಶಿಷ್ಯನು ಪ್ರಶ್ನೆ ಯನ್ನು ಮಾಡುತ್ತಾನೆ.

**ಚಿದಚಿತ್ತುಗಳವಿಂತು ಪುದಿದು ನಿದ್ರೆಯೊಳಿರ್ಪು ।**
**ದಿದು ನೈಜವಾಗಲಲ್ಲಿ ನಾನರಿದೆನೆಂ ।**
**ಬುದು ಘಟಿಸದೇತಕೆನೆ ಕೇಳು** ॥೧೪॥

**ಟೀಕಾ:-** ಚಿದ ಚಿತ್ತುಗಳು=ಜ್ಞಾನ ಮತ್ತು ಅಜ್ಞಾನ ಇವುಗಳು, ಇಂತು= ಉಕ್ತ ಪ್ರಕಾರ, ಪುದಿದು=ಸಂಬಂಧವಾಗಿ, ನಿದ್ರೆಯೊಳಿರ್ಪುದು=ನಿದ್ರೆಯಲ್ಲಿರು ವದು, ಇದು ನೈಜವಾಗಲ್=ಇದು ಸತ್ಯವಾದರೆ, ಅಲ್ಲಿ=ಸುಷ್ತಿಯಲ್ಲಿ, ನಾನು= ನಾನು, ಅರಿದೆನೆಂಬುದು=ತಿಳಿದಿರುವೆನೆಂಬುದು, ಏತಕೆ ಘಟಿಸದು=ಯಾಕೆ ಘಟಿ ಸುವದಿಲ್ಲ? ಎನೆ=ಹೀಗೆ ಶಿಷ್ಯನು ಕೇಳಲು, ಕೇಳು=(ಇದಕ್ಕೆ ಉತ್ತರವನ್ನು ಹೇಳು ತ್ತೇನೆ) ಆಲಿಸು.

**ತಾತ್ಪರ್ಯ:-** ಚಿದ್ರೂಪಾತ್ಮನು ಅರಿಯುವನು. ಜಡ, ದೃಶ್ಯವಾದ ಅಜ್ಞಾನವು ಅರಿಸಿಕೊಳ್ಳುವದು. ಅಜಡ, ಜಡ; ದೃಕ್ಕು, ದೃಶ್ಯ ಈ ವಿಧವಾದ ಪರಸ್ಪರ ಸಂಬಂಧದಿಂದ ಅರಿಯುವದು ಅರಿಸಿಕೊಳ್ಳುವದು ನಿದ್ರೆಯಲ್ಲಿ ಇರುತ್ತದೆಂದು ಹೇಳಿದಂತಾಯಿತು. ಹೀಗೆ ಆಗಿದ್ದ ಪಕ್ಷದಲ್ಲಿ; ಜಾಗ್ರದಲ್ಲಿ ಘಟಪಟಾದಿ ವಸ್ತುಗಳನ್ನು ಅರಿಯುತ್ತೇನೆಂಬ ಅರುವು ಇದ್ದಂತೆ; ನಿದ್ರೆಯಲ್ಲಿಯೂ ಅಜ್ಞಾನವನ್ನು ಅರಿಯುತ್ತಲಿರುವೆನೆಂಬುದು ಇರಬೇಕಾಗಿತ್ತು. ಅದು ಅಲ್ಲಿ ಯಾಕೆ ಇಲ್ಲ? ಹೇ ಸರ್ವಜ್ಞ ಸ್ವರೂಪನಾದ ಗುರುವರ್ಯನೇ! ನೀವೇ ಈ ವಿಷಯವನ್ನು ಚನ್ನಾಗಿ ತಿಳಿಯುವ ಹಾಗೆ ಹೇಳಬೇಕು. ಎಂದು ಶಿಷ್ಯನು ಇಲ್ಲಿ ಪ್ರಶ್ನೆಯನ್ನು ಮಾಡಿರುತ್ತಾನೆ. ಇದನ್ನು ಕೇಳಿ ಗುರುಗಳು ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಾರೆ.

ಬಳಿಕ, ನಿದ್ರೆಯಲ್ಲಿ ಆತ್ಮನು ಅಜ್ಞಾನವನ್ನು ಅರಿಯುತ್ತಿದ್ದರೆ; ಜಾಗ್ರದಲ್ಲಿ ಘಟಜ್ಞಾನವಾದಂತೆ ಅರಿದೆನೆಂಬುದು ಇರಬೇಕು. ಎಂದು ನೀನು ಪ್ರಶ್ನೆಮಾಡಿದರೆ, ಜಾಗ್ರದಂತೆ ಅಲ್ಲಿ ವಿಶೇಷ ವಾದ ಮನೋಕರಣವಿಲ್ಲ. ಅದರಿಂದ ಸ್ಪಷ್ಟವಾಗಿ ನಿನಗೆ ಹೊಳೆಯಲಿಲ್ಲ. ಎಂಬದಾಗಿ ದೃಷ್ಟಾಂತ ಮೂಲಕ ಉತ್ತರವನ್ನು ಕೊಡುತ್ತಾರೆ.

**ಒಡವೆಯರಸಲು ಕೂಪದೆಡೆಯಲ್ಲಿ ಮುಳಗಿದವ |**
**ನೊಡವೆಯುಂಟಿಲ್ಲದುದನೊದ್ದೊಡಲ್ಲದೆ |**
**ನುಡಿಯಲಳವಲ್ಲವದರಂತೆ ||೧೫||**

**ಟೀಕಾ:-** ಒಡವೆಯ=ಆಭರಣವನ್ನು, ಅರಸಲು=ಹುಡುಕಲು, ಕೂಪದೆಡೆಯಲ್ಲಿ=ಭಾವಿಯಲ್ಲಿ, ಮುಳುಗಿದವನು = ಮುಳುಗಿದವನು, ಒಡವೆ = ಆಭರಣ, ಉಂಟು=ಅದೆ, ಇಲ್ಲದುದನು = ಇಲ್ಲದಿರುವದನ್ನು, ಎದ್ದೊಡಲ್ಲದೆ = ಮೇಲಕ್ಕೆ ಬಾರದೆ, ನುಡಿಯಲಳವಲ್ಲವು=ಹೇಳಲಿಕ್ಕೆ ಬರುವದಿಲ್ಲ, ಅದರಂತೆ=ಅದರಹಾಗೆ,

**ತಾತ್ಪರ್ಯ:-** ಅಕಸ್ಮಾತ್ ಭಾವಿಯಲ್ಲಿ ಬಿದ್ದ ಆಭರಣಗಳನ್ನು ಹುಡಿಕಿ ತೆಗೆಯುವದಕ್ಕಾಗಿ ಪುರುಷನು ನೀರಿನಲ್ಲಿ ಮುಳಗುತ್ತಾನೆ. ನೀರಿನಲ್ಲಿ ಮುಳಗಿದ್ದುಕೊಂಡು ಆಭರಣ ಸಿಕ್ಕದ್ದು, ಅಥವಾ ಸಿಗದೆ ಇದ್ದ ಸಂಗತಿಯನ್ನು ಹೇಳಲಿಕ್ಕೆ ಬರುವದಿಲ್ಲ. ಕಿಂತು, ನೀರನ್ನು ಬಿಟ್ಟು ಮೇಲಕ್ಕೆ ಎದ್ದು ಬಂದ ಬಳಿಕ, ಭಾವಿಯ ಮೇಲಿರುವವರನ್ನು ಕುರಿತು; ತನಗೆ ದೊರಕಿತೋ ಇಲ್ಲೋ ಎಂಬುದನ್ನು ತಿಳಿಸುತ್ತಾನೆ. ಅಂದರೆ, ನೀರಲ್ಲಿ ಮುಳಿಗಿರುವಾಗ ಏನೂ ಹೇಳಲಿಕ್ಕೆ ಆಗಲಿಲ್ಲ. ಯಾಕಂದರೆ, ವಾಗಿಂದ್ರಿಯಕ್ಕೆ ನೀರು ಪ್ರತಿಬಂಧಕವಾಗಿದೆ. ನೀರಿನ ಮೇಲೆ ಬರಲು ಪ್ರತಿಬಂಧಕ ದೂರವಾಯಿತು. ಅದರಿಂದ ವಾಕ್ಕಿನಿಂದ ಮಾತನ್ನಾಡುವದಕ್ಕೆ ಬಂದಿತು. ಈ ದೃಷ್ಟಾಂತದಂತೆ ಈ ಸುಷ್ತಿಯ ಕಥೆಯೂ ಇರುತ್ತದೆಂದು ತಿಳಿ.

ಬಳಿಕ, ಹೇಳಿದ ದೃಷ್ಟಾಂತದ ಅರ್ಥವನ್ನು ದ್ರಾಷ್ಟಾಂತದಲ್ಲಿ ಯೋಜನೆ ಮಾಡಿ ತಿಳಿಸುತ್ತಾರೆ.

ಮುಳಗಿ ನಿದ್ರೆಯೊಳು ಚಿತ್ತುಳಿದಿರ್ದೊಡಾ ನಿದ್ರೆ ।
ಯುಳಿದಲ್ಲದಲ್ಲಿ ಯರಿದರ್ಥಮಂ ನುಡಿಯು ।
ಲಳವಲ್ಲವೆಂಬುದಿದುಸಿದ್ಧ ॥೧೬॥

ಟೀಕಾ:- ನಿದ್ರೆಯೊಳು=ನಿದ್ರೆಯಲ್ಲಿ, ಮುಳಗಿ= ಲೀನವಾಗಿ, ಚಿತ್ತು=ಅರಿವು, ಉಳಿದುಇರ್ದೊಡೆ = ಉಳದಿದ್ದರೂ, ಆ ನಿದ್ರೆಯು=ಸುಷ್ತಿಯು, ಅಳಿದಲ್ಲದೆ= ನಾಶವಾಗದೆ, ಅಲ್ಲಿ=ನಿದ್ರೆಯಲ್ಲಿ, ಅರಿದರ್ಥಮಂ=ತಿಳಿದ ವಿಷಯುವನ್ನು, ನುಡಿಯು ಲಳವಲ್ಲ=ಹೇಳಲಿಕ್ಕೆ ಬರುವದಿಲ್ಲ, ಎಂಬುದು=ಅನ್ನುವದು, ಇದು ಸಿದ್ಧ=ಈ ಮಾತು ಸತ್ಯವಾಗಿದೆ.

ತಾತ್ಪರ್ಯ:- ಉಕ್ತ ಜಲಮುಗ್ನ ಪುರುಷನಂತೆ, ನಿದ್ರೆಯೆಂಬ ಭಾವಿಯಲ್ಲಿ ಅವಿದ್ಯೆಯೆಂಬ ಜಲವು ತುಂಬಿರುತ್ತದೆ. ಅದರಲ್ಲಿ ಚಿದ್ರೂಪಾತ್ಮನು ಪ್ರಕಾಶ ದಿಂದೊಡಗೂಡಿದ ಸೂರ್ಯನಂತೆ ಅರುಸ್ವರೂಪನಾಗಿಯೇ ಉಳದಿರುವನು. ವಿಶೇಷವಾಗಿ ಜಾಗ್ರದಂತೆ ಅಲ್ಲಿ ಅರಿಯಲಿಕ್ಕೆ ಬರುವದಿಲ್ಲ. ಅದಕ್ಕೆ ಕಾರಣ ವೇನಂದರೆ, ಅಲ್ಲಿ ಮನೋಕರಣಕ್ಕೆ ಅವಿದ್ಯಾ **ಪ್ರತಿಬಂಧಕವಾಗಿದೆ.** ಅಂದರೆ ಮನಸ್ಸು ಅವಿದ್ಯೆಯಲ್ಲಿ ಲೀನವಾಗಿರುವದೆಂಬ ಭಾವವು. ಜಾಗ್ರಕ್ಕೆ ಬಂದ ಬಳಿಕ ಲೀನವಾದ ಮನಸ್ಸು ಹೊರಗೆ ಬರಲು ನಿದ್ರೆಯಲ್ಲಿ ಆದ ಅನುಭವವನ್ನು ಸ್ಮರಿಸ ಲಿಕ್ಕೆ ಬರುತ್ತದೆ. ವಾಗಿಂದ್ರಿಯಕ್ಕೆ ಜಲವು ಪ್ರತಿಬಂಧಕವಾದಂತೆ, ಮನಸ್ಸಿಗೆ ಅವಿದ್ಯಾ ಪ್ರತಿಬಂಧಕವಾಗಿದೆ. ಪ್ರತಿಬಂಧಕವು ದೂರಾದರೆ: ಕರಣಗಳು: ತಮ್ಮ ವ್ಯವ ಹಾರಗಳನ್ನು ಮಾಡಲು ಸಮರ್ಥಗಳಾಗುತ್ತವೆ. ಜಾಗ್ರದಲ್ಲಿ ಘಟಜ್ಞಾನವನ್ನು ಅರತಂತೆ ನಿದ್ರೆಯಲ್ಲಿಯೂ ಅಜ್ಞಾನವನ್ನು ಅರಿಯುತ್ತೇನೆಂಬ ಅರವು ಇರಬೇಕಾ ಗಿತ್ತು. ಅದು ಯಾಕಿಲ್ಲಂದರೆ? ಜಾಗ್ರದಲ್ಲಿದ್ದ ಮನಸ್ಸು ನಿದ್ರೆಯಲ್ಲಿಲ್ಲ. ಆದರಿಂದ ಆಗಲಿಲ್ಲ. ಕಿಂತು, ಚಿದ್ರೂಪಾತ್ಮನು ಅರಿಯುತ್ತಲೇ ಇರುತ್ತಾನೆ. ಈ ಮಾತು ಅನುಭವಸಿದ್ಧವದೆಯೆಂಬ ಭಾವವು.

ಬಳಿಕ, ಶಿಷ್ಯನು:- "ಹೇ ಗುರುನಾಥನೇ! ತಾವು ಯುಕ್ತಿ ದೃಷ್ಟಾಂತ ಗಳಿಂದ ನಿದ್ರೆಯಲ್ಲಿ ಅರುವು ಇರುವದೆಂಬುದನ್ನು ಹೇಳಿದಂತೆ, ನೈಯಾಯಿಕರು ನಿದ್ರೆಯಲ್ಲಿ ಅರುವಿಲ್ಲವೆಂಬುದನ್ನು ಯುಕ್ತಿ ದೃಷ್ಟಾಂತಗಳಿಂದ ಅವರೂ ಹೇಳು ತ್ತಾರೆ. ನಾವು ಯಾರ ಮಾತು ನಿಜವೆಂದು ನಂಬಬೇಕು ಎಂದು ಶಂಕೆಯನ್ನು ಮಾಡಲು, ಯಾರು ತಾವು ಉದಾಹರಿಸಿದ ಯುಕ್ತಿ ದೃಷ್ಟಾಂತಗಳಿಗೆ ಸರಿಯಾಗಿ

ಶ್ರುತಿ ಪ್ರಮಾಣವನ್ನು ಹೇಳುವರೋ, ಅವರ ಮತವೇ ನಿಜವೆಂದು ನಂಬು. "**ಶ್ರುತಿಮತತರ್ಕೋsನು ಸಂಧೀಯತಾಂ**" ಶ್ರುತಿ ಸಮ್ಮತವಾದ ತರ್ಕ ದೃಷ್ಟಾಂತಗಳನ್ನು ಸ್ವೀಕರಿಸಬೇಕೆಂದು ಶ್ರೀಮಚ್ಛಂಕರಾಚಾರ್ಯರು ಹೇಳಿರುತ್ತಾರೆ. ಆದ್ದರಿಂದ ನಿನಗೆ ಶ್ರುತಿ ಪ್ರಮಾಣವನ್ನು ಹೇಳುತ್ತೇನೆ ಕೇಳು, ಎಂದು ಹೇಳುತ್ತಾರೆ.

**ನೀನಿಂತು ತಿಳಿವುದೆಲೆ ಸೂನು ಶ್ರುತಿ ತಾನೆ ಪ್ರಾ।**
**ಜ್ಞೇನಾತ್ಮನಾದಿ ವಾಕ್ಯದಿಂದೊರೆಯಲಿಂ।**
**ತಾನಿರ್ದು ಪೇಳಲರಿದಲ್ಲಿ ॥೧೭॥**

**ಟೀಕಾ:-** ಎಲೆ ಸೂನು=ಎಲೈ ಮಗನೆ!, ಶ್ರುತಿ=ಈಶ್ವರ ವಾಣಿಯು, ತಾನೆ= ಸ್ವತಃ, ಪ್ರಾಜ್ಞೇನ ಆತ್ಮನಾ=ಪರಬ್ರಹ್ಮ ಸ್ವರೂಪಾತ್ಮನೊಡನೆಂಬ, ಆದಿ=ವೊದಲಾದ, ವಾಕ್ಯದಿಂದ=ವಚನರೂಪವಾಗಿ, ಒರೆಯಲ್ = ಹೇಳಲಾಗಿ, ಇಂತು= ಈ ರೀತಿ, ಆನಿರ್ದು = ತಾನು ಇದ್ದಾಗ್ಯೂ, ಅಲ್ಲಿ = ನಿದ್ರೆಯಲ್ಲಿ, ಪೇಳಲ್ = ಹೇಳುವದು, ಅರಿದು=ಆಶ್ಚರ್ಯವಾಗಿರುವದು.

**ತಾತ್ಪರ್ಯ:-** ಹೇ ಪುತ್ರನೇ! ಕೇಳು. ಬೃಹದಾರಣ್ಯಕೋಪನಿಷತ್ತಿನ ಶ್ರುತಿಯು ಹೀಗೆ ಹೇಳುತ್ತದೆ. ಏನಂದರೆ, ನಿದ್ರೆಯಲ್ಲಿ ಜೀವನಿಗೆ ಉಪಾಧಿಯಾದ ಅಹಂಕಾರವು ಕಾರಣವಾದ ಅವಿದ್ಯೆಯಲ್ಲಿ ಅಡಗಲು; ಆ ಜೀವನು ತನಗೆ ಲಕ್ಷ್ಯವಾದ ಬಿಂಬರೂಪ ಪರಮಾತ್ಮನೊಡನೆ ಅಭಿನ್ನನಾಗುತ್ತಾನೆ. ಅಭೇದನಾಗಿ ಆನಂದಸ್ವರೂಪದಿಂದ ಇರುತ್ತಾನೆ. ಒಳಹೊರಗಿನ ಜಾಗ್ರತ್ಸ್ವಪ್ನಂಗಳನ್ನು ತಿಳಿಯುವದಿಲ್ಲ. ಹೇಗಂದರೆ, ಕಾಮಿಯು ತನ್ನ ಕಾಮಿನಿಯೊಡನೆ ಕೂಡಲು ಒಳಹೊರಗಿನ ಜನರನ್ನು ಅರಿಯದೆ ಆನಂದದಲ್ಲಿರುವಂತೆ; ಆತ್ಮನು ಆನಂದಸ್ವರೂಪನಾಗಿರುವನು. ಅದರಿಂದ ತಾನು ಆನಂದಸ್ವರೂಪದಿಂದ ಇದ್ದಾಗ್ಯಾದರೂ, ಅಲ್ಲಿ ಅರಿಯುತ್ತೇನೆಂದು ಹೇಳುವದಕ್ಕೆ ಬರುವದಿಲ್ಲವೆಂದು ತಿಳಿ.

ಈ ಪ್ರಕಾರ ನಿನಗೆ ಶ್ರುತಿ, ಯುಕ್ತಿ, ಅನುಭವ, ದೃಷ್ಟಾಂತಗಳನ್ನು ಕೊಟ್ಟು ಹೇಳಿದ್ದೇವೆ. ಈ ಅರ್ಥವು ನಿಜವೆಂದು ನಿಶ್ಚಯಿಸಿ ಶಾಂತಚಿತ್ತದಿಂದ ನೀನು ಇರು. ಎಂದು ಗುರುಗಳು ತಿಳಿಸಿದರು.

## ಜ್ಞಾನಾ ಜ್ಞಾನ ಸದ್ಭಾವ ನಿರೂಪಣೆ ಸೂತ್ರ ೩ಕ್ಕೆ ತ್ರಿಪದಿ ೩೧

ಬಳಿಕ, ಹಿಂದಿನ ಸೂತ್ರದಲ್ಲಿ, ನಿದ್ರೆಯಲ್ಲಿ ಅರುವು ಇರುವದು, ಎಂಬುದನ್ನು ಶ್ರುತಿಯುಕ್ತ್ಯನುಭವಗಳಿಂದ ಗುರುಗಳು ಹೇಳಿದರು. ಅದನ್ನು ಕೇಳಿ

ಶಿಷ್ಯನು ಹರ್ಷಚಿತ್ತನಾದನು. ಮತ್ತು ನಿದ್ರೆಯಲ್ಲಿ ಆತ್ಮನು ಅರಿಯುವನು. ಅಂದರೆ, ಕರಣಸಹಿತನಾಗಿ ಅರಿಯುವನೋ ? ಕರಣರಹಿತನಾಗಿ ಅರಿಯುವನೋ ? ಎಂಬ ಸಂಶಯಚಿತ್ತವುಳ್ಳವನಾಗಿ ಪ್ರಶ್ನೆಯನ್ನು ಮಾಡುತ್ತಾನೆ.

**ಸೂತ್ರ ॥ ಕರಣವಾವುದು ಸುಷುಪ್ತಿಯ ನರಿವೊಡಾತ್ಮಂಗೆ ।**
**ಗುರುವರ್ಯ ಕರುಣದಿಂದೊರೆವುದೆನಗೆ ॥**

**ಟೀಕಾ:-** ಗುರುವರ್ಯ=ಹೇ ಶ್ರೇಷ್ಠನಾದ ಗುರುನಾಥನೇ ! ಸುಷುಪ್ತಿಯನ್ನು=ನಿದ್ರೆಯನ್ನು, ಅರಿವೊಡೆ=ತಿಳಿಯಬೇಕಾದರೆ, ಆತ್ಮಂಗೆ=ಆತ್ಮನಿಗೆ, ಕರಣವಾವುದು=ಯಾವದು ಸಾಧನವಾಗಿದೆ ?, ಎನಗೆ=ನನಗೆ, ಕರುಣದಿಂದ=ಕೃಪೆಯಿಂದ, ಒರೆವುದು=ತಿಳಿಸಬೇಕು.

**ತಾತ್ಪರ್ಯ:-** ಹೇ ಗುರುವರ್ಯನೇ ! ನಿದ್ರೆಯಲ್ಲಿ ಆತ್ಮನು ಅಹಂಕಾರಾದಿಗಳ ಅಭಾವವನ್ನು ಅರಿಯುತ್ತಾ ಇರುವನೆಂಬುದನ್ನು ಹೇಳಿದಿರಿ. ಹಾಗೆ ಆತ್ಮನು ಅರಿಯಬೇಕಾದರೆ, ಕರಣ ಸಹಿತನಾಗಿ ಅರಿಯುವನೋ ಹೇಗೆ ? ಕರಣ ಸಹಿತನಾಗಿ ಅರಿವನು. ಎಂದು ತಾವು ಹೇಳಿದರೆ, ಕರಣವನ್ನು ನಿದ್ರೆಯಲ್ಲಿ ಅಂಗೀಕರಿಸಿದರೆ, ಅದು ನಿದ್ರೆಯಲ್ಲ ಜಾಗ್ರವಾಯಿತು. ಎಂದು ನನಗೆ ಯಾವದೋಷವನ್ನು ಹೇಳಿದರೋ, ಅದೇ ದೋಷವು ನಿಮಗೂ ಬರುತ್ತದೆ. ಹೀಗೆ ಹೇಳಿದರೆ; ಇದು ಅಯುಕ್ತವಾಗಿದೆ. ಯಾಕಂದರೆ, ಕರಣರಹಿತನಾಗಿ ಅರತಮೇಲೆ, ಆ ನಿದ್ರೆಯಲ್ಲಿಯೋ ಸ್ಮರಿಸಬಹುದಾಗಿತ್ತು. ಸ್ಮರಣವಾಗಬೇಕಾದರೆ ನಿದ್ರೆಯಳಿದು ಜಾಗ್ರಕ್ಕೆ ಬಾರದೆ ಸ್ಮರಣವಾಗದು. ಎಂದು ನೀರಿನಲ್ಲಿ ಮುಳುಗಿದವನ ದೃಷ್ಟಾಂತವನ್ನು ಕೊಟ್ಟು ಹೇಳಿದಿರಿ. ಹೀಗೆ ತಾವು ಹೇಳಬಾರದಾಗಿತ್ತು. ಕರಣವಿಲ್ಲದೆ ಅರಿಯುವನೆಂದು ಹೇಳಿದರೆ, ಕರಣಸಹಿತನಾಗಿ ಸ್ಮರಣಮಾಡುವನೆಂಬ ಮಾತು ವಿರೋಧವಾಗುತ್ತದೆ. ಹೀಗೆ ಕರಣಸಹಿತನು ರಹಿತನೆಂದು ತಾವು ಹೇಗೆ ಹೇಳಿದರೂ ? ***ಉಭಯತಃ ಪಾಶ ರಜ್ಜುನ್ಯಾಯದಂತೆ,** ವಿರೋಧವೇ ಆಗುತ್ತದೆ. ಉತ್ತರಕೊಟ್ಟ ನಿಮ್ಮ ಮಾತುಗಳು ಪೂರ್ವದಲ್ಲಿ ಆಡಿದ ಮಾತುಗಳಿಗೆ ವಿರೋಧಗಳಾಗುತ್ತವೆ. ಆದ್ದರಿಂದ ಆತ್ಮನು ನಿದ್ರೆಯಲ್ಲಿ ಅಹಂಕಾರಾದಿಗಳ ಅಭಾವವನ್ನು ಅರಿಯಬೇಕಾದರೆ, ಕರಣವುಂಟೋ ? ಅಥವಾ ಇಲ್ಲೋ ? ಎಂಬುದನ್ನು ನನಗೆ ತಿಳಿಸಬೇಕು. ಎಂದು ಶಿಷ್ಯನು ಗುರುಗಳನ್ನು ಕುರಿತು ಪ್ರಶ್ನೆಯನ್ನು ಮಾಡಿದ್ದಾನೆ.

ಬಳಿಕ, ಶಿಷ್ಯನು ಶ್ರೀ ಗುರುವಿಗೆ ಪ್ರಶ್ನೆಯನ್ನು ಮಾಡುವದಕ್ಕಿಂತ ಮುಂಚಿತವಾಗಿ ಗುರುಸ್ತುತಿಯನ್ನು ಮಾಡಿ, ಅವರ ಚಿತ್ತವನ್ನು ಪ್ರಸನ್ನಗೊಳಿಸಿ, ಅನಂತರ

---

*ಕೊರಳಿಗೆ ಹಾಕಿದ ಹಗ್ಗವನ್ನು ಎಡಕ್ಕಾಗಲಿ ಬಲಕ್ಕಾಗಲಿ ಜಗ್ಗಿದರೆ, ಪ್ರಾಣವು ಹೋಗುವಂತೆ,

ತನ್ನ ಪ್ರಶ್ನೆಯನ್ನು ಮಾಡಬೇಕೆಂಬ ಇಚ್ಛೆಯುಳ್ಳವನಾಗಿ, ಮೊದಲು ಗುರುಸ್ತುತಿಯನ್ನು ಮಾಡುತ್ತಾನೆ.

**ತ್ರಿ|| ತರಣಿ ಶಶಿ ರೋಚಿಗಳ ಕಿರಣಂಗಳೈದಿ ಸಂ |**
**ಹರಿಸದಜ್ಞಾನ ತಿಮಿರವಂ ಕೆಡಿಸುವದು |**
**ಗುರುವರ್ಯ ನಿನ್ನ ನಸುನೋಟ ||೧||**

**ಟೀಕಾ:-** ಗುರುವರ್ಯ=ಹೇ ಗುರುಪುಂಗವನೇ !, ತರಣಿ=ಸೂರ್ಯ, ಶಶಿ=ಚಂದ್ರ, ರೋಚಿಗಳ=ಅಗ್ನಿಗಳ, ಕಿರಣಗಳು=ಪ್ರಕಾಶಗಳು, ಐದಿ=ಹೊಂದಿ, ಸಂಹರಿಸದ=ನಾಶಮಾಡಲಿಕ್ಕೆ ಬಾರದ, ಅಜ್ಞಾನ ತಿಮಿರವಂ=ಸ್ವರೂಪದ ಮರವೆಯೆಂಬ ಕತ್ತಲೆಯನ್ನು; ನಿನ್ನ ನಸುನೋಟ=ನಿನ್ನ ಕಡೆಗಣ್ಣಿನ ಕಿಂಚಿತ್ ಕೃಪಾಕಟಾಕ್ಷವು, ಕೆಡಿಸುವದು=ನಾಶಮಾಡುವದು.

**ತಾತ್ಪರ್ಯ:-** ಹೇ ಗುರುವರ್ಯನೇ! ತಾವು ಅಸಾಧಾರಣ ಶಕ್ತಿಯುಕ್ತರಿರುವಿರಿ. ಆದ್ದರಿಂದ ಶ್ರುತಿಯು **'ನ ಗುರೋರಧಿಕಂ'** ಗುರುವಿಗಿಂತ ಅಧಿಕರು ಯಾರೂ ಇಲ್ಲವೆಂದು ಶ್ರುತಿ ಸಾರುತ್ತದೆ. ಯಾಕಂದರೆ; ಸೂರ್ಯ, ಚಂದ್ರ, ಅಗ್ನಿ ಈ ಮೂವರ ಪ್ರಕಾಶಗಳು ಬ್ರಹ್ಮಾಂಡದಲ್ಲಿ ತುಂಬಿರುವ ಕತ್ತಲೆಯನ್ನು ಕೆಡಿಸುತ್ತವೆ. ಆದರೆ, ಪಿಂಡಾಂಡರೂಪ ನನ್ನ ಶರೀರದೊಳಗಿರುವ ಅಜ್ಞಾನವನ್ನು ಕೆಡಿಸುವದು ಅವರಿಂದ ಆಗವಲ್ಲದು. ಇಷ್ಟೇ ಅಲ್ಲ **'ಹೃದ್ದೇಶೇರ್ಜುನ ತಿಷ್ಠಾಮಿ'** ಸರ್ವರ ಹೃದಯದಲ್ಲಿ ಅಂತರ್ಯಾಮಿಯಾಗಿ ಪರಮಾತ್ಮನು ನಾನು ಇರುವೆನೆಂದು ಹೇಳಿರುವನು. ಹೀಗೆ ಪರಮಾತ್ಮನು ಹೃದಯದಲ್ಲಿ ವಾಸವಾಗಿದ್ದರೂ, ಅವನಿಂದ ಕೂಡಾ ಅಜ್ಞಾನರೂಪ ಕತ್ತಲೆಯು ನಾಶವಾಗಿಲ್ಲ. ಅಂಥಾ ಅಜ್ಞಾನವನ್ನು ನಿನ್ನ ಕಡೆಗಣ್ಣಿನ ಕಿಂಚಿತ್ ಕೃಪಾಕಟಾಕ್ಷವು ನಾಶಮಾಡಿ ಬಿಡುತ್ತದೆ. ಅಂದಮೇಲೆ; ಯಾರಿಂದಲೂ ಆಗದ ಕಾರ್ಯವು ನಿನ್ನಿಂದ ಆಗುತ್ತದೆ. ಇಂಥಾ ಮಹಿಮಾಶಾಲಿಯಾಗಿರುವಿ. ಎಂದು ಶ್ರೀಗುರುವಿನನ್ನು ಕೊಂಡಾಡಿ ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

ಬಳಿಕ, ಗುರುಸ್ತುತಿಯನ್ನು ಮಾಡಿ ತನ್ನ ಮನಸ್ಸಿನಲ್ಲಿ ಉಂಟಾದ ಸಂಶಯವನ್ನು ಶ್ರೀಗುರುವಿಗೆ ತಿಳಿಸುತ್ತಾನೆ.

**ಎಂದು ಕೊಂಡಾಡು ತಾನಂದಮಯ ಭಕ್ತಿರಸ |**
**ದಿಂದೆ ನತನಾಗಿ ಗುರುವೆ ಚಿತ್ತೈಸೆನು |**
**ತಂದು ಬಿನ್ನೈಸಿದನು ಪುತ್ರ ||೨||**

ಟೀಕಾ:- ಎಂದು=ಹೀಗೆಂದು, ಕೊಂಡಾಡುತ=ಸ್ತುತಿಯನ್ನು ಮಾಡುತ್ತಾ, ಆನಂದಮಯ=ಆನಂದ ಸ್ವರೂಪವಾದ, ಭಕ್ತಿರಸದಿಂದೆ=ಭಕ್ತಿಯ ಭಾವದಿಂದೆ, ನತನಾಗಿ= ನಮಸ್ಕಾರವನ್ನು ಮಾಡಿ, ಗುರುವೆ=ಗುರೂತ್ತಮನೇ! ಚಿತ್ತೈಸು= ಏಕಾಗ್ರದಿಂದ ಆಲಿಸು, ಎನುತ್ತ=ಅನ್ನುತ್ತ ಅಂದು=ಆ ಹೊತ್ತಿನಲ್ಲಿ, ಪುತ್ರ= ಶಿಷ್ಯನು, ಬೆಸಸಿದನು=ಪ್ರಶ್ನೆ ಕೇಳಿದನು.

ತಾತ್ಪರ್ಯ:- ಸೂರ್ಯಾದಿ ದೇವತೆಗಳಿಗಿಂತಲೂ ಹೆಚ್ಚಾದ ಅಸಾಧಾರಣ ಶಕ್ತಿ ಯುಕ್ತನು ನೀನು ಆಗಿರುವಿ. ಎಂದು ಗುರುಸ್ತುತಿಯನ್ನು ಮಾಡಿ, ಗುರುವಿನ ಚಿತ್ತವನ್ನು ಪ್ರಸನ್ನೀಕರಿಸಿದ ತರುವಾಯ; ತನ್ನ ಮನೋಗತ ಸಂಶಯವನ್ನು ತಿಳಿಸುವದಕ್ಕಾಗಿ, ಹೇ ಗುರುವೆ! ನನ್ನ ಪ್ರಶ್ನೆಯನ್ನು ಏಕಾಗ್ರದಿಂದ ಆಲಿಸಿರಿ, ಎಂದು ಹೇಳಿದ್ದಾನೆ.

ಬಳಿಕ, ಹಿಂದೆ ಹೇಳಿದ ಅರ್ಥವನ್ನು ನೆನಪಿಗೆ ತಂದು, ಅದರಲ್ಲಿ ತನಗಾದ ಸಂಶಯವನ್ನು ಶ್ರೀ ಗುರುವಿಗೆ ತಿಳಿಸುತ್ತಲಿದ್ದಾನೆ.

**ಗುರುವೆ ನಾನಾಯುಕ್ತಿವೆರಿಸಿ ನಿದ್ರೆಯನರಿವು।**
**ತಿರುತಿರ್ಪನಾತ್ಮನೆಂದಿರಾ ಸುಪ್ತಿಯೊಳು।**
**ಕರಣಂಗಳುಂಟೆಯರಿವಿಂಗೆ ॥೩॥**

ಟೀಕಾ:- ಗುರುವೆ=ಗುರುನಾಥನೇ! ನಾನಾಯುಕ್ತಿವೆರಿಸಿ=ಅನೇಕ ರೀತಿಯ ಯುಕ್ತಿಗಳನ್ನು ತೋರಿಸಿ, ಆತ್ಮನು=ಚಿದ್ರೂಪಾತ್ಮನು, ನಿದ್ರೆಯನು=ಸುಪ್ತಿಯನ್ನು ಅರಿವುತಿರುತಿರ್ಪನು=ತಿಳಿಯುತ್ತಲಿರುವನು, ಎಂದಿರಿ=ಹೀಗೆ ಹೇಳಿದಿರಿ. ಆ ಸುಪ್ತಿ ಯೊಳು=ಆ ನಿದ್ರೆಯಲ್ಲಿ, ಅರುವಿಂಗೆ=ಆತ್ಮನಿಗೆ, ಕರಣಂಗಳುಂಟೆ=ಕರಣಗಳು ಇರುವವೇ?

ತಾತ್ಪರ್ಯ:- ಹೇ ಗುರುದೇವ! ತಾವು ಪೂರ್ವದಲ್ಲಿ; ಆತ್ಮನು ನಿದ್ರೆಯಲ್ಲಿ ಅಹಂಕಾರದ ಅಭಾವವನ್ನು ಅರಿಯುತ್ತಾನೆ. ಎಂಬಲ್ಲಿ ಅನೇಕ ಯುಕ್ತಿಗಳನ್ನೂ ಅನುಭವವನ್ನೂ ಹೇಳಿದಿರಿ. ಅದರಿಂದ ಆತ್ಮನು ನಿದ್ರೆಯಲ್ಲಿ ಅರಿಯುತ್ತಾ ಇದ್ದಾನೆಂಬುದು ಸಿದ್ಧವಾಯಿತು. ಆ ಆತ್ಮನು ಏನಾದರೊಂದನ್ನು ಅರಿಯ ಬೇಕಾದರೆ, ಕರಣಗಳ ಸಹಕಾರದಿಂದ ಅರಿಯುವನೋ? ಕರಣಗಳ ಅಪೇಕ್ಷೆ ಯಿಲ್ಲದೆ ಅರಿಯುವನೋ? ಹೇಳಿರಿ ಎಂದು ಶಿಷ್ಯನು ಪ್ರಶ್ನೆಯನ್ನು ಮಾಡುತ್ತಾನೆ.

ಬಳಿಕ, (ಕರಣಗಳ) (ಸಾಧನದ ಅಪೇಕ್ಷೆಯಿಂದ ಆತ್ಮನು ಅರಿಯುತ್ತಾ ನೆಂದು ಹೇಳಿದ ಪಕ್ಷದಲ್ಲಿ; ಈ ಮುಂದೆ ಹೇಳುವ ದೋಷವು ಬರುತ್ತದೆಂದು ಹೇಳುತ್ತಾನೆ.

**ಕರಣ ಸಂಚಾರಮಿರುತಿರೆ ನಿದ್ರೆಯಲ್ಲವೆಂ।**
**ದಿರಿಮತ್ತಭಾವವನು ಚಿತ್ತರಿವೊಡಲ್ಲಿ।**
**ಕರಣಂಗಳಿಲ್ಲದಿಹುದೆಂತು ॥೪॥**

**ಟೀಕಾ:-** ಕರಣ ಸಂಚಾರಮಿರುತಿರೆ = ಕರಣಾದಿಗಳ ವ್ಯಾಪಾರವಿದ್ದರೆ, ನಿದ್ರೆಯಲ್ಲವೆಂದಿರಿ=ಅದು ಸುಷುಪ್ತಿಯಾಗುವದಿಲ್ಲವೆಂದು ಹೇಳಿದಿರಿ, ಮತ್ತೆ=ಆನಂತರ, ಅಭಾವವನು=ಅಹಂಕಾರಾದಿಗಳು ಇಲ್ಲದಿರುವಿಕೆಯನ್ನು, ಚಿತ್ತರಿವೊಡೆ=ಚಿತ್ತು ತಿಳಿಯಬೇಕಾದರೆ, ಅಲ್ಲಿ=ಸುಷುಪ್ತಿಯಲ್ಲಿ, ಕರಣಂಗಳಿಲ್ಲದೆ, ಸಾಧನಗಳಿಲ್ಲದೆ, ಇಹುದೆಂತು=ಇರುವದು ಹೇಗೆ ?

**ತಾತ್ಪರ್ಯ:-** ಬುದ್ಧ್ಯಾದಿ ಕರಣಗಳ ಅಪೇಕ್ಷೆಯಿಂದ ಆತ್ಮನು ಅರಿಯುತ್ತಾನೆಂದು ತಾವು ಹೇಳಿದರೆ, ಪೂರ್ವದಲ್ಲಿ ತಾವು ನನಗೆ ಈ ಮಾತನ್ನು ಹೇಳಿದಿರಿ. ಏನಂದರೆ, ನಿದ್ರೆಯಲ್ಲಿ ಮನಬುದ್ಧ್ಯಾದಿಗಳ ವ್ಯಾಪಾರವಿದ್ದರೆ, ಅದು ನಿದ್ರೆಯಲ್ಲ. ಜಾಗ್ರವಾಯಿತು, ಎಂದು ಯಾವ ದೋಷವನ್ನು ಹೇಳಿದಿರಿ. ಅದೇ ದೋಷವು ತಮಗೆ ಪ್ರಾಪ್ತವಾಗುತ್ತದೆ. ಬಳಿಕ ನಿದ್ರೆಯಲ್ಲಿ ಕರಣಗಳು ಇಲ್ಲವೆಂದು ಹೇಳಿದರೆ, ಆ ಅಹಂಕಾರಾದಿಗಳ ಅಭಾವವನ್ನು ಚಿತ್ತವು ಹೇಗೆ ತಿಳಿಯಿತು ? ಎಂಬುದನ್ನು ನನಗೆ ತಿಳಿಸಿರಿ.

**ಬಳಿಕ,** ಕರಣಾದಿ ಸಾಧನ ಸಾಮಗ್ರಿಗಳಿರದೆ, ನಿದ್ರೆಯಲ್ಲಿ ಚಿತ್ತು ಹೇಗೆ ಅರಿಯುವದು ? ಒಂದು ವೇಳೆ ಆರಿಯುವದಾದರೆ ಆ ಅರತ ವಸ್ತುವಿನ ಸ್ಮರಣವು ಮನಸ್ಸಿಗೆ ಹೇಗೆಬರುವದು? ಎಂಬುದನ್ನು ತಿಳಿಸಬೇಕೆಂದು ಶಿಷ್ಯನು ಕೇಳುತ್ತಾನೆ.

**ಚಿತ್ತು ನಿದ್ರೆಯನರಿವುದೆತ್ತಣದು ಸಾಧನದ।**
**ಮೊತ್ತಮಿಲ್ಲಾಗಿ ಮಗುಳಿಯಾ ನೆನಹು ದೋ।**
**ರುತ್ತಮಿಹುದಕ್ಕೆ ಗತಿಯುಂಟೆ ॥೫॥**

**ಟೀಕಾ:-** ಸಾಧನದ= ಕರಣಗಳ, ಮೊತ್ತ=ಸಮೂಹವು, ಇಲ್ಲಾಗಿ=ಇಲ್ಲದ್ದರಿಂದ, ಚಿತ್ತು=ಚಿದ್ರೂಪಾತ್ಮನು, ನಿದ್ರೆಯನು=ಸುಷುಪ್ತಿಯನ್ನು, ಅರಿವುದು=ತಿಳಿಯುವದು, ಎತ್ತಣದು=ಎಲ್ಲಿಂದ ಬರುವದು ?, ಮಗುಳಿ=ಮತ್ತೂ, ಆ ನೆನಹು ದೋರುತ್ತಮಿಹುದಕ್ಕೆ=ಆ ನಿದ್ರಾನುಭವಜನ್ಯವಾದ ಸ್ಮೃತಿಯು ಮನಸ್ಸಿಗೆ ತೋರುವದಕ್ಕಾದರೂ, ಗತಿಯುಂಟೆ=ದಾರಿಯೇನಾದರೂ ಇರುವದೇನು ?

**ತಾತ್ಪರ್ಯ:-**ಕರಣಾದಿ ಸಾಧನ ಸಾಮಗ್ರಿಗಳ ಸಂಬಂಧವಿಲ್ಲದೆ ನಿದ್ರೆಯಲ್ಲಿ ಕೇವಲ ಆತ್ಮನು ಹೇಗೆ ಅರಿಯುವನು ? ಒಂದು ವೇಳೆ, ಸಾಧನವಿಲ್ಲದೆ ಅರಿಯು

ತ್ತಾನೆಂದು ತಿಳಿಯೋಣ; ಹೀಗೆ ತಿಳಿದಂಥಾ ವಿಷಯವು ಮನಸ್ಸಿಗೆ ಹೇಗೆ ತೋರಿತು ? ಅರಿಯುವವನು ಆತ್ಮನಾಗಿರುವನು, ಸ್ಮರಣ ಮಾಡುವದು ಮನಸ್ಸಾಗಿರುತ್ತದೆ ಎಂದು ಹೇಳುವದಾದರೆ, ಇದು ಅನುಭವ ವಿರೋಧವಾಗಿರುತ್ತದೆ. ಯಾಕಂದರೆ, ಒಬ್ಬನಿಗೆ ಅನುಭವ ಇನ್ನೊಬ್ಬನಿಗೆ ಸ್ಮರಣವು ಎಂದೂ ಆಗಲಾರದು. ಅರಿಯುವದಾಗುವದೆಂದರೆ, ಸ್ಮರಣ ತೋರುವದಕ್ಕೆ ಏನಾದರೂ ದಾರಿಯಿರುವದೋ ಹೇಳಿರಿ.

ಬಳಿಕ, ನಿದ್ರೆಯಲ್ಲಿ ಕರಣ ಸಾಧನವಿಲ್ಲದೆ ಚಿತ್ತು ಅರಿಯುವದೆಂದು ಹೇಳಿದರೆ, ಜಾಗರಣದಲ್ಲಿ ಮನಸ್ಸು ಸಾಧನವಾದ ಬಳಿಕ ಸ್ಮರಣವಾಗುತ್ತದೆ. ನಿದ್ರೆಯಲ್ಲಿ ಮನೋಕರಣವಿಲ್ಲದ್ದರಿಂದ ಸ್ಮರಣ ಮಾಡುವದಕ್ಕೆ ಬರುವದಿಲ್ಲ. ಎಂದು ತಾವು ಪೂರ್ವದಲ್ಲಿ ಹೇಳಿದ್ದು, ಅಸಂಗತವೆನಿಸುತ್ತದೆಂದು ಪ್ರಶ್ನೆಯನ್ನು ಮಾಡುತ್ತಾನೆ.

**ಅಲ್ಲಿ ಕರಣಾಪೇಕ್ಷೆ ಯಿಲ್ಲದಾ ಚಿತ್ತರಿಯ ।**
**ಬಲ್ಲುದೆನೆ ಸುಪ್ತಿ ಯಳಿದಲ್ಲದಾ ಸ್ಮರಣ ।**
**ವಿಲ್ಲವೆಂದೆಂಬ ವಿಧಿಬೇಡ ॥೬॥**

**ಟೀಕಾ:-** ಅಲ್ಲಿ=ಸುಪ್ತಿಯಲ್ಲಿ, ಕರಣಾಪೇಕ್ಷೆಯಿಲ್ಲದೆ=ಸಾಧನರೂಪ ಸಾಮಗ್ರಿಯು ಬೇಕಾಗದೆ, ಚಿತ್ತು=ಚಿದ್ರೂಪಾತ್ಮನು, ಅರಿಯಬಲ್ಲುದು=ತಿಳಿಯಬಹುದು, ಎನೆ=ಹೀಗಂದರೆ, ಸುಪ್ತಿಯಳಿದಲ್ಲದೆ=ಆ ನಿದ್ರೆಯು ನಾಶವಾಗದ ವಿನಾ, ಆ ಸ್ಮರಣವಿಲ್ಲ=ನಿದ್ರಾನುಭವದ ಸ್ಮೃತಿಯಾಗುವದಿಲ್ಲ. ಎಂದೆಂಬ=ಹೀಗೆಂಬ, ವಿಧಿ ಬೇಡ=ಕಟ್ಟಳೆಯು ಬೇಡ.

**ತಾತ್ಪರ್ಯ:-** ಹೇ ಗುರುವರ್ಯನೇ! ನಿದ್ರೆಯಲ್ಲಿ ಚಿದ್ರೂಪಾತ್ಮನು ಕರಣಾದಿ ಅಪೇಕ್ಷೆಯಿಲ್ಲದೆ, ಅರಿಯುವನು, ಎಂದು ತಾವು ಹೇಳುವದಾದರೆ; ಕರಣದ ಅಪೇಕ್ಷೆಯಿಲ್ಲದೆ ಸ್ಮರಣವನ್ನು ಕೂಡಾ ಮಾಡಬೇಕಾಗುತ್ತದೆ. ಅಂದಬಳಿಕ, ತಾವು ಪೂರ್ವದಲ್ಲಿ ಭಾವಿಯಲ್ಲಿ ಮುಳಗಿದ ಪುರುಷನ ದೃಷ್ಟಾಂತವನ್ನು ಕೊಟ್ಟು, ಜಾಗ್ರಕ್ಕೆ ಬಂದಬಳಿಕ ಮನಸ್ಸು ಪ್ರಾಪ್ತವಾಗುತ್ತದೆ. ಸ್ಮರಣ ಮಾಡಲಿಕ್ಕೆ ಬರುತ್ತದೆ. ನಿದ್ರೆಯಲ್ಲಿ ಮನೋಕರಣವಿಲ್ಲದ್ದರಿಂದ ಸ್ಮರಿಸಲಿಕ್ಕೆ ಬರುವದಿಲ್ಲ. ಎಂದು ತಾವು ಹೇಳಿದ ಮಾತು ಸುಳ್ಳಾಗುತ್ತದೆ. ಅಂದರೆ, ಪೂರ್ವೋತ್ತರ ವಾಕ್ಯಗಳಿಗೆ ವಿರೋಧ ಪ್ರಾಪ್ತ ವಾಗುತ್ತದೆಂಬ ಅಭಿಪ್ರಾಯವು.

ಬಳಿಕ, ಅರಿಯುವದು, ಮರೆಯುವದು, ಸ್ಮರಿಸುವದು, ಇವುಗಳನ್ನು ಆತ್ಮನು ತಾನೇ ಮಾಡುತ್ತಾನೆಂದು ಹೇಳಿದರೆ,ಆತ್ಮನು ಬುದ್ಧ್ಯಾದಿ ಗುಣಗಳುಳ್ಳವನು ಆಗಬೇಕಾಯಿತು ಎಂದು ಶಂಕೆಯನ್ನು ಮಾಡುತ್ತಾನೆ.

**ತಾನೆಯರಿವುದು ಮತ್ತೆ ತಾನೆ ಮರೆವುದು ಮಗುಳೆ ।**
**ತಾನದಂ ನೆನೆವುದೆನಲು ಬುದ್ಧ್ಯಾದಿ ಗುಣಿ ।**
**ತಾನಾದನಾತ್ಮನೆನಬೇಕು ॥೭॥**

**ಟೀಕಾ:-** ತಾನೆಯರಿವುದು=ಅರಿಯುವವನು ತಾನೆ, ಮತ್ತೆ=ಅನಂತರ, ತಾನೆ ಮರೆವುದು=ಮರೆಯುವದು ತಾನೇ, ಮಗುಳೆ=ಮತ್ತೂ, ತಾನದಂ=ಅರತದ್ದನ್ನು, ನೆನೆವುದು=ಸ್ಮರಿಸುವದು, ಎನಲು=ಹೀಗನ್ನಲು, ಆತ್ಮನು=ಚಿತ್ತು, ಬುದ್ಧ್ಯಾದಿ=ಬುದ್ಧಿ ಸುಖದುಃಖಾದಿ, ಗುಣಿ=ಗುಣಗಳುಳ್ಳವನು, ಆತ್ಮನು ತಾನಾದನು=ಆತ್ಮನೇ ಆಗಿರುವನೆಂದು, ಎನಬೇಕು=ಹೇಳಬೇಕಾಗುತ್ತದೆ.

**ತಾತ್ಪರ್ಯ:-** ಆತ್ಮನು ಸ್ವತಂತ್ರನಾಗಿರುವನು. ಅದರಿಂದ ತನ್ನ ಇಚ್ಛಾನುಸಾರವಾಗಿ ಅರಿಯುಬಹುದು. ಇಲ್ಲವೆ ಮರೆಯುಬಹುದು. ಬೇಕಾದಾಗ್ಯೆ ಸ್ಮರಣವನ್ನೂ ಮಾಡಬಹುದು. ಇಲ್ಲವೆ ಬಿಡಬಹುದು, ಎಂದು ತಾವು ಹೇಳಿದರೆ, ಆತ್ಮನು ಬುದ್ಧಿ, ಸುಖ, ದುಃಖಾದಿ ಒಂಭತ್ತು ಗುಣಗಳಿಂದ ಕೂಡಿದವನಾದ್ದರಿಂದ, ಗುಣಿಯೆಂದು ಒಪ್ಪಬೇಕಾಗುತ್ತದೆ. ಹೀಗಂಗೀಕರಿಸಿದರೆ, **'ಸಾಕ್ಷೀ ಚೇತಾ ಕೇವ ಲೋ ನಿರ್ಗುಣಶ್ಚ,** ಆತ್ಮನು ಕೇವಲ ನಿರ್ಗುಣವಾಗಿರುವನೆಂದು ಹೇಳುವ ಶ್ರುತಿಗೆ ವಿರೋಧವಾಗುತ್ತದೆ. ಆದ್ದರಿಂದ ಅರಿಯುವ, ಮರೆಯುವ, ಗುಣಗಳಿಂದ ಕೂಡಿದವನು ಗುಣಿಯು ಆಗಿರುವನೆಂದು ಹೇಳಲಿಕ್ಕೆ ಬರುವದಿಲ್ಲ.

ಬಳಿಕ, ಶ್ರುತಿಯ ವಿರೋಧವಾಗುವದಲ್ಲದೆ, ನೀವು ನಿಮ್ಮ ಸ್ವಸಿದ್ಧಾಂತವನ್ನು ತಾಗ ಮಾಡಿ, ನ್ಯಾಯಮತ ಸಿದ್ಧಾಂತವನ್ನು ಅಂಗೀಕಾರ ಮಾಡಬೇಕಾಗುತ್ತದೆ. ಇದರಿಂದ ಅಪಸಿದ್ಧಾಂತ ದೋಷವು ಬರುತ್ತದೆ. ಎಂದು ಹೇಳುತ್ತಾನೆ.

**ಅಂತಾಗೆ ಜಡಭಾವಮಂ ತಾಳ್ದನಾತ್ಮನೆಂ ।**
**ಬಂತೆ ತೋರುತ್ತ ಮಿದೆ ಗುರೂತ್ತಮ ನೀವಿ ।**
**ದಂ ತಿಳುಹ ಬೇಹುದೆನಗೊಲ್ದು ॥೮॥**

**ಟೀಕಾ:-** ಅಂತಾಗೆ=ಹಾಗೇ ಆಗಲಿಯೆಂದು ಒಪ್ಪಿದರೆ, ಆತ್ಮನು=ಚಿದ್ರೂಪಾತ್ಮನು, ಜಡಭಾವಮಂ ಜ್ಞಾನರಹಿತವಾದ ಸ್ಥಿತಿಯನ್ನು, ತಾಳ್ದನು=ಹೊಂದಿದನು, ಎಂಬಂತೆ=ಅನ್ನುವ ಹಾಗೆ, ತೋರುತ್ತಮಿದೆ=ಪ್ರತೀತಿಯಾಗುತ್ತಿರುತ್ತದೆ, ಗುರೂತ್ತಮ=ಗುರುಪುಂಗವನೇ !, ಎನಗೆ=ನನಗೆ, ಒಲ್ದು=ಪ್ರೀತಿಸಿ, ಇದಂ=ಈ ವಿಷಯವನ್ನು, ನೀವು=ತಾವು, ತಿಳುಹಬೇಹುದು=ತಿಳಿಸಲಿಕ್ಕೇಬೇಕು.

**ತಾತ್ಪರ್ಯ:-** ಬುದ್ಧ್ಯಾದಿ ಗುಣಗಳಿಂದ ಕೂಡಿ ಆತ್ಮನು ಗುಣಿಯಾಗಿರುವನೆಂದು ತಾವು ಹೇಳಿದರೆ, ಆತ್ಮನಿಗೆ ಜಡತ್ವವನ್ನು ಹೇಳಬೇಕಾಗುತ್ತದೆ. ಜಡ

ವಂದರೆ, ತನ್ನ ಅನ್ಯರ ಜ್ಞಾನವಿಲ್ಲದಿರುವಿಕೆಗೆ ಜಡವೆಂದು ಕರೆಯುತ್ತಾರೆ. ಈ ವಿಧವಾಗಿ ನಿದ್ರೆಯಲ್ಲಿ ಆತ್ಮನು ಜಡನಾಗಿರುವನು. ಜಾಗ್ರದಲ್ಲಿ ಅವನಿಗೆ ಮನಸ್ಸಿನ ಸಂಯೋಗದಿಂದ ಬುದ್ಧ್ಯಾದಿ ಗುಣಗಳು ತೋರುತ್ತವೆಂದು ನೈಯಾಯಿಕರು ಹೇಳುತ್ತಾರೆ. ಅವರಂತೆ ತಾವಾದರೂ ಆತ್ಮನಿಗೆ ಗುಣತ್ವ, ಜಡತ್ವಗಳನ್ನು ಹೇಳಿದರೆ, ಆತ್ಮನು ನಿರ್ಗುಣನೂ, ಜ್ಞಾನಸ್ವರೂಪನೂ ಆಗಿರುವನೆಂಬ ನಿಮ್ಮ ಸಿದ್ಧಾಂತಕ್ಕೆ ಹಾನಿ ಬರುತ್ತದೆ. ನ್ಯಾಯಮತದ ಸಿದ್ಧಾಂತವನ್ನು ಅಂಗೀಕಾರ ಮಾಡಿದಂತಾಗುತ್ತದೆ. ಈ ರೀತಿ ಇನ್ನೂ ಅನೇಕ ಸಂಶಯಗಳು ಉತ್ಪನ್ನಗಳಾಗುತ್ತವೆ. ಆದ್ದರಿಂದ ತಾವು ದಯವಿಟ್ಟು ನನಗೆ ಈ ವಿಷಯವನ್ನು ಚನ್ನಾಗಿ ವಿಮರ್ಶೆ ಮಾಡಿ ತಿಳಿಸಬೇಕೆಂದು ಶಿಷ್ಯನು ಬೇಡಿಕೊಳ್ಳುತ್ತಿರುವನು.

## ಪ್ರಶ್ನೆ ನಿರೂಪಣೆ ಸೂತ್ರ ೪ಕ್ಕೆ, ತ್ರಿವಿದಿ ೩೯.

ಬಳಿಕ, ಪೂರ್ವ ಸೂತ್ರದಲ್ಲಿ ಶಿಷ್ಯನು ಗುರುಗಳನ್ನು ಕುರಿತು 'ಹೇ ಗುರುವರ್ಯನೇ! ಚಿದ್ರೂಪಾತ್ಮನು ನಿದ್ರೆಯಲ್ಲಿ ಅಹಂಕಾರದ ಅಭಾವವನ್ನು ಅರಿಯುತ್ತಾನೆಂದು ಹೇಳಿದಿರಿ. ಅರಿಯಬೇಕಾದರೆ ಕರಣವುಂಟೋ? ಇಲ್ಲವೋ? ಎಂಬದನ್ನು ಕೇಳಿರಿ. ಉಂಟು; ಅಥವಾ ಇಲ್ಲ; ಹೀಗೆಂದು ಎರಡೂ ರೀತಿಯಿಂದ ಹೇಳಿದರೂ ಉಕ್ತ ದೋಷಗಳೇ ಪ್ರಾಪ್ತಗಳಾಗುತ್ತವೆ. ಮತ್ತು ನಿದ್ರೆಯಲ್ಲಿ ಅರತದ್ದು ಜಾಗ್ರದಲ್ಲಿ ನೆನಪಿಗೆ ಹೇಗೆ ಬಂದಿತು? ಎಂಬದಾಗಿ ಪ್ರಶ್ನೆಮಾಡಲು, ಅದಕ್ಕೆ ಗುರುಗಳು ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಾರೆ. ಹೇ ಶಿಷ್ಯನೇ! ಕೇಳು. ಜಾಗ್ರತ್ಸ್ವಪ್ನಗಳಲ್ಲಿ ವ್ಯವಹರಿಸುವಂಥಾ ಜೀವನಿಗೆ ಅಕಸ್ಮಾತ್ ಕರ್ಮಮೂಲಕ ನಿದ್ರಾವಸ್ಥೆಯು ಪ್ರಾಪ್ತವಾಗುತ್ತದೆ. ಆಗ ಅಹಂಕಾರವು ತನಗೆ ಕಾರಣವಾದ ಅವಿದ್ಯೆಯಲ್ಲಿ ಅಡಗುವದು. ಆದರಲ್ಲಿರುವ ಜೀವನು ತನಗೆ ಬಿಂಬವಾದ ಸಾಕ್ಷಿಕೂಟಸ್ಥಾತ್ಮನಲ್ಲಿ ಏಕತ್ವವನ್ನು ಹೊಂದುತ್ತಾನೆ. ಮತ್ತು ನಿದ್ರೆಯನ್ನು ಅರಿಯುತ್ತಿರುವನು. ಈ ಆತ್ಮನ ಪ್ರಕಾಶದಿಂದೊಡಗೂಡಿದ ಮಾಯೆಯು ತನ್ನ ವೃತ್ತಿಗಳನ್ನು ಸಂಕೋಚ ವಿಕಾಸಗಳನ್ನು ಮಾಡುವ ಧರ್ಮದಿಂದ ಕೂಡಿರುತ್ತದೆ. ಈ ಮಾಯಾಕರಣದಿಂದ ಚಿದ್ರೂಪಾತ್ಮನು ನಿದ್ರೆಯಲ್ಲಿರುವ ಅಜ್ಞಾನ ಮತ್ತು ಸುಖ ಇವುಗಳನ್ನು ಅರಿಯುತ್ತಿರುತ್ತಾನೆ. ಅಲ್ಲಿರುವ ಮಾಯಾವೃತ್ತಿಗಳು ಕ್ಷಣಿಕ ಅನಿತ್ಯಗಳಾಗಿರುವದರಿಂದ ಸುಖ, ಜ್ಞಾನಗಳೂ ಕ್ಷಣಿಕ ಅಂದರೆ, ಅನಿತ್ಯಗಳಾಗಿರುತ್ತವೆ. ಹೇಗಂದರೆ. ಗಿಡದ ಬುಡದಲ್ಲಿ ಬಿದ್ದ ಚಂದ್ರನ ಬೆಳದಿಂಗಳಂತೆ ಅನಿತ್ಯಗಳಾಗಿರುತ್ತವೆ. ಈ ಸುಖದ ಅನುಭವಕ್ಕೆ ಸಾಧನವೂ, ಕರ್ಮವೂ ಮಾಯೆಯೇ ಆಗಿರುತ್ತದೆ. ಯಾವದಾದರೊಂದು ಸೂಕ್ಷ್ಮವಸ್ತು ದರ್ಶನಕ್ಕೆ ದೀಪವು ಕರಣವೂ ಕರ್ಮವೂ ಆಗಿರುವಂತೆ, ಮಾಯೆಯು ಕರಣ ಕರ್ಮಾತ್ಮಕ

ವಾಗಿದೆ. ಕಾರಣವಾದ ಮಾಯೆಯಲ್ಲಿದ್ದ ಅನುಭವದ **ಸಂಸ್ಕಾರವು** ಜಾಗ್ರತ್ತಿನಲ್ಲಿದ್ದ ಕಾರ್ಯಾತ್ಮಕ ಮನಸ್ಸಿಗೆ ಬರುತ್ತದೆ. ನಿದ್ರೆಯಲ್ಲಿ ಮಾಯಾಕರಣದಿಂದ **ಯಾವನು** ಸುಖ ಮತ್ತು ಅಜ್ಞಾನಗಳನ್ನು ಅರತನೋ, ಅವನೇ ಜಾಗ್ರದಲ್ಲಿ ಮನೋಕರಣ ಮೂಲಕ ಸ್ಮರಣವನ್ನು ಮಾಡುತ್ತಾನೆ. ಇದಕ್ಕೆ **ಪ್ರತ್ಯಭಿಜ್ಞೆಯೆಂಬ** ಹೆಸರು ಬಂದಿರುತ್ತದೆ. ಸೋಽಯಂದೇವದತ್ತನೆಂಬುದೇ ದೃಷ್ಟಾಂತವಾಗಿರುತ್ತದೆ. ಮೊದಲು ಅರಿಯದಿದ್ದರೆ ಅದರ ಸ್ಮರಣವು ಹೇಗೆ ಆಗುವದು? ಆಗಲಾರದು. ಆದರಿಂದ ನಿದ್ರೆಯಲ್ಲಿ ಅರತ ಕಾರಣ ಜಾಗ್ರದಲ್ಲಿ ಸ್ಮರಣೆ ಬರುತ್ತದೆ. ಈ ಕಾರಣ ದಿಂದ ಆತ್ಮನು ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವರೂಪನಿರುವನು. ಇಂಥಾ ಸ್ವರೂಪನಾದ ತನ್ನಲ್ಲಿ ಮರವೆಯೆಂಬುದು ಇಲ್ಲವೆಂದು ತಿಳಿ. ಎಂಬದಾಗಿ ಉತ್ತರ ವನ್ನು ಹೇಳುತ್ತಾರೆ.

ಸೂತ್ರ। **ತನಿನಿದ್ರೆಯೊಳಗನುಭವಿಪ ಕರಣವುಂಟದಂ ।**
**ನಿನಗೆ ಪೇಳುವೆನೊಲಿದು ಕೇಳು ಬೋಧ್ಯ ॥**

**ಟೀಕಾ:-** ಬೋಧ್ಯ= ಎಲೈ ಶಿಷ್ಯನೇ !, ತನಿನಿದ್ರೆಯೊಳಗೆ=ಸೀಯಾದ ಗಾಢನಿದ್ರೆಯಲ್ಲಿ, ಅನುಭವಿಪ=ತಿಳಿಯುವದಕ್ಕೆ, ಕರಣವುಂಟು=ಸಾಧನವಿರು ವದು, ಅದಂ=ಅದನ್ನು, ನಿನಗೆ=ನಿನಗಾಗಿ, ಒಲಿದು=ಪ್ರೀತಿಯಿಂದ, ಪೇಳುವೆನು= ಹೇಳುತ್ತೇನೆ, ಕೇಳು=ಆಲಿಸು.

**ತಾತ್ಪರ್ಯ:-** ಆ ಸುಖರೂಪವಾದ ನಿದ್ರೆಯಲ್ಲಿ ಏನನ್ನಾದರೂ ತಿಳಿಯ ಬೇಕಾದರೆ, ಆತ್ಮನಿಗೆ ಅವಿದ್ಯಾನಾಮಕ **ಕರಣವು** ಇರುತ್ತದೆ. ಈ ಅವಿದ್ಯಾ ಕರಣದ ಸಹಾಯದಿಂದ ಅರಿಯುತ್ತಿರುವನು. ಅದು ಹೇಗೆ ? ಎಂಬುದನ್ನು ನಿನಗೆ ಚನ್ನಾಗಿ ತಿಳಿಯುವಂತೆ ಹೇಳುತ್ತೇನೆ ಕೇಳು.

**ಬಳಿಕ,** ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಹೇಳುತ್ತೇವೆಂದು ಅಭಯುವನ್ನು ಕೊಡುತ್ತಾರೆ.

**ತನುಜ ಕೇಳಾ ನಿದ್ರೆಯನುಭವಕ್ಕಾದ ಸಾ ।**
**ಧನವನಾ ನಿದ್ರೆ ಯಳಿದಲ್ಲಿ ತೋರುತಿಹ ।**
**ನೆನಹಿನ ಕ್ರಮುವನೊರೆಯುವೆನು** ॥೧॥

**ಟೀಕಾ:-** ತನುಜಕೇಳ್=ಪುತ್ರನೇ !ಆಲಿಸು, ಆ ನಿದ್ರೆಯ=ಆಸುಪ್ತಿಯ, ಅನುಭವಕ್ಕಾದ=ಅರಿಯುವದಕ್ಕೆ ಆಗಿರುವ, ಸಾಧನವನು=ಕರಣವನ್ನು, ಆ ನಿದ್ರೆ ಯಳಿದಲ್ಲಿ=ಆ ನಿದ್ರೆಯು ಕೆಟ್ಟಬಳಿಕ, ತೋರುತಿಹ=ತೋರುತ್ತಿರುವ, ನೆನಹಿನ= ಸ್ಮೃತಿಯ, ಕ್ರಮವನ್ನು=ರೀತಿಯನ್ನು, ಒರೆಯುವೆನು=ತಿಳಿಸುತ್ತೇನೆ.

**ತಾತ್ಪರ್ಯ:-** ಆತ್ಮನು ನಿದ್ರೆಯಲ್ಲಿ ಅಹಂಕಾರದ ಅಭಾವವನ್ನು ತಿಳಿಯ ಬೇಕಾದರೆ, ಯಾವ ಕರಣವು ಅದೆಯೆಂಬುದನ್ನು ಹೇಳುತ್ತೇನೆ. ಮತ್ತು ನಿದ್ರೆಯಲ್ಲಿ ಅರತದ್ದು ಜಾಗ್ರದಲ್ಲಿ ಹೇಗೆ ನೆನಪಿಗೆ ಬಂದಿತು ? ಎಂಬುದನ್ನೂ ನಿನಗೆ ಚನ್ನಾಗಿ ತಿಳಿಯುವಂತೆ ಹೇಳುತ್ತೇನೆಂದು ಪ್ರತಿಜ್ಞೆಯನ್ನು ಮಾಡುತ್ತಾರೆ.

ಬಳಿಕ, ಜೀವನಿಗೆ ನಿದ್ರೆಯು ಯಾವ ಕಾರಣದಿಂದ ಬರುತ್ತದೆಂಬುದನ್ನು ತಿಳಿಸುತ್ತಾರೆ.

**ನೆನಸಿನಲ್ಲಿಯು ಮತ್ತೆ ಕನಸಿನಲ್ಲಿಯು ತೋರ್ಪ |**
**ತನುವಿಡಿದ ಜೀವನನು ಕರ್ಮವಶದಿಂದೆ |**
**ತನಿ ನಿದ್ರೆಮುಸುಕುತಿಹುದೋರ್ಮೆ** ||೨||

**ಟೀಕಾ:-** ನೆನಸಿನಲ್ಲಿಯು=ಜಾಗ್ರದಲ್ಲಿಯು, ಮತ್ತೆ=ಬಳಿಕ, ಕನಸಿನಲ್ಲಿಯು= ಸ್ವಪ್ನದಲ್ಲಿಯೂ, ತೋರ್ಪ=ತೋರುವ, ತನುವಿಡಿದ=ದೇಹಾಭಿಮಾನವುಳ್ಳ, ಜೀವನನು=ಜೀವನನ್ನು, ತನಿನಿದ್ರೆ=ಗಾಢನಿದ್ರೆಯು, ಕರ್ಮವಶದಿಂದೆ=ಕರ್ಮನಿಮಿತ್ತ ಮೂಲಕ, ಓರ್ಮೆ=ಒಂದು ಕಾಲದಲ್ಲಿ, ಮುಸುಕುತಿಹುದು=ಮುಚ್ಚುವದು,

**ತಾತ್ಪರ್ಯ:-** ಜಾಗರಣ ಮತ್ತು ಸ್ವಪ್ನ ಇವುಗಳಲ್ಲಿ ವ್ಯವಹಾರ ತತ್ಪರನಾದ ಜೀವನಿಗೆ, ಸುಪ್ತಿ ಭೋಗದಾಯಕವಾದ ಕರ್ಮನಿಮಿತ್ತದಿಂದ ನಿದ್ರಾವಸ್ಥೆಯು ಬಂದು ಮುಚ್ಚುವದು. ಅಥವಾ ಕರ್ಮವಶದಿಂದೆ ಎಂಬ ಪದಕ್ಕೆ ಬದಲಾಗಿ ಕರ್ಮಲಯದಿಂದೆ ಎಂಬ ಪದವಿದ್ದಲ್ಲಿ; ಜಾಗ್ರತ್ಸ್ವಪ್ನ ಭೋಗದಾಯಕ ಕರ್ಮವು ನಾಶವಾಗಲು; ಸುಪ್ತಿ ಭೋಗದಾಯಕ ಕರ್ಮವು ಉದ್ಭೂತವಾಗಲು: ನಿದ್ರೆಯು ಬರುವದೆಂದು ತಿಳಿಯಬೇಕು. ಅರ್ಥಾತ್ ಜೀವನು ಮೂರು ಅವಸ್ಥೆಗಳನ್ನು ಕರ್ಮನಿಮಿತ್ತಮೂಲಕವೇ ಸಂಚರಿಸುತ್ತಿರುತ್ತಾನೆಂದು ತಿಳಿಯತಕ್ಕದ್ದು.

ಬಳಿಕ, ಆ ನಿದ್ರೆಯಲ್ಲಿ ಅಹಂಕಾರವು ತನಗೆ ಕಾರಣವಾದ ಅವಿದ್ಯೆಯಲ್ಲಿ ಸಂಸ್ಕಾರ ಸಹಿತವಾಗಿ ಅಡಗುತ್ತದೆಂದು ಹೇಳುತ್ತಾರೆ.

**ಆ ನಿದ್ರೆಯೊಳಗಹಮು ತಾನಖಿಳ ಕರ್ಮಾಭಿ |**
**ಮಾನ ಸಂಸ್ಕಾರ ಸಹಿತ ನಿಜಕಾರಣದೊ |**
**ಳೇನೆನ್ನದೊಂದೆ ಲಯಸುವದು** ||೩||

**ಟೀಕಾ:-** ಆ ನಿದ್ರೆಯೊಳಗೆ = ಸುಪ್ತಿಯಲ್ಲಿ, ಅಹಮು = ಅಹಂಕಾರವು, ತಾನು=ಸ್ವತಃ ಅಖಿಳ=ಎಲ್ಲ, ಕರ್ಮಾಭಿಮಾನಸಂಸ್ಕಾರ=ನಾನು ಈ ಕರ್ಮವನ್ನು ಮಾಡಿದನೆಂಬ ಸಂಸ್ಕಾರವು ಅಂದರೆ ವಾಸನೆಯು, ಸಹಿತ=ಕೂಡಿಕೊಂಡು, ನಿಜ

ಕಾರಣದೊಳು=ತನಗೆ ಕಾರಣವಾದ ಅವಿದ್ಯೆಯಲ್ಲಿ, ಏನನ್ನದೆ=ಯಾವ ವ್ಯಾಪಾರ ವನ್ನು ಮಾಡದೆ, ಒಂದೆ ಲಯಸುವದು=ತಾನೊಂದೆ ಲಯವನ್ನು ಹೊಂದುತ್ತದೆ.

**ತಾತ್ಪರ್ಯ:-** ನಿದ್ರೆಯಲ್ಲಿ ಅಹಂಕಾರವು ತನಗೆ ಕಾರಣವಾದ ಅವಿದ್ಯೆ ಯಲ್ಲಿ ಅಡಗುತ್ತದೆ. ಅಡಗುವಾಗ್ಯೆ ಅನೇಕ ವಿಧವಾಗಿ ಮಾಡಿದ ಕರ್ಮಗಳ ಸಂಸ್ಕಾರ ಸಹಿತವಾಗಿ ಅಡಗುತ್ತದೆ. ಅಂದರೆ ನಿದ್ರೆಯಲ್ಲಿ ಅಹಂಕಾರವು ನಿರ್ವ್ಯಾ ಪಾರದಿಂದ ಇದ್ದರೂ, ಆಯಾಯ ಕರ್ಮಗಳ ವಾಸನಾರೂಪ ಸಂಸ್ಕಾರದಿಂದ ಸಹಿತವಾಗಿ ಅಡಗುತ್ತದೆ. ಅಂದರೆ ನಿದ್ರೆಯಲ್ಲಿ ಅಹಂಕಾರವು ನಿರ್ವ್ಯಾಪಾರದಿಂದ ಇದ್ದರೂ ಆಯಾಯ ಕರ್ಮಗಳ ವಾಸನಾರೂಪ ಸಂಸ್ಕಾರದಿಂದ ಸಹಿತವಾಗಿ ರುತ್ತದೆಂಬ ಭಾವವು. ಉಪ್ಪು ನೀರು ತುಂಬಿದ ಕೊಡವನ್ನು ಸೀ ನೀರಿನಲ್ಲಿ ಮುಳ ಗಿಸಿದರೂ, ತನ್ನಲ್ಲಿದ್ದ ಉಪ್ಪು ನೀರನ್ನು ಹೇಗೆ ಬಿಡುವದಿಲ್ಲವೋ. ಹಾಗೆ ಅಹಂ ಕಾರವು ಕಾರಣವಾದ ಅವಿದ್ಯೆಯಲ್ಲಿ ಲೀನವಾದರೂ, ತನ್ನಲ್ಲಿದ್ದ ಸಂಸ್ಕಾರಗಳನ್ನು ಬಿಡುವದಿಲ್ಲ. ಪುನಃ ಅನ್ಯಜಾಗ್ರದಲ್ಲಿ ಆ ಅಹಂಕಾರವು ಹೊರಗೆಬಂದು, ಪೂರ್ವ ಸಂಸ್ಕಾರಕ್ಕನುಗುಣವಾಗಿ ವ್ಯವಹಾರವನ್ನು ಮಾಡಹತ್ತುತ್ತದೆ. ಈ ಅನುಭವದ ಬಲದಿಂದ ಅಹಂಕಾರವು ಸಂಸ್ಕಾರ ಸಹಿತವಾಗಿ ಲಯವಾಗಿರುತ್ತದೆಂದು ಹೇಳಿ ರುವರು. ಸಂಸ್ಕಾರವಿಲ್ಲದೆ ಲೀನವಾಗಿದ್ದರೆ, ಬಡಿಗನು ಕಂಬಾರನ ಕೆಲಸಕ್ಕೂ ಕಂಬಾರನು ಕುಂಬಾರನ ಕೆಲಸಕ್ಕೂ ಹೋಗಬೇಕಾಗಿತ್ತು. ಹಾಗೆ ಆಗುವದಿಲ್ಲ. ಕಿಂತು; ನಿನ್ನೆ ಇಷ್ಟು ಕೆಲಸ ಮಾಡಿದೆನು. ಈ ಹೊತ್ತು ಇಷ್ಟು ಮಾಡಬೇಕಾಗಿದೆ ಎಂದು ನಿನ್ನೆ ಬಿಟ್ಟುಬಂದ ಕೆಲಸಕ್ಕೇ ಹೋಗುವದರಿಂದ **ಅಹಂಕಾರವು ಸಂಸ್ಕಾರ** ಸಹಿತವಾಗಿರುತ್ತದೆ.

ಬಳಿಕ, ಆ ಅಹಂಕಾರ ಉಪಾಧಿಯಿಂದ ಕೂಡಿರುವ ಜೀವನು; ಉಪಾಧಿ ಯಾದ ಅಹಂಕಾರಲಯವಾದ್ದರಿಂದ, ತನಗೆ ಬಿಂಬರೂಪನಾದ ತುರ್ಯ, ಸಾಕ್ಷಿ, ಪ್ರತ್ಯಗಾತ್ಮ ಸ್ವರೂಪದಲ್ಲಿ ಲಯವಾದನೋ ಏನೋ ಅನ್ನುವಂತೆ ತೋರುತ್ತಾ ನೆಂದು ನಿರೂಪಿಸುತ್ತಾರೆ.

**ಅದರಲ್ಲಿ ಜೀವನೆನಿಸಿದ ಚಿತ್ತು ತನ್ನ ನಿಜ ।**
**ಪದವಪ್ಪ ತೂರ್ಯನೊಳಗಡಿಗಿ ತೆನಿಸಿ ತೋ ।**
**ರ್ಪುದು ಸುಷುಪ್ತಿಯುನರಿವುದಿಂತು ॥೪॥**

**ಟೀಕಾ:-** ಅದರಲ್ಲಿ=ಆ ಅಹಂಕಾರದಲ್ಲಿ, ಜೀವನೆನಿಸಿದ ಚಿತ್ತು=ಜೀವನೆಂಬ ಹೆಸರಿನ ಅರವು, ತನ್ನ=ಸ್ವಕೀಯ, ನಿಜಪದವಪ್ಪ=ನಿಜವಾದ ಸ್ವರೂಪವಾದ, ತುರ್ಯನೋಳಗೆ=ಪ್ರತ್ಯಗಾತ್ಮ ಸ್ವರೂಪದಲ್ಲಿ, ಅಡಗಿತೆನಿಸಿ=ಲಯವಾಯಿತೋ

ಏನೋ ಅನ್ನುವ ಹಾಗೆ, ತೋರ್ಪುದು=ತೋರುವದು, ಇಂತು=ಮುಂದೆ ಹೇಳುವ ಪ್ರಕಾರ; ಸುಷುಪ್ತಿಯನು=ನಿದ್ರೆಯನ್ನು, ಅರಿವುದು=ತಿಳಿಯುವದು

**ತಾತ್ಪರ್ಯ:**- ಆ ಅಹಂಕಾರವು ಲಯವಾದ್ದರಿಂದ, ಅದರಲ್ಲಿರುವ ಪ್ರತಿಬಿಂಬರೂಪ ಜೀವ ಚೈತನ್ಯವು; ತನಗೆ ಬಿಂಬವಾದ ಸಾಕ್ಷಿ ಕೂಟಸ್ಥ ತುರ್ಯಾತ್ಮನಲ್ಲಿ ಅಡಗಿತೋ ಏನೋ ಎಂಬಂತೆ ತೋರುತ್ತಿರುತ್ತದೆ. ಕನ್ನಡಿಯಲ್ಲಿ ನಮ್ಮ ಮುಖದ ಪ್ರತಿಬಿಂಬವು ಕಾಣಿಸುತ್ತಿರುತ್ತದೆ. ಪ್ರತಿಬಿಂಬಮುಖಕ್ಕೆ ಉಪಾಧಿಯಾದ ಕನ್ನಡಿಯು, ಒಡೆದೊಡನೆ ತನಗೆ ಕಾರಣವಾದ ಮಣ್ಣಿನಲ್ಲಿ ಅಡಗುತ್ತದೆ. ಪ್ರತಿಬಿಂಬವಾದ ಮುಖವು ತನಗೆ ಬಿಂಬವಾದ ಮುಖದಲ್ಲಿ ಅಡಗಿದಂತೆ ತೋರುತ್ತದೆ. ಅಂದರೆ, ಪ್ರತಿಬಿಂಬ ಮುಖವು ತೋರುವ ಅಡಗುವ ಈ ವ್ಯವಹಾರವು ಉಪಾಧಿವಶದಿಂದ ಆಗುತ್ತದೆ. ಸ್ವತಃ ಇಲ್ಲ. ಇದರಂತೆ ಜೀವನು ಬಿಂಬನಾದ ಪ್ರತ್ಯಗಾತ್ಮನಲ್ಲಿ ತೋರಿ ಅಡಗುವದು ಉಪಾಧಿ ಮೂಲಕವಾಗಿರುತ್ತದೆ ಸಹಜವಲ್ಲ ಎಂಬ ಭಾವವು. ಆದ್ದರಿಂದಲೇ ಮೂಲ ಪದ್ಯದಲ್ಲಿ **'ಅಡಗಿತೆನಸಿ'** ಎಂದು ಹೇಳಿರುವರು. ಆದ್ದರಿಂದ ನಿಜವಾಗಿ ತೋರುವದು ಅಡಗುವದು ಇಲ್ಲವೆಂಬ ತಾತ್ಪರ್ಯವು. ಹೀಗೆ ಜೀವನು ಬಿಂಬರೂಪ ಸಾಕ್ಷಿರೂಪದಿಂದ ಇದ್ದುಕೊಂಡು ಮುಂದೆ ಹೇಳುವ ಪ್ರಕಾರ ನಿದ್ರೆಯನ್ನು ಅರಿಯುತ್ತಿರುತ್ತಾನೆಂದು ಹೇಳುತ್ತಲಿದ್ದಾರೆ.

ಬಳಿಕ, ನಿದ್ರೆಯಲ್ಲಿ ಮಾಯೆಯು ಇರುತ್ತದೆಂಬುದಕ್ಕೆ ಶೈವ ಪುರಾಣದ ಪ್ರಮಾಣವನ್ನು ಕೊಡುತ್ತಾರೆ.

**ಮಿಸುಪ ಚಿದ್ರೂಪದಿಂ ಪ್ರಸರ ಧರ್ಮಂಗಳಿಂ |**
**ದೆಸೆವುದಾ ಮಾಯೆಯೆಂದು ಶೈವಪುರಾಣ |**
**ಮುಸುರುವದು ಸುಪ್ತಿಯೊಳು ಪುತ್ರ** ||೩||

**ಟೀಕಾ:**- ಪುತ್ರ=ಹೇ ಮಗನೇ ! ಸುಪ್ತಿಯೊಳು=ನಿದ್ರೆಯಲ್ಲಿ, ಮಿಸುಪ=ಪ್ರಕಾಶಮಾನವಾದ, ಚಿದ್ರೂಪದಿಂ=ಚೈತನ್ಯದಿಂದಲೂ, ಪ್ರಸರ=ವಿಕಾಸಗಳಾದ, ಧರ್ಮಂಗಳಿಂ=ಧರ್ಮಗಳಿಂದಲೂ, ಆ ಮಾಯೆ=ಆ ಮಾಯೆಯು, ಎಸೆವುದು=ಶೋಭಿಸುವದು ಎಂದು, ಶೈವಪುರಾಣಂ= ಶಿವಪುರಾಣವು, ಉಸುರುವದು=ಹೇಳುವದು.

**ತಾತ್ಪರ್ಯ:**- ಕಾರ್ಯವಾದ ಅಹಂಕಾರವು ತನಗೆ ಕಾರಣವಾದ ಅವಿದ್ಯೆಯಲ್ಲಿ ಅಡಗಿಕೊಂಡು ನಿದ್ರೆಯಲ್ಲಿರುತ್ತದೆ. ಹೀಗೆಂದು ಪೂರ್ವದಲ್ಲಿ ಹೇಳಲ್ಪಟ್ಟಿತು. ಅದಕ್ಕೆ ಈಗ **ಶೈವಪುರಾಣದ** ವಾಕ್ಯವನ್ನು ಪ್ರಮಾಣವಾಗಿ ಉದಾಹರಿಸುತ್ತಲಿದ್ದಾರೆ. ಆ ಶೈವ ಪುರಾಣವು ಹೀಗೆ ಹೇಳುತ್ತದೆ. ಏನೆಂದರೆ,

ನಿದ್ರೆಯಲ್ಲಿ ಮಾಯೆಯು ಇರುತ್ತದೆ. ಮತ್ತು ಪ್ರತ್ಯಗಾತ್ಮ ಚೈತನವನ್ನು ಆಶ್ರಯಮಾಡಿಕೊಂಡು ಇರುತ್ತದೆ. ಆದರಿಂದ ಆ ಚೈತನ್ಯದ ಪ್ರತಿಬಿಂಬ ಪ್ರಕಾಶದಿಂದ ಕೂಡಿದೆ, ಆದ್ದರಿಂದಲೇ ಆ ಜಡವಾದ ಮಾಯೆಯು ತನ್ನ ವೃತ್ತಿಗಳನ್ನು ವಿಕಾಸ ಮತ್ತು ಸಂಕೋಚ, ಇವುಗಳನ್ನು ಮಾಡುತ್ತಿರುತ್ತದೆ. ಹೇಗೆಂದರೆ, ಭೂಗೋಲದ ನಕಾಸವನ್ನು (ವಿಕಾಸ) ಬಿಚ್ಚಿದರೆ ಎಲ್ಲ ದೇಶಗಳೂ ಕಾಣುತ್ತವೆ. (ಸಂಕೋಚ) ಸುರಳಿಸುತ್ತಿದರೆ, ಎಲ್ಲ ದೇಶಗಳು ಅಡಗಿಕೊಂಡಿವೆ. ನಕಾಶದ ಸುತ್ತುವಿಕೆ ಬಿಚ್ಚುವಿಕೆಯಂತೆ, ಮಾಯೆಯು ತನ್ನ ವೃತ್ತಿಗಳನ್ನು ತೆರೆಯುವದನ್ನು ಮುಚ್ಚುವದನ್ನು ಮಾಡುತ್ತದೆ. ಇದೇ ಆದಕ್ಕೆ ಧರ್ಮ ಅಂದರೆ, ಸ್ವಭಾವವಾಗಿದೆ. ಉಷ್ಣ ಪ್ರಕಾಶ ಧರ್ಮವುಳ್ಳ ಅಗ್ನಿಯಂತೆ, ಈ ಮಾಯೆಯು ಸಂಕೋಚ ವಿಕಾಸ ಧರ್ಮವುಳ್ಳದಾಗಿದೆ. ಇಂಥಾ ಮಾಯೆಯು ನಿದ್ರೆಯಲ್ಲಿರುತ್ತದೆಂದು ಶೈವ ಪುರಾಣವು ಹೇಳುತ್ತದೆ.

ಬಳಿಕ, ನಿದ್ರೆಯಲ್ಲಿ ಅಜ್ಞಾನ ಮತ್ತು ಸುಖ ಇವುಗಳ ಜ್ಞಾನವು ನಿತ್ಯ ವ್ಯಾಪಕ, ಅರುರೂಪನಾದ ತನಗೆ ಆಗುತ್ತದೆಂದು ನಿರೂಪಣ ಮಾಡುತ್ತಾರೆ.

**ಆ ಮಾಯೆಗಾ ವಿಕೃತಿ ನೇಮವಾಗಿರಲಲ್ಲಿ ।**
**ತಾಮಸ ಸುಖಂಗಳನುಭವಂ ನಿತ್ಯ ನಿ ।**
**ಸ್ಸೀಮ ಸಂವಿತ್ತಿಗಹುದೈಸೆ ॥೬॥**

**ಟೀಕಾ:-** ಆ ಮಾಯೆಗೆ= ಆ ಅವಿದ್ಯೆಗೆ, ಆ ವಿಕೃತಿ=ಸಂಕೋಚ ವಿಕಾಸ ರೂಪ ವಿಕಾರವು, ನೇಮವಾಗಿರಲ್=ಸಿದ್ಧವಾಗಿರಲು, ಅಲ್ಲಿ=ಸುಷ್ತಿಯಲ್ಲಿ, ತಾಮಸ= ಅಜ್ಞಾನ, ಸುಖಂಗಳ=ಸುಖಗಳ, ಅನುಭವಂ=ಜ್ಞಾನವು, ನಿತ್ಯ=ನಾಶರಹಿತಮಾದ, ನಿಸ್ಸೀಮ=ಪೂರ್ಣವಾದ, ಸಂವಿತ್ತಿಗೆ=ಚೈತನ್ಯರೂಪನಾದ ತನಗೆ, ಅಹುದೈಸೆ= ಆಗುತ್ತದಷ್ಟೇ.

**ತಾತ್ಪರ್ಯ:-** ನಿದ್ರೆಯಲ್ಲಿ ಅವಿದ್ಯೆಯು ಸಂಕೋಚವಿಕಾಸ ಧರ್ಮಗಳಿಂದ ಕೂಡಿರುತ್ತದೆಂಬುದನ್ನು ಹೇಳಿದರು. ಅದರಿಂದ ಅದು ವಿಕಾರವುಳ್ಳದ್ದಾಗಿದೆ. ವಿಕಾರವುಳ್ಳದ್ದರಿಂದ ಜಡವಾಗಿದೆ. ಆದರಿಂದ ಅದಕ್ಕೆ ಅರಿಯುತನವಿಲ್ಲ. ಹಾಗಾದರೆ ಅಲ್ಲಿ 'ಏನೂ ಅರಿಯಲಿಲ್ಲ' ಎಂಬುದಕ್ಕೆ ಗೋಚರವಾದ ತಮೋರೂಪ ಅಜ್ಞಾನ ವನ್ನು; ಹಾಗು 'ಸುಖದಿಂದ ಮಲಗಿದೆನು' ಎಂಬುದಕ್ಕೆ ಗೋಚರವಾದ ಸುಖ ವನ್ನು; ಇವುಗಳನ್ನು ಅರಿಯುವವರು ಯಾರು? ಅಂದರೆ; ತಾನೇ ಅರಿಯುವವನು ಆಗಿರುವನು. ತಾನು ಮೂರು ಅವಸ್ಥೆಗಳಲ್ಲಿ ಅರಿಯುತ್ತಿರುವದರಿಂದ ಕಾಲ ಪರಿ ಚ್ಛಿನ್ನ ರಹಿತನು. ಅದರಿಂದ ನಿತ್ಯನಾಗಿದ್ದಾನೆ. ಮೂರೂ ದೇಹರೂಪ ದೇಶಗಳಲ್ಲಿ

ರುವದರಿಂದ ನಿಸ್ಸೀಮನು. ಅಂದರೆ, ವ್ಯಾಪಕನು ಆಗಿರುವನು. ಇಂಥ ನಿತ್ಯ, ವ್ಯಾಪಕ, ಚಿದ್ರೂಪನಾದ ತನಗೇ ಜ್ಞಾನವಾಗುತ್ತದೆ. ಅಂದರೆ ಮಾಯಾ ಅವಿದ್ಯೆ ಅದರ ಕಾರ್ಯಗಳಾದ ಅಹಂಕಾರಾದಿಗಳೆಲ್ಲವು ದೃಶ್ಯವಾಗಿ ಅರಿಸಿಕೊಳ್ಳುತ್ತವೆ. ಅವುಗಳಿಗೆ ದೃಗ್ರೂಪನಾಗಿ ಅರಿಯುವವನು ತಾನೊಬ್ಬನೇ ಆಗಿರುವನೆಂಬ ಭಾವವು.

**ಬಳಿಕ,** ನಿದ್ರೆಯಲ್ಲಿ ವಿಕಾಸಗಳಾದ ಅವಿದ್ಯಾವೃತ್ತಿಗಳು ಅನಿತ್ಯಗಳಾದ್ದರಿಂದ ಸುಖಜ್ಞಾನಗಳೂ ಕ್ಷಣಿಕಗಳಾಗಿರುತ್ತವೆಂದು ನಿರೂಪಣ ಮಾಡುತ್ತಾರೆ.

**ಅಲ್ಲಿ ಮಾಯಾ ಪ್ರಸರವೆಲ್ಲಂ ಕ್ಷಣಿಕವಾಗ ।**
**ಲಲ್ಲಿ ಯಾತ್ಮಾನುಭವ ಸುಖ ಜ್ಞಾನಂಗ ।**
**ಳೆಲ್ಲವುಂ ಕ್ಷಣಿಕವೆನಬೇಕು** ॥೭॥

**ಟೀಕಾ:-** ಅಲ್ಲಿ=ನಿದ್ರೆಯಲ್ಲಿ, ಮಾಯಾ ಪ್ರಸರವೆಲ್ಲಂ=ಮಾಯಾವೃತ್ತಿಗಳೆಲ್ಲವು, ಕ್ಷಣಿಕವಾಗಲು=ಅನಿತ್ಯಗಳಾಗಲು, ಅಲ್ಲಿಯ=ಅಲ್ಲಿರುವ, ಆತ್ಮಾನುಭವ=ತನ್ನಿಂದ ತಿಳದಂಥಾ, ಸುಖ ಜ್ಞಾನ ಇವುಗಳೆಲ್ಲವು, ಕ್ಷಣಿಕವೆನಬೇಕು=ಅನಿತ್ಯಗಳೆಂದು ಹೇಳಲಿಕ್ಕೆ ಬೇಕಾಗುವದು.

**ತಾತ್ಪರ್ಯ:-** ನಿದ್ರೆಯಲ್ಲಿ ತೋರಿದ ಸುಖ ಮತ್ತು ಅದರ ಜ್ಞಾನಗಳು ಯಾಕೆ ನಾಶಗಳಾಗುತ್ತವೆ? ಅವು ಸರ್ವದಾ ಇರಬಹುದು. ಯಾಕಂದರೆ, ಆತ್ಮನು ನಿತ್ಯನೆಂದು ಹೇಳಿದ ಮೇಲೆ, ಅವನ ಸ್ವರೂಪವಾದ ಸುಖವಾದರೂ ನಿತ್ಯವಾಗಲೇ ಬೇಕು. ಸುಖವು ನಿತ್ಯವಾದ ಮೇಲೆ ಸುಖದಜ್ಞಾನವು ಅದು ಯಾವಾಗಲೂ ಇರಲಿಕ್ಕೆಬೇಕು. ಹೀಗಿದ್ದು ಅನಿತ್ಯಗಳು ಯಾಕೆ ಆಗುತ್ತವೆ? ಎಂದು ಪ್ರಶ್ನೆಯನ್ನು ಮಾಡಿದರೆ, ಉತ್ತರವನ್ನು ಹೇಳುತ್ತಾರೆ. ಏನಂದರೆ, ನಿದ್ರೆಯಲ್ಲಿ ತೋರಿದ ಸುಖವು ಆತ್ಮಸ್ವರೂಪವಾದರೂ ಅದು ಅವಿದ್ಯಾವೃತ್ತಿಗಳಲ್ಲಿ ಪ್ರತಿಬಿಂಬಿಸಿ ತೋರುತ್ತಿರುವದು. ಬಿಂಬಸುಖವು ಮಾತ್ರ ನಿತ್ಯವಾಗಿರುತ್ತದೆ. ಆ ಉಪಾಧಿಯಾದ ಅವಿದ್ಯಾವೃತ್ತಿಯು ಕ್ಷಣಿಕವಾಗುವದರಿಂದ ಪ್ರತಿಬಿಂಬಿತ ಸುಖವು ನಾಶವಾಗುತ್ತದೆ. ಸುಖವು ನಾಶವಾಗುವದರಿಂದ ಅದರ ಜ್ಞಾನವೂ ನಾಶವಾಗುತ್ತದೆ. ಅರ್ಥಾತ್ ನಿದ್ರೆಯಲ್ಲಿ ತೋರಿದ ಆನಂದವು ಮೇಘದಲ್ಲಿ ತೋರಿದ ಮಿಂಚಿನಂತೆ ಕ್ಷಣಿಕವಾಗಿರುತ್ತದೆಂಬ ಭಾವವು. ಈ ಕಾರಣದಿಂದಲೇ ಆನಂದಮಯಕೋಶವು ಆತ್ಮವಾಗಲಾರದು ಎಂದು ಹೇಳಿರುವರು.

**ಬಳಿಕ,** ಶಿಷ್ಯನು ಪ್ರಶ್ನೆಯನ್ನು ಮಾಡುತ್ತಾನೆ 'ಹೇ ಸ್ವಾಮಿನ್ ನಿದ್ರೆಯಲ್ಲಿ ಅವಿದ್ಯಾ ವೃತ್ತಿಗಳಲ್ಲಿ ಆನಂದವು ತೋರಿ ಅಡಗುತ್ತದೆಂದು ಹೇಳಲ್ಪಟ್ಟಿತು. ಇದ್ದು

ಸನಗೆ ಚನ್ನಾಗಿ ತಿಳಿಯುವಂತೆ ದೃಷ್ಟಾಂತವನ್ನು ಕೊಟ್ಟು ತಿಳಿಸಬೇಕು. ಮತ್ತು ಆ ಅವಿದ್ಯೆಯು ಆತ್ಮನಿಂದ ತಿಳಿಸಿಕೊಳ್ಳುತ್ತದೆಂದು ಪೂರ್ವದಲ್ಲಿ ಹೇಳಿ; ಬಳಿಕ ಸುಖಕ್ಕೂ ಅದರ ಜ್ಞಾನಕ್ಕೂ ಸಾಧನವಾಗಿರುತ್ತದೆಂದೂ ಹೇಳಿದಿರಿ. ಅಂದಮೇಲೆ ಒಂದೇ ಅವಿದ್ಯೆಯು ಅರಿಸಿಕೊಳ್ಳುವದಾಗಿಯೂ ಅರಿಯಲಿಕ್ಕೆ ಸಾಧನವಾಗಿಯೂ ಇರುತ್ತದೆಂದು ತಮ್ಮಿಂದ ಹೇಳಲ್ಪಟ್ಟಿತು. ಇದು ವಿರೋಧವಾಗುವದಿಲ್ಲವೇ? ಯಾಕಂದರೆ, ಅರಿಸಿಕೊಳ್ಳುವದು ಅರಿಯಲಿಕ್ಕೆ ಕರಣವಾಗದು. ಕರಣವಾದದ್ದು ಅರಿಸಿಕೊಳ್ಳಲಾರದು. ಹೇಗಂದರೆ; ಗಿಡವನ್ನು ಕಡಿಯಲಿಕ್ಕೆ ಸಾಧನವಾದದ್ದು ಕೊಡಲಿಯಾಗಿದೆ. ಕಡಿಸಿಕೊಳ್ಳುವದು ಮರವಾಗಿದೆ. ಕಡಿಸಿಕೊಳ್ಳುವ ಮರವು ಕರಣರೂಪ ಕೊಡಲಿಯಾಗದು. ಕರಣವಾದ ಕೊಡಲಿಯು ಕಡಿಸಿಕೊಳ್ಳುವ ಮರವಾಗುವದಿಲ್ಲ. ಹೀಗಿದ್ದು ತಾವು ಒಂದು ಅವಿದ್ಯೆಯನ್ನೇ ಕುರಿತು ಅರಿಸಿಕೊಳ್ಳುವದೂ ಅರಿಯಲಿಕ್ಕೆ ಸಾಧನವೂ ಆಗಿರುತ್ತದೆಂದು ಹೇಳುವದು **ಅಸಂಗತವಾಗಿದೆ.** ಎಂದು ಶಂಕೆಯನ್ನು ಮಾಡಿದರೆ, ದೀಪವೊಂದೇ ಕರಣ ಕರ್ಮಾತ್ಮಕವಾಗಿರುವಂತೆ; ಅವಿದ್ಯೆಯು ಆತ್ಮನಿಗೆ ಕರಣ ಕರ್ಮಾತ್ಮಕವಾಗಿರುತ್ತದೆಂದು ಉತ್ತರವನ್ನು ಹೇಳುತ್ತಾರೆ.

> **ಮರದಳಿರ ಚಂಚಲಾಂತರದ ಚಂದ್ರಿಕೆಗಳಂ ।**
> **ತಿರೆ ತೋರಿ ಕೆಡುವ ಸುಖದನುಭವಂಗಳಿಗೆ ।**
> **ಕರಣ ಕರ್ಮಾತ್ಮಕವೆ ಮಾಯೆ** ॥೬॥

**ಟೀಕಾ:-** ಮರದ=ಮಾವಿನಮರದ, ತಳಿರ=ಎಲೆಗಳ, ಚಂಚಲಾಂತರದ=ಆಗಲುವಿಕೆಯ ನಡುವಿರುವ, ಚಂದ್ರಿಕೆಗಳಂತೆ=ಬೆಳದಿಂಗಳದ ಹಾಗೆ, ಇರೆ=ಇರಲಾಗಿ, ತೋರಿಕೆಡುವ= ಜನಿಸಿ ಅನಿತ್ಯಗಳಾಗುವ, ಸುಖದನುಭವಂಗಳಿಗೆ=ಸುಖ ಮತ್ತು ಜ್ಞಾನ ಇವುಗಳಿಗೆ, ಕರಣ=ಸಾಧನವಾಗಿಯೂ, ಕರ್ಮಾತ್ಮಕವೆ=ಕರ್ಮರೂಪವಾಗಿಯೂ, (ತಿಳಿಸಿಕೊಳ್ಳುವದಾಗಿಯೂ) ಮಾಯೆ=ಅವಿದ್ಯೆಯು ಆಗಿರುತ್ತದೆ.

**ತಾತ್ಪರ್ಯ:-** ನಿದ್ರೆಯಲ್ಲಿರುವ ಸೂಕ್ಷ್ಮ ಅವಿದ್ಯಾ ವೃತ್ತಿಗಳಲ್ಲಿ ಸುಖವು ತೋರಿ ಕೆಡುವದು ಹೇಗೆ? ಅಂದರೆ, ಇದಕ್ಕೆ ದೃಷ್ಟಾಂತವನ್ನು ಹೇಳುತ್ತಾರೆ. ಮಾವಿನ ಮರದ ಎಲೆಗಳು ಗಾಳಿಯ ಹೊಡತಕ್ಕೆ ಕೂಡುವದನ್ನು ಅಗಲುವದನ್ನು ಮಾಡುತ್ತಿರುತ್ತವೆ. ಆಗ್ಯೆ ಪೌರ್ಣಿಮಾ ಚಂದ್ರನ ಬೆಳಕು ಆಗಲಿದ ಎಲೆಗಳ ಸಂಧಿಯಲ್ಲಿ ಬೀಳುತ್ತದೆ. ಆ ಕಾಲಕ್ಕೆ ಗಿಡದ ಬುಡದಲ್ಲಿ ಬೆಳದಿಂಗಳು ಕಾಣುತ್ತದೆ. ಎಲೆಗಳು ಕೂಡಿದರೆ ಬೆಳದಿಂಗಳು ಇಲ್ಲದಂತೆ ಆಗುತ್ತದೆ. ಗಿಡದ ಬುಡದಲ್ಲಿ ಕ್ಷಣಕಾಲ ಬೆಳಕು ತೋರಿ ಅಡಗಿ ಹೋದಂತೆ ಕಾಣುತ್ತದೆ.

ಈ ದೃಷ್ಟಾಂತದಂತೆ ಸುಪ್ತಿಯೆಂಬ ಭೂಮಿಯಲ್ಲಿ ಅವಿದ್ಯೆಯೆಂಬ ಮಾವಿನ ಮರವುಂಟು. ಅದರ ಸೂಕ್ಷ್ಮ ಅವಿದ್ಯಾ ವೃತ್ತಿಗಳೇ ಎಲೆಗಳಾಗಿವೆ. ಇವು ಕರ್ಮ ವೆಂಬ ಗಾಳಿಯ ಹೊಡತದಿಂದ ಕೂಡಿ ಅಗಲುವದನ್ನು ಮಾಡುತ್ತವೆ. ಆತ್ಮನೆಂಬ ಚಂದ್ರನ ಸುಖವೆಂಬ ಬೆಳಕು ಆ ಅವಿದ್ಯಾವೃತ್ತಿಗಳ ಸಂದುಗಳಲ್ಲಿ ತೋರುತ್ತದೆ. ಮತ್ತು ಅಡಗುತ್ತದೆ. ಈ ರೀತಿ ಅಡಗುವ ಸುಖದನುಭವಂಗಳಿಗೆ ಅವಿದ್ಯೆಯು **ಕರಣ** (ಸಾಧನ) ರೂಪವಾಗಿದೆ. ಅಂದರೆ, ಅವಿದ್ಯಾ ವೃತ್ತಿಗಳ ಸಹಾಯದಿಂದಲೇ ಸುಖ ಮತ್ತು ಸುಖದ ಜ್ಞಾನಗಳು ತೋರುತ್ತಿರುತ್ತವೆಂಬ ಭಾವವು. ಸಾಕ್ಷಾತ್ ಆತ್ಮನಿಂದ ಅವಿದ್ಯೆಯು ತಿಳಿಸಿಕೊಳ್ಳುವದರಿಂದ **ಕರ್ಮರೂಪವೂ** ಆಗಿದೆ.

**ಬಳಿಕ,** ಅವಿದ್ಯೆಯೊಂದೇ ಕರಣ ಕರ್ಮಾತ್ಮಕ ಉಭಯ ರೂಪು ಹೇಗೆ ಆಗಿರುತ್ತದೆ? ಎಂದು ಕೇಳಲು; ಇದಕ್ಕೆ ಒಂದು ದೀಪದ ದೃಷ್ಟಾಂತವನ್ನು ಹೇಳುತ್ತಾರೆ.

**ದೀಪವೊಂದೇ ಕರ್ಮರೂಪದಿಂದಂ ಕರಣ ।**
**ರೂಪದಿಂ ತೋರುವಂತಾತ್ಮನಿಗೆ ಕರ್ಮ ।**
**ರೂಪದಿಂ ಕರಣವದು ಮಾಯೆ ॥೯॥**

**ಟೀಕಾ:-** ದೀಪವೊಂದೇ=ಒಂದೇ ದೀಪವು, ಕರ್ಮರೂಪದಿಂದಂ=ಕಣ್ಣಿನಿಂದ ಕಾಣಿಸಿಕೊಂಬುದರಿಂದ ಕರ್ಮರೂಪಾಗಿಯೂ, ಕರಣರೂಪದಿಂ=ಘಟಪಟಾದಿ ವಸ್ತುಗಳನ್ನರಿಯುವದಕ್ಕೆ ಸಾಧನವಾದ್ದರಿಂದ ಕರಣರೂಪಾಗಿಯೂ, ತೋರು ವಂತೆ=ಕಾಣಿಸುವ ಹಾಗೆ, ಆತ್ಮನಿಗೆ=ತನಗೆ, ಕರ್ಮರೂಪದಿಂ=ಅತ್ಮನಿಂದ ತಿಳಿಸಿ ಕೊಳ್ಳುವದರಿಂದ ಕರ್ಮವಾಗಿಯೂ, ಕರಣವು=ಸುಖವನ್ನರಿಯುವದಕ್ಕೆ ಕರಣ ರೂಪವಾಗಿಯೂ, ಮಾಯೆ=ಮಾಯೆಯು ಆಗಿರುತ್ತದೆ.

**ತಾತ್ಪರ್ಯ:-** ಒಂದೇ ದೀಪವು ಕಣ್ಣಿನಿಂದ ಸಾಕ್ಷಾತ್ ಕಾಣಿಸಿಕೊಳ್ಳುವದ ರಿಂದ ವಿಷಯವಾಗಿದೆ. ಅದರಿಂದ ಕರ್ಮರೂಪವಾಗಿದೆ. ಮತ್ತು ಕತ್ತಲೆಯೊಳ ಗಿನ ಪದಾರ್ಥಗಳನ್ನು ಕಾಣುವದಕ್ಕೆ ಸಾಧನರೂಪವು ಆಗಿದೆ. ಇದು ಹೇಗೋ, ಹಾಗೇ ಈ ಮಾಯೆಯು ಆತ್ಮನಿಂದ ಕರ್ಮರೂಪವಾಗಿ ಅರಿಸಿಕೊಳ್ಳುವದರಿಂದ **ಕರ್ಮ**ವಾಗಿದೆ. ಸುಖದನುಭವಂಗಳಿಗೆ ಸಾಧನವಾಗಿರುವದರಿಂದ **ಕರಣರೂಪವೂ** ಆಗಿರುತ್ತದೆ. ಆದ್ದರಿಂದ ಒಂದೇ ಪದಾರ್ಥವು ಉಭಯ ರೂಪಾಗುವದಿಲ್ಲವೆಂಬ ನಿಯಮವಿಲ್ಲ. ಯಾಕಂದರೆ, ರಾಜನ ಸಂನ್ನಿಧಿಯಲ್ಲಿರುವ ಮಂತ್ರಿಯು ರಾಜಾಜ್ಞೆ ಯನ್ನು ಪಾಲಿಸುವದರಿಂದ ಸೇವಕನಾಗಿದ್ದಾನೆ. ತನ್ನ ಆಜ್ಞೆಯನ್ನು ಪ್ರಜೆಗಳ ಮೇಲೇ ಮಾಡುತ್ತಾನೆ. ಆದ್ದರಿಂದ ಪ್ರಜೆರಿಂದ ಸೇವ್ಯನಾಗಿಯೂ ಇರುವನು.

ಅರ್ಥಾತ್ ಸೇವ್ಯಸೇವಕ ಉಭಯಗಳಿಂದಲೂ ಕೂಡಿರುವನು. ಇದರಂತೆ, ಒಂದೇ ಮಾಯೆಯು ಕರಣ ಮತ್ತು ಕರ್ಮ ಉಭಯ ಸ್ವರೂಪವಾಗುವದಕ್ಕೂ ಬರುತ್ತ ದೆಂಬ ತಾತ್ಪರ್ಯವು.

ಬಳಿಕ, ನಿದ್ರೆಯಲ್ಲಿ ಆದ ಅನುಭವಗಳ ಸಂಸ್ಕಾರವು; ಕಾರಣವಾದ ಪ್ರಕೃತಿಯಲ್ಲಿದ್ದು, ಜಾಗ್ರದಲ್ಲಿ ಮನೋಕರಣಕ್ಕೆ ಬಂದು ಸ್ಮರಣವಾಗುತ್ತದೆಂದು ನಿರೂಪಣಮಾಡುತ್ತಾರೆ.

**ಅಲ್ಲಿ ತತ್ಸಂಸ್ಕಾರವೆಲ್ಲಂ ಪ್ರಕೃತಿಯೊಳಿ ।**
**ದ್ದಿರ್ಲ್ಲಿ ಕರ್ಮಾನು ಗುಣದೊಳಿದ್ದಾತಂಗೆ।**
**ಯಿಲ್ಲದಾ ಸ್ಮೃತಿಯ ನೆಸಗುವದು ॥ ೧೦ ॥**

**ಟೀಕಾ:-** ಅಲ್ಲಿ = ನಿದ್ರೆಯಲ್ಲಿ ತತ್ = ಅಜ್ಞಾನ, ಮತ್ತು ಸುಖ ಇವುಗಳ ಜ್ಞಾನದ, ಸಂಸ್ಕಾರವೆಲ್ಲಂ=ಎಲ್ಲ ಸಂಸ್ಕಾರಗಳು, ಪ್ರಕೃತಿಯೊಳು=ಕಾರಣವಾದ ಅವಿದ್ಯೆಯಲ್ಲಿ,ಇದ್ದು=ಇದ್ದು ಕೊಂಡು, ಇಲ್ಲಿ=ಜಾಗ್ರದಲ್ಲಿ,ಕರ್ಮಾನುಗುಣದೊಳ್ =ಜಾಗ್ರದ್ಭೋಗದಾಯಕ ಕರ್ಮವ್ಯಾಪಾರದಲ್ಲಿ, ಇದ್ದಾತಂಗೆ=ಇದ್ದವನಿಗೆ, ಇಲ್ಲದ=ಎಚ್ಚರಿಕೆಯಲ್ಲಿಯಿಲ್ಲದ, ಸ್ಮೃತಿಯನ್ನು=ನೆನಪನ್ನು ಎಸಗುವದು=ಉಂಟು ಮಾಡುವದು.

**ತಾತ್ಪರ್ಯ:-** ನಿದ್ರೆಯಲ್ಲಾದ ಅನುಭವವು ಜಾಗ್ರದಲ್ಲಿ ನೆನಪಿಗೆ ಹೇಗೆ ಬರುತ್ತದೆ? ಎಂದು ಕೇಳಿದರೆ, ಉತ್ತರಹೇಳುತ್ತಾರೆ. ಏನಂದರೆ, ನಿದ್ರೆಯಲ್ಲಿ ಅಜ್ಞಾನ, ಸುಖ, ಇವುಗಳ ಜ್ಞಾನಗಳು ಆಗಿರುತ್ತವೆ. ಅವುಗಳ ಸಂಸ್ಕಾರವು ಅವಿದ್ಯೆ ಯಲ್ಲಿ ಇರುತ್ತದೆ. ನಿದ್ರೆಯಲ್ಲಿದ್ದವನು ಜಾಗ್ರಕ್ಕೆ ಬಂದ ಬಳಿಕ, ಅವುಗಳ ಸ್ಮರಣವು ಮನಸ್ಸಿನಿಂದ ಆಗುತ್ತದೆ. ನಾನು ಸುಖವಾಗಿ ಮಲಗಿದ್ದೆ. ಏನನ್ನು ತಿಳಿಯಲಿಲ್ಲ ಎಂಬ ಸ್ಮರಣಗಳು ಬರುತ್ತವೆ. ಈಸ್ಮೃತಿಗಳು ಸಂಸ್ಕಾರದಿಂದ ಜನಿಸುತ್ತದೆ. ಸಂಸ್ಕಾರವು ಅನುಭವದಿಂದ ಜನ್ಯವಾಗುತ್ತದೆ. ಈ ಅನುಭವವು ಜಾಗ್ರದಲ್ಲಿ ಆಗಿಲ್ಲ. ಕಿಂತು ನಿದ್ರೆಯಲ್ಲಿ ಆಗಿರುತ್ತದೆ. ಸ್ಮರಣವು ಮಾತ್ರ ಜಾಗ್ರದಲ್ಲಿ ಆಗಿರು ತ್ತದೆ. ಅವಿದ್ಯಾಕರಣದಿಂದ ಅನುಭವವಾಗಿದೆ. ಮನಸ್ಸಿನಿಂದ ಸ್ಮರಣವಾಗಿದೆ ಯೆಂಬ ಭಾವವು.

ಬಳಿಕ, ನಿದ್ರೆಯಲ್ಲಿ ಯಾವನು ಅವಿದ್ಯಾಕರಣದಿಂದ ಏನನ್ನು ಅನುಭವ ಮಾಡಿದನೋ, ಅವನೇ ಆದನ್ನು ಜಾಗ್ರದಲ್ಲಿ ಮನಸ್ಸಿನಿಂದ ಸ್ಮರಿಸುತ್ತಾನೆ. ಆದರಿಂದ ಇದಕ್ಕೆ ಪ್ರತ್ಯಭಿಜ್ಞಾನವೆಂದು ಹೇಳುತ್ತಾರೆ.

**ಅದು ಪ್ರತ್ಯಭಿಜ್ಞೆಯಹುದದು ನೋಡಲಿಂತು ಪೂ ।**
**ರ್ವದೊಳು ತಾನನುಭವಿಸಿದರ್ಥಮಂ ಕಾಣು ।**
**ತದುಗೂಡಿ ಮೊದಲನೆನೆಯುವದು ॥೧೧॥**

**ಟೀಕಾ**:-ಅದು=ಮೊದಲು ತಿಳಿದು ಅದನ್ನು ಮತ್ತೆ ಸ್ಮರಿಸುವದು, ಪ್ರತ್ಯಭಿಜ್ಞೆಯಹುದು=ಇದಕ್ಕೆ ಪ್ರತ್ಯಭಿಜ್ಞಾನವೆಂದು ಹೇಳುವರು, ಅದನೋಡಲ್=ಅದನ್ನು ವಿಚಾರಮಾಡಿ ನೋಡಲು, ಇಂತು=ಹೀಗಿರುವದು, ಮೊದಲು = ಪೂರ್ವದಲ್ಲಿ ತಾನನುಭವಿಸಿದ=ತಾನು ಅನುಭವವನ್ನು ಮಾಡಿದ, ಅರ್ಥಮಂ=ವಿಷಯವನ್ನು ಕಾಣುತ=ನೋಡುತ್ತಾ, ಅದಗೂಡಿ= ಆ ವಸ್ತುವನ್ನು ಕೂಡಿಕೊಂಡು, ಮೊದಲ ನೆನೆಯುವದು=ಆನಂತರ ಸ್ಮರಿಸುವದು.

**ತಾತ್ಪರ್ಯ**:- ನಿದ್ರೆಯಲ್ಲಿ ಅಜ್ಞಾನ ಮತ್ತು ಸುಖ ಇವುಗಳನ್ನು ಅರತು, ಜಾಗ್ರದಲ್ಲಿ ಅವುಗಳನ್ನು ಸ್ಮರಿಸುವದರಿಂದ ಅದಕ್ಕೆ ಪ್ರತ್ಯಭಿಜ್ಞಾನವೆಂಬ ಹೆಸರು ಬಂದಿರುತ್ತದೆ. "**ಪ್ರಾಗಃಸ್ವಾಪ್ಸಮಿತಿ ಪ್ರಬೋಧ ಸಮಯೇಯಃ ಪ್ರತ್ಯಭಿಜ್ಞಾಯತೆ**" ಜಾಗ್ರದಲ್ಲಿ ನಿದ್ರೆಯಿಂದ ಎದ್ದು ನಾನು ಸುಖವಾಗಿ ಮಲಗಿದ್ದೆನೆಂದು ಯಾವನು ಸ್ಮರಿಸುತ್ತಾನೆ. ಹೀಗೆಂದು ದಕ್ಷಿಣಾಮೂರ್ತಿ ಸ್ತೋತ್ರದಲ್ಲಿ ಹೇಳಿರುತ್ತದೆ. ಪ್ರತ್ಯಭಿಜ್ಞಾನವು ಅಂದರೆ, ಮೊದಲು ತಿಳದದ್ದನ್ನು ಮತ್ತೊಮ್ಮೆ ಅದನ್ನು ಸ್ಮರಣ ಮಾಡುವದಕ್ಕೆ ಪ್ರತ್ಯಭಿಜ್ಞಾನವೆನ್ನುವರು. ಅಥವಾ ನಿದ್ರೆಯಲ್ಲಿ ಯಾವನು ಅವಿದ್ಯಾಕರಣದಿಂದ ಸುಖವನ್ನರಿತನೋ, ಅವನೇ ಜಾಗ್ರದಲ್ಲಿ ಮನೋಕರಣದಿಂದ ಅದನ್ನು ಸ್ಮರಿಸುತ್ತಾನೆ. ಅರತವನೇ ಸ್ಮರಿಸುವನು ಅನ್ಯನು ಸ್ಮರಿಸಲಾರನು. ಅರಿಯುವನೊಬ್ಬನು ಸ್ಮರಿಸುವನೊಬ್ಬನು ಆಗಲಾರನು. ಕಿಂತು, ಅರತವನೇ ಸ್ಮರಿಸುವನು. ಮತ್ತು ಯಾವದನ್ನು ಅರಿತನೋ ಅದನ್ನೇ ಸ್ಮರಿಸುವನು. ಹೀಗೆ ಇರುವ ಜ್ಞಾನಕ್ಕೆ ಪ್ರತ್ಯಭಿಜ್ಞಾನವೆಂದು ಕರೆಯುತ್ತಾರೆ.

ಬಳಿಕ, ಪ್ರತ್ಯಭಿಜ್ಞಾನಕ್ಕೆ ದೃಷ್ಟಾಂತವನ್ನು ಕೊಟ್ಟು ದ್ರಾಷ್ಟಾಂತದಲ್ಲಿ ಸಮಾವೇಶಮಾಡುತ್ತಾರೆ.

**ಆತನೇ ಈತನೆಂದೇ ತೆರದಿ ಘಟಿಪುದಾ ।**
**ಮಾತು ದೃಷ್ಟಾಂತ ವಿದಕೆ ಸುಖ ನಿದ್ರಾನು ।**
**ಭೂತದಾ ಸ್ಮರಣೆ ತನಗಿಂತು ॥೧೨॥**

**ಟೀಕಾ**:-ಆ ಮಾತು=ಪ್ರತ್ಯಭಿಜ್ಞಾನದ ಮಾತಿಗೆ, ಆತನೇ=ಆ ದೇವದತ್ತನೇ, ಈತನು = ಇವನು, ಎಂದೇ ತೆರದಿ = ಹೇಳಿದ ರೀತಿಯಂತೆ, ಇದಕೆ = ಇದಕ್ಕೆ, ದೃಷ್ಟಾಂತವು=ಉಪಮೆಯು, ಘಟಿಪುದು=ಸಂಭವಿಸುತ್ತದೆ. ಇಂತು=ಈಪ್ರಕಾರ,

ತನಗೆ=ತನಗೆ, ಸುಖನಿದ್ರಾನುಭೂತದಾಸ್ಮರಣೆ=ನಿದ್ರೆಯಲ್ಲಿ ಸುಖವನ್ನನುಭವಿಸಿ ಸ್ಮರಿಸುವದು ಆಗಿರುತ್ತದೆ.

**ತಾತ್ಪರ್ಯ:**-ಪ್ರತ್ಯಭಿಜ್ಞಾನವೆಂಬ ಮಾತು ಹೇಗೆ ಘಟಿಸುತ್ತದೆಂದು ಕೇಳಿದರೆ. **ಆ ದೇವದತ್ತನೇ ಈತನು** ಎಂಬ ಮಾತು ಹೇಗೆ ಸಂಭವಿಸುವದೋ; ಹಾಗೇ ನಿದ್ರೆಯಲ್ಲಿ ಸುಖವನ್ನು ಅನುಭವಿಸಿ ಜಾಗ್ರದಲ್ಲಿ ಸ್ಮರಿಸುವದು ಸಂಭವಿಸುತ್ತದೆ. ಮೊದಲು ದೇವದತ್ತನನ್ನು ಅರಿಯದಿದ್ದರೆ, ಸ್ಮರಣೆಯು ಸಂಭವಿಸಲಾರದು. ಮೊದಲು ಅರತಕಾರಣ ಅನಂತರ ಸ್ಮರಿಸಲಿಕ್ಕೆ ಬಂದಿತು.

**ಬಳಿಕ**, ಉಕ್ತದೃಷ್ಟಾಂತದಂತೆ; ನಿದ್ರೆಯಲ್ಲಿ ಸುಖ ಅಜ್ಞಾನಗಳನ್ನು ಅರಿಯದಿದ್ದರೆ, ನೆನೆಯಲಿಕ್ಕೆ ಬರಲಾರದೆಂದು ಹೇಳುತ್ತಾರೆ.

**ಅನುಭವಿಸದರ್ಥವದು ನೆನೆಯೆ ಗೋಚರಿಸದಾ ।**
**ತನಿನಿದ್ರೆಯಲ್ಲಿ ಯರಿಯದಿರೆ ಮುನ್ನೊರೆದ ।**
**ನೆನಹೆಂತು ಘಟಿಪುದೆಲೆ ವತ್ಸ** ॥ ೧೩ ॥

**ಟೀಕಾ:**- ಅನುಭವಿಸದ=ಮೊದಲು ತಿಳಿಯದ, ಅರ್ಥವದು=ಪದಾರ್ಥವು, ನೆನೆಯೆ=ಸ್ಮರಿಸಲು, ಗೋಚರಿಸದು=ವಿಷಯವಾಗದು, ಆ ತನಿನಿದ್ರೆಯಲ್ಲಿ=ಆ ಗಾಢಸುಪ್ತಿಯಲ್ಲಿ, ಅರಿಯದಿರೆ=ತಿಳಿಯದಿರಲು. ಮುನ್ನ=ಮೊದಲು, ಒರೆದ=ಹೇಳಿದ, ನೆನಹು=ಸ್ಮರಣವು, ಎಲೆವತ್ಸ=ಹೇಪುತ್ರನೇ!, ಹೇಗೆ=ಯಾವ ರೀತಿಯಿಂದ, ಘಟಿಪುದು=ಸಂಭವಿಸುವದು?,

**ತಾತ್ಪರ್ಯ:**- ಲೋಕದಲ್ಲಿ ಯಾವ ಪುರುಷನಾದರೂ, ಮೊದಲು ಯಾವ ವಸ್ತುವನ್ನು ಅರಿಯದಿದ್ದರೆ, ಅದರ ಸ್ಮರಣೆಯು ಸಂಭವಿಸುವದಿಲ್ಲ. ಇದು ಲೋಕಾನುಭವದಿಂದ ಪ್ರಸಿದ್ಧವದೆ. ಅಂದರೆ, ಯಾವುದನ್ನು ಅರಿಯುವನೋ ಅದನ್ನು ಸ್ಮರಿಸುವನು. ಅರಿಯದಲೆ ಸ್ಮರಿಸುವದು ಅಸಂಭವವಾಗಿದೆ. ಆದ್ದರಿಂದ ನಿದ್ರೆಯಲ್ಲಿ ಏನು ಅಜ್ಞಾನ ಮತ್ತು ಸುಖ, ಇವುಗಳನ್ನು ಅರಿಯದಿದ್ದರೆ; ಜಾಗ್ರದಲ್ಲಿ ಏನು ತಿಳಿಯದೆ ಸುಖದಿಂದ ಮಲಗಿದ್ದೆನೆಂಬ ಸ್ಮರಣವು ಬರಬಾರದಿತ್ತು, ಎಲ್ಲರಿಗೂ ಸ್ಮರಣವು ಬರುವದರಿಂದ ನಿದ್ರೆಯಲ್ಲಿ ಅವುಗಳ ಜ್ಞಾನವದೆಯೆಂದು ಸಿದ್ಧವಾಗುತ್ತದೆ.

**ಬಳಿಕ**, ನಿದ್ರೆಯಲ್ಲಿ ಆತ್ಮನು ಅವಿದ್ಯೆಯ ಕರಣದಿಂದ ಅರತಿದ್ದಾನೆ. ಜಾಗ್ರದಲ್ಲಿ ಮನೋಕರಣದಿಂದ ಸ್ಮರಿಸುತ್ತಾನೆಂಬುದು ಸಿದ್ಧವಾಯಿತು. ಹಾಗಾದರೆ, ಯಾವಕರಣದಿಂದ ಅನುಭವವಾಗಿದೆಯೋ ಅದೇಕರಣಕ್ಕೆ ಸ್ಮರಣವಾಗಬೇಕು.

ಅನುಭವವು ಅವಿದ್ಯಾಕರಣಕ್ಕೆ ಆಗಿರುತ್ತದೆ. ಅದರ ಸ್ಮರಣವು ಮನೋಕರಣಕ್ಕೆ ಹೇಗೆ ಬರುತ್ತದೆ? ಎಂದು ಕೇಳಲು; ಇದಕ್ಕೆ ಗುರುಗಳು ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಾರೆ.

**ಕಾರಣ ಪ್ರಕೃತಿ ಸಂಸ್ಕಾರವೀಕಾರ್ಯ ವಿ।**
**ಸ್ತಾರವಾಗಿರ್ದ ಕರಣದ ಸ್ಮೃತಿಗೆಂತು।**
**ಸಾರುವದು ಪೇಳೆನಲು ಕೇಳು ॥೧೪॥**

**ಟೀಕಾ:-** ಕಾರಣ ಪ್ರಕೃತಿ ಸಂಸ್ಕಾರವು=ಕಾರಣಾತ್ಮಕ ಅವಿದ್ಯೆಯಲ್ಲಿದ್ದ ಅನುಭವದ ಸಂಸ್ಕಾರವು, ಕಾರ್ಯವಿಸ್ತಾರವಾಗಿರ್ದ ಕರಣದ ಸ್ಮೃತಿಗೆ=ಕಾರ್ಯರೂಪದಿಂದ ವಿಸ್ತಾರವಾದ ಮನೋಕರಣದ ಸ್ಮರಣಕ್ಕೆ, ಎಂತು=ಹೇಗೆ, ಸಾರುವದು= ಬರುವದು ? ಪೇಳೆನಲು=ಹೇಳಲಿಕ್ಕೆ ಬೇಕು ಅನ್ನಲು, ಕೇಳು = ಏಕಾಗ್ರಬುದ್ಧಿಯಿಂದ ಆಲಿಸು.

**ತಾತ್ಪರ್ಯ:-** ನಿದ್ರೆಯಲ್ಲಿರುವದು ಅವಿದ್ಯಾಕರಣವಾಗಿದೆ. ಜಾಗ್ರದಲ್ಲಿರುವದು ಮನೋಕರಣವಾಗಿದೆ. ಅವಿದ್ಯೆ ಕಾರಣವಾಗಿದೆ. ಮನಸ್ಸು ಅದರ ಕಾರ್ಯವಾಗಿದೆ. ಕಾರಣವಾದ ಅವಿದ್ಯೆ ಸೂಕ್ಷ್ಮವಾಗಿದೆ. ಕಾರ್ಯವಾದ ಮನಸ್ಸು ಸ್ಥೂಲವಾಗಿದೆ. ಹೀಗೆ ಪರಸ್ಪರ ವಿಲಕ್ಷಣಗಳು ಆಗಿರಲಿಕ್ಕೆ ಅವಿದ್ಯಾಕರಣದಲ್ಲಿದ್ದ ಸಂಸ್ಕಾರವು ಮನಸ್ಸಿಗೆ ಹೇಗೆ ಬಂದಿತು? ಎಂದು ಪ್ರಶ್ನೆಯನ್ನು ಶಿಷ್ಯನು ಮಾಡಲು; ಗುರುಗಳು ಮುಂದೆ ಉತ್ತರವನ್ನು ಹೇಳುತ್ತಾರೆ.

ಬಳಿಕ, ಪ್ರಕೃತಿಯು ವಿಕರಿಸುತ್ತಾ ಮನೋರೂಪವಾಗಿರುವದರಿಂದ, ಅಲ್ಲಿರ್ದ ಅನುಭವದ ಸಂಸ್ಕಾರವು ಮನಸ್ಸಿಗೆ ಬಂದಿರುತ್ತದೆಂದು ಉತ್ತರವನ್ನು ಕೊಡುತ್ತಾರೆ.

**ಪ್ರಕೃತಿ ತಾನೆ ಮತ್ತೆ ವಿಕರಿಸುತೆ ಮಾನಸಾ।**
**ತ್ಮಕವಪ್ಪುದಾಗಿ. ತದನುಭವ ಸಂಸ್ಕಾರ।**
**ನಿಕರವೀನೆನಹಿಗಹುದಿಂತು ॥೧೫॥**

**ಟೀಕಾ:-** ಪ್ರಕೃತಿ=ಕಾರಣವಾದ ತ್ರಿಗುಣಗಳ ಸಾಮ್ಯಾವಸ್ಥೆಯಾದ ಅವಿದ್ಯೆಯು,ತಾನೆ=ಸ್ವತಃ, ಮತ್ತೆ=ಅನಂತರ, ವಿಕರಿಸುತೆ=ಹಾಲುಕೆಟ್ಟು ಮೊಸರಾದಂತೆ ರೂಪಾಂತರವನ್ನು ಹೊಂದುತ್ತಾ, ಮಾನಸಾತ್ಮಕವು=ಮನೋರೂಪವು, ಅಪ್ಪುದಾಗಿ=ಆಗುವದರಿಂದ, ತತ್=ಆ ಅವಿದ್ಯೆಯಲ್ಲಾಗಿದ್ದ, ಅನುಭವದ=ಜ್ಞಾನದ ಸಂಸ್ಕಾರನಿಕರವು=ಸಂಸ್ಕಾರಗಳ ಸಮೂಹವು, ಈನೆನಹಿಗೆ=ಈ ಜಾಗರಣದಲ್ಲಿ ಆಗುವಸ್ಮರಣಕ್ಕೆ, ಇಂತು=ಮುಂದೆ ಹೇಳುವ ಪ್ರಕಾರ, ಅಹುದು=ಆಗುವದು.

**ತಾತ್ಪರ್ಯ:-** ಹಾಲು ಕೆಟ್ಟು ಮೊಸರಾದಂತೆ, ಅನ್ನವು ಹಳಿಸುತ್ತಾ ಹುಳಿಯಾದಂತೆ, **ಅವಿದ್ಯೆಯು** ವಿಕಾರಸ್ಥಿತಿಯನ್ನು ಹೊಂದುತ್ತಾ ಜಾಗ್ರದಲ್ಲಿ **ಮನಸ್ಸು** ಆಗುತ್ತದೆ. ಆಗ್ಯೆ-ಆ ಅವಿದ್ಯೆಯಲ್ಲಿರುವ ಅನುಭವಜನ್ಯ ಸಂಸ್ಕಾರಗಳು ಮನಸ್ಸಿಗೆ ಬರುತ್ತವೆ. ಆ ಸಂಸ್ಕಾರಗಳಲ್ಲಿ ಯಾವದು ಉದ್ಬುದ್ಧವಾಗಿದೆಯೋ, ಅದು ಸ್ಮರಣವಾಗುತ್ತದೆ. ಬಾಕಿ ಸಂಸ್ಕಾರಗಳು ಅನುದ್ಬುದ್ಧಗಳಾಗಿ ಹಾಗೇ ಇರುತ್ತವೆ. ಈ ವಿಧವಾಗಿ ಅವಿದ್ಯಾಕರಣದಲ್ಲಾಯ್ದ ಅನುಭವವು ಮನೋಕರಣಕ್ಕೆ ಸ್ಮರಣ ರೂಪದಿಂದ ಬರುತ್ತದೆ. ಎಂದು ತಿಳಿ.

**ಬಳಿಕ,** ನಿದ್ದೆಯೊಳಗಿದ್ದ ಸಂಸ್ಕಾರಗಳು ಎದ್ದ ಬುದ್ಧಿಯಲ್ಲಿ ಹೇಗೆ ಬರುತ್ತವೆಂಬುದಕ್ಕೆ ದೃಷ್ಟಾಂತವನ್ನು ಹೇಳುತ್ತೇನೆ. ಕೇಳು ಎಂದು ಹೇಳುತ್ತಾರೆ.

**ಅಚ್ಚು ಪಡಿಯಚ್ಚಿನೊಳಗೊಚ್ಚುತಂ ತೋರ್ಪಂತೆ ।**
**ಬಿಚ್ಚದಾ ನಿದ್ರೆಯೊಳಗಿರ್ದ ಸಂಸ್ಕಾರ ।**
**ವೆಚ್ಚತ್ತ ಬುದ್ಧಿಯೊಳು ತೋರ್ಕುಂ ॥ ೧೬ ॥**

**ಟೀಕಾ:-** ಅಚ್ಚು = ಯಾವದೊಂದು ಆಕಾರವು, ಪಡಿಯಚ್ಚಿನೊಳಗೆ= ಒಂದಾನೊಂದು ಮೂರ್ತಿಯನ್ನು ಕೆತ್ತಿದ್ದರಲ್ಲಿ, ಒಚ್ಚುತಂ=ಒತ್ತಿದಕೂಡಲೇ, ತೋರ್ಪಂತೆ=ಪಡಿಯಚ್ಚಿನಲ್ಲಿರುವ ಆಕಾರಗಳು ತಗಡಿಗೆ ಬರುವಂತೆ, ಬಿಚ್ಚದ= ಬೇರೆಯಾಗದ, ಆ ನಿದ್ರೆಯೊಳಗಿರ್ದ= ಆ ನಿದ್ರೆಯಲ್ಲಿರುವ, ಸಂಸ್ಕಾರವು=ಅನುಭವದ ಬೀಜವು, ಎಚ್ಚತ್ತ=ಜಾಗ್ರಕ್ಕೆ ಬಂದ, ಬುದ್ಧಿಯೊಳು=ಬುದ್ಧಿಯಲ್ಲಿ, ತೋರ್ಕುಂ= ತೋರುವದು.

**ತಾತ್ಪರ್ಯ:-** ಯಾವದಾದರೊಂದು ದೇವತೆಯ ಆಕಾರವನ್ನು ಕೆತ್ತಿದ ಕಂಚು ಪಡಿಯಚ್ಚುಗಳಾಗುತ್ತವೆ. ಭಂಗಾರ, ಬೆಳ್ಳಿ, ತಾಮ್ರ, ಮುಂತಾದಧಾತುವಿನ ತಗಡನ್ನು ಮಾಡಿ, ಆಪಡಿಯಚ್ಚುಗಳಲ್ಲಿ ಇಟ್ಟು ಹೊಡೆದರೆ, ಆಯಾದೇವತೆಗಳ ಮೂರ್ತಿಗಳು ತಯಾರ ಆಗುತ್ತವೆ. ಆಪಡಿಯಚ್ಚಿನಲ್ಲಿರುವ ಆಕಾರಗಳು ತಗಡಿಗೆ ಬರುತ್ತವೆ. ಈ ಉದ್ಯೋಗವನ್ನು ಅಕ್ಕಸಾಲಿಗರು ಅಕ್ಕರತೆಯಿಂದ ಮಾಡುತ್ತಾರೆ. ಈ ದೃಷ್ಟಾಂತದಂತೆ, ಗಾಢವಾದ ನಿದ್ರೆಯಲ್ಲಿರುವ ಅನುಭವಜನ್ಯ ಸಂಸ್ಕಾರಗಳು ಜಾಗ್ರದಲ್ಲಿ ಉತ್ಥಾನವಾದ ಬುದ್ಧಿಯಲ್ಲಿ ಹೊಳೆದು ತೋರುತ್ತವೆ. ಆದ್ದರಿಂದ ನಿದ್ರಾನುಭವವು ಜಾಗ್ರದಲ್ಲಿ ಸ್ಮರಣಕ್ಕೆ ಬರುತ್ತದೆ.

**ಬಳಿಕ,** ನಿದ್ರೆಯಲ್ಲಿ ಅವಿದ್ಯಾಕರಣದ ವಿಚಾರವನ್ನು, ಅವಿದ್ಯಾಕರಣದ ಸಹಾಯದಿಂದ ಆತ್ಮನು ಅರಿಯುತ್ತಾನೆಂಬುದನ್ನು ಹೇಳುತ್ತಾ, ಆನಂದಮಯ ಕೋಶದ ವಿಚಾರವನ್ನು ಉಪಸಂಹಾರಮಾಡುತ್ತಲಿದ್ದಾರೆ. ಮೊದಲನೇ ಸಂಧಿ

ಯಲ್ಲಿ ಸರ್ವಾತ್ಮಕೋಪದೇಶದಿಂದ ಸರ್ವವೂ ಬ್ರಹ್ಮವೆಂದು ಹೇಳಲ್ಪಟ್ಟಿತು. ಅದನ್ನು ಕೇಳಿದ ಶಿಷ್ಯನು 'ಸರ್ವವು ಬ್ರಹ್ಮವಾದ ಮೇಲೆ ದೇಹಾದಿಗಳು ಯಾಕೆ ಬ್ರಹ್ಮವಾಗವು? ಇವು ಬ್ರಹ್ಮವು ಆದರೆ. ವೇದಾಂತಮತವು ಚಾರ್ವಾಕಮತವು ಯಾಕೆ ಆಗುವದಿಲ್ಲ? ಹೀಗೆಂಬ ಅನೇಕ ಸಂಶಯಗಳು ಒದಗಿದವು. ಆ ಸಂಶಯ ಗಳನ್ನು ನಿವಾರಿಸುವದಕ್ಕಾಗಿ ನಾಲ್ಕನೇ ಸಂಧಿಯ ಆರಂಭದಿಂದ ಇಲ್ಲಿಯ ವರೆಗೆ, ಅನ್ನ, ಪ್ರಾಣ, ಮನ, ವಿಜ್ಞಾನ, ಆನಂದಮಯ ಐದು ಕೋಶಗಳ ಪರ್ಯಂತ ವಿಚಾರವನ್ನು ಹೇಳಿದರು. ಮತ್ತು ಅವುಗಳು ಅರಿಸಿಕೊಳ್ಳುವದರಿಂದ ಅರಿಯುವ ಆತ್ಮನರೂಪುಗಳಲ್ಲ. ಕಿಂತು ಅನಾತ್ಮಗಳಾಗಿರುತ್ತವೆ ಎಂಬುದನ್ನು ನೇತ್ಯಾತ್ಮ ಕೋಪದೇಶದಿಂದ ತಿಳಸಿದರು. ಈಗ ದೃಕ್ಸ್ವರೂಪನಾಗಿ ಅರಿಯುವ ಆತ್ಮನ ಸ್ವರೂಪವನ್ನು ಕಥನಮಾಡುತ್ತಾರೆ. ಅಂದರೆ, ಪಂಚಕೋಶ ವಿಲಕ್ಷಣ ಸಾಕ್ಷಿ ಯಾದ ನೀನು ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವರೂಪನಿರುವಿ. ಎಂದು ಕಥನ ಮಾಡುತ್ತಾ ಸಂಧಿಯನ್ನು ಮುಗಿಸುತ್ತಾರೆ.

**ಇಂತವಸ್ಥಾತ್ರಯದೊಳಂ ತಾನೆ ತೋರುತಿಹ ।**
**ನಂತಾಗಿ ಸತ್ಯ ಸುಖ ಚಿತ್ಸ್ವಯಂ ಪ್ರಕಾ ।**
**ಶಂ ತನಗೆ ಸಿದ್ಧವೆಲೆ ಪುತ್ರ ॥೧೭॥**

**ಟೀಕಾ:-** ಇಂತು=ಈ ಪ್ರಕಾರ, ಅವಸ್ಥಾತ್ರಯದೊಳಂ=ಜಾಗ್ರಾದಿ ಮೂರು ಅವಸ್ಥೆಗಳಲ್ಲಿಯೂ, ತಾನೆ ತೋರುತಿಹನು=ತಾನೆ ಇರುವನು, ಅಂತಾಗಿ = ಆದ ಕಾರಣ, ಸತ್ಯ=ತ್ರಿಕಾಲ ಅಬಾಧ್ಯರೂಪನಾಗಿರುವದು, ಸುಖ=ಆನಂದಸ್ವರೂಪವು, ಚಿತ್=ಜ್ಞಾನಸ್ವರೂಪವು, ಸ್ವಯಂಪ್ರಕಾಶಂ=ಪರಪ್ರಕಾಶದ ಅಪೇಕ್ಷೆಯಿಲ್ಲದೆ ಸ್ವತಃ ಪ್ರಕಾಶಮಾಡುವದು, ತನಗೆ=ಆತ್ಮನಿಗೆ, ಎಲೆ ಪುತ್ರ = ಹೇ ಶಿಷ್ಯನೇ, ಸಿದ್ಧವು= ನಿಜವಾಗಿರುತ್ತದೆ.

**ತಾತ್ಪರ್ಯ:-** ಉಕ್ತ ಜಾಗ್ರತ್ ಮತ್ತು ಸ್ವಪ್ನ ಸುಷ್ತಿಗಳೆಂಬ ಮೂರು ಅವಸ್ಥೆಗಳಲ್ಲಿ ಇರುವದರಿಂದ **ಸದ್ರೂಪನಾಗಿರುವನು.** ಈ ಮೂರು ಅವಸ್ಥೆಗಳನ್ನು ಇದಿರಿಟ್ಟು ಅರಿಯುವದರಿಂದ **ಚಿದ್ರೂಪನಾಗಿರುವನು.** ಪ್ರಿಯ, ಮೋದ, ಪ್ರಮೋದಾಕಾರದ ವೃತ್ತಿಗಳಲ್ಲಿಯೂ ಅವಿದ್ಯಾ ವೃತ್ತಿಗಳಲ್ಲಿಯೂ ಪ್ರತಿಬಿಂಬಾ ನಂದವನ್ನುಂಟು ಮಾಡಿದ್ದರಿಂದ **ಸುಖರೂಪನು.** ಅನಿತ್ಯಗಳಾದ ಜಾಗ್ರಾದಿ ಮೂರು ಅವಸ್ಥೆಗಳನ್ನು ಅರಿಯುತ್ತಾ ಬೇರೆಯಿರುವದರಿಂದ **ನಿತ್ಯನು.** ಒಂದು ದೇಹದಲ್ಲಿದ್ದಂತೆ ಸರ್ವ ದೇಹಾದಿಗಳಲ್ಲಿಯೂ ತಾನಿರುವದರಿಂದ **ಪರಿಪೂರ್ಣನು.** ಅನ್ನಮಯಾದಿ ಐದುಕೋಶಗಳನ್ನು ಪ್ರಕಾಶಮಾಡುತ್ತಾ, ತಾನು ಯಾವುದ ರಿಂದಲೂ ತಿಳಿಸಿಕೊಳ್ಳುವದಿಲ್ಲ. ಅದರಿಂದ **ಸ್ವಯಂಪ್ರಕಾಶನಿರುವನು** ಅರ್ಥಾತ್

ಆತ್ಮನು ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣಸ್ವರೂಪನೇ ತಾನಿರುವೆನೆಂದು ತಿಳಿಯತಕ್ಕದ್ದೆಂಬ ಭಾವವು.

**ಅಥವಾ,** ಆತ್ಮನು ಅಂದರೆ ತಾನು ಜಾಗ್ರದಲ್ಲಿ **ಸದ್ರೂಪನಾಗಿ** ತೋರುವನು. ಸ್ವಪ್ನಾವಸ್ಥೆಯಲ್ಲಿ ಸ್ವಪ್ನವನ್ನರಿಯುವದರಿಂದ **ಚಿದ್ರೂಪನಾಗಿರುವನು.** ನಿದ್ರೆಯಲ್ಲಿ ಯಾವ ವಿಷಯಗಳಿಲ್ಲದಿದ್ದರೂ ತಾನೇ **ಆನಂದರೂಪನಾಗಿರುವನು.** ಇಂಥಾ ಅನಿತ್ಯಗಳಾದ ಅವಸ್ಥೆಗಳನ್ನು ಅರಿಯುತ್ತಲಿದ್ದಾನೆ. ಆದರಿಂದ **ನಿತ್ಯನು.** ಹೀಗೆ ಬ್ರಹ್ಮಾದಿ ಪಿಪೀಲಿಕಾಂತ ಸರ್ವ ದೇಹಗಳಲ್ಲಿರುವದರಿಂದ **ಪೂರ್ಣನು.** ಈ ದೇಹದಲ್ಲಿ ನಾನು ಎಂದು ನುಡಿಯುವ ಶಬ್ದಕ್ಕೆ ಅರ್ಥರೂಪನಾದ ಆತ್ಮನು ಸಚ್ಚಿದಾನಂದ ಸ್ವರೂಪನೆಂಬ ಭಾವವು.

**ಬಳಿಕ,** ಆದರಿಂದ ಸತ್, ಅಮಲ, ಪರಿಪೂರ್ಣ, ನಿತ್ಯನಾಗಿರುವದರಿಂದ ನಿನ್ನಲ್ಲಿ ಮರವೆಯಿಲ್ಲವೆಂದು ನಿರೂಪಣಮಾಡುತ್ತಾರೆ.

**ಅದು ಕಾರಣಂ ನೀನೆ ಸದಮಲಂ ಪರಿಪೂರ್ಣ ।**
**ನದರಿಂದೆ ನಿತ್ಯನಂತಾಗಿ ಮರವೆಯೆಂ ।**
**ಬುದು ನಿನ್ನೊಳಿಲ್ಲವಿದು ಸತ್ಯ ॥೧೮॥**

**ಟೀಕಾ:-** ಅದು ಕಾರಣಂ=ಈ ಕಾರಣದಿಂದ, ನೀನೆ=ನೀನು, ಸತ್=ಇರುವವನು, ಅಮಲ=ಪರಿಶುದ್ಧನು, ಪರಿಪೂರ್ಣನು=ದೇಶ ಪರಿಚ್ಛಿನ್ನ ರಹಿತನು, ಅದರಿಂದೆ=ಈ ಕಾರಣದಿಂದೆ; ನಿತ್ಯನು=ಕಾಲಪರಿಚ್ಛಿನ್ನ ರಹಿತನು, ಅಂತಾಗಿ=ಆದ್ದರಿಂದ, ಮರವೆಯೆಂಬುದು=ಅಜ್ಞಾನವೆನ್ನುವದು, ನಿನ್ನೊಳಿಲ್ಲ=ನಿನ್ನಲ್ಲಿ ಇರುವದಿಲ್ಲ, ಇದು ಸತ್ಯ=ಇದು ನಿಜವಿರುತ್ತದೆ.

**ತಾತ್ಪರ್ಯ:-** ಅನ್ನಮಯಕೋಶವು ಜಡವಾಗಿ ತೋರಿ ಅಡಗುವದರಿಂದ ಅಸತ್ತಾಗಿದೆ. ಪ್ರಾಣಮಯಕೋಶವು ಗಮನಾಗಮನದಿಂದೆ ಆರಿಸಿಕೊಳ್ಳುವದರಿಂದ ಅಸತ್ತಾಗಿದೆ. ನೀನು ಬೇರೆಯಾಗಿದ್ದರಿಂದ **ಸದ್ರೂಪನಾಗಿರುವಿ.** ಮನೋಮಯಕೋಶವು ಕಾಮಾದಿಗಳಿಂದ ಮಲಿನವಾಗಿದೆ. ಅದಕ್ಕೆ ನೀನು ಬೇರೆಯಾದ್ದರಿಂದ **ಅಮಲನಾಗಿರುವಿ.** ವಿಜ್ಞಾನಮಯಕೋಶವು ನಿದ್ರೆಯಲ್ಲಿ ಇಲ್ಲದಾದ್ದರಿಂದ ಪರಿಚ್ಛಿನ್ನವಾಗಿದೆ. ಅದರಿಂದ ನೀನು **ಪೂರ್ಣನು.** ಆನಂದಮಯಕೋಶವು ನಿದ್ರಾವಸ್ಥೆಯಲ್ಲಿ, ತೋರಿ ಅಡಗುವದರಿಂದ ಅನಿತ್ಯವಾಗಿದೆ. ಅದಕ್ಕೆ ವಿಲಕ್ಷಣನು ನೀನಾದ್ದರಿಂದ **ನಿತ್ಯನಾಗಿರುವಿ.**

**ಅಥವಾ:-** ಇರುವದರಿಂದ ಸದ್ರೂಪನು. ಸದ್ರೂಪನಾದ್ದರಿಂದ ಚಿದ್ರೂಪನು ಚಿತ್ತ ಆದ್ದರಿಂದ ಆನಂದನು. ಆನಂದನಾದ್ದರಿಂದ ನಿತ್ಯನು. ನಿತ್ಯನಾದ್ದರಿಂದ

ಪೂರ್ಣನು ಆಗಿರುವಿ. ಅರ್ಥಾತ್ ಉಷ್ಣ ಪ್ರಕಾಶ, ದಾಹಕ ಸ್ವರೂಪನು ಸೂರ್ಯ ನಿದ್ದಂತೆ; ಮಧುರ, ದ್ರವ, ಶುಭ್ರಾದಿಗಳ ಸ್ವರೂಪು ಹಾಲು ಇರುವಂತೆ, ನೀನು ಸಚ್ಚಿದಾನಂದಸ್ವರೂಪನಾಗಿರುವಿ. ಈ ಕಾರಣದಿಂದ ನಿನ್ನಲ್ಲಿ ಅಜ್ಞಾನ ವೆನ್ನುವದು ಇಲ್ಲವೆಂದು ತಿಳಿ ಎಂಬ ಭಾವವು. ಇದನ್ನು ನಿನಗೆ ಶ್ರುತ್ಯನುಭವ ಗಳಿಂದ ಹೇಳಿದ್ದೇನೆ. ಅದರಿಂದ ನಿಜವೆಂದು ತಿಳಿ.

**ಶಂಕಾ:-** ಇದೇಐದನೆಯ ಸಂಧಿಯ ಆರಂಭದಲ್ಲಿ, ಸುಷ್ಟಿಯ ವಿಚಾರವನ್ನು ಹೇಳುವಾಗ್ಯೆ; ನಿದ್ರೆಯಲ್ಲಿ ಅವಿದ್ಯೆಯಿರುತ್ತದೆ.ಅದರಲ್ಲಿ ಆತ್ಮನ ಪ್ರತಿಬಿಂಬಾನಂದವು ತೋರುತ್ತದೆ. ಅವಿದ್ಯೆಯು ಕರಣಕರ್ಮಾತ್ಮಕವಾಗಿದೆ. ನಿದ್ರೆಯಲ್ಲಿದ್ದ ಅವಿದ್ಯೆಯೇ ಜಾಗ್ರದಲ್ಲಿ ಮನೋಕರಣವಾಗಿದೆ. ಎಂದು ಅವಿದ್ಯೆಯು ಉಂಟು ಎಂಬದಾಗಿ ಹೇಳಿದಿರಿ.ಕಡೆಯಲ್ಲಿ ಈಗ ಅವಿದ್ಯೆಯಿಲ್ಲೆಂದು ಹೇಳುತ್ತಿದ್ದೀರಿ. ಹೀಗೆ ಹೇಳುವದರಿಂದ ಪೂರ್ವೋತ್ತರ ವಾಕ್ಯಗಳು ವಿರೋಧಗಳಾಗುತ್ತವೆ. ಆದ್ದರಿಂದ ನಿದ್ರೆಯಲ್ಲಿ ಅವಿದ್ಯೆ ಅದೆ. ಇಲ್ಲ. ಎಂದು ತಿಳಿಯುವದು ಸರಿಯಾಗಿತೋರುವದಿಲ್ಲ. ಹೀಗೆ ತಾವು ಹೇಳುವದು ಸಂಶಯಕ್ಕೆ ಕಾರಣವಾಗಿದೆ. ನಮಗೆ ಇದರಲ್ಲಿ ಯಾವ ದಾದರೂ ಒಂದನ್ನು ಹೇಳಿರಿ ಎಂದು ಕೇಳುತ್ತಾನೆ.

**ಸಮಾಧಾನ:-** ನಿದ್ರೆಯಲ್ಲಿ ಅವಿದ್ಯೆಯು ಅದೆ. ಇಲ್ಲ. ಎಂದುನಾವು ಹೇಳಿದ್ದು ಸರಿಯಾಗಿರುತ್ತದೆ. ಹೇಗಂದರೆ, ನಿದ್ರೆಯಲ್ಲಿ ತೋರುವ ವ್ಯವಹಾರರೂಪ ಕಾರ್ಯದೃಷ್ಟಿಯಿಂದ ಕಾರಣವಾದ ಅವಿದ್ಯೆಯು ಉಂಟೆಂದು ಹೇಳಿದೆವು. ನಿನ್ನ ಸಚ್ಚಿದಾನಂದಸ್ವರೂಪ ಆತ್ಮದೃಷ್ಟಿಯಿಂದ ಅವಿದ್ಯೆಯು ಇಲ್ಲೆಂದು ಹೇಳಿದೆವು. ಅದರಿಂದ ಪೂರ್ವೋತ್ತರ ವಾಕ್ಯಗಳಿಗೆ ವಿರೋಧವಾಗುವದಿಲ್ಲ. ಹೀಗೆ ನಿದ್ರೆಯಲ್ಲಿ ಅವಿದ್ಯೆ ಅದೆ ಇಲ್ಲೆಂಬ ಬಗ್ಗೆ ಶ್ರುತಿಗಳೂ ಉಂಟು. ಆ ವಿರೋಧ ಶ್ರುತಿಗಳಿಗೂ ಇದೇ ಅರ್ಥವನ್ನು ಮಾಡಬೇಕು. ದೃಶ್ಯದೃಷ್ಟಿಯಿಂದ ಅವಿದ್ಯೆ ಅದೆ. ದೃಗ್ರೂಪ ದೃಷ್ಟಿಯಿಂದ ಇಲ್ಲ. ಹೀಗೆ ತಿಳಿಯಬೇಕು. ಅಂದರೆ ವಿರೋಧವು ಪರಿಹಾರವಾಗು ವದು. ಹೇಗಂದರೆ,ಜ್ಞಾನಿಗೆ ಪ್ರಾರಬ್ಧ ಉಂಟೆಂದು ಕೆಲವರು, ಇಲ್ಲೆಂದು ಕೆಲವರು ಹೇಳುತ್ತಾರೆ. ಎರಡೂ ಮಾತು ನಿಜವಾಗಿವೆ. ದೇಹದೃಷ್ಟಿಯಿಂದ ಪ್ರಾರಬ್ಧ ಉಂಟು, ಪರಬ್ರಹ್ಮರೂಪ ಅವನ ಸ್ವರೂಪದೃಷ್ಟಿಯಿಂದ ಇಲ್ಲ. ಪ್ರಾರಬ್ಧ ವಿಚಾರ ವಿದ್ದಂತೆ; ಈ ಅವಿದ್ಯೆಯ ವಿಚಾರವು ಉಂಟೆಂದುತಿಳಿ.

**ಬಳಿಕ,** ಪದಾದಿಗಳ ಸಂಖ್ಯೆಯನ್ನು ಹೇಳುತ್ತಾ ಸಂಧಿಯನ್ನು ಉಪಸಂಹರಿ ಸುತ್ತಾರೆ.

**ಇದು ಸಂಧಿಯೈದನೆಯದಿದರೊಳೈದೆಳೆ ಲಲಿತ |**
**ಪದನೆಯ್ವತ್ತು ಮಗುಳೆಂಟು ನೋಡಲಿದು |**
**ಚಿದಚಿದ್ವಿವೇಕ ವೆನಿಸುವದು ॥ ೧೯ ॥**

**ಟೀಕಾ:-** ಇದು ಸಂಧಿಯೈದನೆಯದು=ಇದು ಐದನೇಸಂಧಿಯು, ಇದರಲ್ಲಿ= ಈ ಸಂಧಿಯಲ್ಲಿ ಐದೆಳೆ=ಐದುಸೂತ್ರಗಳು, ಲಲಿತ=ಮನೋಹರಗಳಾದ, ಪದವೆ= ಪದಂಗಳು, ಐವತ್ತು=ಐವತ್ತು ಮಗುಳೆ=ಬಳಿಕ, ಎಂಟು=ಎಂಟು, ನೋಡಲ್= ವಿಚಾರಮಾಡಲು, ಇದು = ಈ ಸಂಧಿಯು, ಚಿತ್ ಅಚಿತ್=ಅರಿಯುವ ಅರಿಸಿ ಕೊಳ್ಳುವ, ಇವೆರಡರ? ವಿವೇಕವೆನಿಸವದು=ವಿಚಾರವೆನಿಸುವದು.

**ತಾತ್ಪರ್ಯ:-** ಇದು ಐದನೇಸಂಧಿಯು ಇದರಲ್ಲಿ ಸೂತ್ರಗಳು ಐದು, ಅವುಗಳಲ್ಲಿ ಐವತ್ತೆಂಟು ಪದ್ಯಗಳು, ಇವುಗಳಿಂದ ಕೂಡಿದ್ದು ಈ ಐದನೇ ಸಂಧಿಯು ಇದು, ಚಿದಚಿದ್ವಿವೇಕವನ್ನು ಹೇಳಿರುತ್ತದೆ.

**ಅನುಭೂತದರ್ಥಸ್ಮರಣ ನಿರೂಪಣೆ ಸೂತ್ರ ೫ ಕ್ಕೆ ತ್ರಿವಿದಿ ೫೮ ಕ್ಕಂ**
**ಅಂತು ಸಂಧಿ ೫ ಕ್ಕಂ ಸೂತ್ರ ೩೦ ಕ್ಕಂ ತ್ರಿವಿದಿ ೩೪೮ ಕ್ಕಂ**

ಮಂಗಳಮಸ್ತು



ಶ್ರೀ ಶಂಭುಲಿಂಗಾಯನಮಃ

# ಅನುಭವಸಾರ

## ಆರನೆಯ ಸಂಧಿ

ಬಳಿಕ, ಐದನೆಯ ಸಂಧಿಯಲ್ಲಿ ಮುಖ್ಯವಾಗಿ ಹೇಳಿದ್ದೇನಂದರೆ, ನಿದ್ರೆಯಲ್ಲಿ ಅಹಂಕಾರವು ಲಯವಾಗಲು, ಅದರ ಇಲ್ಲದಿರುವಿಕೆಯನ್ನು ಅರಿಯುವದು ಸಂಭವಿಸುವದಿಲ್ಲ. ಯಾಕಂದರೆ, ಅಲ್ಲಿ ಅರುವಿಲ್ಲ. ಎಂಬದಾಗಿ ಶಂಕೆಯನ್ನು ಮಾಡಲು, ಅದಕ್ಕೆ ಶ್ರುತಿ, ಯುಕ್ತಿ, ದೃಷ್ಟಾಂತ, ಅನುಭವಗಳಿಂದ ನಿದ್ರೆಯಲ್ಲಿ ಆತ್ಮನು ಅರಿಯುತ್ತಿರುವನು. ಎಂಬುದನ್ನು ನಿರೂಪಣಮಾಡಿದರು. ಮತ್ತು ಅವಸ್ಥಾತ್ರಯ ಪಂಚಕೋಶ ವಿಲಕ್ಷಣಸಾಕ್ಷಿಯಾಗಿರುವದರಿಂದ ನಿನ್ನ ಸ್ವರೂಪದಲ್ಲಿ ಮರವೆಯು ಇಲ್ಲೆಂದು ಹೇಳಲ್ಪಟ್ಟಿತು. ಇದನ್ನು ಕೇಳಿದ ಶಿಷ್ಯನಿಗೆ ಒಂದು ಸಂಶಯವು ಬರುತ್ತದೆ. ಏನಂದರೆ—

**ಶಿಷ್ಯ**–" ಐದನೆಯ ಸಂಧಿಯಲ್ಲಿ ಮರವೆಯು ಉಂಟು. ಎಂದು ಹೇಳಿದಿರಿ. ಕಾರ್ಯವಾದ ಅಹಂಕಾರವು ಕಾರಣವಾದ ಅವಿದ್ಯೆಯಲ್ಲಿ ಅಡಗಿದೆಯೆಂದು ಹೇಳಲ್ಪಟ್ಟಿತು. ಮತ್ತು ನಿದ್ರೆಯಲ್ಲಿ ಅವಿದ್ಯಾವೃತ್ತಿಗಳಲ್ಲಿ ಆನಂದವು ತೋರುತ್ತದೆಂದು ಆ ಅವಿದ್ಯೆಯು ಅರಿಯುವದಕ್ಕೆ ಆತ್ಮನಿಗೆ ಕರಣವಾಗಿದೆಯೆಂದೂ, ಮತ್ತು ಅರಿಸಿಕೊಳ್ಳುವದರಿಂದ ಕರ್ಮರೂಪವಾಗಿದೆಯೆಂದೂ, ಬಹುಸ್ಥಳಗಳಲ್ಲಿ ಮರವೆಯ ಸದ್ಭಾವವನ್ನು ಹೇಳುತ್ತಾ ಬಂದು; ಕಡೆಯಲ್ಲಿ ಮರವೆಯಿಲ್ಲ ಎಂದು ಹೇಳುದಿರಿ. ಒಂದೇ ನಿದ್ರೆಯಲ್ಲಿ ಮರವೆ ಉಂಟೆಂದು ಇಲ್ಲೆಂದು ಹೇಳುವದು ಸಮೀಚೀನವಲ್ಲವೆಂದು ತೋರುತ್ತದೆ; ಎಂದು ಹೀಗೆ ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

**ಗುರು**:- "ನಿದ್ರೆಯಲ್ಲಿ ಮರವೆ ಉಂಟಿಲ್ಲವೆಂದು ಹೇಳಿದ್ದು ವಿರುದ್ಧವಲ್ಲ. ಕಿಂತು ಯೋಗ್ಯವೇ ಇರುತ್ತದೆ. ಯಾಕಂದರೆ, ದೃಷ್ಟಿ ಭೇದದಿಂದ ಉಂಟು, ಇಲ್ಲ,

ಎಂಬ ಎರಡೂ ಮಾತುಗಳು ಸಂಭವಿಸುತ್ತವೆ. ಹೇಗೆಂದರೆ? ಕೇಳು. ಕಾರ್ಯವಾದ ಅಹಂಕಾರದ ಲಯವನ್ನು ನೋಡಿ ಕಾರಣವಾದ ಅವಿದ್ಯೆಯು ಉಂಟೆಂದು ಹೇಳಲ್ಪಟ್ಟಿತು. ಸಚ್ಚಿದಾನಂದ ಸ್ವರೂಪವಾದ ನಿನ್ನ ದೃಷ್ಟಿಯಿಂದ ನೋಡಿದರೆ, ನಿನ್ನಲ್ಲಿ ಮರವೆಯು ಇಲ್ಲೆಂದು ಹೇಳಲ್ಪಟ್ಟಿತು. ಕೇವಲ ಸತ್ತು ಚಿತ್ತಾನಂದ ಸ್ವರೂಪನಾದ ನಿನ್ನಲ್ಲಿ ಮರವೆಯಿಲ್ಲೆಂದು ತಿಳಿ ಎಂದು ಹೇಳಿದರು.

ಈ ಮಾತನ್ನು ಕೇಳಿ ಶಿಷ್ಯನು- 'ಮರವೆಯಿಲ್ಲೆಂದೊರೆದ ಪರಿಯಾವುದು' ನಿನ್ನಲ್ಲಿ ಮರವೆಯಿಲ್ಲೆಂದು ತಾವು ಹೇಳುವ ಮಾತನ್ನು ಕೇಳಿ ನನಗೆ ಆಶ್ಚರ್ಯವೆನಿಸುತ್ತದೆ. ಯಾಕಂದರೆ, ನನ್ನಲ್ಲಿ ಮರವೆಯು ಇಲ್ಲದಿದ್ದರೆ, ನಿಮ್ಮನ್ನು ಕುರಿತು ನಾನು ಶರಣಾಗತನು ಆಗುತ್ತಿರಲಿಲ್ಲ. ಜನನಾದಿ ಭೀತಿಯಿಂದ ಶರಣಾಗತನಾಗಿರುವೆನು. ಜನನ ಮರಣರೂಪ ಸಂಸಾರವು ಮರವೆಯಿಂದಲೇ ಬಂದಿದೆ. ಆ ಮರವೆಯು ತಮ್ಮ ಉಪದೇಶದಿಂದ ನಿವೃತ್ತಿಯಾಗಲು ನಾನು ಸುಖಿಯಾಗುತ್ತೇನೆ. ಎಂದು ತಿಳಿದುಕೊಂಡು ತಮ್ಮಗಳ ಪಾದಸನ್ನಿಧಿಗೆ ಶರಣು ಬಂದಿರುವೆನು. ಅಂದ ಮೇಲೆ; ಮರವೆಯಿಲ್ಲೆಂಬುದು ಹೇಗೆ? ಮರವೆಯು ಅಹಂಕಾರಕ್ಕೆ ಉಂಟು, ನಿನಗಿಲ್ಲೆಂದು ಹೇಳಿದರೆ, ತಾವು ಮುಕ್ತಿಯಾದರೂ ಅಹಂಕಾರಕ್ಕೆ ಆಗುತ್ತದೆಂದು ಹೇಳಬೇಕಾಗುತ್ತದೆ. ಆಗಬಹುದು. ಅಂದರೆ, ಅದಕ್ಕೆ ಸತ್ಯತ್ವವನ್ನು ಒಪ್ಪಬೇಕಾಗುತ್ತದೆ. ಅಹಂಕಾರವು ಸತ್ಯವಾಗಿದೆಯೆಂದು ಹೇಳಿದರೆ, ದೃಶ್ಯವಾಗಿ ಅರಿಸಿಕೊಳ್ಳುವದು ಸತ್ಯವಲ್ಲ ಎಂದು ಪೂರ್ವದಲ್ಲಿ ಹೇಳಿರುವಿರಿ. ಅದರಿಂದ ಅಹಂಕಾರವು ಸತ್ಯವೆಂದು ಹೇಳಲಿಕ್ಕೆ ಬರುವದಿಲ್ಲ. ಮರವೆಯು ಸಂಸಾರವು ಅಹಂಕಾರಕ್ಕೆ ಇರುತ್ತದೆ. ನಿನಗೆ ಮಾತ್ರ ಮುಕ್ತಿಯು ಆಗುತ್ತದೆಂದು ಹೇಳಿದರೆ, ಅಪರಾಧಮಾಡಿದವನೊಬ್ಬನು ಶಿಕ್ಷೆಯನ್ನು ಅನುಭವಮಾಡುವವನೊಬ್ಬನೆಂಬಂತೆ ಆಗುವದು. ಆದ್ದರಿಂದ ಮರವೆಯು ಯಾರಿಗುಂಟು? ಎಂಬುದನ್ನು ನನಗೆ ನಿಶ್ಚಯವಾಗಿ ಪ್ರಮಾಣಪೂರ್ವಕ ಹೇಳಬೇಕೆಂದು ಪ್ರಶ್ನೆಯನ್ನು ಮಾಡುತ್ತಾನೆ.

**ಸೂತ್ರ ॥ ಗುರುವರ್ಯ ನೀವೆನೆಗೆ ಮರವೆಯಿಲ್ಲೆಂದೊರೆದ ।**
**ಪರಿಯಾವುದದನೆ ಕರುಣಿಸಬೇಹುದು ॥**

**ಟೀಕಾ:-** ಗುರುವರ್ಯ=ಗುರೂತ್ತಮನೇ! ನೀವು=ತಾವು, ಎನಗೆ=ನನಗೆ, ಮರವೆಯಿಲ್ಲೆಂದು=ಅಜ್ಞಾನವಿಲ್ಲೆಂದು, ಒರೆದ=ಹೇಳಿದ, ಪರಿಯಾವುದು=ರೀತಿ ಯಾವುದು, ಇದನೆ=ಈ ವಿಷಯವನ್ನೇ ಕರುಣಿಸಬೇಹುದು=ತಿಳಿಸಬೇಕು.

**ತಾತ್ಪರ್ಯ:-**ಪಂಚಕೋಶ ವಿಲಕ್ಷಣ ಸಾಕ್ಷಿಯಾದ ಸಚ್ಚಿದಾನಂದ ಸ್ವರೂಪವಾದ ನಿನ್ನಲ್ಲಿ ಮರವೆಯಿಲ್ಲೆಂದು ಪೂರ್ವದಲ್ಲಿ ಹೇಳಿದಿರಿ. ಆದರೆ, ಮರವೆಯೇ ಇಲ್ಲ

ದಿದ್ದರೆ ಜನನ ಮರಣಾತ್ಮಕ ಸಂಸಾರ ದುಃಖವು ಇರಬಾರದಾಗಿತ್ತು. ಇದು ಇರುವದರಿಂದ ಮರವೆಯೂ ಇರುತ್ತದೆಂದು ತಿಳಿಯಬೇಕಾಗುತ್ತದೆ. ಆ ಮರವೆ ನನ್ನಲ್ಲಿ ಇಲ್ಲದಿದ್ದರೂ ಬೇರೆಲ್ಲ್ಯಾದರೂ ಇರಲಿಕ್ಕೆಬೇಕು. ಹಾಗಿದ್ದರೆ, ಜನನಾದಿ ದುಃಖವು ನನಗೆ ತೋರದೆ ಬೇರೆಯುವರಿಗೆ ತೋರಬೇಕಾಗಿತ್ತು. ಹಾಗಿಲ್ಲದೆ ನನಗೆ ತೋರುತ್ತದೆ. ಆದರಿಂದ ಮರವೆಯಿಲ್ಲೆಂದು ಹೇಗೆ ಹೇಳುತ್ತೀರಿ ? ಎಂದು ಶಿಷ್ಯನು ಇಲ್ಲಿ ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

ಬಳಿಕ, ಈ ಸಂಧಿಯಲ್ಲಿರುವ ಅಧ್ಯಾಸ ವಿಷಯವು ಮುಖ್ಯವಾಗಿದೆ. ಉಪಾಧಿ ಮತ್ತು ಉಪಾಧಿಧರ್ಮ ಇವುಗಳ ಮೂಲಕ ಅಸಂಸಾರಿಯಾದ; ಪರಿಪೂರ್ಣಾತ್ಮನಿಗೆ ಸಂಸಾರಿಕ ಪರಿಚ್ಛಿನ್ನ ಭಾವನೆ ಬಂದಿರುತ್ತದೆ. ಶ್ರೀಗುರು ಸಚ್ಛಾಸ್ತ್ರಗಳಿಂದ ಅಧ್ಯಾಸವು ನಿವೃತ್ತಿಯಾಗಲು; ತಾನು ಮಾತ್ರ ಪರಿಪೂರ್ಣಪರಮಾತ್ಮನೇ ಇರುವನೆಂದು ನಿರೂಪಣಮಾಡತಕ್ಕವರಿದ್ದಾರೆ. ಆದ್ದರಿಂದ ಈ ಸಂಧಿಯಲ್ಲಿ ಹೇಳುವ ಅರ್ಥವನ್ನು ಸ್ಮರಿಸಿಕೊಂಡು ಅದರಿಂದ ಶ್ರೀ ಶಂಭುಲಿಂಗನನ್ನು ಕುರಿತು ನಮಸ್ಕಾರರೂಪ ಮಂಗಲವನ್ನು ಮಾಡುತ್ತಾರೆ.

**ಪರಿಪೂರ್ಣ ಬೋಧಂಗೆ ಪರತರಾನಂದಂಗೆ ।**
**ಪರಮಂಗೆ ಪಾವನಾತ್ಮಂಗೆ ಪಾರ್ವತೀ।**
**ವರಶಂಭುವಿಂಗೆ ನತನಪ್ಪೆ ॥೧॥**

**ಟೀಕಾ:-** ಪರಿಪೂರ್ಣ = ದೇಶ, ಕಾಲ, ವಸ್ತು ಪರಿಚ್ಛೇದರಹಿತವಾದ, ಬೋಧಂಗೆ=ಸ್ವಯಂಪ್ರಕಾಶ ಜ್ಞಾನಸ್ವರೂಪನಾದ, ಪರತರ = ಅತ್ಯಧಿಕವಾದ, ಆನಂದಂಗೆ=ನಿರತಿಶಯ ನಿರುಪಾಧಿಕ ಆನಂದರೂಪನಿಗೆ, ಪರಮಂಗೆ=ಪರಮಾತ್ಮನಿಗೆ, ಪಾವನಾತ್ಮಂಗೆ= ಪವಿತ್ರಸ್ವರೂಪನಾದ, ಪಾರ್ವತೀವರ=ಪರ್ವತರಾಜನ ಪುತ್ರಿಯಾದ ಪಾರ್ವತಿಗೆ ಪತಿಯಾದ, ಶಂಭುವಿಂಗೆ = ಸಕಲರಿಗೂ ಸುಖವನ್ನು ಕೊಡುವ ಶಂಭುಲಿಂಗನಿಗೆ, ನತನಪ್ಪೆ=ನಮಸ್ಕಾರವನ್ನು ಮಾಡುತ್ತೇನೆ.

**ತಾತ್ಪರ್ಯ:-** ಗ್ರಂಥಕರ್ತರಾದ ಶ್ರೀಮನ್ನಿಜಗುಣ ಶಿವಯೋಗಿಗಳು, ಸಂಧಿ ಆರಂಭದಲ್ಲಿ ಇಷ್ಟದೇವತೆಯೂದ ಶ್ರೀ ಶಂಭುಲಿಂಗನನ್ನು, ಈ ಸಂಧಿಯ ಅರ್ಥದಿಂದ ಸ್ತುತಿಸುತ್ತಾ ನಮಸ್ಕಾರರೂಪ ಮಂಗಲವನ್ನು ಮಾಡುತ್ತಾರೆ. ಹೇ ಪಾರ್ವತೀ ಪತಿಯಾದ ಶಂಭುವೇ! ನೀನು ಆಕಾಶದಂತೆ ದೇಶ, ಕಾಲ, ವಸ್ತು ಪರಿಚ್ಛಿನ್ನರಹಿತ ಪರಿಪೂರ್ಣನಾಗಿರುವಿ. ಸೂರ್ಯನಂತೆ ಸರ್ವತ್ರ ಪ್ರಕಾಶಮಾನ ಜ್ಞಾನರೂಪನಾಗಿರುವಿ. ಈ ಕಾರಣದಿಂದಲೇ ಸರ್ವೋತ್ಕೃಷ್ಟವಾದ ಆನಂದ ಘನನಾಗಿರುವಿ. ಪರಿಪೂರ್ಣ ಬೋಧಾನಂದ ಸ್ವರೂಪನಾದ ನಿನಗೆ ನಮಸ್ಕಾರ

ವನ್ನು ಮಾಡುತ್ತೇನೆ. ಅಂದರೆ, ಅಧ್ಯಾಸ ಮೂಲಕ ನಾನು ನಿನ್ನ ಸ್ವರೂಪಕ್ಕೆ ವಿಲಕ್ಷಣನಾಗಿ ಪರಿಚ್ಛಿನ್ನನು, ಅಜ್ಞಾನಿಯು, ದುಃಖಿಯು ಆಗಿ ತೋರುತ್ತೇನೆ. ಆದರೆ, ನಿನ್ನ ಅನುಗ್ರಹದಿಂದಲೂ, ಗುರು ಶಾಸ್ತ್ರಜನ್ಯ ಬೋಧದಿಂದಲೂ, ಅಧ್ಯಾಸರೂಪ ಸಂಸಾರ ಭಾವನೆಯು ನಿವೃತ್ತಿಯಾಗಲು, ನಿನ್ನ ಪರಿಪೂರ್ಣ ಸ್ವರೂಪವೇ ನಾನಿರುತ್ತೇನೆ. ಎಂದು ನಿಶ್ಚಯಮಾಡುವದೇ ಇಲ್ಲಿ ನಮಸ್ಕಾರ ವಾಗಿದೆ. ಭೇದವಳಿದು ಅಭೇದದಿಂದಿರುವದೇ ನಮನವೆಂಬ ಭಾವವು.

ಬಳಿಕ, ಶಿಷ್ಯನು ಶ್ರೀಗುರುವಿನನ್ನು ಸ್ತುತಿಸಿ, ಗುರುವಿನ ಚಿತ್ತವನ್ನು ಪ್ರಸನ್ನೀಕರಿಸಿ, ಮುಂದೆ ಹೇಳುವ ಪ್ರಕಾರ ಪ್ರಶ್ನೆಯನ್ನು ಮಾಡುತ್ತಾನೆ.

**ಹರಿ ಪಿತಾಮಹ ರುದ್ರ ವರಸದಾಶಿವ ಮಹೇ।**
**ಶ್ವರ ಮುಖ್ಯರಾವನೊಡಲೊಳಿರುತಿರ್ಪರಾ।**
**ಗುರುವೆ ಬಿನ್ನಪವ ನವಧರಿಸು ॥ ೨ ॥**

**ಟೀಕಾ**:-ಪಿತಾಮಹ=ಬ್ರಹ್ಮ, ಹರಿ=ವಿಷ್ಣು, ರುದ್ರ=ರುದ್ರನು, ಮಹೇಶ್ವರ= ಈಶ್ವರನು, ವರ=ಶ್ರೇಷ್ಠನಾದ, ಸದಾಶಿವ=ಸದಾಶಿವನು, ಮುಖ್ಯರು = ಇವರೇ ಮೊದಲಾದವರು, ಆವನ=ಯಾವಾತನ, ಒಡಲೊಳು=ದೇಹದಲ್ಲಿ, ಇರುತಿರ್ಪರು= ಇರುವರು. ಆ ಗುರುವೆ=ಅಂಥಾ ಪೂರ್ಣಸ್ವರೂಪನಾದ ಗುರುದೇವನೇ!, ಬಿನ್ನಪ ವನು=ನನ್ನ ಪ್ರಶ್ನೆಯನ್ನು, ಅವಧರಿಸು=ಕೇಳಿರಿ.

**ತಾತ್ಪರ್ಯ**:-ಹೇ ಗುರುದೇವ! ತಾವು ನಿರತಿಶಯ ಪರಿಪೂರ್ಣ ನಿರಪಾಧಿಕ ಅಖಂಡ ಸ್ವರೂಪರು ಆಗಿರುವಿರಿ. ಅದರಿಂದ ಪೃಥಿವ್ಯಾದಿ ಪಂಚಭೂತಗಳಿಗೆ ಕ್ರಮ ವಾಗಿ ಅಭಿಮಾನಿಗಳಾದ ಬ್ರಹ್ಮಾದಿ ದೇವತೆಗಳು ಸೋಪಾಧಿಕರು ಆಗಿರುತ್ತಾರೆ. ನೀನು ನಿರುಪಾಧಿಕನಿರುವಿ. ಅದರಿಂದ ಬ್ರಹ್ಮ, ವಿಷ್ಣು, ರುದ್ರಾದಿದೇವತೆಗಳು ನಿನ್ನ ಪೂರ್ಣಸ್ವರೂಪದಲ್ಲಿ ಅಂತರ್ಭಾವರಾಗಿರುತ್ತಾರೆ. ಅಂದರೆ, ಪಂಚಭೂತ ಭೌತಿಕ ಪ್ರಪಂಚವು ಇದಕ್ಕೆ ಅಭಿಮಾನಿಗಳಾದ ದೇವತೆಗಳು ಎಲ್ಲರೂ ನಿನ್ನಲ್ಲಿಯೇ ಇರುತ್ತಾರೆಂಬ ಭಾವವು. ಆದ್ದರಿಂದಲೇ ವಿಚಾರಸಾಗರಕಾರರು ತಮ್ಮ ಗ್ರಂಥದಲ್ಲಿ, **ಅಬ್ಧಿ ಅಪಾರ ಸ್ವರೂಪ ಮಮ ಲಹರೀ ವಿಷ್ಣು ಮಹೇಶ**, ಎಂಬದಾಗಿ ಹೇಳಿದ್ದಾರೆ. ಅಂದರೆ ಸಮುದ್ರರೂಪ ತನ್ನಲ್ಲಿ ಶಿವ ವಿಷ್ಣು ಮೊದಲಾದ ದೇವತೆ ಗಳು ತೆರೆಗಳಾಗಿರುತ್ತಾರೆಂದು ಹೇಳಿದ್ದಾರೆ. ಅದರಿಂದ ನಿರುಪಾಧಿಕ ಪೂರ್ಣ ಸ್ವರೂಪನಾದ ಗುರುದೇವನೇ! ನೀನು ನನ್ನ ಪ್ರಶ್ನೆಯನ್ನು ಏಕಾಗ್ರದಿಂದ ಕೇಳಿ, ಅದಕ್ಕೆ ಸರಿಯಾದ ಉತ್ತರವನ್ನು ಕೊಡಬೇಕೆಂದು ಬೇಡಿಕೊಳ್ಳುತ್ತಲಿದ್ದಾನೆ.

ಬಳಿಕ, ಹೇ ಗುರುವರ್ಯನೇ! ನಿನ್ನಲ್ಲಿ ಮರವೆಯೇ ಇಲ್ಲೆಂದು ಹೇಳಿದಿರಿ. ನನ್ನಲ್ಲಿ ಮರವೆಯಿಲ್ಲದ ಬಳಿಕ ಜನನಮರಣಾದಿ ಭೀತಿಯಿಂದ ನಿನ್ನ ಚರಣ

ಕಮಲಗಳನ್ನು ಕುರಿತು ಶರಣಾಗತರಾದವರು ಯಾರು ? ಎಂದು ಶಿಷ್ಯನು ಪ್ರಶ್ನೆಯನ್ನು ಮಾಡುತ್ತಾನೆ.

**ತನಗೆ ಮರವೆಯು ಕೂಟವಿನಿಸಿಲ್ಲವೆಂದಿರೀ**
**ಜನನಾದಿ ಭೀತಿಯಿಂದ ಕಣ್ಗೆಟ್ಟು ನಿ।**
**ನ್ನನೆ ಸಾರ್ದರಾರು ಕರುಣಿಪುದು**

**ಟೀಕಾ:-** ತನಗೆ=ನನಗೆ, ಮರವೆಯ=ಅಜ್ಞಾನದ, ಕೂಟವು=ಸಂಬಂಧವು, ಇನಿಸಿಲ್ಲವು=ಕಿಂಚಿತ್ತಾದರೂ ಇಲ್ಲ, ಎಂದಿರಿ=ಹೀಗೆ ಹೇಳಿದಿರಿ, ಈ ಜನನಾದಿ= ಈ ಜನನಮರಣಾದಿ, ಭೀತಿಯಿಂದೆ=ಭಯದಿಂದೆ, ಕಣ್ಗೆಟ್ಟು=ದಿಕ್ಕು ತೋಚದೆ, ನಿನ್ನನೆ=ನಿನ್ನನ್ನೇ ಕುರಿತು, ಆರು=ಯಾರು, ಸಾರ್ದರು=ಶರಣಾಗತರಾಗಿರುವರು, ಕರುಣಿಪುದು=ಕೃಪೆಯನ್ನು ಮಾಡು.

**ತಾತ್ಪರ್ಯ:-** ಹೇ ಗುರುದೇವನೇ, ನಿನ್ನ ಸಚ್ಚಿದಾನಂದ ಸ್ವರೂಪದಲ್ಲಿ ಮರವೆಯ ಸಂಬಂಧವು ಕಿಂಚಿತ್ತಾಡರೂ ಇಲ್ಲವೆಂದು ಹೇಳಿದಿರಿ. ಆದರೆ ಈ ಜನನ ಮರಣಾದಿ ಸಂಸಾರವು ನನಗೆ ಯಾಕೆ ಬಂದಿತು ? ಇದು ಅಜ್ಞಾನದಿಂದ ಬಂದಿರುತ್ತದೆ. ತಮ್ಮಿಂದ ಜ್ಞಾನವನ್ನು ಪಡೆದು, ಅಜ್ಞಾನವನ್ನು ನಾಶಮಾಡಿಕೊಂಡು ಮುಕ್ತಿಯನ್ನು ಹೊಂದಬೇಕೆಂಬ ಇಚ್ಛೆಯುಳ್ಳವನಾಗಿ ತಮ್ಮ ಪಾದಕಮಲಗಳ ಸನ್ನಿಧಿಯಲ್ಲಿ ಶರಣು ಬಂದಿರುತ್ತೇನೆ. ಈಕಾರಣದಿಂದ ನಾನು ಅಜ್ಞಾನಿ ದುಃಖಿಯಾಗಿರುತ್ತೇನೆ ಎಂದು ನಾನು ನಿಶ್ಚಯಮಾಡಿದ್ದೇನೆ. ಹೀಗಿರಲು; ತಾವು ನಿನ್ನಲ್ಲಿ ಮರವೆಯೇ ಇಲ್ಲೆಂದು ಹೇಳುತ್ತೀರಿ. ಹಾಗಾದರೆ, ಶರಣಾಗತರು ಯಾರು ಆಗಿರುವರು? ಎಂಬುವದನ್ನು ಹೇಳಿರಿ

**ಬಳಿಕ,** ಮರವೆಯು ಅಹಂಕಾರಕ್ಕೆ ಉಂಟು. ಸಂಸಾರವು ಅದಕ್ಕೆ ಮುಕ್ತಿಯೂ ಅದಕ್ಕೇ ಇರುತ್ತದೆಂದು ಹೇಳಿದರೆ, ಆ ಅಹಂಕಾರಕ್ಕೆ ತಾವು ಸತ್ಯವೆಂದು ಹೇಳಬೇಕಾಗುತ್ತದೆಂದು ಕೇಳುತ್ತಾನೆ.

**ಅಹಮಿಂಗೆ ತಾನೆ ದುಸ್ಸಹ ಸಂಸರಣವೆಂದೊ।**
**ಡಹುದಂತದಕ್ಕೆ ಮುಕ್ತಿಯುದನೊಪ್ಪೆ ನಿಜ।**
**ಮಿಹುದಂಹಕಾರವೆನಬೇಕು** ॥೪॥

**ಟೀಕಾ:-** ಅಹಮಿಂಗೆ ತಾನೆ=ಆ ಅಹಂಕಾರಕ್ಕೇನೆ, ದುಸ್ಸಹ=ಸಹಿಸಲಿಕ್ಕೆ ಬಾರದ, ಸಂಸರಣವು=ಸಂಸಾರವು, ಎಂದೊಡೆ=ಹೀಗೆ ಹೇಳಿದರೆ, ಅಂತದಕ್ಕೆ=ಆ ಅಹಂಕಾರಕ್ಕೇನೆ; ಮುಕ್ತಿಯು=ಮೋಕ್ಷವು, ಅಹುದು=ಆಗುವದು, ಅದನೊಪ್ಪೆ=

ಆಗಬಹುದು ಎಂದು ಅಂಗೀಕರಿಸಿದರೆ, ಅಹಂಕಾರವು=ಅಹಂಕಾರವು, ನಿಜ ಮಿಹುದು=ಸತ್ಯವಾಗಿರುವದೆಂದು, ಎನಬೇಕು=ಹೀಗೆ ಹೇಳಬೇಕಾಗುತ್ತದೆ.

**ತಾತ್ಪರ್ಯ:-** ಮರೆವೆಯು ನಿನಗಿಲ್ಲ. ಅಹಂಕಾರಕ್ಕೆ ಉಂಟು. ಎಂದು ಹೀಗೆ ಹೇಳಿದರೆ, ತಾವು ಅಹಂಕಾರಕ್ಕೆ ಜನನಾದಿ ಬಂಧ ಉಂಟೆಂದು ಹೇಳಬೇಕಾಗುತ್ತದೆ. ಆಗಲಿ. ಅಹಂಕಾರಕ್ಕೆ ಬಂಧವೆಂದು ಏನೂ ದೋಷವಿಲ್ಲ. ಎಂದು ಹೇಳಬಹುದು. ಹೀಗೆ ಹೇಳಿದರೆ, ತಾವು ಮೋಕ್ಷವನ್ನು ಅದಕ್ಕೇ ಹೇಳಬೇಕಾಗುತ್ತದೆ. ಹೀಗೆ ಬಂಧ ಮುಕ್ತಿಗಳೆರಡನ್ನು ಅದಕ್ಕೆ ಹೇಳಿದರೆ,ಆ ಅಹಂಕಾರವು ಯಾವಾಗಲೂ ಇರುವದರಿಂದ ನಿತ್ಯವಾಗಿದೆಯೆಂದುಹೇಳಬೇಕಾಗುತ್ತದೆ, ಅಹಂಕಾರವು ದೃಶ್ಯವಾಗಿ ಅರಿಸಿಕೊಳ್ಳುವದರಿಂದ ಅನಿತ್ಯವಾಗಿದೆ. ಅದಕ್ಕೆ ನಿತ್ಯತ್ವವನ್ನು ಹೇಳುವದು ಸಮೀಚೀನವಲ್ಲವೆಂದು ತೋರುತ್ತದೆ. ಎಂದು ಶಿಷ್ಯನುಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

**ಬಳಿಕ,** ಅಹಂಕಾರಕ್ಕೆ ಸತ್ಯತ್ವವನ್ನು ಹೇಳಿದರೆ, ಮೊದಲು ತಾವು ಅಹಂಕಾರ ಸತ್ಯವಲ್ಲ. ಮಿಥ್ಯೆಯೆಂದು ಹೇಳಿದ್ದೀರಿ, ಆ ಮಾತಿಗೆ ಹಾನಿಯು ಬರುತ್ತದೆ ಎಂದು ಪ್ರಶ್ನೆಯನ್ನು ಮಾಡುತ್ತಾನೆ.

**ಮುನ್ನಮೀ ತೋರಿಕೆಗಳಂ ನಿತ್ಯವಲ್ಲವೆಂ ।**
**ದೆನ್ನೊಳುಸಿರಿದಿರಿ ಯದರಿಂದಹಮು ಸತ್ಯ ।**
**ವೆನ್ನಲುಂ ಬಾರದೆಲೆ ದೇವ ॥೫॥**

**ಟೀಕಾ:-** ಎಲೆದೇವ=ಹೇ ಗುರುವೇ !, ಮುನ್ನವೇ=ಮೊದಲಿಗೆ, ಈ ತೋರಿಕೆಗಳಂ=ತನ್ನಿಂದ ಅರಿಸಿಕೊಂಡ ದೃಶ್ಯಂಗಳು, ನಿತ್ಯವಲ್ಲವೆಂದು=ಸತ್ಯವಾದವುಗಳು ಆಗುವದಿಲ್ಲೆಂದು, ಎನ್ನೊಳು=ನನ್ನಲ್ಲಿ,ಉಸಿರಿದಿರಿ=ಹೇಳಿದಿರಿ, ಅದರಿಂದ= ಈ ಕಾರಣದಿಂದ, ಅಹಮು=ಅಹಂಕಾರವು, ಸತ್ಯವೆನ್ನಲುಂ=ನಿಜವೆಂದು ಹೇಳುವದಕ್ಕೂ, ಬಾರದು=ಬರಲಾರದು.

**ತಾತ್ಪರ್ಯ:-** ಹೇ ಗುರುವೇ ! ತಾವು ಈಗ ಬಂಧ ಮೋಕ್ಷ ಎರಡೂ ಕಾಲಗಳಲ್ಲಿ ಅಹಂಕಾರವು ಇರುವದರಿಂದ ಅದಕ್ಕೆ ಸತ್ಯವೆಂದು ಹೀಗೆ ಹೇಳಿದರೆ, ಪೂರ್ವದಲ್ಲಿ ತಾವು ಹೇಳಿದ ಮಾತಿಗೆ ವಿರೋಧವಾಗುತ್ತದೆ. ಯಾಕಂದರೆ, ಯಾವದು ತನ್ನಿಂದ ದೃಶ್ಯವಾಗಿ ಅರಿಸಿಕೊಳ್ಳುತ್ತದೆಯೋ,ಅದು ನಿಜವಲ್ಲ. ಮಿಥ್ಯೆಯಾಗಿರುತ್ತದೆಂದು ಹೇಳಿದಿರಿ. ಅಹಂಕಾರವು ಭಾವಾಭಾವಗಳಿಂದಲೂ, ಕರ್ತೃತ್ವ ಭೋಕ್ತೃತ್ವಗಳಿಂದಲೂ ತಿಳಿಸಿಕೊಳ್ಳುತ್ತದೆ. ಆದ್ದರಿಂದ ದೃಶ್ಯವಾಗಿದೆ ಎಂದು ಹೇಳಿ, ಈಗ ಅದಕ್ಕೆ ಸತ್ಯತ್ವವನ್ನು ಹೇಳಿದರೆ; ಪೂರ್ವೋತ್ತರ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಅಹಂಕಾರಕ್ಕೆ ಸತ್ಯವೆಂದು ಹೇಳುವದು ಸರಿಯಲ್ಲ.

ಬಳಿಕ, ಅಹಂಕಾರಕ್ಕೆ ಬಂಧವದೆ. ನಿನಗೆ ಮುಕ್ತಿಯಾಗುತ್ತದೆಂದು ಹೇಳ ಬಹುದು. ಅಪರಾಧವಮಾಡಿದವನೊಬ್ಬನು ದಂಡಿಸಲ್ಪಟ್ಟವನು ಮತ್ತೊಬ್ಬನೆಂಬಂತೆ ಹಾಸ್ಯಾಸ್ಪದವಾಗುತ್ತದೆ. ಎಂದು ಶಂಕೆಯನ್ನು ಮಾಡುತ್ತಾನೆ.

**ಅಹಮಿಂಗೆ ಸಂಸಾರವಹುದು ತನಗಾ ಮುಕ್ತಿ ।**
**ಯಹುದೆಂದೊಡಿಲ್ಲಿ ಸೂರೆಯೋರ್ವಂಗೆ ದೂ ।**
**ರಹುದೋರ್ವಂಗೆಂಬ ಪರಿಯುಕ್ಕು ॥೬॥**

**ಟೀಕಾ:-** ಅಹಮಿಂಗೆ=ಅಹಂಕಾರಕ್ಕೆ, ಸಂಸಾರವಹುದು=ಬಂಧವಿರುವದು, ತನಗೆ=ತನಗೆ, ಆಮುಕ್ತಿಯಃಹುದು=ಆಮುಕ್ತಿಯು ಆಗುವದು, ಎಂದೊಡೆ=ಹೀಗೆ ಹೇಳಿದರೆ, ಇಲ್ಲಿ=ಹೀಗೆ ಹೇಳುವಲ್ಲಿ, ಸೂರೆಯೋರ್ವಂಗೆ=ಒಬ್ಬನು ಲೂಟಿಮಾಡಿದ ವನು, ದೂರಹುದು ಓರ್ವಂಗೆ=ಮತ್ತೊಬ್ಬನು ಆ ಲೂಟಿಯು ಆರೋಪಬಂದು ಶಿಕ್ಷೆಗೆ ಪಾತ್ರನಾದನು, ಎಂಬ=ಅನ್ನುವ, ಪರಿಯುಕ್ಕು=ರೀತಿಯಾಗುವದು.

**ತಾತ್ಪರ್ಯ:-** ಅಹಂಕಾರಕ್ಕೆ ಬಂದ ಸತ್ಯತ್ವವನ್ನು ಕಳೆಯುವದಕ್ಕಾಗಿ, ತಾವು ಹೀಗೆ ಹೇಳಬಹುದು. ಏನಂದರೆ, ಅಹಂಕಾರಕ್ಕೆ ಮಾತ್ರ ಬಂಧವು ಬಂದಿರುತ್ತದೆ. ಮುಕ್ತಿಯು ತನಗಾಗುತ್ತದೆಂದು ನಾವು ಹೇಳುತ್ತೇವೆ. ಹೀಗೆ ಹೇಳು ವದರಿಂದ ಅಹಂಕಾರವು ಮುಕ್ತಿಕಾಲದಲ್ಲಿ ಇಲ್ಲವೆಂದ ಹಾಗಾಯಿತು. ಆದರಿಂದ ಅದಕ್ಕೆ ಸತ್ಯತ್ವವು ಸಂಭವಿಸುವದಿಲ್ಲ. ಎಂದು ಹೇಳಬಹುದು. ಹೀಗೆ ಹೇಳಿದರೆ. ವ್ಯಧಿಕರಣದೋಷವು ಬರುತ್ತದೆ. ಯಾಕಂದರೆ, ಯಾವನಿಗೆ ಬಂಧವೋ ಅವನಿಗೇ ಮುಕ್ತಿಯನ್ನು ಹೇಳಬೇಕು. ಇದನ್ನು ಬಿಟ್ಟು ಬಂಧ ಅಹಂಕಾರಕ್ಕೆ ತನಗೆ ಮುಕ್ತಿ ಯೆಂದು ಹೇಳಿದರೆ, ಲೋಕಾನುಭವಕ್ಕೆ ತಮ್ಮ ಮಾತು ವಿರೋಧವಾಗುತ್ತದೆ. ಹೇಗಂದರೆ, ಪೇಟೆಯಲ್ಲಿ ಲೂಟಿಮಾಡಿದವನೊಬ್ಬನು, ಮತ್ತೊಬ್ಬನನ್ನು ಹಿಡಿದು ಶಿಕ್ಷೆಮಾಡಿದರೆಂಬಂತೆ ಆಗುತ್ತದೆ. ಯಾವನು ಲೂಟಿಮಾಡಿದನೋ, ಅವನಿಗೆ ಶಿಕ್ಷೆ ಯೋಗ್ಯವಾಗಿದೆ. ಲೂಟಿಮಾಡಿದವನನ್ನು ಬಿಟ್ಟು ಮಾಡದವನಿಗೆ ಶಿಕ್ಷೆವಿಧಿಸಿದರೆ, ಲೋಕವಿರುದ್ಧವಾಗುತ್ತದೆ. ಇದರಂತೆ ಅಹಂಕಾರಕ್ಕೆ ಬಂಧ ತನಗೆ ಮುಕ್ತಿಯೆಂದು ಹೇಳಿದರೆ, ಶಾಸ್ತ್ರವಿರೋಧವಾಗುತ್ತದೆಂಬ ಭಾವವು.

ಬಳಿಕ, ತಾವು ಈ ನನ್ನ ಸಂಶಯವನ್ನು ಕೇಳಿ, ಸಪ್ರಮಾಣಪೂರ್ವಕ ನಿಶ್ಚಯಾರ್ಥವನ್ನು ಹೇಳಿ, ಈ ಸಂಶಯಃವನ್ನು ದೂರಮಾಡಿರೆಂದು ಗುರುವಿಗೆ ಪ್ರಾರ್ಥನೆ ಮಾಡುತ್ತಾನೆ.

**ಗುರುವೆ ನೀವಿಗಳಂತರಿಸಿಽೀ ಸಂದೇಹ ।**
**ವಿಧವಂತೆ ವೇದ ಶಿರದರ್ಥವಂ ಪೇಳಿ ।**
**ಪೊರೆವುದೆಂದೆರಗಿದನು ಸೂನು ॥೭॥**

ಟೀಕಾ:- ಗುರುವೇ=ಭೋ ಸ್ವಾಮಿನ್, ನೀವು=ತಾವು, ಈಗಳ್=ತಕ್ಷಣವೇ, ಅಂತರಿಸದೆ=ತಡಮಾಡದೆ, ಈ ಸಂದೇಹವಿರದಂತೆ=ಈ ಸಂಶಯವು ಇರದಹಾಗೆ, ವೇದಶಿರದರ್ಥಮಂ=ಉಪನಿಷತ್ತುಗಳ ಅರ್ಥವನ್ನು, ಪೇಳಿ=ಹೇಳಿ, ಪೊರೆವುದೆಂದು= ನನ್ನನ್ನು ರಕ್ಷಿಸಿರಿಯೆಂದು, ಸೂನು=ಶಿಷ್ಯನು, ಎರಗಿದನು=ನಮಸ್ಕಾರವನ್ನು ಮಾಡಿದನು.

ತಾತ್ಪರ್ಯ:- ಹೇ ಸ್ವಾಮಿನ್ ! ತಮಗೆ ತಿಳಿಸಿದ ಈ ಸಂದೇಹವು ನನ್ನನ್ನು ಯಾವಾಗಲೂ ಬಾಧಿಸುತ್ತಿರುತ್ತದೆ. ಕಣ್ಣೊಳಗೆ ಬಿದ್ದ ಕಸವು ಕಣ್ಣಿಗೆ ಬಾಧಿಸುವಂತೆ, ಈ ಸಂದೇಹವು ದುಃಖವನ್ನು ಕೊಡುತ್ತಿರುವದು. ಆದ್ದರಿಂದ ತಾವು ಆಲಸ್ಯ ಮಾಡದೆ ಈ ಸಂಶಯವನ್ನು ಕಳೆಯಿರಿ. ಮತ್ತು ಈ ವಿಷಯಕ್ಕೆ ನನಗೆ ನಿಶ್ಚಯ ಜ್ಞಾನವಾಗುವದಕ್ಕಾಗಿ, ಶ್ರುತಿ ಪ್ರಮಾಣವನ್ನು ಅನುಭವ ಯುಕ್ತಿಗಳನ್ನು ಕೊಟ್ಟು ಬೋಧಿಸಿರಿ. ಎಂದು ಶಿಷ್ಯನು ಶ್ರೀ ಗುರುಗಳ ಪಾದಾರವಿಂದಗಳನ್ನು ಕುರಿತು, ನಮಸ್ಕಾರಮಾಡುವಂಥವನಾದನು.

## ಪ್ರಶ್ನೆ ನಿರೂಪಣೆ ಸೂತ್ರ ೧ಕ್ಕೆ ತ್ರಿವಿಧಿ ೭

ಬಳಿಕ, ಶ್ರೀಗುರುಗಳು ಶಿಷ್ಯನ ಪ್ರಶ್ನೆಯ ಅಭಿಪ್ರಾಯವನ್ನು ತಿಳಿದು, ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುತ್ತಲಿದ್ದಾರೆ.

ಸೂತ್ರ ॥ **ಸೋಪಾಧಿಯಾದ ಸಂಸಾರವಾ ಪರಮ ಚಿ ।**
**ದ್ರೂಪಂಗೆ ಘಟಿಪುದದು ನೈಜವಲ್ಲ ॥**

ಟೀಕಾ:- ಸೋಪಾಧಿಯಾದ=ಉಪಾಧಿಯಿಂದ ಕೂಡಿದ, ಸಂಸಾರವು=ಜನನಾದಿದುಃಖವು, ಆ ಪರಮ ಚಿದ್ರೂಪಂಗೆ=ಪರಮಾತ್ಮಸ್ವರೂಪನಾದ ಸಚ್ಚಿದಾನಂದಾತ್ಮನಿಗೆ, ಘಟಿಪುದು=ಸಂಭವಿಸುವದು, ಅದು=ಆ ಸಂಸಾರವು ನೈಜವಲ್ಲ=ಸತ್ಯವಲ್ಲ.

ತಾತ್ಪರ್ಯ:-ಕರ್ತೃತ್ವ ಭೋಕ್ತೃತ್ವ, ಸುಖ, ದುಃಖಾದಿರೂಪ ಸಂಸಾರವು, ಉಪಾಧಿಗಳಾದ ಅಹಂಕಾರಾದಿಗಳಿಗೇ ಉಂಟು. ದೇಹಾದ್ಯಹಂಕಾರಗಳಿಗೆ ಸಾಕ್ಷಿಯಾದ ಸಚ್ಚಿದಾನಂದಾತ್ಮನಿಗೆ ಇಲ್ಲ. ಹೀಗಿದ್ದರೂ ಆ ದೇಹಾದ್ಯುಪಾಧಿಗಳ ಧರ್ಮಗಳು ಸಾಕ್ಷಿಯಾದ ಆತ್ಮನಲ್ಲಿದ್ದಂತೆ, **ಅಧ್ಯಾಸ** ಮೂಲಕ ತೋರುತ್ತಿರುತ್ತವೆ. ಆದ್ದರಿಂದ ಸಂಸಾರವು ಅಹಂಕಾರಕ್ಕೆ ಸಹಜವಾಗಿದೆ. ಆತ್ಮನಲ್ಲಿ ಆರೋಪವಾಗಿರುತ್ತದೆ. ಆದರಿಂದ ಸಂಸಾರವು ಆತ್ಮನಲ್ಲಿದ್ದಂತೆ ತೋರುವದು ನೈಜವಲ್ಲವೆಂದು ತಿಳಿ. ಹೇಗಂದರೆ; ಶುಭ್ರವಾದ ಸ್ಫಟಿಕವು ಕೆಂಪು ದಾಸವಾಳದ ಹೂವಿನಿಂದ **ಕೆಂಪು**

ಬಣ್ಣವುಳ್ಳದ್ದಾಗಿ ತೋರುತ್ತದೆ. ಅಂದರೆ, ಹೂವಿನಲ್ಲಿರುವ ಕೆಂಪು ಸ್ಫಟಿಕದಲ್ಲಿ ತೋರುವದು. ಸ್ಫಟಿಕಕ್ಕೆ ಕೆಂಪು ಹೂವು ಉಪಾಧಿಯಾಗಿರುತ್ತದೆ. ಉಪಾಧಿಯು ಅಂದರೆ, ಸಮೀಪದಲ್ಲಿದ್ದು ತನ್ನ ಧರ್ಮವನ್ನು ಅನ್ಯದಕ್ಕೆ ಉಂಟುಮಾಡುವದೇ ಉಪಾಧಿಯಾಗಿದೆ. **"ಉಪ ಸಮೀಪೇಸ್ಥಿತ್ವಾ ಸ್ವೀಯಾನ್ ಧರ್ಮಾನ್ ಅನ್ಯತ್ರ ಆದಧಾತೀತಿ ಉಪಾಧಿ"** ಉಪ-ಸಮೀಪದಲ್ಲಿ, ಸ್ಥಿತ್ವಾ-ಇದ್ದುಕೊಂಡು ಸ್ವೀಯಾನ್ ಧರ್ಮಾನ್-ತನ್ನ ಧರ್ಮಗಳನ್ನು ಅನ್ಯತ್ರ-ಅನ್ಯದರಲ್ಲಿ, ಆದಧಾತೀತಿ, ಯಾವುದು ಕೊಡುತ್ತದೆಯೋ, ಅದು ಉಪಾಧಿಯೆಂದು ಹೇಳಲ್ಪಡುವದು. ಈ ರೀತಿ ಅಹಂಕಾರಾದಿ ಅನಾತ್ಮವರ್ಗಗಳ ಧರ್ಮವು, ಆತ್ಮನಲ್ಲಿ ಹೊಳೆದು ತೋರುವದರಿಂದ; ಆತ್ಮನೇ ಸಂಸಾರಿಯೆಂಬಂತೆ ಭಾಸವಾಗುತ್ತದೆ. ವಿಚಾರಮಾಡಿ ನೋಡಿದರೆ, ಅದು ಮಿಥ್ಯೆಯಾಗಿದೆ. ಈ ಆತ್ಮನು ಅಕರ್ತಾ, ಅಭೋಕ್ತಾ, ನಿತ್ಯ ಶುದ್ಧ, ಬುದ್ಧ ಮುಕ್ತನಾಗಿರುತ್ತಾನೆಂದು ತಿಳಿ. ಎಂಬದಾಗಿ ಈ ಸೂತ್ರದಿಂದ ಹೇಳುತ್ತಾರೆ.

**ಬಳಿಕ,** ಗುರುಗಳು ಹೇ ಶಿಷ್ಯನೇ! ನೀನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಡುತ್ತೇನೆ. ಇದು ಅತಿ ರಹಸ್ಯವಾಗಿದೆ. ಈ ಅರ್ಥವನ್ನು ಗ್ರಹಿಸು ಎಂದು ಹೇಳುತ್ತಾರೆ.

**ಕಂದ ಕೇಳೀ ಪ್ರಶ್ನೆಯಂದವೆಲ್ಲವನು ಮುದ।**
**ದಿಂದ ನಾನೊರವೆನಿದು ಗೋಪ್ಯವಾದರ್ಥ।**
**ವೆಂದು ನೀನನುಭವಿಸುವಂತೆ ॥೧॥**

**ಟೀಕಾ:-** ಕಂದ ಕೇಳ್ = ಹೇ ಅಜ್ಞನಾದ ಶಿಷ್ಯನೇ ಕೇಳು, ಈ ಪ್ರಶ್ನೆಯ ಅಂದವೆಲ್ಲವನು=ಈ ನಿನ್ನ ಪ್ರಶ್ನೆಯ ಸ್ವರೂಪವನ್ನು, ಮುದದಿಂದೆ=ಪ್ರೀತಿಯಿಂದೆ, ಇದು ಗೌಪ್ಯವಾದರ್ಥವೆಂದು=ಈ ಅರ್ಥವು ವೇದದಲ್ಲಿ ಗುಪ್ತವಾದದ್ದೆಂದೂ, ನೀನು ಅನುಭವಿಸುವಂತೆ=ನೀನು ಚನ್ನಾಗಿ ತಿಳಿಯುವ ಹಾಗೆ, ನಾನು ಒರೆವೆನು=ನಾನು ಹೇಳುತ್ತೇನೆ ಕೇಳು.

**ತಾತ್ಪರ್ಯ:-** ಹೇ ಶಿಷ್ಯನೇ! ನಿನ್ನ ಪ್ರಶ್ನೆಯ ಅಭಿಪ್ರಾಯವು ನನಗೆ ಆಗಿರುತ್ತದೆ. ಇದಕ್ಕೆ ಉತ್ತರವನ್ನು ಹೇಳುತ್ತೇನೆ. ನೀನು ಏಕಾಗ್ರಚಿತ್ತದಿಂದ ಆಲಿಸು. ಈ ಅರ್ಥವು ವೇದದಲ್ಲಿ ಎಷ್ಟು ಹುಡುಕಿದರೂ ದೊರೆಯಲಾರದು. ಅತಿ ಗೂಢವಾಗಿದೆ. ಇದನ್ನು ಕೇಳಿ, ತಿಳಿದು, ಸುಖಿಯಾಗು ಎಂದು ಹೇಳುತ್ತಾರೆ.

**ಬಳಿಕ,** ಉಪಾಧಿ ವಶದಿಂದ ಸಂಸಾರವು ತೋರುತ್ತದೆ. ಉಪಾಧಿಯಾದ ಅಹಂಕಾರಕ್ಕೆ ಬಂಧವು ಸಹಜ. ಆತ್ಮನಲ್ಲಿ ಮಿಥ್ಯೆಯಾಗಿರುತ್ತದೆ.

**ಅಹಮಿಂಗೆ ಸಂಸಾರವಹುದು ತಪ್ಪದು ನೋಡ ।**
**ಲಹಮು ವಿಡಿದಾತ್ಮನೊಳಗೆ ತತ್ಸಂಸಾರ ।**
**ವಿಹುದಿಂತುಪಾಧಿ ವಶದಿಂದ ॥೨॥**

**ಟೀಕಾ:-** ಅಹಮಿಂಗೆ=ಅಹಂಕಾರಕ್ಕೆ, ಸಂಸಾರವಹುದು=ಕರ್ತೃತ್ವಾದಿರೂಪ ಸಂಸಾರವು ಇರುವದು, ತಪ್ಪದು=ಬಿಡದು, ನೋಡಲ್=ವಿಚಾರ ಮಾಡಲು, ಇಂತು=ಈ ಪ್ರಕಾರ, ಉಪಾಧಿವಶದಿಂದ=ಅಹಂಕಾರೋಪಾಧಿಯ ಮೂಲಕ, ಅಹಮುವಿಡಿದ=ಅಹಂಕಾರವನ್ನು ಗ್ರಹಣಮಾಡಿದ, ಆತ್ಮನೊಳಗೆ=ಆತ್ಮನಲ್ಲಿ, ತತ್ ಸಂಸಾರವು=ಆ ಅಹಂಕಾರ ಸಂಬಂಧವಾದ ಕರ್ತೃತ್ವ ಭೋಕ್ತೃತ್ವರೂಪ ಸಂಸಾರವು, ಇಹುದು=ಇರುವದು.

**ತಾತ್ಪರ್ಯ:-** ದೇಹಕ್ಕೆ ಜನನ ಮರಣಗಳು, ಪ್ರಾಣಕ್ಕೆ ಹಸಿವೆ ತೃಷೆಗಳು, ಮನಸ್ಸಿಗೆ ಶೋಕ ಮೋಹಗಳು, ಬುದ್ಧಿಗೆ ಜ್ಞಾನಾ ಜ್ಞಾನಗಳು, ಅಹಂಕಾರಕ್ಕೆ ಕರ್ತೃತ್ವ ಭೋಕ್ತೃತ್ವಾದಿಗಳು ಇವು ಸ್ವಭಾವ ಸಿದ್ಧವಾದ ಧರ್ಮಗಳಾಗಿರುತ್ತವೆ. ಆದ್ದರಿಂದ ಧರ್ಮಗಳು ಧರ್ಮಿಯನ್ನು ಬಿಟ್ಟು ಎಂದೂ ಇರುವದಿಲ್ಲ. ಅದರಿಂದ ಅವುಗಳು ತಪ್ಪದೇ ಇರುತ್ತವೆ. ಈ ಅಹಂಕಾರಾದಿ ಉಪಾಧಿಗಳಿಂದೊಡಗೂಡಿದ ಆತ್ಮನಲ್ಲಿ ಜನನಾದಿ ಧರ್ಮಗಳು, ಆತ್ಮನಿಗೆ ಉಂಟೆಂಬಂತೆ ತೋರುತ್ತವೆ. ವಿಚಾರ ವನ್ನು ಮಾಡಲು, ಆ ಧರ್ಮಗಳು ಅನಾತ್ಮಗಳಾದ ಅಹಂಕಾರಾದಿಗಳಿಗೇ ಉಂಟು. ಚೈತನ್ಯ ಸ್ವರೂಪನಾದ ಆತ್ಮನು ಸ್ಫಟಿಕ ಮಣಿಯಂತೆ ನಿರ್ಲಿಪ್ತನಾಗಿ, ನಿರ್ಧರ್ಮಿ ಯಾಗಿ ಸದಾ ಅಸಂಗನಾಗಿರುತ್ತಾನೆ. ಆದ್ದರಿಂದ ಆತ್ಮನು ಸಂಸಾರವುಳ್ಳವನಂತೆ ತೋರುವದು ಅವಿವೇಕವಾಗಿರುತ್ತದೆ. ವಿವೇಕದಿಂದ ನೋಡಿದರೆ ಅಸಂಸಾರಿ ನಿತ್ಯ ಮುಕ್ತನೆಂದು ತಿಳಿ.

ಬಳಿಕ, ಉಪಾಧಿಯು ಮೂರು ಪ್ರಕಾರವಾಗಿರುತ್ತದೆಂದು ಉಪಾಧಿಯ ಭೇದವನ್ನು ನಿರೂಪಿಸುತ್ತಾರೆ.

**ಸುತನೇ ಕೇಳಧ್ಯಾಸ ಪ್ರತಿಬಿಂಬಾವಚ್ಛಿನ್ನ ।**
**ಗತಿಯಿಂದುಪಾಧಿಯದು ಮೂರು ತೆರದೊಳಂ ।**
**ಚಿತವುಪ್ಪುದಾತ್ಮನೊಳಗಲ್ಲಿ ॥೩॥**

**ಟೀಕಾ:-** ಸುತನೆ ಕೇಳು = ಪುತ್ರನೇ ಆಲಿಸು, ಉಪಾಧಿಯದು=ಆ ಉಪಾಧಿಯು, ಅಧ್ಯಾಸ=ಅಧ್ಯಾಸೋಪಾಧಿಯೆಂದೂ, ಪ್ರತಿಬಿಂಬ=ಪ್ರತಿಬಿಂಬೋಪಾಧಿಯೆಂದೂ, ಅವಚ್ಛಿನ್=ಅವಚ್ಛಿನ್ನೋಪಾಧಿಯೆಂದೂ, ಗತಿಯಿಂದ = ವ್ಯವಹಾರ

ಭೇದದಿಂದ, ಮೂರು ತೆರದೊಳು=ಮೂರುವಿಧವಾಗಿ, ಆತ್ಮನೊಳಗಲ್ಲಿ=ಆತ್ಮನಲ್ಲಿ, ಅಂಚಿತವಪ್ಪುದು=ಗುರ್ತಿಸಲಿಕ್ಕೆ ಬರುತ್ತಿರುವದು.

**ತಾತ್ಪರ್ಯ:-** ಹೇ ಪುತ್ರನೇ ಕೇಳು! ಆ ಉಪಾಧಿಯು ಮೂರುವಿಧವಾಗಿ ತೋರುತ್ತದೆ. ಹೇಗೆಂದರೆ, ಅವಿದ್ಯೆಯು ತಾನು ಎಷ್ಟು ಪ್ರದೇಶದಲ್ಲಿರುವದೋ, ಅಷ್ಟರಲ್ಲಿದ್ದ ಚೈತನ್ಯವನ್ನು ಅಳತೆಗೆ ತಂದದ್ದರಿಂದ ಅವಚ್ಛಿನ್ನವೆಂದು ಹೇಳುತ್ತಾರೆ. ಹೇಗೆಂದರೆ, ಪರಿಪೂರ್ಣವಾದ ಆಕಾಶವನ್ನು ಘಟಾಕಾಶವು ಅಳತೆಗೆ ತಂದು, ತನ್ನಲ್ಲಿದ್ದ ಆಕಾಶಕ್ಕೆ ಘಟಾಕಾಶವೆಂದು ಕರೆಯುವಂತೆ; ಪರಿಪೂರ್ಣ ಅನವಚ್ಛಿನ್ನವಾದ ಚೈತನ್ಯವನ್ನು ಅವಿದ್ಯೆಯು ಅಳತೆಗೆ ತಂದು, ತನ್ನಲ್ಲಿದ್ದ ಚೈತನ್ಯಕ್ಕೆ ಪರಿಚ್ಛಿನ್ನತ್ವವನ್ನುಂಟುಮಾಡಿದೆ. ಅದರಿಂದ ಅವಿದ್ಯೆಯು ಚೈತನ್ಯ ರೂಪನಾದ ಆತ್ಮನಿಗೆ **ಅವಚ್ಛಿನ್ನೋಪಾಧಿ**ಯೆಂದು ಹೇಳಲ್ಪಡುತ್ತದೆ. ಬಳಿಕ, ಉಕ್ತ ಅವಿದ್ಯೆಯಿಂದ ಕಾರ್ಯವಾದ ಅಹಂಕಾರವಾಯಿತು. ಆ ಅಹಂಕಾರದಲ್ಲಿ ಚೈತನ್ಯಾತ್ಮನು ಪ್ರತಿಬಿಂಬಿಸಿದ್ದರಿಂದಲೂ, ಆ ಅಹಂಕಾರದಲ್ಲಿ ಆತ್ಮನು ತಪ್ತಾಯಃಪಿಂಡದಂತೆ ಏಕತ್ವವನ್ನು ತಳೆದಿದ್ದರಿಂದಲೂ, ಆತ್ಮನಿಗೆ ಅಹಂಕಾರವು **ಪ್ರತಿಬಿಂಬೋಪಾಧಿಯೆಂದು** ಹೇಳಲ್ಪಡುತ್ತದೆ. ಬಳಿಕ, ಆ ಅಹಂಕಾರದಲ್ಲಿದ್ದ ಕರ್ತೃತ್ವ ಭೋಕ್ತೃತ್ವಾದಿ ಧರ್ಮಗಳು; ಒಂದೂ ಉಳಿಯದಂತೆ ಆತ್ಮನಲ್ಲಿ ಹೊಳೆದು ತೋರಲಿಕ್ಕೆ ಹತ್ತಲು, ಆ ಅಹಂಕಾರದ ಧರ್ಮಗಳಿಗೆ **ಅಧ್ಯಾಸೋಪಾಧಿಯೆಂದು** ಹೇಳಿದರು. ಈರೀತಿ ಉಪಾಧಿಯು ಅವಚ್ಛಿನ್ನ, ಪ್ರತಿಬಿಂಬ, ಅಧ್ಯಾಸಗಳೆಂಬ ಭೇದದಿಂದ ಮೂರುವಿಧವಾಗಿ ತೋರುತ್ತದೆ.ಆದ್ದರಿಂದ ಪರಿಪೂರ್ಣ ನಿರ್ವಿಕಾರನಾದ ಆತ್ಮನಿಗೆ ಉಪಾಧಿಮೂಲಕ ಸಂಸಾರವು ಪ್ರಾಪ್ತವಾಗುತ್ತದೆ. ಸಹಜವಲ್ಲ ಎಂಬ ಭಾವವು.

**ಬಳಿಕ,** ಅವಚ್ಛಿನ್ನೋಪಾಧಿಯನ್ನು ತಿಳಿಸುತ್ತಾರೆ.

**ಪ್ರಸರ ಧರ್ಮಿಣಿಯೆನಿಸುತೆಸೆಯುವದು ಪ್ರಕೃತಿಯದು |**
**ವಶನಾಗುತಾತ್ಮನದರ ಹವಣಾಗಿ ಭಾ |**
**ವಿಸಲವಚ್ಛಿನ್ನವದೆ ನೋಡು || ೪ ||**

**ಟೀಕಾ:-** ಪ್ರಸರಧರ್ಮಿಣಿಯೆನಿಸುತೆ=ಸಂಕೋಚ ವಿಕಾಸ ಧರ್ಮದ್ವಯಗಳುಳ್ಳದ್ದೆಂದು ಹೇಳಿಸಿಕೊಂಡು, ಪ್ರಕೃತಿಯದು=ಅವಿದ್ಯೆಯು, ಎಸೆವುದು=ಶೋಭಿಸುವದು, ಅದರ ಹವಣಾಗಿ=ಆ ಪ್ರಕೃತಿಯ ಅಳತೆಯಾಗಿ, ಭಾವಿಸಲ್=ತಿಳಿಯಲು, ಅದೆ ಅವಚ್ಛಿನ್ನ ನೋಡು=ಅದೆ ಅವಚ್ಛಿನ್ನ ಉಪಾಧಿಯೆನಿಸುವದು.

**ತಾತ್ಪರ್ಯ:-**ಅವಿದ್ಯೆಯು ಸಂಕೋಚವಿಕಾಸಗಳೆಂಬ ಎರಡುವಿಧ ಧರ್ಮಗಳಿಂದ ಕೂಡಿರುತ್ತದೆ. ಆ ಅವಿದ್ಯೆಯು ಎಷ್ಟಿರುವದೋ ಅಷ್ಟರಲ್ಲಿರುವ ಚೈತನ್ಯವು

**ಅವಚ್ಛಿನ್ನವೆನಿಸುವದು.** ಅಂದರೆ, ಅವಿದ್ಯೆಯಿಂದ ಅಳತೆಮಾಡಿದ ಚೈತನ್ಯವು. ಅರ್ಥಾತ್ ಪೂರ್ಣಚೈತನ್ಯವು ಅವಿದ್ಯೋಪಾಧಿಯಿಂದ ಪರಿಚ್ಛಿನ್ನಕ್ಕೆ ಬಂದಿರುತ್ತದೆಂಬ ಭಾವವು. ಅವಿದ್ಯೋಪಾಧಿಯಿಂದ ಕೂಡಿದ ಚೈತನ್ಯಕ್ಕೆ ಪ್ರಾಜ್ಞಜೀವನೆಂದು ಕರೆಯುತ್ತಾರೆ. ಈ ಉಪಾಧಿಯು ಸುಷುಪ್ತಿಯಲ್ಲಿರುತ್ತದೆ.

ಬಳಿಕ, ಪ್ರತಿಬಿಂಬಕ್ಕೆ ಉಪಾಧಿಯಾದದ್ದು ಅವಿದ್ಯಾಕಾರ್ಯವಾದ ಅಹಂಕಾರವೆಂದು ನಿರೂಪಣ ಮಾಡುತ್ತಾರೆ.

**ತಿಳಿಯಲ್ಕಹಂಕಾರದೊಳಗೆ ಮಾರ್ಪೊಳೆದು ನಿ।**
**ರ್ಮಳಚಿತ್ತು ತಾನೆ ಯದರೊಳೇಕತ್ವಮಂ।**
**ತಳೆಯೆ ಪ್ರತಿಬಿಂಬವಹುದಿಂತು ॥೫॥**

**ಟೀಕಾ:-** ತಿಳಿಯಲ್ಕೆ=ವಿಚಾರಮಾಡಲು, ಅಹಂಕಾರದೊಳಗೆ=ಅಹಂಕಾರದಲ್ಲಿ, ನಿರ್ಮಳಚಿತ್ತು=ಶುದ್ಧ ಚಿದ್ರೂಪಾತ್ಮನು, ಮಾರ್ಪೊಳೆದು=ಪ್ರತಿಬಿಂಬಿಸಿ, ತಾನೆ=ಸ್ವಯಂ, ಅದರೊಳು=ಅಹಂಕಾರದಲ್ಲಿ, ಏಕತ್ವಮಂ=ಅಭೇದವನ್ನು, ತಳೆಯೆ=ಹೊಂದಲು, ಇಂತು=ಈ ಪ್ರಕಾರ, ಪ್ರತಿಬಿಂಬವಹುದು=ಪ್ರತಿಬಿಂಬವೆನಿಸುವದು.

**ತಾತ್ಪರ್ಯ:-** ಮೇಲೆ ಹೇಳಿದ ಅವಿದ್ಯೆಯೇ ಪರಿಣಾಮಾತ್ಮಕವಾಗಿ ಅಹಂಕಾರವಾಯಿತು. ಆ ಅಹಂಕಾರದಲ್ಲಿ, ಅಹಂಕಾರಕ್ಕೆ ಸಾಕ್ಷಿಯಾದ ಚಿದ್ರೂಪಾತ್ಮನು ಪ್ರತಿಬಿಂಬಿಸುವನು. ಕಾಸಕಬ್ಬಿಣದ ಘಟ್ಟಿಯಂತೆ ಚಿದ್ರೂಪಾತ್ಮನು ಅಹಂಕಾರದೊಡನೆ ತಾದಾತ್ಮ್ಯ ಭಾವವನ್ನು ಹೊಂದುವನು. ಅಂದರೆ, ಅಹಂಕಾರವೇ ತಾನು, ತಾನೇ ಅಹಂಕಾರವೆಂದು ಭಾವಿಸುತ್ತಾನೆ. ಅಹಂಕಾರವು ಇದ್ದರೆ ತೋರಿದರೆ, ತಾನು ಇದ್ದೇನೆ, ತೋರುತ್ತೇನೆ, ಎಂಬ ಭಾವನೆಯುಳ್ಳವನು ಆಗುತ್ತಾನೆ. ಜಡವಾದ ಅಹಂಕಾರವು ಚಿತ್ತಿನ ಪ್ರತಿಬಿಂಬದಿಂದ ಕೂಡಿ, ತಾನೇ ಚೈತನ್ಯರೂಪ ಆತ್ಮನೆಂಬುವ ಹಾಗೆ ತೋರುವದು. ಆದ್ದರಿಂದ ಈ ಅಹಂಕಾರವೇ ಆತ್ಮನಾಗಿರಬಹುದೆಂದು ವಿವೇಕಹೀನರಿಗೆ ತೋರುವದು. ಇದಕ್ಕೆ ಹೃದಯಗ್ರಂಥಿಯೆಂದು ಹೇಳುವರು. ಈ ವಿಧವಾಗಿ ಅಹಂಕಾರವು ಸ್ವಪ್ನ ಜಾಗರಣಗಳಲ್ಲಿ ವ್ಯವಹಾರವನ್ನು ಮಾಡಿ, ನಿದ್ರೆಯಲ್ಲಿ ತನಗೆ ಕಾರಣವಾದ ಅವಿದ್ಯೆಯಲ್ಲಿ ಅಡಗಿಹೋಗುತ್ತದೆ. ಈ ಅಹಂಕಾರವೇ **ಪ್ರತಿಬಿಂಬೋಪಾಧಿಯೆನಿಸುವದು.**

**ಬಳಿಕ,** ಅಹಂಕಾರಾದಿಗಳ ಧರ್ಮಗಳು ಆತ್ಮನಲ್ಲಿ, ಆತ್ಮನ ಧರ್ಮಗಳು ಅಹಂಕಾರದಲ್ಲಿ, ತೋರಲು ಅಧ್ಯಾಸವೆನಿಸುತ್ತದೆಂದು ಪ್ರತಿಪಾದನ ಮಾಡುತ್ತಾರೆ.

**ಬಳಿಕಲಂತಾಹಮ್ಮಿನೊಳಗುಳ್ಳ ಧರ್ಮನೊಂ ।**
**ದುಳಿಯದಾತ್ಮನೊಳಃ ಸತ್ಯವೆಂಬಂತೆ ಮಾ ।**
**ರ್ಪೊಳೆಯಲಧ್ಯಾಸವೆನಿಸುವದು ॥೬॥**

**ಟೀಕಾ:-** ಬಳಿಕಲ್=ಅನಂತರದಲ್ಲಾಯ್ದರೂ, ಆ ಹಮ್ಮಿನೊಳಗುಳ್ಳ=ಆ ಅಹಂಕಾರದಲ್ಲಿರುವ, ಧರ್ಮವೊಂದು ಉಳಿಯದೆ=ಒಂದು ಧರ್ಮವು ಕೂಡಾ ಬಿಡದ ಹಾಗೆ, ಆತ್ಮನೊಳು=ತನ್ನಲ್ಲಿ, ಸತ್ಯವೆಂಬಂತೆ=ಸತ್ಯವೆನ್ನುವ ಹಾಗೆ, ಮಾರ್ಪೊಳೆಯಲ್ = ಪ್ರತಿಬಿಂಬಿಸಲು, ಅಧ್ಯಾಸವೆನಿಸುವದು = ಅಧ್ಯಾಸವೆಂದು ಹೇಳುವರು.

**ತಾತ್ಪರ್ಯ:-** ಅಹಂಕಾರದಲ್ಲಿ ಚೈತನ್ಯವು ಏಕತ್ವವನ್ನು ಹೊಂದಿದಬಳಿಕ, ಆ ಅಹಂಕಾರದೊಳಗಿರುವ ಕರ್ತೃತ್ವ ಭೋಕ್ತೃತ್ವಾದಿಗಳು ಆತ್ಮನಲ್ಲಿಯೂ, ಆತ್ಮ ಸ್ವರೂಪವಾದ ಜ್ಞಾನರೂಪ ಚೈತನ್ಯವು ಅಹಂಕಾರದಲ್ಲಿಯೂ, ಪರಸ್ಪರ ಧರ್ಮಗಳು ಬೆರೆತುಕೊಂಡು ಹೋಗುತ್ತವೆ. ಇದು ಅನ್ಯೋನ್ಯಾಧ್ಯಾಸವೆನಿಸುತ್ತದೆ. ಇದರಿಂದ ಜಡವಾದ ಅಹಂಕಾರವು ಚೈತನ್ಯರೂಪ ಆತ್ಮನಂತೆ ತೋರುತ್ತದೆ. ಅಕರ್ತಾ ಅಭೋಕ್ತಾರೂಪ ಸಾಕ್ಷಿ ನಿರ್ಧರ್ಮರೂಪನಾದ ಆತ್ಮನು ಸಂಸಾರಿಯಂತೆ ತೋರುತ್ತಿರುವನು. ಹೇಗಂದರೆ, ಬೆಂಕಿಯಲ್ಲಿರುವ ದಾಹಕತ್ವವನ್ನು ಹೊಂದಿ ಕಬ್ಬಿಣವು ಸುಡುತ್ತದೆಂದು ಹೇಳಿಸಿಕೊಂಡಿತು. ಕಬ್ಬಿಣದ ಆಕಾರವನ್ನು ಅಗ್ನಿಯು ಹೊಂದಿ ಬೆಂಕಿಯು ದುಂಡಾಕಾರವದೆ. ಚೌಕಾಗಿದೆ. ಎಂದು ಬೆಂಕಿಯು ಆಕಾರವನ್ನು ಪಡೆಯಿತು. ಈ ರೀತಿ ಆತ್ಮಾನಾತ್ಮಗಳ ಧರ್ಮಗಳು ಪರಸ್ಪರ ಅಧ್ಯಾಸಗಳಾದ್ದರಿಂದ ಇದಕ್ಕೆ **ಅನ್ಯೋನ್ಯಾಧ್ಯಾಸವೆಂದು** ಹೇಳುತ್ತಾರೆ.

**ಬಳಿಕ, ಶಿಷ್ಯನು:-**ಹೇಗುರುವೇ! ಒಂದರಧರ್ಮವು ಒಂದರಲ್ಲಿ ಬೆರಿಕೆಯಾದದ್ದಕ್ಕೆ ಅಧ್ಯಾಸವೆಂದು ಹೇಳಿದಿರಿ. ಅಧ್ಯಾಸವು ಅಂದರೇನು? ಅದಕ್ಕೆ ಯಾವ ಲಕ್ಷಣವುಂಟು? ನಾವು ಅದನ್ನು ಹೇಗೆ ಕಂಡು ಹಿಡಿಯಬೇಕು? ಇದನ್ನು ತಿಳಿಯುವದು ಕಷ್ಟತರವಾಗಿದೆ. ಎಂದು ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

**ಅಧ್ಯಾಸಲಕ್ಷಣವಸಾಧ್ಯವರಿಯಲ್ಕೆಂದು ।**
**ಬೋಧ್ಯನೆನಲಾತನೊಡನೆ ಮುದವಲರುತಾ ।**
**ರಾಧ್ಯನೊಲಿದಿಂತು ಬೆಸಸಿದನು ॥ ೭ ॥**

**ಟೀಕಾ:-** ಬೋಧ್ಯನು=ಶಿಷ್ಯನು, ಅಧ್ಯಾಸಲಕ್ಷಣವು=ಅಧ್ಯಾಸದ ಚಿನ್ಹವನ್ನು, ಅರಿಯಲ್ಕೆ=ತಿಳಿಯುವದಕ್ಕೆ, ಅಸಾಧ್ಯವೆಂದು=ಬರಲಾರದೆಂದು, ಎನಲು=ಅನ್ನಲು, ಆತನೊಡನೆ= ಆಶಿಷ್ಯನೊಡನೆ, ಮುದವು=ಪ್ರೀತಿಯು, ಅಲರುತಾ=ವಿಕ

ಸನವಾಗುತ್ತ, ಆರಾಧ್ಯನು=ಗುರುಗಳು, ಒಲಿದು=ಪ್ರಸನ್ನಚಿತ್ತರಾಗಿ, ಇಂತು= ಮುಂದೆ ಹೇಳುವಪ್ರಕಾರ, ಬೆಸಸಿದನು=ತಿಳಿಸಿದನು.

**ತಾತ್ಪರ್ಯ:-** ಭೋಸ್ವಾಮಿನ್! ಮೂರುವಿಧಗಳಾದ ಉಪಾಧಿಗಳಲ್ಲಿ ಕಡೆಗೆ ಹೇಳಿದ್ದು ಅಧ್ಯಾಸೋಪಾಧಿಯು ಆಗಿರುತ್ತದೆ. ಆದರೆ,ಅಧ್ಯಾಸವೆಂದರೇನು? ಅದರ ಲಕ್ಷಣವೇನು? ಇದನ್ನು ತಿಳಿಯುವದು ಬಹು ಕಷ್ಟತರವಾಗಿ ಕಾಣುತ್ತದೆ. ಇದನ್ನು ನಾನು ಎಂದೂ ಕೇಳಿಲ್ಲ. ಅಧ್ಯಾಸಕ್ಕೆ ಲಕ್ಷಣವನ್ನು ಹೇಳುತ್ತಾ, ಅದರ ಸ್ವರೂಪ ವನ್ನು ಚನ್ನಾಗಿ ತಿಳಿಸಿರಿ. ಅದನ್ನು ನಾನು ಸರಿಯಾಗಿ ತಿಳಿದುಕೊಂಡರೆ, ಅದರ ನಿವೃತ್ತಿಮಾಡಿಕೊಂಡು ಮುಕ್ತನಾಗಲಿಕ್ಕೆ ಬರುತ್ತದೆ ಎಂದು ಶಿಷ್ಯನು ಬೇಡಿ ಕೊಂಡನು. ಹೀಗೆ ನುಡಿಯುವ ಶಿಷ್ಯನ ಮಾತುಗಳನ್ನು ಕೇಳಿ, ಗುರುಗಳು ಬಹು ಪ್ರೀತರಾಗಿ, ಮುಂದೆ ಹೇಳುವ ಪ್ರಕಾರ ಅವನಿಗೆ ಅಧ್ಯಾಸದ ಅರ್ಥವನ್ನು ತಿಳಿಸುವಂಥವರಾದರು.

**ಬಳಿಕ,** ಶ್ರೀ ಗುರುಗಳು ಶುಕ್ತಿ ರಜತ ದೃಷ್ಟಾಂತವನ್ನು ಕೊಟ್ಟು ಅಧ್ಯಾ ಸದ ಸ್ವರೂಪವನ್ನು ತಿಳಿಸುತ್ತಾರೆ.

**ಅದನು ತತ್ತಲ್ಲದಿರ್ಪುದರಲ್ಲಿ ತದ್ಬುದ್ಧಿ |**
**ಯುದಯವೆಂದರಿವುದೆಲೆ ಶುಕ್ತಿರಜತ ಮೆಂ |**
**ಬುದರ ದೃಷ್ಟಾಂತ ಮುಖದಿಂದ ||೮||**

**ಟೀಕಾ:-** ಅದನು=ಆ ಅಧ್ಯಾಸವನ್ನು, ತತ್ ಅಲ್ಲದೆ=ಅದು ಅಲ್ಲದೆ, ಇರ್ಪು ದರಲ್ಲಿ=ಇರುವಲ್ಲಿ, ತತ್ ಬುದ್ಧಿಯ=ಆ ಬುದ್ಧಿಯ, ಉದಯವೆಂದು= ತೋರುವಿಕೆ ಯೆಂದು, ಶುಕ್ತಿರಜತಮೆಂಬುದರ=ಶುಕ್ತಿರಜತವೆನ್ನುವದರ, ದೃಷ್ಟಾಂತ ಮುಖ ದಿಂದ=ದೃಷ್ಟಾಂತದ ದ್ವಾರಾ, ಎಲೆ=ಎಲೈ ಶಿಷ್ಯನೇ ! ಅರಿವುದು=ತಿಳಿಯುವದು.

**ತಾತ್ಪರ್ಯ:-** ಹೇ ಶಿಷ್ಯನೇ ಕೇಳು. ಅಧ್ಯಾಸವು ಅಂದರೆ, ಅದು ಅಲ್ಲದ ಕಲ್ಲಿ ಅದು ಹೌದು ಎಂಬ ಬುದ್ಧಿಯೇ ಅಧ್ಯಾಸವೆನಿಸುವದು. ಹೇಗೆ ಅಂದರೆ? ಬೆಳ್ಳಿಯಲ್ಲದ ಕಪ್ಪೇಚಿಪ್ಪಿನಲ್ಲಿ ಬೆಳ್ಳಿಯ ಬುದ್ಧಿಯನ್ನುಮಾಡಿದರೆ, ಇದು ಅಧ್ಯಾಸ ವೆಂದು ತಿಳಿ. ಇದರಂತೆ ಆತ್ಮವಲ್ಲದ ಅನಾತ್ಮ ಅಹಂಕಾರದಲ್ಲಿ ಆತ್ಮನೆಂಬ ಬುದ್ಧಿ ಯನ್ನು ಮಾಡಿದರೆ, ಇದು ಅಧ್ಯಾಸವೆನಿಸುವದು. ಬ್ರಹ್ಮಸೂತ್ರದ ಅಧ್ಯಾಸ ಭಾಷ್ಯದಲ್ಲಿ ಭಾಷ್ಯಕಾರರು:- **"ಪೂರ್ವದೃಷ್ಟಃ ಸ್ಮೃತಿರೂಪಃ ಪರತ್ರ ಪರಾವ ಭಾಸಃ ಅಧ್ಯಾಸಃ"** ಮೊದಲು ಕಂಡ ಹಾವಿನ ಜ್ಞಾನವು ಸಂಸ್ಕಾರ ರೂಪದಿಂದ ಇದ್ದು, ನಸುಗತ್ತಲೆಯಲ್ಲಿ ಬಿದ್ದ ಹಗ್ಗದ ತುಂಡನ್ನು ಕಂಡು, ಹಾವಿನ ಸ್ಮರಣ

ವಾಗುತ್ತದೆ. ಅನಂತರ ಹಗ್ಗದಲ್ಲಿ ಹಾವಿನ ಪ್ರತೀತಿಯು ಆಗುತ್ತದೆ. ಹಾವಲ್ಲದ ಹಗ್ಗದಲ್ಲಿ ಹಾವು ಎಂಬ ಬುದ್ಧಿಯೇ ಅಧ್ಯಾಸವೆಂದು ಹೇಳಿರುತ್ತಾರೆ. ಹಾಗೂ ಭಾಷ್ಯ ಟೀಕಾಕಾರರಾದ ಆನಂದ ಗಿರಿಯವರು 'ಅನ್ಯಸ್ಮಿನ್ ಅನ್ಯಧೀ ಅಧ್ಯಾಸಃ' ಅನ್ಯದರಲ್ಲಿ ಅನ್ಯಬುದ್ಧಿಗೆ ಅಧ್ಯಾಸವೆಂದು ಹೇಳಿರುವರು. ಹೀಗಿರುವದಕ್ಕೆ ಅಧ್ಯಾಸ ವೆಂದು ಎಲ್ಲರು ಹೇಳಿರುತ್ತಾರೆ.

ಮತ್ತು ವಿಚಾರಸಾಗರಕಾರರು:- **ಸ್ವ ಅಭಾವ ಅಧಿಕರಣೇ ಅವಭಾಸಃ ಅಧ್ಯಾಸಃ**- ಯಾವದು ತನ್ನ ಅಭಾವ ಅಧಿಕರಣದಲ್ಲಿ ತೋರುವದೋ, ಅದು ಅಧ್ಯಾಸವೆಂದು ಹೇಳಿರುವರು. ಹೇಗಂದರೆ, ರಜತವು ಶುಕ್ತಿಯಲ್ಲಿ ಇಲ್ಲದ್ದಾಗಿದೆ. ಅದರಿಂದ ರಜತದ ಅಭಾವವು ಶುಕ್ತಿಯಲ್ಲಿರುತ್ತದೆ. ಆ ಅಭಾವವನ್ನೇ ಆಶ್ರಯ ಮಾಡಿಕೊಂಡು ರಜತವು ತೋರುವದು. ಅದರಿಂದ ತನ್ನ ಅಭಾವದಲ್ಲಿ ತಾನು ತೋರುವದೇ ಅಧ್ಯಾಸವೆಂದು ಹೇಳಿರುವರು. ಈ ಲಕ್ಷಣವು ಹೇಳಿದ ದೃಷ್ಟಾಂತದ ಲ್ಲಿಯೇ ಅಂತಃಪಾತವಾಗಿದೆ. ಈ ರೀತಿಯಾಗಿ ನೀನು ಅಧ್ಯಾಸವನ್ನು ತಿಳಿ. ಇದೇನು ಅಸಾಧ್ಯವಲ್ಲ. ಕಿಂತು ಸಾಧ್ಯವದೆಯೆಂಬಭಾವವು.

ಬಳಿಕ, ದೃಷ್ಟಾಂತ ಪೂರ್ವಕ ಅಧ್ಯಾಸವನ್ನು ಹೇಳಿ, ಇದನ್ನು ದ್ರಾಷ್ಟಾಂತ ದಲ್ಲಿ ಯೋಜನೆಮಾಡಿ ತೋರಿಸುತ್ತಾರೆ.

**ಇಂತಿದಧ್ಯಾಸ ವಿದರಂತಾತ್ಮನಲ್ಲಿ ಜಡ ।**
**ಹಂತೆಯೊಳಗುಳ್ಳ ಗುಣವೈದಿ ಸತ್ಯವೆಂ ।**
**ಬಂತೆ ಕಾಣಿಸುವದೆಲೆ ಪುತ್ರ** ॥ ೯ ॥

**ಟೀಕಾ:**- ಇದರಂತೆ= ಈ ದೃಷ್ಟಾಂತದಂತೆ, ಆತ್ಮನಲ್ಲಿ=ತನ್ನಲ್ಲಿ, ಜಡಹಂತೆ ಯೊಳಗುಳ್ಳ=ಜಡವಾದ ಅಹಂಕಾರದೊಳಗಿರುವ, ಗುಣವೈದಿ=ಕರ್ತೃತ್ವಭೋಕ್ತೃ ತ್ವಾದಿ ಗುಣಗಳನ್ನು ಹೊಂದಿ, ಸತ್ಯವೆಂಬಂತೆ=ನಿಜವೇನೋ ಅನ್ನುವಹಾಗೆ, ಕಾಣಿ ಸುವದು=ತೋರುವದು, ಎಲೆ ಪುತ್ರ=ಎಲೈಶಿಷ್ಯನೇ !, ಅಧ್ಯಾಸವು=ಭ್ರಮವು, ಇಂತು=ಹೀಗಿರುವದು,

**ತಾತ್ಪರ್ಯ:**-ಅಹಂಕಾರವು ಸ್ವರೂಪತಃ ಜಡವಾಗಿರುತ್ತದೆ. ಆತ್ಮನ ಪ್ರತಿ ಬಿಂಬವನ್ನು ಪಡೆದು ಚೇತನವತ್ ಭಾಸಮಾನವಾಗಿರುವದು. ಕರ್ತೃತ್ವಭೋಕ್ತೃ ತ್ವಾದಿ ಗುಣಗಳಿಂದಲೂ ಕೂಡಿಕೊಂಡಿರುತ್ತದೆ. ಈ ಅಹಂಕಾರವು ಜಾಗ್ರತ್ಸ್ವ ಪ್ನಂಗಳಲ್ಲಿ ವ್ಯವಹಾರಮಾಡಿ ನಿದ್ರೆಯಲ್ಲಿ ಅಡಗುತ್ತದೆ. ಇದರಲ್ಲಿರುವ ಕರ್ತೃತ್ವಾದಿ ಗುಣಗಳು, ಈ ಅಹಂಕಾರಕ್ಕೆ ಸಾಕ್ಷಿಯಾದ ಅರುರೂಪ ಆತ್ಮನಲ್ಲಿ ತೋರಿ, ಆತ್ಮ ನೇಕರ್ತಾ ಭೋಕ್ತಾ ಎಂಬಂತೆ ತೋರುವದು- ಯಾವದಾದರೊಂದು ಕರ್ಮದ

ಕರ್ತೃತ್ವವೂ, ಆ ಕರ್ಮಫಲಗಳಾದ ಸುಖದುಃಖಾದಿಗಳ ಭೋಕ್ತೃತ್ವವೂ, ಆತ್ಮನಿಗೆ ಉಂಟು ಎಂಬಂತೆ ತೋರುತ್ತದೆ. ಇದೇ ಭ್ರಮವಾಗಿದೆ. ಯಾಕಂದರೆ, ಆತ್ಮನು ಅಕರ್ತಾ ಅಭೋಕ್ತಾ ಅಸಂಗ ಚಿದ್ರೂಪನಾಗಿರುವನು. ಹೇಗಂದರೆ, ಜಾಗರಣ ಸ್ವಪ್ನಗಳಲ್ಲಿ ಅಹಂಕಾರವದೆ. ಅಲ್ಲಿ ಕರ್ತೃತ್ವಾದಿಗಳು ಉಂಟು. ನಿದ್ರೆಯಲ್ಲಿ ಅಹಂಕಾರವಿಲ್ಲದ್ದರಿಂದ ಕರ್ತೃತ್ವಾದಿಗಳು ಇರುವದಿಲ್ಲ. ನಿದ್ರೆಯಲ್ಲಿ ಆತ್ಮನು ಇದ್ದಾನೆ. ಅಕರ್ತನಾಗಿರುವನು. ಇದರಂತೆ ಜಾಗ್ರದಲ್ಲಿಯೂ ಅಕರ್ತನೇ ಇರುವನು. ಆದರೆ ಅಹಂಕಾರದ ಸಂಬಂಧ ಮೂಲಕ ಅಹಂಕಾರದ ಕರ್ತೃತ್ವಾದಿ ಗುಣಗಳು ಆತ್ಮನಲ್ಲಿ ಹೊಳೆದು ಕರ್ತಾಭೋಕ್ತಾ ಎಂಬಂತೆ ತೋರುತ್ತದೆ. ಕರ್ತೃತ್ವಾದಿಗಳು ಆತ್ಮನ ಧರ್ಮವಲ್ಲ. ಒಂದು ಪಕ್ಷದಲ್ಲಿ ಕರ್ತೃತ್ವಾದಿಗಳು ಆತ್ಮನ ಗುಣ, ಧರ್ಮವೆಂದು ಒಪ್ಪಿದರೆ ಮೋಕ್ಷವೇ ಆಗದು. ಯಾಕಂದರೆ, "**ಆತ್ಮಾಕರ್ತಾದಿರೂಪಶ್ಚೇತ್ ಮಾ ಕಾಂಕ್ಷೇತ್ಸರ್ಹಿ ಮುಕ್ತತಾಂ**" ಆತ್ಮನು ಕರ್ತಾದಿ ರೂಪನೆಂದು ತಿಳಿದರೆ ಮೋಕ್ಷವನ್ನೇ ಇಚ್ಛಿಸಲಾಗದು. ಯಾಕಂದರೆ, ಕರ್ತೃತ್ವಾದಿಕವೇ ಬಂಧಕವಾಗಿದೆ. ಇದೇ ಆತ್ಮರೂಪವೆಂದ ಬಳಿಕ, ಧರ್ಮಿಯಾದ ಆತ್ಮನ ನಾಶವಾಗದವಿನಾ ಧರ್ಮವಾದ ಕರ್ತೃತ್ವಾದಿಗಳು ನಾಶವಾಗಲಾರವು. ಧರ್ಮಿಯಾದ ಆತ್ಮನೇ ನಾಶವಾದ ಮೇಲೆ ಮೋಕ್ಷವನ್ನು ಯಾರಿಗೆ ಹೇಳಬೇಕಾಗುತ್ತದೆ. ಮತ್ತು ಶೂನ್ಯವಾದ ಪ್ರಸಂಗವೂ ಬರಬಹುದು. ಆದ್ದರಿಂದ ಕರ್ತೃತ್ವಾದಿಗಳು ಆತ್ಮನ ಗುಣಧರ್ಮಗಳಲ್ಲ. ಕಿಂತು ಅಹಂಕಾರಕ್ಕೆ ಉಂಟು. ಈ ಅಹಂಕಾರದ ಕರ್ತೃತ್ವಾದಿಗಳು ಅಕರ್ತಾರೂಪ ಆತ್ಮನಲ್ಲಿ ತೋರುತ್ತವೆ. ಅದರಿಂದ ಇದಕ್ಕೆ ಅಧ್ಯಾಸ, ಭ್ರಮೆಯೆಂದು ಹೇಳುತ್ತಾರೆ.

**ಬಳಿಕ,** ಅಹಂಕಾರದಲ್ಲಿದ್ದ ಕರ್ತೃತ್ವಾದಿ ಗುಣಗಳು; ಆತ್ಮನಲ್ಲಿ ಹೇಗೆ ತೋರುತ್ತವೆಂಬುದಕ್ಕೆ ದೃಷ್ಟಾಂತಗಳನ್ನು ಕೊಡುತ್ತಾರೆ.

**ಎಂತು ನಿರ್ಮಳ ಮುಕುರದಂತರಾಳದೊಳು ಗಜ |**
**ವೆಂತು ತರು ಸರಿಸಿಯೊಳು ಪೊಳೆದು ತೋರುತಿಹ |**
**ವಂತೆಲ್ಲ ವಾತ್ಮನೊಳು ತೋರ್ಕು ||೧೦||**

**ಟೀಕಾ:-** ಗಜವು=ಆನೆಯು, ಎಂತು=ಹೇಗೆ, ಮುಕುರದ=ಕನ್ನಡಿಯ, ಅಂತರಾಳದೊಳು=ಮಧ್ಯದಲ್ಲಿ, ತರು=ಗಿಡವು, ಎಂತು=ಹೇಗೆ, ಸರಸಿಯೊಳು=ಸರೋವರದಲ್ಲಿ, ಪೊಳೆದು=ಹೊಳೆದು, ತೋರುತಿಹವಂತೆ=ತೋರುತ್ತಿರುವ ಹಾಗೆ, ಎಲ್ಲವು=ಅಹಂಕಾರಾದಿಗಳ ಧರ್ಮಗಳು, ಆತ್ಮನೊಳು=ತನ್ನಲ್ಲಿ, ತೋರ್ಕು=ತೋರುವದು.

**ತಾತ್ಪರ್ಯ:**- ಶಂಕಾ:- ಅಹಂಕಾರಕ್ಕೆ ಸಾಕ್ಷಿಯಾದ ಆತ್ಮನು ಅಸಂಗನಾಗಿರುವನು. ಅವನಲ್ಲಿ ಅಹಂಕಾರ ಧರ್ಮವು ಹೇಗೆ ತೋರುತ್ತದೆ? ಸಂಗಿಯಾಗಿದ್ದರೆ ತೋರಬಹುದು. ಅಸಂಗಲಕ್ಷಣ ಆತ್ಮನಲ್ಲಿ ಅನ್ಯದರ ಸಂಗವು ಆಗಲಿಕ್ಕೆ ಶಕ್ಯವಲ್ಲ ಎಂದು ಶಂಕೆಯನ್ನು ಮಾಡಿದರೆ, ಇದಕ್ಕೆ ನಿಜವಾದ ಸಂಗವಿಲ್ಲ. ಆದರೂ ಆಧ್ಯಾಸಿಕ ಸಂಗವು ಇರುತ್ತದೆ. ಆದ್ದರಿಂದ ಅಹಂಕಾರಾದಿಗಳ ಧರ್ಮಗಳು ಆತ್ಮನಲ್ಲಿ ತೋರುತ್ತವೆ. ಹೇಗಂದರೆ, ನಿರ್ಮಳ ನಿಶ್ಚಲವಾದ ಕನ್ನಡಿಯಲ್ಲಿ ಆನೆಯು ನಿಜವಾಗಿಲ್ಲದಿದ್ದರೂ, ಪ್ರತಿಬಿಂಬರೂಪದಿಂದ ಇದ್ದಂತೆ, ಹೇಗೆ ತೋರುವದೋ; ಸರೋವರದಲ್ಲಿ ಗಿಡವಿಲ್ಲದಿದ್ದರೂ, ಬುಡಮೇಲಾಗಿ ಇದ್ದಂತೆ ಹೇಗೆ ತೋರುವದೋ; ಹಾಗೇ ಅಹಂಕಾರ, ಮನ, ಬುದ್ಧಿ, ದೇಹೇಂದ್ರಿಯಾದಿಗಳ ಧರ್ಮಗಳು; ಆತ್ಮನಲ್ಲಿ ನಿಜವಾಗಿಲ್ಲದಿದ್ದರೂ, ಅಧ್ಯಾಸ ಮೂಲಕ ತೋರುತ್ತಿರುತ್ತವೆ. ಹೀಗೆ ತೋರಿದರೂ ಆತ್ಮನು ಅಕರ್ತಾ, ಅಸಂಗ, ನಿತ್ಯ, ಶುದ್ಧ ಚಿನ್ಮಾತ್ರರೂಪನೆಂದು ತಿಳಿ.

ಬಳಿಕ, ಕರ್ತೃತ್ವಾದಿ ಜನನ ಮರಣರೂಪ ಸಂಸಾರವು, ಆತ್ಮನಲ್ಲಿ ಉಪಾಧಿ ಮೂಲಕ ಬಂದಿರುತ್ತದೆ ಹೊರತು, ಸಹಜವಲ್ಲ, ಎಂಬುದನ್ನು ನಿರೂಪಣ ಮಾಡುತ್ತಾರೆ.

**ಅದು ತಾನುಪಾಧಿಯೆನಿಸಿದ ಸಂಸರಣವುಪ್ಪು।**
**ದದು ಸಜ್ಜನಂಗೆ ದುರ್ಜನರ ಸಂಸರ್ಗ।**
**ವದು ಬಾಧೆಯಾದ ಪರಿಯುಕ್ಕು ॥೧೧॥**

**ಟೀಕಾ:**- ಅದು ತಾನು=ಹಾಗೆ ತೋರುವದು, ಉಪಾಧಿಯೆನಿಸಿದ=ಉಪಾಧಿ ಸಂಬಂಧವಾದ, ಸಂಸರಣವು=ಸಂಸಾರವು, ಸಜ್ಜನಂಗೆ=ಒಳ್ಳೆ ಸದ್ಗುಣಿಗೆ, ದುರ್ಜನರ=ದುಷ್ಟಜನರ, ಸಂಸರ್ಗವದು=ಸಂಗವು, ಬಾಧೆಯಾದ=ದುಃಖರೂಪವಾದ, ಪರಿಯುಕ್ಕು=ರೀತಿಯಾಗಿದೆ.

**ತಾತ್ಪರ್ಯ:**- ನಿರಪರಾಧಿಗಳೂ ಸದ್ಗುಣಿಗಳೂ ಆಗಿರುವ ಸಜ್ಜನಂಗೆ, ದುರ್ಜನರ ಸಹವಾಸದಿಂದ ಅನೇಕ ಅಪರಾಧಗಳೂ ಆರೋಪಗಳೂ ಬರುವಹಾಗೆ, ಅಹಂಕಾರಾದಿ ಅನಾತ್ಮಪದಾರ್ಥಗಳ ಸಂಬಂಧದಿಂದ, ಚೈತನ್ಯ ನಿರ್ಲೇಪ ನಿತ್ಯನಾಗಿರುವ ತನಗೆ,, ಜನನಾದಿ ಸಂಸಾರವು ತೋರುತ್ತಿರುತ್ತದೆ. ಹೀಗೆ ತೋರುವದು ಉಪಾಧಿವಶಾತ್ ಆಗಿದೆ. ನಿಜವಾಗಿ ತನ್ನಲ್ಲಿ ಸಂಸಾರವಿಲ್ಲೆಂಬ ಭಾವವು.

**ಬಳಿಕ,** ಅಸಂಗ, ಶುದ್ಧ, ಚೈತನ್ಯರೂಪ ಆತ್ಮನಲ್ಲಿ, ಸಂಸಾರವು ಆರೋಪಿತವಾಗಿದೆ. ನಿಜವಲ್ಲ. ಎಂಬುದಕ್ಕೆ ಶ್ರುತಿವಾಕ್ಯವನ್ನು ಉದಾಹರಿಸುತ್ತಾರೆ.

**ಆರೋಪವಾದ ಸಂಸಾರವೆಂಬುದನುಸುಕು ।**
**ಮಾರ ನೀನರಿವು ದಸ್ಯಜೀವತ್ವಮಂ ।**
**ದೋರಂತೆ ವಾಕ್ಯ ಸುಧೆಯುಂಟು ॥ ೧೨ ॥**

**ಟೀಕಾ:-** ಸುಕುಮಾರ= ಅಪ್ಪಾಮಗುವೇ, ನೀನು=ನೀನು, ಆರೋಪವಾದ ಸಂಸಾರವೆಂಬುದನು=ಸಂಸಾರವು ಮಿಥ್ಯೆಯಾಗಿರುವುದೆಂಬುದನ್ನು ಅರಿವುದು=ತಿಳಿಯುವದು, (ಯಾಕಂದರೆ) ಅಸ್ಯ=ಅಪರೋಕ್ಷನಾದ ಆತ್ಮನಿಗೆ, ಜೀವತ್ವಂ=ಕರ್ತೃತ್ವಾದಿರೂಪ ಜೀವಭಾವವು, ಆರೋಪಾತ್=ಅನ್ಯದರಿಂದ ಬಂದದ್ದೆಂದು, (ಮಿಥ್ಯೆಯೆಂದು) ಸಾಕ್ಷಿಣಿ=ಪ್ರತ್ಯಗಾತ್ಮನಲ್ಲಿ, ಅವಭಾಸತೆ=ತೋರುತ್ತದೆ. ಎಂದು= ಹೀಗೆಂದು, ಓರಂತೆ=ಚನ್ನಾಗಿ, ವಾಕ್ಯಸುಧೆಯುಂಟು=ಅಮೃತರೂಪ ಶ್ರುತಿಯ ವಾಕ್ಯವಿರುತ್ತದೆ.

**ತಾತ್ಪರ್ಯ:-**ಕರ್ತೃತ್ವಭೋಕ್ತೃತ್ವ, ಸುಖದುಃಖ, ಜನನ, ಮರಣಾದಿರೂಪ ಸಂಸಾರವು,ಆತ್ಮನಿಗೆ ಆದಂತೆ ತೋರುತ್ತದೆ. ಈ ಧರ್ಮಗಳು ಅಹಂಕಾರ,ಮನಸ್ಸು, ದೇಹಾದಿಗಳಿಗೆ ಸಹಜವಾಗಿವೆ. ಆತ್ಮನಲ್ಲಿ ಆರೋಪಿತಗಳಾಗಿವೆ. ಈ ಮಾತನ್ನು ನಾನೇ ಹೇಳುವದಿಲ್ಲ. ಕಿಂತು ಶ್ರುತಿಯಾದರೂ ಹೇಳುತ್ತದೆ. ಏನಂದರೆ; **ಸಾಕ್ಷಿಪ್ರತ್ಯಗಾತ್ಮ ಸ್ವರೂಪದಲ್ಲಿ ಸಂಸಾರವು ಆರೋಪವಾಗಿರುತ್ತದೆ.** ದೇಹಾದಿ ಅಹಂಕಾರಗಳಲ್ಲಿ ಸಹಜವಾಗಿದೆ. ಎಂಬದಾಗಿ ಹೇಳುತ್ತದೆ. ಮತ್ತು ಸುಪ್ತಿಯಲ್ಲಿ ತಾನು ದೇಹಾದಿ ಧರ್ಮಗಳಿಗೆಲ್ಲಕ್ಕೂ ಮೀರಿ, ಧರ್ಮರಹಿತನಾಗಿ ಅಸಂಸಾರಿ, ಅಸಂಗ, ಶುದ್ಧ, ಚಿನ್ಮಾತ್ರನಾಗಿರುತ್ತಾನೆ. ಆದ್ದರಿಂದ ಸಂಸಾರವು ಆರೋಪಿತವಾಗಿರುತ್ತದೆಂದು ತಿಳಿ.

**ಶಂಕಾ:-**ನಾನು ಕರ್ತಾ, ಭೋಕ್ತಾ,ಸುಖಿ, ದುಃಖಿಯೆಂದು ಆತ್ಮನಲ್ಲಿಯೇ ಸಂಸಾರ ತೋರುತ್ತದೆ. ಆದ್ದರಿಂದ ಆರೋಪಿತವಲ್ಲ. ಕಿಂತು ಸತ್ಯವಾಗಿರುತ್ತದೆ.

**ಸಮಾಧಾನ:-** ಸಂಸಾರಬಂಧವು ಸತ್ಯವಾದ ಪಕ್ಷದಲ್ಲಿ ಮೋಕ್ಷವು ಇಲ್ಲದ ಹಾಗಾಯಿತು. ಮುಕ್ತಿಯನ್ನು ಹೇಳುವ ಶ್ರುತಿಗಳಿಗೆ ವಿರೋಧವಾಗುತ್ತದೆ. ಮತ್ತು ಗುರುಶಾಸ್ತ್ರಗಳಿಂದ ಜನ್ಯವಾದ ಜ್ಞಾನದಿಂದ ನಿವೃತ್ತಿಯಾಗುವದಿಲ್ಲೆಂದು ಹೇಳಬೇಕಾಗುತ್ತದೆ. ಹೀಗೆ ಹೇಳಿದರೆ; ಶ್ರೀ ಗುರುಶಾಸ್ತ್ರಾದಿಗಳು ವ್ಯರ್ಥಗಳಾಗಬೇಕಾದೀತು. ಆದ್ದರಿಂದ ಬಂಧವು ಸತ್ಯವಲ್ಲ? ಆರೋಪಿತವೆಂದು ತಿಳಿ.

**ಬಳಿಕ,** ಸಂಸಾರವು ಆರೋಪಿತವಾಗಿರುವದರಿಂದಲೇ ಗುರು ಶಾಸ್ತ್ರಗಳಿಂದ ಜನ್ಯವಾದ ಜ್ಞಾನದಿಂದ ನಿವೃತ್ತಿಯಾಗುತ್ತದೆ. ಅದು ನಿವೃತ್ತಿಯಾಗಲು ಮೋಕ್ಷವು ತನಗೆ ಪ್ರಾಪ್ತವಾಗುತ್ತದೆಂದು ಹೇಳುತ್ತಾರೆ.

**ಇಂತು ಸಂಸೃತಿ ತನ್ನೊಳುಂ ತೋರ್ಪುದಾಗಿ ವೇ ।**
**ದಾಂತ ಗುರು ಶಿಕ್ಷೆಯಿಂದಹ ಮಳಿಯೆ ಮುಕ್ತಿ ।**
**ಯುಂ ತಾನೆ ಪಡೆವನೆನೆಬೇಕು ॥೧೩॥**

**ಟೀಕಾ:-** ಇಂತು=ಈ ರೀತಿ, ಸಂಸೃತಿ=ಸಂಸಾರವು, ತನ್ನೊಳು=ತನ್ನಲ್ಲಿ, ತೋರ್ಪುದಾಗಿ=ತೋರುತ್ತಿರುವದರಿಂದ, ವೇದಾಂತ ಗುರು ಶಿಕ್ಷೆಯಿಂದ=ಶ್ರುತಿ ಗುರುಗಳ ಉಪದೇಶದಿಂದ, ಅಹಮಳಿಯೆ=ಅಹಂಕಾರವು ಅನಾತ್ಮವಾಗಿದೆ. ಆತ್ಮ ವಲ್ಲವೆಂದು ತಿಳಿಯಲು, ಮುಕ್ತಿಯುಂ=ಮೋಕ್ಷವನ್ನು, ತಾನೆ=ಆತ್ಮನೇ, ಪಡೆವನು= ಹೊಂದುವನು, ಎನಬೇಕು=ಅನ್ನಲಿಕ್ಕೆ ಬೇಕಾಗುವದು.

**ತಾತ್ಪರ್ಯ:-** ಈ ಜೀವಭಾವರೂಪ ಬಂಧವು ಆರೋಪಿತವಾಗಿರೋಣ ದರಿಂದಲೇ ಜ್ಞಾನದಿಂದ **ನಾಶವನ್ನು** ಹೊಂದುತ್ತದೆ. ಶ್ರುತಿಗುರುಗಳ ಉಪ ದೇಶದಿಂದಲೂ, ಶ್ರವಣ ಮನನಾದಿಗಳಿಂದಲೂ, ಜನ್ಯವಾದ ಅಹಂಬ್ರಹ್ಮಾಸ್ಮಿ ಯೆಂದು ಅಪರೋಕ್ಷ ಜ್ಞಾನವಾಗುತ್ತದೆ. ಈ ಜ್ಞಾನವು ಅನಾತ್ಮಗಳಾದ ಅಹಂಕಾ ರಾದಿಗಳಲ್ಲಿ ನಾನೆಂಬ ಭಾವರೂಪ ಅಜ್ಞಾನವನ್ನು ನಾಶಮಾಡುತ್ತದೆ. ಉಕ್ತ ಜ್ಞಾನದಿಂದ ಅಜ್ಞಾನವು ನಾಶವಾದೊಡನೆ ಮುಕ್ತಿಯು ತನಗೇ ಲಭ್ಯವಾಗುತ್ತದೆ. ಆದ್ದರಿಂದ ಅಹಂಕಾರಾದಿಗಳಿಗೆ ಬಂಧವು ಸಹಜವಾಗಿದೆ. ಮುಕ್ತಿಯು ತನಗಾಗಿ ರುವುದೆಂದು ತಿಳಿ. ಜ್ಞಾನದಿಂದ ಅಜ್ಞಾನ ಸಹಿತ ಜನನ ಮರಣಾದಿ ಸಂಸಾರ ದುಃಖವು ನಿವೃತ್ತಿಯಾಗುತ್ತದೆಂದು ಶ್ರುತಿಗಳು ಹೇಳುತ್ತವೆ. ಇದರ ಮೇಲಿಂದ ಬಂಧವು ಆರೋಪಿತವಾದದ್ದೆಂಬ ಅರ್ಥವು ಹೊಳೆಯುತ್ತದೆ. ಇದಕ್ಕೆ **ಶ್ರುತಾರ್ಥಾ ಪತ್ತಿ**ಯೆಂದು ಹೇಳುತ್ತಾರೆ. ಇದು ನಿಜವೆಂದು ನಂಬು.

ಬಳಿಕ, ತನಗೆ ಮುಕ್ತಿಯಾಗುತ್ತದೆಂದು ಹೇಳುವ ನಿಮ್ಮ ಮಾತಿನ ಮೇಲಿಂದಲೇ, ಬಂಧವಾದರೂ ತನಗೇ ಆಗಿತ್ತೆಂದು ಹೇಳಬೇಕಾಗುತ್ತದೆ. ತನಗೆ, ಬಂಧವು ಬಂದಿರುವದಾದರೆ, ಅದಕ್ಕೆ ಆರೋಪಿತವೆಂದು ಹೇಗೆ ಹೇಳುತ್ತಿರಿ ? ಎಂದು ಶಂಕೆಯನ್ನು ಮಾಡಲು; ಮೊದಲು ಮುಕ್ತನಿದ್ದವನಿಗೆ ಮುಕ್ತಿಯನ್ನು ಹೇಳಿದ್ದೇವೆ. ಬಂಧನಿಗೆ ಮುಕ್ತಿಯನ್ನು ಹೇಳಿಲ್ಲವೆಂದು ಉತ್ತರವನ್ನು ಕೊಡು ತ್ತಾರೆ.

**ಮುಕ್ತನಹನೀನರಿದು ಮುಕ್ತನಹನೆಂಬುದಾ ।**
**ಮುಕ್ತಶ್ಚ ಮುಚ್ಯತೆ ಜಂತುರಿತಿ ನೈಗ ।**
**ಮೋಕ್ತಿಯೊಳು ಸಿದ್ಧವೆಲೆವತ್ಸ ॥೧೪॥**

**ಟೀಕಾ:-** ಎಲೆವತ್ಸ=ಎಲೈಪುತ್ರನೆ ! ಮುಕ್ತನಹನೀನು=ಮುಕ್ತನಾಗಿರುವ ನೀನು, ಅರಿದು=ತಿಳಿದು, ಮುಕ್ತನಹನು=ಮುಕ್ತನಿರುವಿ, ಎಂಬುದು=ಅನ್ನುವದು

ಮುಕ್ತಶ್ಚ=ಮುಕ್ತನಾದ, ಜಂತು=ಜೀವನು, ಮುಚ್ಯತೆ=ಮುಕ್ತನಾಗುತ್ತಾನೆ, ಇತಿ=ಹೀಗೆಂದು, ನೈಗಮೋಕ್ತಿಯೊಳು=ಶ್ರುತಿವಾಕ್ಯದಿಂದ, ಸಿದ್ಧವು=ಸಿದ್ಧಾಂತ ವಾಗಿರುವದು.

**ತಾತ್ಪರ್ಯ:-** ಬದ್ಧನಿಗೆ ಮುಕ್ತನೆಂದು ಹೇಳಿಲ್ಲ. ಕಿಂತು ಮುಕ್ತನಿಗೆ ಮುಕ್ತನೆಂದು ಶ್ರುತಿಯು ಹೇಳುತ್ತದೆ. ಸ್ವಭಾವತಃ ಬದ್ಧನಾಗಿರುವವನನ್ನು ಮುಕ್ತನನ್ನಾಗಿ ಮಾಡಲು ಯಾರೂ ಸಮರ್ಥರಾಗರು. ಆದ್ದರಿಂದ ಮುಕ್ತನಿಗೆ ಮುಕ್ತಿಯನ್ನು ಹೇಳಿದೆ. ಹೇಗಂದರೆ, ಮನುಷ್ಯನು ಮೊದಲೇ ಆರೋಗ್ಯವುಳ್ಳವ ನಿರುತ್ತಾನೆ. ಅವನಿಗೆ ವಾತ, ಪಿತ್ತ, ಕಫ ದೋಷಗಳ ಮೂಲಕ ರೋಗವು ಪ್ರಾಪ್ತವಾಗುತ್ತದೆ. ಅನಂತರ ವೈದ್ಯರಿಂದ ಔಷಧ ಸೇವನೆಮಾಡಿ ಆರೋಗ್ಯ ವಂತನಾಗುತ್ತಾನೆ. ಆಗ್ಯೆ ರೋಗಿಯು "ಈಗ ನನಗೆ ರೋಗವಿಲ್ಲ. ಆರೋಗ್ಯ ವಾಗಿದ್ದೇನೆ" ಎಂದು ಹೇಳುವನು. ಆರೋಗ್ಯವು ಔಷಧ ಸೇವನೆಯಿಂದ ಹೊಸ ದಾಗಿ ಬಂದದ್ದಲ್ಲ. ಕಿಂತು ಆರೋಗ್ಯವು ರೋಗಬರುವದಕ್ಕೆ ಮೊದಲೇ ಇತ್ತು. ಅದರ ಮೇಲೆ ರೋಗವು ಮುಚ್ಚಿತ್ತು. ವೈದ್ಯರು ಔಷಧವನ್ನು ದೋಷನಿವೃತ್ತಿಗಾಗಿ ಕೊಟ್ಟರು. ವಾತಾದಿದೋಷಗಳು ಹೋದಕೂಡಲೇ, ಇದ್ದ **ಆರೋಗ್ಯವು** ಪ್ರಕಟವಾಯಿತು. ಆದಕ್ಕೆ ಆರೋಗ್ಯ ಬಂತು ಎಂಬ ವ್ಯವಹಾರ ಬಿದ್ದದೆ. ಆರೋಗ್ಯವು ಹೊಸದಾಗಿ ಹೊರಗಿನಿಂದ ಬಂದಿಲ್ಲ. ಕಿಂತು; ಇದ್ದದ್ದೇ ಬಂದಿರು ತ್ತದೆ. ಈ ದೃಷ್ಟಾಂತದಂತೆ ಆತ್ಮನು ನಿತ್ಯಮುಕ್ತನಾಗಿರುವನು. ಅವಿದ್ಯೆಯಿಂದ ಅಹಂಕಾರಾದಿ ಅನಾತ್ಮಧರ್ಮಗಳು ತನ್ನಲ್ಲಿ ತಾದಾತ್ಮ್ಯಾಧ್ಯಾಸಮಾಡಿಕೊಂಡು, ಬದ್ಧನಂತೆ ತೋರಹತ್ತಿದನು. ಶ್ರೀಗುರುವೆಂಬ ಸದ್ವೈದ್ಯನ ಬಳಿಗೆ ಶರಣಾಗತ ನಾಗಿ, ಜ್ಞಾನವೆಂಬ ಔಷಧವನ್ನು ಸೇವಿಸಲು, **ಅಧ್ಯಾಸವೆಂಬ ರೋಗವು** ದೂರಾಯಿತು. ಬಂಧಹೋಯಿತು. ನಾನು ಮುಕ್ತನಾದೆನೆಂದು ತೋರಿದೆ. ಆದರೆ ಮುಕ್ತಿಯು ಗುರುಶಾಸ್ತ್ರಗಳಿಂದ ಪ್ರಾಪ್ತವಲ್ಲ. ಕಿಂತು, ಮೊದಲಿಗೇ ಉಂಟು. ಹಾಗಾದರೆ; ಗುರುಶಾಸ್ತ್ರಗಳು ಏತಕ್ಕೆಬೇಕು? ಎಂದು ಕೇಳಬಹುದು. ಗುರುಶಾಸ್ತ್ರಗಳು ಅಧ್ಯಾಸನಿವೃತ್ತಿಗೆಬೇಕು. **ಮುಕ್ತಿಗೆ** ಬೇಕಾಗಿಲ್ಲ. ಆತ್ಮನು ಮೊದಲೇ ನಿತ್ಯಮುಕ್ತನಾಗಿರುವನು. ಅಂದರೆ, ಶ್ರೀಗುರು ಸಚ್ಛಾಸ್ತ್ರ ಶ್ರವಣಾದಿ ಗಳಿಂದ ಜನ್ಯವಾದ ಜ್ಞಾನವು, **ಅಧ್ಯಾಸನಿವೃತ್ತಿ** ಮಾಡುವದೇ ಮುಖ್ಯಪ್ರಯೋ ಜನವಾಗಿದೆಯೆಂಬ ಭಾವವು. ಆದ್ದರಿಂದ ಅಹಂಕಾರಕ್ಕೆ ಬಂಧವು ಸಹಜ, ಆತ್ಮ ನಲ್ಲಿ ಆರೋಪಿತವಾಗಿದೆಯೆಂದು ತಿಳಿ.

**ಆತ್ಮಂಗೆ ಸಂಸಾರಾಧ್ಯಾಸ ನಿರೂಪಣೆ ಸೂತ್ರ ೨ ಕ್ಕೆ ತ್ರಿವಿಧಿ ೨೧**

ಬಳಿಕ, ಶಿಷ್ಯನು 'ಹೇ ಗುರುವೇ! ಅವಚ್ಛಿನ್ನೋಪಾಧಿಯಾದ ಅವಿದ್ಯೆಯಿಂದ ಅಪರಿಚ್ಛಿನ್ನನಾದ ಆತ್ಮನು ಪರಿಚ್ಛಿನ್ನನಾಗಿ ತೋರಿದನು. ಪ್ರತಿಬಿಂಬೋಪಾಧಿಯಾದ ಅಹಂಕಾರದಿಂದ ಆತ್ಮನು ಅಹಮೆಂದು ಅಹಂಕಾರರೂಪನಾಗಿ ತೋರಿದನು. ಅಧ್ಯಾಸೋಪಾಧಿಯಾದ ಅಹಂಕಾರದ ಧರ್ಮದಿಂದ ಸಂಸಾರಿಯಾಗಿ ತೋರಿದನೆಂದು ಹೇಳಲ್ಪಟ್ಟಿತು. ಮತ್ತು ಆ ಸಂಸಾರಿ ಜೀವನು, ಶ್ರೀ ಗುರು ಸಚ್ಛಾಸ್ತ್ರ ಶ್ರವಣಾದಿಗಳಿಂದ ತನ್ನ ನಿಜವನ್ನು ತಾನರಿಯಲು; ಮುಕ್ತನಾಗುವನೆಂಬುದು ತಮ್ಮಿಂದ ಹೇಳಲ್ಪಟ್ಟಿತು. ಆದರೆ; ಸಂಸಾರವು ಉಪಾಧಿ ಮೂಲಕ ಬಂದಿದೆ. ಆತ್ಮನು ನಿತ್ಯ ಮುಕ್ತನಿರುವನು. ಆತ್ಮನಲ್ಲಿ ಸಂಸಾರವಿಲ್ಲ. ಕಿಂತು, ಆರೋಪಿತ ಸಂಸಾರವಾಗಿದೆ. ಅದು ಅಹಂಕಾರದಲ್ಲಿ ಸಹಜವಾಗಿದೆ ಎಂದು ಹೇಳಿದಿರಿ. ಮತ್ತು ಆ ಆರೋಪಿತ ಸಂಸಾರವು ಜ್ಞಾನದಿಂದ ನಿವೃತ್ತಿಯಾಗುತ್ತದೆಂದು ಹೇಳಲ್ಪಟ್ಟಿತು. ಆದರೆ ಆರೋಪಿತವಾದ ಅಹಂಕಾರ ಧರ್ಮವು ಮಿಥ್ಯೆಯಾದರೂ ಆಗಲಿ. ಉಪಾಧಿಯಾದ ಅಹಂಕಾರಕ್ಕೆ ತಾವು ಸತ್ಯತ್ವವನ್ನು ಹೇಳಬಹುದು. ಹೀಗೆ ಹೇಳಿದರೆ, ತಮಗೆ ಯಾವ ಹಾನಿಯೂ ಬರುವದಿಲ್ಲ. ಯಾಕಂದರೆ, ಧರ್ಮದ ಅಧ್ಯಾಸಕ್ಕೆ ಮಿಥ್ಯತ್ವವನ್ನು ಹೇಳಿದ್ದರಿಂದ ಮುಕ್ತಿಯು ಲಭ್ಯವಾಗುತ್ತದೆ. ಆದ್ದರಿಂದ ಧರ್ಮಕ್ಕೆ ಮಿಥ್ಯೆಯನ್ನು ಹೇಳಿ, ಧರ್ಮಿಯಾದ ಅಹಂಕಾರಕ್ಕೆ ಸತ್ಯವೆಂದು ಹೇಳಬಹದು' ಎಂದು ಶಂಕೆಯನ್ನು ಮಾಡಿದರೆ, ಹೀಗೆ ಹೇಳುವದು ಸಮೀಚೀನವಲ್ಲ. ಯಾಕಂದರೆ, ದ್ವೈತಾಪತ್ತಿ ಸಂಭವಿಸುತ್ತದೆ. ಅದ್ವೈತ ಸಿದ್ಧಾಂತಕ್ಕೆ ಹಾನಿಯು ಬರುತ್ತದೆ. ಆದ್ದರಿಂದ ಅಧ್ಯಾಸ ರೂಪ ಧರ್ಮವು ಮಿಥ್ಯೆಯಾದಂತೆ; ಧರ್ಮಿಯಾದ **ಅಹಂಕಾರೋಪಾಧಿಯಾದರೂ** ಮಿಥ್ಯೆಯೇ ಆಗಿರುತ್ತದೆಂಬುದನ್ನು ಯುಕ್ತಿಯಿಂದಲೂ ಸಿದ್ಧಮಾಡಿ ತೋರಿಸುತ್ತಾರೆ.

**ಸೂತ್ರ ॥ ತದುಪಾಧಿ ಸತ್ಯವೆಂದೊರೆವುದಿದು ಘಟಿಸಲರಿ ।**
**ಯದು ಯುಕ್ತಿಬಾಧ್ಯವೆನಿಸಿಪ್ಪುದಾಗಿ ॥**

**ಟೀಕಾ:-** ತದುಪಾಧಿ=ಉಪಾಧಿಯಾದ ಅಹಂಕಾರವು, ಸತ್ಯವೆಂದು=ನಿಜವೆಂದು, ಒರೆವುದು=ಹೇಳುವದು, ಇದು ಘಟಿಸಲರಿಯದು, ಇದು ಸಂಭವಿಸಲಾರದು, (ಯಾಕಂದರೆ) ಯುಕ್ತಿಬಾಧ್ಯವೆನಿಸಿಪ್ಪುದಾಗಿ=ಯುಕ್ತಿಯಿಂದ ಖಂಡಿಸಿಕೊಳ್ಳುವದರಿಂದ,

**ತಾತ್ಪರ್ಯ:-** ಧರ್ಮಗಳು ಮಾತ್ರ ಮಿಥ್ಯೆಯಾಗಲಿ. ಧರ್ಮಿಯಾದ ಅಹಂಕಾರವು ಸತ್ಯವೆಂದು ಹೇಳಿದರೆ, ಇದು ಸಂಭವಿಸಲಾರದು. ಯಾಕಂದರೆ, ಮುಂದೆ ಹೇಳುವ ಯುಕ್ತಿಗಳಿಂದ ಸತ್ಯವೆಂಬುವದು ಖಂಡನಮಾಡಿಸಿಕೊಳ್ಳುತ್ತದೆ. ಆದ್ದರಿಂದ ಅಹಂಕಾರಕ್ಕೆ ಸತ್ಯವನ್ನು ಅಂಗೀಕರಿಸಕೂಡದೆಂದು ಹೇಳುತ್ತಾರೆ.

ಬಳಿಕ, ಜ್ಞಾನದಿಂದ ಧರ್ಮಾಧ್ಯಾಸರೂಪ ಸಂಸಾರವು ನಿವೃತ್ತಿಯಾಗಿ ತನಗೆ ಮುಕ್ತಿಯು ದೊರೆಯುತ್ತದೆ. ಅಹಂಕಾರವು ಸತ್ಯವಾಗಿ ಉಳಿಯಬಹುದು. ಆದರಿಂದ ತನಗೆ ಯಾವ ಬಾಧಕವು ಇಲ್ಲೆಂದು ಶಂಕೆಯನ್ನು ಮಾಡಿದರೆ; ಈ ಮಾತು ಎಂದಿಗೂ ಘಟಿಸದು. ಯಾಕೆಂದರೆ, ನಮ್ಮ ಅದ್ವೈತ ಸಿದ್ಧಾಂತದಲ್ಲಿ ಉಪಾಧಿಯಾದ ಅಹಂಕಾರ ಸಹಿತ ಸರ್ವ ಸಂಸಾರಕ್ಕೆ ಅತ್ಯಂತ ಮಿಥ್ಯೆಯನ್ನು ಹೇಳುತ್ತದೆ. ಆದ್ದರಿಂದ ಅಹಂಕಾರವು ಸತ್ಯವಾಗಲಾರದು. ಎಂದು ಹೇಳುತ್ತಾರೆ.

**ಮತಿವಂತ ಕೇಳೆಮ್ಮ ಮತದೊಳಾ ಸಂಸಾರ ।**
**ಕತಿಮಿಥ್ಯೆಯಹುದು ಪಾಧಿಯದು ಘಟಿಸದಾ ।**
**ಕಥದಿನಿಂತಿದನು ತಿಳಿ ನೀನು ॥೧॥**

**ಟೀಕಾ:-** ಮತಿವಂತ ಕೇಳ್=ಬುದ್ಧಿವಂತನೇ ಕೇಳು, ಎಮ್ಮ ಮತದೊಳು= ನಮ್ಮ ವೇದಾಂತ ಮತದಲ್ಲಿ, ಆ ಸಂಸಾರಕೆ=ಉಪಾಧಿ ಸಹಿತವಾದ ಸಂಸಾರಕ್ಕೆ, ಅತಿ ಮಿಥ್ಯೆಯಹುದು=ಅತ್ಯಂತ ಮಿಥ್ಯಾತ್ವವನ್ನು ಹೇಳುವದಾಗಿದೆ,ಉಪಾಧಿಯದು= ಆ ಅಹಂಕಾರೋಪಾಧಿಯು, ಘಟಿಸದು=ಸತ್ಯವೆಂದು ಹೇಳುವದು ಸಂಭವಿಸ ಲಾರದು, ಆ ಕಥದಿಂ=ಆದ್ದರಿಂದ, ಇದನು=ಈ ವಿಷಯವನ್ನು, ಇಂತು=ಈ ರೀತಿ, ನೀನು ತಿಳಿ=ನೀನು ಅರಿಯುವಂಥವನಾಗು.

**ತಾತ್ಪರ್ಯ:-** ಹೇಶಿಷ್ಯನೇ! ಕೇಳು. ಅಹಂಕಾರವು ಸತ್ಯವೆಂದು ಅಂಗೀಕಾ ರಮಾಡಲಿಕ್ಕೆ ಬರುವದಿಲ್ಲ. ಯಾಕಂದರೆ ಉಪನಿಷತ್ ಸಮ್ಮತವಾದ ವೇದಾಂತದಲ್ಲಿ ಮುಖ್ಯವಾಗಿ ಹೇಳುವದೇನಂದರೆ:- ಅರುವಿನಿಂದ ಅರಿಸಿಕೊಳ್ಳುವ ದೃಶ್ಯಮಾನ ಪ್ರಪಂಚವೆಲ್ಲವು ಅತಿಮಿಥ್ಯೆಯಾಗಿದೆ. ಅತ್ಯಂತ ಅಭಾವವಾಗಿರುವುದೆಂದು ಹೇಳಲ್ಪಡು ತ್ತದೆ, ಆದ್ದರಿಂದ ಅಹಂಕಾರಕ್ಕೆ ಸತ್ಯತ್ವ ಬರಲಾರದು. ಹೇಗಂದರೆ; ರಜ್ಜು ಜ್ಞಾನಾ ನಂತರ ರಜ್ಜುವಿನಲ್ಲಿ ಸರ್ಪವು ಮೂರುಕಾಲಗಳಲ್ಲಿಯೂ ಇಲ್ಲವೆಂದು ಹೇಗೆ ನಿಶ್ಚ ಯಿಸಲ್ಪಡುತ್ತದೆಯೋ,ಹಾಗೇ ಅಧಿಷ್ಠಾನವಾದ ಬ್ರಹ್ಮಜ್ಞಾನಾನಂತರ ಬ್ರಹ್ಮದಲ್ಲಿ, ಮೂರುಕಾಲಗಳಲ್ಲಿಯೂ ಈ ಕಾಣುವ ದೃಶ್ಯ ಪ್ರಪಂಚವು ಅತ್ಯಂತಾಭಾವವೆಂದು ನಿಶ್ಚಯ ಮಾಡಲ್ಪಡುತ್ತದೆ. ಆದ್ದರಿಂದ ಅಹಂಕಾರವು ಹೇಗೆ ಸತ್ಯವಾದೀತು? ಹೇಳು ಎಂದಿಗೂ ಆಗಲಾರದು. ಅರ್ಥಾತ್ ಚೇತನರೂಪ ಆತ್ಮನಿಗೆ ಭಿನ್ನವಾದ, ಸರ್ವ ನಾಮರೂಪಾತ್ಮಕವಾದ ಜಗತ್ತು ಅತ್ಯಂತ ಮಿಥ್ಯೆಯೆಂದು ಹೇಳಲ್ಪಡುತ್ತದೆಂಬ ಭಾವವು. ಈ ಕಾರಣದಿಂದ ಅಹಂಕಾರವು ಸತ್ಯವಾಗಲಾರದು. ಅದು ಹೇಗೆಂದು ನೀನು ಕೇಳಿದರೆ; ಆ ವಿಷಯಕ್ಕೆ ಆಕ್ಷೇಪಗಳನ್ನೆತ್ತಿ ನಿನಗೆ ಮುಂದೆ ಹೇಳುವ ಪ್ರಕಾರ ತಿಳಿಸುತ್ತೇನೆ. ಕೇಳು.

**ಬಳಿಕ**, ನಿನ್ನ ಅಭಿಪ್ರಾಯಾನುಸಾರ ಅಹಂಕಾರಕ್ಕೆ ಸತ್ಯವೆಂದು ಹೇಳಿದರೆ: ಯಾವ ದೋಷಗಳು ಬರುತ್ತವೆ? ಎಂಬುದನ್ನು ಹೇಳುತ್ತಾರೆ.

**ಪರಮಾರ್ಥವೆಂದು ಸಂಸರಣಮಂ ಪೇಳ್ದೊಡಾ।**
**ಭರಿತಮಪ್ಪರಿವಿಗಿಹಪರದ ಗತಿಯೆಂತು।**
**ದೊರೆವುದೈ ನಿನ್ನ ಮತದಲ್ಲಿ** ॥೨॥

**ಟೀಕಾ:-** ನಿನ್ನ ಮತದಲ್ಲಿ=ನಿನ್ನ ಅಭಿಪ್ರಾಯದಂತೆ, ಸಂಸರಣಮಂ= ಸಂಸಾರಕ್ಕೆ ಮೂಲವಾದ ಅಹಂಕಾರವನ್ನು, ಪರಮಾರ್ಥವೆಂದು=ತ್ರಿಕಾಲ ಅಬಾಧ್ಯ ಸತ್ಯವಾದದ್ದೆಂದು, ಪೇಳ್ದೊಡೆ=ಹೇಳಿದರೆ, ಆಭರಿತಮಪ್ಪ=ಪರಿಪೂರ್ಣ ವಾದ, ಅರಿವಿಗೆ=ಆತ್ಮನಿಗೆ, ಇಹಪರದ=ಇಹಲೋಕ ಪರಲೋಕಗಳ ಸಂಬಂಧ ವಾದ, ಗತಿಯು=ಗಮನಾಗಮನರೂಪ ವ್ಯವಹಾರವು, ಎಂತು=ಹೇಗೆ, ದೊರೆ ವುದು=ಪ್ರಾಪ್ತವಾಗುವದು.

**ತಾತ್ಪರ್ಯ:-** ಚತುರ ಬುದ್ಧಿಯುಳ್ಳ ಶಿಷ್ಯನೇ ಕೇಳು. ನಿನ್ನ ಅಭಿಪ್ರಾಯ ದಂತೆ ಅಹಂಕಾರಕ್ಕೆ ಸತ್ಯವೆಂದು ಒಪ್ಪಿದರೆ, ದೇಶ, ಕಾಲ, ವಸ್ತು ಪರಿಚ್ಛೇದ ರಹಿತವಾಗಿ ಪರಿಪೂರ್ಣವಾದ ಆತ್ಮನಿಗೆ ನೀನು ಗಮನಾಗಮನಗಳನ್ನು ಹೇಗೆ ಹೇಳುವಿ? ಯಾಕಂದರೆ, ಇಹದಿಂದ ಪರಕ್ಕೂ, ಪರದಿಂದ ಇಹಕ್ಕೂ ಪುನಃ ಪುನಃ ತಿರುಗುವದೇ ಸಂಸಾರವಾಗಿದೆ. ಇದು ಸತ್ಯವೆಂದು ಒಪ್ಪುವಿ. ಆದರೆ,ಪೂರ್ಣವಾದ ಆಕಾಶಕ್ಕೆ ಗಮನಾಗಮನ ವ್ಯವಹಾರ ಘಟಿಸದಂತೆ, ಪರಿಪೂರ್ಣವಾದ ಆತ್ಮನಿಗೂ ಹೋಗುವದು ಬರುವದು ಸಂಭವಿಸಲಾರದು. ಅಂದಮೇಲೆ ನೀನು ಲೋಕಾಂತರ ಜನ್ಮಾಂತರ ಇವುಗಳಿಗೆ ಗಮನಾಗಮನವನ್ನು ಅರುವಿಗೆ ಹೇಗೆ ಹೇಳುವಿ ? ಎಂದು ಕೇಳಿದರು.

**ಬಳಿಕ**, ಆತ್ಮನು ಪೂರ್ಣನಿದ್ದರೂ, ಅಹಂಕಾರ ಉಪಾಧಿ ಮೂಲಕ ಗಮನಾಗಮನ ವ್ಯವಹಾರ ಸಂಭವಿಸುತ್ತದೆಂದು ಹೇಳಿದರೆ, ಅದಕ್ಕೆ ದೋಷ ವನ್ನು ಹೇಳುತ್ತಾರೆ.

**ಇಹಪರಂಗಳ ಗಮನವಹಮಾದ್ಯುಪಾಧಿಯಿಂ ॥**
**ದಹುದೆನಲುಪಾಧಿಯದು ಸತ್ಯವೋ ಪುಸಿಯೋ ।**
**ಸಹಜವಾಗುಳ್ಳದನೆ ಪೇಳು** ॥೩॥

**ಟೀಕಾ:-** ಇಹಪರಂಗಳ=ಇಹಲೋಕ ಪರಲೋಕಗಳ, ಗಮನವು=ತಿರುಗು ವದು, ಅಹಮಾದಿ=ಅಹಂಕಾರ ಮೊದಲಾದವುಗಳ, ಉಪಾಧಿಯಿಂದ=ಉಪಾಧಿಗಳ

ಮೂಲಕ, ಅಹುದೆನಲು=ಆಗುತ್ತದೆಂದು ಹೇಳಿದರೆ, ಉಪಾಧಿಯದು=ಆ ಉಪಾಧಿಯಾದ ಅಹಂಕಾರವು, ಸತ್ಯವೋ=ನಿಜವೋ, ಪುಸಿಯೋ=ಮಿಥ್ಯೆಯೋ, ಸಹಜವಾಗಿ=ಯಥಾರ್ಥವಾಗಿ, ಉಳ್ಳದನೆ=ಇದ್ದದ್ದನ್ನೇ, ಪೇಳು=ಹೇಳು.

ತಾತ್ಪರ್ಯ:- ಅರುರೂಪನಾದ ಆತ್ಮನು ಪರಿಪೂರ್ಣನಾಗಿದ್ದರೂ, ಅಹಂಕಾರಾದಿ ಉಪಾಧಿಗಳ ಮೂಲಕ, ಇಹದಿಂದ ಪರಲೋಕಕ್ಕು ಪರಲೋಕದಿಂದ ಈ ಲೋಕಕ್ಕೂ, ಗಮನಾಗಮನವು ಸಂಭವಿಸುತ್ತದೆ. ಘಟೋಪಾಧಿಯಿಂದ ಘಟಾಕಾಶಕ್ಕೆ ಗಮನಾಗಮನ ಸಂಭವಿಸಿದಂತೆ; ಅಹಂಕಾರೋಪಾಧಿಯಿಂದ ಗಮನಾಗಮನ ಸಂಭವಿಸುತ್ತದೆ. ಎಂದು ಶಿಷ್ಯನು ಹೇಳಲು; ಅದಕ್ಕೆ ಗುರುಗಳು ಶಿಷ್ಯನನ್ನು ಕುರಿತು- ‘ ಆ ಉಪಾಧಿಯಾದ ಅಹಂಕಾರವು ಸತ್ಯವೋ ಅಥವಾ ಪುಸಿಯೋ ? ನಿನಗೆ ಸಮ್ಮತವಾದದ್ದು ಯಾವದು? ಅದನ್ನು ಹೇಳು, ಎಂದು ಕೇಳುತ್ತಲಿದ್ದಾರೆ.

ಬಳಿಕ, ಅಹಂಕಾರ ಸತ್ಯವೆಂದು ಹೇಳಿದರೆ, ಅದರ ಗಮನವೂ ಸತ್ಯವೆಂದು ಹೇಳಬೇಕಾಗುತ್ತದೆ. ಎಂದು ಹೇಳುತ್ತಾರೆ.

**ತದುಪಾಧಿ ಸತ್ಯವೆನಿಸಿದ ಪಕ್ಷದಲ್ಲಿ ತನ ।**
**ಗದರಿಂದಲಾದ ಗಮನವುಂ ಸಹಜ ಮೆಂ ।**
**ಬುದ ನೀನೊಡಂಬಡಲು ಬೇಕು ॥೪॥**

ಟೀಕಾ:- ತತ್‌ಉಪಾಧಿ=ಆ ಅಹಂಕಾರವು, ಸತ್ಯವೆನಿಸಿದ ಪಕ್ಷದಲ್ಲಿ=ನಿಜವೆಂದು ಹೇಳಿದಲ್ಲಿ, ತನಗೆ=ಆತ್ಮನಿಗೆ, ಅದರಿಂದಲಾದ=ಆ ಅಹಂಕಾರದಿಂದ ಆದ, ಗಮನವುಂ=ತಿರಗುವಿಕೆಯನ್ನು, ಸಹಜಮೆಂಬುದನು=ನಿಜವಾಗಿದೆಯೆಂಬುದನ್ನು ನೀನು ಒಡಂಬಡಲುಬೇಕು.=ನೀನು ಅಂಗೀಕರಿಸಲಿಕ್ಕೇಬೇಕು.

ತಾತ್ಪರ್ಯ:- ಅಹಂಕಾರವು ಸತ್ಯವೆಂದು ನೀನು ಒಪ್ಪಿದ ಪಕ್ಷದಲ್ಲಿ, ಆ ಅಹಂಕಾರದಿಂದ ಆಗುವ ಗಮನಾಗಮನ ವ್ಯವಹಾರವೂ ಸತ್ಯವೆಂದು ನೀನು ಅಂಗೀಕರಿಸಲಿಕ್ಕೇ ಬೇಕು. ಯಾಕಂದರೆ, ಧರ್ಮಿಯಾದ ಅಗ್ನಿಯು ಸತ್ಯವಾಗಿದ್ದರೆ, ಅವರ ಧರ್ಮವಾದ ಉಷ್ಣ ಪ್ರಕಾಶಗಳೂ ಸತ್ಯವಾಗಿರುವಂತೆ, ಧರ್ಮಿ ಅಹಂಕಾರವು ನಿಜವಾದ ಮೇಲೆ, ಅದರ ಧರ್ಮವಾದ ಗಮನವೂ ನಿಜವೆಂದು ಒಪ್ಪಲೇಬೇಕಾಗುತ್ತದೆ.

ಬಳಿಕ, ಅಹಂಕಾರ ಮತ್ತು ಅದರ ಗಮನರೂಪ ಧರ್ಮ ಇವೆರಡು ಸತ್ಯವೆಂದೊಪ್ಪಿದರೆ, ಆತ್ಮನಿಗೆ ವಿಕಾರತ್ವವನ್ನು ಹೇಳಬೇಕಾಗುತ್ತದೆಂದು ಹೇಳುತ್ತಾರೆ.

**ಅಂತಾದೊಡವ್ಯಾಪಕಂ ತಾನೆನಲ್ಬೇಹು ।**
**ದಿಂತೊಡಂಬಟ್ಟೊಡದರಿನೆಲ್ಲಾ ವಿಕೃತಿ ।**
**ಯಂ ತಾಳ್ದನೆಂಬುದಿದು ಸಿದ್ಧ ॥೫॥**

**ಟೀಕಾ:-** ಅಂತಾದೊಡೆ=ಉಕ್ತಹಾಗೆ ಅಂಗೀಕರಿಸಿದರೆ,ತಾನೆ ಅವ್ಯಾಪಕಂ= ಆತ್ಮನು ಪರಿಚ್ಛಿನ್ನನಾಗಿರುವನೆಂದು, ಎನಲ್‌ಬೇಹುದು=ಅನ್ನಬೇಕಾಗುವದು, ಇಂತು=ಹೀಗೆ ಒಡಂಬಟ್ಟೊಡೆ=ಅಂಗೀಕರಿಸಿದರೆ, ಅದರಿಂ=ಅದರಿಂದ, ಎಲ್ಲಾ ವಿಕೃತಿಯಂ=ಎಲ್ಲಾ ವಿಕಾರಗಳನ್ನು, ತಾಳ್ದನು=ಹೊಂದಿದನು, ಎಂಬುದು= ಅನ್ನುವದು, ಇದು ಸಿದ್ಧ=ಇದು ನಿಶ್ಚಯವಾಗುತ್ತದೆ.

**ತಾತ್ಪರ್ಯ:-** ಅಹಂಕಾರದ ಗಮನರೂಪ ಧರ್ಮವು ಸತ್ಯವೆಂದು ಹೇಳಿ ದರೆ, ಆತ್ಮನು ಪರಿಚ್ಛಿನ್ನನೆಂದು ಹೇಳಬೇಕಾಗುತ್ತದೆ. ಪರಿಚ್ಛಿನ್ನನೂ ಆಗಿದ್ದಾ ನೆಂದೂ ಒಪ್ಪಿದರೆ, ಆತ್ಮನು ಉತ್ಪತ್ತಿ, ನಾಶ, ಸಾವಯವ, ಜಡನಾಗಿರುತ್ತಾ ನೆಂದು ಎಲ್ಲಾ ವಿಕಾರಗಳನ್ನೂ ಅಂಗೀಕಾರಮಾಡಬೇಕಾಗುತ್ತದೆ. ಯಾಕಂದರೆ, ಘಟವು ಪರಿಚ್ಛಿನ್ನವಾಗುವದರಿಂದ ಅದು ದೃಶ್ಯ, ಜಡ, ಸಾವಯವ, ಉತ್ಪತ್ತಿ, ನಾಶ ಮೊದಲಾದ ವಿಕಾರಗಳನ್ನು ಒಪ್ಪಿದಂತೆ ಒಪ್ಪಬೇಕಾಗುತ್ತದೆ. ಇದು ನಿಶ್ಚಿತವು.

**ಬಳಿಕ,** ವಿಕಾರವುಳ್ಳವನೆಂದು ಅಂಗೀಕರಿಸಿದರೆ, ಆತ್ಮನು ಮಿಥ್ಯೆಯಾಗಿದ್ದಾ ನೆಂದು ಹೇಳಬೇಕಾಗುತ್ತದೆಂದು ಹೇಳುತ್ತಾರೆ.

**ನಿನಗದೇ ಮತವಪ್ಪುದೆನಲಾತ್ಮನಂ ಮಿಥ್ಯೆ ।**
**ಯೆನಬೇಹುದೆಂದೊಡದರಿನಪಸಿದ್ಧಾಂತ ।**
**ವೆನಿಪುದಿನ್ನೇನು ಗತಿಹೇಳು ॥೬॥**

**ಟೀಕಾ:-** ನಿನಗೆ ಅದೇ ಮತವಪ್ಪುದು ಎನಲ್ = ಆತ್ಮನು ವಿಕಾರಿಯೆಂಬು ವದು ನನಗೆ ಸಮ್ಮತವಾಗಿದೆಯೆಂದು ಒಪ್ಪಿದರೆ, ಆತ್ಮನಂ = ಆತ್ಮನನ್ನು, ಮಿಥ್ಯೆ ಯೆನಬೇಹುದು = ಮಿಥ್ಯೆಯಾಗಿರುವನೆಂದು ಒಪ್ಪಬೇಕಾಗುತ್ತದೆ, ಎಂದೊಡೆ = ಆದರೂ ಆಗಲಿಯೆಂದು ಹೇಳಿದರೆ, ಅದರಿಂದ=ಮಿಥ್ಯೆಯೆಂದು ಅಂಗೀಕಾರಮಾಡು ವದರಿಂದ, ಅಪಸಿದ್ಧಾಂತವೆನಿಪುದು=ಸ್ವಸಿದ್ಧಾಂತವನ್ನು ತ್ಯಾಗಮಾಡಿ ಎರಡನೆ ಯವರ ಸಿದ್ಧಾಂತವನ್ನು ಒಪ್ಪಿದಂತೆ ಆಗುತ್ತದೆ, ಇನ್ನೇನುಗತಿ ಹೇಳು = ಇದಕ್ಕೆ ನೀನು ಏನು ಉತ್ತರವನ್ನು ಕೊಡುವಿ.

**ತಾತ್ಪರ್ಯ:-** ವಿಕಾರವುಳ್ಳವನು ಆತ್ಮನು ಆಗಿದ್ದಾನೆಂದು ಸಮ್ಮತಪಟ್ಟರೆ, ಆತ್ಮನಿಗೆ ಮಿಥ್ಯತ್ವವನ್ನು ಹೇಳಬೇಕಾಗುತ್ತದೆ. ಮಿಥ್ಯೆಯೂ ಆಗಲಿ ಅಂದರೆ,

ಅಪಸಿದ್ಧಾಂತ ದೋಷವು ಬರುತ್ತದೆ. ಹೇಗಂದರೆ, ಆತ್ಮನು ನಿತ್ಯನೆಂಬ ನಿನ್ನ ಸ್ವಸಿದ್ಧಾಂತವನ್ನು ತ್ಯಾಗಮಾಡಿ, ಆತ್ಮನು ಮಿಥ್ಯೆಯೆಂದು ಹೇಳಿದರೆ, ಶೂನ್ಯವಾದಿಯ ಅಸತ್ ಸಿದ್ಧಾಂತವನ್ನು ಸ್ವೀಕಾರಮಾಡಿದಂತಾಗುವದು. ಇದಕ್ಕೆ ಅಪಸಿದ್ಧಾಂತವೆಂಬ ಹೆಸರು ಬಂದಿರುತ್ತದೆ. ಮತ್ತು ವರನೇ ಸತ್ತುಹೋದರೆ ಕನ್ಯೆಯನ್ನು ಹುಡುಕುವದು ಹೇಗೆ ನಿಷ್ಫಲವೋ, ಹಾಗೆ ಆತ್ಮನೇ ಮಿಥ್ಯೆಯಾದರೆ ಮೋಕ್ಷವನ್ನು ಪಡೆಯುವದು ಬೇಕಾಗುವದಿಲ್ಲ. ಈ ರೀತಿ ಅನೇಕ ದೋಷಗಳು ಬರುತ್ತವೆ. ಇದಕ್ಕೇನು ಹೇಳುವಿ.

ಬಳಿಕ, ಶಿಷ್ಯನು ರಕ್ತಸ್ಫಟಿಕಯೆಂಬಲ್ಲಿ; ಸ್ಫಟಿಕದಲ್ಲಿ ತೋರುವ ಕೆಂಪು ಮಿಥ್ಯೆಯಾಗಿದೆ. ಕೆಂಪು ದಾಸವಾಳದ ಹೂವು ಸತ್ಯವಾಗಿದೆ. ಇದರಂತೆ ಆತ್ಮನಲ್ಲಿ ಸಂಸಾರ ಮಿಥ್ಯೆಯಾಗಿದೆ. ಉಪಾಧಿಯಾದ ಅಹಂಕಾರವು ಮಾತ್ರ ಸತ್ಯವಾಗಿದೆ" ಎಂದು ಶಂಕೆಯನ್ನು ಮಾಡುತ್ತಾನೆ.

**ಪಳುಕಿನೊಳು ತೋರ್ಪ ಕೆಂಬೆಳಗು ಪುಸಿ ದಾಸಾಣ ।**
**ತಿಳಿಯೆ ಧಿಟವೆಂತುಪಾಧಿಯದು ನಿಜವಾತ್ಮ ।**
**ನೊಳುಚಲನೆ ಮಿಥ್ಯೆಯಹುದಂತೆ ॥೭॥**

**ಟೀಕಾ:-** ಪಳುಕಿನೊಳು=ಸ್ಫಟಿಕದಲ್ಲಿ, ತೋರ್ಪ=ತೋರುವ, ಕೆಂಬೆಳಕು=ಕೆಂಪು ವರ್ಣವು, ಪುಸಿ=ಸುಳ್ಳು, ತಿಳಿಯೆ=ವಿಚಾರ ಮಾಡಲು, ದಾಸಾಣ=ದಾಸವಾಳದ ಹೂವು, ಧಿಟವು=ಸತ್ಯವು, ಎಂತು=ಹೇಗೋ, ಅಂತೆ=ಹಾಗೆಯೇ,ಉಪಾಧಿಯದು=ಉಪಾಧಿಯಾದ ಅಹಂಕಾರವು, ನಿಜವು=ಸತ್ಯವಾಗಿರುವದು, ಆತ್ಮನೊಳು=ತನ್ನಲ್ಲಿ, ಚಲನೆ=ಗಮನಾಗಮನರೂಪ ಸಂಸಾರವು, ಮಿಥ್ಯೆಯಹುದು=ಸುಳ್ಳಾಗಿರುತ್ತದೆ.

**ತಾತ್ಪರ್ಯ:-** ಈ ಸ್ಫಟಿಕವು ರಕ್ತವರ್ಣವಾಗಿದೆಯೆಂದು ಪ್ರತ್ಯಕ್ಷವಾಗಿ ಎಲ್ಲರಿಗೂ ತೋರುತ್ತದೆ. ಆದರೆ ಸ್ಫಟಿಕವು ಸ್ವಭಾವತ: ಶುಭ್ರವಾಗಿದೆ. ಅದರಲ್ಲಿ ಕೆಂಪು ಛಾಯಾ ತೋರುವದು. ಸಮೀಪದಲ್ಲಿದ್ದ ದಾಸವಾಳದ ಕೆಂಪು ಹೂವಿನದಾಗಿದೆ. ಆದ್ದರಿಂದ ಸ್ಫಟಿಕದಲ್ಲಿದ್ದ ಕೆಂಪು ಮಿಥ್ಯೆಯಾಗಿದೆ. ಕೆಂಪಾದ ಹೂವು ಸತ್ಯವಾಗಿರುತ್ತದೆ. ಇದರಂತೆ ಆತ್ಮನಲ್ಲಿ ತೋರುವ ಗಮನಾಗಮನರೂಪ ಸಂಸಾರವು ಮಿಥ್ಯೆಯಾಗಿದೆ. ಉಪಾಧಿಯಾದ ಅಹಂಕಾರವು ಮಾತ್ರ ಸತ್ಯವಾಗಿದೆ. ಹೀಗೆ ಹೇಳುವದರಿಂದ ತಾವು ಪೂರ್ವದಲ್ಲಿ ಹೇಳಿದ ಯಾವ ದೋಷಗಳೂ ಬರುವದಿಲ್ಲ. ಮತ್ತು ಅಹಂಕಾರವು ಸತ್ಯವಾಗಿರುತ್ತದೆ. ಹೀಗೆಂದು ಶಿಷ್ಯನು ಪ್ರಶ್ನೆಯನ್ನು ಮಾಡಿದ್ದಾನೆ.

ಬಳಿಕ, ಸದ್ಗುರುಗಳು “ ಸ್ಫಟಿಕದಲ್ಲಿ ತೋರುವ ಕೆಂಪು ಸುಳ್ಳಾದ ಮೇಲೆ ಅದರ ಸುತ್ತಲೂ ಬಿದ್ದಿರುವ ಕೆಂಪು ಬೆಳಕಾದರೂ ಸುಳ್ಳೇ ಆಗುವಂತೆ, ಆತ್ಮನಲ್ಲಿ ಚಲನೆರೂಪ ಸಂಸಾರವು ಮಿಥ್ಯೆಯಾದ ಬಳಿಕ, ಅದರಿಂದ ಪ್ರಾಪ್ತಗಳಾಗುವ ಭೋಗಾದಿಗಳೂ, ಮಿಥ್ಯೆಯೆಂದು ನೀನು ಒಡಂಬಡಬೇಕಾಗುತ್ತದೆಂದು, ಎರಡು ಪದ್ಯಗಳಿಂದ ನಿರೂಪಣ ಮಾಡುತ್ತಾರೆ.

ಪಾರಮಾರ್ಥಿಕವಲ್ಲದಾ ರಕ್ತತೆಯನೆ ತಾಂ।
ಕಾರಣಂ ಬಡೆದ ಕೆಂಬೆಳಗೆನಿಪ್ಪ ವ್ಯವ।
ಹಾರಮುಂ ಮಿಥ್ಯೆಯಹುದಂತೆ। ॥೮॥

**ಟೀಕಾ:**-ಪಾರಮಾರ್ಥಿಕವಲ್ಲದ=ಸತ್ಯವಾಗದ, ಆ ರಕ್ತತೆಯನೆ=ಆ ಕೆಂಪನ್ನೇ ಕುರಿತು, ತಾಂ=ಅದನ್ನೇ, ಕಾರಣಂಬಡೆದ = ಕಾರಣ ಉಳ್ಳ, ಕೆಂಬೆಳಗೆನಿಪ್ಪ = ಕೆಂಪಾದ ಪ್ರಕಾಶವೆನಿಸುವ, ವ್ಯವಹಾರಮುಂ = ವ್ಯವಹಾರವಾದರೂ, ಮಿಥ್ಯೆಯಹುದಂತೆ=ಸುಳ್ಳಾಗಿರುವಂತೆ.

ಪುಸಿಯಾದ ಗಮನದಿಂದೆಸೆವಖಿಳ ಭೋಗಮುಂ।
ಪುಸಿಯೆಂಬುದಾಯ್ತು ನೀನೇತದ್ಗಮನಮುಂ।
ಪುಸಿಯೆಂಬೆಯಾದ ಕಥದಿಂದ ॥೯॥

**ಟೀಕಾ:**-ಪುಸಿಯಾದ=ಸುಳ್ಳಾದ, ಗಮನದಿಂದೆ=ಗತಿಯಿಂದೆ, ಎಸೆವ=ಶೋಭಿಸುವ, ಅಖಿಳ=ಎಲ್ಲ, ಭೋಗಮುಂ=ಭೋಗಗಳನ್ನು, ಪುಸಿಯೆಂಬುದಾಯ್ತು= ಸುಳ್ಳೆಂದು ಒಪ್ಪಿಕೊಂಡಂತಾಯಿತು, ನೀನೆ=ನೀನೇ, ತದ್ಗಮನಮುಂ = ಗಮನಾಗಮನರೂಪ ಸಂಸಾರವನ್ನು, ಪುಸಿಯೆಂಬೆಯಾದ ಕಥದಿಂ = ಸುಳ್ಳೆಂದು ಹೇಳುವದರಿಂದ.

**ತಾತ್ಪರ್ಯ:**-ಸ್ಫಟಿಕದಲ್ಲಿ ತೋರುವಕೆಂಪು ಸತ್ಯವಲ್ಲ. ಯಾಕಂದರೆ; ಅದು ಸಮೀಪದಲ್ಲಿದ್ದ ದಾಸವಾಳದ ಕೆಂಪಾದ ಹೂವಿನ ಛಾಯೆ ಇರುತ್ತದೆ. ಸ್ಫಟಿಕದಲ್ಲಿರುವ ಮಿಥ್ಯೆಯಾದ ಕೆಂಪನ್ನೆ ಗ್ರಹಣ ಮಾಡಿಕೊಂಡು, ಆ ಸ್ಫಟಿಕದಸುತ್ತಲೂ ಕೆಂಪುಬೆಳಕು ಬಿದ್ದಿರುತ್ತದೆ. ಅದೂ ಕೂಡಾ ಮಿಥ್ಯೆಯೇ ಆಗಿರುತ್ತದೆ. ಕಾರಣವಾದ ಕೆಂಪು ಮಿಥ್ಯೆಯಾದ ಮೇಲೆ, ಅದರ ಕಾರ್ಯವಾದ ಕೆಂಪಾದ ಬೆಳಕಾದರೂ ಮಿಥ್ಯೆಯೇ ಆಗುತ್ತದೆ. ಇದರಂತೆ, ಗಮನವು ಪುಸಿಯಾದ ಮೇಲೆ ಆ ಗಮನದಿಂದೆ ಮುಂದೆ ಪ್ರಾಪ್ತಗಳಾಗುವ, ಲೋಕಾಂತರ ಜನ್ಮಾಂತರ ಭೋಗಗಳಾದರೂ, ಮಿಥ್ಯೆಯೆಂದೇ ಹೇಳಬೇಕಾಗುತ್ತದೆ. ಯಾಕಂದರೆ, ಕಾರಣವಾದ ಗಮನವು ಮಿಥ್ಯೆ

ಯಾದ ಮೇಲೆ, ಕಾರ್ಯವಾದ ಭೋಗಗಳು ಹೇಗೆ ಸತ್ಯಗಳು ಆಗುವವು? ಆಗಲಾರವು. ಕಿಂತು, ಮಿಥ್ಯೆಗಳೇ ಆಗುತ್ತವೆಂಬ ಭಾವವು.

ಬಳಿಕ, ಶಿಷ್ಯನು:- ಗಮನಾಗಮನರೂಪ ಸಂಸಾರವು ಮಿಥ್ಯೆಯಾದ್ದರಿಂದ ಸರ್ವ ಭೋಗಗಳೂ ಮಿಥ್ಯೆಯಾಗಲಿ. ಪರಂತು; ಅಹಂಕಾರಕ್ಕೆ ಮಾತ್ರ ಸತ್ಯತ್ವವನ್ನು ಹೇಳುತ್ತೇನೆ:- ಎಂದು ಶಂಕೆಯನ್ನು ಮಾಡಿದರೆ; ಉಪಾಧಿಯಾದ ಅಹಂಕಾರಕ್ಕಾದರೂ ಸತ್ಯತ್ವವು ವೇದಾಂತ ಮತದಲ್ಲಿ ದೊರೆಯಲಾರದೆಂದು ನಿರೂಪಿಸುತ್ತಾರೆ.

**ಇಂತುಪಾಧಿಗೆ ಸತ್ಯವೆಂತು ಘಟಿಸುವದು ವೇ।**
**ದಾಂತ ಮತದಲ್ಲಿ ಪೇಳ್ದಂತೆ ಸರ್ವಮಂ।**
**ಭ್ರಾಂತಿ ಮಯವೆಂದು ತಿಳಿ ಪುತ್ರ ॥೧೦॥**

**ಟೀಕಾ:-** ಇಂತು=ಈರೀತಿಯಾಗಿ, ಉಪಾಧಿಗೆ=ಉಪಾಧಿಯಾದ ಅಹಂಕಾರಕ್ಕೆ, ಸತ್ಯವು =ನಿಜವು, ಎಂತು=ಹೇಗೆ ಘಟಿಸುವದು=ಪ್ರಾಪ್ತವಾಗುವದು, ವೇದಾಂತ ಮತದಲ್ಲಿ=ಉಪನಿಷತ್ ಸಿದ್ಧಾಂತದಲ್ಲಿ, ಪೇಳ್ದಂತೆ=ಹೇಳಿದಹಾಗೆ, ಸರ್ವಂ=ಆತ್ಮನಿಗೆ ಭಿನ್ನವಾದ ಎಲ್ಲ ವಸ್ತುಗಳೂ, ಭ್ರಾಂತಿಮಯವೆಂದು=ಮಿಥ್ಯಾರೂಪಗಳೆಂದು, ತಿಳಿಪುತ್ರ=ಹೇಶಿಷ್ಯನೇ ನೀನು ತಿಳಿ.

**ತಾತ್ಪರ್ಯ:-** ಉಪಾಧಿಯಾದ ಅಹಂಕಾರಕ್ಕಾದರೂ ಸತ್ಯತ್ವವು ಸಂಭವಿಸುವದಿಲ್ಲ. ಯಾಕಂದರೆ, ಸಚ್ಚಿದಾನಂದ ಸ್ವರೂಪನಾದ ಆತ್ಮನಿಗಿಂತಲೂ, ಭಿನ್ನವಾದದ್ದು ಯಾವದೇ ಇರಲಿ. ಅದು ಮಿಥ್ಯೆಯೆಂದು ತಿಳಿ. ಯಾಕಂದರೆ, ಆತ್ಮಭಿನ್ನವಾದದ್ದು ಕಲ್ಪಿತವಾಗಿದೆ. ಕಲ್ಪಿತ ವಸ್ತು ಮಿಥ್ಯೆಯೇ ಆಗುತ್ತದೆ. ಅದು ಎಂದಿಗೂ ಸತ್ಯವಾಗದು. ಆದ್ದರಿಂದ ಧರ್ಮಸಹಿತ ಧರ್ಮಿಯಾದ ಅಹಂಕಾರವು ಮಿಥ್ಯೆಯಾಗಿದೆ.

**ಉಪಾಧಿ ನಿರಾಕರಣ ನಿರೂಪಣೆ ಸೂತ್ರ ೩ ಕ್ಕೆ, ತ್ರಿವಿದಿ ೩೧.**

---

**ಬಳಿಕ,** ಶಿಷ್ಯನು—‘‘ಉಪಾಧಿಯಾದ ಅಹಂಕಾರವಾಗಲಿ, ಆಥವಾ ಅದರ ಧರ್ಮವಾದ ಗಮನಾಗಮನರೂಪ ಸಂಸಾರವಾಗಲಿ, ಇದೆಲ್ಲವು ಆತ್ಮನಿಗೆ ಭಿನ್ನವಾಗಿರುವದರಿಂದ ಕಲ್ಪಿತವಾಗಿದೆ. ರಜ್ಜು ಸರ್ಪದಂತೆ ಭ್ರಾಂತಿಮಯ ಮಿಥ್ಯೆಯಾಗಿರುತ್ತದೆಂದು ಹೇಳಿದಿರಿ. ಆತ್ಮನಿಗೆ ಭಿನ್ನವಾಗಿ ತೋರುವ ದೃಶ್ಯ ಪ್ರಪಂಚವು ಮಿಥ್ಯೆಯೆಂದು, ತಾವು ಜ್ಞಾನದಿಂದ ನಿಶ್ಚಯವಾಗಿ ತಿಳಿದಾಗ್ಯಾದರೂ, ಇದರ ಪ್ರತೀತಿ ಮಾತ್ರ ಇದ್ದೇ ಇರುತ್ತದೆ. ಆದ್ದರಿಂದ ಇದು ಭ್ರಾಂತಿಮಯವೆಂದು ಹೇಗೆ ಹೇಳಿ

ದಿರಿ ? ಹಾಗೆ ಆಗಿದ್ದರೆ, ರಜ್ಜು ಜ್ಞಾನವಾದೊಡನೆ ಸರ್ಪವು ತೋರದಂತೆ, ಬ್ರಹ್ಮಾತ್ಮರ ಏಕತ್ವ ಜ್ಞಾನವಾದೊಡನೆ ಇದೆಲ್ಲವು ತೋರಬಾರದಿತ್ತು. ತೋರುವದರಿಂದ ಭ್ರಾಂತಿಮಯವು ಹೇಗೆ?'' ಎಂದು ಪ್ರಶ್ನೆಯನ್ನು ಮಾಡಿದರೆ–

**ಗುರುಗಳು:-** ಮಿಥ್ಯೆ ನಿಶ್ಚಯ ಜ್ಞಾನಾಂತರ ಭ್ರಾಂತಿ ಪದಾರ್ಥಗಳು ಪ್ರತೀತಿಯಾಗಬಾರದೆಂಬ ನಿಯಮವಿಲ್ಲ. ಪ್ರತೀತಿಯಿರುತ್ತದೆ. ಹೇಗೆಂದರೆ; ರಕ್ತಸ್ಫಟಿಕವೆಂಬಲ್ಲಿ ಸ್ಫಟಿಕವು ರಕ್ತವರ್ಣವಲ್ಲ, ಶುಭ್ರವಾಗಿದೆಯೆಂದು ನಿಶ್ಚಯವಾಗಿ ತಿಳಿದರೂ, ಅದರಲ್ಲಿ ತೋರುವ ಕೆಂಪು ಮಾತ್ರ ಪ್ರತೀತಿಯಾಗುತ್ತಿರುವಂತೆ ತೋರುತ್ತಿರುತ್ತದೆ. ರಜ್ಜುಸರ್ಪ ದೃಷ್ಟಾಂತವು ನಿರುಪಾಧಿಕವಾಗಿದೆ. ರಕ್ತಸ್ಫಟಿಕ ದೃಷ್ಟಾಂತವು ಸೋಪಾಧಿಕವಾಗಿದೆ. ನಿರುಪಾಧಿಕದಲ್ಲಿ ಜ್ಞಾನ ಸಮಕಾಲಕ್ಕೆ ಭ್ರಮ ನಿವೃತ್ತಿಯಾಗುತ್ತದೆ. ಸೋಪಾಧಿಕದಲ್ಲಿ ಮಾತ್ರ ಜ್ಞಾನವಾದರೂ ಪ್ರತೀತಿಯಿರುತ್ತದೆ. ಆತ್ಮಭಿನ್ನ ಸರ್ವದೃಶ್ಯ ಪ್ರಪಂಚವು ಮಿಥ್ಯೆಯೆಂದು ತಿಳದರೂ, ಪ್ರತೀತಿ ಮಾತ್ರ ಇದ್ದೇ ಇರುತ್ತದೆ" ಎಂದು ಉತ್ತರ ಹೇಳಿದರು.

**ಶಿಷ್ಯನು:-** ''ರಕ್ತಸ್ಫಟಿಕ ದೃಷ್ಟಾಂತದಲ್ಲಿ ಕೆಂಪು ತೋರಬೇಕಾದರೆ, ಆ ಸ್ಫಟಿಕದ ಹತ್ತರ ದಾಸಾಣದ ಹೂವು ಸಮೀಪದಲ್ಲಿರುವದರಿಂದ ಹಾಗೆ ತೋರುತ್ತದೆ. ಅದೇ ಹೂವು ದೂರದಲ್ಲಿ ಇದ್ದರೆ, ಕೆಂಪು ಸ್ಫಟಿಕದಲ್ಲಿ ತೋರಲಾರದು. ಅದರಿಂದ ಸಮೀಪತ್ವ ನಿಮಿತ್ತ ಮೂಲಕ ಕೆಂಪು ಸ್ಫಟಿಕದಲ್ಲಿ ತೋರಿದಂತೆ, ಸರ್ವವೂ ಮಿಥ್ಯೆಯೆಂಬ ಜ್ಞಾನಾನಂತರದಲ್ಲಿಯೂ ದೃಶ್ಯ ಪ್ರಪಂಚವು ತೋರಬೇಕಾದರೆ, ಇದಕ್ಕೆ ನಿಮಿತ್ತವು ಯಾವದಿರುವದು ? ಅದನ್ನು ಹೇಳಿರಿ'' ಎಂದು ಕೇಳಲು-

**ಗುರುಗಳು:-** ಸಾನ್ನಿಧ್ಯ ನಿಮಿತ್ತದಿಂದ ಕೆಂಪು ಸ್ಫಟಿಕದಲ್ಲಿ ತೋರಿದಂತೆ, ಪ್ರಾರಬ್ಧ ಕರ್ಮ ನಿಮಿತ್ತಮೂಲಕ ದೃಶ್ಯಪ್ರಪಂಚವು, ಮಿಥ್ಯೆಯಾದರೂ, ಪ್ರತೀತಿಯಾಗುತ್ತಿರುತ್ತದೆ. ಹೀಗೆ ಪ್ರತೀತಿಯಾಗುವದರಿಂದ ಏನೂ ಹಾನಿಯಿಲ್ಲ. ಯಾಕಂದರೆ, ಸುಟ್ಟ ಅರಿವೆಯಂತೆ ಜ್ಞಾನಬಾಧ್ಯವಾದ ಜಗತ್ತು ಪ್ರತೀತಿಯಾದರೂ ಬಾಧಕವಿಲ್ಲ. ಕಿಂತು, ಇಂದ್ರಜಾಲದಂತೆ ವಿನೋದಕ್ಕೆ ಕಾರಣವಾಗಿರುತ್ತದೆ.

**ಶಿಷ್ಯನು:-** ಅಜ್ಞಾನ ಕಾಲದಲ್ಲಿ ದೃಶ್ಯಪ್ರಪಂಚವು ತೋರುತ್ತಿರುವಂತೆ, ಜ್ಞಾನಕಾಲದಲ್ಲಿಯೂ ತೋರಿದ ಮೇಲೆ, ಜ್ಞಾನದಿಂದ ಪ್ರಯೋಜನವೇನು ? ತೋರದ ಹಾಗೆ ಆದರೇನೇ ಪ್ರಯೋಜನವುಂಟು. ಯಾಕಂದರೆ, ದೃಶ್ಯಪ್ರಪಂಚವು ಅಜ್ಞಾನ ಕಾಲದಲ್ಲಿ ಸತ್ಯಬುದ್ಧಿಗೆ ವಿಷಯವಾಗಿತ್ತು. ಈಗ ಜ್ಞಾನಕಾಲದಲ್ಲಿ ಮಿಥ್ಯಾಬುದ್ಧಿಗೆ ವಿಷಯವಾಗುತ್ತದೆ. ಆದ್ದರಿಂದ ಭೇದವುಂಟೆಂದು ಹೇಳಬಹುದು.

ಆದ್ದರಿಂದ ಜ್ಞಾನಾ ಜ್ಞಾನ ಉಭಯು ಕಾಲಗಳಲ್ಲಿಯೂ ಪ್ರತೀತಿ ಮಾತ್ರ ಸಮಾನ ವಿರುತ್ತದೆ. ಆದರಿಂದ ವಿಶೇಷವೇನೂ ಇಲ್ಲ" ಎಂದು ಶಂಕೆ ಮಾಡಲು—

**ಗುರುಗಳು:-** "ಹಾಗಾದರೆ, ಈ ಮಿಥ್ಯಾದೃಶ್ಯ ಪ್ರಪಂಚದ ಪ್ರತೀತಿ ಯಾಗದೆ ಹೋಗಬೇಕೆಂಬ ಇಚ್ಛೆಯು ನಿನಗಿದ್ದರೆ, ಆ ಸೋಪಾಧಿಕ ಸಂಸಾರದ ಪ್ರತೀತಿಯನ್ನು ಕೆಡಿಸುವಂಥಾ ಷಟ್ ಸಮಾಧಿಗಳನ್ನು ಹೇಳುತ್ತೇನೆ. ಅವುಗಳನ್ನು ಚನ್ನಾಗಿ ಏಕಾಗ್ರ ಬುದ್ಧಿಯಿಂದ ಕೇಳು" ಎಂದು ಹೇಳುತ್ತಾರೆ.

**ಸೂತ್ರ॥ ಸೋಪಾಧಿಯೂದ ಸಂಸಾರವಂ ಕೆಡಿಸಲ್ಕಿ।**
**ರೂಪಿಸುವೆನಾ ಸಮಾಧಿಗಳನಿಲ್ಲಿ ॥**

**ಟೀಕಾ:-** ಸೋಪಾಧಿಯಾದ=ಉಪಾಧಿಯಿಂದೊಡಗೂಡಿದ, ಸಂಸಾರವಂ= ಪ್ರಪಂಚವನ್ನು, ಕೆಡಿಸಲ್=ನಾಶಮಾಡುವದಕ್ಕಾಗಿ, ಇಲ್ಲಿ = ಇದರಲ್ಲಿ, ಸಮಾಧಿ ಗಳನು=ಜೀವೇಶ್ವರರೈಕ್ಯರೂಪ ಸಮಾಧಿಗಳನ್ನು, ನಿರೂಪಿಸುವೆನು=ಹೇಳುತ್ತೇನೆ.

**ತಾತ್ಪರ್ಯ:-** ಸೋಪಾಧಿಕ ಸಂಸಾರವನ್ನು ಕೆಡಿಸುವದಕ್ಕಾಗಿ ಆರು ಸಮಾಧಿಗಳುಂಟು. ಅವುಗಳನ್ನು ಹೇಳುತ್ತೇನೆ. ಕೇಳು. ಅವು ಜೀವ, ಮತ್ತು ಈಶ್ವರ, ಇವರ ಸ್ವರೂಪವನ್ನು ಬೋಧಿಸುತ್ತಾ ಉಭಯರ ಅಭೇದವನ್ನು ಮಾಡು ವಂಥವುಗಳಾಗಿವೆ. ಆ ಜೀವೇಶ್ವರರ ಅಭೇದ ಚೈತನ್ಯಾಕಾರ ವೃತ್ತಿ ಸ್ಥಿತಿಯಿಂದಿ ರಲು; ದೃಶ್ಯ ಜಡ ಪ್ರಪಂಚವು ತೋರದೇ ಹೋಗುತ್ತದೆ. ಅದರಿಂದ ಜ್ಞಾನ ಯೋಗಿಯ ಚಿತ್ತವೃತ್ತಿಯು ಒಳಹೊರಗೆ ಎಲ್ಲ ಕಡೆಗೂ ಚೈತನ್ಯರೂಪದಿಂದ ಇರಲು; ಭೇದರೂಪ ಪ್ರಪಂಚಭಾನವು ಅಡಗಿ ಹೋಗುತ್ತದೆ. ಅಂಥಾ ಆರು ಸಮಾಧಿಗಳನ್ನು ಹೇಳುತ್ತೇನೆ. ಕೇಳು.

**ಬಳಿಕ:-** ಉಪಾಧಿ ಸಂಬಂಧವಾದ ಸಂಸಾರವನ್ನು ನಿವೃತ್ತಿಮಾಡುವಂಥಾ ಸಮಾಧಿಯನ್ನು ಹೇಳುತ್ತೇನೆಂದು ಪ್ರತಿಜ್ಞಾ ಮಾಡುತ್ತಾರೆ.

**ತನುಜ ಕೇಳೌಪಾಧಿಯೆನಿಸುತಿಹ ಸಂಸಾರ।**
**ವಿನಿತಿಲ್ಲದಂತೆ ಮಾಳ್ಪ ಸುಸಮಾಧಿಯಂ।**
**ನಿನಗೆ ನಾನೊರವೆನೊಲಿದಿಲ್ಲಿ ॥೧॥**

**ಟೀಕಾ:-** ತನುಜ ಕೇಳ್=ಶಿಷ್ಯನೇ ಕೇಳು, ಔಪಾಧಿಯೆನಿಸುತಿಹ=ಉಪಾಧಿ ಸಂಬಂಧವೆಂದು ಹೇಳಿಸಿಕೊಳ್ಳುವ, ಸಂಸಾರವು=ಪ್ರಪಂಚವು, ಇನಿತಿಲ್ಲದಂತೆ= ಕಿಂಚಿತ್ತಾದರೂ ತೋರದ ಹಾಗೆ, ಮಾಳ್ಪ=ಮಾಡುವ, ಸುಸಮಾಧಿಯಂ = ಐಕ್ಯ ಲಕ್ಷಣ ಸಮಾಧಿಯನ್ನು, ನಿನಗೆ=ನಿನಗೆ, ಒಲಿದು=ಪ್ರಸನ್ನನಾಗಿ, ಇಲ್ಲಿ=ಈ ಸೂತ್ರ ದಲ್ಲಿ, ಆನು=ನಾನು, ಒರೆವೆನು=ತಿಳಿಸುತ್ತೇನೆ.

**ತಾತ್ಪರ್ಯ:-** ಉಪಾಧಿ ಸಂಬಂಧವಾದ ಈ ದೃಶ್ಯ ಪ್ರಪಂಚವು ಏನೂ ತೋರದ ಹಾಗೆ ಮಾಡಲಿಕ್ಕೆ ಬರುತ್ತದೆ. ಆ ಸಾಧನವು ಯಾವದು? ಎಂದು ಕೇಳಿದರೆ, ಸುಸಮಾಧಿಯು ಆಗಿರುತ್ತದೆ. ಇಲ್ಲಿ 'ಸು' ಎಂಬ ವಿಶೇಷಣವು ಯೋಗಾಭ್ಯಾಸದಿಂದ ತೋರುವ ಸಮಾಧಿಗೆ ಈ ಜ್ಞಾನ ಸಮಾಧಿಯು ವಿಲಕ್ಷಣವೆಂದು ತಿಳಿಸುವದಕ್ಕಾಗಿ ಕೊಟ್ಟಿರುತ್ತದೆ. ಅಂದರೆ ವೃತ್ತಿಯು ಒಳಹೊರಗೆ ಹೋದರೂ, ಅಲ್ಲಲ್ಲಿ ಶಿವಜೀವರ ಐಕ್ಯಾನುಸಂಧಾನವೇ ಆಗಿ, ಅಖಂಡ ಚೈತನ್ಯಾಕಾರ ವೃತ್ತಿಯೇ ಇರುವದರಿಂದ, **ಸುಸಮಾಧಿ**ಯೆನಿಸುವದು. ಈ ಸಮಾಧಿಯ ವಿಚಾರವನ್ನು ಈ ಸೂತ್ರದಲ್ಲಿ ವಿಸ್ತಾರಪೂರ್ವಕ ತಿಳಿಸುತ್ತೇನೆಂದು ನಾಮನಿರ್ದೇಶ ಮಾಡಿದ್ದಾರೆ.

**ಬಳಿಕ,** ಸಮಾಧಿ ಎಂಬ ಈ ಶಬ್ದಕ್ಕೆ ತಮಗೆ ಸಮ್ಮತವಾದ ಅರ್ಥವನ್ನು ಪ್ರತಿಪಾದನ ಮಾಡುತ್ತಾರೆ.

**ಪರಮ ಜೀವಾತ್ಮರೀರ್ವರು ಸಮತೆಯಾಗಲದು।**
**ವರ ಸಮಾಹಿತೆಯೆನಿಸುವದಾ ಸಮತೆಯೆನ।**
**ಲೆರಡೆಂಬ ಮತಿಯು ಲಯವೈಸೆ** ॥೨॥

**ಟೀಕಾ:-** ಪರಮ ಜೀವಾತ್ಮರೀರ್ವರು = ಜೀವೇಶ್ವರರಿಬ್ಬರು, ಸಮತೆಯಾಗಲ್=ಐಕ್ಯರಾಗಲು, ಅದು ವರಸಮಾಹಿತೆಯೆನಿಸುವದು = ಅದು ಯೋಗ ಸಮಾಧಿಗಿಂತಲೂ ಶ್ರೇಷ್ಠ ಸಮಾಧಿಯೆನಿಸುತ್ತದೆ, ಆ ಸಮತೆಯೆನಲ್ = ಆ ಸಮಾಧಿಯು ಅಂದರೆ, ಎರಡೆಂಬ=ಭಿನ್ನವೆಂಬ, ಮತಿಯು=ಬುದ್ಧಿಯು, ಲಯವೈಸೆ= ನಾಶವಾಗಿರುತ್ತದೆಂದು ತಿಳಿ.

**ತಾತ್ಪರ್ಯ:-** ಇಲ್ಲಿ ಸಮಾಧಿಯೆಂಬ ಶಬ್ದಕ್ಕೆ ಯೋಗಶಾಸ್ತ್ರದಲ್ಲಿ ಹೇಳಿದ, ಯಮಾದಿ ಸಾಧನಗಳಿಂದ ಸಾಧ್ಯವಾದ ಸಮಾಧಿಯೆಂಬರ್ಥವಲ್ಲ. ಮತ್ತೇನಂದರೆ; ಜೀವಾತ್ಮ ಮತ್ತು ಪರಮಾತ್ಮ ಇವರ ಭೇದಬುದ್ಧಿಯು ಹೋಗಿ, ಅಭೇದ ಸಮರಸ ಸ್ಥಿತಿಯಿಂದ ಇರುವದಕ್ಕೆ **ಸಮಾಧಿ**ಯೆಂಬ ಹೆಸರುಂಟು. ಇಂಥಾ ಜೀವೇಶ್ವರರ ಐಕ್ಯಲಕ್ಷಣ ಸಮಾಧಿಯು ಆಗಬೇಕಾದರೆ; ಜೀವಬೇರೆ ಈಶ ಬೇರೆ ಎಂಬ ಭೇದ ಬುದ್ಧಿಯು ಅಡಗಬೇಕಾಗುತ್ತದೆ. ಭೇದಬುದ್ಧಿಯು ನಾಶವಾಗಬೇಕಾದರೆ, ಜ್ಞಾನದಿಂದಲೇ ನಾಶವಾಗುತ್ತದೆ. ಆದ್ದರಿಂದ ಈ ಸಮಾಧಿಯು ಜ್ಞಾನದಿಂದ ಲಭ್ಯವಾದ್ದರಿಂದ ಸರ್ವೋತ್ಕೃಷ್ಟವಾಗಿರುತ್ತದೆಂದು ತಿಳಿ.

**ಬಳಿಕ,** ಆ ಸಮಾಧಿಯು ಸಗುಣವೆಂದು ನಿರ್ಗುಣವೆಂದು ಎರಡು ಪ್ರಕಾರವಾಗಿರುತ್ತದೆಂದು ನಿರೂಪಣ ಮಾಡುತ್ತಾರೆ.

**ನೀನರಿವುದೌಪಾಧಿ ಹಾನಿಯುಹುದಕ್ಕೆ ಪೇ ।**
**ಳ್ವಾ ನಿಜ ಸಮಾಧಿ ಸಗುಣ ನಿರ್ಗುಣವೆಂದು ।**
**ತಾನಿರ್ಪುದೆರಡು ತೆರನಾಗಿ ॥೩॥**

**ಟೀಕಾ:-** ಔಪಾಧಿಹಾನಿಯುಹುದಕ್ಕೆ = ಉಪಾಧಿ ಸಂಬಂಧ ಸಂಸಾರವು ನಾಶವಾಗುವದಕ್ಕೆ, ಪೇಳ್ವ = ಹೇಳುವ, ಆ ನಿಜಸಮಾಧಿ = ಖರೇ ಸಮಾಧಿಯು, ಸಗುಣವೆಂದು=ಸವಿಕಲ್ಪವೆಂದು, ನಿರ್ಗುಣವೆಂದು=ನಿರ್ವಿಕಲ್ಪವೆಂದು, ಎರಡು ತೆರನಾಗಿ=ಎರಡು ರೀತಿಯಾಗಿ, ತಾನಿರ್ಪುದು=ಅದು ಇರುವದು, ನೀನರಿವುದು= ನೀನು ಅದನ್ನು ತಿಳಿ.

**ತಾತ್ಪರ್ಯ:-**ಉಪಾಧಿಸಂಬಂಧವಾದ ಸಂಸಾರದ ನಿವೃತ್ತಿಗೆ ಸಾಧನವಾದ ಯಾವ ನಿಜವಾದ ಸಮಾಧಿಯುಂಟೋ, ಅದು ಎರಡು ರೀತಿಯಾಗಿರುತ್ತದೆ. ಒಂದು ವೃತ್ತಿಸಹಿತವ್ಯವಹಾರ ವಿದ್ದುದರಿಂದ **ಸವಿಕಲ್ಪ ಸಮಾಧಿ**ಯೆಂದೂ, ಮತ್ತೊಂದು ವೃತ್ತಿವ್ಯವಹಾರ ನಿಂತುಕೇವಲ ಸ್ವರೂಪ ಸ್ಥಿತಿಯಿಂದಿರಲು **ನಿರ್ವಿಕಲ್ಪ**ವೆಂದೂ, ಹೀಗೆ ಆ ಸಮಾಧಿಯು ಎರಡು ಪ್ರಕಾರವಾಗಿರುತ್ತದೆ.

**ಬಳಿಕ,** ಆ ಸಗುಣ ಸಮಾಧಿಯು ದೃಶ್ಯಾನುವೇದವೆಂದೂ, ಶಬ್ದಾನು ವೇದವೆಂದೂ ಎರಡುವಿಧವಾಗಿರುತ್ತದೆಂದು ಹೇಳುತ್ತಾರೆ.

**ಬೋಧಾರ್ಹ ದೃಶ್ಯಾನು ವೇದವಾ ಶಬ್ದಾನು ।**
**ವೇದವೆಂದುಭಯುವಾಗಿ ಸಗುಣಾತ್ಮಕ ಸ ।**
**ಮಾಧಿ ತಾನೊಪ್ಪುತಿಹುದಿಂತು ॥೪॥**

**ಟೀಕಾ:-** ಬೋಧಾರ್ಹ=ಬೋಧಿಸಲಿಕ್ಕೆ ಯೋಗ್ಯನಾದ ಶಿಷ್ಯನೇ! ಸಗುಣಾತ್ಮಕ ಸಮಾಧಿ=ಸಗುಣ ಸಮಾಧಿಯು,ದೃಶ್ಯಾನು ವೇದವು=ದೃಶ್ಯ ವಸ್ತುಗಳನ್ನು ಅನುಸರಿಸಿ ತಿಳಿಯುವದೆಂದೂ, ಶಬ್ದಾನು ವೇದವು=ಶಬ್ದವು ಅಂದರೆ ಶ್ರುತಿಯು ಅದನ್ನು ಅನುಸರಿಸಿ ಅರಿಯುವದೆಂದೂ, ಎಂದು=ಹೀಗೆಂದು, ಉಭಯುವಾಗಿ= ಎರಡು ವಿಧವಾಗಿ, ಇಂತು=ಮುಂದೆ ಹೇಳುವ ಪ್ರಕಾರ, ತಾನೊಪ್ಪುತಿಹುದು=ಅದು ಶೋಭಾಯಮಾನವಾಗಿರುವದು.

**ತಾತ್ಪರ್ಯ:-** ಕಾಣಿಸುವ ದೃಶ್ಯ ವಸ್ತುಗಳನ್ನು ಅನುಸರಿಸಿ, ಚೈತನ್ಯ ಸ್ವರೂಪಾಕಾರ ವೃತ್ತಿಯನ್ನು ಮಾಡುವದರಿಂದ, **ದೃಶ್ಯಾನು ವೇದ**ವೆಂದು ಹೇಳಲ್ಪಟ್ಟಿತು. ಶ್ರುತಿಯನ್ನು ಶ್ರವಣಮಾಡಿ, ಅದರ ದ್ವಾರಾ ಸ್ವರೂಪಾಕಾರ ವೃತ್ತಿಯನ್ನು ಮಾಡುವದರಿಂದ, **ಶಬ್ದಾನು ವೇದ**ವೆಂದು ಹೇಳಲ್ಪಟ್ಟಿತು. ಈ ವಿಧದಿಂದ ಆ ಸಗುಣ ಸಮಾಧಿಯು ಎರಡು ರೀತಿಯಾಗಿರುತ್ತದೆ.

ಬಳಿಕ, ಎರಡು ಸವಿಕಲ್ಪ ಸಮಾಧಿ ಒಂದು ನಿರ್ವಿಕಲ್ಪ ಸಮಾಧಿ ಕೂಡಿ ಮೂರಾದವು. ಬಳಿಕ ಹೊರಗೆ ಮೂರು ಒಳಗೆ ಮೂರು ಆಗಿ, ಆರು ಸಮಾಧಿಗಳು ಇರುತ್ತವೆ. ಅವುಗಳನ್ನು ಹೇಳುತ್ತೇನೆ ಕೇಳು.

**ಸವಿಕಲ್ಪವೆರಡು ಮತ್ತವಿಕಲ್ಪ ವೊಂದಿಂತು ।**
**ತ್ರಿವಿಧರೂಪಿಂದೆ ಪೊರಗೊಳಗೆ ತೋರುತಿಹ ।**
**ವಿವರಂದವರುಪುವೆನು ಕೇಳು ॥೫॥**

**ಟೀಕಾ:-** ಸವಿಕಲ್ಪವೆರಡು=ಎರಡು ಸವಿಕಲ್ಪ ಸಮಾಧಿಗಳು, ಮತ್ತು= ಅನಂತರ, ಅವಿಕಲ್ಪವೊಂದು=ನಿರ್ವಿಕಲ್ಪವೊಂದು, ಇಂತು=ಈ ಪ್ರಕಾರ, ತ್ರಿವಿಧರೂಪಿಂದೆ=ಮೂರು ರೂಪಗಳಾಗಿ, ಪೊರಗೊಳಗೆ=ಒಳಗೂ ಹೊರಗೂ, ತೋರುತಿಹವು=ತೋರುತ್ತಿರುವವು, ಇವರ=ಈ ಸಮಾಧಿಗಳ, ಅಂದವ=ಸ್ವರೂಪವನ್ನು ಅರುಪುವೆನು=ತಿಳಿಸುತ್ತೇನೆ, ಕೇಳು=ಆಲಿಸು,

**ತಾತ್ಪರ್ಯ:-** ಸವಿಕಲ್ಪ ಸಮಾಧಿಗಳು ಎರಡು, ನಿರ್ವಿಕಲ್ಪ ಸಮಾಧಿಯು ಒಂದು, ಹೀಗೆ ಮೂರು ಸಮಾಧಿಗಳಿರುತ್ತವೆ. ಅನಂತರ ಈ ಸಮಾಧಿಗಳು ಅಂತರದಲ್ಲಿ ಮೂರಂಟು. ಹೊರಗೆ ಮೂರುಂಟು. ಇವೆಲ್ಲಾ ಶೇರಿಕೊಂಡರೆ; ಆರು ಸಮಾಧಿಗಳು ಆಗುತ್ತವೆ. ಅವುಗಳ ಸ್ವರೂಪವನ್ನು ಮುಂದೆ ತಿಳಿಸುತ್ತೇನೆ=ಏಕಾಗ್ರ ಬುದ್ಧಿಯಿಂದ ಕೇಳು. ಎಂಬ ಭಾವವು.

**ಬಳಿಕ,** ಅಂತರದೃಶ್ಯಾನುವೇದ ಸವಿಕಲ್ಪ ಸಮಾಧಿಯನ್ನು ನಿರೂಪಣ ಮಾಡುತ್ತಾರೆ.

**ಮನದೊಳೆಲ್ಲಾಗಳುಂ ಜನಿಪ ಕಾಮಾದಿಗಳು ।**
**ತನಗೆ ದೃಶ್ಯಂಗಳವಕೆ ಸಾಕ್ಷಿಕನು ತಾ ।**
**ನೆನಲದೇ ಮೊದಲ ಸವಿಕಲ್ಪ ॥೬॥**

**ಟೀಕಾ:-** ಮನದೊಳು=ಮನಸ್ಸಿನಲ್ಲಿ, ಎಲ್ಲಾಗಳುಂ=ಯಾವಾಗಲೂ, ಜನಿಪ= ಹುಟ್ಟುವ, ಕಾಮಾದಿಗಳು = ಕಾಮಕ್ರೋಧಾದಿವೃತ್ತಿಗಳು, ತನಗೆ=ಸಾಕ್ಷಿಯಾದ ತನಗೆ, ದೃಶ್ಯಂಗಳು=ಅರಿಸಿಕೊಳ್ಳುವವು, ಅವಕೆ = ಆ ಕಾಮಾದಿ ವೃತ್ತಿಗಳಿಗೆ, ಸಾಕ್ಷಿಕನು ತಾನು ಎನಲ್ = ನಾನೇಸಾಕ್ಷಿ ಚೈತನ್ಯರೂಪನೆಂದು ತಿಳಿಯಲಾಗಿ, ಅದೇ ಮೊದಲ ಸವಿಕಲ್ಪ=ಅದೇ ಒಂದನೆಯ ದೃಶ್ಯಾನು ವೇದ ಸವಿಕಲ್ಪ ಸಮಾಧಿಯೆನಿಸುವದು.

**ತಾತ್ಪರ್ಯ:**- ಅಂತರ ದೃಶ್ಯಾನುವೇದ ಸವಿಕಲ್ಪ ಸಮಾಧಿಯನ್ನು ಹೇಳುತ್ತಾರೆ. ಹೇಗಂದರೆ;ಹೃದಯವಾಸಿಯಾದ ಮನಸ್ಸಿನಲ್ಲಿ ಕಾಮ, ಕ್ರೋಧ, ಸುಖ, ದುಃಖಾಕಾರ ವೃತ್ತಿಗಳು ಉದಯಗಳಾಗುತ್ತವೆ. ಈ ವೃತ್ತಿಗಳು ಏಕಕಾಲದಲ್ಲಿ ತೋರದೆ, ಒಂದು ಹೋದಮೇಲೆ ಇನ್ನೊಂದು ಹೀಗೆ ವೃತ್ತಿಗಳು ಬರುತ್ತಾ ಹೋಗುತ್ತಾ ಇರುತ್ತವೆ. ಈ ರೀತಿಯಾಗಿ ವೃತ್ತಿಗಳು ಭಾವಾಭಾವರೂಪದಿಂದ ತಿಳಿಸಿಕೊಳ್ಳುತ್ತವೆ. ಆ ವೃತ್ತಿಗಳಿಗೆ ಸಾಕ್ಷಿಯಾಗಿ ಅವುಗಳನ್ನು ಅರಿಯುವವನು ತಾನೇ ಆಗಿರುತ್ತಾನೆ. ಹೀಗೆ ವೃತ್ತಿಗಳು ತೋರಿದಕಾಲದಲ್ಲಿ, ವೃತ್ತಿಸಾಕ್ಷಿಯಾದ ಪ್ರತ್ಯಗಾತ್ಮನೇ ನಾನೆಂದು, ಸಾಕ್ಷಿಸ್ವರೂಪ ಸ್ಮರಣಚಿಂತನವನ್ನು ಮಾಡಲು; ಆ ವೃತ್ತಿಗಳು ಏನೊಂದು ಕ್ರಿಯೆಯನ್ನು ಮಾಡದೆ, ತೋರಿ ಅಡಗಿ ಹೋಗುತ್ತವೆ. ಆಗ್ಯೆ ಸಾಕ್ಷಿಪರಮಾತ್ಮ ಸ್ವರೂಪದಿಂದ ತಾನೊಬ್ಬನೇ ಉಳಿಯುವನು. ಹೀಗೆ ಸ್ವಸ್ವರೂಪಾಕಾರ ಸ್ಥಿತಿಯಿಂದ ಇರಲು; **ಸಮಾಧಿಯೆಂದು** ಹೇಳಲ್ಪಡುತ್ತದೆ. ಇದರಲ್ಲಿ ಕಾಮಾದಿ ವೃತ್ತಿಗಳೊಡನೆ ತಾದಾತ್ಯನಾಗಿ ನಾನು ಕಾಮೀ, ಕ್ರೋಧಿ, ಸುಖೀ, ದುಃಖೀ, ಅನ್ನುವವನೇ **ಜೀವನು.** ಈ ಕಾಮಾದಿ ವೃತ್ತಿಗಳು ದೃಶ್ಯಗಳಾಗಿವೆ. ನನ್ನಿಂದ ಅರಿಸಿಕೊಳ್ಳುತ್ತವೆ. ಆದ್ದರಿಂದ ಇವು ನಾನಲ್ಲ. ಇವುಗಳಿಗೆ ಸಾಕ್ಷಿಯಾಗಿದ್ದೇನೆ. ಅನ್ನುವವನೇ **ಪರಮಾತ್ಮನು.** ಅವಿವೇಕದಿಂದ ವೃತ್ತಿ ವಿಶಿಷ್ಟನಾದರೆ **ಜೀವನೆನಿಸುವನು.** ಅವನೇ ವಿವೇಕದಿಂದ ವೃತ್ತಿ ಸಾಕ್ಷಿಯಾದರೆ, **ಪರಮಾತ್ಮನೆ**ನಿಸುವನು. ಆದ್ದರಿಂದ ಈ ಅಂತರದಲ್ಲಿ:ತೋರುವ ವೃತ್ತಿಗಳಿಗೆ ಸಾಕ್ಷಿ ಚೈತನ್ಯಸ್ವರೂಪನಿದ್ದೇನೆ. ವೃತ್ತಿಗಳು ನಾನಲ್ಲ. ನನ್ನಿಂದ ಅರಿಸಿಕೊಳ್ಳುವದರಿಂದ ದೃಶ್ಯವು ಎಂದು ತಿಳಿದು, ಸಾಕ್ಷಿಸ್ವರೂಪದಿಂದಿರಲು ಜೀವನು ಪರಮಾತ್ಮನೊಡನೆ ಅಭೇದನಾಗಿರುತ್ತಾನೆ. ಇದಕ್ಕೆ **ಅಂತರ ದೃಶ್ಯಾನುವಿದ್ಧ ಸವಿಕಲ್ಪ ಸಮಾಧಿಯೆಂದು** ಕರೆಯುತ್ತಾರೆ.

**ಬಳಿಕ,** ಎರಡನೆಯದಾದ ಅಂತರ ಶಬ್ದಾನುವಿದ್ಧ ಸವಿಕಲ್ಪ ಸಮಾಧಿಯನ್ನು ನಿರೂಪಣ ಮಾಡುತ್ತಾರೆ.

**ಮಹದಾದಿಯೊಡಗೂಡದಿಹ ಸಚ್ಚಿದಾನಂದ ।**
**ಮಹಪರಂ ಜ್ಯೋತಿಯಾನೆಂಬ ಸಂಧಾನ ।**
**ಮಹುದನಂತರದ ಸವಿಕಲ್ಪ** ॥೭॥

**ಟೀಕಾ:**- ಮಹದಾದಿ=ಅವಿದ್ಯಾ ಅಹಂಕಾರಗಳೊಡನೆ, ಒಡಗೂಡದಿಹ= ಕೂಡದೆ ಇರುವ, ಸಚ್ಚಿದಾನಂದಮಹ=ಸತ್ತು, ಚಿತ್ತು, ಆನಂದ ಸ್ವರೂಪನಾದ, ಪರಂಜ್ಯೋತಿಯು, ಸ್ವಯಂಪ್ರಕಾಶ ಸ್ವರೂಪನು, ಆನೆಂಬ=ನಾನು ಇರುವೆನೆಂಬ,

ಸಂಧಾನವು=ಪುನಃ ಪುನಃ ಸ್ವಯಂಪ್ರಕಾಶ ಸ್ವರೂಪ ಚಿಂತನವು, ಅನಂತರದ= ಎರಡನೆಯ, ಸವಿಕಲ್ಪ= ಅಂತರ ಶಬ್ದಾನುವೇದ ಸವಿಕಲ್ಪ ಸಮಾಧಿಯೆನಿಸುವದು.

**ತಾತ್ಪರ್ಯ:- "ಅತ್ರಾಯಂ ಪುರುಷಃ ಸ್ವಯಂಜ್ಯೋತಿ"** ಅತ್ರ ಅಂದರೆ, ಸ್ವಪ್ನಾವಸ್ಥೆಯಲ್ಲಿ ಈ ಅಪರೋಕ್ಷನಾದ ಆತ್ಮನು ಸ್ವಯಂಪ್ರಕಾಶ ಸ್ವರೂಪದಿಂದ ಇದ್ದಾನೆ. ಎಂದು ಶ್ರುತಿಯು ಹೇಳುತ್ತದೆ. ಸ್ವಪ್ನದಲ್ಲಿ ಸ್ವಯಂ ಪ್ರಕಾಶವಿದ್ದವನು ಜಾಗ್ರಾದಿ ಅವಸ್ಥೆಗಳಲ್ಲಿಯೂ ಇದ್ದಾನೆ. ಆ ಜಾಗ್ರದಲ್ಲಿ ಸೂರ್ಯ, ಚಂದ್ರ ದೀಪ, ವಾಕ್ಕು, ನೇತ್ರ ಮೊದಲಾದ ಜ್ಯೋತಿಗಳ ಸಂಕ್ರಮಣ ವಾಗಿದೆ. ಸ್ವಪ್ನದಲ್ಲಿ ತನ್ನ ಹೊರತು ಬೇರೆ ಯಾವ ಜ್ಯೋತಿಗಳು ಇಲ್ಲ. ಮತ್ತು ಆ ಸ್ವಪ್ನಪ್ರಪಂಚವನ್ನು ತಾನೇ ಸ್ವತಃ ಬೆಳಗುತ್ತಿರುತ್ತಾನೆ. ಇದು ಅನುಭವ ಸಿದ್ಧವದೆ. ಆದ್ದರಿಂದ ಅಂತರದಲ್ಲಿರುವ ಸ್ವಪ್ನಾವಸ್ಥೆಯಲ್ಲಿ ಆತ್ಮನು ಸ್ವಯಂಪ್ರಕಾಶ ನಿರುವನೆಂದು ಹೇಳಿರುತ್ತದೆ. ಈ ಆತ್ಮನು ಅವಿದ್ಯೆಗೂ ಅವಿದ್ಯೆಯ ಕಾರ್ಯವಾದ ತ್ರಿಗುಣಾತ್ಮಕವಾದ ಅಹಂಕಾರಕ್ಕೂ ಭಿನ್ನವಾಗಿ, ಅವುಗಳಿಗೆ ಬೆಳಗುವದರಿಂದ ಬೇರೆಯಾಗಿರುವನು. ಅದರಿಂದ ಸತ್ತು, ಚಿತ್ತು, ಆನಂದಸ್ವರೂಪನು. **"ಅವೇದ್ಯತ್ವೆ ಸತಿ ಅಪರೋಕ್ಷತ್ವಂ ಸ್ವಪ್ರಕಾಶತ್ವಂ"** ಯಾರಿಂದಲೂ ಅರಿಸಿಕೊಳ್ಳದೆ ಅಪ ರೋಕ್ಷನಾಗಿರುವದರಿಂದ, ತಾನು ಸ್ವಪ್ರಕಾಶನು ಆಗಿದ್ದಾನೆ. ಹೇಗಂದರೆ, ಇಲ್ಲಿ ಅವೇದ್ಯವು ಮತ್ತು ಅಪರೋಕ್ಷತ್ವ ಈ ಎರಡು ಪದಗಳನ್ನು ಹೇಳಿದ್ದಾರೆ. ಯಾಕಂದರೆ, ಅತಿವ್ಯಾಪ್ತಿದೋಷ ನಿವಾರಣಕ್ಕಾಗಿ ಹೇಳಿದ್ದಾರೆ. ಅದು ಹೇಗಂದರೆ, ಅವೇದ್ಯವೆ.ಸ್ವಪ್ರಕಾಶವು. ಅಂದರೆ, ವಂಧ್ಯಾಪುತ್ರ ಶಶವಿಷಾಣಗಳಲ್ಲಿ **ಅತಿವ್ಯಾಪ್ತಿ** ಬರುತ್ತದೆ. ಯಾಕಂದರೆ, ಅವು ಎಲ್ಲರಿಗೂ ಅವೇದ್ಯಗಳಾಗಿವೆ. ಈ ಅತಿವ್ಯಾಪ್ತಿ ಯನ್ನು ಕಳೆಯುವದಕ್ಕಾಗಿ **"ಅಪರೋಕ್ಷ"** ಎಂಬ ಪದವನ್ನು ಹಾಕಿರುವರು. ಬಂಜಿಮಗನು ಅಪರೋಕ್ಷನಾಗಿಲ್ಲ. ಅವೇದ್ಯವಿದ್ದು ಅಪರೋಕ್ಷವಾಗಿರಬೇಕೆಂದು ಹೇಳಿದೆ. ಇನ್ನು ಅಪರೋಕ್ಷವಾಗಿರುವದೇ ಸ್ವಯಂಪ್ರಕಾಶವೆಂದು ಹೇಳಿದರೆ, ಘಟಪಟಾದಿಗಳು ಅಪರೋಕ್ಷಗಳಾಗಿವೆ. ಪರಂತು ಅವು ಅವೇದ್ಯಗಳಲ್ಲ. ಕಿಂತು ವೇದ್ಯಗಳಾಗಿವೆ. ಹೀಗೆ ಘಟಾದಿಗಳಲ್ಲಿ ಅಪರೋಕ್ಷತ್ವವದೆ. ಅವೇದ್ಯತ್ವವಿಲ್ಲ. ಆದ್ದರಿಂದ ಅವೇದ್ಯವಾಗಿದ್ದು ಅಪರೋಕ್ಷವಾಗಿರುವದು. **ಸ್ವಯಂಪ್ರಕಾಶವಾಗಿದೆ.** ಎಂಬ **ಲಕ್ಷಣವು** ಹೇಳಿಲ್ಪಟ್ಟಿದೆ. ತಾನು ಇಂಥಾ ಪರಂಜ್ಯೋತಿ ಸ್ವಯಂಪ್ರಕಾಶ ಸ್ವರೂಪನೇ ಇರುತ್ತಾನೆಂಬುದನ್ನು ಶ್ರುತಿಯು ಬೋಧಿಸುತ್ತದೆ. ಈ ಶ್ರುತಿ ವಾಕ್ಯವನ್ನು ಶ್ರವಣಮಾಡಿ, ಆದರ ದ್ವಾರಾ ಸ್ವಯಂಪ್ರಕಾಶಸ್ವರೂಪಾತ್ಮನೇ ನಾನೆಂದು ಅನುಸಂಧಾನ ಮಾಡುವದೇ **ಅಂತರ ಶಬ್ದಾನುವೇದ ಸವಿಕಲ್ಪ ಸಮಾಧಿಯೆನಿಸುವದು.** ಪೂರ್ವದಲ್ಲಿ ಹೇಳಿದಂತೆ ಇಲ್ಲಿಯೂ ಅಜ್ಞಾನಿಯೆಂದು ಅಪ್ರಕಾಶ ಅವಿದ್ಯಾವೃತ್ತಿಯೊಡನೆ ಕೂಡಿರುವನು **ಜೀವನು.** ಇವನು ವಿಚಾರ

ಮಾಡಿ ನಾನು ಸ್ವಯಂಪ್ರಕಾಶನಿರುವೆನೆಂದು ತಿಳಿಯಲು, ಸ್ವಪ್ರಕಾಶ ಪರಮಾತ್ಮನೊಡನೆ ಬೆರತಂತಾಯಿತು. ಆದ್ದರಿಂದ ಜೀವಪರಮರ ಐಕ್ಯಲಕ್ಷಣ ಸಮಾಧಿಯಾಗಿದೆ.

ಬಳಿಕ, ಅಂತರದಲ್ಲಿ ನಿರ್ವಿಕಲ್ಪ ಸಮಾಧಿಯನ್ನು ಪ್ರತಿಪಾದನಮಾಡುತ್ತಾರೆ.

ಸ್ವಾನುಭಾವ ಸುಖದನುಮಾನದಿಂ ಮೊದಲ ಸಂ ।
ಧಾನವೆರಡಿಲ್ಲದಚಲ ದೀಪಿಕೆಯಂತೆ ।
ತಾನಿರ್ಪುದಗುಣ ಸುಸಮಾಧಿ ॥೮॥

ಟೀಕಾ:- ಸ್ವಾನುಭಾವ=ತನ್ನ ಅನುಭವಕ್ಕೆ ಬಂದ, ಸುಖದ=ಸ್ವರೂಪಾಕಾರ ವೃತ್ತಿಯಲ್ಲಿ ಆವಿರ್ಭಾವವಾದ ಆನಂದದ, ಅನುಮಾನದಿಂ=ವೃತ್ತಿಯಲ್ಲಿ ಪ್ರತಿ ಬಿಂಬಿತ ಆನಂದವೇ ಹೀಗಿದ್ದಮೇಲೆ, ಇದಕ್ಕೆ ಬಿಂಬಭೂತವಾದ ತನ್ನ ಆನಂದ ಘನವಾಗಿರುವದೆಂದು ತಿಳಿಯುತ್ತಾ, ಮೊದಲಸಂಧಾನವೆರಡಿಲ್ಲದೆ=ಅಂತರ ದೃಶ್ಯ, ಮತ್ತು ಶಬ್ದ ಇವೆರಡು ಸವಿಕಲ್ಪ ಸಮಾಧಿಗಳ ಅನುಸಂಧಾನವನ್ನು ಬಿಟ್ಟು, ಅಚಲ ದೀಪಿಕೆಯಂತೆ = ಗಾಳಿಲ್ಲದ ಸ್ಥಳದಲ್ಲಿರಿಸಿದ ದೀಪದಂತೆ, ತಾನಿರ್ಪುದು = ತಾನಿ ರುವದು, ಅಗುಣಸುಸಮಾಧಿ=ಇದು ಆಂತರ ನಿರ್ವಿಕಲ್ಪ ಸಮಾಧಿಯೆಂದು ಹೇಳಿಸಿ ಕೊಳ್ಳುತ್ತದೆ.

ತಾತ್ಪರ್ಯ:- ಉಕ್ತ ಪ್ರಕಾರ ದೃಶ್ಯವನ್ನು ಕಂಡು, ಶ್ರುತಿಯನ್ನು ಕೇಳಿ, ಸ್ವರೂಪಾಕಾರ ಚಿತ್ತವೃತ್ತಿಯಲ್ಲಿ ಯಾವ ಆನಂದವು ಪ್ರಕಟವಾಗುತ್ತದೆ. ಈ ಪ್ರತಿ ಬಿಂಬಾನಂದವನ್ನು ಅನುಭವಮಾಡುತ್ತಾನೆ. ಇದಕ್ಕೆ ಸ್ವಾನುಭಾವವೆಂಬ ಹೆಸರು ಬಂದಿರುತ್ತದೆ. ಅನಂತರ ಪ್ರತಿಬಿಂಬ ಆನಂದವೇ ಹೀಗೆ ಇರಲಾಗಿ, ಬಿಂಬಾನಂದವು ಹೇಗಿರಬೇಕು. ಇದಕ್ಕೂ ಎಷ್ಟೋ ಪಾಲು ಅಧಿಕವಾಗಿರಲಿಕ್ಕೇಬೇಕು. ಅದು ಅನು ಭವಮಾಡಲಿಕ್ಕೆ ಬರುವಂಥಾದ್ದು ಅಲ್ಲ. ಯಾಕಂದರೆ ಅದು ಅನುಭವಿಸುವವನ ಸ್ವರೂಪವೇ ಆಗಿರುತ್ತದೆ. ಕಿಂತು, ಉಕ್ತಪ್ರಕಾರ ಅನುಮಾನದಿಂದ ಸ್ಮರಿಸುತ್ತಾನೆ. ಹೀಗೆ ಸ್ಮರಿಸುತ್ತಿರಲು ಮೊದಲಿನ ದೃಶ್ಯ ಶಬ್ದಗಳೆಂಬ ಎರಡರ ಅನುಸಂಧಾನವನ್ನು ಬಿಟ್ಟು, ವೃತ್ತಿಯು ಚಂಚಲತೆಯಿಲ್ಲದೆ ಗಾಳಿಲ್ಲದ ಸ್ಥಳದಲ್ಲಿಟ್ಟ ದೀಪದಂತೆ, ಸ್ವಸ್ವರೂಪಾನು ಸಂಧಾನದಲ್ಲಿರಲು, ಇದು ಆಂತರ ನಿರ್ವಿಕಲ್ಪ ಸಮಾಧಿಯೆಂದು ಹೇಳಿಸಿಕೊಳ್ಳುತ್ತದೆ.

ಬಳಿಕ, ಆಂತರ ಮೂರು ಸಮಾಧಿಗಳನ್ನು ಹೇಳಿ, ಇದರಂತೆ ಬಾಹ್ಯದಲ್ಲಿ ರುವ ಮೂರು ಸಮಾಧಿಗಳನ್ನು ಹೇಳುತ್ತಾರೆ.

ಇಂತು ಯೋಗತ್ರಯವಿವಂತರಂಗದವೆ ನೋ।
ಡಂತೆ ಬಹಿರಂಗದೊಳಗೆ ಸಗುಣ ಸಮಾಧಿ।
ಯಂ ತಿಳಿಯ ಪೇಳುವೆನು ಕೇಳು ||೯||

ಟೀಕಾ:- ಇಂತು=ಈ ರೀತಿ, ಯೋಗತ್ರಯವಿವು=ಈ ಮೂರು ಸಮಾಧಿಗಳು, ಅಂತರಂಗದವೆ=ಒಳಗಿರತಕ್ಕವು ಆಗಿವೆ, ಅಂತೆ=ಇವುಗಳ ಹಾಗೆ, ಬಹಿರಂಗದೊಳಗೆ = ಹೊರಗಾದರೂ, ಸಗುಣ ಸಮಾಧಿಯಂ = ಸಗುಣ ಸಮಾಧಿಯನ್ನು, ತಿಳಿಯ ಪೇಳುವೆನು=ತಿಳಿಯುವ ಹಾಗೆ ಹೇಳುವೆನು, ಕೇಳು=ಆಲಿಸು.

ತಾತ್ಪರ್ಯ:- ದೇಹದ ಒಳಗೆ ಮನಸ್ಸಿನಲ್ಲಿ ಮೂರು ಸಮಾಧಿಗಳನ್ನು ಹೇಳಿದಂತೆ, ಹೊರಗಾದರೂ ಮೂರು ಸಮಾಧಿಗಳಿರುತ್ತವೆ. ಅವುಗಳನ್ನು ನಿನಗೆ ತಿಳಿಯುವಂತೆ ಹೇಳುತ್ತೇನೆ. ಏಕಾಗ್ರಚಿತ್ತದಿಂದ ಕೇಳು ಎಂದು ಹೇಳುತ್ತಾರೆ.

ಬಳಿಕ, ಬಾಹ್ಯದ ದೃಶ್ಯಾನುವಿದ್ಧ ಸವಿಕಲ್ಪ ಸಮಾಧಿಯನ್ನು ಪ್ರತಿಪಾದನ ಮಾಡುತ್ತಾರೆ.

ಪೊರಗೇನನಾದೊಡಂ ಕುರಿತು ತದ್ರೂಪಮಂ।
ಪಿರಿಚುತದರಸ್ತಿ ಭಾತಿಗಳನಾತ್ಮನೆಂ।
ದರಿಯಲೊಂದನೆಯ ಸವಿಕಲ್ಪ ||೧೦||

ಟೀಕಾ:- ಪೊರಗೆ=ಹೊರಗೆ, ಏನನಾದೊಡಂ=ಯಾವದಾದರೊಂದು ವಸ್ತುವನ್ನು ಲಕ್ಷಿಸಿ, ತದ್ರೂಪಮಂ=ಅದರ ನಾಮರೂಪುಗಳನ್ನು, ಪಿರಿಚುತ=ತೆಗೆದು ಹಾಕುತ್ತಾ, ಅದರ=ಆ ಪದಾರ್ಥದ, ಅಸ್ತಿ ಭಾತಿಗಳನು=ಅಸ್ತಿ; ಭಾತಿ, ಪ್ರಿಯಾದಿಗಳನ್ನು ಲಕ್ಷಿಸಿ, ಆತ್ಮನೆಂದು ಅರಿಯಲ್=ಆ ರೂಪವೇ ನಾನೆಂದು ತಿಳಿಯಲು, ಒಂದನೆಯ ಸವಿಕಲ್ಪ=ಇದು ಹೊರಗಿನ ದುಶ್ಯಾನುವೇದ ಸವಿಕಲ್ಪ ಸಮಾಧಿಯೆನಿಸುವದು.

ತಾತ್ಪರ್ಯ:-ವೃತ್ತಿಯು ಹೊರಗೆ ಹೋಗಿ, ಯಾವದಾದರೊಂದು ಪದಾರ್ಥದಲ್ಲಿ ಸಂಯೋಗ ಸಂಬಂಧವುಳ್ಳದ್ದಾಗುತ್ತದೆ. ಆಗ್ಗೆ ಆ ಘಟದಲ್ಲಿ ವೃತ್ತಿಯು ಹೋಗಿರಲಾಗಿ, ಇದು ಘಟವದೆ. (ಅಸ್ತಿ) ತೋರುತ್ತದೆ.(ಭಾತಿ)ಇದು ನನಗೆ ಬೇಕು. (ಪ್ರಿಯ) ಎಂಬದಾಗಿ ವ್ಯವಹಾರವು ಸಂಭವಿಸುತ್ತದೆ. ಆ ಘಟವು ಅಸ್ತಿ, ಭಾತಿ, ಪ್ರಿಯ, ನಾಮ, ರೂಪಗಳೆಂಬ ಐದು ಅಂಶಗಳಿಂದ ಕೂಡಿರುತ್ತದೆ. ಈ ಐದರಲ್ಲಿ ಒಂದಕ್ಕಿದ್ದ ನಾಮರೂಪಗಳು ಮತ್ತೊಂದಕ್ಕೆ ಇರುವದಿಲ್ಲ. ಈ ಕಾರಣದಿಂದ ನಾಮ ರೂಪಗಳು ವ್ಯತಿರೇಕಗಳು ಆಗಿವೆ. ಅವು ಮಾಯಾಂಶಗಳೆಂದೂ ಮಿಥ್ಯೆಗಳೆಂದೂ

ಹೇಳಿಸಿಕೊಳ್ಳುತ್ತವೆ. ಬಾಕಿ ಉಳಿದ ಅಸ್ತಿ, ಭಾತಿ, ಪ್ರಿಯ, ಈ ಮೂರು ಒಂದರಲ್ಲಿದ್ದಂತೆ, ಎಲ್ಲದರಲ್ಲಿಯೂ ಇರುತ್ತವೆ. ಆದ್ದರಿಂದ **ಅನ್ವಯ**ಗಳಾಗಿವೆ. ಆದರಿಂದ ಸತ್ಯಗಳು ಆಗಿವೆ, ಇವು ಬ್ರಹ್ಮಾಂಶಗಳು ಆಗಿರುತ್ತವೆ. ಆದ್ದರಿಂದ ವೃತ್ತಿಯು ಹೊರಗೆಹೋದ ಕಾಲದಲ್ಲಿ ನಾಮರೂಪುಗಳನ್ನು ಬಿಟ್ಟು, ಅಸ್ತಿ, ಭಾತಿ. ಪ್ರಿಯರೂಪ ಬ್ರಹ್ಮವೇನಾನೆಂದು ಅನುಸಂಧಾನವನ್ನು ಮಾಡುತ್ತಿರಲು, ಹೊರಗಿನ ನಾಮರೂಪ ಪ್ರಪಂಚದ ಪ್ರತೀತಿಯೇ ಇಲ್ಲದಂತೆ ಆಗುತ್ತದೆ. ಇದು **ಬಾಹ್ಯದೃಶ್ಯಾನುವಿದ್ಧ ಸವಿಕಲ್ಪ ಸಮಾಧಿ**ಯೆಂದು ಹೇಳಿಸಿಕೊಳ್ಳಲ್ಪಡುತ್ತದೆ.

ಇದರಲ್ಲಿ ಬಾಹ್ಯ ಘಟಾವಚ್ಛಿನ್ನ ಚೈತನ್ಯದಲ್ಲಿ ಘಟವು ಕಲ್ಪಿತವಾಗಿದೆ. ಆ ಘಟಾವಚ್ಛಿನ್ನ ಚೈತನ್ಯವೇ **ಪರಮಾತ್ಮ** ರೂಪವಾಗಿದೆ. ಘಟಾಕಾರ ವೃತ್ತಿಯಲ್ಲಿ ವಿಶಿಷ್ಟನಾದ **ಜೀವ**ನಿರುತ್ತಾನೆ. ವೃತ್ತಿಯು ಘಟಾಕಾರವಾಗಲು, ವೃತ್ತಿಯಲ್ಲಿದ್ದ ಆಭಾಸನು ಘಟಾವಚ್ಛಿನ್ನ ಚೇತನದೊಡನೆ ಅಭೇದನಾಗಿರುತ್ತಾನೆ, ಆಗ್ಯೆ ಘಟವು ಪ್ರತ್ಯಕ್ಷವಾಗುತ್ತದೆ. ಹೀಗೆ ಹೊರಗಾದರೂ **ಜೀವಪರಮರ ಐಕ್ಯ**ವು ಆಗಿರುತ್ತದೆ. ಜೀವನು ವೃತ್ತಿ ಅಭಿಮಾನವನ್ನು ಬಿಟ್ಟು, ಘಟಾವಚ್ಛಿನ್ನ ಪರಮಾತ್ಮನೊಡನೆ ಅಭೇದನಾಗಿ, ಅಸ್ತಿ ಭಾತಿ, ಪ್ರಿಯರೂಪ ಪರಮಾತ್ಮನೇ ನಾನೆಂದು ಅನುಸಂಧಾನಮಾಡುತ್ತಿರುತ್ತಾನೆ. ಅದರಿಂದ ಇದು **ಬಾಹ್ಯ ದೃಶ್ಯಾನುವೇಧ ಸವಿಕಲ್ಪ** ಸಮಾಧಿಯೆಂದು ಹೇಳಲ್ಪಡುತ್ತದೆ.

**ಬಳಿಕ,** ಬಾಹ್ಯ ಶಬ್ದಾನುವಿದ್ಧ ಸವಿಕಲ್ಪ ಸಮಾಧಿಯನ್ನು ನಿರೂಪಣ **ಮಾಡುತ್ತಾರೆ.**

**ವರಸಚ್ಚಿದಾನಂದ ಪರಿಪೂರ್ಣವಾಗಿ ಸು ।**
**ಸ್ಥಿರ ಪರಬ್ರಹ್ಮವಹುದೆಂಬ ಸಂಧಾನ ।**
**ವಿರಲನಂತರದ ಸವಿಕಲ್ಪ** ॥೧೧॥

ಟೀಕಾ:- ವರ= ಸೋಪಾಧಿಗಳಿಲ್ಲದ, ಸಚ್ಚಿದಾನಂದ= ಸತ್ತು, ಚಿತ್ತು, ಆನಂದವಾದ, ಪರಿಪೂರ್ಣವಾಗಿ=ತ್ರಿವಿಧ ಪರಿಚ್ಛೇದ ರಹಿತಮಾಗಿ, ಸುಸ್ಥಿರ= ನಿತ್ಯವಾದ, ಪರಬ್ರಹ್ಮವಹುದೆಂಬ=ಇಂಥಾ ಪರಬ್ರಹ್ಮವೇ ನಾನು ಇದ್ದೇನೆಂಬ, ಸಂಧಾನವು=ಚಿಂತನವು, ಇರಲ್=ಇರಲಾಗಿ, ಅನಂತರದ ಸವಿಕಲ್ಪ=ಇದು ಎರಡನೆಯ ಶಬ್ದಾನುವಿದ್ಧ ಸವಿಕಲ್ಪ ಸಮಾಧಿಯೆನಿಸುವದು.

**ತಾತ್ಪರ್ಯ:-** "ಸತ್ಯಜ್ಞಾನಮನಂತಂ ಬ್ರಹ್ಮ" ಎಂಬ ತೈತ್ತರೀಯ ಶ್ರುತಿಯು, ಈ ಸೃಷ್ಟಿಯ ಉತ್ಪತ್ತಿಗಿಂತಲೂ ಪೂರ್ವದಲ್ಲಿ ಅಬಾಧ್ಯವಾದ್ದರಿಂದ **ಸತ್ಯ,** ನಾಶವಿಲ್ಲದ ಜ್ಞಾನವುಳ್ಳದ್ದರಿಂದ **ಜ್ಞಾನ,** ದೇಶ, ಕಾಲ, ವಸ್ತು ಪರಿಚ್ಛೇದ

ರಹಿತವಾದ್ದರಿಂದ ಅನಂತ, ಈ ಲಕ್ಷಣಾತ್ಮಕ ಪರಬ್ರಹ್ಮವು ನಿತ್ಯವಾಗಿರುತ್ತದೆಂದು ಹೇಳುತ್ತದೆ. ಈ ಶ್ರುತಿವಾಕ್ಯವನ್ನು ಕೇಳಿ, ಆಬ್ರಹ್ಮದ ಚಿಂತನೆಯನ್ನು ಮಾಡುತ್ತಿರಲು; ಇದು ಶಬ್ದಾನುವೇಧ ಸವಿಕಲ್ಪ ಸಮಾಧಿಯೆನಿಸುವದು. ಇದರಲ್ಲಿ ಸಚ್ಚಿದಾನಂದವೇ ಪರಮಾತ್ಮ ಸ್ವರೂಪವಾಗಿದೆ. ಆಬ್ರಹ್ಮವನ್ನು ಚಿಂತನಮಾಡುವ ವೃತ್ತಿವಿಶಿಷ್ಟನೇ ಜೀವನು. ಇವನು ಚಿಂತನಮಾಡುತ್ತಾ ವೃತ್ತಿದ್ವಾರಾ ಬ್ರಹ್ಮದಲ್ಲಿ ಐಕ್ಯರೂಪಸ್ಥಿತಿಯಿಂದ ಇರುತ್ತಾನೆ. ಆದರಿಂದ ಜೀವಬ್ರಹ್ಮೈಕ್ಯರೂಪ ಸಮಾಧಿಯೆನಿಸುತ್ತದೆ..

ಬಳಿಕ, ಬಾಹ್ಯನಿರ್ವಿಕಲ್ಪ ಸಮಾಧಿಯನ್ನು ಹೇಳುತ್ತಾರೆ.

**ಮುನ್ನಿನೆರಡುಂ ಸಗುಣಮುಂ ನೀಗಿ ಪರವಶದೊ।**
**ಳಂ ನಿಂದು ನಿಸ್ತರಂಗ ಸುಖಶರಧಿಯೆನಿ।**
**ಪುನ್ನತಿಯೆ ಬಾಹ್ಯದವಿಕಲ್ಪ ॥೧೨॥**

**ಟೀಕಾ:-** ಮುನ್ನಿನ = ಮೊದಲಿನ, ಎರಡುಂ=ದೃಶ್ಯಶಬ್ದಗಳೆಂಬ ಎರಡು, ಸಗುಣಮುಂ=ಸಗುಣ ಸಮಾಧಿಗಳನ್ನು, ನೀಗಿ=ಬಿಟ್ಟು, ಪರವಶದೊಳಂ=ಮೈಮರೆತು, ನಿಂದು=ನಿಂತುಕೊಂಡು, ನಿಸ್ತರಂಗ=ತೆರೆಗಳಿಲ್ಲದ, ಸುಖಶರಧಿಯೆನಿಪ= ಆನಂದ ಸಾಗರವೆಂದು ಹೇಳಿಸಿಕೊಳ್ಳುವ, ಉನ್ನತಿಯೆ=ಆಧಿಕ್ಯವೇ, ಬಾಹ್ಯದ ವಿಕಲ್ಪ=ಹೊರಗಿನ ನಿರ್ವಿಕಲ್ಪ ಸಮಾಧಿಯು,

**ತಾತ್ಪರ್ಯ:-** ಬಾಹ್ಯದೃಶ್ಯ ಮತ್ತು ಬಾಹ್ಯಶಬ್ದಗಳೆಂಬ ಎರಡನ್ನು ಬಿಟ್ಟು, ನಾನು ಬ್ರಹ್ಮಚಿಂತನವನ್ನು ಮಾಡುತ್ತೇನೆ. ಎಂಬ್ಷ್ಎಚ್ಚರವೂ ಇಲ್ಲದೆ' ಮೈಮರತು ಬ್ರಹ್ಮದಲ್ಲಿಯೇ ತತ್ಪರನಾಗಿ, ತೆರೆಗಳಿಲ್ಲದ ಸಮುದ್ರವು ಶಾಂತ ಮತ್ತು ಗಂಭೀರವಾಗಿರುವಂತೆ, ಕೇವಲ ಆನಂದಸಾಗರನಾಗಿರುವದೇ **ಹೊರಗಿನ ನಿರ್ವಿಕಲ್ಪ ಸಮಾಧಿಯೆನಿಸುವದು.**

ಇಲ್ಲಿ ದೃಶ್ಯಕ್ಕೊಮ್ಮೆ ಶಬ್ದಕ್ಕೊಮ್ಮೆ ಚಿತ್ತ ಹೋಗುವದು ಬರುವದು ಮಾಡುವದೇ ತೆರೆಗಳಾಗಿವೆ. ಈ ರೀತಿ ಓಡಾಟವಿಲ್ಲದೆ. ಆನಂದ ಸ್ವರೂಪದಲ್ಲಿ ಮುಳಗಿಕೊಂಡು ಇರಲಾಗಿ ಇದು ನಿರ್ವಿಕಲ್ಪವೆನಿಸುವದು. ಮಧ್ಯಪಾನಮಾಡಿದವನು ತನ್ನ ಮೈಮೇಲಿನ ವಸ್ತ್ರವನ್ನು ಅರಿಯದಂತೆ, ಸ್ವರೂಪಾನಂದದಲ್ಲಿ ಮುಳಗಿದ್ದರಿಂದ ಈತನು ಶರೀರದೆಚ್ಚರರಹಿತನಾಗಿರುತ್ತಾನೆ. ಆದರಿಂದ ಪರವಶನಂತೆ ತೋರುತ್ತಿರುತ್ತಾನೆ.

**ಬಳಿಕ,** ಈ ಆರು ಸಮಾಧಿಗಳ ಅಭ್ಯಾಸ ಬಲದಿಂದ ಮನಸ್ಸು ಒಳಹೊರಗೆ **ಹೋದರೂ,** ಅನಾತ್ಮದೊಡನೆ ತಾದಾತ್ಮ್ಯಾಧ್ಯಾಸರೂಪ ಭ್ರಾಂತಿಯನ್ನು

ಹೊಂದದೆ, **ನಿಜಸ್ಥಿತಿಯಿಂದ** ಇರುತ್ತದೆ. ಅದರಿಂದ **ಮನಸ್ಸು** ಎಲ್ಲಿಹೋದರೂ ಸಮಾಧಿಯೇ ಪ್ರಾಪ್ತವಾಗಿರುತ್ತದೆಂದು ನಿರೂಪಣ ಮಾಡುತ್ತಾರೆ.

**ಪೊರಗೊಳಗೆ ಯೋಗವೀ ತೆರನಾಗೆ ತನುಗುಣಂ ।**
**ಪರಿದು ನಿಜಸಿದ್ಧಿಯಹುದಾಗಿ ಮನವೆತ್ತ ।**
**ಲೆರಗಲಾ ಯೋಗವಹುದೈಸೆ ॥೧೩॥**

ಟೀಕಾ:- ಪೊರಗೊಳಗೆ=ಒಳಗೂ ಹೊರಗೂ, ಯೋಗವು=ಶಿವಜೀವರೈಕ್ಯ ರೂಪ ಯೋಗವು, ಈ ತೆರನಾಗಿ = ಈ ಪ್ರಕಾರವಾಗಲು, ತನುಗುಣಂ = ದೇಹಾ ಧ್ಯಾಸವು, ಪರಿದು=ನಾಶವಾಗಿ, ನಿಜ ಸಿದ್ಧಿಯಹುದಾಗಿ = ಸ್ವಸ್ವರೂಪವೇ ಪ್ರಕಟ ವಾಗುವದರಿಂದ, ಮನವೆತ್ತಲೆರಗಲ್ = ಮನಸ್ಸು ಎಲ್ಲಿ ಹೋದರೂ, ಆ ಯೋಗ ವಹುದೈಸೆ=ಚೈತನ್ಯದೊಡನೆ ಐಕ್ಯತ್ವರೂಪ ಯೋಗವೇ ಪ್ರಾಪ್ತವಾಗುತ್ತದೆ.

**ತಾತ್ಪರ್ಯ:**- ಮನಸ್ಸು ಹೊರಗೆ ನಾಮರೂಪಾದಿಗಳ ಕಡೆಗೆ ಹೋದರೂ, ಅಥವಾ ಒಳಗೆ ಅನೇಕಾಕಾರ ವೃತ್ತಿವ್ಯವಹಾರಪರವಾದರೂ, ಉಕ್ತ ಪ್ರಕಾರ ಚೈತನ್ಯಸ್ವರೂಪದೊಡನೆ ಬೆರತುಕೊಂಡಿರುವ ಯೋಗದಿಂದ ಕೂಡಿರುವ ಕಾರಣ, ಮನಸ್ಸು ಎಲ್ಲಿ ಹೋದರೂ **ಸಮಾಧಿಯೇ** ಆಗಿರುತ್ತದೆ. “**ಯತ್ರ ಯತ್ರ ಮನೋ ಯಾತಿ ತತ್ರ ತತ್ರ ಬ್ರಹ್ಮದರ್ಶನಂ**” ಮನಸ್ಸು ಎಲ್ಲಿ ಹೋದರೂ ಚೈತನ್ಯದೊಡನೆ ಸಮಾವೇಶವಾಗುವದರಿಂದ ನಿಜವೇ ತೋರುತ್ತದೆ. ಆದ್ದರಿಂದ ಶರೀರಾದಿ ಅನಾತ್ಮಗಳಲ್ಲಿ ನಾನೆಂಬ ತಾದ್ಯಾತ್ಮ್ಯ ಅಧ್ಯಾಸರೂಪ ಭ್ರಾಂತಿಯಾಗು ವದಿಲ್ಲ. ಹಾಗೂ ನಾಮರೂಪಗಳು ಸತ್ಯವೆಂದು ಅವುಗಳಲ್ಲಿ ಮೋಹವೂ ಆಗುವ ದಿಲ್ಲ. ಅರ್ಥಾತ್ ದೇಹದಲ್ಲಿ ನಾನೆಂಬ,ಜಗತ್ತು ಸತ್ಯವೆಂಬ ಭ್ರಾಂತಿಗಳಾಗುವದಿಲ್ಲ. ಮನಸ್ಸು ಎಲ್ಲಿ ಹೋದರೂ ನಿಜವೇ ಹೊಳೆಯುತ್ತದೆ. ಹೇಗಂದರೆ, ಪಕ್ಷಿಗಳಿಗೆ ಆಕಾಶದಲ್ಲಿ ಎತ್ತ ತಿರುಗಿದರೂ ಹಾರಿದರೂ ಆಕಾಶವೇ ತೋರುತ್ತಿರುವಂತೆ, ಜಲ ದಲ್ಲಿ ಸಂಚರಿಸುವ ಮೀನಕ್ಕೆ ಎತ್ತ ಹೋದರೂ ಜಲವೇ ತೋರುವಂತೆ, ಜ್ಞಾನ ಯೋಗಿಯ ಮನಸ್ಸು ಎಲ್ಲಿ ಹೋದರೂ ನಿಜಸ್ವರೂಪವಾದ ಚೈತನ್ಯವೇ ತೋರು ವದು. ಅಂದರೆ ಜ್ಞಾನಿಯು ಸಹಜ ಸಮಾಧಿ **ಸಹಜಾನಂದ**ನಾಗಿರುವನೆಂಬ ಭಾವವು.

ಒಳಿಕ, ಉಕ್ತ ಸಮಾಧಿಗಳ ಬಲದಿಂದ ಒಳಹೊರಗೆ ಜೀವಾತ್ಮ ಪರಮಾತ್ಮರ ಐಕ್ಯವು ಸಂಭವಿಸುತ್ತದೆಂದು ಹೇಳುತ್ತಾರೆ.

**ಬಹಿರಂತರಂಗದೊಳಗಿಹ ಪರಮ ಜೀವರೊಂ ।**
**ದಹರೀ ಸಮಾಧಿ ಬಲದಿಂ ನಿಜಜ್ಞಾನ ।**
**ಸಹ ಭೇದವಳಿದ ಕಥದಿಂದ ॥೧೪॥**

**ಟೀಕಾ:-** ಬಹಿರಂತರಂಗದೊಳಗಿಹ=ಒಳಹೊರಗಿರುವ, ಪರಮಜೀವರು= ಜೀವಾತ್ಮ ಪರಮಾತ್ಮರು, ಈ ಸಮಾಧಿ ಬಲದಿಂ=ಈ ಸಮಾಧಿಗಳ ಅಭ್ಯಾಸ ಬಲದಿಂದ, ಒಂದು ಅಹರ್=ಅಭೇದರಾಗುವರು, ನಿಜಜ್ಞಾನ ಸಹ=ಈ ಅಭೇದರೂಪ ನಿಶ್ಚಯಜ್ಞಾನವು ಕೂಡಾ, ಭೇದವಳಿದ ಕಥದಿಂ=ಭೇದಬುದ್ಧಿಯು ನಾಶವಾಗುವದರಿಂದ, (ತನ್ನ ಸಹಜವಾದ ನಿಜಸ್ಥಿತಿಯು ಉಳಿಯುವದೆಂಬ ಭಾವವು)

**ತಾತ್ಪರ್ಯ:-** ಈ ಆರು ಸಮಾಧಿಗಳ ಬಲದಿಂದ ದೇಹದ ಒಳಗೂ ಹೊರಗೂ ಜೀವಪರಮರ ಅಭೇದವು ಸಂಭವಿಸುತ್ತದೆ. ಈ ವಿಷಯವನ್ನು ಅಲ್ಲಲ್ಲಿಯೇ ಹೇಳಿರುತ್ತದೆ. ಈ ರೀತಿ ಐಕ್ಯಜ್ಞಾನವಾದ ಬಳಿಕ, ಅಭೇದ ಜ್ಞಾನವು ಭೇದಜ್ಞಾನವನ್ನು ನಿವೃತ್ತಮಾಡಿ, ತಾನೂ ನಾಶವಾಗುತ್ತದೆ. ಹೇಗಂದರೆ; ವನವನ್ನು ದಹಿಸಿದ ಅಗ್ನಿಯು ವನವನ್ನು ನಾಶಮಾಡಿ ತಾನೂ ನಾಶವಾಗುವಂತೆ, ಭೇದವನ್ನು ನಾಶಮಾಡಿ ಅಭೇದಜ್ಞಾನವು ತಾನೂ ನಾಶವಾಗುತ್ತದೆ. ತನ್ನ ನಿಜಸ್ಥಿತಿ ಮಾತ್ರ ಉಳಿಯುವದೆಂಬ ಭಾವವು.

ಬಳಿಕ, ತನ್ನ ಸ್ವಸ್ವರೂಪ ಜ್ಞಾನದಿಂದ ಹೃದಯ ಗ್ರಂಥಿಯು ನಾಶವಾಗುತ್ತದೆಂದು ನಿರೂಪಣಮಾಡುತ್ತಾರೆ.

**ಬಳಿಕ ಹೃದಯದ ಗ್ರಂಥಿಯಳಿವುದದು ತತ್ವಸಂ ।**
**ಕುಳವಾತ್ಮನೊಡನೆ ಭೇದವೆಂಬುದನು ಕ ।**
**ಣ್ಗೊಳಿಸದಿರುತಿರ್ಪ ಹಮು ತಾನೆ ॥೧೫॥**

**ಟೀಕಾ:-** ಬಳಿಕ=ಅಭೇದ ಜ್ಞಾನವು ಭೇದವನ್ನು ನಾಶಮಾಡಿದಮೇಲೆ, ಹೃದಯದ ಗ್ರಂಥಿಯು = ಆತ್ಮಾನಾತ್ಮರ ಅನ್ಯೋನ್ಯಾಧ್ಯಾಸರೂಪ ಹೃದಯದ ಗಂಟು, ಅಳಿವುದು=ನಾಶವಾಗುವದು, ಅದು=ಆ ಹೃದಯ ಗ್ರಂಥಿಯು ಅಂದರೆ, ತತ್ವಸಂಕುಳವು=ಅನಾತ್ಮ ವರ್ಗವು, ಆತ್ಮನೊಡನೆ=ಚೈತನ್ಯಾತ್ಮದೊಡನೆ, ಭೇದವೆಂಬುದನು=ಭಿನ್ನವಾಗಿರುವುದನ್ನು, ಕಣ್ಗೊಳಿಸದೆ=ತೋರಗೊಡದೆ, ಇರುತಿರ್ಪ= ಇರುವಂಥಾ, ಅಹಮು ತಾನೆ=ಅಹಂಕಾರವೇ ಹೃದಯ ಗ್ರಂಥಿಯೆನಿಸುವದು.

**ತಾತ್ಪರ್ಯ:-** ಜೀವಾತ್ಮ ಪರಮಾತ್ಮರ ಅಭೇದ ಜ್ಞಾನವು, ಭೇದವನ್ನು ನಾಶಮಾಡಲು; ಹೃದಯ ಗ್ರಂಥಿಯು ನಾಶವಾಗುತ್ತದೆ. ಹೃದಯ ಗ್ರಂಥಿಯು ಅಂದರೆ; ಗಂಟು ಎಂಬರ್ಥವಾಗಿದೆ. ಅದು ಯಾವದು? ಅಂದರೆ, ದೇಹೇಂದ್ರಿಯ ಪ್ರಾಣ ಮನ ಬುದ್ಧ್ಯಾದಿಗಳು ಏನುಂಟು. ಇವು ಆತ್ಮನಿಂದ ಅರಿಸಿಕೊಳ್ಳುತ್ತವೆ. ಅದರಿಂದ ದೃಶ್ಯಗಳಾಗಿವೆ. ಆತ್ಮನು ಇವುಗಳನ್ನು ಅರಿಯುವದರಿಂದ ದೃಕ್‌ರೂಪ

ನಾಗಿರುವನು. ಹೀಗೆ ದೃಕ್ ಮತ್ತು ದೃಶ್ಯ ರೂಪದಿಂದ ಆತ್ಮಾನಾತ್ಮಗಳಿಗೆ ಭೇದ ವಿದ್ದರೂ, ಈ ಭೇದವನ್ನು ಕಾಣಗೊಡದೆ ಅಭೇದರೂಪ ತಾದಾತ್ಮ್ಯ ಬುದ್ಧಿ ಯನ್ನು ಮಾಡಿರುವ ಅಹಂಕಾರವೇ **ಹೃದಯಗ್ರಂಥಿ**ಯೆನಿಸುವದು. ಈ ಹೃದಯ ಗ್ರಂಥಿಯು ಅನಾದಿಕಾಲದಿಂದ ಬಂದಿದೆ. ಇದೆ ಜೀವತ್ವಕ್ಕೆ ಕಾರಣವಾಗಿದೆ. ಇದು ಸ್ವರೂಪ ಜ್ಞಾನದ ವಿನಾ ಬೇರೆ ಯಾವುದರಿಂದಲೂ ನಾಶವಾಗಲಾರದು. ಇದನ್ನು ಶ್ರುತಿಯು ಹೇಳುತ್ತದೆ- ಹೇಗಂದರೆ—

ಶ್ಲೋಕ ‖ **ಭಿದ್ಯತೆ ಹೃದಯಗ್ರಂಥಿ ಚ್ಛಿದ್ಯಂತೆ ಸರ್ವ ಸಂಶಯಾಃ।**
**ಕ್ಷೀಯಂತೆ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ ।**

ಕಾರ್ಯಕಾರಣ ಪ್ರಪಂಚಕ್ಕೆ ಅಧಿಷ್ಠಾನವಾದ, ಅಖಂಡ ಚೈತನ್ಯ ಸ್ವರೂಪವೇ ನಾನಿರುವೆನೆಂಬ, ಸ್ವಸ್ವರೂಪ ನಿಶ್ಚಯಜ್ಞಾನವು ಪ್ರಾಪ್ತವಾಗುತ್ತಿರಲಿಕ್ಕೆ; ಅನ್ಯೋನ್ಯಾಧ್ಯಾಸರೂಪ ಹೃದಯಗ್ರಂಥಿಯು ನಾಶವಾಗುತ್ತದೆ. ತತ್, ತ್ವಂ, ಅಸಿ, ಎಂಬ ಪದಗಳ ಸಂಶಯಗಳು ಸಂಪೂರ್ಣವಾಗಿ ನಾಶವನ್ನು ಹೊಂದುತ್ತವೆ. ಸಂಚಿತಾಗಾಮಿಕರ್ಮಗಳು ನಾಶಗಳಾಗುತ್ತವೆ. ಪ್ರಾರಬ್ಧವು ಭೋಗದಿಂದ ನಾಶವನ್ನು ಹೊಂದುತ್ತದೆ. ಪ್ರಾರಬ್ಧಕರ್ಮದಿಂದ ಅವನ ದೇಹವು ಜೀವಿಸಿಕೊಂಡಿರುತ್ತದೆ. ಜೀವಿಸಿಕೊಂಡಿದ್ದರೂ ಜೀವನ್ಮುಕ್ತನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಹೀಗೆಂದು ಶ್ರುತಿಯು ಹೇಳುತ್ತದೆ. ಇದೇ ಶ್ರುತ್ಯರ್ಥವನ್ನು ಮುಂದೆ ಹೇಳುತ್ತಾರೆ.

**ಬಳಿಕ,** ಹೃದಯಗ್ರಂಥಿಯು ನಾಶವಾಗುವದರಿಂದ ಸರ್ವ ಸಂಶಯಗಳು ನಾಶವನ್ನು ಹೊಂದುತ್ತವೆಂದು ಹೇಳುತ್ತಾರೆ.

**ಅದು ಕೆಟ್ಟೊಡಾನೆ ತತ್ಪದವೋ ಮೇಣಲ್ಲವೋ ।**
**ಪದುಳ ಹೀಗಲ್ಲ ವೋಯೆಂಬ ಸಂದೇಹ ।**
**ದುದಯಂಗಳೈದೆ ತವಿಸುವವು** ‖೧೬‖

**ಟೀಕಾ:-** ಅದು ಕೆಟ್ಟೊಡೆ=ಆಗ್ರಂಥಿಯು ಕೆಡಲಾಗಿ, ಆನೆ=ನಾನು, ತತ್ಪದವೋ=ತತ್‌ಪದಾರ್ಥರೂಪ ಪರಮಾತ್ಮನೋ, ಮೇಣ್=ಮತ್ತು, ಅಲ್ಲವೋ=ಬೇರೆಯಾಗಿರುವೆನೋ; ಪದುಳ ಹೀಗೆ=ಹೀಗೆ ಆನಂದರೂಪನೋ, ಅಲ್ಲವೋ=ರಹಿತನಾಗಿರುವೆನೋ; ಎಂಬ=ಅನ್ನುವ, ಸಂದೇಹದ=ಸಂಶಯದ, ಉದಯಂಗಳು=ಉತ್ಪತ್ತಿಗಳು, ಐದೆ=ಚನ್ನಾಗಿ, ತವಿಸುವವು=ನಾಶವನ್ನು ಹೊಂದುವವು.

**ತಾತ್ಪರ್ಯ:-** ಆ ಹೃದಯ ಗ್ರಂಥಿಯು ನಾಶವಾಗುತ್ತಿರಲಿಕ್ಕೆ, ಸರ್ವ ಸಂಶಯಗಳು ನಾಶಗಳಾಗುತ್ತವೆ. ಅಂದರೆ, ಅದರಲ್ಲಿ ತತ್ಪದ ತ್ವಂಪದ, ಅಸಿಪದಗಳಿಂದು ಮೂರು ಪ್ರಕಾರದ ಸಂಶಯಗಳು ಇರುತ್ತವೆ. ಆ ಸಂಶಯಗಳನ್ನು ವೃತ್ತಿಪ್ರಭಾಕರದ ಎಂಟನೇ ಸಂಧಿಯಲ್ಲಿಯೂ, ವೇದಾಂತಚಂದ್ರಿಕೆಯಲ್ಲಿಯೂ

ಹೇಳಿರುತ್ತದೆ. ಅಲ್ಲಿ ನೋಡಿಕೊಳ್ಳಿರಿ. ವಿಸ್ತಾರವಾಗುವದೆಂದು ತಿಳಿದು ಇಲ್ಲಿ ಬರೆಯುವದನ್ನು ಬಿಟ್ಟೆದೆ. ಆ ಸಂಶಯಗಳು ಹೋಗಲು, ಅನಂತರ ಸಂಚಿತಾಗಾಮಿ ಕರ್ಮಗಳು ನಾಶವಾಗುತ್ತವೆ. ಸಂಚಿತಕರ್ಮವು ಜ್ಞಾನಾಗ್ನಿಯಿಂದ ದಹಿಸುತ್ತದೆ. '**ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸ್ಸಾತ್ಕುರುತೆ**' ಎಂದು ಗೀತಾವಾಕ್ಯ ಪ್ರಮಾಣವಿರುತ್ತದೆ. ಮತ್ತು ಆಗಾಮಿಕರ್ಮವು ಅಭಿಮಾನವಿಲ್ಲದ್ದರಿಂದ ಫಲಕ್ಕೆ ಸಾಧನವಾಗದೆ, ಫಲವನ್ನು ಕೊಡದೆ, ಅದು ಸ್ತುತಿಸಿ ನಿಂದಿಸಿದವರಿಗೆ ಹೋಗಿಬಿಡುತ್ತದೆ. ಬಾಕಿ ಉಳಿದ ಪ್ರಾರಬ್ಧ ಕರ್ಮವು ಭೋಗದಿಂದ ಕ್ಷಯವಾಗುತ್ತದೆ. "**ಉತ್ತರ ಪೂರ್ವಾಘಯೋರಶ್ಲೇಷ ವಿನಾಶೌ ತದ್ವ್ಯಪದೇಶಾತ್**" ಎಂಬ ಸೂತ್ರವೂ ಉಂಟು. ಅಂದರೆ ಪೂರ್ವಕರ್ಮವು ಅಂದರೆ, ಸಂಚಿತಕರ್ಮವು ಇದು ಆತ್ಯಂತ ನಾಶವನ್ನು ಹೊಂದುತ್ತದೆ. ಉತ್ತರವಾದ ಆಗಾಮಿಕರ್ಮವು ಅಭಿಮಾನರೂಪ ಕರ್ತೃತ್ವವಿಲ್ಲದ್ದರಿಂದ ತನಗೆ ಅದರ ಸಂಬಂಧವಿಲ್ಲ. ಅದರಿಂದ ಅದು ಫಲವನ್ನು ಕೊಡಲಾರದು. ಪ್ರಾರಬ್ಧಕರ್ಮವು ಮಾತ್ರ ಭೋಗದಿಂದ ನಾಶವನ್ನು ಹೊಂದುತ್ತದೆಂದು ಸೂತ್ರವು ಹೇಳುತ್ತದೆ. ಹೀಗೆ ಸಂಚಿತಾಗಾಮಿಕರ್ಮಗಳು ನಾಶವಾಗಿ, ಪ್ರಾರಬ್ಧಕರ್ಮ ನಿಮಿತ್ತದಿಂದ ಶರೀರವು ಬದಿಕಿರಲು, **ಜೀವನ್ಮುಕ್ತ**ನೆಂದು ಹೇಳಿಸಿಕೊಳ್ಳುತ್ತಾನೆ. ಅದರಿಂದ "**ನಿಜದಭಿವ್ಯಕ್ತಿಯುಹ ಲೇಸಪ್ಪ ಮುಕ್ತಿ ಘಟಿಸುವದು**" ಅವಿದ್ಯೆಯು ಆವರಣದಿಂದ ತನ್ನ ಸಚ್ಚಿದಾನಂದಸ್ವರೂಪು ಅಪ್ರಕಟವಾಗಿತ್ತು. ವಿದ್ಯೆಯಿಂದ ಆವರಣಭಂಗವಾಗಲು, ತನ್ನ ನಿಜವು ಇದ್ದದ್ದೇ ಪ್ರಕಟವಾಯಿತು. ಆದ್ದರಿಂದ ಅಹಂಬ್ರಹ್ಮಾಸ್ಮಿ ಎಂದು ಶಿವೋಽಹಂ ಎಂದು ಉದ್ಗಾರಗಳು ಬರುತ್ತವೆ. ಇದ್ದ ಸ್ವರೂಪದ ಎಚ್ಚರಕ್ಕೆ ಮುಕ್ತಿಯೆಂದು ಹೇಳಿರುತ್ತಾರೆ. ಆದ್ದರಿಂದ ಮುಕ್ತಿಯೆಂಬುದು ಹೊಸದಾಗಿ ಗುರುಶಾಸ್ತ್ರಗಳಿಂದ ಬರತಕ್ಕದ್ದಲ್ಲ. "**ಸ್ವಸ್ವರೂಪಾವಸ್ಥಿತಿ ಮುಕ್ತಿರಿತಿ**" ತನ್ನ ಸ್ವಸ್ವರೂಪ ಸ್ಥಿತಿಯಿಂದ ಇರಲಾಗಿ ಮುಕ್ತಿಯೆಂದು ಶ್ರೀ ಶಂಕಾರಾಚಾರ್ಯರು ಪ್ರತಿಪಾದನ ಮಾಡಿದ್ದಾರೆ.

**ಬಳಿಕ,** ಸಚ್ಚಿದಾನಂದ ಸ್ವರೂಪದ (ಅಭಿವ್ಯಕ್ತಿ.) ಪ್ರಕಟವಾದ ಸ್ಥಿತಿರೂಪ ಮುಕ್ತಿಯಿಂದಿರಲು, ಭೇದತೋರದೆ ಅಭೇದರೂಪದಿಂದ ತಾನೇ ಇರುತ್ತಾನೆಂದು ನಿರೂಪಣಮಾಡುತ್ತಾರೆ.

**ಇಂತಾಗೆ ಭೇದಮಯ ಸಂತಾನವಡಗಿ ನಿ ।**
**ಶ್ಚಿಂತೆಯಿಂದೇಕ ಮೇವಾದ್ವಿತೀಯರೂ ।**
**ಪಿಂ ತಾನೆ ತೋರ್ಪನೆಲೆ ಪುತ್ರ** ॥೧೮॥

**ಟೀಕಾ:-** ಎಲೆ ಪುತ್ರ=ಹೇ ಶಿಷ್ಯನೇ, ಇಂತಾಗಿ=ನಿಜಸ್ಥಿತಿ ಮುಕ್ತಿಸ್ವರೂಪದಿಂದಿರಲಾಗಿ, ಭೇದಮಯ ಸಂತಾನವು=ಭೇದಗಳ ಸಮೂಹವು, ಅಡಗಿ=ನಾಶವಾಗಿ

ನಿಶ್ಚಿಂತೆಯಿಂದ = ಏನೊಂದು ಕರ್ತೃತ್ವವಿಲ್ಲದ್ದರಿಂದ, ಏಕ ಮೇವ ಅದ್ವಿತೀಯ ರೂಪಿಂ=ಸ್ವಗತಾದಿ ಭೇದತ್ರಯರಹಿತ ಅಖಂಡ ಚೈತನ್ಯಸ್ವರೂಪದಿಂದ, ತಾನೆ ತೋರ್ಪನು=ತಾನೇ ಇರುವನು;

**ತಾತ್ಪರ್ಯ:**– ಯಾವಾಗ್ಯೆ ಸಚ್ಚಿದಾನಂದ ಬ್ರಾಹ್ಮೀಸ್ಥಿತಿಯಿಂದ ಇರುತ್ತಿರಲಾಗಿ, ಜೀವೇಶ್ವರಭೇದ, ಜೀವಜೀವರಭೇದ, ಜೀವಜಡಭೇದ. ಜಡಜಡಭೇದ, ಈಶಜಡಭೇದಗಳೆಂದು ಹೇಳಿಸಿಕೊಳ್ಳುವ ಈ ಪಂಚಭೇದಗಳು; ಸ್ವಪ್ನದಂತೆ ಮಿಥ್ಯೆಯೆಂದು ತಿಳಿಯುತ್ತಾನೆ. ಆದರಿಂದ ಅವು ಕಾಣಿಸದೆ ಹೋಗುತ್ತವೆ..ಆಗ್ಯೆ ಸ್ವಗತ, ಸಜಾತಿ, ವಿಜಾತಿಗಳೆಂಬ ಭೇದತ್ರಯರಹಿತ ಅಖಂಡ ಸಚ್ಚಿದಾನಂದ ಬ್ರಹ್ಮವೇ ತಾನಾಗಿರುವನು.

ಬಳಿಕ, ಈ ಸಂಧಿಯಲ್ಲಿ ಉಪಕ್ರಮ ಮಾಡಿದ ಅಧ್ಯಾಸ ವಿಷಯವನ್ನು ಉಪಸಂಹರಿಸುತ್ತ, ಸೂತ್ರ ಪದ್ಯಾದಿಗಳ ಸಂಖ್ಯೆಯನ್ನು ಹೇಳುತ್ತಾ ಸಂಧಿಯನ್ನು ಮುಗಿಸುತ್ತಾರೆ.

**ತ್ರಿವಿದಿ ಯೈವತ್ತರೊಡನಮರಿದೆಳೆ ನಾಲ್ಕರಿಂ ।**
**ದನೆ ಬಂಧಮುಕ್ತಿಗಳ ಲಕ್ಷಣವನಿಂತು ।**
**ವಿವರಿಪುದಿದಾರನೆಯ ಸಂಧಿ ॥೧೯॥**

**ಟೀಕಾ:**- ತ್ರಿವಿದಿಯ್ಯೆವತ್ತರೊಡನೆ = ಐವತ್ತುತ್ರಿವಿದಿ ಪದ್ಯಗಳಿಂದ, ಅಮರಿದ= ಕೂಡಿದ, ಎಳೆನಾಲ್ಕರಿಂದವೆ = ನಾಲ್ಕುಸೂತ್ರಗಳಿಂದ, ಬಂಧಮುಕ್ತಿಗಳ = ಬಂಧಮೋಕ್ಷಗಳ, ಲಕ್ಷಣವನ್ನು = ಗುರ್ತನ್ನು, ಇಂತು=ಈಪ್ರಕಾರ, ಇದು ಆರನೆಯ ಸಂಧಿ=ಈ ಆರನೆಯ ಸಂಧಿಯು, ವಿವರಿಪುದು = ವಿಸ್ತಾರಮಾಡಿ ತಿಳಿಸುವದು.

**ತಾತ್ಪರ್ಯ:**- ಈ ಸಂಧಿಯಲ್ಲಿ ಹೇಳಿದ ತ್ರಿಪದಿಗಳು ಐವತ್ತು ಇರುವವು. ಇವುಗಳಿಂದ ಕೂಡಿದ ಸೂತ್ರಗಳು ನಾಲ್ಕು ಇರುತ್ತವೆ. ಈ ಸಂಧಿಯಲ್ಲಿ ಮುಖ್ಯವಾಗಿ ಉಪಾಧಿ ಮತ್ತು ಉಪಾಧಿಗಳಧರ್ಮ ಇವುಗಳ ಸಂಬಂಧಿ ಅಧ್ಯಾಸಮೂಲಕ ಬಂಧವೆಂತಲೂ, ಶ್ರೀಗುರುಸಚ್ಛಾಸ್ತ್ರ ಶ್ರವಣ, ಮನನ, ನಿಧಿಧ್ಯಾಸನಗಳಿಂದ ಜನ್ಯವಾದ ಬ್ರಹ್ಮಾಪರೋಕ್ಷ ಜ್ಞಾನದಿಂದ, ಅಧ್ಯಾಸವು ನಿವೃತ್ತಿಯಾಗಲು ಮೋಕ್ಷವೆಂದೂ, ಬಂಧಮುಕ್ತಿಗಳ ಲಕ್ಷಣಗಳು ಹೇಳಲ್ಪಟ್ಟಿರುತ್ತವೆ. ಈ ವಿಷಯವನ್ನು ಚನ್ನಾಗಿ ಪ್ರತಿಪಾದನ ಮಾಡುವದಿದು ಆರನೆಯ ಸಂಧಿಯಾಗಿದೆ.

**ಕೈವಲ್ಯ ನಿರೂಪಣೆ ಸೂತ್ರ ೪ಕ್ಕೆ ತ್ರಿವಿದಿ ೫೦ಕ್ಕಂ**

**ಅಂತು ಸಂಧಿ ೬ಕ್ಕಂ ಸೂತ್ರ ೩೪ಕ್ಕಂ ತ್ರಿವಿದಿ೫೭೮ಕ್ಕಂ**

**ಮಂಗಳಮಸ್ತು**



ಶ್ರೀ ಶಂಭುಲಿಂಗಾಯನಮಃ

# ಅನುಭವಸಾರ

## ಏಳನೆಯ ಸಂಧಿ

ಬಳಿಕ, ಹಿಂದಿನ ಸಂಧಿಯಲ್ಲಿ, ಸಂಸಾರವು ಉಪಾಧಿ ಮೂಲಕ ಆತ್ಮನಲ್ಲಿ ಅಧ್ಯಾಸವಾಗಿ ತೋರುತ್ತದೆ. ಹೀಗೆ ತೋರುವದು ಬಂಧವೆಂದೂ, ಶ್ರೀಗುರು ಸಚ್ಛಾಸ್ತ್ರ ಶ್ರವಣದಿಂದ ಜನ್ಯ ಜ್ಞಾನದಿಂದ ಅಧ್ಯಾಸವಳಿಯಲು, ನಿಜದಭಿವ್ಯಕ್ತಿ ರೂಪ ಮುಕ್ತಿಯೆಂದೂ ಹೇಳಲ್ಪಟ್ಟಿತು. ತದನಂತರ ಉಪಾಧಿಯು ಸತ್ಯವಲ್ಲ. ಅದರ ಧರ್ಮಗಳೂ ಸತ್ಯವಲ್ಲ. ಸತ್ಯವೆಂದು ಹೇಳಿದರೆ, ಅದ್ವೈತಶ್ರುತಿ ವಿರೋಧ ಬರುತ್ತದೆ. ಆತ್ಮಭಿನ್ನ ಸರ್ವಮಿಥ್ಯೆಯೆಂದು ತಿಳಿಯಬೇಕು. ಹೀಗೆ ತಿಳಿದರೂ ಸೋಪಾಧಿ ಸಂಸಾರ ತೊರುತ್ತದೆಂದು ಕೇಳಲಾಗಿ ಅದರ ನಿವೃತ್ತಿಗೆ ಆರು ಸಮಾಧಿ ಗಳನ್ನು ಹೇಳಿದರು. ಆ ಸಮಾಧಿಗಳಿಂದ ಮನಸ್ಸು ಎತ್ತಹೋದರೂ ಜೀವ ಪರ ಮರ ಯೋಗವು ಲಭ್ಯವಾಗುತ್ತದೆ. ಅದರಿಂದ ಸರ್ವ ಸಂಶಯ, ಹೃದಯಗ್ರಂಥಿ, ಕರ್ಮಗಳು ನಾಶವಾಗುತ್ತವೆ. ಆತ್ಮ ಸ್ವರೂಪ ಸ್ಥಿತಿ ಮುಕ್ತಿಯು ದೊರೆಯುತ್ತದೆ. ಅದರಿಂದ ಜೀವನ್ಮುಕ್ತನೆನಿಸುತ್ತಾನೆಂದು ಹೇಳಲ್ಪಟ್ಟಿತು.

ಇದನ್ನು ಕೇಳಿ ಶಿಷ್ಯನು ಸಂಶಯ ಚಿತ್ತವುಳ್ಳವನಾದನು. ಯಾಕಂದರೆ, ಜ್ಞಾನಿಯಾದ ಜೀವನ್ಮುಕ್ತನು ಜೀವಿಸಿಕೊಂಡಿರಬಾರದು. ಜ್ಞಾನವು ಅಜ್ಞಾನ ವನ್ನು ನಾಶಮಾಡಿದ್ದರಿಂದ, ಅಜ್ಞಾನ ಕಾರ್ಯವಾದ ಶರೀರವಾದರೂ ಜ್ಞಾನ ಸಮಕಾಲದಲ್ಲಿಯೇ ನಿವೃತ್ತಿಯಾಗಬೇಕಾಗಿತ್ತು. ಹೀಗೆ ಆಗಿದ್ದರೆ, ಅವನು ಜ್ಞಾನಿ ಮುಕ್ತನೆಂದು ಹೇಳಬಹುದು. ಹಾಗಿಲ್ಲದೆ, ಅಜ್ಞಾನಿಗಳು ಜೀವಿಸಿರುವಂತೆ, ಮುಕ್ತನು ದೇಹವುಳ್ಳವನಾಗಿದ್ದರೆ, ಅವನಿಗೆ ಮುಕ್ತಿಯಾಗಿದೆಯೆಂದು ಹೇಗೆ ತಿಳಿಯ ಬೇಕು? ಅರತಕೂಡಲೇ ಅವನ ದೇಹಕ್ಕೆ ನಾಶವು ಏಕೆಯಾಗಲಿಲ್ಲ? ಅವನು

ಮುಕ್ತನು ಹೇಗೆ? ಎಂದು ಪ್ರಶ್ನೆಗಳನ್ನು ಮಾಡುವಂಥವನಾದನು. ಅವನಿಗೆ ಮುಂದೆ ಹೇಳುವಪ್ರಕಾರ ಉತ್ತರವು ಕೊಡಲ್ಪಡುತ್ತದೆ.

ಸೂತ್ರ || **ಯೋಗಬಲದಿಂದಾತ್ಮಲಾಭವಾಗಲು ಮುಕ್ತಿ ।**
**ಯಾಗುವಂದವನೆನಗೆ ಬೆಸಸು ಗುರುವೆ ||**

**ಟೀಕಾ**:- ಗುರುವೇ = ಹೇ ಗುರುವರ್ಯನೇ !, ಯೋಗಬಲದಿಂದ=ಜೀವ ಬ್ರಹ್ಮೈಕ್ಯರೂಪ ಯೋಗಸಾಮರ್ಥ್ಯದಿಂದ, ಆತ್ಮಲಾಭವಾಗಲು = ಬ್ರಹ್ಮಾಭಿನ್ನ ಪ್ರತ್ಯಗಾತ್ಮನೆಂಬ ಜ್ಞಾನವಾಗಲು, ಮುಕ್ತಿಯಾಗುವ = ಮೋಕ್ಷಪ್ರಾಪ್ತವಾಗು ವಂಥಾ,ಅಂದವನು=ಸ್ವರೂಪವನ್ನು, ಎನಗೆ=ನನಗೆ,ಬೆಸಸು=ತಿಳಿಸುವಂಥವನಾಗು.

**ತಾತ್ಪರ್ಯ**:- ಹೇ ಗುರುದೇವನೇ! ಜೀವಬ್ರಹ್ಮೈಕ್ಯಜ್ಞಾನಯೋಗದಿಂದ ಅಹಂಬ್ರಹ್ಮಾಸ್ಮಿಯೆಂಬ ಬ್ರಹ್ಮಾಪರೋಕ್ಷಜ್ಞಾನವಾಗಲು, ಸ್ವಸ್ವರೂಪಾವಸ್ಥಿತಿ ಲಕ್ಷಣ ಮುಕ್ತಿಯು ತನಗೆ ಆಗುತ್ತದೆಂದು ಪೂರ್ವದಲ್ಲಿ ಹೇಳಿದಿರಿ. ಅದು ಹೇಗೆ ಆಗುತ್ತದೆ? ಆ ಮುಕ್ತಿಯ ಸ್ವರೂಪವೇನು? ಆ ಮುಕ್ತನು ಹೇಗೆ ಇರುವನು? ಮುಕ್ತರು ಅನೇಕವಿಧರಾಗಿ ಏಕೆ ಇಹರು? ಮುಕ್ತನು ಕರ್ಮವನ್ನು ಮಾಡುವನೋ ಇಲ್ಲವೋ? ಆಗಾಮಿಕರ್ಮಗಳಿಂದ ಅವನಿಗೆ ಬಾಧಕವದೆಯೋ ಹೇಗೆ? ಈ ಯಾವತ್ತು ವಿಷಯಗಳನ್ನು ನನಗೆ ತಿಳಿಯುವಂತೆ ಚನ್ನಾಗಿ ಬೋಧಿಸಬೇಕು. ಎಂದು ಶಿಷ್ಯನು ಪ್ರಶ್ನೆಗಳನ್ನು ಮಾಡುತ್ತಿರುವನು

**ಬಳಿಕ**, ಸಂಧಿ ಆರಂಭದಲ್ಲಿ ಗ್ರಂಥಕರ್ತರಾದ ಶ್ರೀಮನ್ನಿಜಗುಣಶಿವಯೋಗಿ ಗಳು, ಇಷ್ಟದೇವತೆಯಾದ ಶಂಭುಲಿಂಗನ ಮಂಗಲವನ್ನು ಮಾಡುತ್ತಾರೆ.

ತ್ರಿವಿದಿ || **ವರಚಿತ್ಪ್ರಕಾಶಂಗೆ ಚಿರಮುಕ್ತಿಕೋಶಂಗೆ ।**
**ದುರಿತನಾಶಂಗೆ ಗಿರಿಶಂಗುಮೇಶಂಗೆ ।**
**ಗುರುಶಂಭುವಿಂಗೆ ನತನಪ್ಪೆ** ||೧||

**ಟೀಕಾ**: ವರಚಿತ್ಪ್ರಕಾಶಂಗೆ=ಸ್ವಪ್ರಕಾಶರೂಪನಿಗೆ, ಚಿರಮುಕ್ತಿ=ನಿತ್ಯಮುಕ್ತಿ, ಕೋಶಂಗೆ=ಭಾಂಡಾರವುಳ್ಳವಗೆ;ದುರಿತನಾಶಂಗೆ=ಅವಿದ್ಯಾತತ್ಕಾರ್ಯರೂಪದುಃಖ ವನ್ನು ನಾಶಮಾಡುವಂಥವನಿಗೆ, ಗಿರಿಶಂಗೆ = ಶರೀರರೂಪ ಗಿರಿಯಲ್ಲಿ ವಾಸಮಾಡಿ ದವನಿಗೆ, ಉಮೇಶಂಗೆ=ಮಾಯಾಶಕ್ತಿಸಮನ್ವಿತನಿಗೆ, ಗುರುಶಂಭುವಿಂಗೆ=ಗುರು ವಾದ ಶಂಭುಲಿಂಗೇಶ್ವರನಿಗೆ, ನತನಪ್ಪೆ = ನಮಸ್ಕಾರಮಾಡುವಂಥವನಾಗುತ್ತೇನೆ.

**ತಾತ್ಪರ್ಯ**:-ನಿತ್ಯ, ಶುದ್ಧ,ಬುದ್ಧ,ಮುಕ್ತನಾದ ಶಂಭುಲಿಂಗನು, ಈ ದೇಹದ ಲ್ಲಿಯೇ ವಾಸವಾಗಿರುವನು. ಅದರಿಂದ ಗಿರಿಶ ಎಂಬ ಹೆಸರು ಬಂದದೆ. ಗಿರಿ ಅಂದರೆ

ಉರಳುವದಕ್ಕೆ ಗಿರಿಯೆನ್ನುತ್ತಾರೆ. ಉರಳಿನಾಶವಾಗುವದು ಈ ಶರೀರವಾಗಿದೆ. ಇದರಲ್ಲಿ ವಾಸಮಾಡಿದ್ದರಿಂದ ಗಿರಿಶನೆನ್ನುವರು. ಇಂಥಾ ನಿತ್ಯಮುಕ್ತನಾದ ಶಂಭುವೇ ನಾನೆಂದು ಅಪರೋಕ್ಷಜ್ಞಾನವಾಗಲು; ಅವಿದ್ಯಾತತ್ಕಾರ್ಯರೂಪ ದುರಿತವೆಲ್ಲವೂ ನಾಶವಾಗಿ ಹೋಗುತ್ತದೆ. ಇಂಥಾ ಜ್ಞಾನಶಕ್ತಿಯಿಂದ ಯುಕ್ತನಾದ ಗುರುಶಂಭುಲಿಂಗನು ನನ್ನ ಹೃದಯಾರವಿಂದದಲ್ಲಿ ಪ್ರತ್ಯಗಾತ್ಮಸ್ವರೂಪದಿಂದ ಯಾವಾಗಲೂ ಇರುತ್ತಾನೆ. ಅವನಿಗೂ ನನಗೂ ಕಿಂಚಿತ್ತಾದರೂ ಭೇದವಿಲ್ಲೆಂದು ತಿಳಿಯುವದೇ ನಮಸ್ಕಾರರೂಪ ಮಂಗಳವಾಗಿರುತ್ತದೆ. ಅಂದರೆ, ಭೇದಬುದ್ಧಿಯಿಂದಾಗುವ ದುಃಖವೆಂಬ ಅಮಂಗಲವು ಹೋಗಿ,ಅಭೇದಸುಖರೂಪಸ್ಥಿತಿಯಿಂದಿರುವದೇ ಮಂಗಲವಾಗಿದೆಯೆಂಬಭಾವವು. ಈ ಸಂಧಿಯಲ್ಲಿ ಹೇಳತಕ್ಕ ಜೀವನ್ಮುಕ್ತಿಲಕ್ಷಣ ವಿಷಯವನ್ನು ತಕ್ಕೊಂಡು, ಅದರಿಂದ ಶ್ರೀಶಂಭುವಿನನ್ನು ಕುರಿತು ಮಂಗಲಮಾಡಿದ್ದಾರೆ. ಆದ್ದರಿಂದ **ಚಿರಮುಕ್ತಿಕೋಶಂಗೆ** ಎಂಬ ಪದವನ್ನು ಹಾಕಿದ್ದಾರೆ. ಆದ್ದರಿಂದ ಗ್ರಂಥಕರ್ತರ ಆಶಯಾನುಸಾರವಾಗಿ ಈ ಪದಕ್ಕೆಉಕ್ತಾರ್ಥವು ಮಾಡಲ್ಪಟ್ಟಿರುತ್ತದೆಂದು ತಿಳಿಯತಕ್ಕದ್ದು.

ಬಳಿಕ, ಶಿಷ್ಯನು ಶ್ರೀಗುರುವಿನನ್ನು ಕುರಿತು ಸ್ತುತಿಸುತ್ತಾ, ಮುಂದೆಹೇಳುವ ಪ್ರಕಾರ ಪ್ರಶ್ನೆಯನ್ನು ಮಾಡುತ್ತಾನೆ.

**ಸಗುರುಮೇವಾಯೆಂಬ ನಗುರೋರಧಿಕನೆಂಬ ।**
**ನಿಗಮ ಸಂಸಿದ್ಧ ಗುರುವರ್ಯ ಜಯತೆಂದು ।**
**ಪೊಗಳಿ ಬಿನ್ನೈಸಿದನು ಸೂನು** ॥೨॥

**ಟೀಕಾ:-** ಸಗುರುಂ ಏವಾಯೆಂಬ=ಶ್ರೋತ್ರಿಯ ಬ್ರಹ್ಮನಿಷ್ಠ ಗುರುವನ್ನು ಕುರಿತು ಶರಣುಹೋಗತಕ್ಕದ್ದೆಂಬ, ಗುರೋಃ=ಗುರುವಿನಗಿಂತಲೂ,ಅಧಿಕ=ಶ್ರೇಷ್ಠರಾದವರು, ನ=ಇಲ್ಲ, ಎಂಬ=ಅನ್ನುವ, ನಿಗಮ=ವೇದ ವಾಕ್ಯಗಳಿಂದ, ಸಂಸಿದ್ಧ=ಪ್ರತಿಪಾದ್ಯನಾದ, ಗುರುವರ್ಯ=ಗುರುಪುಂಗವನೇ !, ಜಯತೆಂದು=ನಿನಗೆ ಜಯವಾಗಲಿಯೆಂದು, ಪೊಗಳಿ=ಸ್ತುತಿಸಿ, ಸೂನು=ಶಿಷ್ಯನು, ಬಿನ್ನೈಸಿದನು=ಪ್ರಶ್ನೆ ಮಾಡಿದನು.

**ತಾತ್ಪರ್ಯ:-'ಸಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ'** ಸಮಿತ್, ಅರಳೆಕಟ್ಟಿಗೆಯನ್ನು ಪಾಣಿಃ ಅಂದರೆ, ಕೈಯಲ್ಲಿ ತಕ್ಕೊಂಡ ಶಿಷ್ಯನು, ಶ್ರೋತ್ರಿಯ ಬ್ರಹ್ಮನಿಷ್ಠರಾದ ಗುರುಗಳನ್ನು ಕುರಿತು ಶರಣು ಹೋಗತಕ್ಕದ್ದು ಎಂಬ ಶ್ರುತಿಯು ಇರುತ್ತದೆ. ಗುರುಗಳು ಶಿಷ್ಯನಿಗೆ ಶಿವಯೋಗ ಸಂಪದವನ್ನುಂಟು ಮಾಡಿಕೊಡುತ್ತಾನೆ. ಶಿವನೇ ಮೊದಲಾದವರು

ತವಿಮ್ಮಂದ ಬೇರೆಯಾದ ಅನಿತ್ಯ ಲೋಕಾಂತರಭೋಗಗಳನ್ನು ಕೊಡುತ್ತಾರೆ. ಅದರಿಂದ ಶಿವ, ವಿಷ್ಣು, ಬ್ರಹ್ಮಾದಿಗಳಿಗಿಂತಲೂ ಗುರುವೇ ದೊಡ್ಡವನು. ಇವನಿಗಿಂತಲೂ ದೊಡ್ಡವನು ಯಾರೂ ಇಲ್ಲೆಂಬ ಶ್ರುತಿಯೂ ಉಂಟು. ಹೀಗೆ ವೇದಗಳೇ ಗುರುವಿನನ್ನು ಕೊಂಡಾಡುತ್ತವೆ. ಇಂಥಾ ಅಸಾಧಾರಣವಾದ ಬೋಧಶಕ್ತಿಯುಳ್ಳ ಗುರುನಾಥನೇ! ನೀನಿದ್ದಿ ಎಂದು ಕೊಂಡಾಡುತ್ತ, ನಿನಗೆ ಜಯವಾಗಲಿ ಎಂದು ಬಯಸಿದ್ದಾನೆ. ಇಲ್ಲಿ ಗುರುವಿಗಾಗಲಿ, ಈಶ್ವರನಿಗಾಗಲಿ ಜಯವಾಗಲಿ ಎಂದು ಶಿಷ್ಯಭಕ್ತರು ಅನ್ನಬಹುದೇ, ಹೀಗೆ ಅಂದರೆ ಇವರು ಅವರಿಗೆ ಆಶೀರ್ವಾದ ಮಾಡಿದಂತಾಗಲಿಲ್ಲವೆ? ಇವರಿಗೆ ಅಸಾಮರ್ಥ್ಯವುಂಟೆ ? ಹೀಗೆ ಜಯವಾಗಲಿ ಅನ್ನುವದು ಯೋಗ್ಯವಲ್ಲ. ಎಂದು ಶಂಕೆಯನ್ನು ಮಾಡಬಹುದು. ಇದು ಸರಿಯಲ್ಲ. ಯಾಕಂದರೆ ಕೂಸು ತಾಯಿಗೆ ಆರೋಗ್ಯವಾಗಲಿ ಎಂದು ಬಯಸಿದರೆ, ತಾಯಿಯು ಆರೋಗ್ಯವಿದ್ದರೆ. ಆದರಿಂದ ತನಗೂ ಸುಖವಾಗುತ್ತದೆಂದು ತಿಳಿಕೊಂಡು, ಕೂಸು ತಾಯಿಗೆ ಆರೋಗ್ಯವನ್ನು ಕೋರಿದಂತೆ, ಶಿಷ್ಯಭಕ್ತರು ಗುರು ದೇವರುಗಳಿಗೆ ಜಯವಾಗಲಿ ಅನ್ನುವದು ಹಾಗೇಯಿರುತ್ತದೆ. ಗುರುಸುಖವಾಗಿದ್ದರೆ ತನಗೂ ಸುಖದೊರೆಯುವದೆಂಬ ಆಶಯವಾಗಿದೆ, ಆದ್ದರಿಂದ ಮಂಗಳಗಳಲ್ಲಿ **ಜಯವಾಗಲಿ**ಯೆಂದು ಸ್ತುತಿಮಾಡುವದು ಯೋಗ್ಯವಾಗಿರುತ್ತದೆ. ಈ ರೀತಿ ಶ್ರೀಗುರುವಿನನ್ನು ಕೊಂಡಾಡಿ ಮುಂದೆಹೇಳುವ ಪ್ರಕಾರ ಪ್ರಶ್ನೆಗಳನ್ನು ಮಾಡುವಂಥವನಾದನು.

**ಬಳಿಕ,** ಶಿಷ್ಯನು:- ಜೀವಪರಮರ ಐಕ್ಯರೂಪ ಯೋಗಬಲದಿಂದ ಸರ್ವ ಕರ್ಮಗಳೆಲ್ಲಾ ನಾಶವಾಗಿ ಮುಕ್ತನಾಗುತ್ತಾನೆಂದು, ಹೇಳಿದಿರಿ. ಈ ಮಾತು ಹೇಗಾದೀತು? ಯಾಕಂದರೆ, ಜ್ಞಾನವುಳ್ಳವನು ದೇಹಧಾರಿಯಾಗಿ ಇರುವದನ್ನು ಕಾಣುತ್ತಲಿದ್ದೇವೆ. ಆ ದೇಹವು ಪ್ರಾರಬ್ಧಕರ್ಮದಿಂದ ಜೀವಿಸಿಕೊಡಿರುತ್ತದೆ. ಅಂದಮೇಲೆ; ಕರ್ಮವು ನಾಶವಾಗಿಲ್ಲ. ಎಂದುಕಾಣುತ್ತದೆ. ಕರ್ಮದಿಂದಾದ ಶರೀರದಿಂದಿರಲಾಗಿ ಮುಕ್ತನು ಹೇಗೆ? ಎಂಬದಾಗಿ ಶಂಕೆಯನ್ನು ಮಾಡುತ್ತಲಿದ್ದಾನೆ.

**ಶ್ರೀಗುರುವೆ ಕರ್ಮದಿಂದಾಗಿರ್ದ ತನುವಿರಲು ।**
**ಯೋಗದಿಂ ಕರ್ಮವಳಿದು ನಿಜವಹನೆಂಬು ।**
**ದಾಗದಿದನೆಂತು ತಿಳಿಯುವೆನು** ॥೩॥

**ಟೀಕಾ:-** ಶ್ರೀ ಗುರುವೇ = ಹೇ ಗುರುದೇವನೇ, ಕರ್ಮದಿಂದಾಗಿರ್ದ = ಪುಣ್ಯ ಪಾಪ ಕರ್ಮಗಳಿಂದ ರಚಿತವಾಗಿರುವ, ತನುವಿರಲು = ಶರೀರವಿರಲಾಗಿ, ಯೋಗದಿಂದ=ಜ್ಞಾನದಿಂದ, ಕರ್ಮವಳಿದು=ಎಲ್ಲ ಕರ್ಮಗಳು ನಾಶವಾಗಿ. ನಿಜವಹನೆಂಬುದು ನಿಜಪರಬಹ್ರವೇ ಆಗಿರುವನೆಂಬುದು, ಆಗದು = ಸಂಭವಿಸದು, ಇದನು=ಈ ವಿಷಯವನ್ನು, ಎಂತು=ಹೇಗೆ, ತಿಳಿಯುವೆನು ಅರಿಯುವೆನು.

**ತಾತ್ಪರ್ಯ:-** ಶಿವಜೀವೈಕ್ಯ ಜ್ಞಾನಯೋಗ ಬಲದಿಂದ ಉಪಾದಾನ ಕಾರಣವಾದ ಅಜ್ಞಾನವು ನಿವೃತ್ತಿಯಾಗಲು, ಅದರ ಕಾರ್ಯವಾದ ಶರೀರ ವಾದರೂ, ನಾಶವನ್ನು ಹೊಂದಬೇಕಾಗಿತ್ತು. ಮತ್ತು ಈ ಶರೀರಕ್ಕೆ ನಿಮಿತ್ತ ಕಾರಣಗಳಾದ ಪುಣ್ಯ ಪಾಪ ಕರ್ಮಗಳಿಂದ ಈ ಶರೀರವು ರಚಿತವಾಗಿರುತ್ತದೆ. ನಿಮಿತ್ತ ಕಾರಣಗಳಾದ ಕರ್ಮಗಳು ನಾಶವಾಗಲು ದೇಹವು ನಾಶವನ್ನು ಹೊಂದ ಬೇಕಾಗಿತ್ತು. ನಾಶವನ್ನು ಹೊಂದಿಲ್ಲ. ಅಂದರೆ, ಉಪಾದಾನಕಾರಣವಾದ ಅಜ್ಞಾನ, ನಿಮಿತ್ತ ಕಾರಣವಾದ ಕರ್ಮ, ಇವೆರಡು ಜ್ಞಾನದಿಂದ ನಾಶವಾದರೂ, ಶರೀರವು ಮಾತ್ರ ನಾಶವಾಗದೆ ಇರುತ್ತದೆ. ಹೀಗಾಗಿರುವದಕ್ಕೆ ಏನು ಕಾರಣ? ಮತ್ತು ಶರೀರ ಸಹಿತನಾಗಿ ಜೀವಿಸಿಕೊಂಡಿರಲು, ಅವನು ನಿಜವನ್ನು ಹೊಂದಿ ದವನು ಮುಕ್ತನೆಂದು ಹೇಳಿದಿರಿ. ಅವನಿಗೆ ಮುಕ್ತನೆಂದು ನಾವು ಹೇಗೆ ತಿಳಿ ಯೋಣ? ತಿಳಿದ ಕೂಡಲೇ ದೇಹ ನಾಶವಾಗಿ ಪೂರ್ಣ ಅರುವೇ ಆಗಿದ್ದರೆ, ನಾವು ಅವನನ್ನು ಮುಕ್ತನೆಂದು ತಿಳಿಯುತ್ತಿದ್ದೆವು. ಎಂದು ಈ ಪ್ರಕಾರ ಶಿಷ್ಯನು ಶ್ರೀ ಗುರುಗಳನ್ನು ಕುರಿತು ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

ಬಳಿಕ, ಮತ್ತೂ ಪ್ರಶ್ನೆಯನ್ನೇ ಮಾಡುತ್ತಲಿದ್ದಾನೆ. ಏನಂದರೆ, ಕರ್ಮ ಸಹಿತ ದೇಹದಿಂದ ಜೀವಿಸಿಕೊಂಡಿರಲು, ತಾವು ಮುಕ್ತನೆಂದು ಹೇಳುವದು ನಮಗೆ ಆಶ್ಚರ್ಯವೆನಿಸುತ್ತದೆಂದು ಕೇಳುತ್ತಾನೆ.

**ತನುವಿರುತ್ತೀಜಗದ ಜನರ ಮಧ್ಯದೊಳೋರ್ವ ।**
**ನೆನಿಸಿ ಮೊದಲಂತೆ ಜೀವಿಸುವನಂ ಮುಕ್ತ ।**
**ನೆನಲಿದೇನಘಟಿತವದಲ್ತೆ ॥೪॥**

**ಟೀಕಾ:-**ತನುವಿರುತ್ತ=ದೇಹವು ಇರುತ್ತಿರಲಾಗಿ, ಈ ಜಗದ=ಈ ಜಗತ್ತಿನ, ಜನರ ಮಧ್ಯದೊಳ್ = ಜನರ ನಡುವೆ, ಓರ್ವನೆನಿಸಿ = ಒಬ್ಬನಾಗಿದ್ದು, ಮೊದಲಿ ನಂತೆ=ಅಜ್ಞಾನಕಾಲದಲ್ಲಿದ್ದಂತೆ, ಜೀವಿಸುವನಂ=ಬದುಕುತ್ತಿರುವವನನ್ನು, ಮುಕ್ತ ನೆನಲ್=ಮುಕ್ತನೆಂದು ಹೇಳಿದರೆ, ಇದೇನು ಅಘಟಿತವದಲ್ತೆ = ಇದು ಆಶ್ಚರ್ಯ ವಲ್ಲವೇ ?

**ತಾತ್ಪರ್ಯ:-** ಈ ಜಗತ್ತಿನ ಸರ್ವ ಜನರು ಹೇಗೆ ಜೀವಿಸಿಕೊಂಡಿರುವರೋ ಹಾಗೇ ಇವನು ಜೀವಿಸಿಕೊಂಡಿರುತ್ತಾನೆ. ಸರ್ವ ಜನರಿದ್ದಂತೆ ಇವನೂ ಇರುವದ ರಿಂದ ಇವನು ಮುಕ್ತನು ಹೇಗೆ? ಮುಕ್ತನಾಗಿದ್ದರೆ, ಜನರಿಗೆ ವಿಲಕ್ಷಣನಾಗಿ ಇವನು ಜೀವಿಸಿಕೊಂಡಿರಬೇಕಾಗಿತ್ತು. ಹಾಗಿಲ್ಲ. ಇರಲಿ. ಇವನು ಅಜ್ಞಾನಕಾಲದಲ್ಲಿ ದೇಹೇಂದ್ರಿಯಾದಿಗಳಿಂದ ಹೇಗೆ ವ್ಯವಹಾರಮಾಡುತ್ತಿದ್ದನೋ, ಹಾಗೇ ಈ ಜ್ಞಾನ

ಕಾಲದಲ್ಲಿಯೂ ವ್ಯವಹಾರ ಮಾಡುತ್ತಿರುತ್ತಾನೆ. ಆದ್ದರಿಂದ ಹೇಗೆ ಮುಕ್ತನು ? ಮುಕ್ತನಾಗಿದ್ದರೆ ಅಜ್ಞಾನಕಾಲದ ವ್ಯವಹಾರಕ್ಕೆ ವಿಲಕ್ಷಣವಾದ ವ್ಯವಹಾರವು ಅವನಲ್ಲಿಇರಬೇಕಾಗಿತ್ತು. ಅದಿಲ್ಲ. ಈ ಕಾರಣದಿಂದ ಅವನು ಮುಕ್ತನುಅಲ್ಲ.ಎಂದು ನಮಗೆ ಅನಿಸುತ್ತದೆ. ತಾವು ಮಾತ್ರ ಮುಕ್ತನೆಂದು ಹೇಳುತ್ತೀರಿ. ಈ ನಿಮ್ಮ ಮಾತನ್ನು ಕೇಳಿ ನಮಗೆ ಆಶ್ಚರ್ಯವೆನಿಸುತ್ತದೆಂದು ಶಿಷ್ಯನ ಅಭಿಪ್ರಾಯವಾಗಿದೆ.

**ಬಳಿಕ:**– ಜ್ಞಾನವಾದೊಡನೆ ದೇಹ ಹೋಗಿ ಗುರ್ತಿರದೆ ಬೈಲಿನಂತೆ ಬರಿಯರಿವಾಗಿದ್ದರೆ, ಮುಕ್ತನೆಂದು ತಿಳಿಯಬಹುದಾಗಿತ್ತು. ಎಂದು ಶಿಷ್ಯನು ಪ್ರಶ್ನೆಯನ್ನು ಮಾಡುತ್ತಾನೆ.

> **ಅರಿದೊಡನೆ ಬಂಧನಂ ಪರಿದು ದೇಹಂ ಪೋಗಿ ।**
> **ಕುರುಹಿಲ್ಲದೇಕರಸವೆ ತಾನಾಗದಿಹ ।**
> **ತೆರನಾವುದಾರ್ಯ ಕರುಣಿಪುದು ॥೫॥**

**ಟೀಕಾ:**- ಅರಿದೊಡನೆ=ತಿಳದ ಕೂಡಲೆ, ಬಂಧನಂ=ಬಂಧವು, ಪರಿದು= ಹರಿದು, ದೇಹಂಪೋಗಿ= ಶರೀರವು ನಾಶವಾಗಿ, ಕುರುಹಿಲ್ಲದೆ = ಗುರ್ತಿಸಲಿಕ್ಕೆ ಬಾರದೆ, ಏಕರಸವೆ=ಅಖಂಡ ನಿಜರೂಪವೇ, ತಾನಾಗದೆ=ತಾನಾಗಿರದೆ, ಇಹತೆರ ನಾವುದು=ಇರುವ ರೀತಿಯು ಯಾವದು?, ಆರ್ಯ = ಪೂಜ್ಯನೇ, ಕರುಣಿಪುದು= ತಿಳಿಸುವದು.

**ತಾತ್ಪರ್ಯ:**– ಹೇ ಗುರುದೇವ ತಾವು ಹೇಳಿದಂತೆ ಜ್ಞಾನವಾದೊಡನೆ, ಅಜ್ಞಾನತತ್ಕಾರ್ಯ ಪ್ರಪಂಚವೆಲ್ಲಾ ನಾಶವಾಗಿ, ದೇಹವೂ ಹೋಗಿ ಅಖಂಡ ಚೈತನ್ಯರೂಪ ಪರಬ್ರಹ್ಮಸ್ವರೂಪನೇ ತಾನಿರಬೇಕಾಗಿತ್ತು. ಕರ್ಪುರವು ಉರಿದು ಹೋಗಿ ಏನೂ ಉಳಿಯದೆ ಹೇಗೆ ಬೈಲಾಗುತ್ತದೆಯೋ, ಹಾಗೇ ಇವನಾದರೂ ಜ್ಞಾನಿ, ಮುಕ್ತನೆಂದು ಗುರ್ತುಕೂಡಾಹಿಡಿಯಲಿಕ್ಕೆ ಬಾರದವನಾಗಿರಬೇಕಾಗಿತ್ತು. ಹೀಗಾಗಿದ್ದರೆ ಮುಕ್ತನೆಂದು ನಿಶ್ಚಯಮಾಡುತ್ತಿದ್ದೆವು. ಹೀಗಾಗದೆ, ಇರಲಿಕ್ಕೆ ಕಾರಣವೇನು? ಜಗದ ಜನರಂತೆ ಇವನು ಜೀವಿಸಿಕೊಂಡು ಇರಲಾಗಿ ಮುಕ್ತ, ಜ್ಞಾನೀ, ಎಂದು ಹೇಳಬಹುದೆ? ಎಂದು ಪ್ರಶ್ನೆಯ ಅಭಿಪ್ರಾಯವಾಗಿದೆ.

## ಪ್ರಶ್ನೆ ನಿರೂಪಣೆ ಸೂತ್ರ ೧ ಕ್ಕೆ ತಿಪಿದಿ ೫

---

**ಬಳಿಕ,** ಬ್ರಹ್ಮಜ್ಞಾನದಿಂದ ದೇಹಾದಿಗಳಿಗೆ ಉಪಾದಾನ ಕಾರಣವಾದ ಅಜ್ಞಾನವು. ನಿಮಿತ್ತಕಾರಣಗಳಾದ ಸರ್ವಕರ್ಮಗಳು ನಾಶವಾದರೂ, ದೇಹಸ್ಥಿತಿ

ಗತಿ ಇರಲಿಕ್ಕೆ ಏನು ಕಾರಣವಿರುತ್ತದೆ? ಎಂದು ಪ್ರಶ್ನೆಯನ್ನು ಮಾಡಲು; ಅದಕ್ಕೆ ಗುರುಗಳು ಉತ್ತರವನ್ನು ಹೇಳುತ್ತಾರೆ. ಏನಂದರೆ, ಬ್ರಹ್ಮಾತ್ಮರ ಏಕತ್ವಜ್ಞಾನದಿಂದ ಆವರಣ ಶಕ್ತ್ಯಂಶಮಾದ ಅಜ್ಞಾನವು ನಾಶವಾಗುತ್ತದೆ. ಆದರೆ, ವಿಕ್ಷೇಪ ಶಕ್ತ್ಯಂಶ ಮಾದ ಅಜ್ಞಾನವು ನಾಶವಾಗದೆ ಉಳಿದಿರುತ್ತದೆ. ಯಾಕಂದರೆ; ಅದು ವಿಕ್ಷೇಪವು ಕೂಡಾ ನಾಶವಾಗುತ್ತಿತ್ತು. ಆದರೆ, ಅದಕ್ಕೆ ಪ್ರಾರಬ್ಧಕರ್ಮವು ಪ್ರತಿಬಂಧಕ ಮಾಡಿದ್ದರಿಂದ ನಾಶವಾಗದೆ ಉಳಿಯಿತು, ಹೀಗೆ ಪ್ರಾರಬ್ಧಕರ್ಮನಿಮಿತ್ತದಿಂದ ವಿಕ್ಷೇಪಶಕ್ತಿ ಅಂಶಮಾದ ಅಜ್ಞಾನವು ಉಳಿದ ಕಾರಣದಿಂದ ದೇಹಾದಿ ಪ್ರಪಂಚವು ಉಳಿಯಿತು. ಈ ಕಾರಣದಿಂದ ಜ್ಞಾನೀ ಮುಕ್ತನ ದೇಹವು ನಾಶವಾಗದೆ, ಜಗದ ಜನರಂತೆ ಅವನು ವ್ಯವಹಾರಪರನಾಗಿ ತೋರುತ್ತಾನೆ. ಹೀಗೆ ತೋರಿದಾಗ್ಯಾದರೂ ಏನಾಯಿತು? ಏನೂಹಾನಿಯಿಲ್ಲ. ಅವನು ಮುಕ್ತನೇ ಇರುತ್ತಾನೆಂದುಹೇಳುತ್ತಾರೆ.

**ಸೂತ್ರ ॥ ಕರ್ಮವಾಸನೆ ಕೆಡದೆ ತೋರಲದರಿಂ ದೇಹ ।**
**ಧರ್ಮವಿರಲೇನವನೆ ಮುಕ್ತನೈಸೆ ॥**

**ಟೀಕಾ:-** ಕರ್ಮವಾಸನೆ= ಪ್ರಾರಬ್ಧಕರ್ಮ ವಾಸನೆಯು, ಕೆಡದೆ = ನಾಶ ವಾಗದೆ, ತೋರಲ್ = ಪ್ರತೀತಿಯಾದಾಗ್ಯಾದರೂ, ಅದರಿಂ = ವಾಸನಾರೂಪ ಪ್ರಾರಬ್ಧಕರ್ಮದಿಂದ, ದೇಹಧರ್ಮವಿರಲ್ = ದೇಹೇಂದ್ರಿಯಾದಿಗಳು ಜೀವಿಸಿ ಕೊಂಡಿದ್ದರೂ, ಏನ್=ಏನಾಯಿತು?, ಅವನೇ=ಆತನೇ, ಮುಕ್ತನೈಸೆ=ಮುಕ್ತ ನಿರುವನಷ್ಟೇ.

**ತಾತ್ಪರ್ಯ:-** ಹೇ ಶಿಷ್ಯನೇ ಕೇಳು. ಆತ್ಮಜ್ಞಾನದಿಂದ ಸಂಚಿತಾಗಾಮಿ ಕರ್ಮಗಳು ನಾಶವಾಗುವವು. ಆದರೆ, ಈ ದೇಹೋತ್ಪತ್ತಿಗೆ ಹೇತುಗಳಾದ ಯಾವ ಪ್ರಾರಬ್ಧಕರ್ಮಗಳುಂಟೋ, ಅವು ಮಾತ್ರ ನಿವೃತ್ತಿಯನ್ನು ಹೊಂದಲಿಲ್ಲ. ಅವು ಈ ದೇಹಕ್ಕೆ ಭೋಗವನ್ನು ಕೊಟ್ಟು ನಾಶವನ್ನು ಹೊಂದುತ್ತವೆ. ಆ ಪ್ರಾರಬ್ಧ ಕರ್ಮ ನಿಮಿತ್ತದಿಂದ ದೇಹವು ಇರುತ್ತದೆ.

**ಶಂಕಾ:-** **"ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ಕುರುತೆ" "ಕ್ಷೀಯಂತೆ ಚಾಸ್ಯ ಕರ್ಮಾಣಿ"** ಎಂಬ ಶ್ರುತಿಗಳು ಜ್ಞಾನಿಯ ಸರ್ವ ಕರ್ಮಗಳು ನಾಶ ಗಳಾಗುತ್ತವೆಂದು ಹೇಳುತ್ತವೆ. ಹೀಗಿದ್ದು ತಾವು ಪ್ರಾರಬ್ಧಕರ್ಮವನ್ನು ಬಿಟ್ಟು ಉಳಿದ ಕರ್ಮಗಳು ನಾಶಗಳಾಗುತ್ತವೆಂದು ಅರ್ಥವನ್ನು ಮಾಡುವಿರಿ. ಹೀಗೆ ಅರ್ಥಮಾಡುವದು ಅನರ್ಥವಾಗುವದಿಲ್ಲವೆ? ಎಂದು ಕೇಳಲು,

**ಸಮಾಧಾನ:-** ಎಲ್ಲಿ ಸರ್ವ ಕರ್ಮಗಳು ನಾಶವಾಗುತ್ತವೆಂದು ಹೇಳಿರು ವದೋ, **ಅಲ್ಲಿ ಪ್ರಾರಬ್ಧಕರ್ಮವು ಅಳಿಯದೆ ಉಳಿದಿರುತ್ತದೆಂದು ತಿಳಿಯತಕ್ಕದ್ದು.**

ಲಸುನಭಾಂಡೆಯನ್ನು ತಿಕ್ಕಿ ತೊಳೆದರೂ ಆ ಬೊಳ್ಳೊಳ್ಳಿ ವಗ್ಗರಣೆಯ ವಾಸನೆಯು ಕಿಂಚಿತ್ ಉಳಿಯುವಂತೆ, ಎಲ್ಲ ಕರ್ಮಗಳು ನಾಶವಾದರೂ ಪ್ರಾರಬ್ಧಕರ್ಮ ವಾಸನೆಯು ಇರುತ್ತದೆ. ಅದರಿಂದ ಜ್ಞಾನಿಯ ಶರೀರವು ಜೀವಿಸಿಕೊಂಡಿರುತ್ತದೆ. ದೇಹವಿರುವವರೆಗೆ ಅವನು ಅಜ್ಞಾನಿ ಜನರಂತೆ ವ್ಯವಹಾರಪರನಾಗಿ ತೋರಿದರೂ, ಅವನ ಜ್ಞಾನಕ್ಕಾಗಲಿ ಅಥವಾ ಮುಕ್ತಿಗಾಗಲಿ ಯಾವ ಹಾನಿಯೂ ಇಲ್ಲೆಂದು ತಿಳಿ. ಅಂದರೆ ಪ್ರಾರಬ್ಧಕರ್ಮವಿರುವ ಪರ್ಯಂತರ ಜೀವನ್ಮುಕ್ತಿಯನ್ನು, ದೇಹ ಪಾತಾನಂತರ ವಿದೇಹಮುಕ್ತಿಯನ್ನೂ, ಅವಶ್ಯವಾಗಿ ಹೊಂದುತ್ತಾನೆಂದು ತಿಳಿಯ ತಕ್ಕದ್ದು.

ಬಳಿಕ, ಕರ್ಮವು ಎಷ್ಟು ಪ್ರಕಾರವಾರುತ್ತದೆಂದು ಪ್ರಶ್ನೆಯನ್ನು ಮಾಡಲು; ಕರ್ಮವು ಮೂರು ಪ್ರಕಾರವಾಗಿರುತ್ತದೆಂದು ಹೇಳುತ್ತಾರೆ.

**ಕಂದ ಕೇಳಿದ ನೊರವೆನಿಂದು ಕರ್ಮವೆ ಮೂರು।**
**ಚಂದದಿಂ ಸಂಚಿ ತಾರಬ್ಧವಾಗಾಮಿ।**
**ಯೆಂದು ಫಲಿಸುತ್ತಿಹುದಲ್ಲಿ ॥೧॥**

ಟೀಕಾ:- ಕಂದಕೇಳ್=ಏನೊಂದರಿಯದ ಶಿಷ್ಯನೇಕೇಳು? ಕರ್ಮವೆ= ಕರ್ಮವೆಂಬುದು, ಮೂರು ಚಂದದಿಂ=ಮೂರು ಪ್ರಕಾರವಾಗಿ, ಸಂಚಿತ=ಹಿಂದೆ ಸಂಗ್ರಹಮಾಡಿದ್ದು, ಆರಬ್ಧವು=ಈ ದೇಹೋತ್ಪತ್ತಿಗೆ ಕಾರಣವಾದದ್ದು, ಆಗಾಮಿ ಯೆಂದು=ಮುಂದೆಭೋಗವನ್ನು ಕೊಡುವಂಥಾದ್ದೆಂದು, ಫಲಿಸುತ್ತ=ಫಲಗಳನ್ನು ಕೊಡುತ್ತ, ಅಲ್ಲಿ=ಶಾಸ್ತ್ರದಲ್ಲಿ, ಇಹುದು=ಇರುವದು, ಇಂದು=ಈ ಹೊತ್ತು, ಇದನು =ಈ ವಿಷಯವನ್ನು, ಒರೆವೆನು=ಹೇಳುತ್ತೇನೆ.

ತಾತ್ಪರ್ಯ:- ಕರ್ಮವು ಸಂಚಿತ, ಆಗಾಮಿ, ಪ್ರಾರಬ್ಧವೆಂದು ಮೂರು ಪ್ರಕಾರವಾಗಿರುತ್ತದೆ. ಮತ್ತು ಆ ಕರ್ಮಗಳು ಹೇಗೆ ತಮ್ಮ ಫಲಗಳನ್ನು ಕೊಡುತ್ತವೆ? ಎಂಬುದನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ. ಆ ವಿಷಯವನ್ನು ನಿನಗೋಸುಗ ಹೇಳುತ್ತೇನೆ. ಕೇಳು.

ಬಳಿಕ, ಸಂಚಿತಕರ್ಮವು ಅಂದರೆ, ಮೊದಲು ಸಂಗ್ರಹಮಾಡಿದ್ದು ಎಂಬ ಅರ್ಥವಾಗುತ್ತದೆ. ಹಿಂದಿನ ಜನ್ಮಗಳಲ್ಲಿ ಕರ್ಮವು ಮಾಡುವಾಗಲೇ ನಷ್ಟವಾಗುತ್ತದೆ. ಅಥವಾ ಜನ್ಮಾಂತರಗಳಲ್ಲಿ ಭೋಗಿಸಿದಾಗಳೇ ನಾಶವಾಗಿ ಹೋಗುತ್ತದೆ. ಏನೂ ಉಳಿಯಲಿಲ್ಲ. ಉಳಿದರೂ ಇದನ್ನು ಇಡಲಿಕ್ಕೆಸ್ಥಳವೆಲ್ಲಿರುವದು? ಆದ್ದರಿಂದ ಸಂಚಿತಕರ್ಮವು ಸಂಭವಿಸುವದಿಲ್ಲೆಂದು ಶಂಕೆಯನ್ನು ಮಾಡಿದರೆ,

ಆದು ಜನ್ಮಾಂತರಗಳಲ್ಲಿ ಉಂಡು ಹೆಚ್ಚಾಗಿ ಉಳದದ್ದೆಂದೂ, ಅವಿದ್ಯಾಹಂಕಾರ ಗಳಲ್ಲಿ ಬೀಜಭೂತವಾಗಿರುತ್ತದೆಂದೂ, ಜನ್ಮಾದಿಗಳಿಗೆ ಕಾರಣವಾಗಿರುತ್ತದೆಂದೂ ಹೇಳುತ್ತಾರೆ.

**ಮೊದಲು ಮಾಡಿದ ಕರ್ಮವದು ಸಂಚಿತಾಖ್ಯದಿಂ ।**
**ಪುದಿದಹಂಕಾರದೊಡನಿರ್ದು ಬಹುದೇಹ ।**
**ದುದಯುಕ್ಕೆ ಬೀಜವೆನಿಸುವದು ॥೨॥**

**ಟೀಕಾ:-** ಮೊದಲು ಮಾಡಿದ ಕರ್ಮವು=ಹಿಂದಿನ ಜನ್ಮಗಳಲ್ಲಿ ಮಾಡಿದಂಥಾ ಕರ್ಮವು, ಅದು ಸಂಚಿತಾಖ್ಯದಿಂ=ಅದು ಸಂಚಿತವೆಂಬಹೆಸರಿನಿಂದ, ಪುದಿದು= ಪ್ರಕಟವಾಗಿ, ಅಹಂಕಾರದೊಡನಿರ್ದು = ಅಹಂಕಾರದೊಡನೆ ಕೂಡಿಕೊಂಡು, ಬಹುದೇಹದ=ಅನೇಕ ಶರೀರಗಳ, ಉದಯಕ್ಕೆ=ಉತ್ಪತ್ತಿಗೆ, ಬೀಜವೆನಿಸುವದು= ಕಾರಣವಾಗಿರುವದು.

**ತಾತ್ಪರ್ಯ:-** ಹಿಂದಿನ ಅನೇಕ ಜನ್ಮಂಗಳಲ್ಲಿ ಮಾಡುತ್ತಾ ಸಂಗ್ರಹಿಸ ಲ್ಪಟ್ಟ ಕರ್ಮವೇ ಸಂಚಿತವೆನಿಸುವದು. ಅದು ಹೇಗಂದರೆ; ಜೀವನು ಅನೇಕ ವಿಧ ಪುಣ್ಯ ಪಾಪ ಕರ್ಮಗಳನ್ನು ಮಾಡುತ್ತಾನೆ. ಆ ಎಲ್ಲ ಕರ್ಮಗಳನ್ನು ಮುಂದೆ ಬರುವ ಒಂದೇ ಜನ್ಮದಲ್ಲಿ ಉಂಡು ತೀರಿಸಲಿಕ್ಕೆ ಆಗುವದಿಲ್ಲ. ಮುಂದೆಬರುವ ಜನ್ಮ ದಲ್ಲಿ ಭೋಗಿಸುವದಕ್ಕೆ ಎಷ್ಟು ಬೇಕೋ ಅಷ್ಟನ್ನು ಕೊಟ್ಟು, ಉಳಿದ ಕರ್ಮ ಗಳನ್ನು ಹಾಗೇ ಇರಿಸುತ್ತ ಬಂದಿರುತ್ತವೆ. ಅವುಗಳಿಗೆ ಸಂಚಿತ ಕರ್ಮವೆಂದು ಕರೆ ಯುತ್ತಾರೆ. ಆ ಸಂಚಿತ ಕರ್ಮಗಳು ಸಂಸ್ಕಾರರೂಪದಿಂದ ಅಹಂಕಾರದಲ್ಲಿ ಯಾಗಲಿ, ಅಥವಾ ಅದಕ್ಕೆ ಕಾರಣವಾದ ಅವಿದ್ಯೆಯಲ್ಲಾಗಲಿ ಬೀಜರೂಪದಿಂದ ಇರುತ್ತವೆ. ಮತ್ತು ಜನ್ಮಾದಿಗಳನ್ನು ಮುಂದೆ ಕೊಡುವದಕ್ಕೂ ಕಾರಣಗಳಾಗಿ ರುತ್ತುವೆ. ಹೇಗಂದರೆ,ಒಕ್ಕಲಿಗನು ಈ ವರ್ಷ ಹೊಲದಲ್ಲಿ ಇಪ್ಪತ್ತು ಚೀಲ ಜೋಳ ವನ್ನು ಬೆಳೆದನು. ಬೀಜಕ್ಕಾಗಿ ನಾಲ್ಕುಚೀಲ ತೆಗೆದಿಟ್ಟನು. ಇದು ಆಗಾಮಿಯೆನಿ ಸುವದು. ಸದ್ಯ ಉಣ್ಣಲಿಕ್ಕೆ ಹತ್ತು ಚೀಲಗಳನ್ನು ಇಟ್ಟುಕೊಂಡನು. ಇದು ಪ್ರಾರಬ್ಧ; ಉಳಿದ ಆರು ಚೀಲ ಜೋಳಗಳನ್ನು ಹಗೆಯಲ್ಲಿ ಹಾಕಿದನು. ಇದು ಸಂಚಿತವೆನಿಸುವದು. ಮುಂದಿನವರ್ಷ ಬೆಳೆಯದೆ ಹೋದರೆ, ಇಟ್ಟಕಾಳುಗಳನ್ನೇ ಉಣ್ಣುತ್ತಾನೆ. ಈ ದೃಷ್ಟಾಂತದಂತೆ ಜೀವನು ಅನೇಕ ಜನ್ಮಗಳಲ್ಲಿ ಸಂಗ್ರಹಿಸುತ್ತಾ ಬಂದ ಕರ್ಮವೇ ಸಂಚಿತವೆನಿಸುತ್ತದೆ. ಜನ್ಮಕ್ಕೂ ಕಾರಣವಾಗಿರುತ್ತದೆ.

**ಬಳಿಕ:-** ಸಂಚಿತಕರ್ಮವು ಪ್ರತಿಜನ್ಮದಲ್ಲಿಯೂ ಬೆಳೆಯುತ್ತಲೇ ಹೋಗು ವದು. ಭೋಗಿಸಿ ಮುಗಿಸುವದು ಯಾರಿಂದಲೂ ಸಾಧ್ಯವಿಲ್ಲ. ಎಂದು ಹಾಗಾಯಿತು ಹೀಗಾದಮೇಲೆ, ಮುಕ್ತಿಯೂ ಯಾರಿಗೂ ಎಂದಿಗೂ ದೊರೆಯುವದಿಲ್ಲ ಎನಬೇಕು.

ಆದರಿಂದ ಪುರುಷಾರ್ಥವೇ ಸಿದ್ಧಿಸುವದಿಲ್ಲ. ಎಂದು ಶಂಕೆಯನ್ನು ಮಾಡಲು; ಭೋಗಿಸಿ ತೀರಿಸುವದು ಅಸಾಧ್ಯವಾದರೂ, ಜ್ಞಾನದಿಂದ ಅದನ್ನು ನಾಶಮಾಡ ಲಿಕ್ಕೆ ಸಾಧ್ಯವಾಗುತ್ತದೆಂದು ಉತ್ತರವನ್ನು ಹೇಳುತ್ತಾರೆ.

ತಿಳಿ ತನ್ನನರಿದೊಡಾಗಳೆ ಕೆಡವುದದು ನಿದ್ರೆ।
ಯಳಿದಲ್ಲಿ ಕನಸಿ ನೊಳು ಜನಿಸಿ ತೋರಿದುಂ।
ಮಳವೆಲ್ಲ ನಷ್ಟವಹ ಪಾಂಗು ॥೩॥

**ಟೀಕಾ:-** ನಿದ್ರೆಯಳಿದಲ್ಲಿ=ನಿದ್ರೆಯು ನಾಶವಾದೊಡನೆ, ಕನಸಿನೊಳು= ಸ್ವಪ್ನದಲ್ಲಿ, ಜನಿಸಿ=ಹುಟ್ಟಿ, ತೋರಿದ=ಪ್ರತೀತಿಯಾದ, ಉಮ್ಮಳವೆಲ್ಲ=ಎಲ್ಲ ಪ್ರಪಂಚವು, ನಷ್ಟವಹ ಪಾಂಗು=ನಾಶವಾಗುವ ಹಾಗೆ, ತನ್ನನರಿದೊಡೆ=ತನ್ನನ್ನು ತಾನು ಅರಿಯಲು, ಅದು=ಸಂಚಿತಕರ್ಮವು, ಆಗಳೆ=ತಕ್ಷಣವೇ, ಕೆಡುವುದು=ನಾಶ ವಾಗುವದು. ತಿಳಿ=ಅರಿ

**ತಾತ್ಪರ್ಯ:-** ನಿದ್ರೆಯು ಅಳಿದು ಜಾಗ್ರಕ್ಕೆ ಬಂದೊಡನೆ ಸ್ವಪ್ನ ಪ್ರಪಂಚವು ಏಕಕಾಲಕ್ಕೆ ಹೇಗೆ ಇಲ್ಲದಂತಾಗುವದೋ, ಹಾಗೇ ಈ ಸಂಚಿತ ಕರ್ಮವಾದರೂ ತನ್ನ ಸ್ವರೂಪಜ್ಞಾನವಾದೊಡನೆ ಎಲ್ಲವೂ ಏಕಕಾಲದಲ್ಲಿ ನಿವೃತ್ತಿಯನ್ನು ಹೊಂದು ತ್ತದೆ. ಸೂರ್ಯೋದಯ ಸಮಕಾಲದಲ್ಲಿಯೇ ಕತ್ತಲೆಯು ಕೆಡುವಂತೆ, ಸ್ವಸ್ವರೂಪ ಜ್ಞಾನೋದಯ ಸಮಕಾಲದಲ್ಲಿಯೇ **ಸಂಚಿತ ಕರ್ಮವು** ನಿವೃತ್ತಿಯನ್ನು ಹೊಂದು ತ್ತದೆ. **"ಯಥಾ ತೂಲಮಗ್ನೌಪ್ರಾಹೃತಂ"** ಅಗ್ನಿಯಲ್ಲಿ ಅರಳೆಯನ್ನು ಹಾಕಿದರೆ ಹೇಗೆ ಸುಟ್ಟು ಹೋಗುವದೋ, ಹಾಗೇ ಜ್ಞಾನಾಗ್ನಿಯಲ್ಲಿ ಸಂಚಿತಕರ್ಮವು ದಹಿಸಿ ಹೋಗುತ್ತದೆ. **"ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ಕುರುತೆ"** ಎಂದು ಗೀತಾವಾಕ್ಯವೂ ಇರುತ್ತದೆ. ಆದರಿಂದ ಪುರುಷಾರ್ಥರೂಪ ಮೋಕ್ಷವು ಲಭಿಸು ತ್ತದೆ. ತನ್ನನ್ನು ತಾನು ತಿಳಿಯುವದಕ್ಕಾಗಿ ಶ್ರವಣಾದಿಗಳನ್ನು ಪ್ರಯತ್ನಪೂರ್ವಕ ಮಾಡತಕ್ಕದ್ದು.

ಬಳಿಕ, ಜ್ಞಾನಾಗ್ನಿಯಿಂದ ಸರ್ವ ಸಂಚಿತಕರ್ಮವು ನಾಶವಾದ ಮೇಲೆ, ಪ್ರಾರಬ್ಧಕರ್ಮವಾದರು ಅದರಲ್ಲಿಯೇ ಇರುವದರಿಂದ ಅದು ನಾಶವಾಯಿತು. ಜ್ಞಾನ ಸಮಕಾಲದಲ್ಲಿಯೇ ದೇಹವು ನಾಶವಾಗಬೇಕಾಯಿತು. ಹೀಗಾದ ಮೇಲೆ ಜ್ಞಾನಿಯು ಪ್ರಾರಬ್ಧಕರ್ಮನಿಮಿತ್ತದಿಂದ ದೇಹವುಳ್ಳವನಾಗಿ ಜೀವಿಸುವನೆಂಬುದು ಸಂಭವಿಸಲಾರದು. ಎಂದು ಶಂಕೆಯನ್ನು ಮಾಡಲು; ಆ ಸಂಚಿತಕರ್ಮಗಳಲ್ಲಿ ಯಾವಕರ್ಮಗಳಿಂದ ದೇಹೋತ್ಪತ್ತಿಯಾಗಿರುವದೋ; ಅವುಗಳನ್ನು ಬಿಟ್ಟು ಉಳಿದ ಸಂಚಿತಕರ್ಮರಾಶಿಯು ನಾಶಹೊಂದುತ್ತದೆಂದು ಹೇಳುತ್ತಾರೆ.

ಅದರಲ್ಲಿ ತನುವಿದಾವುದರಿಂದೆ ಸಂಜನಿಸಿ।
ತದನುಳಿದು ನಾಶವಹುದು ತಿಳಿಯಾರಬ್ಧ।
ವದು ಜೀವಿಸುತ್ತಮಿಹುದಿಂತು ॥೪॥

ಟೀಕಾ:- ಅದರಲ್ಲಿ=ಆ ಸಂಚಿತಕರ್ಮಗಳಲ್ಲಿ, ಆವುದರಿಂದೆ=ಯಾವ ಕರ್ಮದಿಂದೆ,ತನುವಿದು=ಈಶರೀರವು, ಸಂಜನಿಸಿತು=ಉತ್ಪತ್ತಿಯಾಯಿತು, ಅದನುಳಿದು=ಆ ಕರ್ಮವನ್ನು ಬಿಟ್ಟು, ನಾಶವಹುದು =ನಾಶವಾಗುವದು, ತಿಳಿಯೆ=ವಿಚಾರಮಾಡಲು; ಆರಬ್ಧವದು=ಅದುಪ್ರಾರಬ್ಧವೆನಿಸುವದು, ಇಂತು=ಈರೀತಿ, ಜೀವಿಸುತ್ತಮಿಹುದು=ಅದರಿಂದ ಅವನ ದೇಹವು ಬದುಕುತ್ತಿರುವದು.

ತಾತ್ಪರ್ಯ:- ಹೇಶಿಷ್ಯನೇ? ಕೇಳು. ಒಂದು ಹೊಟ್ಟೆನ ಬಣವಿಯಲ್ಲಿ ಕಡಲೆ ತುಂಬಿದ ಚೀಲವನ್ನು ಇರಿಸಿದ್ದನು. ಅಕಸ್ಮಾತ್ ಬಣವಿಗೆ ಬೆಂಕಿಹತ್ತಿತು. ಲಗುಬಗೆಯಿಂದ ತೆಗೆಯುವಷ್ಟರಲ್ಲಿ ಎಷ್ಟೋ ಕಡಲೆಕಾಳುಗಳು ಸುಟ್ಟು ಕರಕಾಗಿ ಹೋದವು. ಕೆಲವು ಕಾಳುಗಳು ಕರಕಾಗದೆ ಅರಹಸಿಯಾಗಿ ಉಳಿದವು. ಆ ಅರ್ಧಬೆಂದ ಕಾಳುಗಳು ಮುಂದೆ ಬಿತ್ತಲಿಕ್ಕೆ ಬರುವದಿಲ್ಲ. ಆವುಗಳಿಂದ ಅಂಕುರೋತ್ಪತ್ತಿಯು ಆಗಲಾರದು. ಅವುಗಳು ತಿನ್ನಲಿಕ್ಕೆ ಯೋಗ್ಯವೆಂದು ತಿಳಿದು ಊಟಮಾಡಿಬಿಡುತ್ತಾನೆ. ಈ ದೃಷ್ಟಾಂತದಂತೆ; ಆ ಸಂಚಿತಕರ್ಮಗಳಲ್ಲಿ ಯಾವ ಕರ್ಮದಿಂದ ಈ ಶರೀರವು ಉತ್ಪನ್ನವಾಗಿರುವದೋ, ಆಕರ್ಮವು ದಹಿಸದೆ ಉಳಿಯಿತು. ಉಳಿದ ಎಲ್ಲ ಸಂಚಿತಕರ್ಮಗಳು ಜ್ಞಾನಾಗ್ನಿಯಿಂದ ಸುಟ್ಟುಹೋದವು. ಹುರಿದಕಾಳು ತಿನ್ನಲಿಕ್ಕೆ ಬಂದಂತೆ; ಉಳಿದ **ಪ್ರಾರಬ್ಧಕರ್ಮವು** ಉಪಭೋಗಿಸಲಿಕ್ಕೆ ಬಂದಿತು. ಈ ಉಳಿದ ಪ್ರಾರಬ್ಧಕರ್ಮನಿಮಿತ್ತದಿಂದಲೇ ಜ್ಞಾನಿಯ ಶರೀರವು ಜೀವಿಸಿಕೊಂಡಿರುವದು. ಭಾವಿಶರೀರೊತ್ಪತ್ತಿಗೆ ಹೇತುವಾಗಲಾರದು. ಕಿಂತು; ಪ್ರಾರಬ್ಧ ಕರ್ಮವು ಭೋಗದಿಂದ ನಾಶವನ್ನು ಹೊಂದುತ್ತದೆ.

ಬಳಿಕ, ಉಳಿದ ಪ್ರಾರಬ್ಧಕರ್ಮನಿಮಿತ್ತದಿಂದ ಜ್ಞಾನಿಯ ದೇಹವು ಜೀವಿಸುತ್ತಿರುವದು ಎಂದು ತಾವು ಹೇಳುವದು ಯೋಗ್ಯವಲ್ಲ. ಯಾಕಂದರೆ; ಬ್ರಹ್ಮಜ್ಞಾನದಿಂದ ಉಪಾದಾನಕಾರಣವಾದ ಅಜ್ಞಾನವು ನಾಶವಾಗುತ್ತಿರಲಿಕ್ಕೆ; ಅದರ ಕಾರ್ಯವಾದ ಶರೀರವಾದರೂ ಹೇಗೆ ಉಳಿಯುತ್ತದೆ? ಉಳಿಯಲಾರದು. ತಂತುಗಳು ನಾಶವಾದಮೇಲೆ ಪಟವು ಹೇಗೆ ಇರಲಾರದೋ; ಹಾಗೆ ಉಪಾದಾನ ಅಜ್ಞಾನವು ನಾಶವಾಗಲು; ಅದರ ಕಾರ್ಯವಾದ ದೇಹವು ಉಳಿಯಲಾರದೆಂದು ಶಂಕೆಯನ್ನು ಮಾಡಿದರೆ; ಕಾರಣ ನಾಶವಾದರೂ ಕಾರ್ಯವು ಉಳಿಯುತ್ತದೆಂದು ದೃಷ್ಟಾಂತವನ್ನು ಕೊಟ್ಟು ಸಮಾಧಾನವನ್ನು ಹೇಳುತಾರೆ.

**ನೇಣ ಹಾವಿನ ಭೀತಿ ನೇಣೆಂದು ತಿಳಿದೊಡಂ ।**
**ಕಾಣಿಸಿರ್ಪಂತೆ ಮೊದಲ ಸಂಸ್ಕಾರವದು ।**
**ಮಾಣದಾರಬ್ಧ ವೆನಿಸಿರ್ಕು ॥೫॥**

**ಟೀಕಾ:-** ನೇಣ ಹಾವಿನಭೀತಿ=ಹಗ್ಗದಲ್ಲಿ ತೋರುವ ಹಾವಿನ ಭಯವು, ನೇಣೆಂದು=ಹಾವಲ್ಲ ಹಗ್ಗವೆಂದು, ತಿಳಿದೊಡಂ = ತಿಳಿದಾಗ್ಯಾದರೂ, ಕಾಣಿಸಿರ್ಪಂತೆ=ತೋರುವಹಾಗೆ, ಮೊದಲ ಸಂಸ್ಕಾರವದು=ಜನ್ಮಾರಂಭಕ್ಕೆ ಕಾರಣವಾದ ಕರ್ಮದ ಸಂಸ್ಕಾರವು, ಮಾಣದೆ=ಬಿಡದೆ, ಆರಬ್ಧವೆನಿಸಿರ್ಕು = ಪ್ರಾರಬ್ಧವೆಂದು ಹೇಳಿಸಿಕೊಳ್ಳುತ್ತಿರುವದು.

**ತಾತ್ಪರ್ಯ:-** ನಸುಗತ್ತಲೆಯಲ್ಲಿ ಬಿದ್ದ ಹಗ್ಗವನ್ನು ಕಂಡು, ಅದರಲ್ಲಿ ಹಾವಿನ ಭಯವಾಗುತ್ತದೆ. ಬಳಿಕ ಇದು ಹಾವಲ್ಲ ಹಗ್ಗವೆಂದು ಅರಿಯುತ್ತಾನೆ. ಹೀಗೆ ತಿಳಿದರೂ ಭಯಕಂಪನಾದಿಗಳು ಆಗಳೆ ನಿವೃತ್ತಿಯಾಗುವದಿಲ್ಲ. ಕೆಲವು ಕಾಲಾನಂತರ ನಿವೃತ್ತಿಯಾಗುತ್ತವೆ. ಅಂದರೆ; ಹಾವು ತೋರುವದಕ್ಕೆ ಉಪಾದಾನ ಕಾರಣವಾದ ಅಜ್ಞಾನವು ಹಗ್ಗದ ಜ್ಞಾನದಿಂದ ನಾಶವಾಗಿದೆ. ಹಾವಿನ ಪ್ರತೀತಿ ಇಲ್ಲದಂತಾಗಿದೆ. ಆದರೂ, ಅದರ ಕಾರ್ಯಗಳಾದ ಭಯಾದಿಗಳು ನಿವೃತ್ತಿಯಾಗದೆ ತೋರುತ್ತಿರುತ್ತವೆ. ಇದರಂತೆ, ಜ್ಞಾನದಿಂದ ಉಪಾದಾನ ಕಾರಣವಾದ ಅಜ್ಞಾನವು ನಾಶವಾದರೂ, ಅದರ ಕಾರ್ಯವಾದ **ಪ್ರಾರಬ್ಧಕರ್ಮ** ವಾಸನೆಯೂ ದೇಹದ ಪ್ರತೀತಿಯೂ ಸಂಭವಿಸುತ್ತವೆ. ಆದ್ದರಿಂದ ಜ್ಞಾನವಾದರೂ ಜ್ಞಾನಿಯ ದೇಹವು ಪ್ರಾರಬ್ಧ ಕರ್ಮವಿರುವ ಪರ್ಯಂತರ ಜೀವಿಸಿಕೊಂಡಿರುತ್ತದೆಂದು ತಿಳಿಯತಕ್ಕದ್ದು.

**ಬಳಿಕ,** ಹಿಂದಿನ ಸಂಚಿತಕರ್ಮವು ದಹಿಸಿಹೋಯಿತು. ಮುಂದಿನ ಆಗಾಮಿ ಕರ್ಮವು ಫಲಿಸದೆ ಹೋಯಿತು. ಮಧ್ಯೆದಲ್ಲಿರುವ ಪ್ರಾರಬ್ಧಕರ್ಮವು ನಾಶವಾಗದೆ ಇದ್ದು ಭೋಗವನ್ನು ಕೊಡುತ್ತದೆಂದು ಹೇಳುವದು ಸರಿಯಲ್ಲ. ಹೇಗಂದರೆ, ಒಬ್ಬನಿಗೆ ಮೂವರು ಹೆಂಡರಿದ್ದರು. ಆ ಗಂಡನು ಸತ್ತುಹೋಗಲು ಮೂವರಿಗೂ ರಂಡೆತನ ಬರುತ್ತದೆ. ಅವರಲ್ಲಿ ಮೊದಲನೆ ಹೆಂಡತಿಗೂ ಕಡೆಯಲಾದ ಹೆಂಡತಿಗೂ ರಂಡೆತನ ಬಂತು. ಮಧ್ಯೆದಲ್ಲಿರುವಾಕೆಗೆ ರಂಡೆತನ ಬರಲಿಲ್ಲ. ಎಂಬುದು ಹೇಗೆ ಅಸಮಂಜಸವಾಗಿದೆಯೋ, ಹಾಗೆ ಆಗುತ್ತದೆ. ಆದ್ದರಿಂದ ಮೂರೂ ಕರ್ಮಗಳಿಗೂ ನಾಶವನ್ನು ಹೇಳುವದು ಯೋಗ್ಯವಿರುತ್ತದೆಂದು ಶಂಕೆಯನ್ನು ಮಾಡಿದರೆ, ಹಾಗಲ್ಲ. ಪ್ರಾರಬ್ಧಕರ್ಮವು ಭೋಗಕೊಡದೆ ನಾಶವಾಗದು. ಅದು ಇಚ್ಛಾ, ಅನಿಚ್ಛಾ, ಪರೇಚ್ಛಾರೂಪಗಳಿಂದ ಮೂರುವಿಧವಾಗಿ ಸುಖದುಃಖಾದಿ ಭೋಗಗಳನ್ನು ಕೊಡುತ್ತದೆಂದು ಹೇಳುತ್ತಾರೆ.

**ಭೋಗಿಸಿದೊಡಲ್ಲದೇ ಪೋಗದಾರಬ್ಧಂ ತ್ರಿ ।**
**ಭಾಗೆಯಿಂದಿಚ್ಛೆ ಮೊದಲಾದರೂಪಂಗ ।**
**ಳಾಗಿ ಸುಖ ದುಃಖಗಳ ನೀಗು ॥೬॥**

**ಟೀಕಾ:-** ಆರಬ್ಧಂ= ಪ್ರಾರಬ್ಧಕರ್ಮವು, ಭೋಗಿಸಿದೊಡಲ್ಲದೆ=ಉಣ್ಣದ ವಿನಾ, ಪೋಗದು=ನಾಶವಾಗದು, ತ್ರಿಭಾಗೆಯಿಂದ=ಮೂರು ಭಾಗದಿಂದ, ಇಚ್ಛೆ ಮೊದಲಾದ=ಇಚ್ಛಾ ಪರೇಚ್ಛಾ, ಅನಿಚ್ಛೆಗಳೆಂಬ, ರೂಪಂಗಳಾಗಿ=ರೂಪುಗಳಾಗಿ, ಸುಖ ದು:ಖಗಳ ನೀಗು=ಸುಖ ದುಃಖಗಳನ್ನು ಕೊಡುತ್ತದೆ.

**ತಾತ್ಪರ್ಯ:-** ಪ್ರಾರಬ್ಧಕರ್ಮವು ದೇಹೋತ್ಪತ್ತಿ ಸ್ಥಿತಿಗತಿಗಳಿಗೆ ಹೇತುವಾದ್ದರಿಂದ, ತನುವಿಗೆ ಭೋಗವನ್ನು ಕೊಡದೆ ಅದು ನಾಶವಾಗುವದಿಲ್ಲ. ನೀನು ಗಂಡ ಹೆಂಡರ ದೃಷ್ಟಾಂತವನ್ನು ಉದಾಹರಿಸಿದಿ. ಅದರಲ್ಲಿ ವಿಚಾರಮಾಡಿ ನೋಡು. ಗಂಡನು ಸಾಯುವದಕ್ಕಿಂತ ಮೊದಲೇ ನಡುವಿನ ಹೆಂಡತಿಯು ತನ್ನ ತವರಮನೆಗೆ ಹೋಗಿದ್ದಳು. ಇತ್ತ ಗಂಡನು ಸತ್ತ ಕಾಲದಲ್ಲಿ ಮನೆಯೊಳಗೆ ಮೊದಲಿನ ಕಡೆಯವರಾದ ಇಬ್ಬರು ಹೆಂಡರಿದ್ದರು. ಅವರಿಗೆ ರಂಡೆತನ ಬಂತು. ಗಂಡನು ಸತ್ತನೆಂಬ ಸುದ್ಧಿಯು ಹೋಗಿ ಮುಟ್ಟುವವರೆಗೂ ಮಧ್ಯ ಹೆಂಡತಿಗೆ ಮುತ್ತೈದೆತನವಿತ್ತು. ಸುದ್ದಿ ಮುಟ್ಟಿದ ಬಳಿಕ ರಂಡೆತನ ಬಂತು. ಗಂಡ ಸತ್ತರೂ ಮಧ್ಯ ಹೆಂಡತಿಗೆ ಕೆಲವು ದಿನ ಮುತ್ತೈದೆತನವಿದ್ದಂತೆ; ಜ್ಞಾನವಾದ ಬಳಿಕಾದರೂ ಪ್ರಾರಬ್ಧಕರ್ಮವು **ನಾಶವಾಗದೆ** ಇರುತ್ತದೆ. ಮತ್ತು ಇಚ್ಛೆಯಿಂದಲೂ ಪರೇಚ್ಛೆಯಿಂದಲೂ ಅನಿಚ್ಛೆಯಿಂದಲೂ ಸುಖ ದುಃಖಾದಿಗಳನ್ನು ಕೊಡುತ್ತದೆ. ತೈಲ ತೀರಿದ ದೀಪದಂತೆ ಪ್ರಾರಬ್ಧವಳಿಯಲು ದೇಹವು ಉಳಿಯದು.

ಬಳಿಕ, ಪ್ರಾರಬ್ಧಕರ್ಮವು ನಾಶವಾಗಲು ದೇಹವು ನಾಶವಾಗುತ್ತದೆ. ಹೀಗಾದರೂ ಜ್ಞಾನಿಗಳಿಗೆ ಮತ್ತೂ ಶರೀರಗಳು ಬರುವದುಂಟು. ವಶಿಷ್ಟ, ವ್ಯಾಸಾದಿ ಮಹರ್ಷಿಗಳು ದೇಹ ತ್ಯಾಗಮಾಡಿದರೂ, ಮತ್ತೆ ಯುಗಾಂತರಗಳಲ್ಲಿ ದೇಹವನ್ನು ತಾಳಿ ಬಂದು, ಉಪದೇಶಗಳನ್ನು ಮಾಡಿದರೆಂಬುದನ್ನು ಪುರಾಣ ವಾಕ್ಯಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಪ್ರಾರಬ್ಧಕರ್ಮವಾದರೂ ಒಂದೇ ದೇಹದಲ್ಲಿ ತೀರದೆ ಅನೇಕ ಜನ್ಮಗಳಲ್ಲಿ ಊಟಮಾಡುತ್ತಿರಬಹುದೆಂದು ತೋರುತ್ತದೆ. ಹೀಗಾದ ಮೇಲೆ ಜ್ಞಾನದಿಂದ ಮುಕ್ತಿಯು ಇಲ್ಲವೆನ್ನಬೇಕಾಯಿತು. ಮತ್ತು ಪ್ರಾರಬ್ಧಕರ್ಮದಿಂದ ಜನ್ಮಗಳು ಬರುತ್ತವೆಂದು ಹೇಳಬೇಕಾಗುತ್ತದೆಂದು ಶಂಕೆಯನ್ನು ಮಾಡಿದರೆ, ಹಾಗಲ್ಲ. ಆ ಪ್ರಾರಬ್ಧಕರ್ಮವು ಅಧಿಕೃತ ಪ್ರಾರಬ್ಧವೆಂದೂ ಅಧಿಕಾರ ಪ್ರಾರಬ್ಧವೆಂದೂ ಎರಡುವಿಧವಾಗಿರುತ್ತದೆ. ಅಧಿಕೃತ ಪ್ರಾರಬ್ಧವು ಮನುಷ್ಯನಲ್ಲಿರುತ್ತದೆ. ಅದು ಒಂದೇ ದೇಹದಲ್ಲಿ ಉಂಡು ತೀರಿಹೋಗುತ್ತದೆ.

ಅಧಿಕಾರ ಪ್ರಾರಬ್ಧವು ವ್ಯಾಸಾದಿಗಳಿಗೂ ಸುರರಿಗೂ ಇರುತ್ತದೆ. ಅದು ಕೆಲವು ಜನ್ಮಗಳನ್ನು ಕೊಟ್ಟು ನಾಶವಾಗುತ್ತದೆ ಎಂದು ಹೇಳುತ್ತಾರೆ.

**ತೀರುವದು ನರರಿಗೀ ಶಾರೀರದಲ್ಲಿಯಧಿ।**
**ಕಾರವಾಸನೆಯು ಸುರರಿಗದು ದಶಕಲ್ಪ।**
**ಕಾರಿಯಹುದೆಂದು ತಿಳಿ ನೀನು ॥೭॥**

**ಟೀಕಾ:-** ನರರಿಗೆ=ಮನುಷ್ಯರಿಗೆ, ಈ ಶಾರೀರದಲ್ಲಿಯೇ=ಇದೊಂದು ಶರೀರ ದಲ್ಲಿಯೆ, ತೀರುವದು=ಪ್ರಾರಬ್ಧ ಕರ್ಮವು ಸಮಾಪ್ತಿಯಾಗುವದು, ಅಧಿಕಾರ ವಾಸನೆಯು=ಅಧಿಕಾರ ಪ್ರಾರಬ್ಧ ಕರ್ಮಸಂಸ್ಕಾರವುಳ್ಳ, ಸುರರಿಗೆ=ದೇವತೆಗಳಿಗೆ, ಅದು=ಆ ಕರ್ಮವು, ದಶಕಲ್ಪಕಾರಿ=ಹತ್ತುಕಲ್ಪಾಂತರದವರೆಗೂ ಇರುವಂಥಾದ್ದು, ಅಹುದೆಂದು=ಆಗುವದೆಂದು, ನೀನು ತಿಳಿ=ನೀನು ಅರಿ.

**ತಾತ್ಪರ್ಯ:–** ಪ್ರಾರಬ್ಧ ಕರ್ಮವಾಸನೆಯು ಅಧಿಕೃತವೆಂದೂ ಅಧಿಕಾರ ವೆಂದೂ ಎರಡು ವಿಧವಾಗಿರುತ್ತದೆ. ಅಧಿಕೃತ ಪ್ರಾರಬ್ಧವು ಮನುಷ್ಯರಿಗಿರುತ್ತದೆ. ಅದು ಒಂದೇ ಜನ್ಮದಲ್ಲಿ ಭೋಗಿಸಿ ತೀರಿಸಲಿಕ್ಕೆ ಬರುತ್ತದೆ. ಅಧಿಕಾರ ಪ್ರಾರಬ್ಧ ವುಳ್ಳ ದೇವತೆಗಳಿಗೆ ಮಾತ್ರ ಅದು ಒಂದೇ ಜನ್ಮದಲ್ಲಿ ತೀರದು. ಅವರು ಹತ್ತು ಕಲ್ಪಾಂತರಗಳಲ್ಲಿ ಬೇಕಾದಕಾಲಕ್ಕೆ ಬೇಕಾದ ಜನ್ಮವನ್ನು ಪಡೆಯುವರು. ಅಂದರೆ, ಅಧರ್ಮದಿಂದ ಧರ್ಮಹಾನಿಯಾಗಲು, ಅವರು ಧರ್ಮಸ್ಥಾಪನೆಗಾಗಿ ಶರೀರವನ್ನು ತಕ್ಕೊಂಡು ಬರುವರು. ಹೀಗೆ ಅವರು ಪ್ರತಿ ಯುಗಾದಿಗಳಲ್ಲಿಯೂ ಬರಬಹುದು. ಅನೇಕ ಜನ್ಮಗಳನ್ನು ಅವರು ಧರಿಸಿದರೂ ಅವರಿಗೆ ಸ್ವರೂಪದ ವಿಸ್ಮೃತಿಯಿಲ್ಲ. ಗರ್ಭವಾಸಾದಿ ದುಃಖಗಳೂ ಇಲ್ಲ. ಕಿಂತು, ಅವರಿಗೆ ಅನೇಕ ಜನ್ಮಂಗಳು ಬಂದರೂ ಒಂದೇ ಜನ್ಮದಂತೆ, ಒಂದೇ ದೇಹದಲ್ಲಿ ಬಾಲ್ಯ, ಯೌವನ, ವೃದ್ಧಾಪ್ಯಾದಿಗಳು ಬಂದರೆ, ಹೋದರೆ, ಪುರುಷನಿಗೆ ತನ್ನ ಮರವೆ ಹೇಗೆ ಆಗುವದಿಲ್ಲವೋ, ಹಾಗೆ ಅಧಿಕಾರ ಪ್ರಾರಬ್ಧವುಳ್ಳವರು ಕೆಲವು ಜನ್ಮಗಳನ್ನೆತ್ತಿದರೂ ಅವರಿಗೆ ಮರವೆಯಿಲ್ಲ. ಕಿಂತು, ಮುಕ್ತರೇ ಇರುವರು.

**ಬಳಿಕ:-** ಸಂಚಿತ ಕರ್ಮವು ಜ್ಞಾನಾಗ್ನಿಯಿಂದ ದಹಿಸಿತು. ಪ್ರಾರಬ್ಧ ಕರ್ಮವು ಭೋಗದಿಂದ ನಸಿಸಿತು. ಜ್ಞಾನೋತ್ತರ ಕಾಲದಲ್ಲಿ ಜ್ಞಾನಿಯ ದೇಹವು ಜೀವಿಸಿಕೊಂಡು ಇರುವಾಗ್ಯೆ, ಅವನ ದೇಹೇಂದ್ರಿಯಾದಿಗಳಿಂದ ಕೆಲವು ಪುಣ್ಯ ಪಾಪಾದಿ ಕರ್ಮಗಳು ಆಗಬಹುದು. ಅವು **ಆಗಾಮಿ ಕರ್ಮಗಳೆಂದು** ಹೇಳಿಸಿ ಕೊಳ್ಳುತ್ತವೆ. ಆ ಆಗಾಮಿ ಕರ್ಮದಿಂದ ಜ್ಞಾನಿಗೆ ಜನ್ಮವು ಏಕೆ ಬರುವದಿಲ್ಲ? ಪ್ರಾರಬ್ಧ ಕರ್ಮದಂತೆ, ಆಗಾಮಿ ಕರ್ಮವಾದರೂ ಭೋಗವನ್ನು ಕೊಡುವದಾ

ಗಿದೆ. ಯಾಕಂದರೆ ಕರ್ಮವಾಗಿರುವದರಿಂದ; ಹೀಗೆ ಕರ್ಮದಿಂದ ಜನ್ಮವನ್ನು ಒಪ್ಪಿದರೆ, ಜ್ಞಾನದಿಂದ ಮುಕ್ತಿಯಿಲ್ಲವೆನ್ನಬೇಕಾಯಿತು. ಮತ್ತು ಅನರ್ಥವೇ ಪ್ರಾಪ್ತವಾಯಿತೆಂದು ಶಂಕೆಯನ್ನು ಮಾಡಿದರೆ; ಆಗಾಮಿ ಕರ್ಮವು ಅಭಿಮಾನವಿಲ್ಲದೆ. ಆದದ್ದರಿಂದ ಅದು ಫಲವನ್ನು ಕೊಡದೆ **ನಾಶವಾಗುತ್ತದೆ.** ಅಥವಾ ನಿಂದಾಸ್ತುತಿ ಮಾಡಿದವರಿಗೆ ಹೋಗುತ್ತದೆಂದು ಸಮಾಧಾನವನ್ನು ಹೇಳುತ್ತಾರೆ.

**ಜ್ಞಾನ ಸಿದ್ಧಿಯ ಮೇಲೆ ತಾನಾದ ಕರ್ಮವಭಿ।**
**ಮಾನವಿಲ್ಲಾಗಿ. ಫಲಿಸದದು ಮುಂದೆ ವಂ।**
**ಧ್ಯಾನುಭವದಂತೆ ವೃಥೆಯಕ್ಕು** ॥೮॥

**ಟೀಕಾ:-** ಜ್ಞಾನಸಿದ್ಧಿಯ ಮೇಲೆ=ಜ್ಞಾನವು ಪ್ರಾಪ್ತವಾದ ಬಳಿಕ, ತಾನಾದ ಕರ್ಮವು=ಕರ್ತೃತ್ವವಿಲ್ಲದೆ ಸಂಸ್ಕಾರದಿಂದಾದ ಕರ್ಮವು, ಅಭಿಮಾನವಿಲ್ಲಾಗಿ= ನಾನು ಮಾಡಿದೆನೆಂಬ ಭಾವನೆ ಯಿಲ್ಲದ್ದರಿಂದ, ಅದು=ಆಗಾಮಿ ಕರ್ಮವು, ಮುಂದೆ=ಕಾಲಾಂತರದಲ್ಲಿ, ಫಲಿಸದು=ಫಲವನ್ನು ಕೊಡಲಾರದು, ವಂಧ್ಯಾನುಭವದಂತೆ= ಬಂಜಿ ಸ್ತ್ರೀಯಳ ಸಂಭೋಗದಂತೆ, ವೃಥೆಯಕ್ಕು=ವ್ಯರ್ಥವಾಗುವದು.

**ತಾತ್ಪರ್ಯ:-** ಜ್ಞಾನೋತ್ತರ ಕಾಲದಲ್ಲಿ ಮಾಡಿದ ಕರ್ಮವು **ಆಗಾಮಿ ಯೆನಿಸುವದು** ಆದು ಕರ್ತೃತ್ವರೂಪ ಅಭಿಮಾನವಿಲ್ಲದೆ ಆಗಿರುತ್ತದೆ. ಬಾಲಕ, ಹುಚ್ಚ, ಮದ್ಯ ಸೇವಿಸಿದವ, ಇವರುಗಳ ಭಾಷಣಾದಿಕ್ರಿಯೆಗಳು ಅಭಿಮಾನವಿಲ್ಲದೆ ಹೇಗೆ ನಡೆದಿರುತ್ತವೆಯೋ, ಹಾಗೇ ಜ್ಞಾನಿಯಲ್ಲಿಯೂ ಆಗಿರುತ್ತವೆ. ಅದ್ದರಿಂದ ಈ ಕರ್ಮಗಳು **(ವಂಧ್ಯಾನುಭವದಂತೆ)** ಬಂಜಿ ಸ್ತ್ರೀಯಳೊಡನೆ ಸುರತ ಕ್ರೀಡೆಯನ್ನಾಡಿದರೂ, ಸಂತತಿಯಾಗದೆ, ವೀರ್ಯಪತನಕ್ರಿಯೆಯು ಹೇಗೆ ವ್ಯರ್ಥವಾಗುವದೋ; ಹಾಗೆ ಫಲಹೀನಗಳಾಗಿರುತ್ತವೆ. ಈ ಕಾರಣ ಆಗಾಮಿ ಕರ್ಮದಿಂದ ಜ್ಞಾನಿಗೆ ಯಾವ ಹಾನಿ ಲಾಭಗಳೇನೂ ಇಲ್ಲ. ಅಥವಾ ಈತನನ್ನು ಸ್ತುತಿಸಿ ಪೂಜಿಸಿದವರಿಗೆ ಇವನ ಪುಣ್ಯವು ಹೋಗುತ್ತದೆ. ನಿಂದಿಸಿ ತಾಡನಾದಿಗಳನ್ನು ಮಾಡಿದವರಿಗೆ ಇವನ ಪಾಪವು ಹೋಗುತ್ತದೆ. ಹೀಗೆ ಜ್ಞಾನಿಯು ನಿಂದಾ ಸ್ತುತಿಗಳನ್ನು ಮಾಡಿದ ಭಕ್ತಾಭಕ್ತರಿಗೆ, ಪುಣ್ಯ ಪಾಪಗಳನ್ನು ಕೊಟ್ಟು ತಾನು ಬರಿಗೈವುಳ್ಳವನಾಗುತ್ತಾನೆ. ಅಂದರೆ ಮುಕ್ತನಾಗುತ್ತಾನೆಂಬ ಭಾವವು.

**ಬಳಿಕ; " ಕ್ಷೀಯಂತೆ ಚಾಸ್ಯ ಕರ್ಮಾಣಿ " " ಜ್ಞಾನಾಗ್ನಿಸ್ಸರ್ವ ಕರ್ಮಾಣಿ"** ಹೀಗೆ ಶ್ರುತಿ ಸ್ಮೃತ್ಯಾದಿಗಳಲ್ಲಿ ಸರ್ವಕರ್ಮಗಳೆಂದು ಹೇಳುವದರಿಂದ **ಸಂಚಿತ**, ಪ್ರಾರಬ್ಧ, ಆಗಾಮಿಗಳೆಂಬ ಮೂರೂ ಕರ್ಮಗಳು ನಾಶಗಳಾಗುತ್ತವೆಂದು **ಹೇಳಲ್ಪಟ್ಟಿರುತ್ತದೆ. ತಾವು** ಮಧ್ಯದಲ್ಲಿರುವ ಪ್ರಾರಬ್ಧವು ನಾಶವಾಗುವದಿಲ್ಲ. ಅದು

ಭೋಗವನ್ನು ಕೊಟ್ಟು ನಾಶವಾಗುತ್ತದೆ. ಆದರಿಂದ ದೇಹಸ್ಥಿತಿಯುಂಟು ಎಂದು ಕಲ್ಪನೆಯನ್ನು ಮಾಡುವಿರಿ. ಇದು ಸರಿಯಲ್ಲವೆಂದು ಶಂಕೆಯನ್ನು ಮಾಡಲು; ಆ ಸಕಲಶ್ರುತಿಸ್ಮೃತ್ಯಾದಿಗಳ ತಾತ್ಪರ್ಯವನ್ನು ಬಲ್ಲ ವ್ಯಾಸ ಮಹರ್ಷಿಗಳ ಸೂತ್ರವನ್ನೇ ಪ್ರಮಾಣವಾಗಿ ಉದಾಹರಿಸುತ್ತಾರೆ.

**ತರುಳ ನೀನರಿವುದುತ್ತರ ಪೂರ್ವಕರ್ಮಂಗ।**
**ಳೆರಡಳಿದು ಮಧ್ಯದಾರಬ್ಧಮಿರ್ಪುದಿದು।**
**ವರವೇದ ಶಾಸ್ತ್ರವಿದಿತಾರ್ಥ ॥೯॥**

**ಟೀಕಾ:**-ತರುಳ=ಶ್ರುತ್ಯಾಭಿಪ್ರಾಯವನ್ನರಿಯದ ಶಿಷ್ಯನೇ ಕೇಳು;ಉತ್ತರ= ಆಗಾಮಿ,ಪೂರ್ವ=ಸಂಚಿತ,ಕರ್ಮಂಗಳೆರಡಳಿದು=ಎರಡೂ ಕರ್ಮಗಳುನಾಶವಾಗಿ, ಮಧ್ಯದ=ನಡುವಿನ, ಆರಬ್ಧಮಿರ್ಪುದು ಪ್ರಾರಬ್ಧ ಕರ್ಮವು ಇರುವದು,ಇದು=ಈಗ ಹೇಳಿರುವದು, ವರವೇದ ಶಾಸ್ತ್ರವಿದಿತಾರ್ಥ= ಬ್ರಹ್ಮಸೂತ್ರದಲ್ಲಿ ಪ್ರಸಿದ್ಧವಾಗಿರುತ್ತದೆ.

**ತಾತ್ಪರ್ಯ:**- ಹೇ ಶಿಷ್ಯನೇ ಕೇಳು. ಹಿಂದಿನ ಸಂಚಿತಕರ್ಮ, ಮುಂದಿನ ಆಗಾಮಿಕರ್ಮ, ಇವೆರಡು ನಾಶವಾಗುತ್ತವೆ. ನಡುವಿನ ಪ್ರಾರಬ್ಧ ಕರ್ಮವು ನಾಶವಾಗದೆ ಭೋಗವನ್ನೀಯುತ್ತದೆ. ಎಂಬ ಅರ್ಥವನ್ನು ನಾವು ಕಲ್ಪನೆಮಾಡಿ ಹೇಳುವದಿಲ್ಲ. ಕಿಂತು ಉಪನಿಷದ್ವಾಕ್ಯಗಳ ಅರ್ಥವನ್ನು ನಿರ್ಣಯ ಮಾಡುವಂಥಾ, ಬ್ರಹ್ಮಸೂತ್ರದಲ್ಲಿಯೇ ಹೇಳಲ್ಪಟ್ಟಿರುತ್ತದೆ. ಏನಂದರೆ **"ಉತ್ತರ ಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್''** ಉತ್ತರ ಅಘವು ಅಂದರೆ ಆಗಾಮಿ ಕರ್ಮವು, ಅಶ್ಲೇಷ ಅಂದರೆ ಹತ್ತದೆ ಹೋಗುವದು. ಪೂರ್ವ ಅಘವು ಅಂದರೆ ಸಂಚಿತ ಕರ್ಮವು ವಿನಾಶವಾಗುತ್ತವೆ. ಮಧ್ಯದಲ್ಲಿದ್ದ ಪ್ರಾರಬ್ಧ ಕರ್ಮವನ್ನು ಬಿಟ್ಟು ಉಳಿದ ಸರ್ವಕರ್ಮಗಳು ನಾಶವಾಗುತ್ತವೆಂದು ಅರ್ಥ ಮಾಡಬೇಕು, ಯಾಕಂದರೆ, 'ತತ್‌ವ್ಯಪದೇಶಾತ್' ಆ ಅರ್ಥವನ್ನು ಪ್ರತಿಪಾದಿಸುವ ಅನೇಕ ಶ್ರುತಿಸ್ಮೃತಿ ವಾಕ್ಯಗಳು ಇರುವದರಿಂದ ಎಂದು ಹೇಳಿರುತ್ತದೆ. ಈ ವ್ಯಾಸ ತಾತ್ಪರ್ಯದ ಮೇಲೆ ಪ್ರಮಾಣವಿಲ್ಲ ಎಂಬ ಭಾವವು.

**ಬಳಿಕ:**- ಆಗಲಿ; ಪ್ರಾರಬ್ಧಕರ್ಮವುಳ್ಳವನಾಗಿ ಜೀವಿಸುತ್ತ, ಅಜ್ಞಾನಿ ಜನರಂತೆ ವ್ಯವಹರಿಸುತ್ತಿರಲಾಗಿ, ಅವನು ಮುಕ್ತನೆಂದು ಹೇಗೆ ತಿಳಿಯಬೇಕು? ಯಾಕಂದರೆ, ಅಜ್ಞಾನಿಗಳಂತೆ ಜ್ಞಾನಿಯಾದರೂ ದೇಹಾದಿಗಳ ವ್ಯವಹಾರ ದೃಷ್ಟಿಯಿಂದ ಸಮನಾಗಿಯೇ ತೋರುತ್ತಾನೆ. ವಿಲಕ್ಷಣತ್ವವು ಕಂಡು ಬರುವದಿಲ್ಲ. ಆದ್ದರಿಂದ ಅವನು ಮುಕ್ತನು ಹೇಗೆ? ಎಂದು ಶಂಕೆಯನ್ನು ಮಾಡಿದರೆ, ದೇಹಾದಿಗಳಲ್ಲಿ ನಿರಭಿಮಾನದಿಂದಿರುವದೇ ಮುಕ್ತಿಯ ಲಕ್ಷಣವಾಗಿರುತ್ತದೆಂದು ಹೇಳುತ್ತಾರೆ.

**ಸಂಚಿತಾಗಾಮಿಗಳು ಮುಂಚೆ ಕೆಟ್ಟಾರಬ್ಧ।**
**ದಿಂ ಚರಿಸುವಂಗೆ ದೇಹಾದಿ ನಿರಭಿಮಾ।**
**ನಾಂಚಿತನೆ ಮುಕ್ತಿಯೆನಿಸುವದು ॥೧೦॥**

**ಟೀಕಾ:**—ಸಂಚಿತಾಗಾಮಿಗಳು=ಸಂಚಿತಾಗಾಮಿಗಳೆಂಬೆರಡು ಕರ್ಮಗಳು ಮುಂಚೆ=ಮೊದಲಿಗೆ, ಕೆಟ್ಟ=ನಾಶವಾಗಿ, ಆರಬ್ಧದಿಂ =ಪ್ರಾರಬ್ಧಕರ್ಮದಿಂದ, ಚರಿಸುವಂಗೆ=ವ್ಯವಹರಿಸುವಾತನಿಗೆ, ದೇಹಾದಿ=ದೇಹ ಮೊದಲಾದವುಗಳಲ್ಲಿ, ನಿರಭಿಮಾನಾಂಚಿತನೆ=ಅಭಿಮಾನರಾಹಿತ್ಯ ಲಕ್ಷಣವೇ, ಮುಕ್ತಿಯೆನಿಸುವದು= ಮುಕ್ತಿಯೆಂದು ಹೇಳಿಸಿಕೊಳ್ಳುವದು.

**ತಾತ್ಪರ್ಯ:**- ಜ್ಞಾನಪ್ರಾಪ್ತಿಯಾದ ಕೂಡಲೆ ಸಂಚಿತ ಕರ್ಮರಾಶಿಯು ಅವಿದ್ಯೆಯೊಡನೆ ನಾಶವಾಗಿ ಹೋಯಿತು. ಆಗಾಮಿ ರ್ಮವು ಅಭಿಮಾನವಿಲ್ಲದ್ದ ರಿಂದ ಫಲಿಸದೆ ವ್ಯರ್ಥವಾಗಿ ನಾಶವಾಯಿತು. ಆರಬ್ಧ ಕರ್ಮದಿಂದ ಜ್ಞಾನಿಯ ದೇಹೇಂದ್ರಿಯಾದಿಗಳು; ಅಜ್ಞಾನ ಕಾಲದಲ್ಲಿ ವ್ಯವಹರಿಸುತ್ತ ಇದ್ದಂತೆ ಇರುತ್ತವೆ. ಈತನ ವ್ಯವಹಾರಗಳು ಅಜ್ಞ ಜನರ ವ್ಯವಹಾರಕ್ಕೆ ವಿಲಕ್ಷಣವಾಗಿರುವದಿಲ್ಲ. ಕಿಂತು, ಸ್ನಾನ, ಪಾನ, ಭೋಜನಾದಿ ಸಕಲ ವ್ಯವಹಾರಗಳು ಸಮನಾಗಿಯೇ ಇರುತ್ತವೆ. ಪರಂತು **ನಿರಭಿಮಾನದಿಂದ** ಇರುತ್ತಾನೆ. ಅಜ್ಞಾನಿಗಳು ಅಭಿಮಾನ ದಿಂದ ಇರುತ್ತಾರೆ. ಈ ರೀತಿ ನಿರಭಿಮಾನ ಅಭಿಮಾನ ಇವುಗಳಿಂದ ಭೇದವಲ್ಲದೆ, ವ್ಯವಹಾರದಿಂದ ಭೇದವಲ್ಲ. ಆದ್ದರಿಂದ ನಿರಭಿಮಾನದಿಂದಿರುವದೇ ಮುಕ್ತನ ಚಿನ್ಹವೆಂದು ತಿಳಿ.

**ಶಂಕಾ:**- ಇಬ್ಬರಲ್ಲಿ ವ್ಯವಹಾರಗಳು ಸಮನಾಗಿರಲು; ಇವನು ನಿರಭಿಮಾನ ದಿಂದ ಇರುವನೆಂಬುವದನ್ನು ನಾವು ಹೇಗೆ ತಿಳಿಯಬೇಕು ? ದೇಹಾದಿಗಳಲ್ಲಿ ಅಭಿಮಾನವಿಲ್ಲದಿದ್ದರೆ ಆ ದೇಹಾದಿಗಳ ರಕ್ಷಣೆಯು ಹೇಗೆ ಆಗುವದು ?

**ಸಮಾಧಾನ:**- ಜ್ಞಾನಿಯ ದೇಹಾದಿಗಳ ವ್ಯವಹಾರವು, ಅಜ್ಞಾನ ಕಾಲದಲ್ಲಿದ್ದಂತೆ ಜ್ಞಾನಕಾಲದಲ್ಲಿಯೂ ಇರುತ್ತದೆ. ಆದರೆ, ಅಭಿಮಾನವಿಲ್ಲದೆ ನಡೆದಿರುತ್ತದೆ. ಹೇಗಂದರೆ; ಒಬ್ಬನು ಒಂದು ಕುದುರೆಯನ್ನು ಬಹು ಪ್ರೀತಿಯಿಂದ ಜೋಪಾನ ಮಾಡಿದ್ದನು. ಅದರ ಮೇಲೆ ಅವನು ಯಾವಾಗಲೂ ಸವಾರಿಮಾಡುತ್ತ ಲಿದ್ದನು. ಅದರ ಮೈತಿಕ್ಕಿ ತೋಬರಿಯಲ್ಲಿ ಕಡ್ಲಿ ಮೊದಲಾದ ಧಾನ್ಯಗಳನ್ನು ಹಾಕಿ ತಿನ್ನಿಸುತ್ತಿದ್ದನು. ಅದು ಸೊರಗಬಾರದೆಂದು ಬಹಳ ಎಚ್ಚರಿಕೆಯಿಂದ ಅದರ ರಕ್ಷಣೆಯನ್ನು ಮಾಡುತ್ತಲಿದ್ದನು. ಹೀಗಿರುವಾಗ್ಯೆ ಅವನಿಗೆ ಬಡತನ ಬಂತು. ಆದರ ರಕ್ಷಣೆ ಸರಿಯಾಗಿ ಮಾಡುವದು ಅಸಾಧ್ಯವಾಯಿತು. ಅದರಿಂದ ಅವನು

ಅದನ್ನು ತನ್ನ ಮನೆಯಹತ್ತಿರವಿರುವ ಇನ್ನೊಬ್ಬ ಸಾಹುಕಾರನಿಗೆ ಮಾರಿದನು. ಮುಂದೆ ಕೆಲವು ದಿವಸಗಳ ಮೇಲೆ ಒಂದು ತಿಂಗಳ ಪರಿಯಂತರ ತನಗೆ ಸಂಚಾರ ಮಾಡುವ ಪ್ರಸಂಗ ಬಂತು. ಆಗ್ಯೆ ಅದೇ ಕುದುರೆಯನ್ನು ಬಾಡಿಗೆ ಕೊಟ್ಟು ತಕ್ಕೊಂಡು ಹೋದನು. ಅದಕ್ಕೆ ಆಹಾರ ವಗ್ಯೆರೆ ಕೊಡುತ್ತ ಅದರ ಮೇಲೆ ಕೂತು ಹೋಗುತ್ತಿದ್ದನು. ಪರಂತು; ಇದು ನನ್ನ ಕುದುರೆಯಲ್ಲ ಎರಡನೆಯವರದು. ಎಂದು ಅದರಲ್ಲಿ ಮಮಕಾರವಿಲ್ಲದೆ ಇದ್ದರೂ ಅದರ ಪಾಲನ ಪೋಷಣೆ ಮಾಡು ತ್ತಿದ್ದನು. ಕುದುರೆ ಮಾರುವದಕ್ಕಿಂತ ಮುಂಚೆ ಇದು ನನ್ನ ಕುದುರೆಯೆಂದು ಅಭಿಮಾನವಿತ್ತು. ಮಾರಿದ ಮೇಲೆ ನನ್ನದಲ್ಲಯೆಂದು ನಿರಭಿಮಾನತೆಯಿಂದಿರು ತ್ತಾನೆ. ಅದರಮೇಲೆ ಹತ್ತುತ್ತಾನೆ. ಮೇವು ವಗ್ಯೆರೆ ಹಾಕಿ ರಕ್ಷಣೆಯನ್ನೂ ಮಾಡು ತ್ತಿರುವನು. ಆದರೂ ಅದರಲ್ಲಿ ಅಭಿಮಾನವಿಲ್ಲ. ಈ ದೃಷ್ಟಾಂತದಂತೆ; ಈ ದೇಹಾದಿಗಳು ಅಜ್ಞಾನ ಕಾಲದಲ್ಲಿ ಅಹಂಕಾರ ಮಮಕಾರಗಳಿಗೆ ವಿಷಯಗಳಾಗಿ ತೋರುತ್ತಿದ್ದವು. ಈಗ ಜ್ಞಾನವಾದಮೇಲಾದರೂ ಅವೇ ಇರುತ್ತವೆ. ಆದರೂ ಅವುಗಳಲ್ಲಿ ನಾನು, ನನ್ನದು, ಎಂಬ ಅಹಂಕಾರ ಮಮಕಾರಗಳಿಲ್ಲ. ಕಿಂತು; ಅವು ಗಳ ಪಾಲನೆಯು ಮಾತ್ರ ಮೊದಲಿನಂತೆ ನಡೆದಿರುತ್ತದೆ. ಕುದುರೆ ನನ್ನದಲ್ಲವೆಂದು ನಿರಭಿಮಾನದಿಂದ ಇದ್ದರೂ, ಅದರ ಪಾಲನೆಯು ನಡೆದಿರುವಂತೆ, ಜ್ಞಾನಿಯ ದೇಹಾದಿ ವ್ಯವಹಾರಗಳು ನಡೆದಿರುತ್ತವೆ. ಇದು ಹೃದಯದ ಗ್ರಂಥಿಭೇದವೆಂದು ಕರೆಯುವರು. ಜ್ಞಾನಿ ಅಜ್ಞಾನಿಗಳು ದೇಹಾದಿ ಜೀವನ ವ್ಯವಹಾರಗಳಲ್ಲಿ ಸಮ ನಾಗಿದ್ದರೂ, ಜ್ಞಾನಿಗಳು ಅಸಂಗತ್ವ ನಿರಭಿಮಾನದಿಂದಿರುವರು. ಅಜ್ಞಾನಿಗಳು ಸಂಗಿತ್ವ ಅಭಿಮಾನಗಳಿಂದ ಕೂಡಿರುವರು. ಹೀಗೆ ಅವರ ನಿಶ್ಚಯಗಳು ಮಾತ್ರ ಬೇರೆಯಾಗಿರುತ್ತವೆ. ನಿರಭಿಮಾನ ಲಕ್ಷಣದಿಂದ ಜ್ಞಾನಿಯೆಂದು ತಿಳಿಯಬೇಕು, ಎಂಬ ಭಾವವು

ಬಳಿಕ; ನಿರಭಿಮಾನ ಲಕ್ಷಣವೇ ಮುಕ್ತಿಯೆಂದು ತಾವು ಹೇಳಿದರೆ, ಮದಿರ ಮದಾಂಧನೂ ನಿರಭಿಮಾನದಿಂದಿರುತ್ತಾನೆ. ಅವನಿಗೂ ಮುಕ್ತಿಯನ್ನು ಹೇಳಬಹುದೆ? ಎಂದು ಶಂಕೆಯನ್ನು ಮಾಡಿದರೆ, ಹಾಗಲ್ಲ ನಿರಭಿಮಾನತೆಯೂ ಬೇಕು, ಮತ್ತು ಸ್ವರೂಪಾಕಾರ ವೃತ್ತಿಯಲ್ಲಿ ಪ್ರತಿಬಿಂಬಿತ ನಿಜಾನಂದವನ್ನೀಯುವ ಜೀವನ್ಮುಕ್ತತೆಯೂಬೇಕು. ದೇಹಪಾತಾನಂತರ ವಿದೇಹಮುಕ್ತಿಯು ಆಗುತ್ತ ದೆಂದು ಉತ್ತರವನ್ನು ಹೇಳುತ್ತಾರೆ.

**ಇಂತು ಶಾರೀರ ವಿದಳಂತೆ ಜೀವನ್ಮುಕ್ತಿ।**
**ಯಂತಿಳಿ ವಿದೇಹ ಕೈವಲ್ಯ ವೀತಸುಖಿ।**
**ನಂತ್ಯದೊಳಗಪ್ಪುದೆಲೆ ಸೂನು ॥೧೧॥**

**ಟೀಕಾ:-** ಎಲೆಸೂನು=ಎಲೈ ಮಗನೇ!, ಇಂತು=ಈ ಪ್ರಕಾರ, ಶಾರೀರ ವಿರ್ದಂಶೆ=ಶರೀರದಿಂದ ಜೀವಿಸುವ ವರೆಗೆ, ಜೀವನ್ಮುಕ್ತಿಯಂ=ಸ್ವರೂಪಾನಂದ ಆವಿರ್ಭಾವರೂಪ ಜೀವನ್ಮುಕ್ತಿಯು, ವಿದೇಹ ಕೈವಲ್ಯಂ = ವಿದೇಹಮೋಕ್ಷವು, ಈ ತನುವಿನ=ಈ ಶರೀರದ, ಅಂತ್ಯದೊಳಗೆ=ಕಡೆಯಲ್ಲಿ, ಅಪ್ಪುದು=ಆಗುವದು, ತಿಳಿ=ಅರಿ.

**ತಾತ್ಪರ್ಯ:-** ಯಾವ ಬ್ರಹ್ಮಜ್ಞಾನಿಯು ಪ್ರಾರಬ್ಧಕರ್ಮ ನಿಮಿತ್ತದಿಂದ ಜೀವಿಸಿಕೊಂಡು ಇರುವನೋ; ಅಲ್ಲಿಯುವರೆಗೆ ಈ ದೇಹಾದಿಗಳೊಡನಿದ್ದರೂ, ಅವುಗಳಿಗೆ. ಅಸಂಗನಾಗಿ ನಿರಭಿಮಾನತೆಯಿಂದಲೇ ಇರುತ್ತಾನೆ. ಮತ್ತು **'ನಿರಾವರಣ ಪರಿಪೂರ್ಣ ಆನಂದ ಸಹಿತ ವೃತ್ತಿತ್ವಂ ಜೀವನ್ಮುಕ್ತತ್ವಂ,** ಜೀವನ್ಮುಕ್ತಿಯನ್ನು ಹೊಂದಿಯೇ ಇರುತ್ತಾನೆ. ಇದು ಜೀವನ್ಮುಕ್ತಿಯ ಲಕ್ಷಣವಾಗಿದೆ. ಇಲ್ಲಿ ಆನಂದ ಸಹಿತ ವೃತ್ತಿಯೇ ಜೀವನ್ಮುಕ್ತಿಯೆಂದು ಹೇಳಿದರೆ, ವಿಷಯಾನಂದದಲ್ಲಿ **ಅತಿವ್ಯಾಪ್ತಿ** ದೋಷ ಬರುತ್ತದೆ. ಅದರಿಂದ **ಪರಿಪೂರ್ಣ** ಎಂಬ ಪದವನ್ನು ಸೇರಿಸಿದೆ. ಯಾಕಂದರೆ ವಿಷಯಾನಂದವು ಪರಿಚ್ಛಿನ್ನವಾಗಿದೆ. ಇನ್ನು ಪರಿಪೂರ್ಣ ಆನಂದವೇ ಜೀವನ್ಮುಕ್ತಿಯೆಂದು ಹೇಳಿದರೆ, ಅದು ನಿದ್ರಾನಂದದಲ್ಲಿ **ಅತಿವ್ಯಾಪ್ತಿ** ದೋಷವು ಬರುತ್ತದೆ. ಅದಕ್ಕಾಗಿ **ನಿರಾವರಣ** ಎಂಬ ಪದವನ್ನು ಪ್ರಯೋಗಮಾಡಿದ್ದಾರೆ. ನಿದ್ರಾನಂದವು ಪರಿಪೂರ್ಣವಿದ್ದರೂ ಆವರಣವಾಗಿದೆ. ಇನ್ನು ವೃತ್ತಿಯೆಂದೆನ್ನುವ ಪದವನ್ನು ಬಿಟ್ಟು, ನಿರಾವರಣ ಪರಿಪೂರ್ಣ ಆನಂದ ಸಹಿತವಾದದ್ದೇ ಜೀವನ್ಮುಕ್ತಿಯೆಂದು ಹೇಳಿದರೆ; ಈ ಲಕ್ಷಣವು **ವಿದೇಹಮುಕ್ತಿಯಲ್ಲಿ** ಅತಿವ್ಯಾಪ್ತಿ ಹೋಗುತ್ತದೆ. ಅಲ್ಲಿ ಈ ಲಕ್ಷಣವು ಹೋಗಬಾರದೆಂದು ತಿಳಿದು **ವೃತ್ತಿಸಹಿತ** ಎಂಬ ಪದವನ್ನು ಸೇರಿಸಿದ್ದಾದರೆ, ಲಕ್ಷಣವು ಜೀವನ್ಮುಕ್ತಿಯಲ್ಲಿ ಬರುತ್ತದೆ. ಇಂಥಾ ನಿರಾವರಣ ಪರಿಪೂರ್ಣ ಆನಂದ ಸಹಿತವಾದ ವೃತ್ತಿರೂಪ **ಜೀವನ್ಮುಕ್ತಿಯನ್ನು** ದೇಹವಿರುವ ಪರ್ಯಂತರ ಪಡೆದಿರುತ್ತಾನೆ. ಪ್ರಾರಬ್ಧ ಕ್ಷಯಾನಂತರ ದೇಹವು ಪಾತವಾಗಲು; ವಿದೇಹ ಮುಕ್ತಿಯನ್ನು ಹೊಂದುತ್ತಾನೆ. ಎಂದು ತಿಳಿ.

**ಬಳಿಕ:-** ಜೀವನ್ಮುಕ್ತಿ ವಿದೇಹಮುಕ್ತಿ ಇವುಗಳನ್ನು ಪ್ರತಿಪಾದಿಸುವ ಛಾಂದೋಗ್ಯಶೃತಿಯ ಪ್ರಮಾಣವನ್ನು ಹೇಳುತ್ತಾರೆ.

**ತಿಳಿದಾತನೀದೇಹವಳಿವನ್ನೆಗಂ ವೇದ|**
**ದೊಳು ತಸ್ಯ ತಾವದೇವ ಚಿರಮೆನಲಿರ್ಪ |**
**ನೆಳಸಿ ನೀನರಿವುದಿದನಿಂತು** ||೧೨||

**ಟೀಕಾ:-** ತಿಳದಾತನು=ಬಹ್ಮಜ್ಞಾನಿಯು, ಈ ದೇಹವಳಿವನ್ನೆಗಂ = ಈ ಶರೀರವು ನಾಶವಾಗುವ ಪರ್ಯಂತರ, (ಇರುವನು): ವೇದದೊಳು = ಶ್ರುತಿಯಲ್ಲಿ, ತಸ್ಯ=ಜ್ಞಾನಿಗೆ, ತಾವದೇವ=ಅಲ್ಲಿಯ ವರೆಗೆ, ಚಿರಂ=ತಡವು, ಎನಲ್=ಅನ್ನಲಾಗಿ, ಇರ್ಪನು=ಇರುವನು, ನೀನು=ನೀನು, ಇದನು = ಈ ವಿಷಯವನ್ನು. ಇಂತು= ಹೀಗೆ, ಎಳಸಿ=ಇಚ್ಛೈಸಿ, ಅರಿವುದು= ತಿಳಿಯುವದು.

**ತಾತ್ಪರ್ಯ:-** "**ತಸ್ಯ ತಾವದೇವ ಚಿರಂ ಯಾವನ್ನವೋಕ್ಷ್ಯೆ ಅಥ ಸಂಪತ್ಸೆ**" ಎಲ್ಲಿಯವರೆಗೆ ಪ್ರಾರಬ್ಧಕರ್ಮವಿರುವದೋ ಅಲ್ಲಿಯವರೆಗೆ ಜೀವಿಸಿ ಕೊಂಡು ಜೀವನ್ಮುಕ್ತನಾಗುತ್ತಾನೆ. ಅವನಿಗೆ ಅಲ್ಲಿಯತನಕ ತಡವಾಗಿದೆ. ಪ್ರಾರಬ್ಧಕರ್ಮ ನಾಶವಾದೊಡನೆ ದೇಹವು ನಾಶವಾಗುತ್ತದೆ. ಎಣ್ಣೆ ತೀರಿದೊಡನೆ ದೀಪವು ಆರಿದಂತೆ ದೇಹವು ನಾಶವಾಗುತ್ತದೆ. ತಾನು ಬ್ರಹ್ಮರೂಪನಾಗಿಯೇ ಉಳಿಯುವನು. ಇದು ವಿದೇಹಮುಕ್ತಿಯೆನಿಸುವದು. ಜೀವನ್ಮುಕ್ತಿ ವಿದೇಹ ಮುಕ್ತಿಗಳೇ ಜ್ಞಾನಕ್ಕೆ ಫಲಗಳಾಗಿರುತ್ತವೆಂದು ತಿಳಿ.

**ಶಂಕಾ:-** ಕೆಲವರು ಜ್ಞಾನ ಸಮಕಾಲದಲ್ಲಿ ವಿದೇಹಮುಕ್ತಿಯನ್ನೂ ದೇಹ ವಿರುವತನಕ ಜೀವನ್ಮುಕ್ತಿಯನ್ನು ಹೇಳುತ್ತಾರೆ. ಇದು ಹೇಗೆ ?

**ಸಮಾಧಾನ:-** ಜ್ಞಾನ ಸಮಕಾಲದಲ್ಲಿ ವಿದೇಹ ಮುಕ್ತಿಯನ್ನು ಹೇಳುವವರು ಭಾವೀ ದೇಹದ ಅಭಾವವನ್ನು ಲಕ್ಷಿಸಿ ಹೇಳುತ್ತಿದ್ದಾರೆ. ನಾವು ವರ್ತಮಾನಕಾಲ ದಲ್ಲಿರುವ ದೇಹದ ನಾಶವನ್ನು ಲಕ್ಷಿಸಿ ಈ ದೇಹದ ಅಂತ್ಯದಲ್ಲಿ ವಿದೇಹ ಮುಕ್ತಿ ಯೆಂದು ಹೇಳಿದ್ದೇವೆ. ಆದ್ದರಿಂದ ಅವರು ಹೇಳುವದಕ್ಕೂ ನಾವು ಹೇಳುವದಕ್ಕೂ ವಿರೋಧವಿಲ್ಲ. ದೇಹವಿರುವತನಕ ಜೀವನ್ಮುಕ್ತಿಯನ್ನು ಇಬ್ಬರು ಸಮನಾಗಿಯೇ ಅಂಗೀಕಾರಮಾಡಿದ್ದಾರೆಂದು ತಿಳಿ.

## ಜೀವನ್ಮುಕ್ತಿ ನಿರೂಪಣೆ ಸೂತ್ರ ೨ ಕ್ಕೆ ತ್ರಿಪದಿ ೧೭

---

**ಬಳಿಕ,** ಅಹಂಬ್ರಹ್ಮಾಸ್ಮಿಯೆಂಬ ಬ್ರಹ್ಮಾಪರೋಕ್ಷನಾದ ಜ್ಞಾನಿಯು, ಸಂಚಿತಾಗಾಮಿಗಳೆಂಬ ಎರಡು ಕರ್ಮಗಳನ್ನು ಅಳಿದು, ಪ್ರಾರಬ್ಧಕರ್ಮದಿಂದ ಜೀವಿಸಿಕೊಂಡು, ದೇಹೇಂದ್ರಿಯಾದಿಗಳೊಡನೆ ಕೂಡಿದ್ದರೂ, ಅಸಂಗನಾಗಿ ನಿರ ಭಿಮಾನದಿಂದ ಜೀವನ್ಮುಕ್ತಿವಿಲಕ್ಷಣಾನಂದವನ್ನು ಅನುಭವಿಸುತ್ತಾ ಇರುತ್ತಾ ನೆಂದು ಹೇಳಿದಿರಿ. ಅವನು ಕೆಲವು ದಿವಸ ಪ್ರಾರಬ್ಧಕ್ಷಯಪರ್ಯಂತರ ಜೀವಿಸಿ ಕೊಂಡಿರುವನು. ಇವನಿಗೆ ಹಿಂದಿನ ಸಂಚಿತಕರ್ಮದಕಾಟವಿಲ್ಲ. ಮುಂದಿನ ಆಗಾಮಿ

ಕರ್ಮದ ಭಯವಿಲ್ಲ. ಹೀಗಿರಲು ಇವನು ತನ್ನ ದೇಹಾದಿಗಳಲ್ಲಿ ಯಾವ ಕ್ರಿಯೆಗಳನ್ನು ಆಚರಿಸುವನು? ಇವನು ಯಾವ ಆಚಾರದಿಂದ ಕೂಡಿರುವನು? ಅಸತ್ಕರ್ಮಗಳನ್ನು ಸಾಧನಾವಸ್ಥೆಯಲ್ಲಿಯೇ ಬಿಟ್ಟದ್ದರಿಂದ ಮಾಡನು. ಫಲಾಪೇಕ್ಷೆಯಾಗಲಿ, ಚಿತ್ತಶುದ್ಧಿಯಾಗಲಿ ಆಗಬೇಕೆಂಬುವದು ಇವನಿಗಿಲ್ಲ ಆದ್ದರಿಂದ ಸತ್ಕರ್ಮಗಳನ್ನು ಮಾಡುವ ಇಚ್ಛೆಯೂ ಇವನಿಗಿಲ್ಲ. ಹೀಗೆ ಸತ್ಕರ್ಮ, ಅಸತ್ಕರ್ಮಗಳೆರವನ್ನು ಬಿಟ್ಟಮೇಲೆ, ಯಾವ ಆಚಾರದಿಂದ ಕೂಡಿರುವನು? ಎಂಬುದು ನನಗೆ ಸಂದೇಹವಾಗಿದೆ. ಮತ್ತು ಸತ್ಕರ್ಮಗಳಿಂದ ತನಗೇನು ಪ್ರಯೋಜನವಿಲ್ಲದಿದ್ದರೂ, ಅನ್ಯಮುಮುಕ್ಷಜನರ ಹಿತಾರ್ಥವಾಗಿ ಸತ್ಕರ್ಮಗಳನ್ನು ಮಾಡಬಹುದೋ? ಎಂಬದಾಗಿ ತೋರುತ್ತದೆ. ಆದ್ದರಿಂದ ಜ್ಞಾನಿಯು ದೇಹಪಾತ ಪರ್ಯಂತರ ಯಾವ ಆಚಾರದಿಂದ ಇರುವನು? ಎಂಬುವದನ್ನು ಹೇಗುರುವರ್ಯ! ನನಗೆ ತಿಳಿಸಬೇಕು. ಎಂದು ಶಿಷ್ಯನ ಅಭಿಪ್ರಾಯವಾಗಿದೆ.

ಸೂತ್ರ ॥ **ಶಾರೀರವಳಿವ ಪರಿಯಂತನಿಹ ಯೋಗಿಗಾ।**
**ಚಾರವಾವುದು ಗುರುವೆ ಕರುಣಿಸೆನಗೆ॥**

**ಟೀಕಾ:-** ಗುರುವೇ=ಗುರುದೇವನೇ, ಶಾರಿರವಳಿವಪರಿಯಂತ=ಶರೀರವು ನಾಶವಾಗುವವರೆಗೂ, ಇಹ=ಇರುವಂಥಾ, ಯೋಗಿಗೆ=ಜ್ಞಾನಿಗೆ, ಆಚಾರವು=ಕ್ರಿಯೆಯು, ಆವುದು=ಯಾವದಿರುವದು, ಎನಗೆ=ನನಗೋಸ್ಕರ, ಕರುಣಿಸು=ಕೃಪೆಮಾಡಬೇಕು.

**ತಾತ್ಪರ್ಯ!- ಯಾವಜ್ಜೀವಂ ಅಗ್ನಿಹೋತ್ರಂ ಕುರ್ಯಾತ್,** ಜೀವಿಸಿಕೊಂಡು ಇರುವವರೆಗೂ ಅಗ್ನಿಹೋತ್ರಾದಿ ಸತ್ಕರ್ಮಗಳನ್ನು ಮಾಡುತ್ತಲೇ ಇರಬೇಕೆಂದು ವೇದವಾಕ್ಯವಿರುತ್ತದೆ. “ **ಯದ್ಯದಾಚರತಿ ಶ್ರೇಷ್ಠ ತತ್ತದೇವ ಇತರೋಜನಾಃ**” ಶ್ರೇಷ್ಠನು ಆಚರಿಸುವದನ್ನು ಕಂಡು, ಇತರರು ಅದನ್ನು ಆಚರಿಸುತ್ತಾರೆಂಬ **ಸ್ಮೃ**ತಿವಾಕ್ಯವಿರುತ್ತದೆ. ಈ ಶ್ರುತಿಸ್ಮೃತಿವಾಕ್ಯಗಳಿಗೆ ಅನುಸಾರವಾಗಿ ಜ್ಞಾನಿಯು ಶರೀರನಾಶವಾಗುವ ಪರ್ಯಂತರ, ಯಾವದೊಂದು ಆಚಾರದಿಂದ ಕೂಡಿರಲಿಕ್ಕೇಬೇಕಾಗುತ್ತದೆ. ಇವನಿಗೆ ವೇದವು ನೀನು ಹೀಗೆ ಮಾಡಲಿಕ್ಕೆಬೇಕು ಎಂದು ಆಜ್ಞೆಯನ್ನು ಮಾಡುವದೋ ಇಲ್ಲವೋ? ಇವನು ವೇದದ ಆಜ್ಞೆಯನ್ನು ಪಾಲಿಸುವನೋ ಹೇಗೆ? ಇವನ ಮೇಲೆ ವೇದದ ಆಜ್ಞೆಯಿಲ್ಲೆಂದು ಹೇಳಿದರೆ, ಇವನು ಯಾವ ಆಚರಣೆಯನ್ನು ಆಚರಿಸುವನು? ಈ ವಿಷಯವನ್ನು ಹೇಗುರುವೇ ನನಗೆ ತಿಳಿಯುವಂತೆ ಹೇಳಬೇಕು. ಎಂದು ಕೇಳುತ್ತಲಿದ್ದಾನೆ.

**ಬಳಿಕ, ಶಿಷ್ಯನು** ಶ್ರೀಗುರುವಿನನ್ನು ಕೊಂಡಾಡಿ ಅವರ ಚಿತ್ತವನ್ನು ಪ್ರಸನ್ನೀಕರಿಸಿಕೊಂಡು, ತನ್ನ ಪ್ರಶ್ನಾಭಿಪ್ರಾಯವನ್ನು ತಿಳಿಸುತ್ತಾನೆ.

**ನುಡಿ ವೇದವೆನಿಸಿ ಕಣ್ಣಡೆ ದಯದ ಕಡಲೆನಿಸಿ।**
**ಬಿಡದೆನ್ನ ನುದ್ಧರಿಸುವಾರ್ಯ ಜಯತೆನು।**
**ತ್ತಡಿಗೆರಗಿ ಸೂನು ಬೆಸಗೊಂಡ ॥೧॥**

**ಟೀಕಾ:-** ನುಡಿ=ಮಾತುಗಳು, ವೇದವೆನಿಸಿ= ಶ್ರುತಿಗಳೆಂದು ಹೇಳಿಸಿ ಕೊಳ್ಳುವ, ಕಣ್ಣಡೆ=ಕಣ್ಣಿನ ಕಟಾಕ್ಷವು, ದಯದ=ಕರುಣಾರಸದ, ಕಡಲೆನಿಸಿ= ಸಮುದ್ರವೆನಿಸಿ, ಎನ್ನನು=ನನ್ನನ್ನು ಬಿಡದೆ=ತ್ಯಜಿಸದೆ, ಉದ್ಧರಿಸುವ=ಉದ್ಧಾರ ಮಾಡುವಂಥಾ, ಆರ್ಯ=ಪೂಜ್ಯನೇ, ಜಯತೆನ್ನುತ=ನಿನಗೆ ಜಯವಾಗಲೆಂದು ಹೇಳುತ್ತಾ. ಅಡಿಗೆರಗಿ=ಪಾದಗಳಿಗೆ ನಮಸ್ಕಾರಮಾಡಿ, ಸೂನು=ಶಿಷ್ಯನು ಬೆಸ ಗೊಂಡ=ಪ್ರಶ್ನೆ ಮಾಡಿದನು.

**ತಾತ್ಪರ್ಯ:-** ಹೇ ಗುರುವರ್ಯನೇ! ನಿನ್ನ ವಾಣಿಯು ವೇದವಾಗಿರುವದು. ಯಾಕಂದರೆ, ವೇದವನ್ನು ಓದಿದರೆ ಅದರ ಅರ್ಥವಾಗದು. ನಿನ್ನ ವಾಣಿಯಿಂದ ಆ ವೇದ ಹೊರಬಿದ್ದರೆ ಅದರರ್ಥವಾಗುವದು. ಆದರಿಂದ ನಿಮ್ಮ ವಾಣಿಯೇ ನಮಗೆ ವೇದವಾಗಿರುವದು. ನಿನ್ನ ಕಡೆಗಣ್ಣಿನ ಕಟಾಕ್ಷವು ನಮ್ಮಮೇಲೆ ಪಸರಿಸಿ ಭವತಾಪ ವನ್ನು ದೂರಮಾಡಿ, ನಿಜಾನಂದರೂಪ ಶೀತಳತ್ವವನ್ನುಂಟು ಮಾಡುವದರಿಂದ, ದಯಾರಸದಿಂದ ಕೂಡಿ ಸಮುದ್ರಪ್ರಾಯವಾಗಿದೆ. ಹೀಗೆ ಹೇಳುವದರಿಂದ ! ಹೇ ಗುರುವೇ! ನೀನು ದಯಾಮಯದೃಷ್ಟಿಯಿಂದ ನಮ್ಮನ್ನು ನೋಡಿ, ವಾಣಿಯಿಂದ ನಮ್ಮ ನಿಜವನ್ನು ಬೋಧಿಸಿ, ಭವದಿಂದ ನಮ್ಮನ್ನು ಮುಕ್ತರನ್ನಾಗಿ ಮಾಡಲಿಕ್ಕೆ ಶಕ್ತನಾಗಿರುವಿ. ಎಂಬ ಭಾವವು. ಈ ವಿಧವಾದ ಗುರುವರ್ಯನೇ! ನಿನಗೆ ಜಯ ವಾಗಲಿ. ಎಂದು ಕೊಂಡಾಡುತ್ತ ಶಿಷ್ಯನು, ಗುರುಪಾದ ಕಮಲಗಳಿಗೆ ನಮಸ್ಕಾರ ವನ್ನು ಮಾಡಿ, ಮುಂದೆ ಪ್ರಶ್ನೆಯನ್ನು ಮಾಡುವಂಥವನಾದನು

ಬಳಿಕ, ಗುರುವರ್ಯ! ಪ್ರಾರಬ್ಧಕರ್ಮವಾಸನೆಯಿಂದ ಜ್ಞಾನಿಯು ಜೀವಿ ಸುತ್ತಿರುವನೆಂದು ಹೇಳಿದಿರಿ. ಅವನು ಜೀವಿಸಿಕೊಂಡಿರಲು ಅವನಿಗೆ ವೇದದ ವಿಧಿಯು ಉಂಟೋ ಇಲ್ಲೋ? ಅಂದರೆ ದೇಹವಿರುತನಕ ನೀನು ಹೀಗೆ ಇರಲಿಕ್ಕೆ ಬೇಕೆಂದು ಅವನ ತನು, ಮನ, ಇಂದ್ರಿಯಾದಿಗಳಲ್ಲಿ ಏನಾದರೊಂದು ಕಟ್ಟಳೆ ಯನ್ನು ಹೋಳುವದೋ? ಇಲ್ಲೋ? ಅವುಗಳನ್ನು ನನಗೆ ತಿಳಿಸಬೇಕು. ಎಂದು ಪ್ರಶ್ನೆಮಾಡುತ್ತಲಿದ್ದಾನೆ.

**ಪ್ರಾರಬ್ಧಕರ್ಮಾನುಸಾರದಿಂ ಜೀವಿಸುವ।**
**ಧೀರಂಗೆ ವಿಧಿಗಳೇನುಂಟು ಗುರುವೇ ನಿಜ।**
**ಕಾರುಣ್ಯದಿಂದೆ ತಿಳುಹುವದು ॥೨॥**

**ಟೀಕಾ:-** ಪ್ರಾರಬ್ಧಕರ್ಮಾನುಸಾರದಿಂ=ಪ್ರಾರಬ್ಧಕರ್ಮಕ್ಕೆ ಅನುಸರಿಸಿ, ಜೀವಿಸುವ=ಬದಕುವ, ಧೀರಂಗೆ= ಜ್ಞಾನಿಗೆ, ವಿಧಿಗಳು=ಅವಶ್ಯಮಾಡತಕ್ಕಕರ್ಮ ಗಳು, ಏನುಂಟು=ಏನಿರುವವು, ಗುರುವೇ=ಗುರುವೇ, ನಿಜಕರುಣದಿಂದೆ=ನಿಜವಾದ ಕೃಪಾದೃಷ್ಟಿಯಿಂದ, ತಿಳುಪುವದು=ತಿಳಿಸುವದು,

**ತಾತ್ಪರ್ಯ:-** ಸ್ವಸ್ವರೂಪ ಬ್ರಹ್ಮಾಪರೋಕ್ಷಜ್ಞಾನದಿಂದ ಅಜ್ಞಾನದ ಆವ ರಣ ಅಂಶವು ನಷ್ಟವಾದರೂ, ವಿಕ್ಷೇಪಾಂಶವು ಪ್ರಾರಬ್ಧಕರ್ಮ ಪ್ರತಿಬಂಧಕತ್ವ ದಿಂದ ಉಳಿದಿರುತ್ತದೆ. ಅದರಿಂದ ಗಾಳಿಗೆ ಸಿಕ್ಕ ಒಣಎಲೆಯು ಅತ್ತಿತ್ತ ತಿರಗುವಂತೆ, ಜ್ಞಾನಿಯ ಶರೀರಯಾತ್ರೆಯಾದರೂ ಪ್ರಾರಬ್ಧಕರ್ಮ ಸಂಸ್ಕಾರದಿಂದ ನಡೆದಿರು ತ್ತದೆ. ಜ್ಞಾನೋತ್ತರ ಕಾಲದಲ್ಲಿಯೂ ಬದುಕಿಕೊಂಡಿರುವ ಜ್ಞಾನಿಗೆ; ಹೀಗೆ ಇರಬೇಕೆಂಬ ವಿಧಿಗಳು ಅಂದರೆ ಕಟ್ಟಳೆಗಳು ಏನಾದರೂ ಉಂಟೇ? ಇಲ್ಲವೇ? ಎಂಬುದನ್ನು ತಿಳಿಸಬೇಕು. ಎಂದು ಶಿಷ್ಯನು ಇಲ್ಲಿ ಪ್ರಶ್ನೆಯನ್ನು ಮಾಡುತ್ತಲಿ ದ್ದಾನೆ. ಜ್ಞಾನಿಗೆ ವಿಧಿಗಳನ್ನು ಹೇಳಿದರೆ; ಅವನಲ್ಲಿ ಜೀವತ್ವವುಂಟೆಂದು ಹೇಳ ಬೇಕಾಗುತ್ತದೆ. ವಿಧಿಗಳಿಲ್ಲವೆಂದು ಹೇಳಿದರೆ, ಸ್ವಚ್ಛಂದ ವರ್ತನೆಯಿಂದ ಪಾಪಗಳು ಸಂಭವಿಸಬಹುದು. ಅದರಿಂದ ಆವನಿಗೆ ದುಃಖಾದಿಗಳು ಆಗಬಹುದು. ಎಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ವಿಧಿಯುಂಟೇ ಹೇಗೆ ಎಂಬದಾಗಿ ಕೇಳುತ್ತಿರವನೆಂಬ ಭಾವವು.

ಬಳಿಕ, ಮುಕ್ತನಿಗೆ ಜೀವತ್ವವಿಲ್ಲದ್ದರಿಂದ ವಿಧಿಗಳನ್ನು ಹೇಳಲಿಕ್ಕೆ ಬರು ವದಿಲ್ಲೆಂದೂ, ಅವನು ಪುಣ್ಯಪಾಪಗಳ ಸಂಬಂಧವಿಲ್ಲದೆ ನಿರ್ಲಿಪ್ತನಾಗಿರುವನೆಂದೂ, ನಿರೂಪಣಮಾಡುತ್ತಾರೆ.

**ಎನೆ ವತ್ಸಕೇಳು ಮುಕ್ತನ ವಿಷಯವಾಗಿ ವಿಧಿ ।**
**ಯನು ಪೇಳಲಾಗ ದುಭಯ ಕರ್ಮದ ಕೂಟ ।**
**ವನು ಮೀರಿ ವರ್ತಿಸುವನಾಗಿ ॥೩॥**

**ಟೀಕಾ:-**ಎನೆ=ಶಿಷ್ಯನು ಹೀಗನ್ನಲಾಗಿ, ವತ್ಸಕೇಳು=ಎಲೈಶಿಷ್ಯನೇ ಆಲಿಸು, ಮುಕ್ತನವಿಷಯವಾಗಿ=ಜೀವನ್ಮುಕ್ತನಿಗಾಗಿ, ವಿಧಿಯನು=ಕರ್ತವ್ಯಕರ್ಮವನ್ನು ಪೇಳಲಾಗದು=ಹೇಳಲಿಕ್ಕೆಬರುವದಿಲ್ಲ ( ಯಾಕಂದರೆ, ) ಉಭಯಕರ್ಮದ=ಪುಣ್ಯ ಪಾಪಗಳೆಂಬೆರಡು ಕರ್ಮಗಳ, ಕೂಟವನು=ಸಂಬಂಧವನ್ನು, ಮೀರಿ=ದಾಟಿ, ವರ್ತಿಸುವನಾಗಿ=ಇರುವವನಾದ್ದರಿಂದ.

**ತಾತ್ಪರ್ಯ:-** ಪುಣ್ಯಪಾಪಗಳೆಂಬ ಎರಡು ಕರ್ಮಗಳ ಸಂಬಂಧವಿಲ್ಲದೆ ಇರುವದರಿಂದ, ಮುಕ್ತನಿಗೆ ವಿಧಿಯನ್ನು ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ,

ವೇದವು ವಿಧಿಯನ್ನು ಹೇಳಬೇಕಾದರೆ, ಜೀವನನ್ನು ಕುರಿತು ಹೇಳುತ್ತದೆ. ಜೀವನ್ಮುಕ್ತನಲ್ಲಿ ಜೀವತ್ವವಿಲ್ಲ. ಜೀವನುಮಾತ್ರ ಇದ್ದಾನೆ. ವಿಷದಂತವಿಲ್ಲದ ಹಾವಿನಲ್ಲಿ ಸರ್ಪತ್ವವಿಲ್ಲ. ಕಿಂತು ಸರ್ಪವು ಜೀವಿಸಿಕೊಂಡಿರುವಂತೆ ಇದ್ದರೂ, ಅದು ಇಲ್ಲದಂತೆ ಆಗಿರುತ್ತದೆ. ಇದರಂತೆ ಅನ್ಯೋನ್ಯಾಧ್ಯಾಸರೂಪ ಹೃದಯಗ್ರಂಥಿಯೆಂಬ ಜೀವತ್ವವು ಜೀವನ್ಮುಕ್ತನಲ್ಲಿ ಇಲ್ಲ. ಕಿಂತು ಜೀವನುಮಾತ್ರವಿರುತ್ತಾನೆ. ಆದರಿಂದ ವೇದವುಜೀವನ್ಮುಕ್ತನಿಗೆ ವಿಧಿಯನ್ನು ಹೇಳುವದಿಲ್ಲ. ಕರ್ಮೋಪಾಸನೆಗಳು ಜೀವನಿಗೆ ಹೇಳಿರುತ್ತವೆ. ಜೀವತ್ವವಿಲ್ಲದ ಮೇಲೆ ವೇದವು ಯಾರಿಗೆ ವಿಧಿಯನ್ನು ಹೇಳಬೇಕು? ವರನೇ ಸತ್ತುಹೋದಮೇಲೆ ಕನ್ಯೆಯನ್ನು ತಂದು ಯಾರಿಗೆ ಲಗ್ನಮಾಡಬೇಕು ? ವರನಿಲ್ಲದ ಬಳಿಕ ಕನ್ಯೆ ಹೇಗೆ ನಿರುಪಯೋಗವೋ, ಅದರಂತೆ ಜೀವತ್ವವಿಲ್ಲದ ಬಳಿಕ ವಿಧಿಗಳು ನಿರುಪಯೋಗವೇ ಆಗಿರುತ್ತವೆ. ಈ ಕಾರಣದಿಂದಲೇ ಜೀವನ್ಮುಕ್ತನಿಗೆ ವೇದವು ವಿಧಿಗಳನ್ನು ಹೇಳಲಿಕ್ಕೆ ಹೋಗುವದಿಲ್ಲ. ಮುತ್ತು ಮುಕ್ತನು ಪುಣ್ಯಪಾಪಗಳ ಸಂಬಂಧವಿಲ್ಲದೆ, ಕಮಲಪತ್ರದಂತೆ ನಿರ್ಲೇಪನಾಗಿರುವನು. ಆದ್ದರಿಂದ ಮುಕ್ತನಿಗೆ ವಿಧಿಗಳಿಲ್ಲವೆಂದು ತಿಳಿ. ಮುಕ್ತನಿಗೆ ಆಜ್ಞೆಯನ್ನು ಮಾಡುವ ಅಧಿಕಾರವು ವೇದಕ್ಕಿಲ್ಲ.

ಬಳಿಕ, ಪುಣ್ಯಪಾಪ ಕರ್ಮಗಳ ಸಂಬಂಧವಿಲ್ಲದೆ, ಮುಕ್ತನು ಎಲ್ಲರಂತೆ ದೇಹಧಾರಿಯಾಗಿ ಜೀವಿಸಿಕೊಂಡಿರುತ್ತಾನೆ. ಅದರಿಂದ ಸತ್ಕರ್ಮಗಳನ್ನು ದೇಹವಿರುವತನಕ ಮಾಡಲಿಕ್ಕೆಬೇಕೆಂದು, ಶಿಷ್ಯನು ಆಗ್ರಹಪೂರ್ವಕ ಶಂಕೆಯನ್ನು ಮಾಡುತ್ತಲಿದ್ದಾನೆ.

**ಪಾಪ ಪುಣ್ಯಂಗಳನುಲೇಪವಿಲ್ಲದೊಡೇನು ।**
**ರೂಪುವಿಡಿದಿರ್ಪನಾಗಿ ಸತ್ಕರ್ಮಕುಳ ।**
**ನೇಪೊತ್ತು ಬೇಹುದೆನೆ ಕೇಳು ॥೪॥**

**ಟೀಕಾ:-** ಪಾಪಪುಣ್ಯಗಳ=ಪುಣ್ಯ ಪಾಪಗಳ, ಅನುಲೇಪವು = ಸ್ಪರ್ಶತ್ವವು, ಇಲ್ಲದೊಡೇನು=ಇಲ್ಲದಿದ್ದರೆಏನಾಯಿತು, ರೂಪುವಿಡಿದಿರ್ಪನಾಗಿ = ಶರೀರವನ್ನು ಧಾರಣಮಾಡಿಕೊಂಡಿರುವುದರಿಂದ, ಸತ್ಕರ್ಮಕುಳವ = ಸತ್ಕರ್ಮರೂಪ ವಿಧಿಗಳನ್ನೇ, ಏಪೊತ್ತು=ಯಾವಾಗಲೂ, ಬೇಹುದು=ಮಾಡುತ್ತಿರಬೇಕು, ಎನೆ=ಹೀಗೆ ಹೇಳಿದರೆ, ಕೇಳು=ಆಲಿಸು.

**ತಾತ್ಪರ್ಯ:-** ಅಹಂಬ್ರಹ್ಮಾಸ್ಮಿಯೆಂಬ ಜ್ಞಾನೋತ್ತರ ಕಾಲದಲ್ಲಿ ಬ್ರಹ್ಮಜ್ಞಾನಿಯು ಜೀವಿಸಿಕೊಂಡಿರಲು; ಅವನಿಗೆ ಆಗಾಮಿಪುಣ್ಯಪಾಪಗಳ ಸಂಬಂಧವಿಲ್ಲದೆ ಇದ್ದರೂ, ಎಲ್ಲರಂತೆ ಶರೀರದಿಂದ ಸಹಿತನಾಗಿ ಜೀವಿಸಿಕೊಂಡಿರುತ್ತಾನೆ.

ಶರೀರದಲ್ಲಿ ಪ್ರಾಣವಿರುವವರೆಗೂ ಅವನು ಸುಮ್ಮನೆ ಉದಾಸೀನನಾಗಿ ಕಾಲಹರಣ ಮಾಡುವದಕ್ಕಿಂತಲೂ, ಸತ್ಕರ್ಮಗಳನ್ನು ಮಾಡುವದು ಒಳ್ಳೇದು. ಒಂದುವೇಳೆ; ಸತ್ಕರ್ಮಗಳನ್ನು ಮಾಡದೆ ಹೋದರೆ, ಅವನ ದೇಹೇಂದ್ರಿಯಾದಿಗಳಿಂದ ಅಸತ್ಕರ್ಮಗಳೂ ಸಂಭವಿಸಬಹುದು. ಆದ್ದರಿಂದ ಪಾಪಕರ್ಮಗಳನ್ನು ಮಾಡುವದಕ್ಕಿಂತಲೂ ಪುಣ್ಯಕರ್ಮಗಳನ್ನು ಮಾಡುವದು ಹಿತವಾಗಿರುತ್ತದೆ. ಮತ್ತು ಶ್ರೇಷ್ಠನಾದ ಇವನ ಸದಾಚಾರವನ್ನು ಕಂಡು ಕನಿಷ್ಠರು ಇವನ ಅನುಕರಣಮಾಡುತ್ತಾರೆ. ಇದರಿಂದ ಪಾಪಕರ್ಮಗಳನ್ನು ಬಿಡಿಸಿ ಪುಣ್ಯಕರ್ಮಗಳಲ್ಲಿ ಪ್ರವರ್ತಿಯನ್ನು ಮಾಡಿಸಿದಂತಾಗುತ್ತದೆ. ಎಂದು ಶಿಷ್ಯನು ಶಂಕೆಯನ್ನು ಮಾಡಿದ್ದಾನೆ. ಇದಕ್ಕೆ ಮುಂದೆ ಹೇಳುವರೀತಿಯಾಗಿ ಗುರುಗಳು ಉತ್ತರವನ್ನು ಹೇಳುತ್ತಲಿದ್ದಾರೆ.

ಬಳಿಕ, ಗುರುಗಳು ಶಿಷ್ಯನ ಪ್ರಶ್ನಾಭಿಪ್ರಾಯವನ್ನು ಅರಿತು, ಯೋಗಿಯು ಯಾವ ದೇವತೆಯನ್ನು ಕುರಿತು, ಯಾವ ಸತ್ಕರ್ಮಗಳನ್ನು ಮಾಡಿ, ಯಾವದಾದರೊಂದು ಫಲವನ್ನು ಪಡೆಯಬೇಕೆಂಬ ಬಯಕೆಯು ಅವನಿಗೆ ಇಲ್ಲ. ಯಾಕಂದರೆ, ಅವನಿಗೆ ಭಿನ್ನವಾಗಿ ಏನೂ ಕಾಣುವದಿಲ್ಲೆಂದು ಉತ್ತರವನ್ನು ಹೇಳುತ್ತಲಿದ್ದಾರೆ.

> ನೀರೊಳಗಿಳಿದವಂಗೆ ನೀರತೃಷೆಯಡಸದಂ ।
> ತಾರಾಧನಾದಿ ಬಯಕೆ ದೋರದು ಯೋಗಿ ।
> ಗಾರೈಯ್ಯಲನ್ಯವಿರದಾಗಿ ॥೫॥

ಟೀಕಾ :- ನೀರೊಳಗೆ = ನೀರಿನಲ್ಲಿ , ಇಳಿದವಂಗೆ = ನಿಂತವನಿಗೆ, ನೀರತೃಷೆಯು = ನೀರಡಿಕೆಯು, ಅಡಸದಂತೆ = ಆಗದಂತೆ , ಆರಾಧನಾದಿ = ಯಾವ ದೇವತೆಯನ್ನು ಕುರಿತು ಪೂಜಿಸಿ ಫಲವನ್ನು ಬೇಡುವ, ಬಯಕೆಯು=ಇಚ್ಛೆಯು, ತೋರದು= ತೋರುವದಿಲ್ಲ. ಆರೈಯ್ಯಲ್=ವಿಚಾರವನ್ನು ಮಾಡಲು, ಯೋಗಿಗೆ= ಜ್ಞಾನಯೋಗಿಗೆ, ಅನ್ಯವಿರದಾಗಿ=ಯಾವದೇವರೂ ಭಿನ್ನವಿಲ್ಲದ್ದರಿಂದ.

ತಾತ್ಪರ್ಯ:- ನೀರಲ್ಲಿ ಮುಳಿಗಿದವನಿಗೆ ನೀರಡಿಕೆಯಾಗದಂತೆ ಸಮುದ್ರಕ್ಕೆ ನೀರಿನಿಚ್ಛೆಯಿರದಂತೆ, ಲಕ್ಷ್ಮಿಗೆ ಧನಾಪೇಕ್ಷೆಯಿಲ್ಲದಂತೆ, ಸಕ್ಕರೆಗೆ ಸೀ ಬೇಕೆಂಬ ಬಯಕೆ ತೋರದಂತೆ, ಎಲ್ಲವೂ ತಾನೆಂಬ ಸರ್ವಾತ್ಮಕ ಬ್ರಹ್ಮನಾದ ಜ್ಞಾನಿಗೆ, ಯಾವದೇವತೆಯನ್ನು ಭಜಿಸಿ ಪೂಜಿಸಿ ಏನಾದರೊಂದು ಫಲ ಪಡೆಯಬೇಕೆಂಬ ಇಚ್ಛೆಯು ತೋರುವದಿಲ್ಲ. ಯಾಕಂದರೆ; ಎಲ್ಲದೇವತಾತ್ಮನೇ ತಾನಾಗಿರುವನು. ಎಲ್ಲಾ ದೇವರ ಐಶ್ವರ್ಯವೂ ತನ್ನದೇ ಆಗಿರುವದು . ತನಗೆ ಭಿನ್ನವಾಗಿ ಏನೂ ತೋರುವದಿಲ್ಲ. ಆದ್ದರಿಂದ ಸತ್ಕರ್ಮರೂಪ ವಿಧಿಗಳನ್ನು ಮಾಡಲಿಕ್ಕೆ ಹೋಗುವದಿಲ್ಲ. ಯಾವನು ಪರಿಚ್ಛಿನ್ನ ದೇಹಾಭಿಮಾನಿಯಾಗಿ ತನಗಿಂತಭಿನ್ನ ದೊಡ್ಡ ದೇವ

ನಿರುವನೆಂದು ತಿಳಿದುಕೊಂಡು . ಇರುವನೋ ; ಅವನು ಮಾತ್ರ ದೇವತೆಯನ್ನು ಆರಾಧಿಸಿ ಫಲವನ್ನು ಪಡೆಯಬೇಕು ಎನ್ನುತ್ತಾನೆ. ಈ ಇಚ್ಛೆಯು ಪೂರ್ಣನಾದ ಜ್ಞಾನಿಗೆ ಆಗುವದಿಲ್ಲ. ಆದ್ದರಿಂದಲೇ ವಿಚಾರಸಾಗರಕಾರರು " ನನ್ನಾತ್ಮಸ್ವರೂಪ ವೆಂಬ ಸಮುದ್ರದೊಳಗಿನ ತೆರೆಗಳಾಗಿ ಮಹೇಶ ಗಣೇಶಾದಿಗಳಿರುತ್ತಾರೆ . ನಾನು ಯಾರಿಗೆ ನಮಸ್ಕಾರಮಾಡಲಿ'' ಎಂದು ಹೇಳಿದ್ದಾರೆ. ಹೀಗನ್ನುವದರಿಂದ ತನಗೆ ಯಾವದೇವರು ಭಿನ್ನವಲ್ಲವೆಂಬ ಭಾವವು. ಆದ್ದರಿಂದ **ಪೂರ್ಣಜ್ಞಾನಿಗೆ** ಪೂಜಿಸುವ ಇಚ್ಛೆಯು ಆಗುವದಿಲ್ಲ.

**ಬಳಿಕ,** ಹಿಂದೆ ಹೇಳಿದ ಅರ್ಥವನ್ನೇ ಮುಂದಿನ ಪದ್ಯದಿಂದಲೂ ವಿಶೇಷವಾಗಿ ತಿಳಿಸುತ್ತಲಿದ್ದಾರೆ.

**ಆವ ತದ್ಧ್ಯಾನವಿನ್ನಾವ ಜಪಕರ್ಮತತಿ ।**
**ಯಾವ ಪೂಜೋಪಚಾರ ವಂದನೆಗಳುಂ ।**
**ಆವ ದೇವತೆಯವನಿಗನ್ಯ** ॥೭॥

**:ಟೀಕಾ:-** ಆವತಧ್ಧ್ಯಾನವು=ಯಾವಧ್ಯಾನವುಂಟು, ಇನ್ನು=ಮತ್ತು, ಯಾವ ಜಪಕರ್ಮತತಿ = ಜಪ ಕರ್ಮಗಳ ಸಮೂಹವಾದರೂ ಯಾವದಿರುವದು, ಯಾವ ಪೂಜೋಪಚಾರ ವಂದನೆಗಳುಂಟು = ಪೂಜಾ, ಉಪಚಾರ, ವಂದನೆಗಳಾದರೂ ಯಾವುಂಟು, ಆವದೇವತೆ ಅವನಿಗನ್ಯ = ಯಾವ ದೇವರು ಅವನಿಗೆ ಅನ್ಯವಾಗಿರುವದು.

**ತಾತ್ಪರ್ಯ:-** **'ಸರ್ವಂ ಖಲ್ವಿದಂ ಬ್ರಹ್ಮ 'ಆತ್ಮೈವೇದಂ ಸರ್ವಂ' 'ತತ್ರಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತ:'** ಎಂದು ಶ್ರುತಿಗಳು ಹೇಳುವ ಕಾರಣ ; ಏಕತ್ವ ಪರಿಪೂರ್ಣನಾದ ಜ್ಞಾನಿಗೆ ಯಾವ ದೇವರು ಬೇರೆಯಿರದ್ದರಿಂದ; ಯಾವ ಪೂಜೆಗಳಾಗಲಿ ಷೋಡಶ ಉಪಚಾರಗಳಾಗಲಿ, ನಮಸ್ಕಾರಗಳಾಗಲಿ, ಜಪಗಳಾಗಲಿ, ಹೋಮಹವನಾದಿ ಕರ್ಮಗಳಾಗಲಿ, ಧ್ಯಾನಗಳಾಗಲಿ ಯಾವೂ ಇಲ್ಲ. ಇವೆಲ್ಲವುಗಳು ಭೇದದರ್ಶಿಯಾದ ಅಜ್ಞಾನಿ ಜೀವನನ್ನು ಕುರಿತು ಹೇಳಿದ ವಿಷಯಗಳಾಗಿವೆ. ಆದ್ದರಿಂದ ಪರಿಪೂರ್ಣ ಜ್ಞಾನಿಗೆ ಇವುಗಳ ಸಂಬಂಧವಿಲ್ಲವೆಂದು ತಿಳಿ.

**ಬಳಿಕ,** ಜಪ, ಧ್ಯಾನ, ಪೂಜಾದಿಗಳು ಜೀವನ್ಮುಕ್ತಿಗೆ ಉಪಯೋಗವಿಲ್ಲದಿದ್ದರೂ, ಅಜ್ಞಜನರ ಸಲುವಾಗಿ ಮಾಡಲಿಕ್ಕೆಬೇಕು ಎಂದು ಶಂಕೆಯನ್ನು ಮಾಡಿದರೆ; ಈ ಮಾತು ಘಟಿಸುವದಿಲ್ಲ . ಯಾಕಂದರೆ , ಜ್ಞಾನಿಗೆ ಎರಡು ಸೂತಕಗಳು ಬಂದದ್ದರಿಂದ ಯಾವ ಪೂಜಾದಿ ಕರ್ಮಗಳು ಸಂಭವಿಸಲಾರವೆಂದು ಉತ್ತರವನ್ನು ಹೇಳುತ್ತಾರೆ.

**ತಿಳಿವೆಂಬ ಸುತನುದಯದೊಳಗೆ ಮರಯೆಂಬ ತಾ|**
**ಯಳಿಯಲಾಸೂತ. ಕದ್ವಯದ ಸಂಬಂಧ|**
**ದೊಳು ಯೋಗಿಗಾವ ವಿಧಿಯುಂಟು ||೭||**

**ಟೀಕಾ :-** ತಿಳಿವೆಂಬ = ಜ್ಞಾನವೆಂಬ, ಸುತನ = ಮಗನ, ಉದಯ ದೊಳಗೆ= ಉತ್ಪತ್ತಿಯಲ್ಲಿ, ಮರಹೆಂಬ=ಅಜ್ಞಾನವೆಂಬ, ತಾಯಿ = ತಾಯಿಯು, ಅಳಿಯಲ್ = ನಾಶವಾಗಲು, ಆ ಸೂತಕದ್ವಯದ = ಎರಡು ಸೂತಕ ಕರ್ಮಗಳ, ಸಂಬಂಧದೊಳು = ಪ್ರಾಪ್ತವಾದಲ್ಲಿ, ಯೋಗಿಗೆ = ಯೋಗೀಶ್ವರನಿಗೆ, ಆವ ವಿಧಿ ಯುಂಟು = ಯಾವ ಕರ್ಮ ವಿಧಿಯನ್ನು ಹೇಳಲಿಕ್ಕೆ ಆದೀತು,

**ತಾತ್ಪರ್ಯ:-** ಲೋಕದಲ್ಲಿ ವೈದಿಕ ಕರ್ಮಗಳು ನಡೆಯಬೇಕಾದರೆಯೋಗ್ಯ ಕಾಲವನ್ನು ಅಪೇಕ್ಷಿಸಿ ಜರಗುತ್ತವೆ. ಜನನ ಸೂತಕವಾಗಲಿ ಅಥವಾ ಮರಣಸೂತಕ ವಾಗಲಿ ಬಂದಕಾಲದಲ್ಲಿ ಯಾವ ವೈದಿಕ ಕರ್ಮಗಳನ್ನು ಮಾಡಲಿಕ್ಕೆ ಬರುವದಿಲ್ಲ. ಈ ಮಾತು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಆದರೆ; ಜೀವನ್ಮುಕ್ತನಾದ ಜ್ಞಾನಿಗೆ ಎರಡು ಸೂತಕಗಳು ಏಕಕಾಲದಲ್ಲಿ ಬಂದಿರುತ್ತವೆ . ಅವು ಯಾವವು ? ಅಂದರೆ; ಜ್ಞಾನವೆಂಬ ಮಗನು ಹುಟ್ಟಿದೊಡನೆ ಅಜ್ಞಾನವೆಂಬ ತಾಯಿ ಸತ್ತಿರುತ್ತಾಳೆ. ಹೀಗಾಗಿ ಜನನ ಮತ್ತು ಮರಣಗಳೆಂಬ ಎರಡು ಸೂತಕಗಳು ಬಂದಿರುತ್ತವೆ. ಯಾವದಾದರೊಂದು ಸೂತಕ ಬಂದಾಗ್ಯೆ ಕರ್ಮವು ತ್ಯಾಜ್ಯವಾಗಿರಲಿಕ್ಕೆ; ಎರಡು ಸೂತಕಗಳು ಬಂದಿರುವಾಗ್ಯೆ ಹೇಗೆ ಕರ್ಮ ನಡೆಯುವದು ? ನೀನೇ ವಿಚಾರ ಮಾಡು. ಆದ್ದರಿಂದ;ಜೀವನ್ಮುಕ್ತ ಜ್ಞಾನಿಯಿಂದ ಕರ್ಮವಿಧಿಯು ತ್ಯಾಜ್ಯವಾಗಿದೆ ಯೆಂಬ ಭಾವವು. ಈ ಮಾತನ್ನು ಶ್ರುತಿಯಲ್ಲಿ ಹೇಳಿದೆ. ಆ ಶ್ರುತ್ಯರ್ಥವನ್ನೇ ಗ್ರಂಥಕಾರರು ಈ ಪದ್ಯದಲ್ಲಿ ಹೇಳಿದ್ದಾರೆ. ಆ ಶ್ರುತಿಯು ಯಾವದು ಅಂದರೆ,

ಶ್ಲೋಕ|| **ಮೃತಾ ಮೋಹಮಯೀ ಮಾತಾ ಜಾತಾ ಬೋಧಮಯಃ ಸುತಃ।**
**ಸೂತಕದ್ವಯ ಸಂಪ್ರಾಪ್ತೇ ಕಥಂ ಸಂಧ್ಯಾಮುಪಾಸ್ಮಹೆ||**

ಹೀಗೆ ಶ್ರುತಿವಾಕ್ಯವಿರುವದರಿಂದ ಜ್ಞಾನಿಗೆ ಕರ್ಮವಿಧಿಯಿಲ್ಲ.

**ಬಳಿಕ,** ಜೀವನ್ಮುಕ್ತನಾದ ಜ್ಞಾನಿಯು ನೈಮಿತ್ತಕ ಕರ್ಮಗಳನ್ನು ಮಾಡ ದಿದ್ದರೂ ಬಿಡಲಿ, ಕಿಂತು; ಸಂಧ್ಯಾವಂದನಾದಿ ನಿತ್ಯ ಕರ್ಮಗಳನ್ನಾದರೂ ಆಚರಿಸ ಲಿಕ್ಕೇಬೇಕು. ಎಂದು ಶಂಕೆಯನ್ನು ಮಾಡಿದರೆ; ಈತನಿಗೆ ಸೂರ್ಯನು ಉದ ಯಾಸ್ತಮಾನನೇ ಆಗಿಲ್ಲ. ಆದ್ದರಿಂದ ಹೇಗೆ ಸಂಧ್ಯಾವಂದನಾದಿಗಳು ಆಚರಿಸುವ ನೆಂದು ಉತ್ತರ ಕೊಡುತ್ತಲಿದ್ದಾರೆ.

**ಹೃದಯವೆಂಬಾಗಸದೊಳುದಯಾಸ್ತಮಾನ ವಿ।**
**ಲ್ಲದ ಚಿದಾದಿತ್ಯನಿಹನಾಗಿ ಸಂಧ್ಯಾತ್ರ।**
**ಯದ ಸೇವೆ ಯೋಗಿಗಹುದೆಂತು ॥೮॥**

**ಟೀಕಾ :-** ಹೃದಯವೆಂಬ = ಮನಸ್ಸೆಂಬ, ಆಗಸದೊಳು = ಆಕಾಶದಲ್ಲಿ ಉದಯ = ತೋರುವದು, ಅಸ್ತಮಾನ = ಅಡಗುವದು, ಇಲ್ಲದ = ತೋರದ, ಚಿದಾದಿತ್ಯನು = ಚಿದ್ರೂಪಾತ್ಮನೆಂಬ ಸೂರ್ಯನು, ಇಹನಾಗಿ = ಇರುವದರಿಂದ, ಸಂಧ್ಯಾತ್ರಯದ = ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳೆಂಬ ಮೂರು ಕಾಲಗಳ, ಸೇವೆ = ಆಯಾಯ ಕಾಲದಲ್ಲಿ ಮಾಡತಕ್ಕ ವಿಧಿರೂಪ ಕರ್ಮವು, ಯೋಗಿಗೆ= ಜ್ಞಾನಯೋಗಿಗೆ, ಎಂತು = ಹೇಗೆ, ಅಹುದು = ಆಗುವದು ?

**ಹೃದಯಾಕಾಶೇ ಚಿದಾದಿತ್ಯಃ ಸದಾ ಭಾಸತಿ ಭಾಸತಿ।**
**ನೋದೇತಿ ನಾಸ್ತಮೇತಿ ಕಥಂ ಸಂಧ್ಯಾಮುಪಾಸ್ಮಹೆ ॥**

**ತಾತ್ಪರ್ಯ:-** ಜೀವನ್ಮುಕ್ತನಾದ ಬ್ರಹ್ಮಜ್ಞಾನಿಯ ಹೃದಯವೆಂಬ ಆಕಾಶ ಮಧ್ಯದಲ್ಲಿ,ಸ್ವಯಂ ಪ್ರಕಾಶರೂಪ ಚಿದ್ರೂಪಾತ್ಮನು ಯಾವಾಗಲೂ ಪ್ರಕಾಶಮಾನ ವಾಗಿ ಬೆಳಗುತ್ತಿರುತ್ತಾನೆ. ಆದ್ದರಿಂದಲೇ ಪ್ರಾತಃಕಾಲಾದಿ ಸಂಧ್ಯಾತ್ರಯಗಳಿಲ್ಲ. ಸಂಧ್ಯಾದಿಗಳೇ ಇಲ್ಲದಮೇಲೆ, ಸಂಧ್ಯಾ ವಂದನಾದಿ ಕರ್ಮಗಳಾದರೂ ಇಲ್ಲ. ಆದ್ದರಿಂದ ಮುಕ್ತನಿಗೆ ನಿತ್ಯನೈಮಿತ್ತಕಾದಿ ಕರ್ಮಗಳ ಕರ್ತವ್ಯರೂಪ ವಿಧಿ ಯನ್ನು ಹೇಳಲಿಕ್ಕೆ ಬರುವದಿಲ್ಲ.

ಬಳಿಕ, ಜ್ಞಾನಸಿದ್ಧನಿಗೆ ವೇದೋಕ್ತ ನಿತ್ಯಾದಿಕರ್ಮಗಳ ವಿಧಾನ ವಿಲ್ಲದ ಮೇಲೆ, ಅವನಿಗೆ ಯಾವ ನಿಯಮುಉಂಟು? ಪ್ರಾರಬ್ಧಕರ್ಮವಿರುವ ಪರ್ಯಂತರ ಅವನ ದೇಹೇಂದ್ರಿಯಾದಿಗಳ ವ್ಯವಹಾರವು ನಡೆದೇ ಇರುತ್ತದೆ. ಆದ್ದರಿಂದ ಅವ ನಿಗೆ ಏನಾದರೊಂದು ನಿಯಮವನ್ನು ಹೇಳಬೇಕಾಗುತ್ತದೆಂದು ಶಂಕೆಯನ್ನು ಮಾಡಿದರೆ; ಅವನಿಗೆ ಯಾವ ನಿಯಮವೂ ಇಲ್ಲ. ಅವನು ಹೇಗೆ ಇರುವನೋ ಹಾಗೆ ಇದ್ದದ್ದೇ ನಿಯಮವೆಂದು ತಿಳಿ. ಎಂಬ ದಾಗಿ ಎರಡು ಪದ್ಯಗಳಿಂದ ವರ್ಣನೆ ಮಾಡುತ್ತಾರೆ.

**ಏನನೊಪ್ಪಿರೆ ಪೂಜೆಯೆನನೀಕ್ಷಿಸೆ ಲಕ್ಷ್ಯ।**
**ವೇನನೊಡಗೂಡೆ. ಲಬೆಯೋಗನ್ನೈಸೆ ಬಳಿ।**
**ಕೇನುಂಟು ಮುಕ್ತನೊಳು ನಿಯಮ ॥೯॥**

**ಟೀಕಾ :-** ಏನನು=ಯಾವದನ್ನು, ಒಪ್ಪಿರೆ=ಅಂಗೀಕರಿಸಲು, ಪೂಜೆಯು= ಅದೇ ಪೂಜೆಯಾಗಿರುವದು. ಏನನು = ಯಾವದನ್ನು, ಈಕ್ಷಿಸೆ = ನೋಡಲು, ಲಕ್ಷ್ಯವು=ಅದೇ ಏಕಾಗ್ರತೆಯಾಗಿರುವದು, ಏನನು=ಯಾವದನ್ನು, ಒಡಗೂಡಲು=

ಹೊಂದಲು, ಅದೆಯೋಗವೈಸೆ=ಅದೇ ವೃತ್ತಿನಿರೋಧರೂಪ ಯೋಗವಾಗಿರುವದು, ಬಳಿಕ = ಅನಂತರ , ಮುಕ್ತನೊಳು = ಜೀವನ್ಮುಕ್ತನಲ್ಲಿ, ನಿಯಮ ಏನುಂಟು= ಯಾವ ನಿಯಮವಿರುವದು ?

**ನಡೆ ದೇವಯಾತ್ರೆ ನಿಂದೆಡೆ ವಾರಣಾಸಿ ಮನ।**
**ಪಿಡಿದುದೇ ಸುಮತ. ವಹುದುಯೋಗೀಶ್ವರಂ।**
**ನುಡಿದುದೇ ಮಂತ್ರವೆನಿಸುವದು ॥೧೦॥**

**ಟೀಕಾ:-** ನಡೆ= ಅವನು ನಡೆದದ್ದೇ, ದೇವಯಾತ್ರೆ= ಕಾಶೀಯಾತ್ರೆಯು, ನಿಂದ = ನಿಂತಿರುವ, ಎಡೆ= ಸ್ಥಾನವೇ, ವಾರಣಾಸಿ= ಕಾಶೀಕ್ಷೇತ್ರವು, ಮನಪಿಡಿದುದೇ=ಅವನ ಮನಸ್ಸಿಗೆ ಬಂದದ್ದೇ, ಸುಮತವಹುದು=ಅದೇಒಳ್ಳೇ ಮತವಾಗಿರುವದು, ಯೋಗೀಶ್ವರಂ= ಯೋಗಿಶ್ರೇಷ್ಠನು, ನುಡಿದುದೇ= ಉಚ್ಚಾರ ಮಾಡಿದ್ದೇ, ಮಂತ್ರವೆನಿಸುವದು=ವೇದವಾಣಿಯಾಗಿದೆ.

**ತಾತ್ಪರ್ಯ :–** ಜೀವನ್ಮುಕ್ತನಲ್ಲಿ ಯಾವ ವಿಧಿಯನ್ನೂ ಹೇಳಲಿಕ್ಕೆ ಬರುವದಿಲ್ಲ. ಅವನು ಹೇಗಿರುವನೋ, ಹಾಗಿದ್ದದ್ದೇ ನಿಯಮವೆಂದು ತಿಳಿ. ವೇದದ ಆಜ್ಞಾರೂಪ ಯಾವವಿಧಿ ನಿಯಮವನ್ನೂ ಅವನಿಗೆ ಹೇಳಲಿಕ್ಕೆ ಬರುವದಿಲ್ಲ. ಆದ್ದರಿಂದ ಅವನು ಒಪ್ಪಿದ್ದೇ ಪೂಜೆ, ನೋಡಿದ್ದೇ ಲಕ್ಷ್ಯವು, ಕೂಡಿದ್ದೇ ಯೋಗ, ನಡೆದದ್ದೇ ಯಾತ್ರೆ, ವಾಸಮಾಡಿದ್ದೇ ಕಾಶಿ, ಒಡಂಬಟ್ಟದ್ದೇ ಸುಮತ, ನುಡದದ್ದೇ ಮಂತ್ರವಾಗಿರುವದು ಅಂದರೆ ಜೀವನ್ಮುಕ್ತನು ಕ್ಷೇತ್ರಕ್ಕೆ ಕ್ಷೇತ್ರನು. ದೇವರಿಗೆದೇವರು, ಮಂತ್ರಕ್ಕೆ ಮಂತ್ರ, ಯೋಗಕ್ಕೆ ಯೋಗವಾಗಿರುತ್ತಾನೆ. ಅದರಿಂದ ಅವನಿಗೆ ಯಾವ ನಿಯಮವೂ ಇಲ್ಲವೆಂಬ ಭಾವವು.

ಬಳಿಕ, ಜೀವನ್ಮುಕ್ತನು ಪ್ರಾರಬ್ಧವಿರುವ ಪರ್ಯಂತರ ಅಜ್ಞ ಜನರಂತೆ ಬದುಕಿರುವನು. ಆದ್ದರಿಂದ ಅವನು ಅನಾಚಾರಿಗಳನ್ನು ಸದಾಚಾರಿಗಳನ್ನಾಗಿ ಮಾಡುವದಕ್ಕಾಗಿಯಾದರೂ, ವರ್ಣಾಶ್ರಮ ಧರ್ಮಗಳನ್ನು ಆಚರಿಸುತ್ತಿರಲಿಕ್ಕೇಬೇಕು. ಇಲ್ಲದಿದ್ದರೆ, ಅವನ ದೇಹೇಂದ್ರಿಯಾದಿಗಳಿಂದ ಅನ್ಯಥಾ ಆಚರಣೆಯು ಸಂಭವಿಸಬಹುದು ಎಂದು ಶಂಕೆಯನ್ನುಮಾಡಿದರೆ, ಆ ವರ್ಣಾಶ್ರಮಗಳ ಕರ್ಮಾಚರಣೆಯು ದೇಹಾಭಿಮಾನಿಯನ್ನು ಕುರಿತು ಹೇಳಿರುವರಲ್ಲದೆ, ದೇಹ ಮತ್ತು ದೇಹಾಭಿಮಾನವಿಲ್ಲದ ನಿರ್ದೇಹಿಯಾದ್ದ ಜ್ಞಾನಿಗೆ ಈ ಮಾತು ಯೋಗ್ಯವಲ್ಲ ಎಂದು ಉತ್ತರವನ್ನು ಹೇಳುತ್ತಾರೆ,

**ಜನಿಯಿಲ್ಲದಾತಂಗೆ ಮನುಜತ್ವವೆಲ್ಲಿಯದು ।**
**ಮನುಜತ್ವವಿಲ್ಲದವನಿಗಾಶ್ರಮ ಧರ್ಮ ।**
**ವನು ಪೇಳಲಾಗದೆಲೆ ವತ್ಸ ॥೧೧॥**

**ಟೀಕಾ:-** ಜನಿಯಿಲ್ಲದಾತಂಗೆ=ಉತ್ಪತ್ತಿಯಿಲ್ಲದವನಿಗೆ, ಮನುಜತ್ವವೆಲ್ಲಿಯದು=ಮನುಷ್ಯತ್ವವಾದರೂ ಎಲ್ಲಿಯದು, ಮನುಜತ್ವವಿಲ್ಲದವನಿಗೆ=ಮನುಷ್ಯತ್ವವಿಲ್ಲದವನಿಗೆ, ಆಶ್ರಮ=ಬ್ರಹ್ಮಚರ್ಯ ಗೃಹಸ್ಥಾದಿ ಆಶ್ರಮಗಳ, ಧರ್ಮವನು=ತತ್ಸಂಬಂಧಿ ಆಚರಣರೂಪ ಕರ್ಮವನ್ನು, ಎಲೆ ವತ್ಸ = ಹೇ ಪುತ್ರನೇ ! ಪೇಳಲಾಗದು=ಹೇಳಲಿಕ್ಕೆ ಬರುವದಿಲ್ಲ.

**ತಾತ್ಪರ್ಯ:-** ಪರಿಪೂರ್ಣ ಪರಬ್ರಹ್ಮವೇ ತಾನಾದ್ದರಿಂದ ನಾನು ಹುಟ್ಟಿರುವೆನೆಂಬ ಭ್ರಮವಿಲ್ಲ. ಹುಟ್ಟಿಲ್ಲದ ಮೇಲೆ ಮನುಷ್ಯತ್ವರೂಪ ದೇಹವೆಲ್ಲಿರುವದು? ದೇಹವಿಲ್ಲದವನಿಗೆ ವರ್ಣಾಶ್ರಮಗಳು ಎಲ್ಲಿರುವವು ?, ವರ್ಣಾಶ್ರಮಗಳೇ ಇಲ್ಲದ ಮೇಲೆ ಅವನಿಗೆ ಆಶ್ರಮಾದಿಗಳ ಧರ್ಮಗಳಾದರೂ ಎಲ್ಲಿಂದ ಬರುವವು ? ಅಂದರೆ, ದೇಹಾಭಿಮಾನಿಯಾಗಿ ವರ್ಣಾಶ್ರಮಾದಿಗಳ ಅಭಿಮಾನವುಳ್ಳವನಿಗೆ ಆಶ್ರಮಧರ್ಮಗಳನ್ನು ಹೇಳಬೇಕು. ದೇಹಾಭಿಮಾನವಿಲ್ಲದ ಚೈತನ್ಯರೂಪ ಪರಮಾತ್ಮನಿಗೆ ಯಾವ ಕರ್ಮಾದಿ ವಿಧಿಗಳನ್ನು ವೇದವು ಹೇಳುವದಿಲ್ಲ. ಆದ್ದರಿಂದ ಆಶ್ರಮ ವಿಧಿಗಳನ್ನು ಹೇಳಲಿಕ್ಕೆ ಬರುವದಿಲ್ಲ ಎಂದು ತಿಳಿ.

ಬಳಿಕ, ಜ್ಞಾನಿಗೆ ಸದಾಚಾರಾದಿ ಕರ್ಮಗಳನ್ನು ಹೇಳದೆ ಹೋದರೆ ಅವನ ದೇಹಾದಿಗಳಿಂದ ಸತ್ಕರ್ಮಗಳು ಸಂಭವಿಸುವದಿಲ್ಲ. ಅದರಿಂದ ಪುಣ್ಯವು ಇಲ್ಲ. ಸದ್ವಾಸನೆಯೂ ಇಲ್ಲದಂತಾಯಿತು. ಹೀಗಾದ್ದರಿಂದ ಅವನಿಗೆ ಮರಣ ಸಮಯದಲ್ಲಿ ಅಸದ್ವಾಸನೆಗಳೂ ಹುಟ್ಟಬಹುದು. ಯಮದೂತರಿಂದ ಅನೇಕ ಬಾಧೆಗಳು ತಟ್ಟಬಹುದು. ಮುಂದೆ ಅನಂತ ಜನ್ಮಗಳನ್ನು ಧರಿಸಬಹುದು ಎಂದು ಶಂಕೆಯನ್ನು ಮಾಡಿದರೆ; ಯಾವ ಜ್ಞಾನಿಗೆ ಜನ್ಮವೇ ಇಲ್ಲದಮೇಲೆ ಮರಣವಾದರೂ ಅವನಿಗೆಲ್ಲಿಯದು. ಮರಣವೇ ಇಲ್ಲದ ಮೇಲೆ ಯಾವ ಬಾಧೆಯುಂಟು ? ಜನ್ಮಾಂತರದ ಸುದ್ದಿಯೇ ಇಲ್ಲೆಂದು ತಿಳಿ ಎಂಬದಾಗಿ ಉತ್ತರವನ್ನು ಹೇಳುತ್ತಲಿದ್ದಾರೆ.

**ಇಂತಾಗೆ ಮರಣಭಯ ಮುಂತಾದ ವಿಕೃತಿಗಳ ।**
**ನೆಂತೊರೆಯ ಬರ್ಪುದವನಲ್ಲಿ ಮರಳಿ ಜ ।**
**ನ್ಮಾಂತರದ ಸುದ್ದಿಗೊಳಲುಂಟೆ ॥೧೨॥**

**ಟೀಕಾ:-** ಇಂತಾಗೆ=ಹೀಗಾದಮೇಲೆ, ಮರಣಭಯ=ಸಾಯುವ ಹೆದರಿಕೆಯೇ, ಮುಂತಾದ=ಮೊದಲಾದ, ವಿಕೃತಿಗಳನು=ವಿಕಾರಗಳನ್ನು, ಅವನಲ್ಲಿ=ಜ್ಞಾನಿಯಲ್ಲಿ, ಎಂತು=ಹೇಗೆ, ಒರೆಯಬರ್ಪುದು=ಹೇಳಬಹುದು, ಮರಳಿ=ತಿರಿಗಿ, ಜನ್ಮಾಂತರದ=ಪುನರ್ಜನ್ಮವಾಗುವ, ಸುದ್ದಿಗೆ=ವಾರ್ತೆಗೆ, ಒಳಲುಂಟೆ=ಅವಕಾಶವಿರುವದೇ ? ಇಲ್ಲವೆಂಬ ಭಾವವು.

**ತಾತ್ಪರ್ಯ:-** ಜ್ಞಾನಯೋಗಿಗೆ ಜನ್ಮವೇ ಇಲ್ಲದ ಮೇಲೆ ಅವನಲ್ಲಿ ಮರಣ ವನ್ನು ಹೇಳಲಿಕ್ಕೆ ಆದೀತೆ? ಆಗಲಾರದು. ಮರಣವೇ ಇಲ್ಲದ ಮೇಲೆ, ಮರಣ ಭಯಾದಿಗಳು ಯಮಯಾತನೆಗಳು ಅವನಿಗುಂಟೇ? ಮರಣ ಗಮನಾಗಮನಗಳಿ ಲ್ಲದ ಮೇಲೆ, ಜನ್ಮಾಂತರದ ಸುದ್ದಿಯಾದರೂ ಎಲ್ಲಿರುವದು? ಅರ್ಥಾತ್ ಜನನ, ಮರಣ ಜನ್ಮಾಂತರಾದಿಗಳು ಜೀವತ್ವವಿದ್ದಲ್ಲಿ ಹೇಳಬಹುದು. ಜೀವನ್ಮುಕ್ತನಲ್ಲ ಇಲ್ಲ ವೆಂದು ತಿಳಿಯೆಂಬ ಭಾವವು.

**ಬಳಿಕ,** ಜೀವನ್ಮುಕ್ತ ಜ್ಞಾನಿಯು ಎಲ್ಲರಂತೆ ಜೀವಿಸಿದ್ದು ಪುಣ್ಯ ಪಾಪ ಮೊದಲಾದ ಕರ್ಮಗಳನ್ನು ಮಾಡುತ್ತಾನೆ. ಎಲ್ಲರಂತೆ ಸಾಯುತ್ತಾನೆ. ಎಲ್ಲರು ಸತ್ತು ಹುಟ್ಟುವಂತೆ ಇವನಾದರೂ ಸತ್ತು ಹುಟ್ಟಬಹುದು. ಇವನಿಗೆ ಜನ್ಮವು ಬಾರದೆ ಇರುವದಕ್ಕೆ ಏನು ಕಾರಣವದೆ? ಎಂದು ಶಂಕೆಯನ್ನು ಮಾಡಿದರೆ, ಜನ್ಮಾಂತರಕ್ಕೆ ಕಾರಣವು ಭೇದ ಬುದ್ಧಿಯಾಗಿರುತ್ತದೆ. ಆ ಭೇದ ಬುದ್ಧಿಯು ಇವನಲ್ಲಿ ಇಲ್ಲ. ಆದ್ದರಿಂದ ಜನ್ಮವನ್ನು ಪಡೆಯುವದಿಲ್ಲ ಎಂಬದಾಗಿ ಶ್ರುತಿವಾಕ್ಯ ವನ್ನು ಉದಾಹರಿಸುತ್ತಾರೆ.

**ಇದನರಿಯದನ್ಯ ಭಾವದೊಳು ದೇವತೆಯ ಭಜಿ ।**
**ಸಿದೊಡೆ ಭವದಲ್ಲಿ ಬಹನು ಯೋಽನ್ಯಾಂ ಶ್ರುತಿಯು ।**
**ವೊದವಿ ತಾನೊರವುದಲೆ ಪುತ್ರ ॥೧೩॥**

**ಟೀಕಾ:-** ಇದನು=ಅಪರೋಕ್ಷನಾದ ತನ್ನನ್ನೇ ಪರಮಾತ್ಮನೆಂದು, ಅರಿ ಯದೆ=ತಿಳಿಯದೆ, ಅನ್ಯಭಾವದೊಳು=ತನಗಿಂತ ಬೇರೆಯೆಂಬ ಭೇದಬುದ್ಧಿಯಿಂದ, ದೇವತೆಯ=ದೇವರನ್ನು, ಭಜಿಸಿದೊಡೆ=ಪೂಜಿಸಿದರೆ, ಭವದಲ್ಲಿ=ಜನ್ಮಾಂತರಗಳಲ್ಲಿ, ಬಹನು=ಬರುವನು, ಯಃ=ಯಾವಾತನು, ಅನ್ಯಾಂ = ತನಗಿಂತ ಭಿನ್ನವಾಗಿ, ದೇವತಾಂ = ದೇವರನ್ನು, ಉಪಾಸ್ತೆ = ಪೂಜಿಸುತ್ತಾನೋ, ಅಸೌ ಅನ್ಯ=ಆ ಪರ ಮಾತ್ಮನು ಬೇರೆ, ಅನ್ಯಃ ಅಹಂ ಅಸ್ಮಿ=ನಾನು ಬೇರೆಯಾಗಿರುವೆನು ಎಂದು ತಿಳಿ. ಯುತ್ತಾನೋ, ಸಃ=ಅವನು, ನವೇದ=ಸರಿಯಾಗಿ ತಿಳಿಯದಕಾರಣ, ಸಃ=ಅವನು, ದೇವಾನಾಂ = ದೇವತೆಗಳಿಗೆ, ಪಶುರೇವಂ = ಪಶುವೇ ಆಗಿರುತ್ತಾನೆ, ಹೀಗೆಂದು ಶ್ರುತಿಯು=ಉಪನಿಷದ್ವಾಕ್ಯವು, ಒದವಿ=ಚನ್ನಾಗಿ, ಎಲೆ ಪುತ್ರ=ಎಲೈ ಶಿಷ್ಯನೇ!, ತಾನೊರೆಯುವುದು=ತಾನು ಹೇಳುತ್ತಿರುವದು.

**ತಾತ್ಪರ್ಯ:-** ಈ ದೇಹದಲ್ಲಿ ಅಪರೋಕ್ಷನಾದ ಆತ್ಮನೇ ಬ್ರಹ್ಮನಾಗಿರುವ ನೆಂಬ ಅನುಭವ ಜ್ಞಾನವಿಲ್ಲದೆ; ತಾನು ಬೇರೆ, ಪರಮಾತ್ಮನು ಬೇರೆ ಎಂಬ ಭೇದ ಬುದ್ಧಿಯುಳ್ಳವನಾಗಿರುವನು. ಆದ್ದರಿಂದಲೇ ಭೋಗಾಪೇಕ್ಷೆಯಿಂದ ಇಂದ್ರಾದಿ

ದೇವತೆಗಳನ್ನು ಕುರಿತು, ಹವಿರ್ಭಾಗಗಳನ್ನು ಕೊಡುತ್ತಾನೆ. ಅದರಿಂದ ಇಂದ್ರಾದಿ ದೇವತೆಗಳು ತುಷ್ಟರಾಗಿ, ಇವನಿಗೆ ಅನ್ನಾದಿ ಭೋಗದ್ರವ್ಯಗಳನ್ನು ಕೊಡುತ್ತಾರೆ. ನಮ್ಮ ಆಕಳು ಹಾಲನ್ನು ಕೊಡುವದರಿಂದ ಅದರ ಮೇಲೆ ನಾವು ಪ್ರೀತಿಯನ್ನು ಮಾಡುತ್ತಿರುವೆವೋ, ಹಾಗೇ ದೇವತೆಗಳು ನಮ್ಮ ಮೇಲೆ ಪ್ರೀತಿಯನ್ನು ಮಾಡುತ್ತಾರೆ. ಆಕಳುಗಳು ನಮಗೆ ಪಶುವಾದಂತೆ ದೇವತೆಗಳಿಗೆ ಭೇದಬುದ್ಧಿ ಭೋಗಾಪೇಕ್ಷಿಗಳು ಪಶುಗಳಾಗಿರುತ್ತಾರೆ. ಇಂಥಾ ಭೇದ ಬುದ್ಧಿಯುಳ್ಳವನೇ ಪುನಃ ಪುನಃ ಜನ್ಮ ಮರಣಾದಿ ಸಂಸಾರದಲ್ಲಿ ತೊಳಲುತ್ತಾನೆ. ಅಭೇದ ಬುದ್ಧಿಯುಳ್ಳವನು ಜನ್ಮಾಂತರಕ್ಕೆ ಹೋಗನು. ಅಂದರೆ, ಅಜ್ಞಾನ ಮೂಲಕ ಭೇದದರ್ಶಿಯು ಭವದಲ್ಲಿ ಬರುತ್ತಾನೆ. ಅಭೇದದರ್ಶಿಯು ಭವದಲ್ಲಿ ಬರುವದಿಲ್ಲ ಎಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಜೀವನ್ಮುಕ್ತ ಜ್ಞಾನಿಗೆ **ಜನ್ಮಾಂತರಗಳಿಲ್ಲವೆಂದು ತಿಳಿ.**

**ಬಳಿಕ,** ಜೀವನ್ಮುಕ್ತನಾದ ಜ್ಞಾನಯೋಗಿಯಾದರೂ ಎಲ್ಲರಂತೆ ದೇಹ, ಇಂದ್ರಿಯ, ಮನ, ಬುದ್ಧ್ಯಾದಿಗಳಿಂದ ವ್ಯವಹಾರಪರನಾಗರುತ್ತಾನೆ. ಎಲ್ಲರಂತೆ ಕರ್ಮಗಳನ್ನು ಮಾಡುತ್ತಾ ಸುಖ ದುಃಖಗಳನ್ನು ಭೋಗಿಸುತ್ತಾನೆ. ಆದ್ದರಿಂದ ಅವನಾದರೂ ದೇವತೆಗಳಿಗೆ ಪಶುವಾಗಿರುತ್ತಾನೆ. ಅದರಿಂದ ಜನ್ಮಾಂತರಗಳನ್ನು ಹೊಂದಬಹುದು ಎಂದು ಶಂಕೆಯನ್ನು ಮಾಡಿದರೆ, ಜ್ಞಾನಿಯು ಅಜ್ಞ ಜನರ ದೃಷ್ಟಿಯಿಂದ ದೇಹಾದಿಗಳ ಮೂಲಕ ವ್ಯವಹಾರಪರನಾಗಿ ತೋರಿದರೂ, ಅವನು ವ್ಯವಹಾರಮಾಡಿದವನಲ್ಲ. ಕಿಂತು ತನ್ನ ಸ್ವರೂಪದಲ್ಲಿ ತಾನು ಅಕರ್ತಾ ಅಭೋಕ್ತಾ ರೂಪದಿಂದ ಇರುತ್ತಾನೆಂದು ಶ್ರುತಿಯ ವಾಕ್ಯವನ್ನು ಪ್ರಮಾಣವಾಗಿ ಉದಾಹರಿಸುತ್ತಾರೆ.

**ಧ್ಯಾಯತೀವೇತಿ ಲೇಲಾಯತೀವೇತಿ ಸಮು ।**
**ದಾಯವಾಕ್ಯಂಗಳಿಹವಾಗಿ ಯೋಗಿ ನಿಜ ।**
**ದಾಯತದೊಳಿರ್ಪ ನೊಲಿದಂತೆ** ||೧೪||

**ಟೀಕಾ:-** ಧ್ಯಾಯತೀವ=ಬುದ್ಧಿಯು ಧ್ಯಾನವನ್ನು ಮಾಡಿದರೆ ಅದಕ್ಕೆ ಸಾಕ್ಷಿಯಾದ ಆತ್ಮನು ಧ್ಯಾನಮಾಡುವ ಹಾಗೆ, ಇತಿ=ಹೀಗೆಂದು, ಲೇಲಾಯತೀವ= ಬುದ್ಧಿಯು ಚಂಚಲವಾದರೆ ಆತ್ಮನೂ ಚಂಚಲನಾದಂತೆ, ಇತಿ=ಹೀಗೆಂದು, ಸಮುದಾಯ ವಾಕ್ಯಂಗಳಿಹವಾಗಿ=ಅನೇಕ ಶ್ರುತಿವಾಕ್ಯಗಳು ಇರುವದರಿಂದ, ಯೋಗಿ= ಜ್ಞಾನಯೋಗಿಯು, ನಿಜದಾಯತದೊಳು = ತನ್ನ ನಿಜಸ್ವರೂಪದಲ್ಲಿಯೇ, ಒಲಿದಂತೆ=ಪ್ರೀತಿಯಿದ್ದಂತೆ, ಇರ್ಪನು=ಇರುವನು.

**ತಾತ್ಪರ್ಯ:-** ಜೀವನ್ಮುಕ್ತನಾದ ಜ್ಞಾನಿಯು ಪ್ರಾರಬ್ಧಕರ್ಮನಿಮಿತ್ತದಿಂದ ದೇಹಧಾರಿಯಾಗಿದ್ದಂತೆ ತೊರುತ್ತಾನೆ. ದೇಹೇಂದ್ರಿಯಾದಿಗಳಿಂದ ವ್ಯವಹಾರ

ಮಾಡಿದವನಂತೆ ಜನರ ಕಣ್ಣಿಗೆ ತೋರುತ್ತಿರುತ್ತಾನೆ. ಆದರೂ ಅವನು ಮಾಡಿದ ವನಲ್ಲ. ಕಿಂತು ಅಕರ್ತನಾಗಿರುತ್ತಾನೆ. ಹೀಗೆಂದು ಶ್ರುತಿಯು ಹೇಳುತ್ತದೆ. ಬುದ್ಧಿಯು ಧ್ಯಾನವನ್ನುಮಾಡಿದರೆ ಅವನು ಧ್ಯಾನವನ್ನುಮಾಡಿದಂತೆ, ಬುದ್ಧಿಯು ಚಂಚಲವಾದರೆ ಅವನೇ ಚಂಚಲನಾದಂತೆ ತೋರುತ್ತಾನೆ. ಆದರೂ ಅವನು ಧ್ಯಾನ ಮಾಡಿಲ್ಲ, ಚಂಚಲನಾಗಿಲ್ಲ. ಧ್ಯಾನ ಮಾಡುವದು, ಚಂಚಲವಾಗುವದು ಬುದ್ಧಿಯ ಧರ್ಮವಾಗಿದೆ. ಈ ಬುದ್ಧಿಯ ಧರ್ಮ ನಿರ್ಧರ್ಮಿ ಸಾಕ್ಷಿಯಾದ ಆತ್ಮ ನಲ್ಲಿ ಆರೋಪಮಾಡುತ್ತಾರೆ. ಹೀಗೆ ಅನ್ಯಾರೋಪಿತವಾದ ಸಂಸಾರವು ಜ್ಞಾನಿ ಯಲ್ಲಿ ಆರೋಪವಾಗಿದೆ. ಬಾಲಕನು ತಾನೇ ತಿರಿಗಿ ನೆಲ ತಿರುಗುತ್ತದೆಂಬಂತೆ ಅಜ್ಞರು ಸಾಕ್ಷಿ, ನಿರವಯುವ ನಿರ್ಲೇಪನಾದ ಜ್ಞಾನಿಯ ಸ್ವರೂಪದಲ್ಲಿ ಆರೋಪ ಮಾಡುತ್ತಾರೆ. ಇಂಥಾ ಆರೋಪಿತ ಸಂಸಾರದಿಂದ ಅವನ ಸ್ವರೂಪಕ್ಕೆ ಯಾವ ಹಾನಿಯೂ ಇಲ್ಲ. ಅನ್ಯರಿಂದ ಅರಳೆಯ ಅಂಡಿಗೆಯ ಮೇಲಿದ್ದ ಗುಲಗಂಜಿ ಗುಂಪಿ ನಲ್ಲಿ ಅಗ್ನಿಯನ್ನು ಆರೋಪಮಾಡಿದಂತೆ ಮಾಡುತ್ತಾರೆ. ಆರೋಪಿತ ಅಗ್ನಿಯಿಂದ ಅರಳೆಗಂಟಿಗೆ ಬೆಂಕಿ ಹೇಗೆ ಹತ್ತುವಧಿಲ್ಲವೋ, ಹಾಗೆ ಆರೋಪಿತ ಸಂಸಾರದಿಂದ ಜ್ಞಾನಿಯ ಸ್ವರೂಪಕ್ಕೆ ಯಾವ ಹಾನಿಯೂ ಆಗುವದಿಲ್ಲ ಎಂದು ತಿಳಿ. ಆ ಜ್ಞಾನ ಯೋಗಿಯು ತಾನು ಯಾವಾಗಲೂ ಸಾಕ್ಷಿ, ನಿರ್ಲೇಪ ಸಚ್ಚಿದಾನಂದ ಬ್ರಹ್ಮ ರೂಪನೇ ತಾನಾಗಿರುವನೆಂಬ ಭಾವವು.

## ಜೀವನ್ಮುಕ್ತಿ ಸ್ಥಿತಿನಿರೂಪಣೆ ಸೂತ್ರ ೩ಕ್ಕೆ ತ್ರಿವಿದಿ ೩೧ ಕ್ಕೆ

---

ಬಳಿಕ; ಹಿಂದಿನ ಸೂತ್ರದಲ್ಲಿ, ಜೀವನ್ಮುಕ್ತನಾದ ಜ್ಞಾನಿಯು ವಿಕ್ಷೇಪಶಕ್ತಿ ಅಂಶಮಾದ ಅಜ್ಞಾನ ಮೂಲಕ, ಪ್ರಾರಬ್ಧಕರ್ಮ ಸಂಸ್ಕಾರವೇಗದಿಂದ ಕುಲಾಲ ಚಕ್ರಭ್ರಮಣದಂತೆ; ಸ್ನಾನ, ಪಾನ, ಭೋಜನಾದಿ ವ್ಯವಹಾರಪರನಾಗಿರುವಂತೆ ಕಂಡು ಬಂದರೂ, ಅವನು ಅಕರ್ತಾ ಅಭೋಕ್ತಾ ಸಚ್ಚಿದಾನಂದ ಪರಬ್ರಹ್ಮ ಮೂರ್ತಿಯೇ ಆಗಿರುವನು. ಅವನಿಗೆ ಯಾವದೊಂದು ವೇದದ ಅಜ್ಞಾರೂಪ ನಿಯಮವಿಧಿಯನ್ನು ಹೇಳಲಿಕ್ಕೆ ಬರುವದಿಲ್ಲ. ಎಂಬುದನ್ನು ವಿಸ್ತಾರವಾಗಿ ತಿಳಿಸಿ ದರು. ಇದನ್ನು ಕೇಳಿದಶಿಷ್ಯನು ಸಂಶಯಚಿತ್ತನಾಗಿ ಮುಂದೆ ಹೇಳುವ ಪ್ರಕಾರ ಪ್ರಶ್ನೆಯನ್ನು ಮಾಡುತ್ತಾನೆ. ಹೇಗಂದರೆ; ಯಜ್ಞ, ದಾನ, ತಪಸ್ಸಾದಿಗಳಿಂದಲೂ ಮುಕ್ತಿಯಾಗುತ್ತದೆಂದು ಶ್ರುತಿಯು ಹೇಳುತ್ತದೆ. ಧರ್ಮದಿಂದಲೇ ಸುಖಪ್ರಾಪ್ತಿ ದುಃಖದ ನಿವೃತ್ತಿಯಾಗುತ್ತದೆಂದು ಸ್ಮೃತಿಯು ಹೇಳುತ್ತದೆ. ಹೀಗೆ ಸ್ಮೃತಿ ಶ್ರುತಿಗಳು ಹೇಳುವದರಿಂದ ಸತ್ಕರ್ಮರೂಪ ವಿಧಿನಿಯಮವನ್ನು ಹೇಗೆ ತ್ಯಾಗ ಮಾಡಲಿಕ್ಕೆ ಬರುತ್ತದೆ ಬರಲಾರದು? ಆದ್ದರಿಂದ ಜ್ಞಾನವುಳ್ಳವನಾದರೂ ಜೀವ

ನ್ಮುಕ್ತನಾದರೂ ಸತ್ಕರ್ಮಗಳನ್ನು ಆಚರಿಸುತ್ತಲೇ ಇರಬೇಕಾಗುತ್ತದೆಂದು ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

ಸೂತ್ರ|| **ಕರ್ಮಂಗಳಿಂದವೇ ಮುಕ್ತಿಯುಹುದಾಗಿ ಯಾ।**
**ಕರ್ಮಂಗಳಂ ತ್ಯಜಿಸಲಾಗದೆಂತು ||**

**ಟೀಕಾ:**- ಕರ್ಮಂಗಳಿಂದವೇ = ಶ್ರುತಿ ಸ್ಮೃತಿ ಉಕ್ತ ಕರ್ಮಗಳಿಂದಲೇ, ಮುಕ್ತಿಯು=ಮೋಕ್ಷವು, ಅಹುದಾಗಿ=ಆಗುವದರಿಂದ, ಆ ಕರ್ಮಂಗಳಂ=ಹೇಳಿದ ಸತ್ಕರ್ಮಗಳನ್ನು, ಎಂತು=ಯಾವ ವಿಧದಿಂದಲೂ, ತ್ಯಜಿಸಲಾಗದು=ಬಿಡಲಿಕ್ಕೆ ಬರುವದಿಲ್ಲ.

**ತಾತ್ಪರ್ಯ:**-ವೇದೋಕ್ತ ಕರ್ಮಗಳಿಂದಲೇ ಮುಕ್ತಿಯು ಪ್ರಾಪ್ತವಾಗುತ್ತದೆ. ಮುಕ್ತಿಯು ಪ್ರಾಪ್ತವಾದ ಬಳಿಕ, ಮುಕ್ತನು ಆ ಸಾಧನಗಳಾದ ಸತ್ಕರ್ಮಗಳನ್ನು ತ್ಯಾಗ ಮಾಡಲಿಕ್ಕೆ ಬರುವದಿಲ್ಲ. ಅಂದರೆ, ಸಾಧನಾವಸ್ಥೆಯಲ್ಲಿದ್ದ ಕರ್ಮಗಳು ಸಿದ್ಧಾವಸ್ಥೆಯಲ್ಲಿಯಾದರೂ ಸಂಸ್ಕಾರದಿಂದಲೂ ಇರಲಿಕ್ಕೇಬೇಕು. ಹೇಗಂದರೆ, ಕ್ಷತ್ರಿಯನು ಯುದ್ಧಪೂರ್ವದಲ್ಲಿ ಯುದ್ಧಕಲೆಯನ್ನು ಅಭ್ಯಾಸ ಮಾಡುತ್ತಾನೆ. ಆ ಯುದ್ಧಕಲೆಯಿಂದ ಯುದ್ಧಮಾಡಿ ಜಯವನ್ನು ಹೊಂದಿ, ಸಿಂಹಾಸನಾರೂಢನಾದರೂ, ಗೆದ್ದ ರಾಜ್ಯದ ಪರಿಪಾಲನಾರ್ಥವಾಗಿ ಆ ಯುದ್ಧಕಲೆಯನ್ನು ತ್ಯಾಗ ಮಾಡದೆ ಅಭ್ಯಾಸ ಮಾಡುತ್ತಲೇ ಇರುವನು, ಈ ದೃಷ್ಟಾಂತದಂತೆ ಮುಕ್ತನಾದರೂ ನಿಯಮವಿಧಿರೂಪ ಸತ್ಕರ್ಮಗಳನ್ನು ಮಾಡುತ್ತಲೇ ಇರಬೇಕು. ತ್ಯಜಿಸಲಿಕ್ಕೆ ಬರಲಾರದು. ಎಂದು ಶಿಷ್ಯನು ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

**ಬಳಿಕ,** ಶಿಷ್ಯನು ತನ್ನ ಹೃದ್ಗತ ಪ್ರಶ್ನೆಯನ್ನು ಶ್ರೀ ಗುರುಗಳಿಗೆ ತಿಳಿಸುವದಕ್ಕಾಗಿ, ಶ್ರೀ ಗುರುವಿನ ಚಿತ್ತವನ್ನು ಪ್ರಸನ್ನಗೊಳಿಸಲು ಗುರುಸ್ತುತಿಯನ್ನು ಮಾಡುತ್ತಲಿದ್ದಾನೆ.

**ನತಕಲ್ಪತರುವೆ ಶಾಶ್ವತ ಸುಖದ ಕರುವೆ ಸ ।**
**ದ್ಗತಿ ಪಥದ ನೆರವೆ ನಿಜಗುರುವೆ ಜಯತೆಂದು ।**
**ನತನಾಗಿ ಸೂನು ಬೆಸಗೊಂಡ ||೧||**

**ಟೀಕಾ:**– ನತ=ನಮಸ್ಕಾರವನ್ನು ಮಾಡುವವರಿಗೆ, ಕಲ್ಪತರುವೆ=ಕಲ್ಪವೃಕ್ಷಪ್ರಾಯನಾದಂಥಾ, ಶಾಶ್ವತ=ನಿತ್ಯವಾದ, ಸುಖ=ಆನಂದವನ್ನು, ದ=ಕೊಡುವಲ್ಲಿ, ಕರುವೆ=ಕಾಮಧೇನುವಾಗಿರುವಂಥಾ, ನಿಜಗುರುವೆ=ಹೇ ಗುರುವರ್ಯನೇ !, ಜಯತೆಂದು=ನಿನಗೆ ಜಯವಾಗಲೆಂದು, ಸೂನು=ಶಿಷ್ಯನು, ನತನಾಗಿ=ನಮಸ್ಕಾರವನ್ನು ಮಾಡಿ, ಬೆಸಗೊಂಡನು=ಪ್ರಶ್ನೆಯನ್ನು ಮಾಡುವಂಥವನಾದನು.

**ತಾತ್ಪರ್ಯ:**- ಹೇ ಗುರುವರ್ಯನೇ! ನೀನು ಶರಣಾಗತರಾದ ಭಕ್ತ ವೃಂದಕ್ಕೆ ಕಾಮಿತಾರ್ಥಗಳನ್ನುಂಟುಮಾಡುವಲ್ಲಿ ಕಲ್ಪವೃಕ್ಷನಾಗಿರುವಿ. ಶಾಶ್ವತ ಅಂದರೆ ನಿತ್ಯವಾದ ಸ್ವರೂಪಾನಂದವನ್ನು ಅವಿರ್ಭಾವ ಮಾಡಿಕೊಡುವಲ್ಲಿ ಕಾಮಧೇನುವಾಗಿರುವಿ. ಜನನ ಮರಣರೂಪ ಭವಾರಣ್ಯದಲ್ಲಿ ದಾರಿತಪ್ಪಿ ತಿರುಗುವ ಜೀವಿಗಳಿಗೆ, ಮೋಕ್ಷ ಮಾರ್ಗವನ್ನು ತೋರಿಸುತ್ತಾ ಸಹಾಯಕನಾಗಿರುವಿ. ಅಂದರೆ ದೇಶಿಕೋತ್ತಮನಾಗಿರುವಿಯೆಂಬ ಭಾವವು. ಇಂಥಾ ಮಹತ್ಪ್ರಯೋಜನ ವನ್ನುಂಟುಮಾಡುವ ಗುರುವರ್ಯನೇ! ನಿನಗೆ ಜಯವಾಗಲಿ. ಎಂದು ಶಿಷ್ಯನು ಶ್ರೀ ಗುರುಗಳನ್ನು ಸ್ತುತಿಸಿ, ಗುರುಗಳ ಚಿತ್ತವನ್ನು ಪ್ರಸನ್ನೀಕರಿಸಿಕೊಂಡು ಬಳಿಕ ತನ್ನ ಪ್ರಶ್ನೆಯನ್ನು ತಿಳಿಸುವಂಥನಾದನು.

**ಬಳಿಕ**, ನಿಜವರಿದ ಜ್ಞಾನಿಯು ಕರ್ಮಗಳನ್ನು ಮಾಡದೆ ಇರುವನೆಂದು ಹೇಗೆ ಹೇಳಿದಿರಿ? ಈ ಮಾತು ಹೇಗೆ ಆದೀತು? ಆಗಲಾರದು. ಯಾಕಂದರೆ ಆ ಕರ್ಮಗಳು ಶ್ರುತಿ-ಸ್ಮೃತಿಗಳಿಂದ ಹೇಳಲ್ಪಟ್ಟವೆ. ಅವುಗಳನ್ನು ತ್ಯಾಗ ಮಾಡಲಿಕ್ಕೆ ಬರುವದಿಲ್ಲ. ತ್ಯಜಿಸುವದಕ್ಕೆ ಬರುತ್ತವೆಂದು ತಾವು ಹೇಳಿದರೆ, ಅದು ಹೇಗೆ? ಇದನ್ನು ನನಗೆ ತಿಳಿಯುವಂತೆ ಹೇಳಬೇಕೆಂದು ಕೇಳುತ್ತಾನೆ.

**ಶ್ರೀ ಗುರುವೇ ನಿಜವರಿದ ಯೋಗಿ ಕರ್ಮಂಗಳಂ |**
**ನೀಗಿ ನೆಲಸಿರ್ಪನೆಂದು ಬೆಸಸಿದಿರಿ ನಿಜ |**
**ವಾಗಿ ನಾನರಿವೆನಿದನೆಂತು** ||೨||

**ಟೀಕಾ:**- ಶ್ರೀಗುರುವೆ=ಪರಾವಿದ್ಯೆಯುಳ್ಳ ಗುರುವೇ! ನಿಜವರಿದ=ತನ್ನ ಸ್ವರೂಪವನ್ನು ತಿಳಿದ, ಯೋಗಿ=ಜ್ಞಾನಯೋಗಿಯು, ಕರ್ಮಂಗಳಂ=ವೇದ=ವಿಧಿ ರೂಪ ಕರ್ಮಗಳನ್ನು, ನೀಗಿ=ಬಿಟ್ಟು, ನೆಲಸಿರ್ಪನೆಂದು=ಇರುತ್ತಿರುವನೆಂದು, ಬೆಸ ಸಿದಿರಿ=ಹೇಳಿದಿರಿ, ನಿಜವಾಗಿ=ಸತ್ಯವಾಗಿ, ಇದನು=ಈ ವಿಷಯವನ್ನು, ಎಂತು= ಹೇಗೆ, ನಾನರಿವೆನು=ನಾನು ತಿಳಿಯುವೆನು.

**ತಾತ್ಪರ್ಯ:**- ಸಚ್ಚಿದಾನಂದ ಪರಬ್ರಹ್ಮಾಭಿನ್ನ ಪ್ರತ್ಯಗಾತ್ಮ ಸ್ವರೂಪವೇ ನಾನಾಗಿರುವೆನೆಂಬ, ನಿಜಜ್ಞಾನ ಸಂಪನ್ನನಾದ ಜ್ಞಾನಿಯು ಕೃತಕೃತ್ಯನಾಗಿರು ತ್ತಾನೆ. ಅದರಿಂದ ಅವನು ಕರ್ಮಗಳನ್ನು ಬಿಟ್ಟು ಕೇವಲ ನಿಜಸ್ಥಿತಿಯಿಂದ ಇರುತ್ತಾನೆಂದು ಹೇಳಿದಿರಿ. ಸಾಧನಾವಸ್ಥೆಯಲ್ಲಿ ಮಾಡುತ್ತಾ ಬಂದ ಕರ್ಮ ಗಳನ್ನು ಸಿದ್ಧಾವಸ್ಥೆಯಲ್ಲಿ ಬಿಡಲಿಕ್ಕೆ ಬರುವದಿಲ್ಲ. ದೇಹ ವಿರುವತನಕ ಮಾಡುತ್ತಾ ಇರಲಿಕ್ಕೆ ಬೇಕು. ಹೀಗಿದ್ದು ಕರ್ಮಗಳನ್ನು ಬಿಟ್ಟು ಇರುತ್ತಾನೆಂದು ತಾವು

ಹೇಳಿದರೆ, ಈ ಮಾತನ್ನು ನಾನು ಹೇಗೆ ನಿಶ್ಚಯವಾಗಿ ತಿಳಿಯಲಿ? ಎಂದು ಗುರುಗಳು ಹೇಳಿದ ಮಾತಿನಲ್ಲಿ ಶಿಷ್ಯನು ಸಂಶಯವುಳ್ಳವನಾಗಿರುತ್ತಾನೆ.

**ಬಳಿಕ:-** ಶಿಷ್ಯನು ಕರ್ಮಗಳನ್ನು ಮಾಡಲಿಕ್ಕೇ ಬೇಕೆಂಬುವಲ್ಲಿ ಶ್ರುತಿ ಪ್ರಮಾಣವನ್ನು ಉದಾಹರಿಸುತ್ತಲಿದ್ದಾನೆ.

**ಯಜನಾದಿ ವಿಧಿಗಳಿಂ ನಿಜಮುಕ್ತಿಯಹುದೆಂದು ।**
**ಸುಜನರೆನುತಿರ್ಪರದರಿಂದೆ ವಿಧಿಗಳಂ ।**
**ತ್ಯಜಿಸಲಿಲ್ಲೆಂಬುದಿದು ಸತ್ಯ ।**

**ಟೀಕಾ:-** ಯಜನಾದಿ ವಿಧಿಗಳಿಂ=ಯಜ್ಞಾದಿ ಕರ್ಮಗಳಿಂದ, ನಿಜಮುಕ್ತಿಯಹುದೆಂದು = ಸತ್ಯಮುಕ್ತಿಯು ದೊರೆಯುತ್ತದೆಂದು, ಸುಜನರು=ಬಲ್ಲವರು, ಎನುತಿರ್ಪರು=ಹೇಳುತ್ತಿರುವರು, ಅದರಿಂದೆ = ಈ ಕಾರಣದಿಂದೆ, ವಿಧಿಗಳಂ= ಕರ್ಮಗಳನ್ನು, ತ್ಯಜಿಸಲಿಲ್ಲೆಂಬುದು = ಬಿಡಲಿಲ್ಲವೆಂಬುವದು, ಇದು ಸತ್ಯ=ಇದು ನಿಜವಾಗಿರುತ್ತದೆ.

**ತಾತ್ಪರ್ಯ:-** ' **ಯಜ್ಞೇನ ದಾನೇನ ತಪಸಾ, ಯಜ್ಞ, ದಾನ,** ತಪಸ್ಸು, ಮೊದಲಾದವುಗಳಿಂದಲೂ ಮುಕ್ತಿಯಾಗುತ್ತದೆಂದು ಬೃಹದಾರಣ್ಯಕ ಶ್ರುತಿಯು ಹೇಳುತ್ತದೆ. ಅನೇಕರು ಬಲ್ಲವರೂ ಹೀಗೆ ಹೇಳುವರು. ಆದ್ದರಿಂದ ಶ್ರುತಿ ಪ್ರತಿಪಾದಿತ ಯಜ್ಞದಾನಾದಿ ಕರ್ಮಗಳನ್ನು ತ್ಯಜಿಸಲಿಕ್ಕೆ ಬರುವದಿಲ್ಲ. ಕಿಂತು; ಜ್ಞಾನವುಳ್ಳವನಾದರೂ ಕರ್ಮಗಳನ್ನು ಮಾಡಲಿಕ್ಕೆಬೇಕೆಂದು ಪ್ರಶ್ನೆಯನ್ನು ಮಾಡುತ್ತಿರುವನು.

ಬಳಿಕ, ಶ್ರುತಿಪ್ರಮಾಣವಲ್ಲದೆ ಸ್ಮೃತಿ ಪ್ರಮಾಣವೂ ಉಂಟೆಂದು ಸ್ಮೃತಿ ವಾಕ್ಯವನ್ನು ಉದಾಹರಿಸುತ್ತಾ ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

**ಮತ್ತೆ ಧರ್ಮಾತ್ಸುಖಮೆನುತ್ತವಾ ಸ್ಮೃತಿಯೇ ಸಾ।**
**ರುತ್ತಮಿಹುದಾಗಿ ಸತ್ಕರ್ಮಮಂ ತ್ಯಜಿಸ।**
**ಲೆತ್ತಣದು ಮುಕ್ತಿ ಕರುಣಿಪುದು ॥೪॥**

**ಟೀಕಾ:-** ಮತ್ತೆ=ಬಳಿಕ, ಧರ್ಮಾತ್=ಧರ್ಮದಿಂದ, ಸುಖಂ=ಸುಖವು, ಎನುತ್ತವೆ=ಹೀಗೆ ಹೇಳುತ್ತ, ಆ ಸ್ಮೃತಿಯೇ ಸಾರುತ್ತಮಿಹುದಾಗಿ=ಸ್ಮೃತಿವಾಕ್ಯವೇ ಪ್ರಸಿದ್ಧವಾಗಿ ಹೇಳುತ್ತಿರುವದರಿಂದ, ಸತ್ಕರ್ಮಮಂ=ಯಜ್ಞಾದಿ ಕರ್ಮಗಳನ್ನು ತ್ಯಜಿಸಲ್=ತ್ಯಾಗಮಾಡಿದರೆ, ಮುಕ್ತಿ=ಮೋಕ್ಷವು, ಎತ್ತಣದು=ಎಲ್ಲಿಂದ ಬಂದೀತು ಕರುಣಿಪುದು=ಕೃಪೆಯನ್ನು ಮಾಡು.

**ತಾತ್ಪರ್ಯ:-** ಮತ್ತು ಸ್ಮೃತಿಯಾದರೂ ಧರ್ಮದಿಂದಲೇ ಸುಖವಾಗುತ್ತದೆ ಆದ್ದರಿಂದ ಸುಖಾಪೇಕ್ಷಿಗಳು ಯಾವಾಗಲೂ ಧರ್ಮವನ್ನು ತಪ್ಪದೆ ಮಾಡಬೇಕು. ಎಂದು ಹೇಳುತ್ತದೆ. **'ಕರ್ಮಣಾಸಂಸಿದ್ಧಿಮಾಸ್ಥಿತಾಃ ಜನಕಾದಯಃ'** ಕರ್ಮದಿಂದಲೇ ಜನಕಾದಿ ರಾಜರು ಮುಕ್ತಿಯನ್ನು ಹೊಂದಿದರೆಂದು ಗೀತಾದಿ ಸ್ಮೃತಿಗಳು ಹೇಳುತ್ತವೆ ಆದ್ದರಿಂದ ಶ್ರುತಿ ಸ್ಮೃತಿ ಪ್ರತಿಪಾದಿತ ಕರ್ಮವನ್ನು ತ್ಯಾಗ ಮಾಡಿದರೆ ಸದ್ಗತಿ ದೊರೆಯಲಾರದು. ಆದರಿಂದ ಅವಶ್ಯ ಕರ್ಮವನ್ನು ಮಾಡಲಿಕ್ಕೇಬೇಕೆಂದು ತೋರುತ್ತದೆ. ಹೇ ಗುರುವೇ! ಈ ರೀತಿ ನನ್ನ ಮನಸ್ಸಿನಲ್ಲಿ ಸಂಶಯವು ತೋರುವದು. ಇದನ್ನು ತಾವು ಚನ್ನಾಗಿ ವಿಚಾರಮಾಡಿ, ಈ ನನ್ನ ಸಂಶಯವನ್ನು ಕಳೆಯಬೇಕೆಂದು, ಶಿಷ್ಯನು ಗುರುಗಳನ್ನು ಕುರಿತು ಬೇಡಿಕೊಳ್ಳುತ್ತಲಿದ್ದಾನೆ.

## ಪ್ರಶ್ನೆ ನಿರೂಪಣೆ ಸೂತ್ರ ೪ಕ್ಕೆ ತ್ರಿವಿಧಿ ೩೫

**ಬಳಿಕ:-** ಸದ್ಗುರುಗಳು ಶಿಷ್ಯನನ್ನು ಕುರಿತು ಹೀಗೆ ಹೇಳುತ್ತಲಿದ್ದಾರೆ. ಏನಂದರೆ; ಕರ್ಮವು ಶ್ರುತಿ ಸ್ಮೃತಿಗಳಿಂದ ಹೇಳಲ್ಪಟ್ಟಿದೆ. ಆದರೆ ಅದು ಅಶುದ್ಧ ಮನಸ್ಸುಳ್ಳ ಮಂದಬುದ್ಧಿಯನ್ನು ಕುರಿತು ಹೇಳುತ್ತದೆ. ಶುದ್ಧಬುದ್ಧಿಯಿಂದ ತನ್ನನ್ನು ತಾನು ಅರತಂಥಾಜ್ಞಾನಿಯನ್ನು ಕುರಿತು ಹೇಳುವದಿಲ್ಲ. ಆ ಯಜ್ಞಾದಿ ಕರ್ಮಗಳನ್ನು ಮಾಡುವದರಿಂದ ಅಂತಃಕರಣ **ಶುದ್ಧವಾಗುವದಲ್ಲದೆ** ಮುಕ್ತಿಯಾಗದು. ಕರ್ಮದಿಂದಲೇ ಮುಕ್ತಿಯೆಂದು ಹೇಳಿದರೆ, ಜ್ಞಾನಕಾಂಡವು ವ್ಯರ್ಥವಾಗಬೇಕಾದೀತು. :ಅಂದರೆ ವೇದದಲ್ಲಿ **ಜ್ಞಾನಕಾಂಡವನ್ನು** ಹೇಳಬಾರದಾಗಿತ್ತು. ಹೇಳುತ್ತದೆ. ಆದ್ದರಿಂದ ಕರ್ಮಗಳಿಂದ ಮುಕ್ತಿಯಿಲ್ಲ ಎಂಬ ಅರ್ಥವು ಹೊಳೆಯುತ್ತದೆ.

**ಶಂಕಾ:-** ಜ್ಞಾನದಿಂದಲೇ ಮುಕ್ತಿಯಾದರೆ ಅದೊಂದನ್ನೇವೇದದಲ್ಲಿ ಹೇಳಬೇಕು. ಕರ್ಮವನ್ನು ಹೇಳಬಾರದಾಗಿತ್ತು. ವೇದದಲ್ಲಿ ಕರ್ಮಕಾಂಡವು ಹೇಳಿರುತ್ತದೆ. ಆದ್ದರಿಂದ **ಕರ್ಮದಿಂದಲೂ** ಮುಕ್ತಿಯಾಗುತ್ತದೆಂದು ಯಾಕೆ ಹೇಳಬಾರದು ?

**ಸಮಾಧಾನ:-** ವೇದದಲ್ಲಿ ಕರ್ಮಕಾಂಡ ಜ್ಞಾನಕಾಂಡಗಳೆರಡನ್ನು ಹೇಳಿರುವದು ನಿಜವು. ಕರ್ಮಜ್ಞಾನಗಳೆರಡು ಮುಕ್ತಿಗಾಗಿಯೇ ಹೇಳಲ್ಪಟ್ಟವೆ. ಆದರೆ, ಕರ್ಮವು ಮುಕ್ತಿಗೆ **ಪರಂಪರಾ** ಸಾಧನವಾಗಿದೆ. ಜ್ಞಾನವು ಮುಕ್ತಿಗೆ **ಸಾಕ್ಷಾತ್** ಸಾಧನವಾಗಿದೆ. ಕರ್ಮವು ಅಂತಃಕರಣ ಶುದ್ಧಿ ದ್ವಾರಾ ಜ್ಞಾನಪ್ರಾಪ್ತಿಗೆ ಸಾಧನವಾಗಿದೆ. ಜ್ಞಾನವು ಸಾಕ್ಷಾತ್ತಾಗಿ ಅವಿದ್ಯೆಯ ಆವರಣವನ್ನು ಭಂಗ

ಮಾಡುವದರಿಂದ ಸಾಕ್ಷಾತ್ಸಾಧನವಾಗಿದೆ. ಆದ್ದರಿಂದ ಮೊದಲು ಕರ್ಮದಿಂದ ಮನಶ್ಶುದ್ಧಮಾಡಿಕೊಂಡು, ಬಳಿಕ ಶ್ರವಣಾದಿಗಳಿಂದ ಜ್ಞಾನವನ್ನು ಹೊಂದ ಬೇಕು. ಈ ರೀತಿಯಾದ **ಕ್ರಮಸಮುಚ್ಚಯವನ್ನು** ಅಂಗೀಕಾರಮಾಡಿದ್ದಾರೆ. ಆದ್ದರಿಂದ ಕರ್ಮಗಳಿಂದ ಅಂತಃಕರಣಶುದ್ಧವಾಗುವದಲ್ಲದೆ ಮುಕ್ತಿಯಾಗ ದೆಂದೂ, ಕರ್ಮಕ್ಕೆ ಮಂದಬುದ್ಧಿಯೇ ಅಧಿಕಾರಿಯೆಂದೂ ಗುರುಗಳು ಉತ್ತರ ವನ್ನು ಹೇಳುತ್ತಲಿದ್ದಾರೆ.

ಸೂತ್ರ ॥ **ಕರ್ಮವೆಂಬುದು ಮಂದಮತಿಯ ವಿಷಯವೆ ನಿಜದ |**
**ಮರ್ಮವರಿದಾತಂಗೆ ದೊರಕೊಳ್ಳದು** ॥

**ಟೀಕಾ:-** ಕರ್ಮವೆಂಬುದು=ಕರ್ಮಕಾಂಡದಲ್ಲಿ ಹೇಳಿದ ಕರ್ಮವು, ಮಂದ ಮತಿಯ=ಅಜ್ಞಾನಿಯನ್ನು ಕುರಿತು, ವಿಷಯವೆ=ಹೇಳಿದ್ದಾಗಿದೆ, ನಿಜದ=ಸ್ವಸ್ವ ರೂಪದ, ಮರ್ಮವ=ಅಸಂಗ ಆಕರ್ತನಾಗಿರುವ ಗುಟ್ಟನ್ನು, ಅರಿದಾತಂಗೆ=ತಿಳಿ ದವನಿಗೆ, ದೊರಕೊಳ್ಳದು=ಸಂಭವಿಸಲಾರದು.

**ತಾತ್ಪರ್ಯ:-**ವೇದದಲ್ಲಿ ಹೇಳಿದ ಕರ್ಮಕಾಂಡವು ಮಂದಮತಿಯ ಗೋಸುಗ ಬುದ್ಧಿಶುದ್ಧಮಾಡುವಕ್ಕಾಗಿ ಹೇಳಿದುತ್ತದೆ. ಮಂದಮತಿಯು ಅಂದರೆ ದೇಹಕ್ಕೆ ಸಾಕ್ಷಿಯಾಗಿ ಚೈತನ್ಯರೂಪದಿಂದ ಪರಮಪವಿತ್ರನಾಗಿ ತಾನಿದ್ದದ್ದು ಅನುಭವಸಿದ್ಧವಿದ್ದರೂ; ಹಾಗೆ ತಿಳಿಯದೆ, ಇದಕ್ಕೆ ವಿಪರೀತವಾದ ಅಪವಿತ್ರ ದೇಹವೇ ನಾನೆಂದು, ನಿಶ್ಚಯಮಾಡಿದ ಅಜ್ಞಾನಿ ಜೀವನಿಗೆ, **ಮಂದಮತಿಯೆಂದು** ಹೇಳಿದ್ದಾರೆ. ಇಂಥಾ ಜೀವನು ಬುದ್ಧಿಯನ್ನು ಶುದ್ಧಮಾಕೊಳ್ಳುವದಕ್ಕಾಗಿ ಸತ್ಕರ್ಮ ವಿಧಿಗಳನ್ನು ಹೇಳಿದ್ದಾರೆ. ಯಾವ ಜ್ಞಾನಿಯು ಪೂರ್ವದಲ್ಲಿಯೇ ಬುದ್ಧಿ ಶುದ್ಧಮಾಡಿಕೊಂಡು, ಆತ್ಮಾನಾತ್ಮ ವಿವೇಕೋದಯವಾಗಿ, ಪಂಚಕೋಶ ವಿಲಕ್ಷಣ ಸಾಕ್ಷಿ ಅಸಂಗ ಆಕರ್ತಾರೂಪ ಪರಬ್ರಹ್ಮವೇ ನಾನು ಇರುವೆನೆಂದು ತಿಳಿದು, ಕೃತಕೃತ್ಯನಾಗಿರುತ್ತಾನೆ. ಇಂಥಾ ನಿಜ ಜ್ಞಾನಿಗೆ ಕರ್ಮವು ಬೇಕಾಗಿಲ್ಲ. ಅಂದರೆ, ಅದರಿಂದ ಏನೂ ಪ್ರಯೋಜನವಿಲ್ಲೆಂಬ ಭಾವವು.

**ಬಳಿಕ,** ಉಕ್ತ ಮಾತನ್ನು ಕೇಳಿ ಶಿಷ್ಯನು ಪುನಃ ಶಂಕೆಯನ್ನು ಮಾಡು ತ್ತಾನೆ. ಏನಂದರೆ, ಜ್ಞಾನಕಾಂಡದಂತೆ ವೇದೋಕ್ತ ಕರ್ಮಕಾಂಡದಿಂದಲೂ ಮುಕ್ತಿಯು ಆಗುತ್ತದೆ. ಇಲ್ಲದೆ ಹೋದರೆ ಅದನ್ನು ಹೇಳುತ್ತಿರಲಿಲ್ಲ. ಆದ್ದರಿಂದ ಕರ್ಮಕಾಂಡೋಕ್ತ ಕರ್ಮವು ಬುದ್ಧಿಶುದ್ಧಿಯನ್ನು ಮಾಡುವದಲ್ಲದೆ, ಮುಕ್ತಿ ಯನ್ನೂ ಉಂಟುಮಾಡುತ್ತದೆಂದು ಶಂಕೆಯನ್ನು ಮಾಡಲು; ಇದಕ್ಕೆ ಗುರುಗಳು, "ಶಿಷ್ಯನೇ! ನಿಷ್ಕಾಮದಿಂದ ಮಾಡಿದ ಕರ್ಮವು ಬುದ್ಧಿಯನ್ನು ಶುದ್ಧ ಮಾಡ

ಬಹುದು. ಆದರೆ, ಸ್ವಸ್ವರೂಪದ ಆವರಣವನ್ನು ಕಳೆಯುವ ಸಾಮರ್ಥ್ಯವು ಕರ್ಮ ಕ್ಕಿಲ್ಲ. ಯಾಕಂದರೆ, ಕರ್ಮವು ಅವಿರೋಧವಾಗಿರುತ್ತದೆ. ತಮಸ್ಸಿಗೆ ಪ್ರಕಾಶವೇ ವಿರೋಧಿಯಾದಂತೆ ಅಜ್ಞಾನಕ್ಕೆ ಜ್ಞಾನವೇ ವಿರೋಧವಾಗಿದೆ. ಆದ್ದರಿಂದ 'ಜ್ಞಾನಾದೇವತು ಕೈವಲ್ಯಂ' ಜ್ಞಾನದಿಂದಲೇ ಮುಕ್ತಿಯಾಗುತ್ತದೆಂದು ಶ್ರುತಿಯು ಹೇಳುತ್ತದೆ. 'ನಕರ್ಮಣಾ' ಎಂಬ ಶ್ರುತಿಯು ಕರ್ಮದಿಂದ ಮುಕ್ತಿ ಯಾಗುವದಿಲ್ಲೆಂದು ಹೇಳುತ್ತದೆ. ಆದ್ದರಿಂದ ಕರ್ಮವು ಮುಕ್ತಿಗೆ ಕಾರಣವಲ್ಲ ಎಂದು ಹೇಳುತ್ತಾರೆ.

**ಅಹುದು ಕೇಳೆಲೆ ಕುವರ ವಿಹಿತ ಕರ್ಮಂಗಳಿಂ ।**
**ದಹಮಾದಿ ಶುದ್ಧಿ ಯಹುದೈಸೆ ನಿಜಮುಕ್ತಿ ।**
**ಯಹುದೆಂಬುದೆಂತು ಘಟಿಸುವದು ॥೧॥**

**ಟೀಕಾ:–** ಎಲೆ ಕುವರ ಕೇಳ್=ಎಲೆ ಶಿಷ್ಯನೆ ಕೇಳು, ಅಹುದು=ನೀನು ಹೇಳುವದು ನಿಜವೇ, ವಿಹಿತ ಕರ್ಮಂಗಳಿಂ=ಸತ್ಕರ್ಮಗಳಿಂದ, ಅಹಮಾದಿ ಶುದ್ಧಿಯು=ಅಂತಃಕರಣದ ಶುದ್ಧತೆಯು, ಅಹುದೈಸೆ=ಆಗುತ್ತದಷ್ಟೇ, ನಿಜಮುಕ್ತಿ ಯಹುದು=ಸತ್ಯವಾದ ಮೋಕ್ಷವಾಗುತ್ತದೆ,ಎಂಬುದು=ಹೀಗೆ ಹೇಳುವದು,ಎಂತು= ಹೇಗೆ, ಘಟಿಸುವದು=ಸಂಭವಿಸುವದು (ಆಗದೆಂಬ ಭಾವವು).

**ತಾತ್ಪರ್ಯ:-** ಹೇ ಶಿಷ್ಯನೇ ಕೇಳು. ಕರ್ಮವು ಈಶ್ವರಾರ್ಪಣ ನಿಷ್ಕಾಮ ದಿಂದ ಮಾಡಿದರೆ ಮಾತ್ರ ಅಂತಃಕರಣ ಶುದ್ಧಿಗೆ ಹೇತುವಾಗಿರುತ್ತದೆ. ಅಜ್ಞಾನದ ಆವರಣವನ್ನು ನಾಶ ಮಾಡಲಾರದು. ಕತ್ತಲೆಯು ದೀಪದ ಬೆಳಕಿನಿಂದ ನಿವೃತ್ತಿ ಯಾಗುವದಲ್ಲದೆ ದಂಡದಿಂದ ಎಷ್ಟು ಹೊಡೆದರೂ ಹೋಗದು. ಯಾಕಂದರೆ, ದಂಡದ ತಾಡನವು ಕತ್ತಲೆಗೆ ಅವಿರೋಧವಾಗಿದೆ. ಆದ್ದರಿಂದ ಹೋಗದು. ವಿರೋ ಧವಾದ ಪ್ರಕಾಶದಿಂದ ಉಳಿಯದು. ಇದರಂತೆ ಅವಿರೋಧವಾದ ಕರ್ಮದಿಂದ ಅಜ್ಞಾನವಳಿಯದು. ವಿರೋಧವಾದ ಜ್ಞಾನದಿಂದ ಅವಶ್ಯವಾಗಿ ಅಜ್ಞಾನವು ನಾಶ ವನ್ನು ಹೊಂದುತ್ತದೆ. ಆದ್ದರಿಂದ ಮುಕ್ತಿಯು ಜ್ಞಾನದಿಂದ ಆಗುತ್ತದೆ. ಕರ್ಮ ದಿಂದ ಎಂದಿಗೂ ಆಗದು. ಕರ್ಮವು ಮುಕ್ತಿಗೆ ಕಾರಣವಲ್ಲವೆಂದು ತಿಳಿ.

ಬಳಿಕ, ಕರ್ಮವೇ ಮುಕ್ತಿಗೆ ಮೂಲಕಾರಣವಾಗಿದೆಯೆಂದು ನೀನು ಹಟ ವನ್ನು ಮಾಡಿದರೆ, ಉಪನಿಷತ್ತುಗಳಲ್ಲಿ ಹೇಳಿದ ಜ್ಞಾನವು ವ್ಯರ್ಥವಾಗಬೇಕಾ ದೀತು. ಆದ್ದರಿಂದ ಮುಕ್ತಿಗೆ ಕರ್ಮವು ಕಾರಣವಲ್ಲ ಎಂದು ಹೇಳುತ್ತಾರೆ.

**ಸೂನು ಕೇಳೀ ಕರ್ಮತಾನೆ ಮುಕ್ತಿಯೆನೀಯು ।**
**ಲಾನ್ನೈಗಮಾಂತದಲ್ಲಿ ವಿಧಿಸಿರ್ಪಸು ।**
**ಜ್ಞಾನಮುಂ ವ್ಯರ್ಥವೆನಬೇಕು ॥೨॥**

**ಟೀಕಾ:**– ಸೂನುಕೇಳ್=ಪುತ್ರನೇ ಆಲಿಸು, ಈ ಕರ್ಮತಾನೆ=ಸ್ವತಃ ಈ ಕರ್ಮವು, ಮುಕ್ತಿಯನು–ಮುಕ್ತಿಯನ್ನು, ಈಯಲ್=ಉಂಟು ಮಾಡಿದರೆ, ಆ ನೈಗಮಾಂತದಲ್ಲಿ=ವೇದದ ಅಂತ್ಯದಲ್ಲಿ ಹೇಳಲ್ಪಟ್ಟ ಉಪನಿಷತ್ತುಗಳಲ್ಲಿ,ವಿಧಿಸಿರ್ಪ= ಪ್ರತಿಪಾದಿಸಿದ, ಸುಜ್ಞಾನಮುಂ=ಬ್ರಹ್ಮಾಪರೋಕ್ಷ ಜ್ಞಾನಕಾಂಡವು, ವ್ಯರ್ಥವೆನಬೇಕು=ನಿಷ್ಪ್ರಯೋಜನವಾಗಬೇಕಾದೀತು.

**ತಾತ್ಪರ್ಯ:**- ಎಲೈ ಮಗನೇ! ಕೇಳು. ಕರ್ಮಕಾಂಡದಲ್ಲಿ ಅರ್ಥವಾದಪರಗಳಾದ ಕೆಲವು **ರೋಚಕವಾಕ್ಯಗಳಿರುತ್ತವೆ.** ಅವು ಕರ್ಮದಿಂದಲೇ ಮುಕ್ತಿಯಾಗುತ್ತದೆಂದು ಹೇಳುತ್ತವೆ. ಅವು ಕರ್ಮದಲ್ಲಿ ಜನರನ್ನು ಪ್ರವೃತ್ತಿ ಮಾಡಿಸತಕ್ಕವುಗಳಾಗಿವೆ. ಮುಕ್ತಿ ಕೊಡುವದಿಲ್ಲ. ಆ ವಾಕ್ಯಗಳನ್ನು ಕೇಳಿ ನೀನು ಕರ್ಮಗಳಿಂದಲೇ ಮುಕ್ತಿಯೆಂದು ಹೇಳಿದರೆ, ಉಪನಿಷತ್ತುಗಳಲ್ಲಿ ಹೇಳಿದ ಜ್ಞಾನಕಾಂಡವು **ವ್ಯರ್ಥವಾಗಬೇಕಾಗುತ್ತದೆ.** ಅಥವಾ ಉಪನಿಷತ್ತುಗಳಲ್ಲಿ ಜ್ಞಾನ ಹೇಳುವದನ್ನು ಬಿಡಬೇಕಾಗಿತ್ತು, ಬಿಟ್ಟಿಲ್ಲ. ಕಿಂತು ಸುಜ್ಞಾನವನ್ನು ಪ್ರತಿಪಾದಿಸಿದೆ. ಆದ್ದರಿಂದ ಕರ್ಮದಿಂದ ಮುಕ್ತಿಯಿಲ್ಲವೆಂದು ತಿಳಿ.

**ಬಳಿಕ,** ವೇದದಲ್ಲಿ ಕರ್ಮಕಾಂಡ ಮತ್ತು ಜ್ಞಾನಕಾಂಡ ಇವೆರಡು ಹೇಳಲ್ಪಟ್ಟಿವೆ. ಆದ್ದರಿಂದ ಹೊರಗೆ ಕರ್ಮವನ್ನು ಮಾಡುತ್ತಾ ಒಳಗೆ ಆತ್ಮನನ್ನು ಅರಿಯುತ್ತಾ ಹೋಗಬೇಕು. ಪಕ್ಷಿಯು ಎರಡು ರೆಕ್ಕೆಗಳಿಂದ ಗಗನಕ್ಕೆ ಹಾರುವಂತೆ ಕರ್ಮಜ್ಞಾನಗಳೆರಡರ ಸಮುಚ್ಚಯದಿಂದೆ ಮುಕ್ತಿಯಾಗುತ್ತದೆ. ಕರ್ಮವನ್ನು ಬಿಟ್ಟು ಕೇವಲ ಒಂದು ಜ್ಞಾನಮಾತ್ರದಿಂದ ಮುಕ್ತಿಯಾಗದು. ಮದ್ದಿನ ಹೆಸರನ್ನು ತಕ್ಕೊಂಡರೆ ರೋಗವು ನಿವೃತ್ತಿಯಾಗದು. ಔಷಧವನ್ನು ಚನ್ನಾಗಿ ಸೇವನೆ ಮಾಡಿದರೆ, ರೋಗ ನಿವೃತ್ತಿಯಾಗುತ್ತದೆ. ಇದರಂತೆ ಪರಬ್ರಹ್ಮದ ಮಾತುಗಳಿಂದ ಭವನಿವಾರಣೆಯಾಗದು. ಕಿಂತು ಸತ್ಕರ್ಮಗಳನ್ನು ಮಾಡುವದರಿಂದ ಭವರೋಗವು ನಿವೃತ್ತಿಯಾಗುತ್ತದೆ. ಆದ್ದರಿಂದ ಮುಕ್ತಿಗೆ ಕರ್ಮಕಾರಣವಾಗಿರುತ್ತದೆಂದು ಶಿಷ್ಯನು ಶಂಕೆಯನ್ನು ಮಾಡುತ್ತಲಿದ್ದಾನೆ.

**ರೋಗವದು ಮದ್ದೆಂದೊಡಾಗಳಳಿವುದೆ ಸುಪ್ರ |**
**ಯೋಗದಿಂ ಸೇವಿಸದೆ ವಿಧಿಯನುಳಿದರಿಯ |**
**ಲಾಗಿ ತಮವಳಿಯದೆನೆ ಕೇಳು** ||೩||

**ಟೀಕಾ:**- ರೋಗವದು=ಯಾವದೊಂದು ರೋಗವು, ಮದ್ದು ಎಂದೊಡೆ= ಔಷಧದ ಹೆಸರನ್ನು ಉಚ್ಚಾರಮಾಡಿದರೆ, ಆಗಳ್=ಆಕಾಲಕ್ಕೆ, ಅಳಿವುದೆ=ನಾಶವಾಗುವದೆ, ಸುಪ್ರಯೋಗದಿಂ=ವೈದ್ಯನು ಹೇಳಿದಪ್ರಕಾರ, ಸೇವಿಸದೆ=ಸ್ವೀಕರಿಸದೆ,

(ಅದರಂತೆ) ವಿಧಿಯನು=ಕರ್ಮವನ್ನು, ಉಳಿದು=ಬಿಟ್ಟು, ಅರಿಯಲಾಗಿ=ಆತ್ಮ ನನ್ನು ತಿಳದಾಗ್ಯಾದರೂ, ತಮವು=ಅಜ್ಞಾನವು, ಅಳಿಯದು=ನಾಶವಾಗದು, ಎನೆ= ಶಿಷ್ಯನು ಹೀಗನ್ನಲು, ಕೇಳು=ಮುಂದೆ ಹೇಳವದನ್ನು ಆಲಿಸು.

**ತಾತ್ಪರ್ಯ:**– ಹೇ ಗುರುದೇವ! ಕೇಳು. ಔಷಧವನ್ನು ವೈದನು ಹೇಳಿದಂತೆ ಸ್ವೀಕಾರಮಾಡದೆ, ವಾಣಿಮಾತ್ರದಿಂದ ಆ ಔಷಧದ ಹೆಸರನ್ನು ಅನೇಕಸಾರೆ ನುಡಿ ದರೂ ರೋಗವು ನಿವೃತ್ತಿಯಾಗದಂತೆ; ವೇದವಿಹಿತ ಸತ್ಕರ್ಮಗಳನ್ನು ಚನ್ನಾಗಿ ಮಾಡದೆ, ಅಸಂಗ, ಸತ್ತು, ಚಿತ್ತು, ಆನಂದವೆಂದು ಪರಬ್ರಹ್ಮದ ಹೆಸರುಗಳನ್ನು ನುಡಿದಮಾತ್ರದಿಂದ ಭವಬಂಧವಳಿಯದು. ಅಜ್ಞಾನವು ಕೆಡದು. ಮುಕ್ತಿಯು ಆಗ ಲಾರದು. ಆದ್ದರಿಂದ ಸತ್ಕರ್ಮವು ಮುಕ್ತಿಗೆ ಅವಶ್ಯಬೇಕು. ಕತ್ತಲೆಯ ಮನೆಯಲ್ಲಿ ಕೂತುಕೊಂಡು ದೀಪದ ನಾಮವನ್ನು ನುಡಿದಮಾತ್ರಕ್ಕೆ ಕತ್ತಲೆ ಹೋಗದು. ದೀಪ ವನ್ನು ಎಣ್ಣೆಬತ್ತಿಗಳಿಂದ ಹದಮಾಡಿ ಹಚ್ಚಿದರೆ ಪ್ರಕಾಶವಾಗಿ ಕತ್ತಲೆಯು ಕೆಡುತ್ತದೆ. ಇದರಂತೆ ಬರೀ ವೇದಾಂತಮಾತುಗಳಿಂದ ಪ್ರಯೋಜನವಿಲ್ಲ. ಸತ್ಕರ್ಮಗಳನ್ನು ಮಾಡುವದರಿಂದಲೇ ಪ್ರಯೋಜನವಿರುವದು. ಅಥವಾ ಆತ್ಮನನ್ನು ಅರಿಯುತ್ತಾ, ಕರ್ಮಗಳನ್ನು ಮಾಡುತ್ತ ಹೋದರೆ, ಅಜ್ಞಾನವಳಿದು ಮುಕ್ತಿಯಾಗಬಹುದು. ಕೇವಲ ಜ್ಞಾನಕಾಂಡದ ಮಾತುಗಳಿಂದ ತಮವಳಿಯದು ಮುಕ್ತಿಯಾಗದು. ಎಂದು ಶಿಷ್ಯನು ಶಂಕೆಯನ್ನು ಮಾಡಲು; ಅದಕ್ಕೆ ಗುರುಗಳು ಹೇ ಶಿಷ್ಯನೇ ನಿನಗೆ ಮುಂದೆ. ಹೇಳುವ ಪ್ರಕಾರ ಉತ್ತರವನ್ನು ಹೇಳುತ್ತೇನೆ. ಕೇಳು. ಎಂದು ಹೇಳಿದ್ದಾರೆ.

**ಬಳಿಕ:**- ಗುರುಗಳು ಉತ್ತರವನ್ನು ಹೇಳುತ್ತಲಿದ್ದಾರೆ. ಏನಂದರೆ ನಸು ಗತ್ತಲೆಯಲ್ಲಿ ಬಿದ್ದ ಹಗ್ಗವನ್ನು ತಿಳಿಯದೆ, ಹಾವೆಂದು ಹೆದರಿದವನಿಗೆ. ಇದು ಹಾವಲ್ಲ. ಹಗ್ಗವೆಂಬ ಆಪ್ತ ವಚನದಿಂದ ಹಗ್ಗದ ಜ್ಞಾನವಾಗಲು; ಹಾವು ಹಾವಿನ ಸಂಬಂಧಿ ಭಯ ಕಂಪನಾದಿಗಳು; ಏನೊಂದು ಕ್ರಿಯೆಗಳಿಲ್ಲದೆ ಹೇಗೆ ನಿವೃತ್ತಿ ಯಾಗುತ್ತವೆಯೋ; ಹಾಗೇ ವೇದದ ಜ್ಞಾನಕಾಂಡೋಕ್ತ ಮಹಾವಾಕ್ಯ ಶ್ರವಣ ಜನ್ಯಜ್ಞಾನ ಮಾತ್ರದಿಂದ, ಅಜ್ಞಾನವಳಿದು ನಿಜದಭಿವ್ಯಕ್ತಿರೂಪ ಮೋಕ್ಷವು ಪ್ರಾಪ್ತವಾಗುತ್ತದೆಂದು ಉತ್ತರವನ್ನು ಹೇಳುತ್ತಲಿದ್ದಾರೆ.

**ಮುನ್ನಲುಂಟಾದ ಗುಣಪನ್ನಗಭಯಂ ತಿಳಿವಿ ।**
**ನಿನ್ನಾಡೆ ಪಿಂಗು ತಿಹುದಂತೆ ಮೋಹವದು ।**
**ತನ್ನ ನರಿದಂತೆ ಕೆಡುತಿರ್ಕು ॥೪॥**

**ಟೀಕಾ:**- ಮುನ್ನಲುಂಟಾದ=ಮೊದಲುತ್ಪನ್ನವಾಗಿ ತೋರಿದ, ಗುಣಪನ್ನ ಗಭಯಂ=ಹಗ್ಗದಲ್ಲಿ ತೋರಿದ ಹಾವಿನ ಭೀತಿಯು, ತಿಳುವಿನಿಂ=ಅರಿಯುವ

ಮಾತ್ರದಿಂದಲೇ, ನಾಡೆ=ಅತ್ಯಂತ ನಿವೃತ್ತಿಯಾಗಿ, ಪಿಂಗುತಿಹುದಂತೆ=ನಾಶವಾಗುವ ಹಾಗೆ, ತನ್ನನರಿದಂತೆ= ತನ್ನನ್ನು ತಾನು ತಿಳಿದ ಹಾಗೆ, ಮೋಹವದು= ಅಜ್ಞಾನವು, ಕೆಡುತಿರ್ಕು=ನಾಶವಾಗುತ್ತಿರುವದು,

**ತಾತ್ಪರ್ಯ**:- ಹಗ್ಗದಲ್ಲಿ ಹಾವಿನ ಅಧ್ಯಾಸವಾಗುತ್ತದೆ. ಅದರಿಂದ ಭಯ ಕಂಪನಾದಿಗಳು ತೋರುತ್ತವೆ. ಆ ತೋರುವ ಹಾವನ್ನು ಬಡಿಗೆಯಿಂದ ಎಷ್ಟು ಹೊಡೆದರೂ ನಿವೃತ್ತಿಯಾಗುವದಿಲ್ಲ. ಅಂದರೆ ಯಾವ ಕ್ರಿಯೆಗಳಿಂದಲೂ ತೋರುತ್ತಿರುವ ಹಾವು ಹೋಗುವದಿಲ್ಲ. ಕಿಂತು; ಯಾವ ಹಗ್ಗದ ಅಜ್ಞಾನದಿಂದ ಹಾವು ತೋರಿದೆಯೋ, ಆ ಹಗ್ಗದ ಜ್ಞಾನದಿಂದಲೇ ಹಾವಿನ ನಿವೃತ್ತಿಯಾಗುತ್ತದೆ. ಹಾವಿನ ನಿವೃತ್ತಿಗೆ ಮುಖ್ಯವಾಗಿ ಹಗ್ಗದ ಜ್ಞಾನವೇ ಬೇಕಾಗಿರುತ್ತದೆ. ಈ ದೃಷ್ಟಾಂತದಂತೆ; ತನ್ನ ಸಚ್ಚಿದಾನಂದ ಸ್ವಸ್ವರೂಪದ ಅಜ್ಞಾನ ಮೂಲಕ, ಜನನ ಮರಣಾತ್ಮಕ ಸಂಸಾರ ಭ್ರಾಂತಿಯು ತೋರುತ್ತಿರುತ್ತದೆ. ಇದರ ನಿವೃತ್ತಿಗೆ ತನ್ನ ಜ್ಞಾನವೇ ತನಗೆ ಮುಖ್ಯವಾಗಿ ಬೇಕಾಗಿರುತ್ತದೆ. ಕ್ರಿಯೆಗಳಾದ ಕರ್ಮಗಳಿಂದೇನೂ ಪ್ರಯೋಜನವಿಲ್ಲ. ಜ್ಞಾನ ಕ್ರಿಯೆಗಳೆರಡೂ ಕೂಡಿದ ಸಮುಚ್ಚಯದಿಂದ ಮುಕ್ತಿಯಾಗುತ್ತದೆಂದು ನೀನು ಹೇಳುವದು ಸರಿಯಲ್ಲ. ಯಾಕಂದರೆ, ಸ್ನಾನಮತ್ತು ಭೋಜನ ಎರಡನ್ನು ಏಕಕಾಲಕ್ಕೆ ಮಾಡುವದು ಅಸಂಭವವಾದಂತೆ, ಕರ್ಮಮಾಡುವದು ಮತ್ತು ತಿಳಿಯುವದು ಏಕಕಾಲಕ್ಕೆ ಸಮುಚ್ಚಯವಾಗದು. ಆದ್ದರಿಂದ ಮೊದಲು ಸ್ನಾನಮಾಡಿ ನಂತರ ಭೋಜನಮಾಡುವಂತೆ; ಮೊದಲು ಸತ್ಕರ್ಮಗಳನ್ನು ಮಾಡಿ ಚಿತ್ತ ಶುದ್ಧನಾಗಬೇಕು. ಅನಂತರ ತನ್ನನ್ನು ತಾನು ಶ್ರವಣಾದಿ ಸಾಧನಗಳಿಂದ ಅರಿಯಬೇಕು. ಹೀಗೆ ಭಿನ್ನ ಭಿನ್ನ ಕಾಲಗಳಲ್ಲಿ ಆಗಬಹುದು. ಇದಕ್ಕೆ **ಕ್ರಮಸಮುಚ್ಚಯ**ವೆನ್ನುವರು. ಈ ಮಾತನ್ನು ಕೈವಲ್ಯಪದ್ಧತಿಯಲ್ಲಿ ನಿಜಗುಣರು ಹಿಂಗದೆ ನಿತ್ಯ '**ಕರ್ಮವ ಮಾಡಲು**, ಎಂದು ಹೇಳಿದ್ದಾರೆ. ಸಮಸಮುಚ್ಚಯವಾದವನ್ನು ಪರಮಾನುಭವಬೋಧೆಯಲ್ಲಿ 'ಅರೆ ಮರುಳಾದ ಜನರೆಲ್ಲ' ಎಂದು ಹೇಳಿ ಚನ್ನಾಗಿ ಖಂಡಿಸಿರುವರು. ಆದ್ದರಿಂದ ಸಮಸಮುಚ್ಚಯ ಸಂಭವಿಸದು. ಮತ್ತು ಸಂಸಾರವು ಅಧ್ಯಾಸಾತ್ಮಕವಾಗಿರೋಣದರಿಂದ ನಾವು ಕೊಟ್ಟ ರಜ್ಜುಸರ್ಪ ದೃಷ್ಟಾಂತವು ಯೋಗ್ಯವಿರುತ್ತದೆ. ನೀನು ಉದಾಹರಿಸಿದ ರೋಗಮದ್ದಿನ ದೃಷ್ಟಾಂತವು ವಿಷಮವಾಗಿರುತ್ತದೆ. ಮತ್ತು ನೀನು ಕೇವಲ ಜ್ಞಾನದ ಮಾತುಗಳನ್ನಾಡುವದರಿಂದ ಬಂಧ ನಿವೃತ್ತಿಯಾಗುವದಿಲ್ಲವೆಂದು ಏನು ಹೇಳಿದಿಯೋ; ಅದೂ ಸರಿಯಲ್ಲ. ಯಾಕಂದರೆ, ಆಪ್ತ ಪುರುಷನು ಇದು ಹಾವಲ್ಲ ಹಗ್ಗವೆಂದು ಕೇವಲವಾಣಿ ಮಾತ್ರದಿಂದಲೇ ಹಾವು ಹಾವಿನ ಭಯಕಂಪನಾದಿಗಳು ನಿವೃತ್ತಿಯಾದಂತೆ, ಮಹಾ ವಾಕ್ಯವನ್ನು ಸದ್ಗುರುಗಳು ಉಪದೇಶವನ್ನು ಮಾಡುವ ಅವರ ವಾಣಿಯಿಂದಲೇ, ಅಜ್ಞಾನ ಮತ್ತು ಜನನ ಮರಣಾತ್ಮಕ

ಸಂಸಾರ ದುಃಖವು ನಿವೃತ್ತಿಯಾಗಿ, ಪರಮಾನಂದ ಪ್ರಾಪ್ತಿರೂಪ ಮೋಕ್ಷವನ್ನು ಪಡೆಯುತ್ತಾನೆ. ಆದ್ದರಿಂದ ಮುಕ್ತಿಗೆ ಜ್ಞಾನ ಮಾತ್ರ ವಿದ್ದರೆ ಸಾಕು. ಕರ್ಮವು ಬೇಕಾಗಿಲ್ಲ. ಹೀಗೆ ಮುಕ್ತಿ ಪೂರ್ವದಲ್ಲಿಯೇ ಕರ್ಮವು ನಿಷ್ಪ್ರಯೋಜನವೆಂದು ತಿಳಿದು ತ್ಯಾಗ ಮಾಡಿದಮೇಲೆ, ಮುಕ್ತಿ ಪ್ರಾಪ್ತಿಯ ಉತ್ತರ ಕಾಲದಲ್ಲಿ ಆ ಕರ್ಮಗಳಿಂದ ಏನು ಪ್ರಯೋಜನವಾಗಬಹುದು ನೀನೇ ಹೇಳು. ಅರ್ಥಾತ್ ಮುಕ್ತಿಯ ಪೂರ್ವ ಮತ್ತು ಉತ್ತರ ಎರಡೂ ಕಾಲಗಳಲ್ಲಿಯೂ ಕರ್ಮವು ನಿರುಪಯೋಗವಾಗಿರುತ್ತದೆಂದು ತಿಳಿ ಎಂಬ ಭಾವವು.

**ಬಳಿಕ,** ಹೇ ಶಿಷ್ಯನೇ ಕೇಳು. ಮುಕ್ತಿ ಅಂದರೇನು? ಅದು ಆತ್ಮಸ್ವರೂಪವೋ? ಅಥವಾ ತನಗಿಂತಲೂ ಭಿನ್ನವೋ? ತನಗಿಂತ ಭಿನ್ನವೆಂದು ಹೇಳಿದರೆ, ಅದು ಪರಿಚ್ಛಿನ್ನತ್ವ, ಅನಾತ್ಮತ್ವ, ದೃಶ್ಯತ್ವವುಳ್ಳದಾಗಿ ಮಿಥ್ಯೆಯೆಂದು ಹೇಳಬೇಕಾಗುತ್ತದೆ. ಹೀಗೆ ಅಂಗೀಕಾರ ಮಾಡುವದು ಅಸಂಗತವಾಗಿದೆ. ಆದ್ದರಿಂದ ಆತ್ಮಸ್ವರೂಪವೆಂದು ಅಂಗೀಕರಿಸಲಿಕ್ಕೇಬೇಕು ಎಂದು ಹೇಳುತ್ತಾರೆ.

**ಇನ್ನು ಪೇಳ್ವೆನು ಕೇಳು ನಿನ್ನ ಮತದಲ್ಲಿ ಸಂ ।**
**ಪನ್ನವಹ ಮುಕ್ತಿಯದು ನಿಜಸ್ಥಿತಿಯಪ್ಪು ।**
**ದೆನ್ನಲೇ ಬೇಹುದಿದು ಸಿದ್ಧ ॥೫॥**

**ಟೀಕಾ:-** ಇನ್ನು ಪೇಳ್ವೆನು ಕೇಳು=ಮತ್ತೂ ಹೇಳುತ್ತೇನೆ ಆಲಿಸು, ನಿನ್ನ ಮತದಲ್ಲಿ=ನಿನ್ನ ಪಕ್ಷದಲ್ಲಿ, ಸಂಪನ್ನವಹ = ಪ್ರಾಪ್ತವಾಗಿರುವ, ಮುಕ್ತಿಯದು=ಆ ಮೋಕ್ಷವು, ನಿಜಸ್ಥಿತಿಯಪ್ಪುದು=ನಿಜವಾದ ಆತ್ಮಸ್ವರೂಪವಾಗಿರುವದೆಂದು, ಎನ್ನಲೇ ಬೇಹುದು=ಹೀಗೆ ಹೇಳಲಿಕ್ಕೆ ಬೇಕಾಗುವದು, ಇದು ಸಿದ್ಧ=ಈ ಮಾತು ನಿಶ್ಚಯ.

**ತಾತ್ಪರ್ಯ:-** ತನ್ನ ಮರೆತು ಅನ್ಯವನ್ನು ತಾನೆಂದು ತಿಳಿಯುವದೇ ಬಂಧವು. ತನ್ನ ನಿಜವನ್ನು ತಾನು ಯಥಾರ್ಥವಾಗಿ ಅರಿಯಲು ಮುಕ್ತನೆನಿಸುವನು. **'ಸ್ವಸ್ವರೂಪಾವಸ್ಥಿತಿಃ ಮುಕ್ತಿರಿತ್ಯಭಿಧೀಯತೆ'** ತನ್ನ ಸ್ವರೂಪ ಸ್ಥಿತಿಯಿಂದ ತಾನಿರುವದೇ ಮುಕ್ತಿಯೆಂದು ಶ್ರೀಶಂಕರಾಚಾರ್ಯರು ಹೇಳಿರುತ್ತಾರೆ. **'ಮರೆಯೆ ಬಂಧ ಅರಿಯೆ ಮುಕ್ತಿ'** ಎಂದು ಗ್ರಂಥಕರ್ತರೇ ಹೇಳಿರುತ್ತಾರೆ. ತನಗಿಂತ ಭಿನ್ನವಾಗಿ ಸ್ವರ್ಗದಂತೆ ಮುಕ್ತಿಯಿರುತ್ತದೆಂದು ಹೇಳಿದರೆ, ಅದು ಅನಿತ್ಯವಾಗುವದು. ಅನಿತ್ಯವಾದ ಮುಕ್ತಿಯನ್ನು ಪಡೆಯುವದರಿಂದ ಪ್ರಯೋಜನವೇನುಂಟು? ಆದ್ದರಿಂದ ಮುಕ್ತಿಯು ತನ್ನ ಆತ್ಮನ ನಿಜಸ್ಥಿತಿಯಾಗಿರುತ್ತದೆಂದು ಒಪ್ಪಲೇಬೇಕು. ಒಪ್ಪದಿದ್ದರೆ, ಪುರುಷಾರ್ಥಹೀನನಾಗಬೇಕಾಗುತ್ತದೆ. ಪರಮ ಪುರುಷಾರ್ಥರೂಪ ನಿತ್ಯವಾದ ಮೋಕ್ಷದ ಉದ್ದಿಶ್ಯವಾಗಿಯೇ ಶ್ರವಣಾದಿ ಸಾಧನಗಳು ಹೇಳಲ್ಪಟ್ಟರು

ತ್ತವೆ. ಅವೆಲ್ಲಾ ವ್ಯರ್ಥಗಳಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಮುಕ್ತಿ ನಿತ್ಯ ನಿಜಸ್ವರೂಪವೆಂದು ನೀನು ಒಡಂಬಡಬೇಕಾಗುತ್ತದೆ.

ಬಳಿಕ, ಮುಕ್ತಿಯು ತನ್ನ ಸ್ವರೂಪವೆಂದು ಅಂಗೀಕಾರಮಾಡಿದರೆ, ನಿನ್ನನ್ನು ಕುರಿತು (ಕೋಟಿಯನ್ನು) ಪ್ರಶ್ನೆಯನ್ನು ಮಾಡುತ್ತೇನೆ. ಅದಕ್ಕೆ ನೀನು ಉತ್ತರ ಕೊಡು ಎಂದು ಗುರುಗಳು ಹೇಳುತ್ತಲಿದ್ದಾರೆ.

**ಅದು ನಿತ್ಯವಿಧಿಯಿಂದಹುದು ಸತ್ಯವೆನೆ ವಿಧಿಗೆ ।**
**ಮೊದಲೆ ನಿಜಸಿದ್ಧಿ ತನಗುಂಟೋ ಬಳಿಕ ತೋ ।**
**ರ್ಪುದೊ ನೀನೆ ಪೇಳು ನಿಜವಾಗಿ ॥೬॥**

ಟೀಕಾ:- ಅದು=ಆ ಮೋಕ್ಷವು, ನಿತ್ಯವಿಧಿಯಿಂದ=ನಿತ್ಯಕರ್ಮಗಳಿಂದ, ಅಹುದು=ಆಗುವದು, ಸತ್ಯವೆನೆ=ನಿಜವೆಂದು ಹೇಳಿದರೆ, ವಿಧಿಗೆ=ಕರ್ಮಕ್ಕಿಂತಲೂ, ಮೊದಲೇ=ಪೂರ್ವದಲ್ಲಿ, ನಿಜಸಿದ್ಧಿ=ಸ್ವಸ್ವರೂಪ ಪ್ರಾಪ್ತಿರೂಪ ಮುಕ್ತಿಯು, ತನಗುಂಟೊ = ತನಗಿರುವದೋ, ಬಳಿಕ = ಕರ್ಮಮಾಡಿದಮೇಲೆ, ತೋರ್ಪುದೋ= ತೋರುವದೋ ?, ನಿಜವಾಗಿ=ಸತ್ಯವಾಗಿ, ನೀನೆ ಪೇಳು=ನೀನೇ ಉತ್ತರವನ್ನು ಕೊಡು.

ತಾತ್ಪರ್ಯ:- ಆ ಸ್ವಸ್ವರೂಪಸ್ಥಿತಿರೂಪ ಮುಕ್ತಿಯು ನಿತ್ಯಾದಿ ಕರ್ಮಗಳನ್ನು ಮಾಡುವದಕ್ಕಿಂತಲೂ ಪೂರ್ವದಲ್ಲಿ ಉಂಟೋ? ಅಥವಾ ಇಲ್ಲೋ? ಹೇಳು. ಉಂಟೆಂದು ನೀನು ಹೇಳಿದರೆ, ಕರ್ಮಗಳಿಂದ ಪ್ರಯೋಜನವಿಲ್ಲದಂತಾಯಿತು. ಕರ್ಮಗಳನ್ನು ಮಾಡಿದಮೇಲೆ ತೋರುತ್ತದೆಂದು ಹೇಳಿದರೆ, ಮೊದಲಿಲ್ಲ, ಆಮೇಲೆ ನಿಜಮುಕ್ತಿಯಾಗುತ್ತದೆ. ಅಂದರೆ ಅನಿತ್ಯದೋಷವು ಬರುತ್ತದೆ. ಆದ್ದರಿಂದ ಉಭಯರೀತಿಯಿಂದಲೂ ಪ್ರಯೋಜನವುಳ್ಳದ್ದಲ್ಲ ಎಂದು ನೀನು ತಿಳಿ.

ಬಳಿಕ, ನಿಜಾತ್ಮರೂಪಮುಕ್ತಿ ಕರ್ಮಗಳನ್ನು ಮಾಡುವದಕ್ಕಿಂತ ಮೊದಲು ಇದ್ದಿಲ್ಲ. ಅನಂತರ ಪ್ರಾಪ್ತವಾಗುತ್ತದೆಂದು ಹೇಳಿದರೆ, ಅನಿತ್ಯತ್ವವನ್ನು ಕೊಡುತ್ತಾರೆ.

**ಮೊದಲಿಲ್ಲದಾತ್ಮನೀ ವಿಧಿಗಳಿಂ ಮೇಣು ತೋ।**
**ರ್ಪುದು ನೈಜವೆಂದೊಡೆಲೆ ನಿತ್ಯನಾತ್ಮನೆಂ।**
**ಬುದನಿನ್ನು ಬಿಟ್ಟು ಕಳೆನೀನು ॥೭॥**

ಟೀಕಾ:- ಆತ್ಮನು= ತಾನು, ಮೊದಲಿಲ್ಲದೆ= ಕರ್ಮಮಾಡುವದಕ್ಕಿಂತ ಪೂರ್ವದಲ್ಲಿರದೆ, ಈ ವಿಧಿಗಳಿಂ = ಈ ಕರ್ಮಗಳಿಂದ, ಮೇಣ್ = ಅನಂತರ,

ತೋರ್ಪನು= ತೋರುವವನು, ನೈಜವೆಂದೊಡೆ= ನಿಜವೆಂದು ಹೇಳಿದರೆ, ಎಲೆ=ಎಲೈ ಶಿಷ್ಯನೇ!, ನಿತ್ಯನಾತ್ಮನೆಂಬುದು= ಆತ್ಮನು ನಿತ್ಯನಾಗಿರುವನೆಂಬುದನ್ನು, ಇನ್ನು= ಬಳಿಕ, ನೀನು= ನೀನು, ಬಿಟ್ಟುಕಳೆ= ಬಿಟ್ಟುಬಿಡು.

**ತಾತ್ಪರ್ಯ:-** ಸಚ್ಚಿದಾನಂದಾತ್ಮಸ್ವರೂಪ ಮುಕ್ತಿಯು ಮೊದಲಿಗಿಲ್ಲ. ಕರ್ಮಗಳನ್ನು ಮಾಡಿದಮೇಲೆ ತೋರುತ್ತದೆಂದುನೀನು ಹೇಳುವದಾದರೆ, ಆತ್ಮನು ನಿತ್ಯನಾಗಿರುವನೆಂಬುದನ್ನು ನೀನು ಬಿಡಬೇಕಾಗುತ್ತದೆ ಯಾಕಂದರೆ, ಯಾವದು ಆಗಂತುಕವಾಗಿದೆಯೋ, ಅದು ಅನಿತ್ಯವೇ ಆಗಿರುತ್ತದೆ. ನಿತ್ಯಾದಿಕರ್ಮಗಳಿಂದ ಅನಿತ್ಯವಾದ ಮೋಕ್ಷವನ್ನು ಪಡೆದು ಪ್ರಯೋಜನವೇನು? ಹೇಳು

**ಬಳಿಕ:-** ಹಾಗಲ್ಲ. ನಿತ್ಯಾದಿಕರ್ಮಗಳನ್ನು ಮಾಡುವದಕ್ಕಿಂತಲೂ ಪೂರ್ವದಲ್ಲಿಯೇ ಮುಕ್ತಿಯು ಇರುವದೆಂದು ಹೇಳಿದರೆ; ಹಾಗಾದರೆ; ಕರ್ಮಗಳಿಂದ ಪ್ರಯೋಜನವೇನುಂಟು? ಎಂದು ಕೇಳುತ್ತಲಿದ್ದಾರೆ.

**ತನ್ನಾಸ್ವರೂಪದಿಂ ಮುನ್ನಿರ್ದು ಕರ್ಮವಂ।**
**ಚೆನ್ನಾಗಿರಚಿಸು ತಿಹನೆಂದೊಡದರಿಂದ।**
**ಲಿನ್ನೇನುಸಿದ್ಧಿ ತನಗುಂಟು ॥೮॥**

**ಟೀಕಾ:-** ತನ್ನಾಸ್ವರೂಪದಿಂ= ತನ್ನ ಆ ಸ್ವರೂಪದಿಂದ, ಮುನ್ನಿರ್ದು= ಮೊದಲೇ ಇದ್ದುಕೊಂಡು, ಕರ್ಮವಂ= ನಿತ್ಯಾದಿಕರ್ಮಗಳನ್ನು, ಚೆನ್ನಾಗಿ= ಉತ್ಕೃಷ್ಟವಾಗಿ, ರಚಿಸುತಿಹನು= ಮಾಡುತ್ತಿರುವನು, ಎಂದೊಡೆ= ಹೀಗೆ ಹೇಳಿದರೆ, ಅದರಿಂದಲೆ= ಆ ಕರ್ಮಗಳನ್ನು ಮಾಡುವದರಿಂದಲೆ, ಇನ್ನು= ಬಳಿಕ, ಏನು ಸಿದ್ಧಿ ತನಗುಂಟು=ಪ್ರಯೋಜನವೇನಿರುವದು.

**ತಾತ್ಪರ್ಯ:-**ತನ್ನ ಸ್ವರೂಪಸ್ಥಿತಿ ಮುಕ್ತಿಯಿಂದ ಮೊದಲೇ ಇದ್ದುಕೊಂಡು. ನಿತ್ಯಾದಿಕರ್ಮಗಳನ್ನು ಮಾಡುತ್ತಾನೆಂದು ಹೇಳಿದರೆ; ಆ ನಿತ್ಯಾದಿಕರ್ಮಗಳಿಂದ ಏನು ಸಿದ್ಧಿಯಾಯಿತು? ಹೇಳು. ನಿತ್ಯಾದಿಕರ್ಮಗಳಿಂದ ಏನು ಪ್ರಯೋಜನವಿಲ್ಲವೆಂದು ನೀನೇ ಹೇಳಿದಂತಾಗುವದು.

**ಬಳಿಕ,** ನಿರುತ್ತರನಾದ ಶಿಷ್ಯನು ‘ಹಾಗಾದರೆ ಪ್ರಯೋಜನವಿಲ್ಲದ ಕರ್ಮವನ್ನು ವೇದದಲ್ಲಿಯಾಕೆ ಹೇಳಿದ್ದಾರೆ? ಅದರಿಂದಲೇನಾದರೂ ಪ್ರಯೋಜನ ವಿರಲಿಕ್ಕೇಬೇಕು. ಅದು ನಮಗೆ ತಿಳಿಯಲೊಲ್ಲದು’ ಎಂದು ಕೇಳಲು, ಅದಕ್ಕೆ ಉತ್ತರವನ್ನು ಗುರುಗಳು ಹೇಳುತ್ತಾರೆ.

**ತಿಳಿಯೆ ಸಾಧಿಸುವರ್ಥದೊಳು ಕರ್ಮಬೇಹುದೈ।**
**ಸಲೆತನಗೆ ಸಿದ್ಧವಾದರ್ಥದಲ್ಲಿ ವಿಧಿ।**
**ಯುಳವಡವುದೆಂತುಸುರು ನೀನೇ ॥೯॥**

**ಟೀಕಾ:**– ತಿಳಿಯೆ= ವಿಚಾರವನ್ನು ಮಾಡಲು; ಸಾಧಿಸುವ ಅರ್ಥದೊಳು= ಅಪ್ರಾಪ್ತವಾದವ್ದನ್ನು ಪ್ರಾಪ್ತಿಮಾಡಿಕೊಡುವಲ್ಲಿ, ಕರ್ಮಬೇಹುದೈ= ಕರ್ಮವು ಬೇಕಾಗುತ್ತದೆ, ಸಲೆ= ಚನ್ನಾಗಿ, ತನಗೆ ಸ್ವಂತಕ್ಕೆ, ಸಿದ್ಧವಾದರ್ಥದಲ್ಲಿ= ನಿತ್ಯ ಪ್ರಾಪ್ತವಾದ ವಿಷಯದಲ್ಲಿ, ವಿಧಿಯು=ಕರ್ಮವು, ಎಂತು= ಹೇಗೆ, ಅಳವಡವುದು= ಸಂಭವಿಸುವದು, ನೀನೆ ಉಸುರು= ನೀನೇ ಹೇಳು.

**ತಾತ್ಪರ್ಯ:**– ಕರ್ಮವು ಪ್ರಯೋಜನಕರವಾಗಿದೆ. ಎಲ್ಲಿ ಅಂದರೆ? ಕೇಳು. ಯಾವದೊಂದು ಅಪ್ರಾಪ್ತವಾದ ವಸ್ತುವನ್ನು ಪ್ರಾಪ್ತಿಮಾಡಿಕೊಳ್ಳುವದಕ್ಕಾಗಿ ಕರ್ಮವು ಬೇಕಾಗುತ್ತದೆ. ಹೇಗಂದರೆ? ಯಜ್ಞಾದಿ ಕರ್ಮಗಳಿಂದ ಸ್ವರ್ಗಲೋಕ ಪ್ರಾಪ್ತಿ ಕಥನದಂತೆ, ಈ ವಿಷಯದಲ್ಲಿ ಕರ್ಮವು ಬೇಕಾಗುತ್ತದೆ. ನಿತ್ಯಪ್ರಾಪ್ತ ರೂಪ ಆತ್ಮಸ್ವರೂಪ ವಿಷಯದಲ್ಲಿ ಕರ್ಮವು ಹೇಗೆ ಸಂಭವಿಸುವದು ? ಹೇಳು. ಯಾವದಾದರೊಂದನ್ನು ಪಡೆಯುವ ವಿಷಯಕ್ಕೆ ಕರ್ಮಬೇಕು. ಪಡೆದಿರುವ ಸಿದ್ಧ ವಿಷಯದಲ್ಲಿ ಕರ್ಮವು ನಿಷ್ಪ್ರಯೋಜನಕರವಾಗಿದೆ. ಆದ್ದರಿಂದ ಮುಕ್ತಿ ವಿಷಯ ದಲ್ಲಿ ಕರ್ಮದಿಂದೇನೂ ಪ್ರಯೋಜನವಿಲ್ಲವೆಂದು ತಿಳಿ.

ಬಳಿಕ, ಉಕ್ತರೀತಿಯಾಗಿ ಎರಡು ತೆರದಿಂದಲೂ ಕರ್ಮವು ಪ್ರಯೋಜನ ವಲ್ಲವೆಂದು ಹೇಳಲು, ಇದನ್ನು ಕೇಳಿ ಶಿಷ್ಯನು 'ತಾವು ಹೇಳಿದಂತೆ ಆಗಲಿ.ಆದರೆ, ಆತ್ಮಸ್ವರೂಪಕ್ಕೆ ಮರೆಮಾಡಿದ ಅಜ್ಞಾನವನ್ನು ಕೆಡಿಸುವದಕ್ಕಾಗಿ ಕರ್ಮ ಬೇಕಾ ಗುತ್ತದೆ' ಎಂದು ಹೇಳಲು, ಈ ಮಾತು ಮುಂದೆ ಹೇಳುವ ರೀತ್ಯಾ ಸಂಭವಿಸುವ ದಿಲ್ಲವೆಂದು ಉತ್ತರವನ್ನು ಹೇಳುತ್ತಾರೆ.

**ಇಂತು ವಿಧಿಗೆರಡು ತೆರದಿಂ ತೋರ್ಕೆ ಘಟಿಸದೋ।**
**ರಂತಾತ್ಮನಿಜಕೆ ಮರೆಯಾದ ತಮವಳಿಯೆ।**
**ಸಂತವಿಧಿ ಬೇಹುದೆನೆ ಕೇಳು ॥೧೦॥**

**ಟೀಕಾ:**- ಇಂತು=ಈ ರೀತಿ, ವಿಧಿಗೆ=ಕರ್ಮಕ್ಕೆ, ಎರಡು ತೆರದಿಂ=ಎರಡು ರೀತಿಯಿಂದಲೂ, ತೋರ್ಕೆ=ಪ್ರಯೋಜನದ ಪ್ರತೀತಿಯು, ಘಟಿಸದು=ಒದಗ ಲಿಲ್ಲ, ಓರಂತೆ=ಚನ್ನಾಗಿ, ಆತ್ಮನಿಜಕೆ=ಆತ್ಮಸ್ವರೂಪಕ್ಕೆ, ಮರೆಯಾದ=ಆವರಣ ವಾದ, ತಮವಳಿಯೆ=ಅಜ್ಞಾನವು ನಾಶವಾಗುವದಕ್ಕಾಗಿ, ವಿಧಿ=ಕರ್ಮವು, ಬೇಹು ದೆನೆ=ಬೇಕಾಗುತ್ತದೆಂದು ನೀನು ಹೇಳಿದರೆ, ಸಂತ=ಸಜ್ಜನನಾದ ಶಿಷ್ಯನೇ, ಕೇಳು=ಆಲಿಸು.

**ತಾತ್ಪರ್ಯ:**– ಮೇಲೆ ಹೇಳಿದ ಪ್ರಕಾರ ಉಭಯರೀತಿಯಿಂದಲೂ ಕರ್ಮವು ಪ್ರಯೋಜನವಲ್ಲವೆಂದು ಹೇಳುತ್ತಿರಲು, ಅದನ್ನು ಕೇಳಿ ಮತ್ತೊಂದು ವಿಧವಾಗಿ ಕರ್ಮವು ಪ್ರಯೋಜನವಾಗಿರುತ್ತದೆಂದು ಹೇಳುತ್ತಾನೆ. ಏನಂದರೆ, 'ಕರ್ಮವು ಮುಕ್ತಿಯ ಸಲುವಾಗಿ ಪ್ರಯೋಜನವಾಗದಿದ್ದರೂ ಆಗಲಿ. ಆದರೆ, ಸಚ್ಚಿದಾನಂದಾತ್ಮ ಸ್ವರೂಪಕ್ಕೆ, - ಚಂದ್ರಗ್ರಹಣದಂತೆ ಮರೆಯಾದ ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವದಕ್ಕಾದರೂ,ಕರ್ಮವು ಉಪಯೋಗವಾಗಿರುತ್ತದೆ. ದೀಪವನ್ನು ಹಚ್ಚುವದರಿಂದ ಕತ್ತಲೆಯು ಕೆಡುವಂತೆ ಕರ್ಮವನ್ನು ಮಾಡುವದರಿಂದ ಅಜ್ಞಾನವು ಕೆಡುತ್ತದೆ. ಆದ್ದರಿಂದ ಅಜ್ಞಾನ ನಿವೃತ್ತಿ ವಿಷಯದಲ್ಲಿ ಕರ್ಮವು ಪ್ರಯೋಜನಕರವಾಗಿದೆ ಎಂದು ಶಿಷ್ಯನು ಶಂಕೆಯನ್ನು ಮಾಡಲು, ಇದನ್ನು ಕೇಳಿ ಗುರುಗಳು 'ಹೇ ಸಂತ ಅಂದರೆ ಸಾಧುಪುರುಷನೇ! ಇದಕ್ಕೆ ಮುಂದೆ ಹೇಳುವ ರೀತಿ ನಿನಗೆ ಉತ್ತರ ಕೊಡುತ್ತೇನೆ' ಎಂದು ಗುರುಗಳು ಅಭಯವನ್ನು ಕೊಡುವಂಥವರಾದರು.

**ಬಳಿಕ,** ಗುರುಗಳು ಶಿಷ್ಯನ ಮೇಲೆ ಎರಡು (ಕೋಟಿಗಳನ್ನು) ಪ್ರಶ್ನೆಗಳನ್ನು ಮಾಡಿ, ಮುಂದೆ ಒಂದೊಂದಕ್ಕೆ ಉತ್ತರವನ್ನು ಹೇಳುತ್ತಾರೆ.

**ಆವಗಂ ಸಂಗ ಸ್ವಭಾವನೋ ಮೇಣು ತಾ |**
**ನಾವಗಂ ಸಂಗರಹಿತ ಸ್ವಭಾವನೋ |**
**ಭಾವಿಸಿಯೆ ಪೇಳು ಧಿಟನೊಂದ ||೧೧||**

**ಟೀಕಾ:**- ತಾನು=ಆತ್ಮನು, ಆವಗಂ=ಯಾವಾಗಲೂ, ಸಂಗಸ್ವಭಾವನೋ=ಅಜ್ಞಾನದಿಂದ ಕೂಡಿರುವ ಸ್ವಭಾವವುಳ್ಳವನೋ, ಮೇಣು=ಮತ್ತು, ಆವಗಂ=ಯಾವಾಗಲೂ, ಸಂಗರಹಿತ ಸ್ವಭಾವನೋ=ಅಜ್ಞಾನದೊಡನೆ ಕೂಡದಿರುವ ಸ್ವಭಾವವುಳ್ಳವನೋ, ಧಿಟವೊಂದ=ಸತ್ಯವಾಗಿ ಒಂದನ್ನು, ಭಾವಿಸಿಯೆ=ವಿಚಾರ ಮಾಡಿ, ಪೇಳು=ಹೇಳು.

**ತಾತ್ಪರ್ಯ:**- ಆತ್ಮನಿಗೆ ಆವರಣ ಮಾಡಿದ ಅಜ್ಞಾನ ನಾಶಕ್ಕಾಗಿ ಕರ್ಮವು ಬೇಕಾಗುತ್ತದೆಂದು ನೀನು ಹೇಳಿದರೆ, ಅದು ಯೋಗ್ಯವಲ್ಲ. ಯಾಕಂದರೆ, ಆತ್ಮನಿಗೆ ಆಜ್ಞಾನವು ಆವರಣವನ್ನುಂಟುಮಾಡಲಾರದು. ಆವರಣವು ಅಂದರೆ ಮುಚ್ಚುವಿಕೆಯಾಗಿದೆ. ಆತ್ಮನನ್ನು ಮುಚ್ಚಬೇಕಾದರೆ ಆತ್ಮನಿಗಿಂತಲೂ ಅಜ್ಞಾನವುದೊಡ್ಡದಾಗಿರಬೇಕಾಯಿತು. ದೊಡ್ಡದಾಗಿದೆಯೆಂದು ಹೇಳುವದು ಶ್ರುತಿಗೆ ವಿರೋಧ ಸ್ವಗತಾದಿ ಭೇದರಹಿತನಾದ ಆತ್ಮನೊಬ್ಬನೇ ದೊಡ್ಡವನು. ಅದರಿಂದ ಬೊಮ್ಮ (ಬ್ರಹ್ಮ) ನೆಂಬ ನಾಮವು ಬಂದಿರುತ್ತದೆ. ಪರಿಚ್ಛಿನ್ನ ಏಕದೇಶಿಯಾದ ಅಜ್ಞಾ

ನವು ಆತ್ಮನನ್ನು ಮುಚ್ಚುವದೆಂಬುದು ಸುಳ್ಳಾಗಿರುತ್ತದೆ. **'ಪರಿಪೂರ್ಣಾತ್ಮನಿಗೆ ಕರೆಮರೆಯೇನೆಂಬ ತಿಳಿವೆ ಸಮ್ಯಜ್ಞಾನ'** ಪರಿಪೂರ್ಣಾತ್ಮನಿಗೆ (ಕರೆ) ಅಜ್ಞಾನವಾಗಲಿ, ಅದರ (ಮರೆ) ಆವರಣವಾಗಲಿ, (ಏನ) ಎಲ್ಲಿ ಅದೆ, ಏನೂ ಇಲ್ಲ. ಹೀಗೆಂಬ ಅರುವೇ ಸಮ್ಯಜ್ಞಾನವೆಂದು ಗ್ರಂಥಕರ್ತರೇ ಪರಮಾನುಭವಬೋಧೆಯಲ್ಲಿ ಹೇಳಿದ್ದಾರೆ. ಆದ್ದರಿಂದ ಆತ್ಮನಿಗೆ ಆವರಣೇ ಇಲ್ಲದಮೇಲೆ ಆವರಣ ನಿವೃತ್ತಿಗೆ ಕರ್ಮಬೇಕು ಎಂದು ನೀನು ಹೇಳುವ ಮಾತು ಹೇಗೆ ಸಂಭವಿಸುವದು? ಹೇಳು. ಕೆಲವರು ಆವರಣವುಂಟೆಂದು ಹೇಳಿದ್ದಾರೆ. ಅಂದರೆ, ಶಿಷ್ಯನ ಬುದ್ಧಿ ಸಮಾಧಾನಕ್ಕಾಗಿ ಹೇಳಿರಬಹುದು. ಅಥವಾ ಆತ್ಮನನ್ನು ಅರಿಯಲಿಕ್ಕೆ ಹೋದ ಬುದ್ಧಿಗೆ ಆವರಣವನ್ನು ಹೇಳಬಹುದು. ವಿದ್ವಜ್ಜನಾನುಭವದಿಂದ ನೋಡಿದರೆ, ಅಜ್ಞಾನದಾವರಣವು ಇಲ್ಲೆಂದು ತಿಳಿ.

**ಅಥವಾ,** ನೀನು ಹೇಳಿದಂತೆ ಆತ್ಮನಿಗೆ ಅಜ್ಞಾನದ ಆವರಣವು ಉಂಟೆಂದು ಭಾವಿಸೋಣ. ಹಾಗಾದರೆ, ಆತ್ಮನು ಯಾವಾಗಲೂ ಅಜ್ಞಾನದ ಸಂಗಸ್ವಭಾವನುಳ್ಳವನಾಗಿರುವನೋ? ಅಥವಾ ಸಂಗರಹಿತ ಸ್ವಭಾವವುಳ್ಳವನಾಗಿರುವನೋ? ಅವೆರಡರಲ್ಲಿ ಯಾವದು ಸತ್ಯವೋ ಅದನ್ನು ಚನ್ನಾಗಿ ವಿಚಾರಮಾಡಿ ಹೇಳು.

**ಬಳಿಕ,** ಆತ್ಮನು ಅಜ್ಞಾನದೊಡನೆ ಯಾವಾಗಲೂ ಕೂಡಿರುವ ಸಂಗಸ್ವಭಾವವುಳ್ಳವನೆಂದು ನೀನು ಹೇಳಿದರೆ, ಕರ್ಮದಿಂದ ಕೆಡದೆಂದು ಉತ್ತರವನ್ನು ಹೇಳುತ್ತಾರೆ.

**ತನಗೆ ಮಾಯಾಸಂಗವನುದಿನಂ ನೈಜವೆಂ।**
**ದೆನೆ ಕರ್ಮದಿಂದಲಿದು ಕೆಡದು ತನ್ನರೂ।**
**ಪೆನಿಸಿ ನೆಲಸಿರ್ದ ಕಥದಿಂದ** ॥೧೨॥

**ಟೀಕು:–** ತನಗೆ= ಆತ್ಮನಿಗೆ, ಮಾಯಾಸಂಗವು= ಅಜ್ಞಾನದ ಸಂಬಂಧವು, ಅನುದಿನಂ= ಯಾವಾಗಲೂ, ನೈಜವೆಂದೆನೆ= ನಿಜವೆಂದು ಹೇಳಿದರೆ, ಇದು= ಈ ಸಂಬಂಧವು, ಕರ್ಮದಿಂದ ಕೆಡದು= ಕರ್ಮದಿಂದ ಕೆಡಲಾರದು, (ಯಾಕಂದರೆ) ತನ್ನರೂಪೆನಿಸಿ= ಆತ್ಮನರೂಪಾಗಿ, ನೆಲಸಿರ್ದಕಥದಿಂದೆ= ಇರುತ್ತಿರುವ ಕಾರಣದಿಂದೆ,

**ತಾತ್ಪರ್ಯ:–** ಹೇ ಶಿಷ್ಯನೇ ಕೇಳು. ಆತ್ಮನಿಗೂ ಅಜ್ಞಾನಕ್ಕೂ ಸಂಗ ಅಂದರೆ ಸಂಬಂಧವು, ಯಾವಾಗಲೂ ಇರುವದು ಸ್ವಭಾವಸಿದ್ಧವಾಗಿರುವದೆಂದು ನೀನು ಒಪ್ಪಿದರೆ; ಆ ಸಂಬಂಧವು ಯಾವಾಗಲೂ ಆತ್ಮನ ಸ್ವರೂಪನಾಗಿರುವದರಿಂದ ಕರ್ಮದಿಂದ ಕೆಡಲಾರದು. ಯಾಕಂದರೆ; ಸ್ವಭಾವವು ಅಂದರೆ ಸ್ವರೂಪವಾಗಿದೆ.

ಹೇಗಂದರೆ; ಅಗ್ನಿಯ ಸ್ವಭಾವವು ಉಷ್ಣಪ್ರಕಾಶವಾಗಿದೆ. ಆ ಅಗ್ನಿಯು ಕೆಡದೆ ಆ ಉಷ್ಣಪ್ರಕಾಶ ರೂಪ ಸ್ವಭಾವವು ಕೆಡಲಾರದು. ಇದರಂತೆ; ಆತ್ಮನು ಕೆಡದೆ ಆತ್ಮನ ಸಂಬಂಧರೂಪ ಸ್ವಭಾವವು ಕರ್ಮಗಳಿಂದ ಕೆಡಲಾರದು.

**ಶಂಕಾ:**- ಅಜ್ಞಾನ ಮತ್ತು ತತ್ಕಾರ್ಯರೂಪ ದೇಹಾದಿಗಳೊಡನೆ ತಾವು ಸಂಬಂಧವನ್ನು ಹೇಳುತ್ತೀರಿ. ಮತ್ತು ಆ ಸಂಬಂಧವು ಅಸಂಗೋಽಹಂ ಎಂಬ ಜ್ಞಾನದಿಂದ ನಿವೃತ್ತಿಯಾಗುತ್ತದೆಂದು ಹೇಳಿದಂತೆ, ನಾನು ಅಜ್ಞಾನದ ಸಂಗವು ಕರ್ಮದಿಂದ ನಿವೃತ್ತಿಯಾಗುತ್ತದೆಂದು ಹೇಳುತ್ತೇನೆ. ಆ ಸಂಗವು ಯಾಕೆ ಕೆಡುವದಿಲ್ಲ? ಕೆಡುತ್ತದೆ.

**ಸಮಾಧಾನ:**- ನಾವು ಹೇಳಿದ ಸಂಗವು **ಆಧ್ಯಾಸಿಕವಾಗಿದೆ.** ಸ್ವಭಾವ ವಲ್ಲ. ಆದರಿಂದ ಸ್ವಸ್ವರೂಪ ಜ್ಞಾನದಿಂದ ಕೆಡುತ್ತದೆ. ನೀನಂಗೀಕರಿಸಿದ ಸಂಗವು ಆತ್ಮನ **ಸ್ವಭಾವವಾಗಿದೆ.** ಆದ್ದರಿಂದ ಕರ್ಮದಿಂದ ಕೆಡಲಾರದು. ಹಾಗಾದರೆ, 'ನೀವು ಅಂಗೀಕರಿಸಿದಂತೆ ನಾನು ಆಧ್ಯಾಸಿಕ ಸಂಗವನ್ನು ಒಪ್ಪಿ ಕರ್ಮದಿಂದ ನಿವೃತ್ತಿಯನ್ನು ಹೇಳುತ್ತೇನೆ' ಎಂದು ಅನ್ನಬಹುದು. ಹೀಗಾದರೂ ಆ ಆಧ್ಯಾಸಿಕ ಸಂಗವು ಕರ್ಮದಿಂದ ಕೆಡಲಾರದು. ಯಾಕಂದರೆ, ಆಧ್ಯಾಸಿಕ ಸಂಗಕ್ಕೆ ಸ್ವರೂಪಜ್ಞಾನವೇ ವಿರೋಧಿಯಾಗಿದೆ. ಕರ್ಮವು ವಿರೋಧವಲ್ಲ. ಅಧ್ಯಾಸಿಕ ಸರ್ಪನಿವೃತ್ತಿಗೆ ಅಧಿಷ್ಠಾನ ಜ್ಞಾನವೇಬೇಕು. ದಂಡಾದಿ ತಾಡನ ಗಳಿಂದ ಸರ್ಪನಿವೃತ್ತಿಯಾಗದು. ಇದರಂತೆ ಆಧ್ಯಾಸಿಕ ಸಂಗವನ್ನೊಪ್ಪಿದರೂ, ಕರ್ಮದಿಂದ ಅದರ ನಿವೃತ್ತಿಯು ಸಂಭವಿಸಲಾರದು. ಮತ್ತು ಆತ್ಮನು ಅಜ್ಞಾನ ದೊಡನೆ ಕೂಡಿರುವ ಸ್ವಭಾವವುಳ್ಳವನೆಂದು ಹೇಳಿದರೆ, ಕರ್ಮದಿಂದ ಆ ಸಂಗವು ಎಂದಿಗೂ ಕೆಡಲಾರದು. ಅಂದಮೇಲೆ ಕರ್ಮದಿಂದೇನು ಪ್ರಯೋಜನ?

**ಬಳಿಕ,** ಆತ್ಮನು ಅಸಂಗನು. ಸಂಗರಹಿತ ಸ್ವಭಾವವುಳ್ಳವನಾಗಿರುವ ನೆಂದು ದ್ವಿತೀಯ ಪಕ್ಷವನ್ನೊಪ್ಪಿದರೆ, ಅಸಂಗಾತ್ಮನಲ್ಲಿ ಮಾಯಾ ಇಲ್ಲದ್ದರಿಂದ ಮತ್ತೆ ಕರ್ಮವೇತಕ್ಕೆ ಬೇಕು? ಹೇಳು. ಎಂದು ಉತ್ತರವನ್ನು ಕೊಡುತ್ತ ಲಿದ್ದಾರೆ.

**ಮತ್ತೆ ನಿಸ್ಸಂಗಿಯೊಳಿರುತ್ತಿರದು ಮಾಯೆ ಕೇ ।**
**ಉತ್ತಮನೆ ಕರ್ಮವೆಲ್ಲಿಯುಂ ಘಟಿಸದಾ ।**
**ಯಿತ್ತಾತ್ಮನಮಲನಹನಾಗಿ** ॥೧೩॥

**ಟೀಕಾ:**- ಮತ್ತೆ = ಬಳಿಕಾದರೂ, ನಿಸ್ಸಂಗಿಯೊಳು = ಅಸಂಗಾತ್ಮನಲ್ಲಿ, ಮಾಯೆ=ಅಜ್ಞಾನವು, ಇರುತ್ತಿರದು=ಇರಲಾರದು, ಉತ್ತಮನೆ ಕೇಳ್=ಸದ್ಭ

ದ್ಧಿಯೆ ! ಏಕಾಗ್ರದಿಂದಾಲಿಸು, ಆತ್ಮನು=ಸಚ್ಚಿದಾನಂದಾತ್ಮನು, ಅಮಲನು=ಶುದ್ಧನು, ಅಹನಾಗಿ=ಇರುವದರಿಂದ, ಕರ್ಮವು=ಕರ್ಮವು, ಎಲ್ಲಿಯೂ=ಯಾವ ವಿಧದಲ್ಲಿಯೂ, ಘಟಿಸದು=ಸಂಭವಿಸಲಾರದು.

**ತಾತ್ಪರ್ಯ**:-ಆತ್ಮನು ಯಾವಾಗಲೂ ಅಸಂಗಸ್ವಭಾವವುಳ್ಳವನೆಂದು ನೀನು ಅಂಗೀಕರಿಸಿದರೆ, ಅಸಂಗನಾದಾತ್ಮನಲ್ಲಿ ಮಾಯಾ ಅಂದರೆ, ಅಜ್ಞಾನದ ಸಂಗವು ಇಲ್ಲದ್ದಾಗಿದೆ. ಅದರಿಂದ ಕರ್ಮವು ಏತಕ್ಕೆ ಬೇಕು ? ಹೇಳು, ಆತ್ಮನು ಸಂಗ ಸ್ವಭಾವನೆಂದರೂ, ಅಸಂಗಸ್ವಭಾವನೆಂದರೂ, ಎರಡೂ ವಿಧದಲ್ಲಿಯೂ ಕರ್ಮವು ನಿರುಪಯೋಗವಾಗಿರುತ್ತದೆ. ಒಂದು ವೇಳೆ, ನೀನು ಆತ್ಮಶುದ್ಧಿಗಾಗಿ ಕರ್ಮವು ಬೇಕಾಗುತ್ತದೆಂದು ಹೇಳಬಹುದು. ಇದು ಸರಿಯಲ್ಲ. ಯಾಕಂದರೆ, ದೇಹ ಶುದ್ಧಿಗೆ ಕರ್ಮಬೇಕೋ ? ಆತ್ಮಶುದ್ಧಿಗೆ ಕರ್ಮಬೇಕೋ? ಹೇಳು. ದೇಹ ಶುದ್ಧಿಗೆ ಕರ್ಮಬೇಕೆಂದು ನೀನು ಹೇಳಿದರೆ, ಮಲಮಯವಾದ ದೇಹವು ಕರ್ಮ ದಿಂದೆಂದಿಗೂ ಶುದ್ಧವಾಗದು. ಆತ್ಮಶುದ್ಧಿಗಾಗಿಯೆಂದು ಹೇಳಿದರೆ, ಆತ್ಮನು ಸ್ವಭಾವತಃ ನಿರ್ಮಲನೇ ಇರುವನು. ಅವನಿಗೆ ಯಾವ ಮಲಸಂಬಂಧವೂ ಇಲ್ಲ. ಆಕಾಶದಂತೆ ಸದಾ ನಿರ್ಮಲನಾಗಿರುವನು. ಅದರಿಂದ ಆತ್ಮಶುದ್ಧಿ ಗಾಗಿಯೂ ಕರ್ಮಬೇಕಾಗಿಲ್ಲ. ದೇಹ ಮತ್ತು ಆತ್ಮಾ ಇವೆರಡರ ವಿಷಯದಲ್ಲಿಯೂ ಕರ್ಮವು ಉಪಯೋಗವಲ್ಲ. ಹಾಗಾದರೆ, ಕರ್ಮವು ಯಾವದಕ್ಕೂ ಉಪಯೋಗ ಬರುವದಿಲ್ಲವೇನು? ಎಂದು ಕೇಳಿದರೆ, ಉಪಯೋಗವುಂಟು. ಏನಂದರೆ, 'ಅಹವಾದಿ ಶುದ್ಧಿಯೈಸೆ' ಅಂತಃಕರಣ ಶುದ್ಧಿಗೆ ಮಾತ್ರ ಸಾಧನವಾಗಿದೆಯೆಂದು ಇದರ ಉಪಯೋಗವನ್ನು ನಾವು ನಿಮಗೆ ಪೂರ್ವದಲ್ಲಿಯೇ ಹೇಳಿದ್ದೇವೆ. ನೀನ ದನ್ನು ಮರೆತು ಕೇಳುತ್ತಿರುವಿ. ಅನ್ಯತ್ರ ಕರ್ಮಪ್ರಯೋಜನವಲ್ಲವೆಂದು ತಿಳಿ.

ಬಳಿಕ, ದೇಹವು ಮಲಿನ ಸ್ವಭಾವವಾಗಿರುವಂತೆ, ಆತ್ಮನು ನಿರ್ಮಲ ಸ್ವಭಾ ವವುಳ್ಳವನು ಆಗಿರುತ್ತಾನೆ. ಅದು ವಿಕಾರವನ್ನು ಹೊಂದದು. ಸ್ವಭಾವವನ್ನು ಕೆಡಿಸುವ ಸಾಮರ್ಥ್ಯವು ಕರ್ಮಕ್ಕಾಗದೆಂದು ದೃಷ್ಟಾಂತಪೂರ್ವಕ ಕಥನ ಮಾಡುತ್ತಾರೆ.

**ಆವಾವ ವಸ್ತುಗಳಿಗಾವಾವ ಧರ್ಮ ಸ್ವ।**
**ಭಾವವದು ಪರಿಣಮಿಸದು ರವಿ ಶಶಿಗಳಂ।**
**ತಾವುದೈವಿಧಿಗೆ ಫಲವಿನ್ನು ॥೧೪॥**

**ಟೀಕಾ**:- ಆವಾವ ವಸ್ತುಗಳಿಗೆ= ಯಾವಯಾವ ಪದಾರ್ಥಗಳಿಗೆ, ಆವಾವ ಧರ್ಮಸ್ವಭಾವವದು=ಯಾವಯಾವಧರ್ಮಸ್ವಭಾವವಿರುವದೋ, ಅದು=ಆ ಸ್ವಭಾ

ವವು, ಪರಿಣಮಿಸದು=ವಿಕಾರವಾಗದು, ಬೇರೆಯಾಗದು,ರವಿಶಶಿಗಳಂತೆ=ಸೂರ್ಯ ಚಂದ್ರರಂತೆ, ವಿಧಿಗೆ= ಕರ್ಮಕ್ಕೆ, ಫಲವಿನ್ನು=ಬಳಿಕ ಪ್ರಯೋಜನವು, ಆವುದೈ= ಯಾವದಿರುವದು,

**ತಾತ್ಪರ್ಯ**:- ಯಾವ ಯಾವ ವಸ್ತುಗಳಿಗೆ ಲೋಕದಲ್ಲಿ ಯಾವ ಯಾವ ಸ್ವಭಾವಗಳಿರುತ್ತವೆಯೋ, ಅವು ಬದಲಾಯಿಸದೆ ಹಾಗೇ ಇರುತ್ತವೆ. ಹೇಗಂದರೆ; ಸೂರ್ಯನು ಉಷ್ಣಪ್ರಕಾಶ ಧರ್ಮಸ್ವಭಾವವುಳ್ಳವನು ಆಗಿದ್ದಾನೆ. ಚಂದ್ರನು ಶೀತಳ ಪ್ರಕಾಶಮಾನ ಸ್ವಭಾವ ಧರ್ಮವುಳ್ಳವನು ಆಗಿದ್ದಾನೆ. ಹೀಗಿರುವ ಇವರ ಸ್ವಭಾವಧರ್ಮಗಳು ವಿಕಾರವಾಗದೆ ಇರುತ್ತವೆ. ಅಂದರೆ ಸೂರ್ಯನು ತಂಪಾಗಿ ಚಂದ್ರನು ಬಿಸಿಯಾಗಿ ಎಂದೂ ತೋರುವದಿಲ್ಲ. ತಮ್ಮ ಸ್ವಧರ್ಮದಿಂದಿರುವ ಸ್ವಭಾವವನ್ನು ಬಿಟ್ಟಿರುವದಿಲ್ಲ, ಇದರಂತೆ; ಆತ್ಮನು ಯಾವಾಗಲೂ ನಿರ್ಮಲಧರ್ಮ ಸ್ವಭಾವವುಳ್ಳವನು ಆಗಿರುತ್ತಾನೆ. ಆ ನಿರ್ಮಲತ್ವವು ಎಂದೂ ಕೆಡುವದಿಲ್ಲ. ಅಂದ ಮೇಲೆ; ಕರ್ಮದಿಂದೇನು ಪ್ರಯೋಜನವುಂಟು? ನೀನೇ ಹೇಳು. ಆತ್ಮನು ಮಲಿನನಾದರೆ ಕರ್ಮಬೇಕಾಗಿತ್ತು. ಮಲಿನತ್ವವೇ ಇಲ್ಲದಮೇಲೆ ಕರ್ಮವಾದರೂ ಯಾತಕ್ಕೆಬೇಕು? ಏನೂ ಪ್ರಯೋಜನವಿಲ್ಲ. ಎಂಬ ಭಾವವು.

**ಬಳಿಕ**, ಶಿಷ್ಯನು 'ಮುಕ್ತಿಯನ್ನಾಗಲಿ ಅಥವಾ ಅಜ್ಞಾನ ನಾಶವನ್ನಾಗಲಿ ಕರ್ಮವುಮಾಡದೆ ಹೋದರೂ ಹೋಗಲಿ. ಮುಕ್ತಿಗೆ ಸಾಧನವಾದರೂ ಆಗಿದೆಯೆಂದು ನೀವು ಒಪ್ಪಬೇಕಾಗುತ್ತದೆ. ಯಾಕಂದರೆ; ವೇದದಲ್ಲಿ ಮುಕ್ತಿಪ್ರಾಪ್ತಿಗಾಗಿಯೇ ಕರ್ಮಾದಿ ಸಾಧನಗಳನ್ನು ಹೇಳಿದ್ದಾರೆ" ಎಂದು ಶಂಕೆಯನ್ನುಮಾಡಲು; ಕರ್ಮದಿಂದ ಮುಕ್ತಿಯಾಗದೆಂದು ಶ್ರುತಿಪ್ರಮಾಣ ಮೂಲಕ ಹೇಳುತ್ತಿದ್ದಾರೆ.

**ಇಂತಾಗೆ ಕರ್ಮದಿಂದೆಂತಕ್ಕು ಮುಕ್ತಿಶ್ರುತಿ**
**ಸಂತಾನದಲ್ಲಿ. ನೋಡಲು ನಕರ್ಮಣಾ|**
**ಮುಂತಾದ ವಾಕ್ಯವಿಹವಾಗಿ ||೧೫||**

**ಟೀಕಾ**:- ಇಂತಾಗೆ = ಹೀಗಾದ್ದರಿಂದ, ಕರ್ಮದಿಂದ= ನಿತ್ಯಾದಿಕರ್ಮಗಳಿಂದ, ಮುಕ್ತಿ= ಮೋಕ್ಷವು, ಎಂತಕ್ಕು=ಹೇಗೆ ಆಗುವದು, ಶ್ರುತಿಸಂತಾನದಲ್ಲಿ= ಶ್ರುತಿಗಳವಾಕ್ಯ ಸಮೂಹದಲ್ಲಿ, ನೋಡಲು = ವಿಚಾರವನ್ನು ಮಾಡಲು, ನಕರ್ಮಣಾ= ಕರ್ಮದಿಂದ ಮುಕ್ತಿಯಾಗುವದಿಲ್ಲವೆಂಬ, ಮುಂತಾದ=ಮೊದಲಾದ, ವಾಕ್ಯವಿಹವಾಗಿ= ವಾಕ್ಯಗಳು ಇರುವದರಿಂದ,

**ತಾತ್ಪರ್ಯ**:- ಉಕ್ತರೀತಿಯಾಗಿ ಯಾವವಿಧದಿಂದಲೂ ಕರ್ಮವು ಪ್ರಯೋಜನವಾದದಲ್ಲವೆಂದು ಹೇಳಿದಮೇಲೆ; ಇದರಿಂದ ಮುಕ್ತಿಯಾದರೂ ಹೇಗೆ

ಆಗುವದು ? ಹೇಳು. ಎಲ್ಲಿ ಕರ್ಮವು ಮುಕ್ತಿಗೆ ಸಾಧನವೆಂದು ಹೇಳಿರುವದೋ, ಅಲ್ಲಿ ಜ್ಞಾನ ದ್ವಾರಾ ಮುಕ್ತಿಯಾಗುತ್ತದೆಂದು ಅರ್ಥವನ್ನು ಮಾಡಬೇಕು. ಅಂದರೆ, 'ಜ್ಞಾನದ್ವಾರಾ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಕರ್ಮದಿಂದಲೇ ಮುಕ್ತಿಯಾದಲ್ಲಿ ಮುಂದೆ ಜ್ಞಾನವನ್ನಾದರೂ ಏಕೆಹೇಳುತ್ತಿದ್ದರು? ಹೇಳಿದ್ದಾರೆ, ಆದರಿಂದ ಕರ್ಮದಿಂದ ಮುಕ್ತಿಯಿಲ್ಲವೆಂಬ ಭಾವವು. ಅಥವಾ ಮುಕ್ತಿ ಶಬ್ದಕ್ಕೆ ಮಲಿನತ್ವ ನಿವೃತ್ತಿಪೂರ್ವಕ ಸ್ವಚ್ಛತ್ವಪ್ರಾಪ್ತಿರೂಪ ಅರ್ಥವನ್ನು ಮಾಡ ಬೇಕು. ಯಾಕಂದರೆ,ಆಯಾಯ ಪ್ರಕರಣದಲ್ಲಿ ಮುಕ್ತಿಯಾಗುತ್ತದೆಂದು ಹೇಳಿದರೆ, ಸಾಧಕರ ಪ್ರವೃತ್ತಿಯಾಗುತ್ತದೆಂದು ಹಾಗೆ ಹೇಳಿರುತ್ತದೆ. ಇದರಂತೆ; ಉಪಾಸನೆ ಹೇಳುವಲ್ಲಿ, ಯೋಗದಲ್ಲಿ ಅಲ್ಲಲ್ಲಿ **ಮುಕ್ತಿಯೆಂಬ** ಶಬ್ದವು ಕಂಡುಬರುತ್ತದೆ. ಅಲ್ಲಿ ಮುಕ್ತಿಶಬ್ದಕ್ಕೆ ಚಾಂಚಲ್ಯ ನಿವೃತ್ತಿಪೂರ್ವಕ ಮನೋನಿಶ್ಚಲತೆಯೇ ಎಂದು ಅರ್ಥ ವನ್ನು ಮಾಡಬೇಕು. ಹೀಗೆ ಮಾಡದೆ, ಮುಕ್ತಿಯೇ ಆಗುತ್ತದೆಂದು ಅರ್ಥವನ್ನು ಮಾಡಿದರೆ; **'ನಕರ್ಮಣಾ'** ಕರ್ಮದಿಂದ ಮುಕ್ತಿಯಾಗುವದಿಲ್ಲೆಂಬ ಶ್ರುತಿಗೆ ವಿರೋಧವಾಗುತ್ತದೆ. ಶ್ರುತಿಯು ಕರ್ಮದಿಂದಾಗಲಿ, ಬಹಳ ಪ್ರಜಾ ಮಕ್ಕಳನ್ನು ಹಡೆಯುವದರಿಂದಾಗಲಿ, ಬಹಳಧನ ಸಂಪಾದನೆಯನ್ನು ಮಾಡುವದರಿಂದಾಗಲಿ, ಮುಕ್ತಿಯು ಆಗುವದಿಲ್ಲವೆಂದು ನಿಶ್ಚಯವಾಗಿ ಹೇಳುತ್ತದೆ. ಆದ್ದರಿಂದ ಕರ್ಮವು ಮೋಕ್ಷಕ್ಕೆ ಕಾರಣವಲ್ಲವೆಂದು ತಿಳಿ.

## ಕರ್ಮೋಪರತಿ ನಿರೂಪಣೆ ಸೂತ್ರ ೫ಕ್ಕೆ ತ್ರಿವಿದಿ ೫೦

**ಬಳಿಕ,** ಪೂರ್ವ ಸೂತ್ರದಲ್ಲಿ; ಕರ್ಮವು ಅಜ್ಞಪುರುಷನ ಮನಶ್ಶುದ್ಧಿಗೆ ಸಾಧನವಾಗಿದೆ ಹೊರತು, ಮುಕ್ತಿಗಾಗಲಿ, ಅಜ್ಞಾನನಿವೃತ್ತಿಗಾಗಲಿ, ಸಾಧನವಲ್ಲ. ಜೀವನ್ಮುಕ್ತಜ್ಞಾನಿಗೆ ಕರ್ಮದ ಕರ್ತವ್ಯವೂ ಇಲ್ಲ. ಎಂಬುದನ್ನು ವಿಸ್ತಾರವಾಗಿ ತಿಳಿಸಿದರು. ಈ ವಿಷಯವನ್ನು ಕೇಳಿದ ಶಿಷ್ಯನು, ಗುರುಗಳನ್ನು ಕುರಿತು, ಮುಂದೆ ಹೇಳುವ ಪ್ರಕಾರ ಪ್ರಶ್ನೆಯನ್ನು ಮಾಡುತ್ತಾನೆ. ಹೇಗಂದರೆ, 'ಹೇ ಗುರುವೇ! ಜೀವ ಬ್ರಹ್ಮೈಕ್ಯಜ್ಞಾನವೇ ಮುಕ್ತಿಗೆ ಸಾಧನವೆಂದೂ, ಆ ಜ್ಞಾನ ವನ್ನು ಪ್ರಾಪ್ತಿಮಾಡಿಕೊಂಡವನು; ಜೀವತ್ವವಳಿದು ಜೀವನ್ಮುಕ್ತನಾಗಿರುವನೆಂದೂ, ಅವನಿಗೆ ಯಾವ ಕರ್ಮದ ವಿಧಿಯೂ ಇಲ್ಲೆಂದೂ, ಹೇಳಿದಿರಿ. ಆದರೆ ಎಲ್ಲರಿಗೂ ಮುಕ್ತಿಗೆ ಸಾಧನವಾದ ಜ್ಞಾನವು ಒಂದೇ ವಿಧವಾಗಿರುವಂತೆ, ಜ್ಞಾನಸಿದ್ಧರಾದ ಜೀವನ್ಮುಕ್ತರಾದರು. ಎಲ್ಲರೂ ಒಂದೇವಿಧವಾದ ಸ್ಥಿತಿಗತಿಯುಳ್ಳವರಾಗಿರಬೇಕಾ ಗಿತ್ತು. ಹಾಗಿಲ್ಲದೆ ಒಬ್ಬರಕಿಂತ ಒಬ್ಬರು ವಿಲಕ್ಷಣ ಸ್ಥಿತಿಯಿಂದಿರುವದು ಕಂಡು ಬರುತ್ತದೆ. ಒಬ್ಬನು ಜನರಲ್ಲಿ ಸೇರಿ, ವ್ಯವಹಾರಪರನಾಗಿ ಕಾಣುತ್ತಾನೆ. ಮತ್ತೊಬ್ಬನು ಸರ್ವಸಂಗ ಪರಿತ್ಯಾಗ ಮಾಡಿ ಏಕಾಂತ ಗುಹೆಗಳಲ್ಲಿ ವಾಸಮಾಡು.

ತ್ತಾನೆ. ಒಬ್ಬನು ಬಾಲಕನಂತಿದ್ದರೆ, ಇನ್ನೊಬ್ಬನು ಉನ್ಮತ್ತನಂತಿರುವನು, ಒಬ್ಬನು ಭೋಗಿಯಾದರೆ ಇನ್ನೊಬ್ಬನು ತ್ಯಾಗಿಯೂ, ಯೋಗಿಯೂ ಆಗಿರುವದು ಕಂಡುಬರುತ್ತದೆ. ಹೀಗೆ ಜೀವನ್ಮುಕ್ತರು ಒಂದೇ ರೀತಿಯಿಂದಿರದೆ ಅನೇಕ ವಿಧ ವಾಗಿರುತ್ತಾರೆ. ಹೀಗಿರುವುದಕ್ಕೇನು ಕಾರಣವುಂಟು. ಅದನ್ನು ನನಗೆ ತಿಳಿಸ ಬೇಕು. ಎಂದು ಪ್ರಶ್ನೆಯನ್ನು ಮಾಡುತ್ತಿರಲು, ಅದಕ್ಕೆ ಗುರುಗಳು ಉತ್ತರ ವನ್ನು ಕೊಡುತ್ತಲಿದ್ದಾರೆ.

**ಸೂತ್ರ:. ಪಲವಂದದಿಂದಲೇಕಿಹರು ಜೀವನ್ಮುಕ್ತ ।**
**ರೊಲಿದಿದಂ ಪೇಳೆನಗೆ ಗುರುವರ್ಯನೇ ॥**

**ಟೀಕಾ:-** ಜೀವನ್ಮುಕ್ತರು=ಸ್ಥಿತಪ್ರಜ್ಞರು, ಪಲವಂದದಿಂದ=ಅನೇಕವಿಧ ವಾಗಿ, ಏಕಿಹರು=ಯಾಕೆ ಇರುವರು ? ಗುರುವರ್ಯನೇ=ಗುರೂತ್ತಮನೇ ?, ಒಲಿದು=ಪ್ರಸನ್ನಚಿತ್ತನಾಗಿ, ಇದಂ=ಈ ವಿಷಯವನ್ನು, ಎನಗೆ ಪೇಳು=ನನಗೆ ತಿಳಿಸರಿ.

**ತಾತ್ಪರ್ಯ:-** ಎಲ್ಲರಿಗೂ ಅಹಂಬ್ರಹ್ಮಾಸ್ಮಿಯೆಂಬ ಬ್ರಹ್ಮಾಪರೋಕ್ಷ ಜ್ಞಾನವು ಒಂದೇ ಆದಮೇಲೆ, ಎಲ್ಲ ಜೀವನ್ಮುಕ್ತರೂ ಒಂದೇ ಪ್ರಕಾರ ಇರಬೇಕು. ಹಾಗಿರದೆ, ಬೇರೆ ಬೇರೆ ಚರ್ಯೆಗಳಿಂದ ವರ್ತಿಸುತ್ತಿರುತ್ತಾರೆ. ಇದಕ್ಕೇನು ಕಾರಣವುಂಟು? ಅದನ್ನು ತಿಳಿಸಿ ಈ ನನ್ನ ಸಂಶಯವನ್ನು ದೂರಮಾಡಬೇಕು. ಎಂದು ಶಿಷ್ಯನು ತನ್ನ ಮನೋಗತ ಅಭಿಪ್ರಾಯವನ್ನು ತಿಳಿಸಿದ್ದಾನೆ.

**ಬಳಿಕ,** ಶಿಷ್ಯನು ಗುರುಗಳ ಸ್ತುತಿಯನ್ನು ಮಾಡಿ ಅವರ ಚಿತ್ತವನ್ನು ಪ್ರಸನ್ನೀಕರಿಸಿಕೊಂಡು ಪ್ರಶ್ನೆಯನ್ನು ಮಾಡುತ್ತಲಿದ್ದಾನೆ.

**ಗುರುಮಾತೆ ಗುರುಪಿತಂ ಗುರುಬಂಧು ಬಳಗವಾ ।**
**ಗುರುತತ್ವದಿಂದೆ ಪರವಿಲ್ಲವೆನಿಪ ಸ ।**
**ದ್ಗುರುವೆ ಬಿನ್ನಪವ ನವಧರಿಸು ॥೧॥**

**ಟೀಕಾ:-** ಗುರುಮಾತೆ=ಗುರುವೇ ತಾಯಿಯು, ಗುರುಪಿತಂ = ಗುರುವೇ ತಂದೆಯು, ಗುರುಬಂಧು ಬಳಗವು=ಗುರುವೇ ಬಂಧು ಬಳಗವಾಗಿಹನು, ಆ ಗುರು ತತ್ವದಿಂದೆ = ಆ ಗುರುಸ್ವರೂಪಕ್ಕಿಂತಲೂ, ಪರವಿಲ್ಲವೆನಿಪ = ಶ್ರೇಷ್ಠ ವಸ್ತು ಇನ್ನೊಂದಿಲ್ಲೆಂದು ಹೇಳಿಸಿಕೊಳ್ಳುವ, ಸದ್ಗುರುವೇ = ಹೇ ಗುರುವರ್ಯನೇ !, ಬಿನ್ನಪವನು=ನನ್ನ ಪ್ರಶ್ನೆಯನ್ನು, ಅವಧರಿಸು=ಕೇಳು.

**ತಾತ್ಪರ್ಯ:-** ಪ್ರತ್ಯಗಾತ್ಮನೇ ಪರಬ್ರಹ್ಮವೆಂಬ ಬ್ರಹ್ಮಾಪರೋಕ್ಷ ಜ್ಞಾನ ವನ್ನುಂಟು ಮಾಡುವದರಿಂದ, ಗುರು ತಾಯಿಯಾಗಿರುವನು. ಉತ್ಪನ್ನವಾದ ಜ್ಞಾನದಿಂದ ಜನನ ಮರಣಾದಿ ದುಃಖರೂಪ ಸಂಸಾರದಿಂದ ರಕ್ಷಿಸುತ್ತಾನೆ. ಅದ ರಿಂದ ಗುರು ತಂದೆಯಾಗಿರುವನು. ಆಗಾಗ್ಗೆ ಬರತಕ್ಕ ಸಂಶಯ ವಿಪರೀತಾದಿ ಭಾವನೆಗಳೆಂಬ ಸಂಕಟಗಳನ್ನು ನಿವಾರಿಸುವಲ್ಲಿ, ಗುರು ಬಂಧು ಬಳಗರೂಪನಾಗಿ ರುವನು. ಆದ್ದರಿಂದಲೇ "**ನಾಸ್ತಿತತ್ತ್ವಂ ಗುರೋಃ ಪರಂ**" ಗುರುವಿಗಿಂತಲೂ ಹೆಚ್ಚಿಗಿರುವ ತತ್ವವು ಮತ್ತೊಂದಿಲ್ಲವೆಂದು ಮಹಿಮ್ನಕಾರನು ಹೇಳಿರುವನು. ಇಂಥಾ ಗುರುವರ್ಯನೇ! ನನ್ನ ಪ್ರಶ್ನೆಯನ್ನು ಕೇಳಿ ನನಗೆ ಸರಿಯಾದ ಉತ್ತರ ವನ್ನು ದಯಪಾಲಿಸೆಂದು ಬೇಡುತ್ತಾನೆ.

**ಬಳಿಕ,** ನಿಜನಿಷ್ಠರಾದ ಜೀವನ್ಮುಕ್ತರು ಒಂದೇ ರೀತಿಯಾಗಿರದೆ, ಭಿನ್ನ ಭಿನ್ನ ವರ್ತನಗಳಿಂದ ಇರುತ್ತಾರೆ. ಎಲ್ಲರಿಗೂ ಜ್ಞಾನವು ಒಂದೇಆದಮೇಲೆ, ಅವರ ವರ್ತನವು **ಒಂದೇವಿಧವಾಗಿರಬೇಕು.** ಹೀಗಿಲ್ಲದೆ ಭಿನ್ನವಾಗಿರುವದಕ್ಕೇನು ಕಾರ ಣವುಂಟೋ, ಅದನ್ನು ನನಗೆ ತಿಳಿಸಬೇಕೆಂದು ಕೇಳುತ್ತಲಿದ್ದಾನೆ.

**ತನುವಿಡಿದ ನಿಜನಿಷ್ಠರೆನಿಸುತಿಪ ಮುಕ್ತರೊಂ|**
**ದನುವಿಂದಮಿರದೆ ಬಹುವರ್ತನೆಯೊಳಿಹುದ|**
**ನನಗೆ ಗುರುವರ್ಯ ಕರುಣಿಪುದು** ||೨||

**ಟೀಕಾ:-** ತನುವಿಡಿದ=ಶರೀರಧಾರಿಗಳಾಗಿರುವ, ನಿಜನಿಷ್ಠರ್= ತಮ್ಮ ನಿಜ ದಲ್ಲಿ ನಿಶ್ಚಯವಾದ ವೃತ್ತಿಸ್ಥಿತಿಯುಳ್ಳವರೆಂದು, ಎನಿಸುತಿಹ = ಹೇಳಿಸಿಕೊಳ್ಳುತ್ತಿ ರುವ,ಮುಕ್ತರ್=ಜೀವನ್ಮುಕ್ತರು,ಒಂದನುವಿಂದಂ=ಒಂದೇ ರೀತಿಯಿಂದ, ಇರದೆ= ಇರಲಾರದೆ, ಬಹುವರ್ತನೆಯೊಳಿಹುದನು=ಹಲವುಪ್ರಕಾರವಾಗಿರುವದನ್ನು, ಗುರು ವರ್ಯ=ಗುರುಶ್ರೇಷ್ಠನೇ!, ಎನಗೆ=ನನಗೆ, ಕರುಣಿಪುದು=ಕೃಪೆಯನ್ನು ಮಾಡು.

**ತಾತ್ಪರ್ಯ:-**ಅಹಂಬ್ರಹ್ಮಾಸ್ಮಿ ಜ್ಞಾನೋತ್ತರ ಕಾಲದಲ್ಲಿ ಪ್ರಾರಬ್ಧಕರ್ಮ ನಿಮಿತ್ತದಿಂದ, ಜೀವಿಸುತ್ತಾ ದೇಹವನ್ನು ಧರಿಸಿಕೊಂಡು ಇರುತ್ತಾರೆ. ಎಲ್ಲರಂತೆ ದೇಹಧರಿಸಿಕೊಂಡಿದ್ದರೂ ಅವರು ಎಲ್ಲರಂತೆ ದೇಹನಿಷ್ಠರಲ್ಲ ಕಿಂತು; ತಮ್ಮ ನಿಜ ವಾದ ಬ್ರಹ್ಮಾಭಿನ್ನ ಪ್ರತ್ಯಗಾತ್ಮಸ್ವರೂಪರೇ ನಾವೆಂದು ನಿಶ್ಚಯ ಜ್ಞಾನವುಳ್ಳವರಾ ಗಿರುತ್ತಾರೆ. ದೇಹನಿಷ್ಠರು ದೇಹವು ನಾನೆನ್ನುವಲ್ಲಿ ಹೇಗೆ ಸಂಶಯಾದಿಗಳಿಲ್ಲದಿರು ವರೋ, ಹಾಗೇ ತಮ್ಮ ನಿಜಸ್ವರೂಪದಲ್ಲಿ ಸಂಶಯಾದಿಗಳಿಲ್ಲದ್ದರಿಂದ **ನಿಜನಿಷ್ಠರೆ ನಿಸುವರು.** ಇವರು ಒಂದೇ ರೀತಿಯಾಗಿರದೆ, ಭಿನ್ನ ಭಿನ್ನವರ್ತನೆಗಳಿಂದ ಕೂಡಿರು ತ್ತಾರೆ. ಅಂದರೆ, **ಬಾಲಕ, ಉನ್ಮತ್ತ, ಮೂಢ, ತ್ಯಾಗಿ, ಭೋಗಿ, ಯೋಗಿ,**

ಮೊದಲಾದವರಂತೆ, ಬೇರೆಬೇರೆಯಾಗಿ ತೋರುತ್ತಿರುವರು. ಹೀಗೆ ಬೇರಾಗಿ ತೋರಲು ಕಾರಣವೇನುಂಟು ಅದನ್ನು ತಿಳಿಸಬೇಕು.

ಬಳಿಕ, ಗುರುಗಳು ಶಿಷ್ಯನ ಪ್ರಶ್ನಾಭಿಪ್ರಾಯವನ್ನು ತಿಳಿದು, ಹೇ ಶಿಷ್ಯನೇ ಈ ವಿಷಯವನ್ನು ನಿನಗೆ ಕೈಯೊಳಗಿನ ನೆಲ್ಲೀಕಾಯಿಯಂತೆ, ನಿಸ್ಸಂಶಯವಾಗುವ ಹಾಗೆ ಅನುಭವಕ್ಕೆ ಬರುವಂತೆ ಹೇಳುತ್ತೇನೆಂದು ಪ್ರತಿಜ್ಞೆ ಮಾಡುತ್ತಾರೆ.

ಎನಲು ಗುರುವರ್ಯನಾ ತನಯನಂ ಬೋಳೈಸಿ।
ನಿನಗೀ ವಿಚಾರವನು ಕರಾಮಲಕವೆಂ।
ದೆನಿಪಂತೆ ಪೇಳುವೆನು ಕೇಳು ॥೩॥

ಟೀಕಾ:- ಎನಲು=ಶಿಷ್ಯನು ಹೀಗೆ ನುಡಿಯಲು, ಗುರುವರ್ಯನು= ಶ್ರೇಷ್ಠ ಗುರುಗಳು, ಆ ತನಯನಂ= ಆ ಶಿಷ್ಯನನ್ನು, ಬೋಳೈಸಿ= ಮೈಮೇಲೆ ಕೈಎಳೆದು, ನಿನಗೆ= ನಿನಗೆ, ಈ ವಿಚಾರವನು=ಈ ವಿಷಯವನ್ನು, ಕರಾಮಲಕವು=ಕೈಯೊಳಗಿನನೆಲ್ಲೀಕಾಯಿಯು, ಎಂದೆನಿಪಂತೆ= ಎನ್ನುವಹಾಗೆ, ಪೇಳುವೆನು=ಹೇಳುವೆನು, ಕೇಳು= ಏಕಾಗ್ರದಿಂದ ಆಲಿಸು.

ತಾತ್ಪರ್ಯ:- ಹೇ ಶಿಷ್ಯನೇ! ನೀನು ಕೇಳಿದ ವಿಷಯವು ಬಹಳ ಮನೋಹರವಾಗಿರುತ್ತದೆ. ನಿನ್ನ ಮನಸ್ಸಿಗೆ ಒಡಂಬಡುವಹಾಗೆ ಮತ್ತು ಕೈಯೊಳಗಿನ ನೆಲ್ಲೀಕಾಯಿಯಂತೆ, ಅನುಭವ ಬರುವ ಹಾಗೆಯೂ ಇದನ್ನು ಹೇಳುತ್ತೇನೆ. ಏಕಾಗ್ರಚಿತ್ತದಿಂದ ಆಲಿಸು, ಎಂದು ಗುರುಗಳು ಶಿಷ್ಯನಿಗೆ ಅಭಯವನ್ನು ಕೊಡುವಂಥವರಾದರು.

ಬಳಿಕ, ಪ್ರಾರಬ್ಧಕರ್ಮ ಸಂಸ್ಕಾರವು, ತೀವ್ರ, ಮಧ್ಯ, ಮಂದ, ಸುಪ್ತಂಗಳೆಂಬ ಭೇದಗಳಿಂದ ವರ್ತನಾದಿಗಳು ಭೇದವಾಗಿರುತ್ತವೆಂದು ಉತ್ತರವನ್ನು ಹೇಳುತ್ತಾರೆ.

ಪ್ರಾರಬ್ಧಕರ್ಮ ಸಂಸ್ಕಾರವೆಂಬುದು ತೀವ್ರ।
ವಾರೈಯೆ ಮಧ್ಯಮಂದ ಸುಪ್ತಂಗಳೆಂ।
ದೋರಂತೆ ಫಲಿಸುತಿಹುದಿಂತು ॥೪॥

ಟೀಕಾ:- ಪ್ರಾರಬ್ಧಕರ್ಮ= ಪ್ರಾರಬ್ಧಕರ್ಮದ, ಸಂಸ್ಕಾರವೆಂಬುದು= ವಾಸನೆಯನ್ನುವಂಥಾದ್ದು, ತೀವ್ರವು = ತೀವ್ರವೆಂದೂ, ಆರೈಯೆ= ವಿಚಾರಿಸಲು, ಮಧ್ಯ= ಮಧ್ಯವೆಂದು, ಮಂದ= ಮಂದವೆಂದು, ಸುಪ್ತಂಗಳೆಂದು= ಸುಪ್ತಗಳೆನಿಸಿ, ಓರಂತೆ= ಚೆನ್ನಾಗಿ, ಇಂತು= ಈ ಪ್ರಕಾರ, ಫಲಿಸುತಿಹುದು= ಫಲವನ್ನು ಕೊಡುತ್ತಿರುವದು.

**ತಾತ್ಪರ್ಯ**:- ಪ್ರಾರಬ್ಧಕರ್ಮವು ಅಂದರೆ ಪೂರ್ವಜನ್ಮದಲ್ಲಿ ಮಾಡಿದ್ದು ಈ ಜನ್ಮದಲ್ಲಿ ಭೋಗಕ್ಕೆ ಹೇತುವಾದದ್ದಕ್ಕೆ **ಪ್ರಾರಬ್ಧಕರ್ಮವೆಂಬ** ನಾಮವು ಬಂದಿರುತ್ತದೆ. ಆ ಕರ್ಮದ ವೇಗರೂಪ ಸಂಸ್ಕಾರವು ಒಂದೇಯಾದರೂ, ಅದನ್ನು ವೃತ್ತಿವ್ಯವಹಾರ ಭೇದದಿಂದ ತೀವ್ರಾದಿನಾಲ್ಕುಭೇದವಾಗಿರುತ್ತದೆಂದು ಹೇಳಿದ್ದಾರೆ. ವೃತ್ತಿವ್ಯವಹಾರವಾದರೂ ಲೌಕಿಕ, ವೈದಿಕ, ವೃತಿಸ್ಥಿತಿ ವೃತ್ತಿಲಯ ಹೀಗೆ ನಾಲ್ಕು ಪ್ರಕಾರವಿರುತ್ತದೆ. ಯಾವಾತನ ವೃತ್ತಿಯು ಲೌಕಿಕ ವ್ಯವಹಾರದಲ್ಲಿ ತೀವ್ರವಾಗಿ ಹೋಗುವದರಿಂದ **ತೀವ್ರಪ್ರಾರಬ್ಧವೆಂದೂ** ಯಾವವೃತ್ತಿಯು ವೈದಿಕಶಾಸ್ತ್ರ ವ್ಯವಹಾರದಲ್ಲಿ ಇರುವವರಿಂದ ಅದಕ್ಕೆ **ಮಧ್ಯಪ್ರಾರಬ್ಧವೆಂದರು.** ಇದು ಮಧ್ಯ ವೆಂಬ ನಾಮವು ಏಕೆ ಬಂತು? ಅಂದರೆ, ಲೌಕಿಕನಂತೆ ತೀವ್ರವೂ ಅಲ್ಲ. ವೃತ್ತಿ ಸ್ವರೂಪದಲ್ಲಿದ್ದವನಂತೆ ಮಂದವೂ ಅಲ್ಲ. ತೀವ್ರ, ಮಂದ, ಇವೆರಡರ ಮಧ್ಯ ವರ್ತಿಯಾದ್ದರಿಂದ ಇದಕ್ಕೆ**ಮಧ್ಯಪ್ರಾರಬ್ಧವೆಂಬ** ಹೆಸರು ಬಂದಿತು. ಯಾವ ವೃತ್ತಿಯು ಬಹಿರ್ಮುಖವಾಗಿ ವ್ಯವಹಾರಕಡೆಗೆ. ಹೋಗದೆ, ಅಂತರ್ಮುಖವಾಗಿ ಸ್ವಸ್ವರೂಪದಲ್ಲಿಯೇ ಸ್ಥಿತಿಯುಳ್ಳದ್ದರಿಂದ, **ಮಂದಪ್ರಾರಬ್ಧವೆಂಬ** ನಾಮವು ಬಂದಿತು. ಯಾವ ವೃತ್ತಿಯು ಸ್ವಸ್ವರೂಪದಲ್ಲಿಯೇ ಮುಳಿಗಿ ಲಯವಾಗಲು, ಅದಕ್ಕೆ **ಸುಪ್ತಪ್ರಾರಬ್ಧವೆಂದು** ಕರೆದರು. ಯಾಕಂದರೆ, ಸುಪ್ತಿಯಲ್ಲಿ ವೃತ್ತಿಲಯ ವಾದಂತೆ ಸ್ವರೂಪದಲ್ಲಿ ಲಯುವನ್ನು ಹೊಂದುತ್ತದೆ. ಆದ್ದರಿಂದ ಇದಕ್ಕೆ ಸುಪ್ತ ವೆಂದು ಕರೆಯುತ್ತಾರೆ. ಈರೀತಿ ಪ್ರಾರಬ್ಧಕರ್ಮಸಂಸ್ಕಾರವು ಭೇದವಾದ್ದರಿಂದ ಜ್ಞಾನಿಗಳ ವರ್ತನಗಳೂ ವಿಲಕ್ಷಣಗಳಾಗಿ ಭಿನ್ನ ಭಿನ್ನವಾಗಿ ತೋರುತ್ತಿರುತ್ತವೆ.

ಬಳಿಕ, ಯಾವ ಜೀವನ್ಮುಕ್ತ ಜ್ಞಾನಿಯು (ಜೀವಿಸುತ್ತ) ಅಂದರೆ, ಸ್ನಾನ, ಪಾನ, ಭೋಜನಾದಿ ಲೌಕಿಕ ವ್ಯವಹಾರಗಳನ್ನು ಮಾಡಿದರೂ, ಪಶುವಿನಂತೆ ತನ್ನ ನಿಜವಾದ ಆತ್ಮನಲ್ಲಿಯೇ ಲಕ್ಷ್ಯವನ್ನು ಇಟ್ಟಿರುತ್ತಾನೆ. ಇದು ತೀವ್ರ ಪ್ರಾರಬ್ಧವೆನಿ ಸುತ್ತದೆಂದು ಹೇಳುತ್ತಾರೆ.

**ಅವರೊಳಗೆ ದೇಹಮುಳ್ಳವನಾಗಿ ಜೀವಿಸು।**
**ತ್ತವೆ ಪಶುವಿನಂತೆ·ತನ್ನೊಳಾ ಪ್ರೀತಿ ಸಂ।**
**ಭವಿಸಿರಲು ತೀವ್ರ ವೆನಿಸುವದು ॥೫॥**

**ಟೀಕಾ**:-ಅವರೊಳಗೆ=ಮುಕ್ತರಲ್ಲಿ. ದೇಹಮುಳ್ಳವನಾಗಿ=ಶರೀರದಿಂದ ಸಹಿ ತನಾಗಿ, ಜೀವಿಸುತ್ತ=ವ್ಯವಹರಿಸುತ್ತ, ತವೆ=ಚನ್ನಾಗಿ, ಪಶುವಿನಂತೆ=ಕರುವಿದ್ದ ಆಕಳದಂತೆ, ತನ್ನೊಳು=ನಿಜದಲ್ಲಿ, ಆ ಪ್ರೀತಿ=ಅತ್ಯಧಿಕ ಪ್ರೀತಿಯು, ಸಂಭವಿಸಿ ರಲು=ಒದಗಿರಲು, ತೀವ್ರವೆನಿಸುವದು=ತೀವ್ರ ಪ್ರಾರಬ್ಧ ಸಂಸ್ಕಾರವೆನಿಸುವದು-

**ತಾತ್ಪರ್ಯ:-** ಯಾವ ಜೀವನ್ಮುಕ್ತನು ಪ್ರಾರಬ್ಧ ಕರ್ಮ ನಿಮಿತ್ತದಿಂದ ದೇಹಧಾರಿಯಂತೆ ಕಂಡುಬರುತ್ತಾನೆ. ಸ್ನಾನ, ಪಾನ, ಭೋಜನ, ಕೃಷಿ, ವಾಣಿಜ್ಯಾದಿ ವ್ಯವಹಾರಗಳನ್ನು ಮಾಡುತ್ತಿರುತ್ತಾನೆ. ಆದರೂ ಬಾಡಿಗೆ ತಂದ ಕುದುರೆಯ ಮೇಲೆ ಕೂತುಕೊಂಡಂತೆ, ಅಥವಾ ಬಾಡಿಗೆ ಮನೆಯಲ್ಲಿದ್ದಂತೆ, ದೇಹಾಭಿಮಾನಗಳಿಂದ ರಹಿತನಾಗಿರುತ್ತಾನೆ. ಜೀವನ್ಮುಕ್ತರು ಎಲ್ಲಿಯವರೆಗೆ ದೇಹಸ್ಥಿತಿಯಿಂದ ಕೂಡಿರುವರೋ, ಅಲ್ಲಿಯವರೆಗೆ, ಅವರಿಗೆ ಒಂದು **ಸಮಾಧಿ,** ಮತ್ತೊಂದು **ಉತ್ಥಾನ,** ಹೀಗೆ ಎರಡು ಅವಸ್ಥೆಗಳು ಬರುತ್ತವೆ. ವೃತ್ತಿಯು ಸ್ವರೂಪಾಕಾರವಾಗಿರುವದೇ ಸಮಾಧಿಯು, ಅದನ್ನು ಬಿಟ್ಟು ಹೊರಗೆ ವ್ಯವಹಾರಕ್ಕೆ ಬಹಿರ್ಮುಖವಾಗುವದೇ ಉತ್ಥಾನ, ಹೀಗೆ ಎರಡವಸ್ಥೆಗಳುಂಟು. ಸಮಾಧಿಯು **ಸವಿಕಲ್ಪ,** ನಿರ್ವಿಕಲ್ಪವೆಂದು ಎರಡು ವಿಧವಾಗಿದೆ. ಉತ್ಥಾನ ಅವಸ್ಥೆಯಲ್ಲಿ **ಲೌಕಿಕ, ವೈದಿಕ** ಎಂಬ ಎರಡು ವಿಧ ವ್ಯವಹಾರಗಳು ತೋರುತ್ತವೆ. ಲೌಕಿಕ ವ್ಯವಹಾರದಲ್ಲಿದ್ದವನಿಗೆ **ತೀವ್ರ**ನೆಂದೂ, ವೈದಿಕ ಶಾಸ್ತ್ರ ವ್ಯವಹಾರದಲ್ಲಿದ್ದವನಿಗೆ **ಮಧ್ಯ**ನೆಂದೂ, ಸವಿಕಲ್ಪ ಸಮಾಧಿಯಲ್ಲಿದ್ದವನಿಗೆ **ಮಂದ**ನೆಂದೂ, ನಿರ್ವಿಕಲ್ಪ ಸಮಾಧಿಯಲ್ಲಿದ್ದವನಿಗೆ **ಸುಪ್ತ**ನೆಂದೂ ಪ್ರಾರಬ್ಧ ಕಲ್ಪನಾ ವ್ಯವಹಾರವು ಹೇಳಲ್ಪಟ್ಟಿರುತ್ತದೆ. ಆದ್ದರಿಂದ ತೀವ್ರ ಪ್ರಾರಬ್ಧ ಸಂಸ್ಕಾರವುಳ್ಳವನು ಬರ್ಹಿಮುಖವೃತ್ತಿಯುಳ್ಳವನಾಗಿ(**ಜೀವಿಸುತ್ತ**) ಅಂದರೆ ಸ್ನಾನಪಾನಾದಿ ವ್ಯವಹಾರಗಳನ್ನು ಮಾಡುತ್ತಿರುತ್ತಾನೆ. ಹೀಗೆ ವ್ಯವಹಾರಪರನಾದರೂ, ಅವನ ಪ್ರೀತಿಯು ಮಾತ್ರ ವ್ಯವಹಾರದಲ್ಲಿರದೆ, ತನ್ನ ನಿಜಾತ್ಮಸ್ವರೂಪದಲ್ಲಿಯೇ ಇರುತ್ತದೆ. ಹೇಗಂದರೆ, (**ಪಶುವಿನಂತೆ**) ಕರುವಿದ್ದ ಆಕಳು ಅಡವಿಗೆ ಮೇಯಲಿಕ್ಕೆ ಹೋಗುತ್ತದೆ. ಅಡವಿಗೆ ಹೋಗುವದು ತನ್ನಿಚ್ಛೆಯಿಂದಲ್ಲ. ಕಿಂತು; ಕಾಯುವವನ ಬಲಾತ್ಕಾರದಿಂದ ಹೋಗುತ್ತದೆ. ಹುಲ್ಲನ್ನು ಮೇಯುತ್ತಾ ತಿರಗುತ್ತಾ ಇರುತ್ತದೆ. ಆದರೂ ಅದರ ಪ್ರಿತಿಯು ಮೇಯುವದರಲ್ಲಿಲ್ಲ. ಕಿಂತು; ಮನೆಯಲ್ಲಿದ್ದ ಕರದಲ್ಲಿಯೇ ಇರುತ್ತದೆ. ಆ ಕರವನ್ನು ನೆನಿಸುತ್ತಾ ಒದರಿ ಕರೆಯುತ್ತಾ ಇರುತ್ತದೆ. ಆಕಳು ಪ್ರೀತಿಯನ್ನು ಕರದಲ್ಲಿಟ್ಟದ್ದರಿಂದ ಅದರ ಲಕ್ಷ್ಯವು ಪುನಃ ಪುನಃ ಕರದ ಕಡೆಗೆ ಹೋಗುವದು. ಮೇಯುವದರಲ್ಲಿಲ್ಲ. ಇದರಂತೆ; ಜ್ಞಾನಿಯ ವೃತ್ತಿಯು ತೀವ್ರ ಪ್ರಾರಬ್ಧ ಪುರುಷನ ಬಲಾತ್ಕಾರದಿಂದ, ಹೊರಗೆ ಸ್ನಾನಾದಿ ವ್ಯವಹಾರಪರನಾದರೂ, ತನ್ನ ನಿಜವಾದ ಪ್ರತ್ಯಗಾತ್ಮಸ್ವರೂಪದಲ್ಲಿಯೇ ಪ್ರೀತಿಯನ್ನಿಟ್ಟು ಸ್ಮರಿಸುತ್ತಿರುತ್ತಾನೆ. ಲೋಭಿಯು ಮೇಲಿಂದ ಮೇಲೆ ಹುಗಿದಿಟ್ಟ ಧನದ ಕಡೆಗೆ ಲಕ್ಷ್ಯ ಮಾಡಿದಂತೆ; ಜ್ಞಾನಿಯು ವ್ಯವಹಾರ ಮಾಡಿದರೂ ನಿಜದಲ್ಲಿಯೇ ಪ್ರೀತಿ ಲಕ್ಷ್ಯಗಳನ್ನು ಇಟ್ಟಿರುತ್ತಾನೆ. ಆದ್ದರಿಂದ ಆತ್ಮರತಿಯೆನಿಸುವನು. ಪ್ರಾರಬ್ಧಕರ್ಮದ ಬಲದಿಂದ ವೃತ್ತಿತೀವ್ರವಾಗಿ ವ್ಯವಹಾರಗಳಕಡೆ ಹೋಗುವದರಿಂದ, ಇವನು ತೀವ್ರ ಪ್ರಾರಬ್ಧವುಳ್ಳವನೆನಿಸುವನು.

**ಬಳಿಕ, ಯಾವ ಜೀವನ್ಮುಕ್ತನು ಭೋಗವ್ಯವಹಾರದಲ್ಲಿದ್ದರೂ, ಅದ** ರಲ್ಲಿಯೇ ಅವಕಾಶಮಾಡಿಕೊಂಡು, ಮುಮುಕ್ಷು ಜನರನ್ನು ಕುರಿತು, **ಬಾಲಕ** ನಂತೆ ಶಾಸ್ತ್ರೋಪದೇಶಾದಿ ನುಡಿಯುವ ವ್ಯವಹಾರವನ್ನು ಮಾಡುತ್ತಿರುತ್ತಾನೆ. ಆದ್ದರಿಂದ ಈತನು **ಮಧ್ಯಪ್ರಾರಬ್ಧವುಳ್ಳವನೆಂದು** ಹೇಳಿಸಿಕೊಳ್ಳುತ್ತಾನೆ.

**ಭೋಗಕ್ಕೆ ಮುಖ್ಯತ್ವವಾಗಿ ತಾನವಕಾಶ ।**
**ನಾಗಿ ಬಾಲಕನವೋಲು ನುಡಿಯುತಂ ಬಿನದಿ ।**
**ಯಾಗಿರಲು ಮಧ್ಯವೆಲೆ ಪುತ್ರ** ॥೬॥

**ಟೀಕಾ:-** ಭೋಗಕ್ಕೆ=ಲೌಕಿಕ ವ್ಯವಹಾರಕ್ಕೆ, ಮುಖ್ಯತ್ವವಾಗಿ=ಪ್ರಾಧಾನ್ಯತ್ವವಿದ್ದರೂ, ತಾನು=ತಾನು, ಅವಕಾಶನಾಗಿ=ಕೆಲಹೊತ್ತು ಅವಕಾಶವುಳ್ಳವನಾಗಿ, ಬಾಲಕನವೋಲು=ಬಾಲಕನಂತೆ, ನುಡಿಯುತಂ=ಶಾಸ್ತ್ರೋಪದೇಶವನ್ನು ಮಾಡುತ್ತಾ, ಬಿನದಿಯಾಗಿರಲು = ಸಂತೋಷದಿಂದಿರಲಾಗಿ, ಎಲೆ ಪುತ್ರ = ಹೇ ಮಗನೇ !, ಮಧ್ಯವು=ಮಧ್ಯಪ್ರಾರಬ್ಧವೆನಿಸುವದು.

**ತಾತ್ಪರ್ಯ:-** ಹೇ ಶಿಷ್ಯನೇ ! ಕೇಳು. ಮಧ್ಯಪ್ರಾರಬ್ಧವುಳ್ಳವನಾದರೂ ಲೌಕಿಕ ಸ್ನಾನಪಾನಾದಿ ವ್ಯವಹಾರಗಳಿಗೆ ಮುಖ್ಯತ್ವಕೊಡುತ್ತಾನೆ. ಅಂದರೆ, ಕೃಷಿ ವಾಣಿಜ್ಯಾದಿ ವ್ಯವಹಾರಗಳು ಬಂದರೂ, ಅವುಗಳನ್ನು .ಬೇಗನೆ ಮುಗಿಸಿಕೊಂಡು, ಕೆಲವು ವೇಳೆ ಅವಕಾಶವನ್ನು ಪಡೆಯುತ್ತಾನೆ. ವ್ಯವಹಾರ ಮಾಡುವ ಪ್ರಸಂಗ ಬಂದಾಗ್ಗೆ ಮಾಡಿ; ಅದರಲ್ಲಿಯೂ ವಿಶ್ರಾಂತಿಯನ್ನು ಕೆಲವುಕಾಲ ಹೊಂದುವನು. ಆಗ್ಯೆ ಅನೇಕ ಮುಮುಕ್ಷು ಜನರನ್ನು ಕೂಡಿಕೊಂಡು ಬ್ರಹ್ಮೋಪದೇಶವನ್ನು ಮಾಡುತ್ತಾನೆ. ಮತ್ತು ವೃತ್ತಿಯಿಂದ ಪುನಃ ಪುನಃ ಆತ್ಮಾಕಾರವನ್ನು ಹೊಂದಿ, **ಬಾಲಕನಂತೆ** ಆತ್ಮಕ್ರೀಡಾನಂದವುಳ್ಳವನಾಗಿರುವನು. ಹೇಗಂದರೆ, ಬಾಲಕನು ತನ್ನ ಊಟಾದಿ ವ್ಯವಹಾರಗಳನ್ನು ಬೇಗನೆ ಮುಗಿಸಿ, ಅನೇಕ ಗೆಳೆಯರಿಂದ ಕೂಡಿಕೊಂಡು, ಆಟವನ್ನು ಆಡುತ್ತಾ ಹೇಗೆ ಕ್ರೀಡಾನಂದವುಳ್ಳವನಾಗಿರುವನೋ, ಹಾಗೇ ಈ ಜೀವನ್ಮುಕ್ತ ಜ್ಞಾನಿಯು ವ್ಯವಹಾರವಿದ್ದರೂ, ಅದರಲ್ಲಿಯೇ ಅವಕಾಶ ಮಾಡಿಕೊಂಡು, ಮುಮುಕ್ಷುಗಳಿಂದ ಕೂಡಿ ಬ್ರಹ್ಮಜಿಜ್ಞಾಸವನ್ನು ಮಾಡುತ್ತಾ, ಆತ್ಮನಲ್ಲಿಯೇ ರಮಮಾಣ ಮಾಡುವ ಚಿತ್ತವೃತ್ತಿಯುಳ್ಳವನು ಆಗಿರುತ್ತಾನೆ. ಆದ್ದರಿಂದ ಇವನು ಬಾಲಕನಂತೆ ಆತ್ಮಕ್ರೀಡನೆಂದೂ **ಮಧ್ಯಪ್ರಾರಬ್ಧ** ವುಳ್ಳವನೆಂದೂ ಹೇಳಿಸಿಕೊಳ್ಳುವನು.

**ಬಳಿಕ,** ಯಾವ ಜೀವನ್ಮುಕ್ತನು, ಲೌಕಿಕ ಮತ್ತು ಶಾಸ್ತ್ರ ಇವೆರಡು ವ್ಯವಹಾರಗಳನ್ನು ಬಿಟ್ಟು, **ಸುರತಸುಖದಂತೆ** ನಿಜದಲ್ಲಿ ವೃತ್ತಿಯ ಸ್ಥಿತಿಯುಳ್ಳವ**ನಾಗಿರಲು,** ಅವನು **ಮಂದಪ್ರಾರಬ್ಧನೆನಿಸುತ್ತಾನೆ.**

**ತೊಲಗಿ ಭೋಗವನು ಮತಿನೆಲಿಸಿ ನಿಜದಲ್ಲಿ ಸಂ।**
**ಚಲಿಸದನುಕೂಲ ಮಿಥುನದಂತಾ ಸುಖದೊ।**
**ಳೊಲಿದಿರಲು ಮಂದವದು ತಾನೆ ॥೭॥**

**ಟೀಕಾ:-** ಭೋಗವನು = ಲೌಕಿಕ ವೈದಿಕ ಶಾಸ್ತ್ರಕಥನರೂಪ ಭೋಗಗಳನ್ನು, ತೊಲಗಿ=ತ್ಯಾಗಮಾಡಿ, ನಿಜದಲ್ಲಿ=ಸ್ವರೂಪದಲ್ಲಿ, ಮತಿನೆಲಸಿ=ವೃತ್ತಿಯನ್ನಿಟ್ಟು, ಸಂಚಲಿಸದೆ=ಅಲ್ಲಿಂದ ಕದಲದೆ, ಅನುಕೂಲಮಿಥುನದಂತೆ=ಅನ್ಯೋನ್ಯಪ್ರೀತಿಯುಳ್ಳ ಸ್ತ್ರೀಪುರುಷರ ಸುರತಸುಖದಂತೆ, ಆ ಸುಖದೊಳು=ಸವಿಕಲ್ಪ ಸಮಾಧಿ ಸುಖದಲ್ಲಿ, ಒಲಿದಿರಲು=ಪ್ರೀತಿಯಿಂದಿರಲಾಗಿ, ಮಂದವದುತಾನೆ= ಇದು ಮಂದಪ್ರಾರಬ್ಧ ವೆನಿಸುವದು.

**ತಾತ್ಪರ್ಯ:-** ಯಾವ ಜೀವನ್ಮುಕ್ತನು ವಾಣಿಜ್ಯಾದಿ ಲೌಕಿಕ ವ್ಯವಹಾರವನ್ನು ಶಾಸ್ತ್ರೋಪದೇಶಾದಿ ವೈದಿಕ ವ್ಯವಹಾರವನ್ನೂ ತ್ಯಜಿಸಿ, ಕೇವಲ ಪರಬ್ರಹ್ಮಾಭಿನ್ನ ಪ್ರತ್ಯಗಾತ್ಮ ಸ್ವರೂಪದಲ್ಲಿಯೇ ವೃತ್ತಿಯನ್ನಿರಿಸಿ, ಸಂಶಯಾದಿಗಳಿಂದ ವೃತ್ತಿಯು ಚಲಿಸದೆ, **ಮಿಥುನ ಸುಖದಂತೆ,** ಸ್ವರೂಪಾನಂದದಲ್ಲಿ ತತ್ಪರನಾಗಿರಲು; ಅಂದರೆ ಪುನಃ ಪುನಃ ಸ್ವರೂಪಾಕಾರವೃತ್ತಿ ವ್ಯಾಪಾರಾತ್ಮಕ ಸವಿಕಲ್ಪ ಸಮಾಧಿಯಲ್ಲಿದ್ದವನು. ಇವನು **ಮಂದಪ್ರಾರಬ್ಧ**ವುಳ್ಳವನೆಂದು ಹೇಳಿಸಿಕೊಳ್ಳುವನು.

ವೃತ್ತಿಬಾಹ್ಯವ್ಯವಹಾರದಲ್ಲಿ ವಿಶೇಷ ಪ್ರವೃತ್ತಿಯಾದ್ದರಿಂದ ತೀವ್ರ; ಲೌಕಿಕ ಬಿಟ್ಟು, ಶಾಸ್ತ್ರವ್ಯವಹಾರದಲ್ಲಿದ್ದದರಿಂದ ಮಧ್ಯ; ಈ ಎರಡು ವ್ಯವಹಾರಗಳನ್ನು ಬಿಟ್ಟು ನಿಜದಲ್ಲಿಯೇ ಇದ್ದದರಿಂದ **ಮಂದವಾಗಿದೆ.** ಹೀಗೆ ವೃತ್ತಿವ್ಯವಹಾರ ಭೇದದಿಂದಲೇ ನಾಮಾದಿ ವ್ಯವಹಾರ ಬಂದಿರುತ್ತದೆಂಬ ಭಾವವು.

ಬಳಿಕ, ಸ್ವಸ್ವರೂಪಾಕಾರ ವೃತ್ತಿ ವ್ಯವಹಾರವು ಇಲ್ಲದೇ, ನಿಜದಲ್ಲಿಯೇ ವೃತ್ತಿ ಲೀನವಾಗಿರಲು, ನಿರ್ವಿಕಲ್ಪ ಸಮಾಧಿಯುಳ್ಳವನಾಗಿರುತ್ತಾನೆ. ಅದರಿಂದ **ಸುಪ್ತ**ಪ್ರಾರಬ್ಧನೆಂದು ಕರೆಯಿಸಿಕೊಳ್ಳುತ್ತಾನೆಂದು ಹೇಳುತ್ತಾರೆ.

**ಪರಿಭವಂ ಪುಗದೆ ಭಾಸುರ ನಿರ್ವಿಕಲ್ಪ ನಿಜ।**
**ತುರಿಯ ಪದದಲ್ಲಿ ಪರಮುಕ್ತನಂತೊಪ್ಪು।**
**ತಿರೆ ಸುಪ್ತ ವೇಗವೆನಿಸುವದು ॥೮॥**

**ಟೀಕಾ:-** ಪರಿಭವಂ=ಬಾಹ್ಯ ಪ್ರಪಂಚವು, ಪುಗದೆ=ಏನೊಂದು ತೋರದೆ, ಭಾಸುರ=ಸ್ವಯಂಪ್ರಕಾಶಮಾದ, ನಿರ್ವಿಕಲ್ಪ=ಸಂಕಲ್ಪವಿಕಲ್ಪವಿಲ್ಲದ, ನಿಜ=ಸತ್ಯ

ವಾದ, ತುರಿಯಪದದಲ್ಲಿ=ಪ್ರತ್ಯಗಾತ್ಮಸ್ವರೂಪದಲ್ಲಿ, ಪರಮುಕ್ತನಂತೆ=ವಿದೇಹ ಮುಕ್ತನಂತೆ, ಒಪ್ಪುತಿರೆ=ಶೋಭಾಯಮಾನನಾಗಿರಲು, ಸುಪ್ತವೇಗವೆನಿಸುವದು= ಸುಪ್ತಪ್ರಾರಬ್ಧ ಸಂಸ್ಕಾರವೆನಿಸುವದು.

**ತಾತ್ಪರ್ಯ:-** ಯಾವಾತನಿಗೆ ಬಾಹ್ಯ ಲೌಕಿಕ ವೈದಿಕ ವ್ಯವಹಾರಗಳೂ ತೋರುವದಿಲ್ಲ. ಹಾಗು ಅನಂತರದಲ್ಲಿ ಸ್ವರೂಪಾಕಾರ ವೃತ್ತಿ ವ್ಯವಹಾರವೂ ಇಲ್ಲ. ಕೇವಲ ಸ್ವರೂಪದಲ್ಲಿಯೇ ವೃತ್ತಿಯು ಸುಪ್ತನಂತೆ ಲೀನವಾಗುತ್ತಿರಲು, ಸುಪ್ತಪ್ರಾರಬ್ಧವೆಂದು ಕರೆಯುತ್ತಾರೆ. ನಿರ್ವಿಕಲ್ಪ ಸಮಾಧಿಯಲ್ಲಿ ವೃತ್ತಿಯು ಭಾವವಾಗಿದೆ. ನಿದ್ರೆಯಲ್ಲಿ ವೃತ್ತಿಯು ಕಾರಣವಾದ ಅವಿದ್ಯೆಯಲ್ಲಿ ಲೀನವಾಗಿರುತ್ತದೆ. ಪುನಃ ಜಾಗ್ರದವಸ್ಥೆಯಲ್ಲಿ ಆವಿರ್ಭಾವವಾಗಿರುತ್ತದೆ. ಇದರಂತೆ, ನಿರ್ವಿಕಲ್ಪ ಸಮಾಧಿ ಕಾಲಕ್ಕಾದರೂ ವೃತ್ತಿಯು ಸ್ವರೂಪದಲ್ಲಿ ಲೀನವಾಗಿ ನಿರ್ವ್ಯಾಪಾರ ಸ್ಥಿತಿಯಲ್ಲಿರುತ್ತದೆ. ಭೋಗದಾಯಕ ಕರ್ಮದಿಂದ ಪುನಃ ಆವಿರ್ಭಾವವಾಗುತ್ತದೆ. ಸುಪ್ತನಂತೆ ಇದ್ದದರಿಂದ **ಸುಪ್ತಪ್ರಾರಬ್ಧನೆಂದು** ಕರೆಯುತ್ತಾರೆ.

ಬಳಿಕ, ಒಬ್ಬನು ಒಂದೊಂದುವಿಧನಾಗಿ, ಲೌಕಿಕ, ವೈಧಿಕಶಾಸ್ತ್ರ, ಸವಿಕಲ್ಪ ನಿರ್ವಿಕಲ್ಪ ಸಮಾಧಿಗಳ ವ್ಯವಹಾರಭೇದದಿಂದ ಭಿನ್ನ ಭಿನ್ನರಾಗಿ ತೋರಿದರೂ, ಅವರೆಲ್ಲರಿಗೂ ಕಡೆಯಲ್ಲಿ ಮುಕ್ತಿಯು ಒಂದೇ ಪ್ರಕಾರವಾಗುತ್ತದೆಂದು ನಿರೂಪಿಸುತ್ತಾರೆ.

**ಇಂತು ಕರ್ಮದ ವೇಗವೆಂತಂತೆ ಫಲಿಸುತಿಹ ।**
**ವಂತಂತೆ ಚರಿಪ ಪಲವರ್ಗೆ ಮುಕ್ತಿಯೋ ।**
**ರಂತೆ ಬಳಿಕೊಂದೆ ತೆರನಕ್ಕು** ॥೯॥

**ಟೀಕಾ:-** ಇಂತು = ಈರೀತಿ, ಕರ್ಮದ = ಪ್ರಾರಬ್ಧಕರ್ಮದ, ವೇಗವು= ಸಂಸ್ಕಾರವು,ಎಂತಂತೆ = ಹೇಗೆ ಹೇಗೆ, ಫಲಿಸುತಿಹವು = ಉದಯಗಳಾಗುತ್ತಿರುವವೋ, ಅಂತಂತೆ=ಹಾಗೆಹಾಗೆ, ಚರಿಪ=ಆಚರಿಸುವ, ಪಲವರ್ಗೆ=ಅನೇಕರಿಗೆ, ಮುಕ್ತಿಯು ಮೋಕ್ಷವು, ಓರಂತೆ=ಚನ್ನಾಗಿ, ಬಳಿಕ=ಅನಂತರ, ಒಂದೆತೆರನಕ್ಕು= ಒಂದೇ ಪ್ರಕಾರವಾಗಿರುವದು,

**ತಾತ್ಪರ್ಯ:-** ಎಲ್ಲ ಜೀವನ್ಮುಕ್ತರಲ್ಲಿ ಸ್ವರೂಪಜ್ಞಾನನಿಶ್ಚಯವು ಒಂದೇವಿಧವಾಗಿದ್ದರೂ, ಅವರಪ್ರಾರಬ್ಧ ಸಂಸ್ಕಾರರೂಪ ವಾಸನೆಯು ಭೇದವಾಗಿರುತ್ತದೆ. ಅದರಿಂದ ಅವರು ಬೇರೆ ಬೇರೆ ವರ್ತನದವರಾಗಿದ್ದಾರೆ. ತೀವ್ರದವನು ಲೌಕಿಕವ್ಯವಹಾರದಲ್ಲಿ ಮುಳಿಗಿ ಪಶುಪ್ರಾಯಮೂಢನಾಗಿ ತೋರುತ್ತಾನೆ. ಮಧ್ಯದವನು ಬ್ರಹ್ಮಜಿಜ್ಞಾಸಮಾಡುತ್ತಾ ಬಾಲಕನಂತೆ ವಿನೋದಪರನಾಗಿ ಜಾಣನಾಗಿ ತೋರುತ್ತಾನೆ.

ಮಂದದವನು ಉಕ್ತ ಎರಡೂ ವ್ಯವಹಾರಗಳನ್ನು ಬಿಟ್ಟು ಯಾರೊಡನೆ ಸಂಗವಿಲ್ಲದೆ ಮದೋನ್ಮತ್ತನಂತೆ ತೋರುತ್ತಾನೆ. ಸುಪ್ತದವನು ನಿದ್ರಿತನಂತೆ ಸಹಜಾನಂದ ದಲ್ಲಿದ್ದುದರಿಂದ ಹುಚ್ಚನಂತೆ ತೋರುತ್ತಾನೆ. ಹೀಗೆ ಬೇರೆ ಸ್ಥಿತಿಗತಿಗಳಿಂದ ತೋರಿದರೂ, ಕಡೆಯಲ್ಲಿ ಎಲ್ಲರಿಗೂ ವಿದೇಹ ಮುಕ್ತಿಯು ಒಂದೇಪ್ರಕಾರವಾಗಿ ಉತ್ತದೆ. ಆದರಲ್ಲಿ ಭೇದವಿಲ್ಲ. ಜೀವನ್ಮುಕ್ತಿಸ್ಥಿತಿಯಲ್ಲಿ ಮಾತ್ರವೃತ್ತಿ ಭೇದಮೂಲಕ ಆನಂದವು ಹೆಚ್ಚುಕಡಿಮೆಯಾಗಿ ತೋರುತ್ತದೆಂಬ ಭಾವವು.

ಬಳಿಕ, ಜೀವನ್ಮುಕ್ತರ ಪ್ರಾರಬ್ಧಕರ್ಮವಾಸನಾ ವ್ಯವಹಾರ ಭೇದವಿಷಯ ದಲ್ಲಿ; ಶ್ರುತಿಪ್ರಮಾಣವನ್ನು ಉದಾಹರಿಸುತ್ತಾರೆ.

> **ಯತಿಗಳಾರಬ್ಧ ಸಂತತಿಯುವಾಸನೆ ಯಾವ।**
> **ಗತಿಯಿಂದಮಿರ್ಪುದಂತಿರುತ್ತಿಹರಾತ್ಮ।**
> **ರತಿ ವೇದ ವಾಕ್ಯವಿಹುದಾಗಿ ॥೧೦॥**

**ಟೀಕಾ:-** ಯತಿಗಳ್=ಜೀವನ್ಮುಕ್ತರು, ಆರಬ್ಧ=ಪ್ರಾರಬ್ಧಕರ್ಮದ, ಸಂತತಿಯ=ಸಮೂಹದ, ವಾಸನೆಯು=ಸಂಸ್ಕಾರವು, ಯಾವಗತಿಯಿಂದ=ಯಾವರೀತಿಯಿಂದ,ಇರ್ಪುದು=ಇರುವದು, ಅಂತೆ=ಅದರಹಾಗೆ, ಇರುತ್ತಿಹರ್=ಇರುತ್ತಿರುವರು, ಆತ್ಮರತಿ=ತನ್ನಲ್ಲಿಪ್ರೀತಿಯಾಗಿರುವನೆಂಬ, ವೇದವಾಕ್ಯವಿಹುದಾಗಿ = ಶ್ರುತಿಯಿರುವದರಿಂದ.

**ತಾತ್ಪರ್ಯ:-** ಜೀವನ್ಮುಕ್ತರಾದ ಯತಿಗಳು ಪ್ರಾರಬ್ಧಕರ್ಮವಾಸನಾ ಸಂಸಾರವು, ಯಾವಪ್ರಕಾರವಾಗಿರುವದೋ, ಹಾಗೇ ಅವರವರ್ತನಗಳು ಭಿನ್ನ ಭಿನ್ನಗಳಾಗಿರುತ್ತವೆ. ಈ ವಿಷಯಕ್ಕೆ ಛಾಂದೋಗ್ಯಶ್ರುತಿಯು ಆತ್ಮರತಿ, ಆತ್ಮಕ್ರೀಡ,ಆತ್ಮಮಿಥುನ, ಆತ್ಮಾನಂದ, ಭೇದವಾಗಿರುವರೆಂದು ಹೇಳುತ್ತದೆ. ಪಶುವಿನಂತೆ ತನ್ನಲ್ಲಿಯೇ ಪ್ರೀತಿಯಾಗಿರುವನೆಂದೂ, ಬಾಲಕನಂತೆ ಆತ್ಮನಲ್ಲಿಯೇ ರಮಿಸುವನೆಂದೂ, ಮಿಥುನದಂತೆ ಆತ್ಮನಲ್ಲಿಯೇ ಕೂಡಿರುವನೆಂದೂ, ಸುಪ್ತನಂತೆ ತನ್ನಲ್ಲಿಯೇ ಆನಂದವುಳ್ಳವನಾಗಿರುವನೆಂದೂ, ಶ್ರುತಿಯು ಹೇಳುತ್ತದೆ. ಈ ನಾಲ್ಕು ಪ್ರಾರಬ್ಧಗಳು ಇಚ್ಛಾ, ಪರೇಚ್ಛಾ, ಅನಿಚ್ಛಾ ಭೇದಗಳಿಂದ ಹನ್ನೆರಡು ಪ್ರಕಾರವಾಗಿವೆ. ಅವುಗಳಿಗೆ ಎರಡುಕಥೆಗಳನ್ನು ಉದಾಹರಿಸಿದೆ. ವೇದಾಂತಚಂದ್ರಿಕೆಯಲ್ಲಿ ಕಾಣಬಹುದು. ಈ ಶ್ರುತಿಯ ಅರ್ಥವು ಶ್ರುತ್ಯರ್ಥಪ್ರಕಾಶಿಕೆಯಲ್ಲಿ ಗ್ರಂಥದ ಅಂತ್ಯದಲ್ಲಿ ಕೊಟ್ಟಿರುತ್ತದೆ. ಅಲ್ಲಿ ನೋಡಬೇಕು. ಆದ್ದರಿಂದ ಇಲ್ಲಿ ಬರೆಯುವದನ್ನು ಬಿಟ್ಟದೆ. ಉಕ್ತನಾಲ್ಕುಪ್ರಕಾರದ ತೀವ್ರಾದಿ ಭೇದ ವ್ಯವಹಾರವನ್ನು ಜೀವನ್ಮುಕ್ತರಲ್ಲಿ ಬೇರೆ ಬೇರೆಯಾಗಿಯೂ ಕಾಣಬಹುದು. ಅಥವಾ ಒಬ್ಬನಲ್ಲಿಯಾದರೂ ನಾಲ್ಕು ವ್ಯವಹಾರಗಳು ಕಾಲಭೇದದಿಂದಲೂ ತೋರಬಹುದು.

ಬಳಿಕ, ನಾಲ್ಕು ತೀವ್ರಾದಿ ಪ್ರಾರಬ್ಧ ಭೇದ ಮೂಲಕ ನಾಲ್ಕುವಿಧ ಗುಣ ಗಳು ತೋರಲು; ಆ ಗುಣಗಳ ನಿಮಿತ್ತದಿಂದ ಮನೋವೃತ್ತಿಗಳು ನಾಲ್ಕಾಗಿ ಬೇರೆಬೇರೆಯಾಗಿ ತೋರುತ್ತವೆ. ಅದರಿಂದ ಮುಕ್ತರು ಭಿನ್ನರಾಗಿ ತೋರುವರು. ಎಂಬುದನ್ನು ವಿಶದವಾಗಿ ತಿಳಿಸುತ್ತಾರೆ.

ಮತ್ತಮಾಗುಣವೆ ನೈಮಿತ್ತಮಾಗಿಹ ಮನೋ ।
ವೃತ್ತಿನಾಲ್ಕೆನಿಸುತಿರೆ ಬೇರೆಬೇರೆ ನಿಜ ।
ಮುಕ್ತರಿಹರವರ ತಿಳಿಪೇಳ್ವೆ ॥೧೧॥

**ಟೀಕಾ**:- ಮತ್ತು=ಅನಂತರ, ಆ ಗುಣವೆ=ಸತ್ವಾದಿ ಗುಣಗಳೇ, ನೈಮಿತ್ತ ಮಾಗಿಹ=ನಿಮಿತ್ತಗಳಾದಂಥಾ, ಮನೋವೃತ್ತಿ=ಮನಸ್ಸಿನ ವೃತ್ತಿಗಳು, ನಾಲ್ಕು ವೆನಿಸುತಿರೆ=ನಾಲ್ಕುವಿಧಗಳೆಂದು ಹೇಳಿಸಿಕೊಳ್ಳುತ್ತಿರಲಿಕ್ಕೆ, ಬೇರೆ ಬೇರೆ=ಭಿನ್ನ ಭಿನ್ನರಾಗಿ, ನಿಜಮುಕ್ತರು=ಜೀವನ್ಮುಕ್ತರು, ಇಹರು=ಇರುವರು, ಅವರ=ಆ ವೃತ್ತಿಗಳನ್ನು, ಪೇಳ್ವೆ=ಹೇಳುತ್ತೇನೆ, ತಿಳಿ=ಅರಿ.

**ತಾತ್ಪರ್ಯ**:- ಆ ತೀವ್ರಾದಿ ಪ್ರಾರಬ್ಧಕರ್ಮ ವಾಸನಾ ಭೇದದಿಂದ ಗುಣ ಗಳು ಭೇದಗಳಾಗುತ್ತವೆ. ಗುಣಗಳ ಭೇದನಿಮಿತ್ತದಿಂದ ಮನೋವೃತ್ತಿಗಳು ಭೇದಗಳಾಗುತ್ತವೆ. ಮನೋವೃತ್ತಿಗಳ ಭೇದ ಮೂಲಕ ಜೀವನ್ಮುಕ್ತರು ಭೇದ ರಾಗಿ ತೋರುತ್ತಾರೆ. ಈ ವಿಷಯವನ್ನು ನಿನಗೆ ಚನ್ನಾಗಿ ತಿಳಿಯುವಂತೆ ಹೇಳು ತ್ತೇನೆ. ಏಕಾಗ್ರಚಿತ್ತದಿಂದ ಕೇಳು.

ಬಳಿಕ, ಗುಣಗಳ ನಿಮಿತ್ತದಿಂದ ತೋರುವ ಮನೋವೃತ್ತಿಗಳ ನಾಮ ಗಳನ್ನು ಕಥನ ಮಾಡುತ್ತಾರೆ.

ಒಂದು ವಿಕ್ಷಿಪ್ತವಿನ್ನೊಂದದು ಗತಾಗತವ ।
ದೊಂದು ಸಂಶ್ಲಿಷ್ಟವದಕೆ ಮೇಲೆನಿಸಿ ಮ ।
ತ್ತೊಂದೇ ಸ್ವಲೀನವೆನಿಸುವದು ॥೧೨॥

**ಟೀಕಾ**:- ಒಂದು ವಿಕ್ಷಿಪ್ತವು=ಒಂದು ವಿಶೇಷ ಚಂಚಲವಾದದ್ದು, ಇನ್ನೊಂ ದದು = ಮತ್ತೊಂದು ವೃತ್ತಿಯು, ಗತಾಗತವದು = ಹೊರಗೊಳಗೆ ಹೋಗು ವಂಥಾದ್ದು, ಒಂದು ಸಂಶ್ಲಿಷ್ಟವು=ಒಂದು ಸಂಬಂಧವಾದದ್ದು, ಮತ್ತೊಂದೇ=ಆ ಮೇಲೆ ಇನ್ನೊಂದು, ಸ್ವಲೀನವೆನಿಸುವದು=ಆತ್ಮನಲ್ಲಿಯೇ ಲೀನವಾದದ್ದು ಎನಿ ಸುವದು.

**ತಾತ್ಪರ್ಯ:**- ಸತ್ವಾದಿ ಗುಣಗಳ ನಿಮಿತ್ತದಿಂದ ವೃತ್ತಿಗಳು ಭೇದಗಳಾಗುತ್ತವೆ. ಹೇಗಂದರೆ, ತಮೋಗುಣ ನಿಮಿತ್ತದಿಂದ ವಿಕ್ಷಿಪ್ತವೃತ್ತಿಯು ತೋರುತ್ತದೆ. ವಿಕ್ಷಿಪ್ತ ಅಂದರೆ. (ವಿ) ವಿಶೇಷವಾಗಿ (ಕ್ಷಿಪ್ತ) ಬಹಿರ್ವಿಷಯದಲ್ಲಿಹೋಗಿ ಬೀಳುವದರಿಂದ ವಿಕ್ಷಿಪ್ತವೆನಿಸುವದು. ಇದು ತೀವ್ರ ಪ್ರಾರಬ್ಧದಲ್ಲಿರುತ್ತದೆ. ರಜೋಗುಣ ನಿಮಿತ್ತದಿಂದ **ಗತಾಗತವೃತ್ತಿಯು** ತೋರುತ್ತದೆ. ಮುಮುಕ್ಷುಗಳನ್ನು ಉಪದೇಶ ಮಾಡುವದಕ್ಕಾಗಿ ( ಗತ ) ಹೊರಗೆ ಬರುವದು. ಅನಂತರ ನಿಜಸ್ವರೂಪಾಕಾರವಾಗಿ ( ಆಗತ ) ತಿರಿಗಿ ನಿಜದಲ್ಲಿ ಹೋಗುವದು. ಇದು ಮಧ್ಯಪ್ರಾರಬ್ಧನಲ್ಲಿರುತ್ತದೆ. ಸತ್ವಗುಣ ನಿಮಿತ್ತದಿಂದ **ಸಂಶ್ಲಿಷ್ಟವೃತ್ತಿಯು** ತೋರುತ್ತದೆ. ಇದು ಚಲಿಸದೆ ಸ್ವರೂಪಾನುಭವದಲ್ಲಿರುವದರಿಂದ ಸಂಶ್ಲಿಷ್ಟವೆನಿಸುತ್ತದೆ. ಇದು ಮಂದಪ್ರಾರಬ್ಧನಲ್ಲಿರುತ್ತದೆ. ಗುಣಗಂಧದ ನಿಮಿತ್ತದಿಂದ ಸ್ವಲೀನವೃತ್ತಿಯು ತೋರುತ್ತದೆ. ಇದರಲ್ಲಿ ಏನೊಂದು ಭೇದವಿಲ್ಲದೆ ಸಚ್ಚಿದಾನಂದಾತ್ಮನಲ್ಲಿ ಲೀನವಾಗಿರುತ್ತದೆ. ಇದು ಸ್ವಲೀನವೆನಿಸುವದು. ಇದು ಸುಪ್ತಪ್ರಾರಬ್ಧನಲ್ಲಿರುತ್ತದೆ. ಈರೀತಿ ಮನೋವೃತ್ತಿಗಳು ಭೇದಗಳಾಗಿರುತ್ತವೆ.

ಬಳಿಕ, ಸಾಮಾನ್ಯವಾಗಿ ಹೇಳಿದ ವಿಕ್ಷಿಪ್ತವೃತ್ತಿಯನ್ನು ವಿಶೇಷವಾಗಿ ಕಥನ ಮಾಡುತ್ತಾರೆ.

> **ಅವರಲ್ಲಿ ವಿಷಯಾನುಭವದಾಶೆಯಿಂ ತ್ರಿಕಾ ।**
> **ಲವು ಚಿಂತೆವಡೆದ. ತಾಮಸ ಮನೋವರ್ತ ।**
> **ನವದೆ ವಿಕ್ಷಿಪ್ತವಹುದಿಂತು ॥೧೩॥**

**ಟೀಕಾ:**- ಅವರಲ್ಲಿ=ಆವೃತ್ತಿಗಳಲ್ಲಿ, ವಿಷಯಾನುಭವದಾಶೆಯಿಂ=ವಿಷಯಗಳನ್ನು ಭೋಗಿಸ ಬೇಕೆಂಬಿಚ್ಛೆಯಿಂದ, ತ್ರಿಕಾಲವು=ಯಾವಾಗಲೂ, ಚಿಂತೆವಡೆದ=ಚಿಂತೆಯಿಂದ ಕೂಡಿದ, ತಾಮಸ=ತಮೋಗುಣಸಂಬಂಧವಾದ, ಮನೋವರ್ತನವದೆ=ಮನಸ್ಸಿನ ವ್ಯವಹಾರವೇ, ಇಂತು = ಈರೀತಿ, ವಿಕ್ಷಿಪ್ತವಹುದು= ವಿಕ್ಷೇಪವೆನಿಸುವದು.

**ತಾತ್ಪರ್ಯ:**-ತೀವ್ರಪ್ರಾರಬ್ಧದವನ ಚಿತ್ತ ವೃತ್ತಿಯು ಒಂದು ವಿಷಯವನ್ನು ಬಿಟ್ಟು ಮತ್ತೊಂದು ವಿಷಯವನ್ನು ಅಪೇಕ್ಷೆಮಾಡುತ್ತಿರುವದು. ಹೀಗೆ ತಮೋಗುಣದ ಸಂಬಂಧದಿಂದ ಮನೋವೃತ್ತಿಯು ಯಾವಾಗಲೂ ಒಂದಿಲ್ಲೊಂದು ವಿಷಯುವನ್ನುಚಿಂತಿಸುತ್ತಿರುತ್ತದೆ. ಭೃಂಗವು ಹೂವಿನಿಂದ ಮತ್ತೊಂದು ಹೂವಿಗೆ ಹಾರುತ್ತ ಹೋಗುವಂತೆ,ಚಿತ್ತವು ವಿಷಯ ಚಿಂತನೆಯಿಂದ ಕೂಡಿರುತ್ತದೆ. ಆದ್ದರಿಂದ ಇದಕ್ಕೆ ವಿಕ್ಷಿಪ್ತವೆಂದು ಹೇಳುವರು. ಹೀಗಾದರೂ, ಅವನು ಲಕ್ಷ್ಯವನ್ನು ನಿಜದಲ್ಲಿಟ್ಟದ್ದರಿಂದ ಆತ್ಮರತಿಯಾಗಿರುವನು.

ಬಳಿಕ, ಮಧ್ಯಪ್ರಾರಬ್ಧದವನ ರಜೋಗುಣ ಸಂಬಂಧವಾದ ಗತಾಗತ ವೃತ್ತಿಯ ವ್ಯವಹಾರವನ್ನು ಕಥನ ಮಾಡುತ್ತಾರೆ.

**ಯೋಗದೊಳಗೊಮ್ಮೆ ನಿಜಭೋಗದೊಳಗೊಮ್ಮೆ ನೆಲೆ।**
**ಯಾಗಿ ರಜವಿಡಿದ ಮನದ ಸಂಚರವೇ ಗ।**
**ತಾಗತವೆನಿಪ್ಪದೆಲೆಬೋಧ್ಯ ॥೧೪॥**

**ಟೀಕಾ:**– ಯೋಗದೊಳಗೊಮ್ಮೆ=ಒಂದು ಕಾಲಕ್ಕೆ ಸ್ವರೂಪದಕಡೆಗೆ ಅಂತರ್ಮುಖವುಳ್ಳದ್ದಾಗಿಯೂ, ನಿಜಭೋಗದೊಳಗೊಮ್ಮೆ=ಒಂದು ಸಮಯ ಬಹಿರ್ಮುಖವಾಗಿಯೂ, ನೆಲೆಯಾಗಿ = ಇರುತ್ತಾ, ರಜವಿಡಿದ = ರಜೋಗುಣದಿಂದ ಕೂಡಿದ, ಮನದ=ಮನಸ್ಸಿನ, ಸಂಚರವೇ=ವ್ಯವಹಾರವೇ, ಎಲೆಬೋಧ್ಯ=ಎಲೈ ಶಿಷ್ಯನೇ !, ಗತಾಗತವೆನಿಪ್ಪದು=ಗಮನಾಗಮನವೆನಿಸುವದು.

**ತಾತ್ಪರ್ಯ:**- ಮಧ್ಯಪ್ರಾರಬ್ಧದವನ ಚಿತ್ತವೃತ್ತಿಯು ಮುಮುಕ್ಷುಗಳನ್ನು ಕುರಿತು ಉಪದೇಶಕ್ಕಾಗಿ ಹೊರಗೆಹೋಗುತ್ತದೆ. ಅವರ ಬುದ್ಧಿಯನುಸಾರವಾಗಿ ದೃಷ್ಟಾಂತ, ಯುಕ್ತಿ, ಅನುಭವಗಳನ್ನು ಆಲೋಚಿಸುತ್ತದೆ. ಸ್ವರೂಪಾನುಭವಗಳಿಂದ ಒಳಗೆಹೋಗಿ ಅಂತರ್ಮುಖವಾಗುತ್ತದೆ. ಮತ್ತೆ ಅವರಿಗೆ ತಿಳಿಸುವದಕ್ಕಾಗಿ ಹೊರಗೆ ಬರುತ್ತದೆ. ಈ ರೀತಿ ಒಳಹೊರಗೆ ಗಮನಾಗಮನವನ್ನು ಮಾಡುವದರಿಂದ ರಜೋಗುಣವುಳ್ಳದ್ದಾಗಿದೆ. ಆದ್ದರಿಂದ ಈ ಚಿತ್ತವೃತ್ತಿಯು **ಗತಾಗತ**ವಾಗಿರುತ್ತದೆ. ಇವನ ಚಿತ್ತವು **ಬಾಲಕನಂತೆ** ಸ್ವರೂಪದಲ್ಲಿಯೇ ಕ್ರೀಡಿಸುವದು. ಆದರಿಂದ **ಆತ್ಮಕ್ರೀಡ**ನೆಂದು ಹೇಳಿಸಿಕೊಳ್ಳುವನು.

ಬಳಿಕ, ಮಂದಪ್ರಾರಬ್ಧದವನು ವಿಷಯಾಕಾರ ವೃತ್ತಿಯಿಲ್ಲದೆ, ಸ್ವರೂಪಾಕಾರ ವೃತ್ತಿಯಿಂದಿರುವನು. ಆದ್ದರಿಂದ ಇವನ ವೃತ್ತಿಯು ಸತ್ವಗುಣದ್ದಾಗಿದೆ. ಇದಕ್ಕೆ ಸಂಶ್ಲಿಷ್ಟವೆಂದು ಹೇಳುತ್ತಾರೆ.

**ಪೆರತೊಂದು ವಿಷಯದೊಳಗೆರಗದನುಭವದಲ್ಲಿ।**
**ಕರಿಗೊಂಡು ಸತ್ವಮಯಬುದ್ಧಿ ನೆಲಿಸಲದ।**
**ನರಿಯೆ ಸಂಶ್ಲಿಷ್ಟವಹುದೈಸೆ ॥೧೫॥**

**ಟೀಕಾ:**- ಪೆರತೊಂದು=ಬೇರೊಂದು, ವಿಷಯದೊಳು=ವಸ್ತುವಿನಲ್ಲಿ, ಎರಗದೆ=ಕೂಡದೆ, ಅನುಭವದಲ್ಲಿ=ತನ್ನಲ್ಲಿ, ಕರಿಗೊಂಡು=ಸ್ಥಿರವಾಗಿ, ಸತ್ವಮಯ=ಸಾತ್ವಿಕವಾದ, ಬುದ್ಧಿ=ಬುದ್ಧಿವೃತ್ತಿಯು, ನೆಲಿಸಲ್=ಇರಲಾಗಿ, ಅದನರಿಯೆ=ಅದನ್ನು ವಿಚಾರ ಮಾಡಲಾಗಿ, ಸಂಶ್ಲಿಷ್ಟವಹುದೈಸೆ=ಚನ್ನಾಗಿ ಕೂಡಿದ್ದೆಂದು ಹೇಳಿಸಿಕೊಳ್ಳುವದು.

**ತಾತ್ಪರ್ಯ:-** ಮಂದಪ್ರಾರಬ್ಧದವನ ಸಾತ್ವಿಕವೃತ್ತಿಯು ಯಾವದೊಂದು ಬಾಹ್ಯವಿಷಯದಲ್ಲಿ ಹೋಗಿ ಬೆರೆಯದೆ, ಸ್ವಸ್ವರೂಪದಲ್ಲಿಯೇ ಸ್ಥಿರವಾಗಿರುತ್ತದೆ. ಅಂದರೆ ದೃಶ್ಯವಸ್ತುಗಳಲ್ಲಿರದೆ ದೃಕ್‌ರೂಪ ತನ್ನ ನಿಜದಲ್ಲಿಯೇ ಇರುತ್ತದೆ. ತ್ರಿಪುಟಿ ವಿಲಕ್ಷಣಸಾಕ್ಷಿ ಸಚ್ಚಿದಾನಂದ ಸ್ವರೂಪಾನುಭವದಲ್ಲಿ ತತ್ಪರವಾಗುತ್ತದೆ. ಬಳಿಕ ಸಂಶಯ, ಅಸಂಭಾವನೆಗಳಿಂದ ಚಿತ್ತವು ಚಲಿಸದೆ, ಅಲ್ಲಿಯೇ ದೃಢವಾಗಿರುತ್ತದೆ. ಹೀಗೆ ಯಾವಾಗಲೂ ವೃತ್ತಿಯು ಸ್ವರೂಪದಲ್ಲಿ ಬೆರತುಕೊಂಡಿರಲು; ಅದು ಮಿಥುನದಂತಿರಲು **ಸಂಶ್ಲಿಷ್ಟವೆಂಬ** ನಾಮವು ಬಂದಿರುತ್ತದೆ. ಆದ್ದರಿಂದ **ಆತ್ಮಮಿಥುನನೆಂದು** ಶ್ರುತಿ ಹೇಳುತ್ತದೆ.

**ಬಳಿಕ,** ಸುಪ್ತಪ್ರಾರಬ್ಧದವನ ಗುಣವಾಸನಾತ್ಮಕ ಚಿತ್ತವೃತ್ತಿಯು ಯಾವ ಭೇದವನ್ನು ಕಾಣದೆ, ಅಭೇದಾತ್ಮನಲ್ಲಿ ಮುಳಿಗಿ ಲೀನವಾಗಿರುತ್ತದೆಂದು ನಿರೂಪಣ ಮಾಡುತ್ತಾರೆ.

**ಆನು ನೀನದಿದೆಂಬುದೇನು ತೋರದೆ ಸಚ್ಚಿ |**
**ದಾನಂದದಲ್ಲಿ ಸುಪ್ತನಂತಿರಲಾ ಸ್ವ |**
**ಲೀನವದು ನಿರ್ಗುಣವೆ ಕೇಳು** ||೧೬||

**ಟೀಕಾ:-** ಆನು ನೀನು=ನಾನು ನೀನುಯೆಂದು=ಅದಿದೆಂಬುದು=ಅದು ಇದು ಅನ್ನುವದು, ಏನು ತೋರದೆ=ಯಾವದೊಂದು ಪ್ರತೀತಿಯಾಗದೆ, ಸಚ್ಚಿದಾನಂದ ದಲ್ಲಿ=ಸಚ್ಚಿದಾನಂದವಾದ ತನ್ನ ಸ್ವರೂಪದಲ್ಲಿ, ಸುಪ್ತನಂತೆ=ನಿದ್ರಿತನಂತೆ, ಇರಲ್=ಇರಲಾಗಿ, ಸ್ವಲೀನವದು=ತನ್ನಲ್ಲಿ ಲಯವಾದದ್ದೆಂದು ಹೇಳಿಸಿಕೊಳ್ಳುವದು, ಅದು ನಿರ್ಗುಣವೆ ಕೇಳು=ಅದು ನಿರ್ಗುಣವೆ ಆಗಿರುವದು ಎಂದು ತಿಳಿ.

**ತಾತ್ಪರ್ಯ:-** ನಾನು, ನೀನು, ಅದು, ಇದು, ಎಂಬ ಯಾವ ಭೇದ ಬುದ್ಧಿಯೂ ತೋರದೆ, ಕೇವಲ ಸಚ್ಚಿದಾನಂದಸ್ವರೂಪದಲ್ಲಿ ವೃತ್ತಿಯು ಲೀನವಾಗುತ್ತದೆ. ಸಮುದ್ರದಲ್ಲಿ ಉಪ್ಪಿನ ಹರಳು ಲೀನವಾದಂತೆ, ವೃತ್ತಿಲಯವಾಗುತ್ತದೆ. ಅಥವಾ ಸುಪ್ತಪುರುಷನ ಚಿತ್ತವೃತ್ತಿಯು; ನಿದ್ರೆಯಲ್ಲಿ ತನಗೆ ಕಾರಣವಾದ ಅವಿದ್ಯೆಯಲ್ಲಿ ಅಡಗಿದಂತೆ, ಸ್ವರೂಪದಲ್ಲಿ ಅಡಗುತ್ತದೆ. ಇದಕ್ಕೆ ಯಾವ ಗುಣಗಳೂ ಇಲ್ಲ. ಅದರಿಂದ ನಿರ್ಗುಣವೆಂದು ಹೇಳಲ್ಪಡುತ್ತದೆ. ಆದರೂ, ವೃತ್ತಿಲೀನವಾಗಿದ್ದು ಪುನಃ ಉತ್ಥಾನಕ್ಕೆ ಬರುತ್ತದೆ. ವೃತ್ತಿಯು ಅತ್ಯಂತ ಲಯಾತ್ಮಕವಾಗಿಲ್ಲ. ಆದರಿಂದ ಈ ವೃತ್ತಿಗೆ ಯಾವ ಗುಣಗಳ ಸಂಬಂಧವಿಲ್ಲದಿದ್ದರೂ, ಗುಣವಾಸನಾ ನಿಮಿತ್ತವನ್ನು ಹೇಳಬೇಕಾಗುತ್ತದೆ. ಅರ್ಥಾತ್ ಸುಪ್ತನಂತೆ ವೃತ್ತಿಯು ಸ್ವರೂಪದಲ್ಲಿ ಲೀನವಾದ್ದರಿಂದ ಇದಕ್ಕೆ **ಸ್ವಲೀನವೆಂದು** ಕರೆಯುತ್ತಾರೆ.

**ಬಳಿಕ, ಶಿಷ್ಯನು:-** ಉಕ್ತ ಪ್ರಕಾರ ಜೀವನ್ಮುಕ್ತರು, ಗುಣಗಳ ಸಂಬಂಧಿ ಮನೋವೃತ್ತಿಗಳಿಂದ ಕೂಡಿಕೊಂಡು, ವ್ಯವಹಾರವುಳ್ಳವರಾದರೆ, ಅವರಿಗೆ ದ್ವೈತ ಸಂಬಂಧದಿಂದ ಅನೇಕ ದುಃಖಗಳಾದರೂ ಆಗಬಹುದು. ಹೀಗಾದರೆ. ಅವರು ಪ್ರಯತ್ನಪೂರ್ವಕ ಜ್ಞಾನ ಸಂಪಾದನೆಯನ್ನು ಮಾಡಿದ್ದು ವ್ಯರ್ಥವಾಗುವದಿಲ್ಲವೆ? ಭೋಗಪ್ರಾಪ್ತಿಸಮಕಾಲದಲ್ಲಿಯೇ ರೋಗಪ್ರಾಪ್ತಿಯಾದರೆ, ಭೋಗಪ್ರಾಪ್ತಿಯಿಂದ ಜನ್ಯ ಸುಖವು ಹೇಗೆ ತೋರದೆ ಹೋಗುವದೋ, ಹಾಗೇ ಜೀವನ್ಮುಕ್ತಿಯಾದರೂ ಗುಣಸಂಬಂಧಿ ಮನೋವೃತ್ತಿವಾಸನೆಗಳಿಂದ ಜೀವನ್ಮುಕ್ತಿ ಸುಖವು ತೋರದೆ ಹೋಗುತ್ತದೆ. ಆದ್ದರಿಂದ ಜ್ಞಾನದಿಂದ ಜೀವನ್ಮುಕ್ತಿಯಾದರೂ ಪ್ರಯೋಜನವಿಲ್ಲದಂತಾಯಿತು; ಎಂದು ಶಂಕೆಯನ್ನು ಮಾಡಿದರೆ; ಗುಣವಾಸನಾ ವೃತ್ತಿಗಳಿಂದ ಯಾವ ಭಯವೂ ಇಲ್ಲೆಂದು ಉತ್ತರವನ್ನು ಹೇಳುತ್ತಾರೆ.

**ಈ ತೆರದೊಳಾಗುಣವ್ರಾತಮಯವಹ ಮನೋ।**
**ಜಾತವರ್ತನೆಯೊಳಿರೆ ಯೋಗಿಗಳಿಗಾವ।**
**ಭೀತಿ ಜನಕಾದಿಗಳವೋಲು** ॥೧೭॥

**ಟೀಕಾ:-** ಈ ತೆರದೊಳು=ಈ ರೀತಿಯಾಗಿ, ಆ ಗುಣವ್ರಾತಮಯವಹ=ಆ ಗುಣಗಳ ಸಮೂಹ ಮಯಾತ್ಮಗಳಾದ, ಮನೋಜಾತ=ಮನಸ್ಸಿನಿಂದ ಹುಟ್ಟಿದ, ವರ್ತನೆಯೊಳು=ಆಚರಣೆಯಲ್ಲಿ, ಇರೆ=ಇರಲಾಗಿ, ಯೋಗಿಗಳಿಗೆ=ಜೀವನ್ಮುಕ್ತರಿಗೆ, ಜನಕಾದಿಗಳವೋಲು=ದೃಢಜ್ಞಾನಿಗಳಾದ ಜನಕಾದಿಗಳಂತೆ, ಆವಭೀತಿ=ಯಾವ ಭಯವುಂಟು ?

**ತಾತ್ಪರ್ಯ:-** ಗುಣಮಯಗಳಾದ ಮನೋವಾಸನೆಗಳಿಂದ ಜೀವನ್ಮುಕ್ತರು ವರ್ತಿಸಿದರೂ, ಅವರಿಗೆ ಯಾವ ಭಯವೂ ಇಲ್ಲ. ಯಾಕಂದರೆ, **ದೃಢಜ್ಞಾನಿಗಳಾದ ಜನಕ, ಅಜಾತಶತ್ರು, ಶಿಖಿಧ್ವಜಮಹಾರಾಜ** ಮೊದಲಾದವರು, ಜ್ಞಾನವಂತರಾಗಿ ಜೀವನ್ಮುಕ್ತಿ ಸುಖವನ್ನು ಅನುಭವಿಸುತ್ತಾ ರಾಜ್ಯಪರಿಪಾಲನೆಯನ್ನು ಮಾಡಿದ್ದಾರೆ. ಗೃಹಸ್ಥಾಶ್ರಮದಲ್ಲಿಯೇ ಇದ್ದು ಸರ್ವ ಲೌಕಿಕ ವ್ಯವಹಾರಗಳನ್ನು ಸಾಂಗವಾಗಿ ಮಾಡಿದ್ದಾರೆ. ತಮ್ಮ ನಿಜನಿಷ್ಠತ್ವರೂಪ ಜೀವನ್ಮುಕ್ತಿ ಸುಖದಲ್ಲಿಯೇ ತತ್ಪರರಾಗಿರುತ್ತಾರೆ. ಅವರಿಗೆ **ಮನೋವಾಸನೆಗಳಿಂದ** ಯಾವ ಬಾಧಕವೂ ಕಾಣುವದಿಲ್ಲ. '**ತಿಳಿವಿನಿಂದುಳಿದ ಮನೋಧರ್ಮಾದಿಕವನು ಕೆಡಿಸಲ್ಕೆ ಬಿಟ್ಟೆ ಮಲದ ದುರ್ವಾಸನೆಯನು ಕೆಡಿಸಲ್ಕೆ ಕೋಟಲೆಗೊಂಬ ಗಾಂಪನಿಗೆಣೆಯಕ್ಕು**' ಎಂದು **ಗ್ರಂಥಕರ್ತರು** ಪರಮಾನುಭವಬೋಧೆಯಲ್ಲಿ ಹೇಳಿರುವರು, ಮತ್ತು '**ಅಸಲೆ ಸುಳ್ಳೆನೆ ಬಡ್ಡಿಯ ಪೆಸಗೋಳ್ಳದಪರಿ, ಮನವೇ ಪುಸಿಯೆನೆ ತದ್ವಾಸನೆಯೇಂ ಕಿಸಿಯುವದು**' ಹೀಗೆಂದು **ಶ್ರೀ ಸರ್ಪಭೂಷಣರು**

ಹೇಳಿರುವರು. ಆದ್ದರಿಂದ ದೃಢಜ್ಞಾನಿಗಳಿಗೆ ಮನೋವಾಸನೆಗಳಿಂದ ಯಾವ ಭಯವೂ ಇಲ್ಲೆಂದು ತಿಳಿ.

ಬಳಿಕ, ಶಿಷ್ಯನು 'ತಾವು ಮನೋವಾಸನೆಗಳಿಂದ ಯಾವ ಭಯವೂ ಇಲ್ಲ. ಅದರ ನಿವೃತ್ತಿಗೆ ಪ್ರಯತ್ನವೂ ಬೇಕಾಗಿಲ್ಲ ಎಂದು ಹೇಳಿದಿರಿ. ಹಾಗಾದರೆ; ಜೀವನ್ಮುಕ್ತಿ ವಿವೇಕನಾಮಕ ಗ್ರಂಥದಲ್ಲಿ ಶ್ರೀಮದ್ವಿದ್ಯಾರಣ್ಯ ಸ್ವಾಮಿಗಳು; ಜೀವನ್ಮುಕ್ತರಿಗೆ ಪ್ರಯತ್ನಪೂರ್ವಕ ವಾಸನೆಗಳನ್ನು ನಿವೃತ್ತಿಮಾಡಲಿಕ್ಕೇಬೇಕೆಂದು ಅನೇಕ ಉಪಾಯಗಳನ್ನು ಹೇಳಿದ್ದಾರೆ. ಹೀಗೆ ಹೇಳುವದರಿಂದ ಪರಸ್ಪರ ವಾಕ್ಯಗಳಿಗೆ ವಿರೋಧ ಬರುತ್ತದೆ. ಎಂದು ಶಂಕೆಯನ್ನು ಮಾಡುತ್ತಿರಲು;' ಶ್ರೀಮದ್ವಿದ್ಯಾರಣ್ಯರು ಹೇಳಿದ್ದು **ಅದೃಢ ಜ್ಞಾನಿಗಳಿಗಾಗಲಿ, ಅಥವಾ ಅಕೃತೋಪಾಸಕ ಜ್ಞಾನಿಗಳಿಗಾಗಲಿ,** ಅವರನ್ನು ಕುರಿತು ಹೇಳಿರಬಹುದು. ಹೀಗಿದ್ದ ಪಕ್ಷದಲ್ಲಿ ವಾಸನೆಯನ್ನು ನಿವೃತ್ತಿಪಡಿಸಬಹುದೆಂದು ಉಪಾಯವನ್ನು ತೋರಿಸುತ್ತಾರೆ.

**ವಾಸಿಷ್ಠದಲ್ಲಿ ನಿಶ್ವಾಸಕಾರಿಕೆಯಲ್ಲಿ।**
**ವಾಸನಾಕರ್ಮದನುವಂ ಮನೋವೃತ್ತಿ।**
**ಯೈಸುವಂ ನೋಡಿ ತಿಳಿಪುತ್ರ ॥೧೮॥**

**ಟೀಕಾ:-** ವಾಶಿಷ್ಠದಲ್ಲಿ=ವಶಿಷ್ಠ ಮುನಿಗಳಿಂದ ರಚಿತ ವಾಶಿಷ್ಠದಲ್ಲಿಯೂ, ನಿಶ್ವಾಸಕಾರಿಕೆಯಲ್ಲಿ=ಮಾಂಡೂಕ್ಯೋಪನಿಷತ್ತಿನಕಾರಿಕೆಯಲ್ಲಿಯೂ, ವಾಸನಾಕರ್ಮದ ಅನುವಂ=ವಾಸನಾರೂಪಕರ್ಮದ ರೀತಿಯನ್ನು, ಮನೋವೃತ್ತಿಯೈಸುವಂ=ಮನೋವೃತ್ತಿಯನ್ನು ಹೇಗೆ ಲಯಮಾಡಬೇಕೆಂಬುವ ರೀತಿಯನ್ನು, ನೋಡಿ=ಅವಲೋಕಿಸಿ, ತಿಳಿಪುತ್ರ=ಹೇ ಮಗನೇ! ಅರಿ.

**ತಾತ್ಪರ್ಯ:-** ವಾಶಿಷ್ಠ ಗ್ರಂಥದಲ್ಲಿ ವಶಿಷ್ಠರು ಶ್ರೀ ರಾಮಚಂದ್ರನನ್ನು ಕುರಿತು, ಮನೋನಾಶ ವಾಸನಾಕ್ಷಯಗಳನ್ನು ಹೇಗೆ ಮಾಡಬೇಕು. ಎಂಬುದಕ್ಕೆ ಅನೇಕ ಆಖ್ಯಾನರೂಪ ಕಥೆಗಳನ್ನು ನಿರೂಪಣ ಮಾಡಿರುತ್ತಾರೆ. ಮತ್ತು ಮಾಂಡುಕ್ಯೋಪನಿಷತ್ತಿಗೆ ಶ್ರೀಮದ್ಗೌಡಪಾದಾಚಾರ್ಯರು ಕಾರಿಕೆಯನ್ನು ಬರೆದರು. ಅದಕ್ಕೆ ಶ್ರೀ ಮಚ್ಛಂಕರಾಚಾರ್ಯರಿಂದ ಭಾಷ್ಯವು ಬರೆಯಲ್ಪಟ್ಟಿದೆ. ವೈತಥ್ಯ ನಾಮಕ ದ್ವಿತೀಯ ಪ್ರಕರಣವಿರುತ್ತದೆ. ಅದರಲ್ಲಿ ಜಾಗ್ರತ್ಪ್ರಪಂಚವೆಲ್ಲವು **ಸ್ವಪ್ನ ಸಮಾನವದೆ.** ಜಾಗ್ರತ್ತಿಗೂ ಸ್ವಪ್ನಕ್ಕೂ ಏನೂ ಭೇದವಿಲ್ಲ. ಎಂಬುದನ್ನು ನಾನಾ ಯುಕ್ತಿ, ದೃಷ್ಟಾಂತ, ಅನುಭವಗಳಿಂದ ತೋರಿಸಿದ್ದಾರೆ. ಅದರಿಂದ ಜಗತ್ತಿನ ಸಂಬಂಧಿ **ಮನೋವಾಸನೆಗಳು** ತಾವೇ ನಿವೃತ್ತಿಯನ್ನು ಹೊಂದುತ್ತವೆ. ಆದ್ದರಿಂದ ಯಾವಯಾವ ವಾಸನೆಗಳುಂಟು? ವಾಸನಾರೂಪ ಅಂಕುರಗಳಿಗೆ ಬೀಜಗ-

ಳಾದ ಕರ್ಮಗಳು ಹೇಗೆ ಉಂಟು? ಅವು ಹೇಗೆ ದುಃಖಕ್ಕೆ ಕಾರಣಗಳಾಗಿವೆ? ಎಂಬುದನ್ನು; ಮತ್ತು ಅವುಗಳ ನಿವೃತ್ತಿಯು ಹೇಗೆ ಆಗುತ್ತದೆಂಬುದನ್ನು, ನಿವೃತ್ತಿಯ ಉಪಾಯಗಳನ್ನು; ಆ ಗ್ರಂಥಗಳಲ್ಲಿ ನೋಡಿ ತಿಳಿದುಕೊಳ್ಳಿ.

**ಜೀವನ್ಮುಕ್ತಿ ಸ್ಥಿತಿನಿರೂಪಣೆ ಸೂತ್ರ ೭ ಕ್ಕೆ ತ್ರಿವಿಧಿ ೭೮**

---

ಬಳಿಕ, ಹಿಂದಿನ ಸೂತ್ರದಲ್ಲಿ; ಪ್ರಾರಬ್ಧಕರ್ಮವು ತೀವ್ರಾದಿ ಭೇದವಾಗಿ ಜೀವನ್ಮುಕ್ತರಿಗೆ ಭೋಗಗಳನ್ನು ಕೊಡುತ್ತದೆ. ಆದರಿಂದ ಅವರು ಒಂದೇ ವಿಧವಾಗಿರದೆ ಅನೇಕ ವರ್ತನಗಳಿಂದ ಭಿನ್ನಭಿನ್ನರಾಗಿರುತ್ತಾರೆಂದು ಹೇಳಲ್ಪಟ್ಟಿತು. "ಹೀಗೆ ಪ್ರಾರಬ್ಧ ಕರ್ಮವು ಭೋಗದಿಂದ ನಿವೃತ್ತಿಯಾದರೂ, ಆಗಾಮಿ ಕರ್ಮವು ಮಾತ್ರ ಭೋಗದಿಂದ ನಿವೃತ್ತಿಯಾಗದೆ, ಜನ್ಮವನ್ನು ಕೊಡುವಂಥದ್ದಾಗಿರುತ್ತದೆ. ದೇಹಧಾರಿಗಳಾದ ಸರ್ವಜೀವರಿಗೂ ಆಗಾಮಿಕರ್ಮಗಳು ಅವಶ್ಯ ಜನ್ಮಕೊಡುವಂತೆ, ಎಲ್ಲರಂತೆ ದೇಹಧರಿಸಿ ಜೀವಿಸಿಕೊಂಡು ಪುಣ್ಯಪಾಪ ಕರ್ಮಗಳನ್ನು ಮಾಡಿದ ಜ್ಞಾನಿಗಾದರೂ, **ಆಗಾಮಿಕರ್ಮವು** ಜನ್ಮವನ್ನು ಕೊಡಬಹುದು" ಎಂದು ಶಿಷ್ಯನು ಶಂಕೆಯನ್ನು ಮಾಡಲು; ಅದಕ್ಕೆ ಗುರುಗಳು "ಆಗಾಮಿಕರ್ಮವು ಎಲ್ಲರಿಗೆ ಜನ್ಮಕ್ಕೆ ಕಾರಣವಾದಂತೆ ಜ್ಞಾನಿಗೆ ಆಗದು. ಅದು ಏನೊಂದು ಫಲಕ್ಕೆ ಹೇತುವಾಗದೆ ನಿರರ್ಥಕವಾಗಿರುತ್ತದೆಂದು ಅನೇಕ ದೃಷ್ಟಾಂತಗಳಿಂದ ಉಕ್ತ ಅರ್ಥವನ್ನು ದೃಢೀಕರಣ ಮಾಡುತ್ತಾರೆ.

**ಸೂತ್ರ॥ ಲೋಕದೊಳು ಲೌಕಿಕವನೊಂದಿ ಚರಿಸುವಯೋಗಿ।**
**ಗೇಕೆ ಕರ್ಮದ ಬಾಧೆ ದೊರಕೊಳ್ಳದು॥**

**ಟೀಕಾ:-** ಲೋಕದೊಳು = ಜಗತ್ತಿನಲ್ಲಿ, ಲೌಕಿಕವನು = ಪ್ರಪಂಚವನ್ನು, ಒಂದಿ = ಗ್ರಹಿಸಿ, ಚರಿಸುವ = ವ್ಯವಹರಿಸುವಂಥಾ, ಯೋಗಿಗೆ = ಯೋಗೀಶ್ವರನಿಗೆ, ಕರ್ಮದಬಾಧೆ = ಆಗಾಮಿ ಕರ್ಮಗಳ ಕಾಟವು, ಏಕೆ = ಏನು ಕಾರಣ, ದೊರಕೊಳ್ಳದು = ಪ್ರಾಪ್ತವಾಗಲಾರದು.

**ತಾತ್ಪರ್ಯ:-** ಆಗಾಮಿ ಕರ್ಮವು ಅಂದರೆ, ಜ್ಞಾನೋತ್ತರ ಕಾಲದಲ್ಲಿ ಜೀವಿಸಿಕೊಂಡು ಇರುವಾಗ್ಯೆ ಮಾಡಿದ ಕರ್ಮವು. ಇದಕ್ಕೆ **ಆಗಾಮಿ ಕರ್ಮ**ವೆಂಬ ಹೆಸರುಂಟು. ಯಾಕಂದರೆ, ಇದು ಈ ಜನ್ಮದಲ್ಲಿ ಭೋಗವನ್ನು ಕೊಡದೆ, ಜನ್ಮಾಂತರದಲ್ಲಿ ಭೋಗವನ್ನು ಕೊಡುವದಾಗಿದೆ. ಇದು ಎಲ್ಲರಿಗೂ ಜನ್ಮವನ್ನು ಕೊಟ್ಟು ಫಲವನ್ನುಣಿಸುವಂತೆ; ಜ್ಞಾನಿಗಾದರೂ ತನ್ನ ಫಲವನ್ನು ಕೊಡಬಹುದು. ಕೊಡುವದಿಲ್ಲ ಎಂದು ಹೇಳಿದರೆ; ಅದು ಏನು ಕಾರಣಕೊಡುವದಿಲ್ಲ? ಅದನ್ನು ಹೇಳಿರಿ, ಎಂದು ಈ ಸೂತ್ರದಲ್ಲಿ ಶಿಷ್ಯನ ಅಭಿಪ್ರಾಯವದೆ.

ಬಳಿಕ, ಶಿಷ್ಯನು ಸದ್ಗುರುಗಳ ಚಿತ್ತನ್ನು ಪ್ರಸನ್ನೀಕರಿಸುವದಕ್ಕಾಗಿ ಸದ್ಗುರುವಿನ ಸ್ತುತಿಯನ್ನು ಮಾಡುತ್ತಾನೆ.

**ಮನುಮುನೀಶ್ವರರರಿಯದನುಪಮಾನಂದ ಚಿ ।**
**ದ್ಘನವೆ ಗುರುವರ್ಯ ಶರಣಾಗೆನುತೆ ಸೂನು ।**
**ವಿನಯದಿಂ ಮತ್ತೆ ಬೆಸಗೊಂಡ ॥೧॥**

**ಟೀಕಾ:-** ಮನು=ಸ್ವಾಯಂಭು ಮೊದಲಾದವರು, ಮುನಿ=ವಸಿಷ್ಠಾದಿಗಳು, ಅರಿಯದ=ತಿಳಿಯದಿರುವ, ಅನುಪಮ=ದೃಷ್ಟಾಂತವಿಲ್ಲದ, ಆನಂದ ಚಿದ್ಘನವೇ=ಚಿದ್ರೂಪ ಆನಂದಮೂರ್ತಿಯೇ, ಗುರುವರ್ಯ=ಗುರೂತ್ತಮನೇ !, ಶರಣಾಗು=ರಕ್ಷಿಸುವಂಥವನಾಗು, ಎನುತೆ= ಅನ್ನುತ್ತಾ, ಸೂನು = ಶಿಷ್ಯನು, ವಿನಯದಿಂ=ನಮ್ರತೆಯಿಂದ, ಮತ್ತೆ=ಅನುತರ, ಬೆಸಗೊಂಡ=ಕೇಳಿಕೊಂಡನು.

**ತಾತ್ಪರ್ಯ:-** ಹೇ ಗುರುದೇವ ! ನೀನು ಮನುಮುನೀಶ್ವರರಿಂದ ಅರಿಯಲಿಕ್ಕೆ ಬಾರದವನೂ, ದೃಷ್ಟಾಂತಕ್ಕೆ ನಿಲುಕದವನೂ, ಸಚ್ಚಿದಾನಂದಮೂರ್ತಿಯೂ ಆಗಿರುವಿ. ನೀನು ನನ್ನನ್ನು ರಕ್ಷಿಸುವಂಥವನಾಗು. ಅಂದರೆ, ಜನನ ಮರಣ ರೂಪ ಭವದುಃಖದಿಂದ ನನ್ನನ್ನು ರಕ್ಷಿಸು. ನನಗೆ ಬಂದ ಸಂಶಯ ಅಸಂಭಾವನಾದಿಗಳನ್ನು ಪರಿಹರಿಸಿ ರಕ್ಷಿಸುವಂಥವನಾಗು. ಎಂದು ಶಿಷ್ಯನು ಕೊಂಡಾಡುತ್ತ ಗುರುಗಳನ್ನು ಕುರಿತು, ಮುಂದೆ ಹೇಳುವ ಪ್ರಕಾರ ಪ್ರಶ್ನೆಯನ್ನು ನಿವೇದನ ಮಾಡುತ್ತಿರುವರು.

**ಬಳಿಕ:-** ಎಲ್ಲರಿಗೆ ಬಾಧೆಯನ್ನುಂಟುಮಾಡುವ ಕರ್ಮವು ಜೀವನ್ಮುಕ್ತನಿಗೆ ಯಾಕೆ ಬಾಧಿಸುವದಿಲ್ಲ? ಇದನ್ನು ತಿಳಿಸಬೇಕು. ಎಂದು ಕೇಳುತ್ತಾನೆ.

**ಗುರುವೆ! ಚಿತ್ತೈಸು ಸರ್ವರನು ಬಾಧಿಪ ಕರ್ಮ।**
**ವಿರುತಿರ್ದು ಮುಕ್ತನನು ಬಾಧೆಗೊಳಿಸದಿಹ।**
**ಪರಿಯಾವುದೆನಗೆ ಕರುಣಿಪುದು ॥೨॥**

**ಟೀಕಾ:-** ಗುರುವೆ=ಹೇ ಗುರುವೇ! ಚಿತ್ತೈಸು=ಲಕ್ಷ್ಯವಿಟ್ಟು ಕೇಳಿರಿ. ಸರ್ವರನು=ಎಲ್ಲರನ್ನು, ಬಾಧಿಪ=ದುಃಖಕ್ಕೀಡುಮಾಡುವ, ಕರ್ಮವಿರುತಿರ್ದು=ಕರ್ಮವು ಇರುತ್ತಿದ್ದರೂ, ಮುಕ್ತನನು=ಜೀವನ್ಮುಕ್ತನನ್ನು, ಬಾಧೆಗೊಳಿಸದಿಹ=ಜನ್ಮಾದಿ ದುಃಖಕ್ಕೀಡು ಮಾಡದಿರುವ, ಪರಿಯಾವುದು=ರೀತಿಯು ಯಾವದಿರುವದು?, ನನಗೆ ಕರುಣಿಪುದು=ತಿಳಿಸಬೇಕು,

ತಾತ್ಪರ್ಯ:- ಹೇ ಗುರುದೇವ! ಈ ದೇಹವಿರುತನಕ ಮಾಡಿದ ಕರ್ಮವು ಆಗಾಮಿಯೆನಿಸಿಕೊಂಡು, ಅಂತಃಕರಣದಲ್ಲಿ ಸಂಸ್ಕಾರರೂಪದಿಂದ ಇದ್ದು, ಮುಂದಿನ ಜನ್ಮಕ್ಕೆ ಎಲ್ಲರಿಗೂ ಕಾರಣವಾಗಿರುವದು. ಜನ್ಮಾದಿ ದುಃಖಗಳನ್ನುಂಟು ಮಾಡುತ್ತಿರುತ್ತದೆ. ಇಂಥಾ ಕರ್ಮವು ಜೀವನ್ಮುಕ್ತನಿಗಾದರೂ ಇರುತ್ತದೆ. ಇದ್ದರೂ ಅವನಿಗೆ ಜನ್ಮಾಂತರ ದುಃಖಕ್ಕೆ ಕಾರಣವಾಗುವದಿಲ್ಲೆಂದು ಹೇಳುತ್ತೀರಿ. ಏನು ಕಾರಣದಿಂದ ಆಗುವದಿಲ್ಲ? ಎಂಬುದನ್ನು ತಿಳಿಸಿ, ನನಗೆ ಬಂದ ಈ ಸಂಶಯವನ್ನು ಪರಿಹರಿಸಿ ಕಾಪಾಡಬೇಕು, ಎಂದು ಶಿಷ್ಯನು ಗುರುಗಳನ್ನು ಕುರಿತು; ಭಯಭಕ್ತಿಯಿಂದ ಯುಕ್ತನಾಗಿ ಪ್ರಶ್ನೆಯನ್ನು ಮಾಡಿದ್ದಾನೆ.

ಬಳಿಕ, ಶ್ರೀ ಗುರುಗಳು ಶಿಷ್ಯನ ಪ್ರಶ್ನೆಯನ್ನು ಕೇಳಿ ಸಂತೋಷಗೊಂಡು ಸಂಶಯವು ನಿರಸನವಾಗುವಹಾಗೆ, ಮುಂದೆ ಹೇಳುವರೀತಿಯಾಗಿ ಉತ್ತರವನ್ನು ದಯಪಾಲಿಸುತ್ತಿದ್ದಾರೆ.

**ಎಂದ್ಯವಿಜ್ಞಾಪನವನಂದು ಗುರು ಕೇಳಿ ಮುದ।**
**ದಿಂದಾತ್ಮಜಂಗೆ ತಿಳಿಯಲೊರೆದಂ ಮನದ।**
**ಸಂದೇಹವೈದೆ ಬಿಡುವಂತೆ ॥೩॥**

**ಟೀಕಾ:**- ಎಂದ=ಹೀಗೆ ನುಡಿದ, ವಿಜ್ಞಾಪನವನು=ಬಿನ್ನಹವನ್ನು ಅಂದು= ಆ ಹೊತ್ತಿನಲ್ಲಿ, ಗುರುಕೇಳಿ=ಗುರುಗಳು ಕೇಳಿಕೊಂಡು, ಮುದದಿಂದೆ=ಸಂತೋಷದಿಂದೆ, ಆತ್ಮಜಂಗೆ=ಶಿಷ್ಯನಿಗೆ, ಮನದ=ಮನಸ್ಸಿನ, ಸಂದೇಹವು=ಸಂಶಯವು, ಐದೆ=ಚನ್ನಾಗಿ, ಬಿಡುವಂತೆ=ಹೊರಟು ಹೋಗುವಹಾಗೆ, ತಿಳಿಯ ಲೊರೆದಂ=ತಿಳಿಯುವ ಹಾಗೆ ಹೇಳಿದನು

ತಾತ್ಪರ್ಯ:- ಪೂರ್ವ ಉಕ್ತ ಪ್ರಕಾರ ಶಿಷ್ಯನ ಪ್ರಶ್ನಾಭಿಪ್ರಾಯವನ್ನು ಗುರುಗಳು ಕೇಳಿ ಸಂತೋಷಚಿತ್ತರಾದರು. ಮತ್ತು ಶಿಷ್ಯನಿಗೆ ಬಂದಸಂಶಯವು ಹೊರಟು ಹೋಗುವಹಾಗೆಯೂ, ಅವನಿಗೆ ತಾವು ಹೇಳಿದ್ದು ತಿಳಿಯುವಹಾಗೆಯೂ ಮುಂದೆ ಹೇಳುವ ಪ್ರಕಾರ ಉತ್ತರವನ್ನು ಕೊಡುವಂಥವರಾದರು.

ಬಳಿಕ, ಸರ್ವರಿಗೆ ಭಯಕ್ಕೆ ಕಾರಣವಾದಸರ್ಪವು ಮಾಂತ್ರಿಕನಿಗೆ ಮಾತ್ರ ಭಯಕ್ಕೆ ಕಾರಣವಾಗದು. ಇದರಂತೆ; ಸರ್ವರಿಗೆ ಬಾಧೆಯಾದ ಕರ್ಮವು ಜೀವನ್ಮುಕ್ತನಿಗೆ ಬಾಧಿಸದೆಂದು ಉತ್ತರವನ್ನು ಹೇಳುತ್ತಾರೆ.

**ಗರುಡಮಂತ್ರಿಗೆ ಸರ್ಪನಿರದೆ ಭೀತಿಸುವಂತೆ।**
**ಪರಮಾರ್ಥಯೋಗ ಸಿದ್ಧನಂ ಕರ್ಮವಾ।**
**ವರಿಸದೇ ತಾನೆ ಕೆಲಸಾರ್ಗು ॥೪॥**

**ಟೀಕಾ:**- ಗರುಡಮಂತ್ರಿಗೆ =ಗರುಡಮಂತ್ರವನ್ನು ಬಲ್ಲವನಿಗೆ, ಸರ್ಪನು= ಹಾವು, ಇರದೆ=ನಿಲ್ಲದೆ, ಭೀತಿಸುವಂತೆ=ಭಯದಿಂದ ಓಡುವಂತೆ, ಪರಮಾರ್ಥ ಯೋಗಸಿದ್ಧನಂ=ಪರಬ್ರಹ್ಮೈಕ್ಯನಾದ ಮುಕ್ತನನ್ನು, ಕರ್ಮವು=ಆಗಾಮಿಕರ್ಮವು, ಆವರಿಸದು=ಅಂಟುವದಿಲ್ಲ, ತಾನೆಕೆಲಸಾರ್ಗು=ತಾನೆಹೊರಟು ಹೋಗುವದು.

**ತಾತ್ಪರ್ಯ:**-ಹಾವನ್ನು ಕಂಡರೆ ಹೆದರಿಕೆ ಸರ್ವರಿಗೆ ಅನುಭವಸಿದ್ಧವಾದದ್ದು ಹಾವುಎಲ್ಲರನ್ನು ಹೆದರಿಸುತ್ತದೆ. ಆದರೆ ಆ ಹಾವಿನಮಂತ್ರವನ್ನು ಬಲ್ಲ ಮಾಂತ್ರಿಕ ನನ್ನಾಗಲಿ, ಅಥವಾ ಗರುಡಗೆರೆಯುಳ್ಳವನನ್ನಾಗಲಿ, ಕಂಡರೆ ಹಾವು ತಾನು ಹೆದರಿ ಅಲ್ಲಿ ನಿಲ್ಲದೆ ಓಡಿಹೋಗುತ್ತದೆ. ಈ ದೃಷ್ಟಾಂತವಂತೆ; ಸಚ್ಚಿದಾನಂದ ಪರಬ್ರಹ್ಮ ದೊಡನೆ ಅಭೇದ ಸಮರಸವುಳ್ಳ ಜೀವನ್ಮುಕ್ತನನ್ನು ಆಗಾಮಿ ಕರ್ಮವುಬಾಧಿಸದು. ಇವನಲ್ಲಿ ಇದಕ್ಕೆ ವಾಸಮಾಡಲು ಸ್ಥಳವಿಲ್ಲದ್ದರಿಂದ ತಾನೇಹೊರಟುಹೋಗುತ್ತದೆ. ಅಂದರೆ, ಜ್ಞಾನಿಯ ಆಗಾಮಿಕರ್ಮವು ಸ್ತುತಿಸಿ ನಿಂದಿಸಿದವರಿಗೆ ಹೋಗುತ್ತದೆ. ಅದು ಜೀವನ್ಮುಕ್ತ ಜ್ಞಾನಿಗೆ ಫಲವನ್ನು ಕೊಡಲಾರದು. ಯಾಕಂದರೆ ಇವನಲ್ಲಿ ಕರ್ತೃತ್ವರೂಪ ಅಭಿಮಾನವಿಲ್ಲ. ಅದರಿಂದ ಕರ್ಮವು ಇವನಿಗೆ ಫಲಕೊಡುವದಿಲ್ಲ. ಯಾರುತಮ್ಮನಿಜವನ್ನು ಮರೆತು ಕರ್ತೃತ್ವಾಭಿಮಾನದಿಂದ ಇರುವರೋ,ಅವರನ್ನು ಮಾತ್ರ ಈ ಕರ್ಮವು ಆವರಿಸಿ ಅವರಿಗೆ ಜನ್ಮಾದಿ ದುಃಖಕ್ಕೆ ಕಾರಣವಾಗಿರುತ್ತ ದೆಂದುತಿಳಿ.

**ಬಳಿಕ:**- ಉಕ್ತ ಮಾತನ್ನುಕೇಳಿ ಶಿಷ್ಯನು ' ಆಗಾಮಿ ಕರ್ಮವು ಮುಕ್ತನಿಗೆ ಅಂಟದೆಂಬುದು ಸರಿಯೇ ಇರುತ್ತದೆ. ಆದರೆ ಅವನು ಪ್ರಾರಬ್ಧ ಕ್ಷಯ ಪರ್ಯಂತರ ದೇಹೇಂದ್ರಿಯಾದಿಗಳೊಡನೆ ಕೂಡಿಕೊಂಡಿರುತ್ತಾನೆ. ಅದರಿಂದ ದೇಹವಿರುವ ಪರ್ಯಂತರ ಅವನಿಗೂ ಆ ದೇಹಾದಿಗಳ ಸಂಬಂಧಿ ದುಃಖವು ತೋರುತ್ತದೆ. ಅಂದರೆ ಆಗಾಮಿಕರ್ಮಸಂಬಂಧಿ ದುಃಖವಿರದಿದ್ದರೂ, ವರ್ತಮಾನ ದೇಹಾದಿಗಳ ದುಃಖವಾದರೂ ಅವನಿಗೆ ಉಂಟೆಂದುಹೇಳಬಹುದು ಎಂದು ಶಿಷ್ಯನು ಶಂಕೆಯನ್ನು ಮಾಡಿದರೆ, ಅದಕ್ಕೆ ಗುರುಗಳು, ಅವನು ದೇಹೇಂದ್ರಿಯಗಳೊಡನೆ ಇದ್ದರೂ ಕಮಲಪತ್ರದಂತೆ ಅಲಿಪ್ತನಾಗಿರುವನು. ಅದರಿಂದ ಅವನಿಗೆ ವರ್ತಮಾನ ದುಃಖವಾದರೂಇಲ್ಲ; ಎಂಬ ಉತ್ತರವನ್ನು ಹೇಳುತ್ತಾರೆ.

ಮತ್ತೆ ತನುಕರಣಾದಿ ಮೊತ್ತದೊಡನಿರ್ದೊಡಾ ।
ಪತ್ತು ಬಂದಡಸ ದತ್ಯಾಶ್ರಮಿಗೆ ಜಲಂ ।
ಪತ್ತದಿಹ ಕಮಲ ದಳದಂತೆ ॥೫॥

**ಟೀಕಾ:**- ಮತ್ತೆ=ಅನಂತರ, ತನುಕರಣಾದಿ=ದೇಹೇಂದ್ರಿ ಮೊದಲಾದವು ಗಳ, ಮೊತ್ತದೊಡನೆ=ಸಮೂಹದಿಂದ, ಇರ್ದೊಡೆ=ಇದ್ದಾಗ್ಯಾದರೂ, ಅತ್ಯಾಶ್ರ

ಮಿಗೆ=ದೇಹಾದ್ಯಭಿಮಾನ ಶೂನ್ಯಜೀವನ್ಮುಕ್ತನಿಗೆ, ಆಪತ್ತು=ದುಃಖವು, ಬಂದು=ಪ್ರಾಪ್ತವಾಗಿ, ಅಡಸದು=ಹತ್ತದು, ಜಲಂ=ನೀರನ್ನು, ಪತ್ತದಿಹ=ಅಂಟದಿರುವ, ಕಮಲದಳದಂತೆ=ಕಮಲ ಪತ್ರದ ಹಾಗೆ.

**ತಾತ್ಪರ್ಯ:-** ಕಮಲದ ಪತ್ರವು ಜಲದಲ್ಲಿದ್ದರೂ, ಜಲಲೇಪವಿಲ್ಲದೆ ಹೇಗೆ ನಿರ್ಲಿಪ್ತವಾಗಿರುವದೋ; ಹಾಗೆ ಜೀವನ್ಮುಕ್ತನು ದೇಹೇಂದ್ರಿಯಾದಿ ಅನಾತ್ಮ ವರ್ಗದೊಡನೆ ಕೂಡಿದ್ದರೂ, ಅವುಗಳ ಸಂಬಂಧಿಯಾದ ದುಃಖವು ಅವನಿಗೆ ಆಗುವದಿಲ್ಲ. ಯಾಕಂದರೆ? ಇಲ್ಲಿ **ಅತ್ಯಾಶ್ರಮಿಯೆಂಬ** ಪದವನ್ನು ಉಪಯೋಗಿಸಿದ್ದಾರೆ. ಇದರ ಮೇಲಿಂದ ಜೀವನ್ಮುಕ್ತನು ದೇಹವರ್ಣಾಶ್ರಮಮಾದಿಗಳ ಅಭಿಮಾನಶೂನ್ಯನಾಗಿರುವನು. ಮತ್ತು ಅಸಂಗನು ಅಕರ್ತಾ ನಿತ್ಯಶುದ್ಧ ಬುದ್ಧ ಚಿನ್ಮಾತ್ರನಾಗಿರುವನೆಂದು ಹೊಳೆಯುತ್ತದೆ. ಆದ್ದರಿಂದ ಅನಾತ್ಮವರ್ಗ ಸಂಬಂಧಿ ದುಃಖದ ಲೇಶವೂ ಅವನಿಗಾಗುವದಿಲ್ಲ.

ಬಳಿಕ, ಶಿಷ್ಯನು— 'ಹೇ ಗುರುವರ್ಯ! ಕೆಸರಲ್ಲಿ ಕಾಲಿಟ್ಟರೆ ಕಾಲಿಗೆ ಕೆಸರು ಅವಶ್ಯ ಹತ್ತುವದು. ಬೆಂಕಿಯ ಮೇಲೆ ಕಾಲಿಟ್ಟರೆ ಅದರ ಝಳ ಹತ್ತುವದು. ಇದರಂತೆ; ದೇಹಾದಿ ಅನಾತ್ಮ ಸಂಘದಲ್ಲಿದ್ದ ಜೀವನ್ಮುಕ್ತನಿಗಾದರೂ, ಅವಶ್ಯವಾಗಿ ದೇಹದ ಜನನಾದಿಗಳು, ಪ್ರಾಣದ ಹಸಿವೆ ತೃಷೆಗಳು, ಮನೋ ಸಂಬಂಧಿ ಸುಖದುಃಖಗಳು, ಬೇಡವೆಂದರೂ ಅವಶ್ಯ ತೋರುತ್ತ ದುಃಖಕ್ಕೆ ಕಾರಣಗಳಾಗಿರುವದು ಕಂಡುಬರುತ್ತದೆ. ಹೀಗಿದ್ದು ಅವನಿಗೆ ಸಂಸಾರ ಸಂಬಂಧಿ ದುಃಖದ ಲೇಪವು ಕಿಂಚಿತ್ತಾದರೂ ಇಲ್ಲೆಂದು ಹೇಗೆ ಹೇಳುವಿರಿ?' ಎಂದು ಕೇಳುತ್ತಿರಲಿಕ್ಕೆ ಗುರುಗಳು 'ಜೀವನ್ಮುಕ್ತ ಜ್ಞಾನಿಯು ದೇಹಾದಿ ಸಂಸಾರದಲ್ಲಿದ್ದಾನೆ. ಅವನಲ್ಲಿ ಸಂಸಾರವಿಲ್ಲ. ಹೇಗಂದರೆ? ಮರದಲ್ಲಿ ಅಗ್ನಿಯು ಅದೆ. ಆದರೆ, ಅಗ್ನಿಯಲ್ಲಿ ಮರವಿಲ್ಲ. ಇದರಂತೆ ಜ್ಞಾನಯೋಗಿಯು ಇರುತ್ತಾನೆಂದು ಉತ್ತರವನ್ನು ಹೇಳುತ್ತಲಿದ್ದಾರೆ.

> **ಮರದೊಳಿಹುದಗ್ನಿಯಾ ಮರನಿಲ್ಲವದರೊಳಂ ।**
> **ತಿರೆ ಯೋಗಿ ಸಂಸರಣದೊಳಿರುತಿಹನು ಸಂ ।**
> **ಸರಣವಾ ಯೋಗಿಯೊಳಗಿಲ್ಲ ॥೬॥**

**ಟೀಕಾ:-** ಅಗ್ನಿಯು=ಬೆಂಕಿಯು, ಮರದೊಳಿಹುದು = ಗಿಡಗಳಲ್ಲಿರುವದು, ಅದರೊಳು=ಅಗ್ನಿಯಲ್ಲಿ, ಆ ಮರನಿಲ್ಲವು=ಆ ಗಿಡವಿರುವದಿಲ್ಲ, ಅಂತಿರೆ=ಹಾಗಿರುವಂತೆ, ಯೋಗಿ=ಜ್ಞಾನಿಯು, ಸಂಸರಣದೊಳು=ದೇದಾದಿ ಸಂಘಾತದಲ್ಲಿ, ಇರುತಿಹನು=ಇರುತ್ತಿರುವನು, ಸಂಸರಣವು = ದೇಹಾದಿಗಳು, ಆ ಯೋಗಿಯೊಳಗಿಲ್ಲ= ಅಸಂಗ ಚಿನ್ಮಾತ್ರನಾದವನಲ್ಲಿಲ್ಲ.

**ತಾತ್ಪರ್ಯ**:-ಹೇ ಶಿಷ್ಯನೇ ಕೇಳು. ಅಗ್ನಿಯು ಎಲ್ಲ ವೃಕ್ಷಗಳಲ್ಲಿಯೂ ಇರುತ್ತದೆ. ಅದರಿಂದ ಗಿಡಗಳು ಬೆಳೆದು ಮೇಲಕ್ಕೆ ಮುಖವಾಗಿ ಬೆಳೆಯುತ್ತವೆ. ಆ ಅಗ್ನಿಯಲ್ಲಿ ಮರವು ಮಾತ್ರ ಇರಲಾರದು. ಇದ್ದರೆ ಸುಟ್ಟು ಬೂದಿಯಾಗುತ್ತದೆ. ಈ ದೃಷ್ಟಾಂತದಂತೆ, ಜ್ಞಾನಯೋಗಿಯು ದೇಹಾದಿ ಅನಾತ್ಮರೂಪ ಸಂಸಾರದಲ್ಲಿ ಇದ್ದಾನೆ. ಆದರೂ ಅವನಲ್ಲಿ ಮಾತ್ರ ದೇಹಾದಿಗಳು ಇಲ್ಲ. ಆವನು ಅಸಂಗ ಶಿವಸ್ವರೂಪನಾಗಿರುತ್ತಾನೆ. ಮತ್ತು ಯೋಗಿಯು ಸಂಸಾರದಲ್ಲಿ ಇದ್ದಾನೆಂದು ಹೇಳುವದಾದರೂ, ನಿನ್ನ ಮಾತಿನಮೇಲೆ ಹೇಳಿದ್ದೇವೆ. ನೀನು ಅನಾತ್ಮದೃಷ್ಟಿಯಿಂದ ಅವನಲ್ಲಿ ದೇಹಾದಿ ಪ್ರಪಂಚವನ್ನು ಆರೋಪಮಾಡಿರುವಿ. ಆದ್ದರಿಂದ ನಿನ್ನ ದೃಷ್ಟಿಯಿಂದ ಸಂಸಾರದಲ್ಲಿದ್ದಾನೆಂದು ಹೇಳಿದ್ದೇವೆ. ನಿಜವಾಗಿ ಆ ಯೋಗಿಯ ಅನುಭವ ದೃಷ್ಟಿಯಿಂದಾಗಲಿ ನಮ್ಮ ಅಭಿಪ್ರಾಯದಿಂದಾಗಲಿ ಅವನಿಗೆ ದೇಹಾದಿಗಳೇ ಇಲ್ಲ. ದೇಹಾದಿಗಳೇ ಇಲ್ಲದಮೇಲೆ, ದೇಹಾದಿ ಸಂಸಾರದಲ್ಲಿದ್ದಾನೆಂಬುದು ಎಲ್ಲೀ ಮಾತು, ಇಲ್ಲವೇ ಇಲ್ಲ. ಇದು ಹಾಗಿರಲಿ, ನಿನ್ನ ಅಭಿಪ್ರಾಯದಂತೆ ವಿಚಾರಮಾಡಿದರೂ ಉಕ್ತ ದೃಷ್ಟಾಂತದಂತೆ ಅವನಲ್ಲಿ ಸಂಸಾರವಿಲ್ಲವೆಂದು ತಿಳಿ.

ಬಳಿಕ, ಶಿಷ್ಯನು:- ದೇಹಾದಿಗಳು ಯೋಗಿಯಲ್ಲಿ ಇಲ್ಲದಿದ್ದರೂ ಇರಲಿ. ಆ ದೇಹಾದಿ ಇಂದ್ರಿಯಗಳಿಂದ ಜನ್ಯವಾದ ಪುಣ್ಯಪಾಪಗಳನ್ನಾದರೂ ಅವನಲ್ಲಿ ಹೇಳಲಿಕ್ಕೆ ಬೇಕಾಗುತ್ತದೆ. ಯಾಕಂದರೆ, ಲೋಕದಲ್ಲಿ ಪುಣ್ಯಮಾಡುವವನಿಗೆ ಪುಣ್ಯಾತ್ಮನೆಂದೂ, ಪಾಪಮಾಡುವವನಿಗೆ ಪಾಪಾತ್ಮನೆಂದೂ, ಕರೆಯುತ್ತಾರೆ. ಮತ್ತು ಎಲ್ಲಿಯವರೆಗೆ ದೇಹೇಂದ್ರಿಯಾದಿಗಳುಂಟೋ, ಅಲ್ಲಿಯವರೆಗೆ ಪುಣ್ಯಾದಿಕ್ರಿಯೆಗಳು ನಡೆಯುತ್ತಿರುತ್ತವೆ. ಆದ್ದರಿಂದ ಜ್ಞಾನಯೋಗಿಗಾದರೂ ಅವಶ್ಯವಾಗಿ ಪುಣ್ಯಾಪಾಪಗಳು ಆಗುತ್ತವೆ. ಅವುಗಳಿಂದ ಅವನು ಯಾಕೆ ಲೇಪಾಯಮಾನನಾಗುವದಿಲ್ಲ? ಆಗುತ್ತಾನೆ:- ಎಂದು ಶಂಕೆಯನ್ನು ಮಾಡಲು? ಅದಕ್ಕೆ ಗುರುಗಳು:- ಆಕಾಶವು ಬೆಳಕು ಕತ್ತಲೆಗಳಿಂದ ಕೂಡಿದರೂ ನಿರ್ಮಲವಾಗಿರುವಂತೆ, ದೇಹೇಂದ್ರಿಯಾದಿಗಳಿಂದಲೂ ಪುಣ್ಯಪಾಪಗಳಿಂದಲೂ ಯೋಗಿಯು ನಿರ್ಮಲ ನಿರ್ಲೇಪನಾಗಿರುತ್ತಾನೆ. ಎಂದು ಉತ್ತರವನ್ನು ಹೇಳುತ್ತಲಿದ್ದಾರೆ.

**ಬೆಳಕು ಕತ್ತಲೆಗಳಂ ತಳೆದೊಡಾಗಸದ ನಿ |**
**ರ್ಮಳವಳಿಯದಂತೆ ತಿಳಿ ಪುಣ್ಯಪಾಪಂಗ |**
**ಳೊಳು ಲೇಪವಿಲ್ಲವರಿದಂಗೆ ||೭||**

**ಟೀಕಾ**:- ಬೆಳಕು ಕತ್ತಲೆಗಳಂ=ತಮಃ ಪ್ರಕಾಶಗಳನ್ನು, ತಳೆದೊಡೆ=ಹೊಂದಿದರೂ, ಆಗಸದ=ಆಕಾಶದ, ನಿರ್ಮಳವು=ಸ್ವಚ್ಛತ್ವವು, ಅಳಿಯದಂತೆ=ನಾಶವಾಗದಹಾಗೆ, ಅರಿದಂಗೆ=ಜ್ಞಾನಯೋಗಿಗೆ, ಪುಣ್ಯಪಾಪಂಗಳೊಳು=ಪುಣ್ಯಪಾಪಗಳಲ್ಲಿ, ಲೇಪವಿಲ್ಲವು=ಸಂಬಂಧವಿಲ್ಲವು, ತಿಳಿ=ಅರಿ.

**ತಾತ್ಪರ್ಯ::-** ನಿರವಯುವ, ನಿರಾಕಾರ, ಪರಿಪೂರ್ಣವಾದ ಆಕಾಶವು; ಹಗಲಲ್ಲಿ ಬೆಳಕಿನಿಂದಲೂ, ರಾತ್ರಿಯ ಕತ್ತಲೆಯಿಂದಲೂ, ಕೂಡಿರುತ್ತದೆ. ಹೀಗಿದ್ದರೂ ಅದರ ನಿರ್ಮಲತ್ವವು ಅಳಿಯದೆ ಉಳಿದಿರುತ್ತದೆ. ಆಕಾಶದ ಅವಕಾಶದಲ್ಲಿಯೇ ಬೆಳಕು ಕತ್ತಲೆಗಳ ವ್ಯವಹಾರವುಂಟು. ಅವುಗಳಿಂದ ಸ್ಪರ್ಶವಿಲ್ಲದೆ ಸದಾ ಶುದ್ಧವಾಗಿಯೇ ಆಕಾಶವು ಇರುತ್ತದೆ. ಈದೃಷ್ಟಾಂತದಂತೆ. ಜೀವನ್ಮುಕ್ತನಾದ ಜ್ಞಾನಯೋಗಿಗೆ ಯಾವ ಪುಣ್ಯಪಾಪ ಕರ್ಮಗಳ ಲೇಪವು ಇರುವದಿಲ್ಲ. ನಿರ್ಲಿಪ್ತ ನಿರ್ಮಲನಿರುವನೆಂಬ ಭಾವವು. ಯಾಕಂದರೆ? **ಅರಿದಂಗೆ** ಎಂದು ಹೇಳಿದ್ದರಿಂದ ತ್ರಿಪುಟಿಗಳ ಸಂಬಂಧಿ ವ್ಯವಹಾರಕ್ಕೆ ಸಾಕ್ಷಿಯಾಗಿ ಅಸಂಗ, ಅಕರ್ತಾ, ಅಭೋಕ್ತಾ, ಲಕ್ಷಣ ಪರಬ್ರಹ್ಮನೇ ತಾನಾಗಿರುತ್ತಾನೆ. ಮತ್ತು ಆಕಾಶದಂತೆ ನಿರಾಕಾರ, ನಿರವಯುವ, ಪರಿಪೂರ್ಣನೂ ಆಗಿರುತ್ತಾನೆ. ಅದರಿಂದ ಪುಣ್ಯ ಪಾಪಾದಿ ಕರ್ಮದಿಂದ **ಲೇಪಾಯಮಾನನಾಗುವದಿಲ್ಲ** ಎಂದು ತಿಳಿ.

ಬಳಿಕ, ಶ್ರೀ ಗುರುಗಳು ಶಿಷ್ಯನನ್ನು ಕುರಿತು, 'ಹೇ ಶಿಷ್ಯನೇ! ಪ್ರಾರಬ್ಧ ಕರ್ಮವು ಭೋಗದಿಂದ ಕ್ಷಯಾವಾಗುತ್ತದೆ. ಸಂಚಿತ ಕರ್ಮರಾಶಿಯು ಬ್ರಹ್ಮಜ್ಞಾನಾಗ್ನಿಯಿಂದ ದಹಿಸಿಹೋಗುತ್ತದೆ. ಆಗಾಮಿಕರ್ಮವು ಲೇಪಿಸುವದಿಲ್ಲ.ಎಂಬುದಕ್ಕೆ ನಿನಗೆ ಇನ್ನೊಂದು ದೃಷ್ಟಾಂತವನ್ನು ಉದಾಹರಿಸುತ್ತೇನೆ' ಎಂದು ಹೇಳುತ್ತಾರೆ.

**ದಾವನಡಿಸಿದ ನಗವನಾವ ಮೃಗಪಕ್ಷಿ ಪುಗ|**
**ವಾ ವಿಧಿಯೊಳಾತ್ಮ ನಿಜನಿಷ್ಠನಂ ಕರ್ಮ|**
**ವಾವರಿಸಲರಿಯದಿದು ಸತ್ಯ ||೮||**

**ಟೀಕಾ:-** ದಾವನು=ಕಾಡ್ಗಿಚ್ಚು, ಅಡಿಸಿದ=ಆವರಿಸಿದ, ನಗವನು-ಬೆಟ್ಟವನ್ನು, ಆವ=ಯಾವ, ಮೃಗಪಕ್ಷಿ=ಮೃಗಪಕ್ಷಿಗಳಾದರೂ, ಪುಗವು=ಸೇರವು, ಆ ವಿಧಿಯೊಳು=ಆ ರೀತಿಯಂತೆ, ಆತ್ಮನಿಜನಿಷ್ಠನಂ=ಬ್ರಹ್ಮನಿಷ್ಠನನ್ನು, ಕರ್ಮವು = ಯಾವಕರ್ಮವಾದರೂ, ಆವರಿಸಲರಿಯದು=ಮುಟ್ಟಲಾರವು, ಇದು ಸತ್ಯ=ಈ ಮಾತು ನಿಜವಿರುತ್ತದೆ.

**ತಾತ್ಪರ್ಯ:-** ಬೇಸಿಗೆಯ ಬಿಸಿಲಲ್ಲಿ ಕಾಡು ಕಿಚ್ಚಿನಿಂದ ಸುಡಹತ್ತಲು; ಆ ಪರ್ವತ ಪ್ರದೇಶದಲ್ಲಿದ್ದ ಮೃಗಪಕ್ಷಿಗಳು ಸರ್ಪಾದಿ ಜೀವಜಂತುಗಳು ಒಂದೂ ಇರುವದಿಲ್ಲ. ಎಲ್ಲವೂ ಆ ಪ್ರದೇಶವನ್ನು ಅಂದರೆ, ಬೆಟ್ಟವನ್ನು ಬಿಟ್ಟು ಪಲಾಯನ ಮಾಡುತ್ತವೆ. ಯಾಕಂದರೆ, ಅವುಗಳ ವಾಸಕ್ಕೆ ಯೋಗ್ಯವಾದ ಗಿಡಗಳ ಗುಂಪು ಬೇಕು. ಅದಿಲ್ಲ ತಿನ್ನಲಿಕ್ಕೆ ಆಹಾರವಿಲ್ಲ. ಕುಡಿಯಲಿಕ್ಕೆ ನೀರಿಲ್ಲ. ಈ ಕಾರಣದಿಂದ ಇದ್ದ ಮೃಗಾದಿಗಳೇ ಪಲಾಯನ ಮಾಡುತ್ತವೆ. ಹೊರಗಿನಿಂದ ಯಾವ ಮೃಗಪಕ್ಷಿ

ಗಳು ಆ ಪರ್ವತವನ್ನು ಸೇರುವದಿಲ್ಲ. ಈ ದೃಷ್ಟಾಂತದಂತೆ, ಬ್ರಹ್ಮಜ್ಞಾನವೆಂಬ ಅಗ್ನಿಯಿಂದ ಯಾವ ಅವಿದ್ಯೆಯೆಂಬ ಅಡವಿಯು ದಹಿಸಲಿಕ್ಕೆ ಹತ್ತಿರುತ್ತದೆ. ಅಲ್ಲಿಂದ ಸಂಚಿತಕರ್ಮಗಳೆಂಬ ಮೃಗಪಕ್ಷಿಗಳು ದಿಕ್ಕೆಟ್ಟು ಓಡಿಹೋಗಹತ್ತಿರುತ್ತವೆ. ಇಂಥಾ ಸಮಯದಲ್ಲಿ ಆಗಾಮಿರೂಪ ಪುಣ್ಯಪಾಪಗಳೆಂಬ ಮೃಗಪಕ್ಷಿಗಳು ಆ ಪರ್ವತವನ್ನು ಬಂದು ಸೇರವು. ಪ್ರಾರಬ್ಧ ಕ್ಷಯಪರ್ಯಂತರ ದೇಹದಿಂದ ಕೂಡಿದ್ದು, ಬಳಿಕ ಅದನ್ನು ತ್ಯಜಿಸಿ ತಾನು ನಿರ್ದೇಹಿಯಾಗಿರುವನು. ಅಂದರೆ, ಜೀವನ್ಮುಕ್ತನು ವಿದೇಹ ಕೈವಲ್ಯವನ್ನು ಹೊಂದುವನೆಂಬ ಭಾವವು. ಆದ್ದರಿಂದ ನಿಜನಿಷ್ಠನಾದ ಜೀವನ್ಮುಕ್ತ ನನ್ನು ಕುರಿತು; **ಯಾವ ಕರ್ಮವಾದರೂ** ಬಾಧಿಸಲರಿಯದೆಂದು ತಿಳಿ.

**ಬಳಿಕ,** ಶಿಷ್ಯನು 'ಹೇ ಗುರುದೇವ! ನಿಜನಿಷ್ಠನಾದ ಜೀವನ್ಮುಕ್ತನು ಜೀವಿಸಿಕೊಂಡು ಇರುವಾಗ್ಯೆ ಅವನಿಗೆ ಯಾವ ಕರ್ಮಾದಿಗಳ ಬಾಧೆಯು ಇರುವದಿಲ್ಲವೆಂದು ಹೇಳಿದಿರಿ. ಹಾಗೇ ಆಗಲಿ. ಆದರೆ ದೇಹವನ್ನು ತ್ಯಾಗಮಾಡುವ ಕಾಲಕ್ಕಾದರೂ ಅವನಿಗೆ ವಿಧಿಯನ್ನು ಹೇಳಬೇಕಾಗುತ್ತದೆ. ಯಾಕಂದರೆ, ಪವಿತ್ರವಾದ ಕಾಶೀ ಕ್ಷೇತ್ರದಲ್ಲಿ ಆಸನದಿಂದ ಕೂತುಕೊಂಡು, ಸ್ವರೂಪದ ಎಚ್ಚರವುಳ್ಳವನಾಗಿ, ದೇಹತ್ಯಾಗವನ್ನು ಮಾಡಿದರೆ ಒಳ್ಳೇದು. ಇಲ್ಲದಿದ್ದರೆ ಕೇಡಾಗುತ್ತದೆಂದು ನಾವು ಕೇಳಿದ್ದೇವೆ. ಆದ್ದರಿಂದ ದೇಹತ್ಯಾಗರೂಪ ಅಂತ್ಯಕಾಲಕ್ಕಾದರೂ ಏನಾದರೊಂದು ವಿಧಿಯನ್ನು ಹೇಳಿರಿ' ಎಂದು ಕೇಳಿದ ಶಿಷ್ಯನನ್ನು ಕುರಿತು; ಗುರುಗಳು 'ಜ್ಞಾನಿಯು ಎಲ್ಲಾಗಲಿ, ಯಾವಕಾಲಕ್ಕಾಗಲಿ, ಹೇಗಾದರೂ ದೇಹತ್ಯಾಗಮಾಡಲಿ. ಅವನು ಹೇಗೆ ದೇಹತ್ಯಾಗ ಮಾಡಿದರೂ ಮುಕ್ತನು. ಅವನಿಗೆ ಇದು ಒಳ್ಳೇದು ಇದು ಕೆಡಕೆಂಬುವು ಯಾವಚಿಂತೆಯೂ ಇಲ್ಲ. ಅವನಿಗೆ ದೇಹತ್ಯಾಗದಲ್ಲಿ ಯಾವವಿಧಿಯನ್ನು ಶಾಸ್ತ್ರವು ಹೇಳುವದಿಲ್ಲ' ಎಂದು ಉತ್ತರವನ್ನು ಕೊಡುತ್ತಾರೆ.

**ಪೊಲಗೇರಿಯೊಳು ಕಾಶಿಯೊಳು ಮರವೆಯರಿವಿನೊಳು।**
**ತಿಳಿದೇಹವಳಿಯ ಊಚನೀಚತೆಗಳಂ।**
**ಡಲೆಯಿಲ್ಲವಾತ್ಮವಿದನಲ್ಲಿ ॥೯॥**

**ಟೀಕಾ:-** ಪೊಲಗೇರಿಯೊಳು=ಅಪವಿತ್ರವಾದ ಹೊಲಗೇರಿಯಲ್ಲಾಗಲಿ, ಕಾಶಿಯೊಳು=ಪವಿತ್ರವಾದ ಕಾಶೀ ಕ್ಷೇತ್ರದಲ್ಲಿಯಾಗಲಿ, ಮರವೆಯರಿವಿನೊಳು= ನಿಜಸ್ವರೂಪದ ಮರವೆಯಿಂದಾಗಲಿ, ಅಥವಾ ಅರುವಿನಿಂದಾಗಲಿ, ದೇಹವಳಿಯಲ್=ದೇಹತ್ಯಾಗವಾದರೂ, ಆತ್ಮವಿದನಲ್ಲಿ=ಜ್ಞಾನಿಯಲ್ಲಿ, ಊಚನೀಚತೆಗಳ= ಉತ್ಕೃಷ್ಟನಿಷ್ಕೃಷ್ಟಗಳ, ಅಂಡಲೆಯಿಲ್ಲವು=ಚಿಂತೆಯೂ ಇರುವದಿಲ್ಲ.

**ತಾತ್ಪರ್ಯ:-** ದೇಹತ್ಯಾಗ ವಿಷಯದಲ್ಲಿ ದೇಶ, ಕಾಲ, ಆಸನ, ಎಚ್ಚರ ಮೊದಲಾದ ನಿಯಮಗಳನ್ನು ಕರ್ಮಿ ಮತ್ತು ಉಪಾಸಕರನ್ನು ಕುರಿತು ಶಾಸ್ತ್ರವು

ಹೇಳುತ್ತದೆ. ನಿಜವರಿದು ನಿಜನಿಷ್ಠರಾದ ಜೀವನ್ಮುಕ್ತ ಜ್ಞಾನಿಗಳನ್ನು ಕುರಿತು ಹೇಳುವದಿಲ್ಲ. ಯಾಕಂದರೆ, ಯಾರು ಪರಿಚ್ಛಿನ್ನ ದೇಹಾತ್ಮ ಬುದ್ಧಿಯುಳ್ಳವರೋ ಅವರಿಗೆ ನಿಯಮವಾಗಿ ದೇಹತ್ಯಾಗವಮಾಡಬೇಕೆಂದು ಶಾಸ್ತ್ರವು ಹೇಳುತ್ತದೆ. ಯಾವ ಜ್ಞಾನಿಯು ಈ ದೇಹವು ನಾನಲ್ಲ, ನನ್ನದಲ್ಲ ಎಂದು ತಿಳಿದಿರುವನೋ, ಅಂದೇ ದೇಹ ತ್ಯಾಗವಾಗಿದೆ. ಅದರಿಂದ ಜ್ಞಾನಿಯನ್ನು ಕುರಿತು ತ್ಯಾಗವಿಧಿಯನ್ನು ಶಾಸ್ತ್ರವು ಹೇಳುವದಿಲ್ಲ. ಮತ್ತು ಅವನಿಗೆ ಹೀಗೆ ದೇಹತ್ಯಾಗ ಮಾಡಬೇಕೆಂಬ ಚಿಂತೆಯೂ ಇಲ್ಲ. ಅದರಿಂದ ಪವಿತ್ರ ಕಾಶಿಯಲ್ಲೇ ಆಗಲಿ, ಅಥವಾ ಹೊಲೆಯರ ಕೇರಿಯಲ್ಲೇ ಆಗಲಿ ಮತ್ತು ನಿಜದ ಎಚ್ಚರವಿರಲಿ, ಇಲ್ಲದಿರಲಿ, ಎಲ್ಲಾದರೂ ದೇಹತ್ಯಾಗ ವಾದರೂ ಅವನು ಮುಕ್ತನೇ ಆಗಿರುವನು. ಅವನಿಗೆ ಕಾಶಿದೇಶದಲ್ಲಿ ನಿಜದ ಸ್ಮರಣೆ ಯಿಂದ ದೇಹತ್ಯಾಗವಾದರೆ ಒಳ್ಳೇದು. ಹೊಲಗೇರಿಯಲ್ಲಿ ವಿಸ್ಮೃತಿಯಿಂದ ದೇಹ ತ್ಯಾಗವಾದರೆ ಕೆಡಕು ಎಂಬ ಚಿಂತೆಯು ಯಾವದೂ ಇಲ್ಲ. ಆದ್ದರಿಂದ ಜ್ಞಾನಿಗೆ ದೇಹತ್ಯಾಗದಲ್ಲಿ ಯಾವ ವಿಧಿನಿಯಮವನ್ನೂ ಹೇಳಲಿಕ್ಕೆ ಬರುವದಿಲ್ಲ.

ಬಳಿಕ, ಶಿಷ್ಯನು 'ಶ್ರೇಷ್ಠವಾದ ವಿಧಿಯನ್ನು ಗ್ರಹಿಸಬೇಕು. ಕನಿಷ್ಠವಾದ ನಿಷೇಧವನ್ನು ಬಿಡಬೇಕು. ಎಂಬ ಚಿಂತೆಯು ಜ್ಞಾನಿಗೆ ಇರಲಿಕ್ಕೇಬೇಕು. ಯಾಕಂದರೆ, ಅವನಿಗೆ ಅರುವುಂಟು. ಅಜ್ಞಾನಿಗಳು ಮಾತ್ರ ಬಿಡಬಹುದು. ಯಾಕಂದರೆ, ಅವರಿಗೆ ಇದುಶ್ರೇಷ್ಠ. ಇದು ಕನಿಷ್ಠ. ಎಂಬ ಅರುವಿಲ್ಲ. ಆದ್ದರಿಂದ ಜ್ಞಾನಿಯು ಶ್ರೇಷ್ಠವಾದ ವಿಧಿಯನ್ನು ಗ್ರಹಿಸಿ, ಕನಿಷ್ಠವಾದ ನಿಷೇಧವನ್ನು ತ್ಯಜಿಸಬೇಕು' ಎಂದು ಶಂಕೆಯನ್ನು ಮಾಡಿದರೆ; ಅದಕ್ಕೆ ಗುರುಗಳು 'ಕಾಶಿವಾಸಿಗೆ ಪುಣ್ಯಪಾಪಗಳೆರಡು ಸಮವಾದಂತೆ, ಜ್ಞಾನಿಗೆ ವಿಧಿನಿಷೇಧಗಳೆರಡು ಸಮನಾಗಿರುತ್ತವೆ. ಅದರಿಂದ ಅವನಿಗೆ ಊಚನೀಚಗಳ ಚಿಂತೆಯಿಲ್ಲ' ಎಂದು ಉತ್ತರ ಕೊಡುತ್ತಾರೆ.

**ಭೇದಿಸಾ ವಿಧಿ ನಿಷೇಧಾದಿಯುಂ ಸಮವೆ ನಿಜ।**
**ವಾದ ಯೋಗೀಂದ್ರನೊಳಗೆ ವಾರಣಾಸಿಯೊ।**
**ಳಾದ ಕರ್ಮದ್ವಯದ ಪಾಂಗು ॥೧೦॥**

**ಟೀಕಾ:-** ಭೇದಿಸೆ=ಚನ್ನಾಗಿ ವಿಚಾರಮಾಡಲು, ನಿಜವಾದ = ಸತ್ಯವಾದ, ಯೋಗೀಂದ್ರನೊಳಗೆ=ಯೋಗೀಶ್ವರನಲ್ಲಿ, ವಿಧಿನಿಷೇಧಾದಿಯುಂ=ವಿಧಿನಿಷೇಧಾದಿ ಗಳು, ಸಮವೆ=ಹೆಚ್ಚು ಕಡಿಮೆಯಿಲ್ಲದೆ ಸಮವಾಗಿರುವವು, (ಹೇಗಂದರೆ) ವಾರಣಾಸಿಯೋಳ್=ಕಾಶಿಯಲ್ಲಿ, ಆದ = ಉಂಟಾದ, ಕರ್ಮದ್ವಯದ ಪಾಂಗು = ಪಾಪ ಪುಣ್ಯಗಳೆರಡರಂತೆ.

**ತಾತ್ಪರ್ಯ:-** ಕಾಶಿಯಲ್ಲಿ ಯಾವ ಪ್ರಾಣಿಯಾದರೂ ಸತ್ತರೆ ಮುಕ್ತನಾಗುತ್ತಾನೆ. ಯಾಕಂದರೆ, ಯಾವ ಪ್ರಾಣಿಯು ಮರಣೋನ್ಮುಖನಾದಾಗ್ಯೆ ಕಾಶೀ ವಿಶ್ವೇಶ್ವರನು ಬಂದು, ಆ ಪ್ರಾಣಿಯ ಬಲಗಿವಿಯಲ್ಲಿ ತಾರಕೋಪದೇಶವನ್ನು ಮಾಡುತ್ತಾನೆ. ಅದರಿಂದ ಸರ್ವ ಪ್ರಾಣಿಗಳು ಕಾಶಿಯಲ್ಲಿ ಮುಕ್ತರಾಗುತ್ತಾರೆ. ಎಂದು ಸ್ಕಂದ ಪುರಾಣಾಂತರ್ಗತ ಕಾಶೀಖಂಡದಲ್ಲಿ ಹೇಳಿದೆ. ಆದ್ದರಿಂದ ಕಾಶೀ ವಾಸಿಗಳಿಗೆ ಪುಣ್ಯ ಪಾಪಗಳು ಊಚ ನೀಚಗಳಾಗಿ ತೋರದೆ, ಸಮವಾಗಿಯೇ ತೋರುತ್ತವೆ. ಯಾಕಂದರೆ, ಪುಣ್ಯ ಪಾಪಗಳಿಂದ ಏನೂ ಫಲವಿಲ್ಲ. ಈ ದೃಷ್ಟಾಂತದಂತೆ ಜ್ಞಾನಿಯಾದರೂ **ವಿಧಿನಿಷೇಧಗಳೆರಡು ಸಮನಾಗಿರುತ್ತವೆ.** ಯಾಕಂದರೆ, ಅವು ಫಲಗಳನ್ನು ಕೊಡದ ಕಾರಣ ವಿಧಿನಿಷೇಧಗಳಿಂದ ಅವನಿಗೆ ಏನೂ ಪ್ರಯೋಜನವಿಲ್ಲ. ಅಜ್ಞಾನಿ ಜನರು ಭೇದಬುದ್ಧಿಯುಳ್ಳವರಾದ್ದರಿಂದ ಅವರಿಗೆ ಹೆಚ್ಚು ಕಡಿಮೆ ತೋರುತ್ತದೆ. ಜ್ಞಾನಿಗೆ ತೋರುವದಿಲ್ಲ.

ಬಳಿಕ, ಶಿಷ್ಯನು 'ಪವಿತ್ರ ಪ್ರದೇಶದಲ್ಲಿ ಆಸನಸ್ಥನಾಗಿ ಸ್ವರೂಪದೆಚ್ಚರದಿಂದ ದೇಹವನ್ನು ಬಿಡಬೇಕು, ಇಲ್ಲದಿದ್ದರೆ, ಮುಕ್ತಿಯಾಗದೆ ಜನ್ಮಾಂತರವನ್ನು ಹೊಂದಬಹುದು. ಯಾಕಂದರೆ, **'ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜಂತ್ಯಂತೆ ಕಲೇವರಂ'** ದೇಹತ್ಯಾಗವನ್ನು ಮಾಡುವ ಸಮಯದಲ್ಲಿ ಯಾವ ಸ್ಮರಣೆಯನ್ನು ಮಾಡುತ್ತಾನೋ, ಅದೇ ಜನ್ಮವನ್ನು ಹೊಂದುತ್ತಾನೆ. ಆದ್ದರಿಂದ ದೇಹವಿಯೋಗ ಕಾಲಕ್ಕೆ ನಿಜದ ಎಚ್ಚರು ಬೇಕು. ಹೀಗೆಂದು ಗೀತಾವಾಕ್ಯವದೆ. ನಿಜದೆಚ್ಚರಿಲ್ಲದೆ ಜಡಭರತನು ಚಿಗರಿಯ ವಾಸನೆಯಿಂದ ದೇಹಬಿಟ್ಟು, ಚಿಗರಿಯಾಗಿ ಹುಟ್ಟಿದನೆಂಬ ಕಥೆಯೂ ಉಂಟು. ಆದ್ದರಿಂದ ವಿಧಿಬೇಕಾಗುತ್ತದೆ. ಇಲ್ಲದೆ ಹೋದರೆ; ಮುಕ್ತಿಯಾಗಲಿಕ್ಕಿಲ್ಲ' ಎಂದು ಶಂಕೆಯನ್ನು ಮಾಡಲು, ಅದಕ್ಕೆ ಗುರುಗಳು 'ಮರವನ್ನೇರಿದವನು ನಿಂತಟೊಂಗೆ ಮುರಿಯಲಾಗಿ ಬೀಳಲಿಕ್ಕೆ ಇಚ್ಛೆಯಿಲ್ಲದಿದ್ದರೂ, ಅವಶ್ಯ ಹೇಗೆ ಬೀಳುತ್ತಾನೋ, ಹಾಗೆ ತತ್ವಜ್ಞಾನಿಗೆ ಮುಕ್ತಿಯು ಬಯಸದಿದ್ದರೂ ಅವಶ್ಯವಾಗುತ್ತದೆ. ಎಂದು ಉತ್ತರವನ್ನು ಕೊಡುತ್ತಲಿದ್ದಾರೆ.

**ಮರದ ಕೊನೆ ಮುರಿದೊಡಲ್ಲಿರುತಿರ್ಪವಂ ಬೀಳ್ವ |**
**ವಿಸಸಕ್ಕೆ ಬಯಸದಿರಲೆಂತು ಬೀಳ್ವನಾ |**
**ಪರಿ ತತ್ತ್ವದರ್ಶಿಗಹ ಮುಕ್ತಿ ||೧೧||**

**ಟೀಕಾ:-** ಮರದಕೊನೆ=ಗಿಡದ ಟೊಂಗೆಯು, ಮುರಿದೊಡೆ=ಮುರಿಯಲು, ಅಲ್ಲಿರುತಿರ್ಪವಂ=ಆ ಟೊಂಗೆಯ ಮೇಲಿದ್ದವನು, ಬೀಳ್ವವಿರಸಕ್ಕೆ=ಉರಳಿ ಬೀಳುವದಕ್ಕೆ, ಬಯಸದಿರಲ್=ಇಚ್ಛೆ ಮಾಡದಿದ್ದರೂ, ಎಂತು=ಹೇಗೆ, ಬೀಳ್ವನು= ಪಾತವಾಗುವನೋ, ಆ ಪರಿ=ಅದರಂತೆ, ತತ್ತ್ವದರ್ಶಿಗೆ=ಜ್ಞಾನಿಗೆ, ಅಹಮುಕ್ತಿ= ಮುಕ್ತಿಯು ಆಗುವದು.

**ತಾತ್ಪರ್ಯ**:- ದೇಹತ್ಯಾಗದಲ್ಲಿ ನಿಜದ ಎಚ್ಚರವನ್ನು ಹೇಳಿದ ಗೀತಾ ವಾಕ್ಯವು ಉಪಾಸಕನಿಗೆ ಹೇಳಿದ ಮಾತಾಗಿದೆ ಹೊರತು ತತ್ವಜ್ಞಾನಿಯನ್ನು ಕುರಿತು ಹೇಳಿಲ್ಲ. ವಾಸನಾ ಮೂಲಕ ಜನ್ಮೋತ್ಪತ್ತಿಯಾದರೂ ಸಾಧಕರಿಗೆ ಹೇಳಿದೆ. ಜ್ಞಾನಸಿದ್ಧನಿಗೆ ಹೇಳಿಲ್ಲ. ಜ್ಞಾನಿಯು ಮುಕ್ತಿ ಬೇಕೆಂದು ಬಯಸುವದೂ ಇಲ್ಲ. ಅವನು ಮುಕ್ತಿಯನ್ನು ಬಯಸದಿದ್ದರೂ ತಪ್ಪದೆ ಮುಕ್ತಿಯು ಅವನಿಗೆ ಲಭಿಸುತ್ತದೆ. ಹೇಗಂದರೆ, ಮರದ ಮೇಲೇರಿ ನಿಂತವನು ಕಾಲಲ್ಲಿರುವ ಟೊಂಗೆ ಮುರಿದೊಡನೆ, ಬೀಳಲಿಕ್ಕೆ ಒಲ್ಲೆನೆಂದರೂ ಹೇಗೆ ಅವಶ್ಯ ಬೀಳುವನೋ; ಹಾಗೆ ತತ್ವಜ್ಞಾನಿಯು ಮುಕ್ತಿ ಬಯಸದಿದ್ದರೂ ಮುಕ್ತನಾಗುತ್ತಾನೆ. ಆದ್ದರಿಂದ ಜ್ಞಾನಿಯು ಮುಕ್ತಿಯಸಲುವಾಗಿ **ಯಾವವಿಧಿ ನಿಯಮವನ್ನು** ಅವಲಂಬಿಸುವದಿಲ್ಲ.

**ಬಳಿಕ**, ಶಿಷ್ಯನು:- ಪವಿತ್ರಕಾಶಿ ದೇಶವಿಧಿಯನ್ನು ಹೇಳದಿದ್ದರೂ ಉತ್ತರಾಯಣಾದಿ **ಕಾಲವಿಧಿಯನ್ನಾದರೂ** ಹೇಳಲಿಕ್ಕೇಬೇಕು. ಯಾಕಂದರೆ, ಗೀತೆಯಲ್ಲಿ ಎಂಟನೇ ಅಧ್ಯಾಯದ ಇಪ್ಪತ್ತುನಾಲ್ಕನೇ ಶ್ಲೋಕದಲ್ಲಿ **ಅಗ್ನಿ ಜ್ಯೋತಿರಹಃಶುಕ್ಲ**:- ಬ್ರಹ್ಮವಿದರು ಉತ್ತರಾಯಣದಲ್ಲಿ ಬ್ರಹ್ಮನನ್ನು ಹೊಂದುತ್ತಾರೆ. ಎಂದು ಹೇಳಿದೆ. ಆದ್ದರಿಂದ ದೇಹತ್ಯಾಗವನ್ನು ಮಾಡುವಾಗ್ಯ ಉತ್ತರಾಯಣವನ್ನು ಕಂಡು ದೇಹತ್ಯಾಗಮಾಡಬೇಕಾಗುತ್ತದೆ:- ಎಂದು ಶಂಕೆಯನ್ನು ಮಾಡಿದರೆ; ಅದಕ್ಕೆ ಗುರುಗಳು:- ಕಾಲಾಪೇಕ್ಷೆಯು ಉಪಾಸಕನಿಗೆ ಇರುತ್ತದೆಂದು ಅಲ್ಲಿ ಹೇಳಿದೆ. ಯಾವ **ಬ್ರಹ್ಮನಿಷ್ಠ ಜೀವನ್ಮುಕ್ತನು** ಉಪಾಸಕರಂತೆ ಯಾವ **ಲೋಕಕ್ಕೂ ಹೋಗುವದಿಲ್ಲ**. ಕರ್ಮಿಗಳು ಧೂಮಮಾರ್ಗದಿಂದ ಸ್ವರ್ಗಕ್ಕೆ ಹೋಗಿ ಮರಳುವಂತೆ ಇವನು **ತಿರುಗಿ ಬರುವದಿಲ್ಲ**. ಯಾಕಂದರೆ; ಇವನು ಪರಿಪೂರ್ಣನಾದ್ದರಿಂದ ಗಮನಾಗಮನರಹಿತನಾಗಿರುತ್ತಾನೆ. ಅದರಿಂದ ಕಾಲವಿಧಿಯೂ ಜ್ಞಾನಿಗಳಿಗೆ ಇಲ್ಲೆಂದು ತಿಳಿ- ಎಂಬದಾಗಿ ಉತ್ತರವನ್ನು ಹೇಳುತ್ತಾರೆ.

**ವಿದಿತ ಧೂಮಾದಿ ಮಾರ್ಗದೊಳರ್ಚಿರಾದಿ ಮಾ।**
**ರ್ಗದೊಳೈದಿ ಮರಳಲಿಲ್ಲವಾತಂ ಪೂರ್ಣ।**
**ಪದವೆ ತಾನಾದ ಕಥದಿಂದೆ ॥೧೨॥**

**ಟೀಕಾ**:- ಆತಂ=ಜ್ಞಾನಿಯು, ವಿದಿತ=ಪ್ರಸಿದ್ಧವಾದ, ಧೂಮಾದಿ ಮಾರ್ಗದೊಳು=ದಕ್ಷಿಣಾಯನದಿಂದಾಗಲಿ, ಅರ್ಚಿರಾದಿ ಮಾರ್ಗದೊಳು=ಉತ್ತರಾಯಣದಿಂದಾಗಲಿ, ಐದಿ=ಹೋಗಿ, ಮರಳಲಿಲ್ಲವು=ತಿರಿಗಿಬರಲಿಲ್ಲ, ಪೂರ್ಣಪದವೆ ತಾನಾದ ಕಥದಿಂದೆ=ತ್ರಿವಿಧ ಪರಿಚ್ಛೇದರಹಿತ ಪೂರ್ಣಸ್ವರೂಪನೇ ತಾನಾಗಿರುವದರಿಂದ.

**ತಾತ್ಪರ್ಯ:-** ಶ್ರೀಮದ್ಭಗವದ್ಗೀತೆಯ ಎಂಟನೇಅಧ್ಯಾಯದ ಇಪ್ಪತ್ತನಾಲ್ಕು ಇಪ್ಪತ್ತೈದು ಈ ಎರಡು ಶ್ಲೋಕಗಳಲ್ಲಿ;ಅರ್ಚಿರಮಾರ್ಗ,ಧೂಮಮಾರ್ಗ, ಇವೆರಡು ಹೇಳಲ್ಪಟ್ಟವೆ. ಅಗ್ನಿ, ಜ್ಯೋತಿ, ಹಗಲು, ಶುಕ್ಲಪಕ್ಷ, ಪುಷ್ಯಮಾಸದಿಂದ ಜೇಷ್ಠದವರೆಗೆ ಆರುತಿಂಗಳಕಾಲ ಉತ್ತರಾಯಣವೆನಿಸುವದು. ಈ ಉತ್ತರಾಯಣ ದಲ್ಲಿ ದೇಹತ್ಯಾಗವನ್ನು ಮಾಡಿದ ಬ್ರಹ್ಮೋಪಾಸಕರು ಆ ಅಗ್ನ್ಯಾದಿ ದೇವತೆಗಳ ಸಹಾಯದಿಂದ ಬ್ರಹ್ಮಲೋಕವನ್ನು ಹೊಂದುತ್ತಾರೆ. ಅಲ್ಲಿ ಅವರು ಕ್ರಮವಾಗಿ ಬ್ರಹ್ಮಜಿಜ್ಞಾಸವನ್ನು ಮಾಡಿ ಮುಕ್ತರಾಗುತ್ತಾರೆ. ತಿರಗುವದಿಲ್ಲ. ಎಂದು ಹೇಳಿದೆ. ಇಲ್ಲಿ ಹಗಲು, ಶುಕ್ಲಪಕ್ಷ, ಎಂಬಲ್ಲಿ ಹಗಲದೇವತೆ, ಶುಕ್ಲಪಕ್ಷ ದೇವತೆಯೆಂದು ದೇವತೆಗಳನ್ನು ಗ್ರಹಣಮಾಡಬೇಕು. ಈರೀತಿ ಉಪಾಸಕರಿಗೆ ದೇಹತ್ಯಾಗನಂತರ **ಅರ್ಚಿರಮಾರ್ಗದಿಂದ** ಬ್ರಹ್ಮಲೋಕಕ್ಕೆ ಗಮನವನ್ನು ಹೇಳಿದ್ದಾರೆ. ಇದು ಸದ್ಯೋನ್ಮುಕ್ತನಾದ **ಜ್ಞಾನಿಯನ್ನು** ಕುರಿತು ಹೇಳಿಲ್ಲ. ಯಾಕಂದರೆ; ಅವನ ಪ್ರಾಣಗಳು ಯಾವ ಲೋಕಕ್ಕೂ ಪ್ರಯಾಣಮಾಡುವದಿಲ್ಲೆಂದು ಶ್ರುತಿಯು ಹೇಳು ತ್ತದೆ '**ನ ತಸ್ಯ ಪ್ರಾಣಾ ಉತ್ಕ್ರಾಮಂತಿ ಅತ್ರೈವ ಸಮವಲೀಯಂತೆ** 'ಜೀವನ್ಮುಕ್ತನಾದ ಜ್ಞಾನಿಯ ಪ್ರಾಣಗಳು ಲೋಕಾಂತರ ಪ್ರಯಾಣಮಾಡದೆ, ಅವನ ಪ್ರತ್ಯಗಾತ್ಮಸ್ವರೂಪದಲ್ಲಿಯೇ **ಲೀನಗಳಾಗುತ್ತವೆ.** ಎಂದು ಹೇಳುತ್ತದೆ. ಆದ್ದರಿಂದ ಜ್ಞಾನಿಗೆ ಗಮನವಿಲ್ಲ. ಉಪಾಸಕನು ಅರ್ಚಿರ ಮಾರ್ಗ ಅಂದರೆ ಪ್ರಕಾಶ ಯುಕ್ತ ಮಾರ್ಗದಿಂದ ಪ್ರಯಾಣವನ್ನು ಮಾಡಬಹುದು.

ಮತ್ತು ಕರ್ಮಿಗಳು ಧೂಮ ಮಾರ್ಗದಿಂದ ಸ್ವರ್ಗಾದಿಗಳಿಗೆ ಹೋಗಿ ಭೋಗ ವನ್ನುಂಡು ಅಲ್ಲಿಂದ **ತಿರುಗಿ ಬರುತ್ತಾರೆ.** ಹೇಗಂದರೆ, ಧೂಮ,ರಾತ್ರಿ, ಕೃಷ್ಣಪಕ್ಷ, ಆಷಾಢದಿಂದ ಮಾರ್ಗಶೀರ್ಷದವರೆಗೆ ಆರುತಿಂಗಳ ಕಾಲವು ದಕ್ಷಿಣಾಯನ, ಈ ಧೂಮಾದಿ ದೇವತೆಗಳ ಸಹಾಯದಿಂದ ಕರ್ಮಿಗಳು ಚಂದ್ರಲೋಕಕ್ಕೆ ಹೋಗಿ, ಸೋಮರೂಪದಿಂದ ಪ್ರಕಾಶದ್ವಾರಾ-**ಸ್ವರ್ಗಕ್ಕೆ ಹೋಗುತ್ತಾರೆ.** ಅಲ್ಲಿ ಕರ್ಮಫಲ ವನ್ನು ಅನುಭವಿಸಿ, ಶೇಷಕರ್ಮವನ್ನು ಕಟ್ಟಿಕೊಂಡು ಈ ಲೋಕಕ್ಕೆ ತಿರಿಗಿ ಬರು ತ್ತಾರೆಂದು ಹೇಳುವದು **ಧೂಮಮಾರ್ಗವಾಗಿದೆ.**

ಉಕ್ತಪ್ರಕಾರ ಉಪಾಸಕರು:ಪ್ರಕಾಶ ಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋಗು ತ್ತಾರೆ. ಕರ್ಮಿಗಳು ಧೂಮ ಮಾರ್ಗದಿಂದ ಸ್ವರ್ಗಕ್ಕೆ ಹೋಗಿ ತಿರುಗಿ ಬರುತ್ತಾರೆ. ಇವರಂತೆ ಜ್ಞಾನಿಗೆ ಹೋಗುವದು ಬರುವದು ಇಲ್ಲ. ಯಾಕಂದರೆ, ಆಕಾಶದಂತೆ ಪರಿಪೂರ್ಣಸ್ವರೂಪನಾದ್ದರಿಂದ ಗಮನಾಗಮನಗಳು ಇಲ್ಲ. ಆದ್ದರಿಂದಲೇ ಉತ್ತರಾಯಣಾದಿ **ಕಾಲವಿಧಿಯೂ** ಜೀವನ್ಮುಕ್ತ ಜ್ಞಾನಿಗೆ ಇಲ್ಲೆಂದು ತಿಳಿ.

**ಬಳಿಕ,** ಶಿಷ್ಯನು 'ಜ್ಞಾನಿಗೆ ಲೋಕಾಂತರ ಗಮನವು ಇಲ್ಲದೆ ಹೋದರೂ ಹೋಗಲಿ. ಆದರೆ, ಎಲ್ಲಿಯವರೆಗೆ ಇಲ್ಲಿ ಜೀವಿಸಿಕೊಂಡು ಇರುವನೋ ಅಲ್ಲಿಯ

ತನಕಾದರೂ, ಅವನು ಎಲ್ಲಜನರಿಗಿಂತಲೂ ವಿಲಕ್ಷಣನಾಗಿದ್ದು, ಇವನು ಜ್ಞಾನಿಯಿದ್ದಾನೆ. ಮುಕ್ತನಿರುವನು. ಎಂದು ಎಲ್ಲರೂ ತಿಳಿಯಬೇಕು. ಹೀಗೆ ಎಲ್ಲರು ತಿಳಿಯಬೇಕಾದರೆ, ಇವನು ಅಣಿಮಾದ್ಯಷ್ಟ ಸಿದ್ಧಿಗಳಿಂದ ಜಗತ್ತಿಗೆ ಅನೇಕ ಮಹಿಮೆಗಳನ್ನು ತೋರಿಸುತ್ತಿರಬೇಕು. ಅಣಿಮಾದಿ ಸಿದ್ಧಿಗಳಿಂದ ಕೂಡಿರಬೇಕು.' ಎಂದು ಶಂಕೆಯನ್ನು ಮಾಡಲು, ಅದಕ್ಕೆ ಗುರುಗಳು 'ಜ್ಞಾನಿಯ ದೃಷ್ಟಿಯಲ್ಲಿ ಆ ಅಣಿಮಾ ಮಹಿಮಾ, ಗರಿಮಾದಿ ಸಿದ್ಧಿಗಳು ಜಡ, ಭ್ರಾಂತಿ, ಮಿಥ್ಯೆಗಳಾಗಿವೆ. ಅದರಿಂದ ಜ್ಞಾನಿಯು ಅವುಗಳನ್ನು ಅಪೇಕ್ಷೆಮಾಡುವದಿಲ್ಲ' ಎಂದು ಉತ್ತರವನ್ನು ಹೇಳುತ್ತಾರೆ.

**ಇಂತಪ್ಪವಂಗಣಿಮೆ ಮುಂತಾದವಿಲ್ಲದಿಹು ।**
**ದೆಂತೆಂದೊಡಾತನವನೆಲ್ಲಮಂ ಜಡ ।**
**ಭ್ರಾಂತಿಯೆಂದೆಳಸದಿಹನೈಸೆ ॥೧೩॥**

**ಟೀಕಾ:-** ಇಂತಪ್ಪವಂಗೆ=ಇಂಥಾ ಮುಕ್ತನಾದ ಜ್ಞಾನಿಗೆ, ಅಣಿಮೆ=ಅಣಿಮಾದಿಗಳೇ, ಮುಂತಾದವು= ಮೊದಲಾದ ಸಿದ್ಧಿಗಳು, ಇಲ್ಲದಿಹುದು= ಇಲ್ಲದಿರುವದು, ಎಂತೆಂದೊಡೆ=ಹೇಗಂದರೆ, ಆತನು=ಜ್ಞಾನಿಯು, ಅವನೆಲ್ಲಮಂ=ಆ ಸಿದ್ಧಿಗಳನ್ನು, ಜಡಭ್ರಾಂತಿಯೆಂದು= ದೃಶ್ಯಮಿಥ್ಯೆಗಳೆಂದು. ಎಳಸದಿಹನೈಸೆ= ಇಚ್ಛೆಯನ್ನು ಮಾಡದಿರುವನು.

**ತಾತ್ಪರ್ಯ:-** ಇಂಥಾ ಜೀವನ್ಮುಕ್ತ ಸಮ್ಯಕ್ ಜ್ಞಾನಿಯು ಅಣಿಮಾದಿ ಸಿದ್ಧಿಗಳಿಂದ ಜಗತ್ತಿನ ಜನರಿಗೆ ಮಹಿಮೆಗಳನ್ನು ತೋರಿಸದೆಹೋದರೆ, ಅವನಿಗೆ ಜ್ಞಾನೀ ಮುಕ್ತನೆಂದು ನಾವು ಹೇಗೆ ತಿಳಿಯೋಣ? ಎಂದು ನೀನು ಹೇಳಬಹುದು. ಆದರೆ ಜ್ಞಾನಿಯು ಅವುಗಳನ್ನು ಮಿಥ್ಯೆಯೆಂದು ತಿಳದಿರುತ್ತಾನೆ. ದೃಶ್ಯತ್ವ, ಜಡತ್ವ, ಮಿಥ್ಯಾ ಲಕ್ಷಣಾತ್ಮಕ ಸಿದ್ಧಿಗಳನ್ನು ಅವನು ಇಚ್ಛಿಸಲಾರನು. ಅಣಿಮಾದಿ ಸಿದ್ಧಿಗಳಿಂದ ಮಹಿಮಾ ಪುರುಷನೆಂದು ಜನರಿಂದ ಹೊಗಳಿಸಿಕೊಂಡವನು ಎಂದೂ ಮುಕ್ತನಾಗಲಾರನು. ಆ ಅಣಿಮಾದಿ ಮಹಿಮೆಗಳು ಏನೊಂದಿಲ್ಲದೆ ತನ್ನ ನಿಜವನ್ನು ಅರಿತವನು ಮುಕ್ತನೇ ಇರುವನು. ಅಣಿಮಾದಿ ಸಿದ್ಧಗಳಿದ್ದರೆ ಮುಕ್ತನೆಂದಾಡುವ ಜನರ ಮಾತು ಅಜ್ಞಾನವಾಗಿದೆ. ಅಜ್ಞಾನಿಗಳಿಂದಾಡಿದ ಮಾತಿಗೆ ನಿಜವೆಂದು ಬಲ್ಲವರು ನಂಬರು. ಆದ್ದರಿಂದ ಸಮ್ಯಕ್ ಆತ್ಮತತ್ವದರ್ಶಿಯೇ ಮುಕ್ತನು, ಎಂದು ನಿಶ್ಚಯಿಸು.

**ಬಳಿಕ,** ಒಂದು ವೇಳೆ ಜ್ಞಾನಿಯಾಗಿದ್ದು ಸಿದ್ಧಿಗಳನ್ನು ಇಚ್ಛಿಸಿದರೆ; ಮಂತ್ರಗಳ ಪಠನ ಬಲದಿಂದ ಪ್ರಾಪ್ತಿಮಾಡಿಕೊಳ್ಳಬಹುದೆಂದು ನಿರೂಪಣಮಾಡುತ್ತಾರೆ.

ಆ ಸರ್ವಸಿದ್ಧಿಗಳಿಗಾಸೆ ಮಾಡಿದೊಡೆ ತಾ ।
ನಾಸಾಧನಂಗಳನು ಮಂತ್ರಮುಖದೊಳ ।
ಭ್ಯಾಸವಂ ಮಾಡೆ ದೊರಕೊಳ್ಳು                ॥೧೪॥

**ಟೀಕಾ:-** ಆ ಸರ್ವಸಿದ್ಧಿಗಳಿಗೆ=ಆ ಅಣಿಮಾದಿ ಸಿದ್ಧಿಗಳಿಗೆ, ಆಶೆಮಾಡಿದೊಡೆ=ಅಪೇಕ್ಷೆಯನ್ನು ಮಾಡಿದರೆ, ತಾನು=ಅವನು, ಸಾಧನಂಗಳನು=ಸಾಧನಗಳನ್ನು, ಮಂತ್ರಮುಖದೊಳು=ಮಂತ್ರದಿಂದ, ಅಭ್ಯಾಸವಂ=ಅನುಷ್ಠಾನವನ್ನು, ಮಾಡೆ=ಮಾಡಿದರೆ, ದೊರಕೊಳ್ಳು=ದೊರೆಯುತ್ತವೆ.

**ತಾತ್ಪರ್ಯ:.** ಜೀವನ್ಮುಕ್ತ ಜ್ಞಾನಿಯು ಮಿಥ್ಯೆಯಾದ ಸಿದ್ಧಿಗಳಿಂದೇನು ಪ್ರಯೋಜನವಿಲ್ಲೆಂದು ತಿಳಿದು ಬಿಡಬಹುದು. ಅಥವಾ ಬೇಕೆಂದು ಇಚ್ಛಿಸಿದರೆ, ಮಂತ್ರಾದಿಗಳನ್ನು ಪಠಿಸಿ ಅನುಷ್ಠಾನಮಾಡಿ ಆ ಅಣಿಮಾದಿ ಸಿದ್ಧಿಗಳನ್ನು ಪಡೆಯಬಹುದು. ಮಂತ್ರಶಾಸ್ತ್ರಗಳಲ್ಲಿ ಯಾವಯಾವ ಮಂತ್ರಗಳನ್ನು ಹೇಗೆ ಅನುಷ್ಠಾನ ಮಾಡಬೇಕು. ಅವುಗಳಿಂದ ಯಾವ ಸಿದ್ಧಿಗಳಾಗುತ್ತವೆಂಬುದನ್ನು ಪ್ರತಿಪಾದಿಸಿದ್ದಾರೆ. ಆ ಮಂತ್ರಗಳನ್ನು ನೋಡಿ ಅಭ್ಯಾಸಮಾಡಿ ಪಡೆಯುಬಹುದು. ಅಣಿಮಾದಿ ಸಿದ್ಧಿಗಳಿಂದ ಮಹಿಮಾ ಪುರುಷನೆಂದು ಹೊಗಳಿಸಿಕೊಳ್ಳುವದು ಇದು ದೊಡ್ಡದಲ್ಲ. ಸಾಧನಗಳಿಂದ ಸಾಧ್ಯಮಾಡಿಕೊಳ್ಳಬಹುದೆಂಬ ಭಾವವು.

**ಬಳಿಕ,** ಶಿಷ್ಯನು 'ಮಂತ್ರಾದಿ ಸಾಧನಗಳಿಂದ ಅಣಿಮಾದಿ ಸಿದ್ಧಿಗಳು ಸಾಧ್ಯವಾದರೆ; ಪ್ರತಿಯೊಬ್ಬ ಜ್ಞಾನಿಯು ಸಿದ್ಧಿಗಳನ್ನು ಪಡೆಯಲಿಕ್ಕೇಬೇಕೆಂದು ತಾವು ಆಜ್ಞೆಯನ್ನು ಮಾಡಬಹುದು'ಎಂದು ಶಂಕೆಯನ್ನುಮಾಡಿದರೆ, ಅದಕ್ಕೆ ಗುರುಗಳು 'ಆ ಸಿದ್ಧಿಗಳು ಜಡ, ದೃಶ್ಯ, ಮಿಥ್ಯೆಗಳೆಂದು ತಿಳಿದಕಾರಣ ಅವುಗಳನ್ನು ಇಚ್ಛಿಸುವದಿಲ್ಲ. ಅವನಿಗೆ ಮೋಹಕವಾಗಲಿ ಬಾಧಕವಾಗಲಿ ಯಾವದೂ ಇಲ್ಲ. ಜ್ಞಾನಿಯು ಕೃತಕೃತ್ಯನಾಗಿರುತ್ತಾನೆ. ಎಂದು ಹೇಳುತ್ತಾರೆ

ಹಿಡಿವ ಮೋಹಕವಿಲ್ಲ ಬಿಡುವ ಬಾಧಕವಿಲ್ಲ।
ಪಡೆವಗತಿಯಾಸೆ ಮೊದಲಿಲ್ಲ ಯೋಗಿಗವು।
ಜಡದೃಶ್ಯಮಿಥ್ಯೆಯುಹವಾಗಿ                ॥೧೫॥

**ಟೀಕಾ:-** ಹಿಡಿವ=ಗ್ರಹಿಸಲಿಕ್ಕೆ ಯೋಗ್ಯವಾದ, ಮೋಹಕವಿಲ್ಲ=ಸುಖವಿಷಯವಿಲ್ಲ, ಬಿಡುವ=ಬಿಡಲಿಕ್ಕೆ ಯೋಗ್ಯವಾದ, ಬಾಧಕವಿಲ್ಲ=ದುಃಖವು ಯಾವದೂ ಇಲ್ಲ. ಪಡೆವ=ಹೊಂದಲಿಕ್ಕೆ ಯೋಗ್ಯವಾದ, ಗತಿಯಾಸೆ=ಪದದಾಶೆಯು, ಮೊದ

ಲಿಲ್ಲ=ಪೂರ್ವದಲ್ಲಿಯೇ ಇಲ್ಲವು, ಯೋಗಿಗೆ=ಜ್ಞಾನಿಗೆ, ಅವು=ಹೇಳಿದ ವಿಷಯ ಗಳು, ಜಡ=ಜ್ಞಾನವಿಲ್ಲದವು, ದೃಶ್ಯ=ಕಾಣಿಸಿಕೊಂಬುವು, ಮಿಥ್ಯೆಯು=ತೋರಿ ಅಡಗುವಂಥವುಗಳು, ಆಹವಾಗಿ=ಇರುವದರಿಂದ;

**ತಾತ್ಪರ್ಯ:-** 'ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪ ಶ್ಯತಃ'ಯಾವ ಸಚ್ಚಿದಾನಂದ ನಿತ್ಯಪರಿಪೂರ್ಣ ಪರಬ್ರಹ್ಮದೊಡನೆ ಏಕತ್ವ ನಿಶ್ಚಯ ಜ್ಞಾನವುಳ್ಳವನಾಗಿ, ಅಹಂ ಬ್ರಹ್ಮಾಸ್ಮಿಯೆಂಬ ಬ್ರಹ್ಮಾಪರೋಕ್ಷ ಜ್ಞಾನ ಅವಸ್ಥೆಯಲ್ಲಿ, ಮೋಹಕವಾದ ವಸ್ತು ಯಾವದೂ ಇಲ್ಲ. ಯಾಕಂದರೆ, ಬ್ರಹ್ಮ ಕ್ಕಿಂತಲೂ ದೊಡ್ಡದು ಮತ್ತೊಂದು ಇಲ್ಲವೆಂಬ ಭಾವವು. ಶೋಕವೆಲ್ಲಿಯೆಂದು ಹೇಳುವದರಿಂದ ದುಃಖವು ಯಾವದೂ ಇಲ್ಲ ಎಂಬ ಭಾವವು. ದುಃಖವು ಅಂದರೆ ತನ್ನ ಮರತ ಅವಿದ್ಯೆಯೇ ಮೂಲದುಃಖವು. ಅದು ಜ್ಞಾನದಿಂದ ನಾಶವಾಗಿ ಹೋಗಿದೆ. ಇದರ ವ್ಯತಿರಿಕ್ತವಾಗಿ ತ್ಯಜಿಸಲಿಕ್ಕೆ ಯೋಗ್ಯವಾದ ದುಃಖವೂ ಇಲ್ಲ. ಪರಮಾನಂದರೂಪ ತನ್ನ ಸ್ವರೂಪವೇ ತನಗೆ ಗತಿಯಾಗಿದೆ. ಇದಕ್ಕಿಂತಲೂ ಹೆಚ್ಚಿನ ಯಾವ ಗತಿಯೂ ಇಲ್ಲ. ಆದ್ದರಿಂದ ಪಡೆಯಬೇಕೆಂಬ ಗತಿಯಾಶೆಯೂ ಇಲ್ಲ. ಪರಮಾನಂದರೂಪ ತನ್ನ ನಿಜಸ್ಥಿತಿರೂಪ ಗತಿಗಿಂತಲೂ ಅನ್ಯ ಗತಿಗಳೆಲ್ಲವು ಅನಿತ್ಯ ಹೇಯ ಗತಿಗಳು ಆಗಿವೆ. ಹೀಗೆ ತಿಳಿದವನು ಅನ್ಯಗತಿಗಳಾಶೆಯನ್ನು ಮಾಡ ಲಾರನು. ಅರ್ಥಾತ್ ಉಕ್ತ ತನ್ನ ಸ್ವರೂಪಕ್ಕಿಂತ ಯಾವು ಭಿನ್ನಗಳೆಂದು ಹೇಳಿಸಿ ಕೊಳ್ಳುವವೋ, ಅವೆಲ್ಲಾ ಜಡತ್ವ, ದೃಶ್ಯತ್ವ, ಮಿಥ್ಯತ್ವಗಳಾದ್ದರಿಂದ ಪಡೆಯಲಿಕ್ಕೆ ಯೋಗ್ಯಗಳಲ್ಲವೆಂದು ತಿಳದಿರುತ್ತಾನೆ. ಆದ್ದರಿಂದ ಜ್ಞಾನಿಗೆ ಮೋಹಕ, ಬಾಧಕ ಗತಿ ಮೊದಲಾದವುಗಳು ಯಾವೂ ಇಲ್ಲ. ಅದರಿಂದ ಅವನಿಗೆ ಯಾವ ಕರ್ತವ್ಯವೂ ಇಲ್ಲ. ಜ್ಞಾನಿಯು ಕೃತಕೃತ್ಯನಾಗಿರುತ್ತಾನೆಂಬ ಭಾವವು.

ಬಳಿಕ, ಶಿಷ್ಯನು-'ಜ್ಞಾನಿಯು ಏನನ್ನು ಬೇಡುವದಿಲ್ಲ. ಪ್ರಯತ್ನಶೂನ್ಯ ನಾಗಿರುತ್ತಾನೆಂದು ಹೇಳಿದಿರಿ. ಹೀಗೆ ಪ್ರಯತ್ನಶೂನ್ಯನಾಗಿದ್ದರೆ, ದೇಹಾದಿಗಳ ಜೀವನವು ಕೂಡಾ ನಡೆಯಲಾರದು. ದೇಹಸ್ಥಿತಿಗತಿಗೆ ಕಾರಣಗಳಾದ ಅನ್ನ ವಸ್ತ್ರಾದಿಗಳನ್ನು ಅವಶ್ಯ ಪ್ರಯತ್ನಪೂರ್ವಕ ಸಂಪಾದಿಸಬೇಕಾಗುತ್ತದೆ. ಇಲ್ಲ ದಿದ್ದರೆ, ಜೀವಿಸುವದೇ ಕಷ್ಟವಾದೀತು. ಆದ್ದರಿಂದ ಜ್ಞಾನಿಗಾದರೂ ಪ್ರಯತ್ನ ವನ್ನು ಹೇಳಲೇಬೇಕು. ದೇಹವಿರುವತನಕ ಯಾವುದಾದರೊಂದು ಕಾರ್ಯವನ್ನು ಮಾಡಲೇಬೇಕು' ಎಂದು ಶಂಕೆಯನ್ನು ಮಾಡಿದರೆ, ಅದಕ್ಕೆ ಗುರುಗಳು 'ಜ್ಞಾನಿಯು ಇಚ್ಛಾ ಯತ್ನಗಳಿಲ್ಲದೆ ಸುಮ್ಮನಿದ್ದರೂ, ಪ್ರಾರಬ್ಧಕರ್ಮದಿಂದ ಭೋಗಗಳು ತಾವೇ ಬರುತ್ತವೆ. ಶರೀರಭೋಗಕ್ಕಾಗಿ ಅವನು ಪ್ರಯತ್ನವನ್ನು ಏನು ಮಾಡಬೇಕಾಗಿಲ್ಲ.' ಎಂದು ಸಾಗರದ ದೃಷ್ಟಾಂತಪೂರ್ವಕ ಉತ್ತರವನ್ನು ಹೇಳುತ್ತಾರೆ.

**ಹಾನಾದಿಯತ್ನಂಗಳೇನುಮಿಲ್ಲದ ಯೋಗಿ ।**
**ಗೀ ನಿಖಿಳ ಭೋಗವಹವು ತಾವೇ ಶರಧಿ ।**
**ಗಾನದಿಗಳ್ಳೈದೆ ಬೆರೆವಂತೆ ॥೧೬॥**

**ಟೀಕಾ:-** ಹಾನ=ತ್ಯಾಗ, ಆದಿ = ಗ್ರಹಣ ಮೊದಲಾದ, ಯತ್ನಂಗಳು= ಪ್ರಯತ್ನಗಳು, ಏನುಂ=ಯಾವದೂ, ಇಲ್ಲದ=ರಹಿತನಾದ, ಯೋಗಿಗೆ=ಜ್ಞಾನಿಗೆ, ಈ ನಿಖಿಳ=ಪ್ರತ್ಯಕ್ಷ ತೋರುವೆಲ್ಲ, ಭೋಗವು = ಭೋಗಗಳು, ತಾವೇ = ಇಚ್ಛಾ ಪ್ರಯತ್ನಂಗಳಿಲ್ಲದಿದ್ದರೂ, ಶರಧಿಗೆ=ಸಮುದ್ರಕ್ಕೆ, ಆ ನದಿಗಳು=ಗಂಗಾ ತುಂಗಾದಿ ಗಳು, ಐದೆ=ಚನ್ನಾಗಿ, ಬೆರೆವಂತೆ=ಕೂಡುವ ಹಾಗೆ, ಅಹವು=ಆಗುವವು.

**ತಾತ್ಪರ್ಯ:-** ಕೃತಕೃತ್ಯನಾದ ಜೀವನ್ಮುಕ್ತ ಜ್ಞಾನಿಯು ಏನೊಂದು ಪ್ರಯತ್ನವಿಲ್ಲದೆ ಸುಮ್ಮನಿದ್ದರೂ, ಸಮುದ್ರಕ್ಕೆ ನದಿಗಳು ತಾವಾಗಿಯೇ ಬಂದು ಸೇರಿದಂತೆ, ಯಾವತ್ತು ಭೋಗಗಳು ತಾವೇ ಬರುತ್ತವೆ. ಸಮುದ್ರನಾಥನು ನದಿ ಗಳು ತನ್ನನ್ನು ಸೇರಲಿ ಎಂಬದಾಗಿ ಇಚ್ಛಾ ಪ್ರಯತ್ನಗಳನ್ನು ಮಾಡಿಲ್ಲ. ಸೇರಲಿಕ್ಕೆ ಬಂದ ನದಿಗಳಿಗೆ ಬೇಡ ಎಂಬದಾಗಿ ಅವುಗಳನ್ನು ತ್ಯಾಗವೂ ಮಾಡಿಲ್ಲ. ಅಂದರೆ ಗ್ರಹಣತ್ಯಾಗ ಪ್ರಯತ್ನರಹಿತನಾಗಿದ್ದಾನೆ. ಹಾಗು ಆ ನದಿಗಳು ತುಂಬಿ ಬಂದರೆ ಸಂತೋಷವುಳ್ಳವನಾಗಿ ಹಿಗ್ಗಿ ಮೇರೆದಪ್ಪುವದಿಲ್ಲ. ಬೇಸಿಗೆಯಲ್ಲಿ ನದಿಗಳು ನೀರಿಲ್ಲದೆ ಬತ್ತಿ ಬಂದರೆ, ತಾನು ಕುಗ್ಗಿ ಕಡಿಮೆಯಾಗುವದಿಲ್ಲ. ಯಾವಾಗಲೂ ಒಂದೇ ರೂಪು ಳ್ಳವನಾಗಿ ತನ್ನ ಗಾಂಭೀರ್ಯ ಅಚಲಸ್ಥಿತಿಯಿಂದಲೇ ಕೂಡಿಕೊಂಡಿರುತ್ತಾನೆ. ಈ ದೃಷ್ಟಾಂತದಂತೆ, ಜ್ಞಾನಿಯು ಕೂಡಾ ಪರಿಪೂರ್ಣ ಅಚಲವಾದ ಸ್ವರೂಪ ಸ್ಥಿತಿಯಿಂದ ಗಂಭೀರ್ಯನಾಗಿಯೇ ಇರುತ್ತಾನೆ. ಹೇಗಂದರೆ; ಕನಸಾದಿಭೋಗ ಗಳು ಬಂದರೆ, ಅವುಗಳಿಂದ **ಹಿಗ್ಗುವದಿಲ್ಲ.** ಭೋಗಗಳು ಕಳೆದುಹೋದರೆ ಕುಗ್ಗು **ವದಿಲ್ಲ.** ಹಿಗ್ಗು ತಗ್ಗುಯಿಲ್ಲದೆ ಸಮಭಾವರೂಪ ನಿಜಶಾಂತಿಯಿಂದಲೇ ಇರುತ್ತಾನೆ. ಗ್ರಹಣ ತ್ಯಾಗವಿಲ್ಲದೆ, ಸುಖ ದುಃಖಗಳಿಲ್ಲದೆ, ನಿಜಸ್ಥಿತಿಯಲ್ಲಿ ಸಹಜವಾಗಿರುವ ಜ್ಞಾನಿಯೊಬ್ಬನೇ ಜಗತ್ತಿನಲ್ಲಿ **ಸುಖಿ**ಯಾಗಿರುತ್ತಾನೆ. ಅನ್ಯರು ಬೇಕು ಬೇಡ ಎಂಬುವರಾಗಿರುವದರಿಂದ ಎಲ್ಲರು ದುಃಖಿಗಳಾಗಿರುತ್ತಾರೆಂಬ ಭಾವವು. **'ಭ್ರಮಿ ಸದೆ ಭೋಗವನುಣುತಂ ತಾನು। ಸ್ತಿಮಿತಾಂಬುಧಿಯಂತಿರಲೆತ್ತಾನು'** ಎಂದು ಪರಮಾರ್ಥ ಗೀತೆಯಲ್ಲಿ ಹೇಳಿದ್ದಾರೆ. ಈ ಅರ್ಥಕ್ಕೆ ಮೂಲವಾದದ್ದು ಭಗವದ್ಗೀ ತೆಯ ಎರಡನೇ ಅಧ್ಯಾಯದ **'ಆಪೂರ್ಯಮಾಣಮಚಲ ಪ್ರತಿಷ್ಠಂ'** ಎಪ್ಪತ್ತ ನೆಯ ಶ್ಲೋಕವಿರುತ್ತದೆ. ವಿಸ್ತಾರಭಯದಿಂದ ಬರೆಯುವದನ್ನು ಬಿಟ್ಟಿದ್ದೇವೆ. ಅಲ್ಲಿ ಇನ್ನೂ ವಿಶೇಷವಾಗಿ ಈ ಅರ್ಥವನ್ನು ನೋಡಬಹುದು. ಆದ್ದರಿಂದ ಕೃತಕೃತ್ಯ ನಾದ ಜ್ಞಾನಿಯು ಪ್ರಯತ್ನಮಾಡದಿದ್ದರೂ, ಅವನಿಗೆ ಪ್ರಾರಬ್ಧ ಪರಿಚಾರಕ ನಿಂದ ಭೋಗಗಳು ತಾವೇ ಬರುತ್ತವೆಂದು ತಿಳಿ ಎಂಬ ಭಾವವು.

**ಬಳಿಕ,** ಶಿಷ್ಯನು'ಉಕ್ತ ಪ್ರಕಾರ ಅನೇಕ ಭೋಗಗಳು ತಾವಾಗಿಯೇ ಬಂದು ಸೇರಲು; ಜ್ಞಾನಯೋಗಿಯು ಆ ಭೋಗಗಳಲ್ಲಿ ಲುಬ್ಧನಾಗಿ ವಿಷಯಾಸಕ್ತನಾಗ ಬಹುದು. ಭೃಂಗವು ಕಮಲದ ರೂಪಕ್ಕೂ ಗಂಧಕ್ಕೂ ಮೋಹಿಸಿ ಪ್ರಾಣವನ್ನು ಕಳೆದು ಕೊಂಡಂತೆ; ಜ್ಞಾನಿಯಾದರೂ ಭೋಗಗಳಲ್ಲಿ ಮಗ್ನಚಿತ್ತನಾಗಬಹುದು. ಆದರಿಂದ ಪ್ರಾಪ್ತವಾದ ಜ್ಞಾನವು ನಷ್ಟವಾಗಬಹುದು. ಹೀಗಾದರೆ; ಅನರ್ಥವೇ ಒದಗುತ್ತದೆ 'ಎಂದು ಶಂಕೆಯನ್ನು ಮಾಡಲು; ಅದಕ್ಕೆ ಗುರುಗಳು '**ಅಸತಿ ಪತಿಯಲ್ಲಿ ಉದಾಸೀನವಿದ್ದಂತೆ;** ಮುಕ್ತನಾದ ಜ್ಞಾನಿಯು ಭೋಗದಲ್ಲಿ **ಉದಾಸೀನನಾಗಿರುತ್ತಾನೆ.** ಅದರಿಂದ ಯಾವ ಅನರ್ಥವು ಬರುವದಿಲ್ಲ ಎಂದುತ್ತರವನ್ನು ಕೊಡುತ್ತಾರೆ.

**ಮಾನವಿಲ್ಲದ ಯೋಗಿಗಾನಿಖಿಳಭೋಗ ಸಂ |**
**ಧಾನದೊಡನೆಸತಿ ನಿಜಪತಿಯೊಳೆಂತುದಾ |**
**ಸೀನವಂತೆರಕವಣುವಿಲ್ಲ** ||೧೭||

**ಟೀಕಾ:-** ಅಸತಿ=ವ್ಯಭಿಚಾರಣಿಯು, ನಿಜಪತಿಯೊಳು=ತನ್ನ ಗಂಡನಲ್ಲಿ, ಎಂತು=ಹೇಗೆ, ಉದಾಸೀನವು = ಔದಾಸೀನದಿಂದ ಇರುವಳೋ, ಅಂತೆ=ಹಾಗೆ, ಮಾನವಿಲ್ಲದ=ಭೋಕ್ತೃತ್ವದ ಅಭಿಮಾನವಿಲ್ಲದ, ಯೋಗಿಗೆ=ಜ್ಞಾನಯೋಗಿಗೆ, ಆ ನಿಖಿಳ=ಆ ಸಕಲ, ಭೋಗಸಂಧಾನದೊಡನೆ=ಭೋಗ್ಯಗಳನ್ನು ಪಭೋಗಿಸುವ ಕಾಲಕ್ಕಾದರೂ, ಎರಕವು=ಭೋಗತತ್ಪರತೆಯು, ಅಣುವಿಲ್ಲ=ಕಿಂಚಿತ್ತಾದರೂ ಇರುವದಿಲ್ಲ.

**ತಾತ್ಪರ್ಯ:-** ಪತಿಯಿದ್ದು ಜಾರತನವನ್ನು ಮಾಡುವಂಥವಳಿಗೆ ಅಸತಿಯೆಂಬ ಹೆಸರುಂಟು. ಮನೆಯಲ್ಲಿ ಪತಿಯೊಡನೆ ಅಸತಿಯು ಬಹುಪ್ರೇಮವನ್ನು ತೋರಿಸುತ್ತಾ, ಎಲ್ಲ ಮನೆಯ ಕೆಲಸಗಳನ್ನು ಮಾಡುತ್ತಾಹೋಗುತ್ತಾಳೆ. ಹೊರಗಿನವರಿಗೆ ಗಂಡನ ಮೇಲೆ ಪ್ರೀತಿಯಿದ್ದಂತೆ ನಟಿಸಿದರೂ, ಒಳಗೆ ಮಾತ್ರ ಪ್ರೀತಿಯಿಲ್ಲ. ಕಿಂತು; ಗಂಡನಲ್ಲಿ ಉದಾಸೀನತೆಯುಂಟು. ಉಪಪತಿಯಲ್ಲಿ ಮಾತ್ರ ಯಾವಾಗಲೂ ಪ್ರೀತಿಯುಳ್ಳವಳಾಗಿರುತ್ತಾಳೆ. ಈ ದೃಷ್ಟಾಂತದಂತೆ; ಜೀವನ್ಮುಕ್ತ ಜ್ಞಾನಿಯಾದರೂ ಭೋಗದಲ್ಲಿ ಬೆರತಂತೆ ಕಂಡರೂ, ಒಳಗೆ ಮಾತ್ರ ಭೋಗಗಳಲ್ಲಿ **ಉದಾಸೀನನಾಗಿರುತ್ತಾನೆ.** ಮತ್ತು ತನ್ನ ನಿಜಸ್ವರೂಪದಲ್ಲಿಯೇ **ನಿಷ್ಠಾಯುಕ್ತನಾಗಿರುತ್ತಾನೆ.** ಆದ್ದರಿಂದ '**ಉದಾಸೀನವದಾಸೀನಃ**' ಗೀತೆಯಲ್ಲಾದರೂ ಜೀವನ್ಮುಕ್ತ ಸ್ಥಿತಪ್ರಜ್ಞನು ಭೋಗದಲ್ಲಿ ಉದಾಸೀನನಂತೆ ಇರುತ್ತಾನೆಂದು ಹೇಳಿರುತ್ತದೆ. ಆದ್ದರಿಂದ ಜ್ಞಾನಿಗಳಿಗೆ ಭೋಗದಿಂದ ಆವ ಹಾನಿಯೂ ಇಲ್ಲೆಂದು ತಿಳಿ. ಎಂಬ ಭಾವವು.

**ಬಳಿಕ, ಜ್ಞಾನಯೋಗಿಗಳಿಗೆ ಯಾವ ಬಾಧೆಯಾಗಲಿ ಅನರ್ಥವಾಗಲಿ ಆಗುವದಿಲ್ಲೆಂಬುವದಕ್ಕೆ ಶ್ರುತಿವಾಕ್ಯ ಪ್ರಮಾಣವನ್ನು ಉದಾಹರಿಸುತ್ತಲಿದ್ದಾರೆ.**

**ವೇದವರಿದಂಗಾವ ಬಾಧೆಯಿಲ್ಲೆಂದು ತಾ।**
**ನೋದಿ ಪೇಳುವದು ಜ್ಞಾತ್ವಾದಿ ವಾಕ್ಯದೊಳ।**
**ಗಾದರಿಸಿ ನೀನು ತಿಳಿಬೋಧ್ಯ ॥೧೮**

**ಟೀಕಾ:-** ವೇದವು=ಉಪನಿಷತ್ತು, ಅರಿದಂಗೆ=ತನ್ನ ನಿಜವನ್ನು ತಾನು ತಿಳಿದವನಿಗೆ, ಆವಬಾಧೆಯಿಲ್ಲೆಂದು=ಯಾವ ದುಃಖವೂ(ಅನರ್ಥವು)ಆಗುವದಿಲ್ಲೆಂದು, ತಾನೋದಿ ಪೇಳುವದು=ತಾನೇಕೂಗಿ ಹೇಳುವದು, ಜ್ಞಾತ್ವಾದಿ ವಾಕ್ಯದೊಳಗೆ= ಸ್ವಯಂಪ್ರಕಾಶರೂಪ ಸಾಕ್ಷಿಯೇ ನಾನೆಂದು ಯಾವಾತನು ತಿಳಿಯುವನೋ; ಅವನು ಸಕಲ ದುಃಖಗಳಿಂದ ಬಿಡುಗಡೆ ಹೊಂದುತ್ತಾನೆಂಬ ವಾಕ್ಯವನ್ನು, ಬೋಧ್ಯ=ಶಿಷ್ಯನೇ! ನೀನು=ನೀನು, ಆದರಿಸಿ=ಚನ್ನಾಗಿ ವಿಚಾರಮಾಡಿ, ತಿಳಿ=ಅರಿ.

**ತಾತ್ಪರ್ಯ:-** ತನ್ನ ನಿಜವನ್ನು ಬಲ್ಲಜೀವನ್ಮುಕ್ತ ಜ್ಞಾನಿಗೆ ಯಾವ ಹಾನಿಯೂ ಬರುವದಿಲ್ಲ. ಅವನು ಸಕಲ ದುಃಖಗಳಿಂದ ಬಿಡಗಡೆ ಹೊಂದಿರುತ್ತಾನೆ. ಎಂದು ಶ್ರುತಿವಾಕ್ಯವು ಹೇಳುತ್ತದೆ. ಅದುಯಾವದು? ಅಂದರೆ ಕೇಳು '**ಜ್ಞಾತ್ವಾದೇವಂ ಸರ್ವಪಾಶೈಃ ಮುಚ್ಯತೆ,** ಈ ದೇಹದಲ್ಲಿ ಅಪರೋಕ್ಷನಾದ ಸ್ವಯಂಪ್ರಕಾಶ ಸಾಕ್ಷಿ ಪರಬ್ರಹ್ಮನೇ ನಾನಿರುವೆನೆಂದು ನಿಶ್ಚಯವಾಗಿ ತಿಳದಿರುವನೋ, ಅವನಿಗೆ ಯಾವ ಅನರ್ಥವೂ ಇಲ್ಲ. ಸಕಲ ದುಃಖಗಳಿಂದ ಮುಕ್ತನಾಗುತ್ತಾನೆಂದು ಶ್ರುತಿವಾಕ್ಯವು ಪ್ರಸಿದ್ಧವಾಗಿ ಕೂಗಿ ಹೇಳಿರುತ್ತದೆ. ನಿನಗೆ ಸಂಶಯ ಬಂದರೆ, ಹೇ ಶಿಷ್ಯನೇ ಆ ಶ್ರುತಿವಾಕ್ಯವನ್ನು ಚನ್ನಾಗಿ ವಿಚಾರಮಾಡಿ ತಿಳಿ. ಎಂದು ಹೇಳಿದರು,

**ಬಳಿಕ, ಸಂಧಿಯಲ್ಲಿರುವ ಪದ ಸೂತ್ರಾದಿಗಳ ಸಂಖ್ಯೆಯನ್ನು ತಿಳಿಸುತ್ತಾ ಸಂಧಿಯನ್ನು ಉಪಸಂಹಾರ ಮಾಡುತ್ತಾರೆ.**

**ಏಳು ಸೂತ್ರಂ ತ್ರಿವಿದಿಯೇಳರೊಡನೆಂಭತ್ತು।**
**ಮೇಳವಿಸುತ್ತೆ ಮುಕ್ತರುಗಳಿರವ ನಿದು।**
**ಪೇಳುತಿಹುದೇಳನೆಯಸಂಧಿ ॥೧೯॥**

**ಟೀಕಾ:-** ಏಳುಸೂತ್ರಂ=ಸೂತ್ರಗಳು ಏಳು, ತ್ರಿವಿದಿ ಏಳರೊಡನೆಂಭತ್ತು= ಎಂಭತ್ತೇಳು ತ್ರಿವಿದಿಗಳು, ಮೇಳವಿಸುತ್ತೆ=ಕೂಡಿಸುತ್ತಿರಲಾಗಿ, ಮುಕ್ತರುಗಳ= ಜೀವನ್ಮುಕ್ತರ, ಇರವನು=ಸ್ವರೂಪವನ್ನು, ಪೇಳುತಿಹುದು=ಹೇಳುತ್ತಿರುವದು, ಇದು ಏಳನೆಯಸಂಧಿ=ಏಳನೆಯಸಂಧಿಯೆನಿಸುವದು.

ತಾತ್ಪರ್ಯ:– ಈ ಏಳನೆಯಸಂಧಿಯಲ್ಲಿ ಸೂತ್ರಗಳು ಏಳುಂಟು. ತ್ರಿವಿದಿಗಳು ಏಂಭತ್ತೇಳು ಇರುತ್ತವೆ. ಈ ಏಳನೆಯ ಸಂಧಿಯಲ್ಲಿ ಮುಖ್ಯವಾಗಿ ಜೀವನ್ಮುಕ್ತರ ಸ್ವರೂಪ ಲಕ್ಷಣಗಳನ್ನು ಪ್ರತಿಪಾದಿಸಿರುತ್ತದೆ. ಇಲ್ಲಿಗೆ ಏಳನೆಯ ಸಂಧಿಯು ಸಮಾಪ್ತವಾಗಿರುತ್ತದೆ.

ನಿರ್ಲೇಪಸ್ಥಿತಿ ನಿರೂಪಣೆ ಸೂತ್ರ ೭ ಕ್ಕೆ ತ್ರಿವಿದಿಗಳು ೮೭

ಅಂತು ಸಂಧಿ ೭ ಕ್ಕಂ ಸೂತ್ರ ೪೧ ಕ್ಕಂ ತ್ರಿವಿದಿ ೪೮೫ ಕ್ಕಂ

ಮಂಗಳಮಸ್ತು



ಮತ್ತು ಶಿಷ್ಯನು ಶ್ರೀ ಗುರುಗಳನ್ನು ಕುರಿತು, ಅರಿಯತಕ್ಕ ಅಂಶಗಳಿದ್ದರೆ, ತಿಳಿಸಬೇಕು ಎಂದು ಪ್ರಶ್ನೆಯನ್ನು ಮಾಡುತ್ತಾನೆ.

**ಸೂತ್ರ॥ ಇನ್ನು ತಿಳಿವಂಶವೇನುಂಟವೆಲ್ಲವನೊಲವಿ।**
**ನಿಂ ನೀನೆ ದೇಶಿಕೋತ್ತಮ ಕರುಣಿಸು॥**

**ಟೀಕಾ:–** ಹೇ ದೇಶಿಕೋತ್ತಮ=ಹೇ ಮಾರ್ಗನಿರ್ದೇಶಕರಲ್ಲಿ ಶ್ರೇಷ್ಠನಾದ ಗುರುವರ್ಯನೇ!, ಇನ್ನು=ಮತ್ತು, ತಿಳಿವ=ಅರಿಯುವ, ಅಂಶವೇನುಂಟು=ಭಾಗ ವೇನಾದರಿದ್ದರೆ, ಅವೆಲ್ಲವನು=ಆ ಸಕಲ ವಿಷಯಗಳನ್ನು, ಒಲವಿನಿಂ=ಪ್ರೀತಿ ಯಿಂದ, ನೀನೆ=ನೀನೇ, ಕರುಣಿಸು=ಕೃಪೆಯನ್ನು ಮಾಡು.

**ತಾತ್ಪರ್ಯ:–** ಹೇ ಗುರುವೇ! ಮತ್ತೂ ತಿಳಿಯತಕ್ಕ ವಿಷಯಗಳೇನಾ ದರೂ ಇದ್ದರೆ; ಅವುಗಳನ್ನು ತಾವೇ ನನಗೆ ತಿಳಿಸಬೇಕು. ನನಗೆ ಅವುಗಳಜ್ಞಾನ ವಿಲ್ಲ. ಏನು ತಿಳಿಯಬೇಕೆಂಬುವದೂ ನನಗೆ ಗೊತ್ತಿಲ್ಲ. ತಾವು ಮಾರ್ಗವನ್ನು ತೋರಿಸುವಂಥವರಾದ್ದರಿಂದ ತಮಗೆ **ದೇಶಿಕರೆಂಬ** ನಾಮವು ಬಂದಿರುತ್ತದೆ. ಅವರಲ್ಲಿಯೂ ತಾವು ಶ್ರೇಷ್ಠರಾಗಿರುವಿರಿ. ಜನನ ಮರಣರೂಪ ಭವಾರಣ್ಯ ದಲ್ಲಿ ತೊಳಲುವಂಥಾ ಜೀವಿಗಳಿಗೆ ನೀವೇ ಮಾರ್ಗವನ್ನು ತೋರಿಸಿರಿ. ತಮಗೆ ಗೊತ್ತುಂಟು. ಅದನ್ನು ತಿಳಿಸಿ ನನ್ನನ್ನು ಉದ್ಧಾರಮಾಡಬೇಕು. ಮತ್ತು ಏನನ್ನು ತಿಳದರೆ, ಸಂಸಾರ ದುಃಖದಿಂದ ಪಾರಾಗಬಹುದು. ಎಂದು ಶಿಷ್ಯನು ವಿನಯ ದಿಂದ ಬೇಡಿಕೊಳ್ಳುತ್ತಿರುವನು.

ಬಳಿಕ, ಗ್ರಂಥಕರ್ತರು ಸಂಧಿಯ ಆರಂಭದಲ್ಲಿ, ಇಷ್ಟದೇವತೆಯಾದ ಶ್ರೀ ಶಂಭುವಿನನ್ನು ಕುರಿತು; ನಮಸ್ಕಾರರೂಪ ಮಂಗಳವನ್ನು ಮಾಡುತ್ತಾರೆ.

**ಭಯಶೋಕರಹಿತಂಗೆ ಜಯಶಕ್ತಿಸಹಿತಂಗೆ।**
**ನಯಸಾರಸೌಖ್ಯ ವಿಹಿತಂಗೆ ಪಾರ್ವತೀ।**
**ಪ್ರಿಯಶಂಭುವಿಂಗೆ ನತನಪ್ಪೆ ॥೧॥**

**ಟೀಕಾ:-** ಭಯಶೋಕರಹಿತಂಗೆ=ಭಯಶೋಕಗಳಿಂದ ರಹಿತನಾದವನಿಗೆ, ಜಯಶಕ್ತಿಸಹಿತಂಗೆ=ಜಯನಾಮಕ ಶಕ್ತಿಯಿಂದ ಕೂಡಿದವನಿಗೆ, ನಯ=ಮನೋ ಹರವಾದ, ಸಾರ=ಶ್ರೇಷ್ಠವಾದ, ಸೌಖ್ಯ=ಸುಖದಿಂದ, ವಿಹಿತಂಗೆ=ಕೂಡಿಕೊಂಡಿರು ವವನಿಗೆ, ಪಾರ್ವತಿಪ್ರಿಯ=ಪಾರ್ವತಿದೇವಿಗೆ ಪ್ರಿಯಕರನಾದ, ಶಂಭುವಿಂಗೆ= ಶಂಭುಲಿಂಗೇಶ್ವರನಿಗೆ, ನತನಪ್ಪೆ=ನಮಸ್ಕಾರ ಮಾಡುವಾತನಾಗುತ್ತೇನೆ.

ಮತ್ತು ಶಿಷ್ಯನು ಶ್ರೀ ಗುರುಗಳನ್ನು ಕುರಿತು, ಅರಿಯತಕ್ಕ ಅಂಶಗಳಿದ್ದರೆ, ತಿಳಿಸಬೇಕು ಎಂದು ಪ್ರಶ್ನೆಯನ್ನು ಮಾಡುತ್ತಾನೆ.

**ಸೂತ್ರ|| ಇನ್ನು ತಿಳಿವಂಶವೇನುಂಟವೆಲ್ಲವನೊಲವಿ|**
**ನಿಂ ನೀನೆ ದೇಶಿಕೋತ್ತಮ ಕರುಣಿಸು||**

**ಟೀಕಾ:–** ಹೇ ದೇಶಿಕೋತ್ತಮ=ಹೇ ಮಾರ್ಗನಿರ್ದೇಶಕರಲ್ಲಿ ಶ್ರೇಷ್ಠನಾದ ಗುರುವರ್ಯನೇ!, ಇನ್ನು=ಮತ್ತು, ತಿಳಿವ=ಅರಿಯುವ, ಅಂಶವೇನುಂಟು=ಭಾಗ ವೇನಾದರಿದ್ದರೆ, ಅವೆಲ್ಲವನು=ಆ ಸಕಲ ವಿಷಯಗಳನ್ನು, ಒಲವಿನಿಂ=ಪ್ರೀತಿ ಯಿಂದ, ನೀನೆ=ನೀನೇ, ಕರುಣಿಸು=ಕೃಪೆಯನ್ನು ಮಾಡು.

**ತಾತ್ಪರ್ಯ:–** ಹೇ ಗುರುವೇ! ಮತ್ತೂ ತಿಳಿಯತಕ್ಕ ವಿಷಯಗಳೇನಾ ದರೂ ಇದ್ದರೆ; ಅವುಗಳನ್ನು ತಾವೇ ನನಗೆ ತಿಳಿಸಬೇಕು. ನನಗೆ ಅವುಗಳಜ್ಞಾನ ವಿಲ್ಲ. ಏನು ತಿಳಿಯಬೇಕೆಂಬುವದೂ ನನಗೆ ಗೊತ್ತಿಲ್ಲ. ತಾವು ಮಾರ್ಗವನ್ನು ತೋರಿಸುವಂಥವರಾದ್ದರಿಂದ ತಮಗೆ ದೇಶಿಕರೆಂಬ ನಾಮವು ಬಂದಿರುತ್ತದೆ. ಅವರಲ್ಲಿಯೂ ತಾವು ಶ್ರೇಷ್ಠರಾಗಿರುವಿರಿ. ಜನನ ಮರಣರೂಪ ಭವಾರಣ್ಯ ದಲ್ಲಿ ತೊಳಲುವಂಥಾ ಜೀವಿಗಳಿಗೆ ನೀವೇ ಮಾರ್ಗವನ್ನು ತೋರಿಸಿರಿ. ತಮಗೆ ಗೊತ್ತುಂಟು. ಅದನ್ನು ತಿಳಿಸಿ ನನ್ನನ್ನು ಉದ್ಧಾರಮಾಡಬೇಕು. ಮತ್ತು ಏನನ್ನು ತಿಳಿದರೆ, ಸಂಸಾರ ದುಃಖದಿಂದ ಪಾರಾಗಬಹುದು. ಎಂದು ಶಿಷ್ಯನು ವಿನಯ ದಿಂದ ಬೇಡಿಕೊಳ್ಳುತ್ತಿರುವನು.

**ಬಳಿಕ,** ಗ್ರಂಥಕರ್ತರು ಸಂಧಿಯ ಆರಂಭದಲ್ಲಿ, ಇಷ್ಟದೇವತೆಯಾದ ಶ್ರೀ ಶಂಭುವಿನನ್ನು ಕುರಿತು; ನಮಸ್ಕಾರರೂಪ ಮಂಗಳವನ್ನು ಮಾಡುತ್ತಾರೆ.

**ಭಯಶೋಕರಹಿತಂಗೆ ಜಯಶಕ್ತಿಸಹಿತಂಗೆ|**
**ನಯಸಾರಸೌಖ್ಯ ವಿಹಿತಂಗೆ ಪಾರ್ವತೀ|**
**ಪ್ರಿಯಶಂಭುವಿಂಗೆ ನತನಪ್ಪೆ ||೧||**

**ಟೀಕಾ:-** ಭಯಶೋಕರಹಿತಂಗೆ=ಭಯಶೋಕಗಳಿಂದ ರಹಿತನಾದವನಿಗೆ, ಜಯಶಕ್ತಿಸಹಿತಂಗೆ=ಜಯನಾಮಕ ಶಕ್ತಿಯಿಂದ ಕೂಡಿದವನಿಗೆ, ನಯ=ಮನೋ ಹರವಾದ, ಸಾರ=ಶ್ರೇಷ್ಠವಾದ, ಸೌಖ್ಯ=ಸುಖದಿಂದ, ವಿಹಿತಂಗೆ=ಕೂಡಿಕೊಂಡಿರು ವವನಿಗೆ, ಪಾರ್ವತಿಪ್ರಿಯ=ಪಾರ್ವತಿದೇವಿಗೆ ಪ್ರಿಯಕರನಾದ, ಶಂಭುವಿಂಗೆ= ಶಂಭುಲಿಂಗೇಶ್ವರನಿಗೆ, ನತನಪ್ಪೆ=ನಮಸ್ಕಾರ ಮಾಡುವಾತನಾಗುತ್ತೇನೆ.

**ತಾತ್ಪರ್ಯ:-** ಈ ಸಂಧಿಯಲ್ಲಿ ಮುಖ್ಯವಾಗಿ **ತತ್ತ್ವಮಸಿ**ಯೆಂಬ ಮಹಾವಾಕ್ಯದರ್ಥವು ಹೇಳಲ್ಪಡುತ್ತದೆ. ಮಹಾವಾಕ್ಯದ ಭಾಗತ್ಯಾಗ ಲಕ್ಷಣದಿಂದ ಯಾವ ಅಖಂಡ ಚೈತನ್ಯವು ಲಕ್ಷಿಸಲ್ಪಡುತ್ತದೆ. ಅದೇ ಶ್ರೀ ಶಂಭುಲಿಂಗ ಸ್ವರೂಪವಾಗಿದೆ. ಆ ಅಖಂಡ ಸಚ್ಚಿದಾನಂದ ಸ್ವರೂಪವೇ ನಾನಿರುವೆನೆಂಬ **ನಿಶ್ಚಯ ಜ್ಞಾನವೇ** ನಮಸ್ಕಾರವು. ಇಂಥಾ ಶಂಭುಲಿಂಗನು **ಭಯಶೋಕಾದಿಗಳಿಂದ** ರಹಿತನಾಗಿರುವನು. ಅಂದರೆ, ಅತ್ಯಂತ ದುಃಖದ ನಿವೃತ್ತಿಯನ್ನು ಹೇಳಿದಂತಾಯಿತು. **ನಯಸಾರ ಸೌಖ್ಯವಿಹಿತಂಗೆ** ಎಂದು ಹೇಳುವದರಿಂದ ಪರಮಾನಂದ ಪ್ರಾಪ್ತಿಯು ಹೇಳಲ್ಪಟ್ಟಿತು. ಅರ್ಥಾತ್ ಅತ್ಯಂತ ದುಃಖದ ನಿವೃತ್ತಿ ಪರಮಾನಂದ ಪ್ರಾಪ್ತಿ ರೂಪ ಮುಕ್ತಿ ಪ್ರಯೋಜನವನ್ನು ಸೂಚಿಸಿದರೆಂಬ ಭಾವವು. ಜಯಶಕ್ತಿ ಸಹಿತಂಗೆ ಅನ್ನುವದರಿಂದ ಜ್ಞಾನಶಕ್ತಿಯುಕ್ತನೆಂದೂ, ಪಾರ್ವತಿ ಪ್ರಿಯನೆಂದು ಅನ್ನುವದರಿಂದ **ಕ್ರಿಯಾಶಕ್ತಿ** ಯುಕ್ತನೆಂದೂ, ಹೇಳಿದಂತಾಯಿತು. ಜ್ಞಾನಕ್ರಿಯಾಶಕ್ತಿಗಳೆರಡು ಚೈತನ್ಯದಾಶ್ರಯದಲ್ಲಿರುತ್ತವೆ. ಚೈತನ್ಯವನ್ನು ಬಿಟ್ಟಿರುವದಿಲ್ಲ. ಆದ್ದರಿಂದ ಜ್ಞಾನ ಮತ್ತು ಕ್ರಿಯಾ ಇವೆರಡು ಶಕ್ತಿಗಳಿಂದ ಶಂಭುಯುಕ್ತನಾಗಿರುವನೆಂದು ಹೇಳುವದರಿಂದ; ಶಂಭು **ಪರಿಪೂರ್ಣನೆಂದು ಹೇಳಿ**ದಂತಾಯಿತು. ಯಾಕಂದರೆ, ಬ್ರಹ್ಮಾದಿ ಪಿಪೀಲಿಕಾ ಪರ್ಯಂತರ ಜ್ಞಾನ ಕ್ರಿಯೆಗಳೆಂಬ ಎರಡು ಶಕ್ತಿಗಳು ತೋರುತ್ತವೆ. ಆ ಶಕ್ತಿಗಳು ಚೈತನ್ಯಾಶ್ರಯದಲ್ಲಿವೆ. ಅದರಿಂದ ಶಂಭುಲಿಂಗನು ಪೂರ್ಣನಿರುತ್ತಾನೆಂಬ ಭಾವವು. ಇದರಿಂದ ಶ್ರೀಶಂಭು ಪರಿಪೂರ್ಣನೆಂದು ಹೇಳಿದಂತಾಯಿತು. ಮಹಾವಾಕ್ಯದ ಭಾಗತ್ಯಾಗ ಲಕ್ಷಣದಿಂದ ಪರಿಪೂರ್ಣ ಶಂಭುರೂಪನೇ ನಾನೆಂಬ ಅಪರೋಕ್ಷಜ್ಞಾನವಾಗಲು; ಅತ್ಯಂತ ದುಃಖನಿವೃತ್ತಿ ಪೂರ್ವಕ ಪರಮಾನಂದ ಪ್ರಾಪ್ತಿರೂಪ **ಮುಕ್ತಿ ಪ್ರಯೋಜನವು** ಸಿದ್ಧಿಸುತ್ತದೆಂದು ಸೂಚಿಸಿದಂತಾಯಿತು. ಯಾವ ಸಂಧಿಯಲ್ಲಿ ಯಾವ ವಿಷಯವು ಹೇಳಲ್ಪಡುತ್ತದೆಯೋ, ಆ ವಿಷಯವನ್ನೇ ತಕ್ಕೊಂಡು ಶಂಭುವಿನ ಮಂಗಲ ಮಾಡುವದು ಗ್ರಂಥಕರ್ತರ ಸರಣಿಯಾಗಿರುತ್ತದೆ. ಅದರ ಮೇಲಿಂದ ಅವರ ಆಶಯಾನುಸಾರ ಇಲ್ಲಿ ಈ ಮಂಗಲಕ್ಕೆ ಅರ್ಥವನ್ನು ಮಾಡಿರುತ್ತದೆ.

ಬಳಿಕ, ಶಿಷ್ಯನು ಶ್ರೀ ಗುರುಗಳನ್ನು ಸ್ತುತಿಮಾಡಿ ಸಂತೋಷಗೊಳಿಸಿ, ಮುಂದೆ ಹೇಳುವ ಪ್ರಕಾರ ಪ್ರಶ್ನೆಯನ್ನು ಮಾಡುತ್ತಾನೆ.

**ಭವಸಿಂಧು ಕುಂಭಸಂಭವ ದುರಿತ ಭಾವಸಂ |**
**ಭವರುದ್ರರೂಪ ಗುರುವರ್ಯ ಪೇಳೆನು |**
**ತ್ತವೆ ಬೋಧ್ಯನಿಂತು ಬೆಸಗೊಂಡ** ||೨||

**ಟೀಕಾ:-**ಭವಸಿಂಧು=ಸಂಸಾರವೆಂಬ ಸಮುದ್ರಕ್ಕೆ, ಕುಂಭಸಂಭವ=ಅಗಸ್ತ್ಯ ಮಹರ್ಷಿಯಾದಂಥಾ, ದುರಿತ=ಪಾಪವೆಂಬ, ಭಾವಸಂಭವ=ಮನ್ಮಥನಿಗೆ, ರುದ್ರ

ರೂಪ=ರುದ್ರರೂಪನಾದ, ಗುರುವರ್ಯ=ಗುರೂತ್ತಮನೇ, ಪೇಳೆನುತ್ತ=ಉಪದೇಶಿಸಬೇಕೆನ್ನುತ್ತ, ಬೋಧ್ಯನು=ಶಿಷ್ಯನು, ಇಂತು = ಮುಂದೆ ಹೇಳುವ ರೀತಿ, ಬೆಸಗೊಂಡ=ಕೇಳಿಕೊಂಡನು.

**ತಾತ್ಪರ್ಯ**:-ಹೇ ಗುರುವರ್ಯನೇ! ತಾವು ಈ ಜನನ ಮರಣರೂಪ ಸಂಸಾರವೆಂಬ ಸಮುದ್ರಕ್ಕೆ ಅಗಸ್ತ್ಯ ಮಹರ್ಷಿಗಳಾಗಿರುವಿರಿ. ಅಂದರೆ, ಅಗಸ್ತ್ಯ ಮಹರ್ಷಿಯು ಸಮುದ್ರವನ್ನು ಆ ಪೋಷಣಮಾಡಿ ಹೇಗೆ ಬತ್ತಿಸಿಬಿಟ್ಟನೋ, ಹಾಗೆ ತಾವು ಅಪಾರವಾದ ಈ ಸಂಸಾರಸಮುದ್ರವನ್ನು ನಾಶಮಾಡುವದರಲ್ಲಿ ಸಾಮರ್ಥ್ಯವುಳ್ಳವರಾಗಿರುವಿರಿಯೆಂಬ ಭಾವವು. ಇಲ್ಲಿ ಸಂಸಾರಕ್ಕೆ ಸಮುದ್ರದ ಉಪಮಾನವನ್ನು ಕೊಡುವದರಿಂದ, ಸಮುದ್ರದಲ್ಲಿ ಮೊಸಳೆ, ಮೀನು, ಮೈನಾಕ ಪರ್ವತ, ವಡವಾಗ್ನಿಗಳು ಇದ್ದಂತೆ, ಸಂಸಾರದಲ್ಲಿ ಮೊಸಳೆ ಮೀನಗಳು ಯಾವವೆಂಬುದನ್ನು ಬುದ್ಧಿಯಿಂದ ಊಹೆಯನ್ನು ಮಾಡಿ ಸರಿಮಾಡಿಕೊಳ್ಳಬೇಕು. ವಿಸ್ತಾರವಾಗುವದರಿಂದ ಬರೆಯುವದನ್ನು ಬಿಟ್ಟದ್ದೇವೆ. ಮತ್ತು ಪಾಪವೆಂಬ ಮನ್ಮಥನನ್ನು ದಹಿಸುವದಕ್ಕೆ ರುದ್ರನಾಗಿರುವಿ. ಅಂದರೆ, ಪರಮಾತ್ಮನು ತನ್ನ ಅಗ್ನಿನೇತ್ರದಿಂದ ಕಾಮನನ್ನು ಹೇಗೆ ಸುಟ್ಟು ಬೂದಿಮಾಡಿದನೋ, ಹಾಗೇ ನೀನು ನಮ್ಮಗಳ ಅವಿದ್ಯಾ, ಕಾಮ, ಕರ್ಮಾದಿಗಳನ್ನು ಜ್ಞಾನವೆಂಬ ಅಗ್ನಿನೇತ್ರದಿಂದ ಸುಡುವ ಸಾಮರ್ಥ್ಯವು ನಿನ್ನಲ್ಲಿ ಇರುತ್ತದೆಂಬ ಭಾವವು. ಇಂಥಾ ಮಹಿಮೆಯುಳ್ಳ **ಗುರುನಾಥನೇ** ನನಗೆ ನಿಜವಾದ ಅರುವನ್ನು ಅರುಹಿ ಕಾಪಾಡಬೇಕು. ಎಂದು ಕೊಂಡಾಡುತ್ತ ಮುಂದೆ ಪ್ರಶ್ನೆಮಾಡುತ್ತಾನೆ.

ಬಳಿಕ, ಶಿಷ್ಯನು ಶ್ರೀ ಗುರುವಿನ ಉಪದೇಶದಿಂದ ತನಗಾದ ಅನುಭವವನ್ನು ತಿಳಿಸುತ್ತಲಿದ್ದಾನೆ.

**ಎನ್ನ ಮಾನಸದೊಳುತ್ಪನ್ನ ಸಂದೇಹಂಗ |**
**ಳನ್ನಿನ್ನೊಳುಸುರ ಲವಕೆ ಪರಿಹಾರಮಂ |**
**ಚನ್ನಾಗಿ ಪೇಳ್ದಿರೆಲೆ ದೇವ ||೩||**

**ಟೀಕಾ**:- ಎಲೆ ದೇವ=ಹೇ ಗುರುವೆ ! ಎನ್ನ=ನನ್ನ, ಮಾನಸದೊಳು=ಮನಸ್ಸಿನಲ್ಲಿ, ಉತ್ಪನ್ನ = ಹುಟ್ಟಿದ, ಸಂದೇಹಂಗಳಂ = ಸಂಶಯಗಳನ್ನು, ನಿನ್ನೊಳು=ನಿನ್ನಲ್ಲಿ, ಉಸುರಲ್=ಹೇಳಲಾಗಿ, ಅವಕೆ=ಆ ಸಂಶಯಗಳಿಗೆ, ಚನ್ನಾಗಿ=ಉತ್ತಮ ರೀತಿಯಿಂದ, ಪರಿಹಾರಮಂ=ಉತ್ತರವನ್ನು, ಪೇಳ್ದಿರಿ=ಹೇಳಿದಿರಿ.

**ತಾತ್ಪರ್ಯ**:- ಹೇ ಗುರುದೇವನೇ ! ನನ್ನ ಮನಸ್ಸಿನಲ್ಲಿ ಉಂಟಾದ ಜಗತ್ತು, ಶಿವ, ಜೀವ, ಏಕ, ಅನೇಕ ಭೇದಾಭೇದಪರ ಸಂಶಯಗಳನ್ನು ತಿಳಿಸುತ್ತಿರಲಾಗಿ.

ಆ ಎಲ್ಲ ಸಂಶಯಗಳಿಗೂ ಸರಿಯಾದ ಉತ್ತರವನ್ನು ಕೊಟ್ಟು, ಸಕಲ ಸಂಶಯಗಳನ್ನು ಬಿಡಿಸಿದಿರಿ. ಇದೆಲ್ಲವು ತಮ್ಮ ಕೃಪೆಯಿಂದಾಗಿರುತ್ತದೆಂಬ ಭಾವವು.

ಬಳಿಕ, ತಮ್ಮ ವಾಕ್ಯವನ್ನು ಕೇಳಿದೊಡನೆ ಅಜ್ಞಾನ ನಾಶವಾಗಿ ಜ್ಞಾನವುಳ್ಳವನಾಗಿರುತ್ತೇನೆ ಎಂದು ಹೇಳಿಕೊಳ್ಳುತ್ತಲಿದ್ದಾನೆ.

**ಅವನೆಲ್ಲಮಂ ಕೇಳು ತವೆ ಮುನ್ನಲುಳ್ಳ ದು ।**
**ರ್ಭವ ಬೀಜವೆನಿಸುವಜ್ಞಾನ ವಳಿದಾತ್ಮ ।**
**ಸುವಿಚಾರವೆನ್ನೊಳೊದವಿತ್ತು ॥೪॥**

ಟೀಕಾ:- ಅವನೆಲ್ಲಮಂ=ಆ ಉತ್ತರಗಳನ್ನು, ಕೇಳುತವೆ=ಶ್ರವಣಮಾಡುತ್ತಿರಲಿಕ್ಕೆ, ಮುನ್ನಲುಳ್ಳ=ಮೊದಲಿರುವ,ದುರ್ಭವ=ಜನನಾದಿ ಸಂಸಾರಕ್ಕೆ, ಬೀಜವೆನಿಸುವ=ಕಾರಣವೆಂದು ಹೇಳಿಸಿಕೊಳ್ಳುವ, ಅಜ್ಞಾನವಳಿದು=ಅಜ್ಞಾನವು ನಾಶವಾಗಿ, ಎನ್ನೊಳು = ನನ್ನಲ್ಲಿ, ಸುವಿಚಾರವನು = ಜ್ಞಾನವನ್ನು, ಒದವಿತ್ತು=ಉಂಟುಮಾಡಿದಿರಿ.

**ತಾತ್ಪರ್ಯ:**- ಹೇಗುರುದೇವ! ತಮ್ಮ ವಾಕ್ಯಾಮೃತವನ್ನು ಕೇಳುತ್ತಿರಲಿಕ್ಕೆ; ಜನನ ಮರಣಾತ್ಮಕ ಸಂಸಾರಕ್ಕೆ ಕಾರಣವಾದ ಅಜ್ಞಾನವು ನಾಶವಾಯಿತು. ಸಚ್ಚಿದಾನಂದ, ಸಾಕ್ಷಿ, ನಿತ್ಯಪ್ರತ್ಯಗಾತ್ಮರೂಪನೇ ನಾನೆಂಬ ನನ್ನಜ್ಞಾನವು ನನಗಾಯಿತು. ಹರಿಹರಾದಿಗಳಿಂದಲೂ ಅರುಹಲಿಕ್ಕೆ ಬಾರದ ನನ್ನ ನಿಜವನ್ನು ಅರುಹಿ ಕೃತಾರ್ಥನನ್ನಾಗಿ ಮಾಡಿದಿರಿ ಎಂದು ಹೊಗಳಿದನು.

ಬಳಿಕ, ಮತ್ತು ಅರಿಯತಕ್ಕ ವಿಷಯಗಳೇನಾದರೂ ಇದ್ದರೆ, ಅವುಗಳನ್ನು ತಿಳಿಸಬೇಕೆಂದು ಕೇಳುತ್ತಲಿದ್ದಾನೆ.

**ಅರಿವುದಿನ್ನೇನುಂಟು ನೆರೆ ನಂಬಿದಣುಗನಾ ।**
**ನರಿವಂತೆ ಕರುಣಿಸೆಂದು ಗುರುವರ್ಯನಡಿ ।**
**ಗೆರಗಿ ನುತಿಗೈದನವನಿಂತು ॥೫॥**

ಟೀಕಾ:-ಅರಿವುದು=ತಿಳಿಯತಕ್ಕದ್ದು, ಇನ್ನೇನುಂಟು=ಇನ್ನು ಏನು ಇರುವದು, ನೆರೆ=ಚನ್ನಾಗಿ, ನಂಬಿದ=ವಿಶ್ವಾಸವುಳ್ಳ, ಅಣುಗನ=ಬಾಲಕನಾದ, ಆನು=ನಾನು, ಅರಿವಂತೆ=ತಿಳಿಯುವಹಾಗೆ,ಕರುಣಿಸೆಂದು=ಕೃಪೆ ಮಾಡಬೇಕೆಂದು, ಗುರುವರ್ಯನ=ಗುರುಗಳ, ಅಡಿಗೆರಗಿ=ಚರಣಕ್ಕೆ ನಮಸ್ಕರಿಸಿ, ಅವನು=ಶಿಷ್ಯನು, ಇಂತು=ಈರೀತಿ, ನುತಿಗೈದನು=ಸ್ತುತಿಮಾಡಿದನು,

**ತಾತ್ಪರ್ಯ:-** ಹೇಗುರುಶ್ರೇಷ್ಠನೇ! ನಾನು ಏನೊಂದು ತಿಳಿಯದಿರುವ ಅಜ್ಞಾನಿಯಿದ್ದೇನೆ. ಏನು ಕೇಳಬೇಕು? ಏನು ತಿಳಿಯಬೇಕು? ಎಂಬುವದು ನನಗೆ ತಿಳಿಯದು. ಸರ್ವಜ್ಞರಾದ ತಾವೇ ಆಲೋಚಿಸಿ, ಏನು ತಿಳಿಸಬೇಕು. ಎಂಬುದನ್ನು ತಾವೇ ತಿಳಿಸಬೇಕು. ನಾನು ಏನನ್ನು ಅರಿಯೆನು. ಗುರುದೇವ; ಎಂದು ಶ್ರೀಗುರುಗಳ ಚರಣಕಮಲಕ್ಕೆ ಶಿರಬಾಗಿ ನಮುಸ್ಕರಿಸಿ ವಿನಯದಿಂದ ಸೊಗಸಾಗಿ ಕೊಂಡಾಡಿದನು.

## ಪ್ರಶ್ನೆನಿರೂಪಣೆ ಸೂತ್ರ ೧ಕ್ಕೆ ತ್ರಿವಿದಿ ೫

---

ಬಳಿಕ, ಶ್ರೀಗುರುಗಳು ಸಚ್ಛಿಷ್ಯನನ್ನು ಕುರಿತು 'ಹೇಶಿಷ್ಯನೇ! ನಿನಗೆ ಮೊದಲಿಂದ ಇಲ್ಲಿಯವರೆಗೆ ಹೇಳುತ್ತ ಬಂದ ಅರ್ಥಗಳನ್ನು ಮನನ,, ನಿಧಿಧ್ಯಾಸನ ಮಾಡುತ್ತಿರು. ಎಂದು ಹೇಳುತ್ತಾರೆ.

ಸೂತ್ರ॥ **ಕೇಳಿದರ್ಥಂಗಳಂ ನಿನ್ನೊಳೇಕಾಗ್ರದಿಂ।**
**ದಾಲೋಚನಂ ಗೈವುತಿರಬೇಹುದು॥**

**ಟೀಕಾ:-** ಕೇಳಿದ = ಶ್ರವಣಮಾಡಿದ, ಅರ್ಥಂಗಳಂ=ವಿಷಯಗಳನ್ನು, ನಿನ್ನೊಳು=ನಿನ್ನಲ್ಲಿ, ಏಕಾಗ್ರದಿಂ=ನಿಶ್ಚಲವಾದ ಶುದ್ಧ ಮನಸ್ಸಿನಿಂದ, ಆಲೋಚನಂ=ವಿಚಾರವನ್ನು, ಗೈವುತ=ಮಾಡುತ್ತಾ, ಇರಬೇಹುದು=ಇರಬೇಕು.

**ತಾತ್ಪರ್ಯ:-** ನಾವು ಇಲ್ಲಿಯತನಕಾ ನಿನಗೆ ಯಾವಯಾವ ವಿಷಯಗಳನ್ನು ಶ್ರವಣ ಮಾಡಿಸುತ್ತಾ ಬಂದಿರುವೆವೋ; ಅವುಗಳನ್ನು ನೀನು ಏಕಾಗ್ರ ಮನಸ್ಸಿನಿಂದ ಮನನವನ್ನು ಮಾಡುತ್ತಿರು. ಶ್ರವಣ ಮನನಗಳಿಂದ ಜನ್ಯವಾದ ಸ್ವರೂಪಾಕಾರ ವೃತ್ತಿಯಿಂದ ನಿಧಿಧ್ಯಾಸನ ತತ್ಪರನಾಗು. ಅನಂತರ ಸಂಶಯ, ಅಸಂಭಾವನಾ, ವಿಪರೀತ ಭಾವನೆಗಳನ್ನು ಮಾಡಬೇಡ. ನಿನ್ನ ನಿಜಸ್ವರೂಪದಲ್ಲಿ ನಿಶ್ಚಲಚಿತ್ತನಾಗಿ ಸುಖದಿಂದ ಇರು. ಎಂದು ಗುರುಗಳು ಉಪದೇಶಮಾಡುತ್ತಲಿದ್ದಾರೆ.

ಬಳಿಕ, ಗುರುಗಳು 'ಹೇ ಶಿಷ್ಯನೇ! ನಿನಗೆ ಸಕಲೋಪನಿಷತ್ತುಗಳ ಸಾರವನ್ನು ಹೇಳಿದ್ದೇನೆ. ತಿಳಿದು ಸುಖವಾಗಿರು' ಎಂದು ಹೇಳುತ್ತಾರೆ.

**ಮಗನೆ ನಿನಗಾವಸಂದೆಗಮಿಲ್ಲದಂವದಿಂ।**
**ನಿಗಮಾಂತಸಾರವನೆ ಪೇಳ್ದೆನೊಲಿದಿದಂ।**
**ಬಗೆಯೊಳಾರೈದು ಸುಖಿಸುವದು** ॥೧॥

**ಟೀಕಾ:**- ಮಗನೆ=ಶಿಷ್ಯನೇ! ನಿನಗೆ=ನಿನಗೆ, ಸಂದೆಗಂ=ಸಂಶಯವು, ಇಲ್ಲ ದಂದದಿಂ=ಇರದಂತೆ, ನಿಗಮಾಂತ=ಉಪನಿಷತ್ತುಗಳ, ಸಾರವನೆ = ತಾತ್ಪರ್ಯ ವನ್ನೇ, ಒಲಿದು=ಪ್ರೀತನಾಗಿ, ಪೇಳ್ದೆನು=ಹೇಳಿದೆನು, ಇದಂ=ಈ ವಿಷಯವನ್ನು, ಬಗೆಯೊಳೂ=ಮನಸ್ಸಿನಲ್ಲಿ, ಆರೈದು=ವಿಚಾರಿಸಿ, ಸುಖಿಸುವದು = ಸುಖವನ್ನು ಹೊಂದುವದು.

**ತಾತ್ಪರ್ಯ:**- ಹೇ ಶಿಷ್ಯನೇ ! ಕೇಳು. ನಿನಗೆ ಯಾವ ಸಂಬಂಧಿ ಸಂಶಯು ಗಳು ಬಾರದ ಹಾಗೆ. ಸರ್ವ ಉಪನಿಷತ್ತುಗಳ ಸಾರಭೂತ **ಅರ್ಥವನ್ನು** ಪ್ರತಿ ಪಾದನ ಮಾಡಿರುತ್ತೇನೆ. ಜಗತ್ತು, ಜೀವ, ಈಶ, ಭೇದಾಭೇದದ ವಿಷಯ ವಾಗಿ ಎಲ್ಲವನ್ನು ಸಪ್ರಮಾಣಪೂರ್ವಕ ತಿಳಿಸಿದ್ದೇನೆ. ಕಡೆಯಲ್ಲಿ ಅಖಂಡ ಸಚ್ಚಿ ದಾನಂದ ಸ್ವರೂಪ, ಏಕಮೇವಾದ್ವಿತೀಯ ಬ್ರಹ್ಮವೇ ನಾನೆಂಬ ಅಪರೋಕ್ಷ ಜ್ಞಾನ ವಿಷಯವನ್ನು ಹೇಳಿದ್ದೇನೆ. ನಿನಗೆ ಯಾವ ಸಂಶಯಗಳು ಬಾರದ ಹಾಗೆ ಹೇಳಿರುತ್ತೇನೆ. ಇದನ್ನು ವಿಚಾರಿಸುತ್ತಾ ನಿನ್ನಲ್ಲಿ ನೀನು **ಶಾಂತಚಿತ್ತ ನಾಗಿ ಇರು.** ಎಂದು ಹೇಳಿದರು.

**ಬಳಿಕ,** ನಿನಗೆ ಜಗದ್ವಿಷಯಕವಾಗಿ ಏನು ಹೇಳಿದೆವೆಂಬುದನ್ನು ಒಂದೇ ಮಾತಿನಿಂದ ತಿಳಿಸುತ್ತೇನೆಂದು ಹೇಳುತ್ತಾರೆ.

**ಮೊದಲಿಂದ ನೋಡಲಿಂತಿದರಲ್ಲಿ ನಾಮರೂ ।**
**ಪದ ತೋರ್ಕೆಮಿಥ್ಯೆಯಹುದು ನೀನೇ ನಿತ್ಯ ।**
**ಪದವೆಂದು ಪೇಳುತಿಹುದೈಸೆ** ॥ ೨॥

**ಟೀಕಾ:**- ಮೊದಲಿಂದ=ಆರಂಭದಿಂದ, ನೋಡಲ್=ವಿಚಾರ ಮಾಡಲು, ಇಂತು=ಈ ರೀತಿ, ಇದರಲ್ಲಿ=ಈ ಗ್ರಂಥದಲ್ಲಿ, ನಾಮರೂಪದ=ನಾಮರೂಪುಗಳ, ತೋರ್ಕೆ=ಪ್ರತೀತಿಯು, ಮಿಥ್ಯೆಯಹುದು=ಸುಳ್ಳಾಗಿರುವದು, ನೀನೇ=ಅಧಿಷ್ಠಾನ ನಾದ ನೀನೇ, ನಿತ್ಯಪದವೆಂದು=ತ್ರಿಕಾಲ ಅಬಾಧ್ಯ ಸ್ವರೂಪನಾಗಿರುವೆಯೆಂದು, ಪೇಳುತಿಹುದೈಸೆ=ಹೇಳುತ್ತಿರುವದಲ್ಲವೆ ?

**ತಾತ್ಪರ್ಯ:**- ಗ್ರಂಥಾರಂಭದ ಮೊದಲನೇ ಸಂಧಿಯಲ್ಲಿ ನಿನಗೆ ಜಗತ್ತು ಅಂದರೆ ಏನೆಂಬುದನ್ನು ತಿಳಿಸುತ್ತಾ, ನಾಮರೂಪುಗಳ ಪ್ರತೀತಿಯು ವ್ಯತಿರೇಕ ವಾದ್ದರಿಂದ **ಮಿಥ್ಯೆಯೆಂದು,** ಅಸ್ತಿ, ಭಾತಿ, ಪ್ರಿಯ ರೂಪದಿಂದ ಅಧಿಷ್ಠಾನನಾಗಿ, ಅನ್ವಯರೂಪದಿಂದ ಸರ್ವತ್ರ ಇರುವದರಿಂದ, ನೀನೇ **ಸತ್ಯನಾಗಿರುವಿಯೆಂಬು** ದನ್ನೂ ಹೇಳಿರುತ್ತೇವೆ. ಈ ಅರ್ಥವನ್ನು ಮರೆಯದೆ ನಿನ್ನಲ್ಲಿ ಸಂಶಯು ಬಂದರೆ ಇದನ್ನು ಸ್ಮರಣಮಾಡುತ್ತಾ ಇರು.

ಬಳಿಕ, ತತ್ವಮಸಿಯೆಂಬ ಮಹಾವಾಕ್ಯದ ಅರ್ಥವು ನಿನಗೆ ಹೇಳಲ್ಪಟ್ಟಿರುತ್ತದೆಂದು ಹೇಳುತ್ತಾರೆ.

**ಕೇಳು ತತ್ತ್ವಮಸೀತಿ ಮೇಲೆ ತ್ವಂ ತದಸೀತಿ ।**
**ಪೇಳಲಿನ್ನೇನು ತತ್ತದಹಮಿತಿ ವೇದ ।**
**ಜಾಳಮಿರೆ ನೀನೆ ಚಿದಖಂಡ ॥೩॥**

**ಟೀಕಾ:-** ತತ್=ಸೃಷ್ಟಿಪೂರ್ವದಲ್ಲಿದ್ದ ಸದ್ರೂಪ ಬ್ರಹ್ಮವೇ, ತ್ವಂ=ದೇಹಾದಿಗಳಿಗೆ ಸಾಕ್ಷಿಯಾದನೀನು, ಅಸಿ=ಇದ್ದಿ, ಇತಿ=ಹೀಗೆಂದು, ಮೇಲೆ=ಅನಂತರ, ತ್ವಂ=ನೀನು, ತತ್=ಆ ಪರಬ್ರಹ್ಮವೇ, ಅಸೀತಿ=ಇರುವಿಯೆಂದು, ಪೇಳಲ್=ಹೇಳಲಾಗಿ, ಇನ್ನೇನು=ಬಳಿಕೇನು ಹೇಳತಕ್ಕದ್ದು, ತತ್ತತ್=ಆ ವಸ್ತುವೇ, ಅಹಮಿತಿ=ನಾನಿದ್ದೇನೆಂಬ, ವೇದಜಾಳಮಿರೆ = ವೇದವಾಕ್ಯಗಳ ರಾಶಿಯಿರಲಾಗಿ, ನೀನೇ=ನೀನೇ, ಚಿದಖಂಡ=ಅಖಂಡ ಚೈತನ್ಯರೂಪನು ನೀನು.

**ತಾತ್ಪರ್ಯ:-** ಸೃಷ್ಟಿ ಪೂರ್ವದಲ್ಲಿ ಏಕಮೇವಾದ್ವಿತೀಯಂ ಬ್ರಹ್ಮವು ಒಂದೇ ಇತ್ತೆಂದು ಶ್ರುತಿಯು ಹೇಳುತ್ತದೆ. ಅಂಥಾ ಅದ್ವಿತೀಯ ಬ್ರಹ್ಮವೇ ನೀನು ಇರುವಿ ಎಂದು ತತ್ತ್ವಮಸಿ ಮಹಾವಾಕ್ಯವು ಹೇಳುತ್ತದೆ. ಹೀಗೆ ಹೇಳುವದರಿಂದ ಆತ್ಮನಲ್ಲಿದ್ದ **ಪರಿಚ್ಛಿನ್ನತ್ವ ಭ್ರಾಂತಿಯು** ದೂರಾಗುತ್ತದೆ. ಬಳಿಕ, **'ತ್ವಂ ತದಸಿ'** ನೀನೇ ಆ ಬ್ರಹ್ಮನಿದ್ದಿಯೆಂದು ಹೇಳುವದರಿಂದ **ಪರೋಕ್ಷ**ಭ್ರಾಂತಿಯನ್ನು ದೂರ ಮಾಡುವದಕ್ಕಾಗಿ ಹೇಳಿದೆ. ಹೀಗೆ ತತ್ತ್ವಮಸಿ ಮಹಾವಾಕ್ಯವು ಅನ್ಯೋನ್ಯವಾಗಿ ಅಭೇದ ಹೇಳುವದರಿಂದ **ಪರಿಚ್ಛಿನ್ನತ್ವ ಪರೋಕ್ಷತ್ವ** ಭ್ರಾಂತಿಗಳು ನಿವಾರಿಸಲ್ಪಡುತ್ತವೆ. ಇದೇ ಅಭಿಪ್ರಾಯದ ಅರ್ಥವನ್ನು **'ಅಹಂ ಬ್ರಹ್ಮಾಸ್ಮಿ' 'ಅಯಮಾತ್ಮಾ ಬ್ರಹ್ಮ' 'ಪ್ರಜ್ಞಾನಂ ಬ್ರಹ್ಮ'** ನಾನೇ ಬ್ರಹ್ಮನಿದ್ದೇನೆ. ಈ ಆತ್ಮನೇ ಬ್ರಹ್ಮನಿದ್ದಾನೆ. ಜ್ಞಾನವೇ ಬ್ರಹ್ಮವದೆ ಎಂಬ ನಾಲ್ಕು ವೇದದ ನಾಲ್ಕು ಮಹಾವಾಕ್ಯಗಳು ನೀನೇ ಅಖಂಡ ಬ್ರಹ್ಮನೆಂದು ಬೋಧೆಮಾಡುತ್ತವೆ. ಆದ್ದರಿಂದ ಈ ವಿಷಯದಲ್ಲಿ ಸಂಶಯಗೊಳ್ಳದೆ, ನಿಶ್ಚಯ ಜ್ಞಾನವುಳ್ಳವನಾಗು.

**ಬಳಿಕ,** ಶಿಷ್ಯನು 'ಹೇ ಗುರುವೇ! ಶ್ರುತಿಯು ಹೇಳುವ ಮಾತಿನ ಮೇಲಿಂದ ನಾನು ಬ್ರಹ್ಮನೆಂದು ಹೇಗೆ ನಿರ್ಣಯಿಸಲಿ: ನಾನು ಬ್ರಹ್ಮನೆಂಬುದು ನನಗೆ ಅನುಭವಕ್ಕೆ ಬಂದರೆ ಬ್ರಹ್ಮನಿದ್ದೇನೆಂದು ಹೇಳಬಹುದು. ಕೇವಲ ಶ್ರುತಿಯಿಂದ ನಿಶ್ಚೈಯಿಸಲಿಕ್ಕೆ ಬರುವದಿಲ್ಲ' ಎಂದು ಶಂಕೆಯನ್ನು ಮಾಡಿದರೆ; ಅದಕ್ಕೆ ಗುರುಗಳು "**ಕರ್ಮಕಾಂಡ** ಶ್ರುತಿವಾಕ್ಯವನ್ನು ನಂಬಿದಂತೆ, **ಜ್ಞಾನಕಾಂಡ**ಗತ ಶ್ರುತಿವಾಕ್ಯ

ವನ್ನು ಯಾಕೆ ನಂಬುವದಿಲ್ಲ? ಅವಶ್ಯವಾಗಿ ನೀನು ಈ ಮಾತನ್ನು ನಂಬಲಿಕ್ಕೇ ಬೇಕು' ಎಂದು ಉತ್ತರವನ್ನು ಹೇಳುತ್ತಲಿದ್ದಾರೆ.

**ವೇದೋಕ್ತಿಯಿಂ ಸೂತಕಾದಿಯೊಳಗೆಂತು ದೃಢ।**
**ವಾದಮತಿಯುಪ್ಪದಂತೆ ತದಸೀತಿಯೆಂ।**
**ದೋದುತಿಹ ವಾಕ್ಯವನೆ ನಂಬು ॥೪॥**

**ಟೀಕಾ:-** ವೇದೋಕ್ತಿಯಿಂ = ಕರ್ಮಕಾಂಡೋಕ್ತ ವೇದವಾಕ್ಯಹೇಳುವದರಿಂದ, ಸೂತಕಾದಿಯೊಳಗೆ=ಸತ್ತಸುದ್ದಿ ಕೇಳಿ ಅಶುಚಿಯಾದೆನೆಂಬ ಸೂತಕದಲ್ಲಿ, ಎಂತು=ಹೇಗೆ, ದೃಢವಾದಮತಿಯುಪ್ಪದು=ನಿಶ್ಚಯಾತ್ಮಕಬುದ್ಧಿಯಿರುವದೋ, ಅಂತೆ=ಹಾಗೆ, ತದಸೀತಿಯೆಂದು=ಆ ಬ್ರಹ್ಮವೇನೀನಿದ್ದಿಯೆಂದು, ಓದುತಿಹ= ಹೇಳುವ,ವಾಕ್ಯವನೆ=ಜ್ಞಾನಕಾಂಡಗತ ಶ್ರುತಿವಾಕ್ಯವನ್ನು,ನಂಬು=ವಿಶ್ವಾಸವಿಡು.

**ತಾತ್ಪರ್ಯ:-** ಹೇ ಶಿಷ್ಯನೇ ! ಕೇಳು. ವೇದದ ಪೂರ್ವಭಾಗದ ಕರ್ಮಕಾಂಡದ ವಾಕ್ಯವನ್ನು ಕೇಳಿ, ನಿನಗೆ ನಂಬಲಿಕ್ಕೆ ಬಂದಂತೆ; ವೇದದ ಉತ್ತರ ಭಾಗವಾದ ಜ್ಞಾನಕಾಂಡಗತ ವಾಕ್ಯವನ್ನು ಯಾಕೆ ನಂಬಲಿಕ್ಕೆ ಬರುವದಿಲ್ಲ? ಹೇಳು. ಆಪ್ತರು ಪರಗ್ರಾಮಗಳಲ್ಲಿ ಯಾರಾದರೂ ಸತ್ತರೆ, ಸೂತಕ ಬರುತ್ತದೆಂದು ಕರ್ಮಕಾಂಡವಾಕ್ಯವು ಹೇಳುತ್ತದೆ. ಈ ಸೂತಕವನ್ನು ನೀನು ಕಣ್ಣಿನಿಂದನೋಡಿಲ್ಲ. ಕೈಯಿಂದ ಮುಟ್ಟಿಲ್ಲ. ನಿನ್ನ ಅನುಭವಕ್ಕೂ ಬಂದಿಲ್ಲ. ಇದನ್ನು ನೋಡಿದವರು ಯಾರಾದರೂ ಸಾಕ್ಷಿಯೂ ಇಲ್ಲ, ಹೀಗಿದ್ದರೂ ನಂಬಿರುವಿ. ಮತ್ತು ಸತ್ತಸುದ್ದಿಯನ್ನು ತಂದವನು ಹೊಲೆಯನು. ಆತನು ಬಂದು ಹೇಳುವವರೆಗೆ ನಿನಗೆ ಸೂತಕವಿದ್ದಿಲ್ಲ. ಸತ್ತ ಎರಡು ದಿನದಮೇಲೆ ನಿನಗೆ ಸುದ್ದಿ ಮುಟ್ಟಿರುತ್ತದೆ. ಅದರೊಳಗಾಗಿ ಸೂತಕ ಬಂದಿದ್ದರೂ ನಿನಗೆ ತಿಳಿಯಲಿಲ್ಲ. ಸುದ್ದಿಹೇಳಿದ **ಹೊಲೆಯನ** ಮಾತಿನಿಂದ ನಿನಗೆ ಸೂತಕವು ಬಂದಿತು. ಹೊಲೆಯನು ಆಡಿದ ಮಾತನ್ನು ನಂಬುವಿ. ಇದರಂತೆ **ಶ್ರೀ ಗುರುವಿನ** ಮಾತನ್ನು ನೀನು ನಂಬುವದಿಲ್ಲ. ಹೊಲೆಯನಗಿಂತಲೂ ಗುರುಗಳು ನಿನಗೆ ಕನಿಷ್ಠರಾಗಿರುವರೋ ಹೇಗೆ? ಸೂತಕವಿಧಿಯಲ್ಲಿ ಕರ್ಮಕಾಂಡಗತವಾಕ್ಯವನ್ನು ಹೊಲೆಯನ ಮಾತನ್ನು ನಂಬಿದಂತೆ. ಅಹಂಬ್ರಹ್ಮನೆಂಬಲ್ಲಿ ಜ್ಞಾನಕಾಂಡಗತ ವಾಕ್ಯವನ್ನು ಮತ್ತು ತ್ವಂಬ್ರಹ್ಮ ಅಸಿ ಎಂಬ ಗುರುವಾಕ್ಯವನ್ನು ನಂಬು.

**ಮತ್ತು** ಯಜ್ಞಾದಿಗಳಿಂದ ಸ್ವರ್ಗಪ್ರಾಪ್ತಿಯಾಗುತ್ತದೆಂದು ಹೇಳುವ ಕರ್ಮಕಾಂಡದ ಮಾತನ್ನು ಕೇಳಿ, ನಂಬಿಕೊಂಡು ಯಜ್ಞಾದಿ ಕರ್ಮಗಳಲ್ಲಿ ಪ್ರವೃತ್ತಿಯಾದಂತೆ; 'ತತ್ತ್ವಮಸಿ, ಆಬ್ರಹ್ಮವೇ ನೀನು ಎಂಬ ಜ್ಞಾನಕಾಂಡಗತ ವಾಕ್ಯವನ್ನು ಕೇಳಿ, ನಾನು ಬ್ರಹ್ಮನೆಂಬ ನಿಶ್ಚಯಜ್ಞಾನವನ್ನು ಹೊಂದು. ನಂಬು. ಸಂಶಯಬೇಡ. ಎಂದು ಗುರುಗಳು ಹೇಳುತ್ತಲಿದ್ದಾರೆ.

**ಬಳಿಕ,** ಹೇಳಿದ ವೇದಾರ್ಥದ ತತ್ತ್ವಮಸಿ ಮಹಾವಾಕ್ಯವಿಷಯದಲ್ಲಿ; ವಿಪರೀತಾದಿ ಭಾವನೆಗಳನ್ನು ತಳೆದರೆ; **ಉದಂಕನಾಮಕ** ಬ್ರಾಹ್ಮಣನ ಗತಿಯಾಗುತ್ತದೆಂದು ಹೇಳುತ್ತಾರೆ.

**ನಿನಗೆ ವಿಪರೀತ ಭಾವನೆಯಸಂಭಾವನೆಗ ।**
**ಳನುಕರಿಸಲಿದರೊಳಮೃತಮಂ ತೊರೆದುದಂ ।**
**ಕನ ತಪದ ಗತಿಯಹುದು ನೋಡು ॥೫॥**

**ಟೀಕಾ:–** ಇದರೋಳ್=ಈವಿಷಯದಲ್ಲಿ, ನಿನಗೆ=ನಿನಗೆ, ವಿಪರೀತ ಭಾವನೆಯು=ನಾನು ಬ್ರಹ್ಮನಲ್ಲ ಜೀವನೆಂಬ ಭಾವವು, ಅಸಂಭಾವನೆಗಳು=ಬ್ರಹ್ಮದ ಸರ್ವಜ್ಞತ್ವಾದಿಗಳು ನನಗಿಲ್ಲದ್ದರಿಂದ ನಾನು ಬ್ರಹ್ಮನಲ್ಲೆಂಬುವದೆ ಅಸಂಭಾವನೆಯು,( ಇವುಗಳನ್ನು, ) ಅನುಕರಿಸಲ್=ಅಂಗೀಕರಿಸಿದರೆ, ಅಮೃತಮಂ=ಅಮೃತವನ್ನು, ತೊರೆದ=ಬಿಟ್ಟ, ಉದಂಕನ=ಉದಂಕನಾಮಕ ಬ್ರಾಹ್ಮಣನ, ತಪದಗತಿಯಹುದು=ತಪಸ್ಸಿನ ಪರಿಣಾಮವೇ ಪ್ರಾಪ್ತವಾಗುವದು, ನೋಡು=ವಿಚಾರಿಸು,

**ತಾತ್ಪರ್ಯ:–**ಹೇ ಶಿಷ್ಯನೇ! ಕೇಳು.ಅಸಂಭಾವನೆ ವಿಪರೀತ ಭಾವನೆಗಳನ್ನು ಸರ್ವಥಾ ಮಾಡಬೇಡ. ಮಾಡಿದರೆ, ನಿನಗೆ ಅನರ್ಥವೇ ಪ್ರಾಪ್ತವಾಗುತ್ತದೆ. ಗುರು ಮತ್ತು ಶ್ರುತಿ ಇವರು ಹೇಳಿದಂತೆ ನಾನು ಬ್ರಹ್ಮನಾಗಿದ್ದರೆ, ನನಗೆ ಸರ್ವಜ್ಞತ್ವಾದಿ ಗುಣಗಳು ಇರಬೇಕು. ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ಮಾಡಲಿಕ್ಕೆ ಬರಬೇಕಾಗಿತ್ತು. ಎಂಬ ಭಾವನೆಯೇ ಅಸಂಭಾವನೆಯು ಆಗಿದೆ. ಇದುವರೆಗೂ ಬರಲಿಲ್ಲವದರಿಂದ ನಾನು ಬ್ರಹ್ಮನಲ್ಲ. ಕಿಂತು ಜೀವನೇ ಇರುತ್ತೇನೆಂದು ನಿಶ್ಚಯಮಾಡುವದೇ ವಿಪರೀತ ಭಾವನೆಯಾಗಿರುತ್ತದೆ. ಈ ಉಕ್ತ ಭಾವನೆಗಳನ್ನು ನೀನು ಅಂಗೀಕಾರ ಮಾಡಿದರೆ, **ಉದಂಕನ** ತಪದಗತಿಯೇ ನಿನಗಾಗುತ್ತದೆ.

**ಮೂತ್ರಾಶಂಕೋ ಯಥೋದಂಕೋ ನಾಗೃಹೀದಮೃತಂ ಯಥಾ ।**
**ಕರ್ಮನಾಶ ಭಯಾಜ್ಜಂತೊ ಸ್ತತ್ವಜ್ಞಾನಾಗ್ರಹ ಸ್ತಥಾ॥**

ಉದಂಕನಾಮಕ ಬ್ರಾಹ್ಮಣನು ಅಮೃತವನ್ನು ಮೂತ್ರವೆಂದು ವಿಪರೀತವಾಗಿ ತಿಳಕೊಂಡು ಹೇಗೆ ಗ್ರಹಿಸಲಿಲ್ಲೋ, ಅದರಂತೆ ಕರ್ಮನಾಶಭಯದಿಂದ ತತ್ವಜ್ಞಾನವನ್ನು ಗ್ರಹಿಸದೆ ಹೋದರೆ, ಅದೇ ಫಲವಾಗುತ್ತದೆಂದು ಶ್ರೀ. ಶಂಕರಾಚಾರ್ಯರು ಉಪದೇಶ ಸಾಹಸ್ರಿನಾಮಕ ಗ್ರಂಥದಲ್ಲಿ ಹೇಳಿರುತ್ತಾರೆ. ಉಕ್ತ ಶ್ಲೋಕವನ್ನು ಮೇಲೆ ಉದಾಹರಿಸಿರುತ್ತದೆ. ಇನ್ನು ಆ ಉದಂಕ ಬ್ರಾಹ್ಮಣನ ಕಥೆಯನ್ನು ಹೇಳುತ್ತೇನೆ ಕೇಳು. ಹೇಗಂದರೆ– “ಉದಂಕನೆಂಬ

ಒಬ್ಬ ಬ್ರಾಹ್ಮಣನು ಅಮೃತಪ್ರಾಪ್ತಿಯ ಸಲುವಾಗಿ, ವೈಕುಂಠವಾಸಿಯಾದ ವಿಷ್ಣು ಭಗವಂತನನ್ನು ಕುರಿತು, ಘೋರತಪಶ್ಚರ್ಯವನ್ನು ಮಾಡಿದನು. ಆಗ ವಿಷ್ಣು ಆತನ ತಪಶ್ಚರ್ಯಕ್ಕೆ ಮೆಚ್ಚಿ ಪ್ರಸನ್ನನಾಗಿ, ಸ್ವರ್ಗಲೋಕವಾಸಿಯಾದ ಇಂದ್ರನಿಗೆ ಆಜ್ಞೆಯನ್ನು ಮಾಡಿದನು. 'ಹೇ ಇಂದ್ರನೇ! ನೀನು ಉದಂಕ ನಾಮಕ ಬ್ರಾಹ್ಮಣನಿಗೆ ಅಮೃತವನ್ನು ಕೊಟ್ಟು ಬಾ' ಎಂದು ಹೇಳಿದನು. ಆಗ ಇಂದ್ರನು ಹಾಗೇ ಮಾಡುತ್ತೇನೆಂದು ಒಪ್ಪಿಕೊಂಡನು. ಮತ್ತು ತನ್ನ ಮನಸ್ಸಿನಲ್ಲಿ ಆಲೋಚನೆಯನ್ನು ಮಾಡಿದನು. ಏನಂದರೆ, 'ಈ ಬ್ರಾಹ್ಮಣನು ಭೂಲೋಕವಾಸಿಯಾಗಿರುವನು. ಅಮೃತವು ಬೇಕಾದರೆ ನೂರಾಒಂದು ಯಜ್ಞಗಳನ್ನು ಮಾಡಿ, ಪುಣ್ಯಫಲದಿಂದ ಸ್ವರ್ಗಕ್ಕೆ ಬಂದು, ದೇವತ್ವ ಶರೀರವನ್ನು ಪಡೆದು, ಅಮೃತವನ್ನು ಉಣ್ಣಬೇಕು. ಹೀಗಿದ್ದು ಇವನು ಮೃತ್ಯುಲೋಕದಲ್ಲಿ ಮನುಷ್ಯ ಶರೀರದಲ್ಲಿದ್ದು, ಅಮೃತವನ್ನು ಪಡೆಯಬೇಕೆಂದು ಮಾಡಿರುವನು. ಇದು ಅಸಂಭವವಾಗಿದೆ. ಆದರೂ ಈಗ ವಿಷ್ಣುವಿನ ಆಜ್ಞೆಯಾಗಿದೆ. ಕೊಡದೆ ಬಿಡುವಂತಿಲ್ಲ. ಕೊಡಲಿಕ್ಕೆ ನನ್ನ ಮನಸ್ಸಿಲ್ಲ. ಇದಕ್ಕೆ ಏನಾದರೊಂದು ಉಪಾಯವನ್ನು ಊಹೆ ಮಾಡದಿದ್ದರೆ ಗತಿಯಿಲ್ಲ. ಎಂದು ಭಾವಿಸುತ್ತಿರಲು, ಅವನಿಗೆ ಒಂದು ಉಪಾಯವು ಹೊಳೆಯಿತು. ಅದೇನಂದರೆ, 'ನಾನು ಅಮೃತವನ್ನು ಕೊಟ್ಟರೆ, ಬ್ರಾಹ್ಮಣನು ಅಮರನಾಗುತ್ತಾನೆ. ಕೊಡದಿದ್ದರೆ ಭಗವಂತನು ಸಿಟ್ಟಾಗುತ್ತಾನೆ. ಆದ್ದರಿಂದ ಚಾಂಡಾಲ ರೂಪವನ್ನು ಧರಿಸಿ, ಉದಂಕ ಬ್ರಾಹ್ಮಣನ ಸಮೀಪಕ್ಕೆ ಹೋದರೆ, ಉದಂಕನು ಅಮೃತವನ್ನು ತೆಗೆದುಕೊಳ್ಳುವದೂ ಇಲ್ಲ. ಭಗವಂತನು ಸಿಟ್ಟಾಗುವದೂ ಇಲ್ಲ' ಎಂದು ನಿಶ್ಚಯಮಾಡಿದನು. ಆ ಮೇಲೆ ಇಂದ್ರನು ಚಂಡಾಲ ರೂಪವನ್ನು ಧರಿಸಿ, ಅಮೃತವನ್ನು ಮೂತ್ರ ಸ್ಥಾನದಲ್ಲಿ ಕಟ್ಟಿಕೊಂಡು, ಕೈಯಲ್ಲಿ ಧನುರ್ಬಾಣಗಳನ್ನು ತಕ್ಕೊಂಡು, ಸಂಗಡ ನಾಯಿಗಳನ್ನು ಕರಕೊಂಡು, ಉದಂಕನ ಹತ್ತರ ಬಂದನು. 'ಹೇ ಉದಂಕನೇ! ನಾನು ಇಂದ್ರನು. ನಿನಗೆ ಅಮೃತವನ್ನು ಕೊಡಲಿಕ್ಕೆ ಬಂದಿರುವೆನು. ಅಮೃತವನ್ನು ಕೊಟ್ಟು ಬಾಯೆಂದು ಶ್ರೀ. ಭಗವಂತನ ಆಜ್ಞೆಯು ಆಗಿರುತ್ತದೆ. ಆದ್ದರಿಂದ ಈ ಅಮೃತವನ್ನು ತೆಗೆದುಕೋ' ಎಂದು ಹೇಳಿದನು. ಆದರೆ ಉದಂಕನು ತನ್ನ ಮನದಲ್ಲಿ ಹೀಗೆ ಆಲೋಚನೆಯನ್ನು ಮಾಡಹತ್ತಿದನು. ಏನಂದರೆ, 'ಇವನು ಚಂಡಾಲನು. ನಾನು ಬ್ರಾಹ್ಮಣನು. ಈತನ ಹತ್ತರವಿದ್ದ ಅಮೃತವನ್ನು ತಕ್ಕೊಂಡರೆ, ನನ್ನ ಬ್ರಾಹ್ಮಣತ್ವವು ಹಾನಿಯಾಗುತ್ತದೆ. ಮತ್ತು ಈತನು ಇಂದ್ರನೋ? ನಿಜವಾಗಿ ಚಂಡಾಲನೋ? ಗೊತ್ತಿಲ್ಲ. ಈತನು ತಂದದ್ದು ಅಮೃತವಾಗಿದ್ದರೆ, ತಲೆಯ ಮೇಲೆ ಹೊತ್ತು ತರಬಹುದಾಗಿತ್ತು. ಅಥವಾ ಕೈಯಲ್ಲಿಯಾದರೂ ಹಿಡಿಯಬಹುದಾಗಿತ್ತು. ಹೀಗಿರದೆ ನಾಭಿ ಕೆಳಗಡೆಯಲ್ಲಿ ಕಟ್ಟಿಕೊಂಡು ಬಂದಿರುವನು.

ಆದ್ದರಿಂದ ಇದು ಅಮೃತವದೆಯೋ? ಅಥವಾ ಮೂತ್ರವದೆಯೋ? ತಿಳಿಯದು. ನಾನು ಶ್ರೀ. ಭಗವಂತನನ್ನು ಕೇಳಿದ್ದೇನೆ. ಇಂದ್ರನನ್ನು ಕುರಿತು ನಾನೇನು ಕೇಳಿಲ್ಲ.' ಎಂಬ ಅನೇಕ ಸಂಕಲ್ಪ ವಿಕಲ್ಪರೂಪ ಸಂಶಯುಗಳನ್ನು ಮಾಡುತ್ತಾ, ಕಡೆಯಲ್ಲಿ ಅಮೃತವನ್ನು ತಕ್ಕೊಳ್ಳದೆ ಬಿಡುವದನ್ನೆ ನಿಶ್ಚಯ ಮಾಡಿದನು. ಅಮೃತದಲ್ಲಿ ಮೂತ್ರ ಬುದ್ಧಿಯು "ಇಂದ್ರನಲ್ಲಿ ಚಂಡಾಲ ಬುದ್ಧಿಯು" ವಿಪರೀತ ಭಾವನೆಗಳಾಗಿವೆ. ಈ ಸಂಶಯ ವಿಪರೀತ ಭಾವನೆಗಳಿಂದ ಕೂಡಿ ಉದಂಕನು ತಪವನ್ನು ಹಾಳುಮಾಡಿಕೊಂಡನು. ಫಲವನ್ನು ಪಡೆಯದೆಹೋದನು, ಇದರಂತೆ ನೀನಾದರೂ ಈ ತತ್ತ್ವಮಸಿ ಮಹಾವಾಕ್ಯದ ಅಹಂಬ್ರಹ್ಮಾಸ್ಮಿಯೆಂಬ ನಿಶ್ಚಯ ಜ್ಞಾನವನ್ನು ಹೊಂದದೆ, **ಸಂಶಯ ಅಸಂಭಾವನಾ ವಿಪರೀತ** ಭಾವನೆಗಳಿಂದ ಕೂಡಿದರೆ, ಮುಕ್ತಿಯೆಂಬ ಫಲವನ್ನು ಪಡೆಯದೆ, ಪುನಃ ಪುನಃ ಜನನ ಮರಣ ರೂಪ ಸಂಸಾರ ದುಃಖವನ್ನೇ ಅನುಭವ ಮಾಡುವಿ. ಆದರಿಂದ ಸಂಶಯಾದಿಗಳನ್ನು ಬಿಡು. ಶ್ರುತಿ—ಗುರುಗಳ ವಾಕ್ಯವನ್ನು ನಂಬಿ, ಸುಖಿಯಾಗು' ಎಂದು ಗುರುಗಳು ಹೇಳುತ್ತಲಿದ್ದಾರೆ.

**ಬಳಿಕ,** ಶ್ರುತಿಗುರುಗಳ ವಾಕ್ಯವನ್ನು ನಂಬಿದರೆ ಮುಕ್ತಿಯು ಆಗುತ್ತದೆ, ಇಲ್ಲದಿದ್ದರೆ, ಅನರ್ಥವಾಗುತ್ತದೆಂದು ಹೇಳುತ್ತಾರೆ.

**ಪೇಳಿದರ್ಥಂಗಳಂ ಕೇಳಿ ನಂಬಲು ಮುಕ್ತಿ।**
**ಮೇಳವಹುದಲ್ಲದಿರೆ ಭಸ್ಮದೊಳುಹವಿಯು।**
**ಬೀಳಿದಂತಪ್ಪದೆಲೆ ಪುತ್ರ** ||೬||

**ಟೀಕಾ:–** ಎಲೆಪುತ್ರ=ಹೇ ಶಿಷ್ಯನೇ! ಪೇಳಿದ=ಶ್ರುತಿಗುರುಗಳು ಹೇಳಿದ, ಅರ್ಥಂಗಳಂ=ಅರ್ಥಗಳನ್ನು, ಕೇಳಿ=ಶ್ರವಣಮಾಡಿ, ನಂಬಲು=ವಿಶ್ವಾಸವುಳ್ಳವನಾದರೆ, ಮುಕ್ತಿ=ಮೋಕ್ಷವು, ಮೇಳವಹುದು=ಪ್ರಾಪ್ತವಾಗುವದು, ಇಲ್ಲದಿರೆ=ಇಲ್ಲದಿದ್ದರೆ, ಭಸ್ಮದೊಳು=ಬೂದಿಯಲ್ಲಿ, ಹವಿಯ=ಘೃತಾದಿ ಹವಿರ್ದ್ರವ್ಯಗಳನ್ನು, ಬೀಳಿದಂತೆ=ಚಲ್ಲಿದಹಾಗೆ, ಅಪ್ಪುದು=ಆಗುವದು;

**ತಾತ್ಪರ್ಯ:–** ಹೇ ಶಿಷ್ಯನೇ ಕೇಳು. ಅಗ್ನಿಯಲ್ಲಿ ಹವಿರ್ಭಾಗ ದ್ರವ್ಯಗಳನ್ನು ಹಾಕಿದರೆ, ಆ ಅಗ್ನಿಯುಮುಖದಿಂದ ದೇವತೆಗಳು ಸಂತುಷ್ಟರಾಗಿ, ಕರ್ಮಿಗೆ ಕರ್ಮಫಲಗಳನ್ನು ಕೊಡುತ್ತಾರೆ. ಹೀಗೆ ಮಾಡುವದನ್ನು ಬಿಟ್ಟು, ಬೂದಿಯಲ್ಲಿ ಘೃತಾದಿಗಳನ್ನು ಹಾಕಿದರೆ, ಫಲಕ್ಕೆ ಸಾಧನವಾಗದೆ ಹೇಗೆ ವ್ಯರ್ಥವಾಗುವದೋ; ಇದರಂತೆ ನೀನು ಶ್ರುತಿಗುರುಗಳಿಂದ ಕೇಳಿದ ವೇದವಾಕ್ಯಗಳ ಅರ್ಥವನ್ನು ನಂಬಿದರೆ, ಮುಕ್ತಿಯಾಗುವದು. ನಂಬದೆ ಅವಿಶ್ವಾಸಮಾಡಿಕೊಂಡು ಹೌದೋ ಅಥವಾ

ಅಲ್ಲೋ ಎಂಬ ಸಂಶಯವುಳ್ಳವನಾದರೆ, 'ಅಶ್ರದ್ಧಯಾ ಸಂಶಯಾತ್ಮಾ ವಿನಶ್ಯತಿ' ಮುಕ್ತಿಯಾಗದೆ ಸಂಸಾರದುಃಖವೇ ಪ್ರಾಪ್ತವಾಗುತ್ತದೆ.ಆದ್ದರಿಂದ ಶ್ರವಣ ಮಾಡಿದ ಶ್ರುತಿಗುರುವಾಕ್ಯಗಳಲ್ಲಿ ನಂಬಿಗೆಯುಳ್ಳವನಾಗಿರು.

ಬಳಿಕ, ಶ್ರವಣ ಮಾಡಿದ್ದರಲ್ಲಿ ನಂಬಿಗೆ ಹೇಳಿ, ಮುಂದೆ ಸಂಶಯ ನಿವೃತ್ತಿ ಪೂರ್ವಕ ಮನನವನ್ನು ತಿಳಿಸುತ್ತಾರೆ.

ಸಂದೇಹವಳಿಯಲಾನಂದ ಸಾಗರವೆ ನಿ।
ಸ್ಪಂದವಾಗಿಹುದು- ಮಂದರಾದ್ರಿಯ ಚಲನೆ।
ನಿಂದ ದುಗ್ಧಾಂಬು ನಿಧಿಯಂತೆ ||೭||

**ಟೀಕಾ:**- ಮಂದರಾದ್ರಿಯ=ಮಂದಾರನಾಮಕ ಪರ್ವತದ, ಚಲನೆನಿಂದ=ಕಡಿಯೋಣರೂಪ ಚಲನೆಯಿಲ್ಲದ, ದುಗ್ಧಾಂಬುನಿಧಿಯಂತೆ=ಕ್ಷೀರಸಾಗರದಂತೆ, ಸಂದೇಹವು=ಸಂಶಯವು, ಅಳಿಯಲ್=ನಾಶವಾಗಲು, ಆನಂದಸಾಗರವೆ=ಆನಂದವೆಂಬ ಸಮುದ್ರವೆ,ನಿಷ್ಪಂದವಾಗಿಹುದು=ಅಚಲಸ್ಥಿತಿಯಿಂದ ಶಾಂತವಾಗಿರುವದು.

**ತಾತ್ಪರ್ಯ:**- ಹೇ ಪುತ್ರನೇ ! ಕೇಳು. ಮನಸ್ಸಿನಲ್ಲಿ ಯಾವ ಸಂಶಯವನ್ನು ಮಾಡಬೇಡ. ಅದರಿಂದ ನಿನಗೆ ಸುಖವಿಲ್ಲ. ಸಂಶಯವಿಲ್ಲದೆ ನಿಶ್ಚಯವುಳ್ಳವನಾದರೆ ನೀನು ಸುಖಿಯಾಗುವಿಯೆಂದು ಹೇಳುತ್ತಾರೆ. ಹೇಗಂದರೆ, ದೇವದೈತ್ಯರು ಕೂಡಿ, ಮಂದರಾದ್ರಿಯನ್ನು ಕಡಗೋಲು ಮಾಡಿ, ಆದಿಶೇಷನನ್ನು ಹಗ್ಗವನ್ನಾಗಿ ಮಾಡಿ, ಸಮುದ್ರವನ್ನು ಕಡೆಯಲಿಕ್ಕೆ ಹತ್ತಲು, ಅದು ಅಲ್ಲೋಲ ಕಲ್ಲೋಲವಾಗಿ ನೀರು ಚಲಿಸಹತ್ತಿತು. ಕಡೆಯುವದನ್ನು ಬಿಡಲಾಗಿ ಶಾಂತ ಗಂಭೀರ ಸ್ಥಿತಿಯಿಂದ ನಿಶ್ಚಲವಾಯಿತು.

ಈ ದೃಷ್ಟಾಂತದಂತೆ, ಸಂಶಯದಿಂದ ನಿನ್ನ ಆನಂದ ಸಮುದ್ರವು ಚಲಿಸುವದು. ಸಂಶಯರಹಿತ ನಿಶ್ಚಯ ಜ್ಞಾನವುಳ್ಳವನಾದರೆ, ಆನಂದಸಾಗರವು ಸ್ಥಿರವಾಗಿ ತೋರುವದು. ಸಂಶಯರಹಿತನಾದರೆ, ನಿನಗೆ ಆನಂದವಾಗುವದೆಂಬ ಭಾವವು.

ಬಳಿಕ, ಶ್ರವಣವನ್ನು ಕೇಳಿದ ಮೇಲೆ ಮನನಮಾಡು. ಸಂಶಯವನ್ನು ಕಳೆಯೆಂದು ಹೇಳಲು; ಮನನವನ್ನು ನಾನು ಎಷ್ಟುದಿವಸಗಳವರೆಗೆ ಮಾಡಲಿ. ಎಂದು ಕೇಳಿದರೆ; ದೇಹಾತ್ಮಬುದ್ಧಿಯಂತೆ ನಾನು ಬ್ರಹ್ಮನೆಂಬ ಬುದ್ಧಿ ದೃಢವಾಗುವ ಪರ್ಯಂತರ ಮನನಮಾಡು. ಎಂದು ಮನನಕ್ಕೆ ಸೀಮೆಯನ್ನು ತೋಸುತ್ತಲಿದ್ದಾರೆ.

**ಮುನ್ನವೀ ದೇಹಭಾವಂ ನೈಜವಾದಂದ।**
**ದಿಂ ನೀನೆ ಪರಮನೆಂಬ ಭಾವಂ ಫಲಿಸು।**
**ವನ್ನೆಗಂ ಮನನ ಮಿರುತಿರ್ಕೆ ॥೮॥**

**ಟೀಕಾ:-** ಮುನ್ನವೆ=ಮೊದಲಿಗೆ, ಈ ದೇಹಭಾವಂ=ಈ ದೇಹವೇನಾನೆಂಬ ಭಾವನೆಯು, ನೈಜವಾದಂದದಿಂ=ನಿಜವಾಗಿ ತೋರಿದ ಹಾಗೆ, ನೀನೆ=ನೀನೇ? ಪರಮನೆಂಬ=ಪರಮಾತ್ಮನಿರುವೆನೆಂಬ, ಭಾವಂ=ಭಾವನೆಯು, ಫಲಿಸುವನ್ನೆಗಂ= ಪ್ರಾಪ್ತವಾಗುವವರೆಗೂ, ಮನನಂ=ಯುಕ್ತಿಯಿಂದೊಡಗೂಡಿದ ಅರ್ಥಚಿಂತನವು, ಇರುತಿರ್ಕೆ=ಇರಲಿ.

**ತಾತ್ಪರ್ಯ:-** ತೃಪ್ತಿಯಾಗುವ ಪರ್ಯಂತರ ಊಟವನ್ನು ಮಾಡುವಂತೆ, ನಿಶ್ಚಯ ಜ್ಞಾನವಾಗುವವರೆಗೆ ಮನನವನ್ನು ಮಾಡುತ್ತಿರಬೇಕು. ನಿಶ್ಚಯವು ಅಂದರೆ ಅದು ಹೇಗೆ? ಎಂದು ನೀನು ಕೇಳಿದರೆ; ಮೊದಲು ಅಜ್ಞಾನಕಾಲದಲ್ಲಿ ಈ ಕಾಣುವ ದೇಹವೇ ನಾನೆಂದು ಹೇಗೆ ನಿಶ್ಚಯವಿತ್ತೋ, ಹಾಗೆ ನಾನು ಪರಬ್ರಹ್ಮ ರೂಪನೇ ಎಂಬ ಜ್ಞಾನವು ನಿಶ್ಚಯವಾಗಬೇಕು. ಅಂದರೆ, ದೇಹವು ನಾನು ಹೌದೋ ಅಲ್ಲವೋ ಎಂಬ ಸಂಶಯವೂ ಇಲ್ಲ. ದೇಹವು ನೀನಲ್ಲ ಎಂದು ಯಾರು ಹೇಳಿದರೂ, ಅವರ ಮಾತು ಕೇಳುವಂತಿಲ್ಲ. ನಾನು ದೇಹವೇ ಎಂಬುದು ಅಜ್ಞಾನ ಕಾಲಕ್ಕೆ ಹೇಗೆ ದೃಢವಾಗಿತ್ತು. ನೋಡು. ಅದರಂತೆ ಈ ಜ್ಞಾನಕಾಲದಲ್ಲಿ ಯಾದರೂ, ನಾನು ಸಚ್ಚಿದಾನಂದ ಬ್ರಹ್ಮವೇ ನಾನಿದ್ದೇನೆ ಎಂಬುದು ನಿಶ್ಚಯ ವಾಗಬೇಕು. ಯಾರು ಏನು ಹೇಳಿದರೂ ನಾನು ಬ್ರಹ್ಮ ಹೌದೋ ಅಲ್ಲೋ ಎಂಬ ಸಂಶಯವು ಬರಬಾರದು. ಹೀಗೆ ದೃಢವಾಗುವ ಪರ್ಯಂತರ ಮನನವನ್ನು ಮಾಡುತ್ತಿರಬೇಕು. ಅಂದರೆ, ಯುಕ್ತಿ, ತರ್ಕ, ಅನುಮಾನಗಳಿಂದ ಕೇಳಿದರ್ಥ ವನ್ನು ನಿಶ್ಚಯ ಮಾಡುವದೇ **ಮನನ**ವಾಗಿರುತ್ತದೆ.

ಬಳಿಕ, ಮನನವನ್ನು ಮಾಡಿದ ತರುವಾಯ, ವಿಜಾತೀಯ ವೃತ್ತಿ ನಿವೃತ್ತಿ ಪೂರ್ವಕ ಸ್ವಸ್ವರೂಪಾಕಾರ ವೃತ್ತಿಪ್ರವಾಹರೂಪ **ನಿಧಿಧ್ಯಾಸನ**ವನ್ನು ಮಾಡು ತ್ತಿರು ಎಂದು ಹೇಳುತ್ತಾರೆ.

**ಪೊರಗೆಂತುಟಾದೊಡೇಂ ಮರೆಯದೊಳಗೊಲಿದು ನೀ।**
**ನರಿದ ನಿಜಸೌಖ್ಯವನೆ ಕರಣದುಪಹತಿಗೆ।**
**ತೆರಹುಗೊಡದನುಭವಿಸು ಬೋಧ್ಯ ॥೯॥**

**ಟೀಕಾ:-** ಪೊರಗೆ=ಹೊರಗೆ, ಎಂತುಟಾದೊಡೇಂ=ಹೇಗಾದರೇನು, ಮರೆ ಯದೆ=ಅರಿದ ತನ್ನ ನಿಜವನ್ನು ತಾನು ಮರೆಯದೆ, ಒಳಗೊಲಿದು=ಅಂತರಂಗದಲ್ಲಿ

ಪ್ರೀತನಾಗಿ, ನೀನರಿದ=ನೀನು ತಿಳಿದ, ನಿಜ ಸೌಖ್ಯವನೆ=ಸ್ವಸ್ವರೂಪ ಸುಖವನ್ನೇ, ಕರಣದ=ಅಂತಃಕರಣ ವೃತ್ತಿರೂಪಕರಣದ, ಉಪಹತಿಗೆ=ಅನಾತ್ಮಾಕಾರ ಹೊಡತಕ್ಕೆ, ತೆರವುಗೊಡದೆ=ಅವಕಾಶವನ್ನೀಯದೆ, ಬೊಧ್ಯ=ಶಿಷ್ಯನೇ ! ಅನುಭವಿಸು=ನಿಜಸುಖವನ್ನು ಹೊಂದು.

**ತಾತ್ಪರ್ಯ:-** ಹೇ ಶಿಷ್ಯನೇ! ಕೇಳು. ಹೊರಗಿನ ವ್ಯವಹಾರವು ಏನೇ ಆಗಲಿ. ಅತ್ತಕಡೆಗೆ ನೀನು ಲಕ್ಷ್ಯವನ್ನು ಕೊಡಬೇಡ. ಶ್ರುತಿ ಗುರುಗಳಿಂದ ಅರತ ನಿನ್ನ ನಿಜವನ್ನು ಮರೆಯಬೇಡ. ಕಿಂತು; ಅಂತಃರ್ಮುಖ ವೃತ್ತಿಯುಳ್ಳವನಾಗಿ, ಬ್ರಹ್ಮಾಭಿನ್ನ ಪ್ರತ್ಯಗಾತ್ಮ ಸ್ವರೂಪನೇ ನಾನೆಂದು, ಅಖಂಡ ಬ್ರಹ್ಮಾಕಾರ ವೃತ್ತಿಯಿಂದ ಸ್ವರೂಪ ಸುಖವನ್ನು ಅನುಭವಮಾಡು. ಅಂದರೆ, ಜೀವನ್ಮುಕ್ತಿ ಸುಖವನ್ನು ಅನುಭವಿಸು ಎಂಬ ಭಾವವು. ಅರ್ಥಾತ್ ಆತ್ಮ ಭಿನ್ನವಾಗಿ ಅನಾತ್ಮಾಕಾರ ವೃತ್ತಿಗಳಿಗೆ ಅವಕಾಶವನ್ನು ಕೊಡಬೇಡ. ಹೀಗೆ ಹೇಳುವದರಿಂದ ಅನಾತ್ಮಾಕಾರ ವಿಜಾತೀಯ ವೃತ್ತಿಗಳನ್ನು ತಿರಸ್ಕಾರಮಾಡುತ್ತಾ, ಸಜಾತೀಯ ವೃತ್ತಿಗಳನ್ನು ಬೆಳಿಸುವದೇ ನಿಧಿಧ್ಯಾಸನವಾಗಿದೆ.

**ಬಳಿಕ,** ನಿಜವನ್ನು ಮರೆಯದೆ ಇರುವದು ಗುರುಸಾಂಪ್ರದಾಯವಾಗಿದೆ. ಮತ್ತು ಯೋಗಿಗಳಿಗೂ ಸಮ್ಮತ ವೇದಾರ್ಥವೂ ಆಗಿರುತ್ತದೆಂದು ನಿರೂಪಣ ಮಾಡುತ್ತಾರೆ.

**ಇದು ಸಕಲ ನಿಗಮಾರ್ಥವಿದು ಯೋಗಿಗಳ ಮಾರ್ಗ ।**
**ವಿದು ಗುರೂತ್ತಮರ ಮತವಪ್ಪುದಾಗಿ ನಿಜ ।**
**ಪದವನೇ ಮರೆಯದಿಹುದಿಂತು ॥೧೦॥**

**ಟೀಕಾ:-** ಇದು=ಈಗ ಹೇಳಿದ್ದು, ಸಕಲ=ಎಲ್ಲ, ನಿಗಮಾರ್ಥವು=ಉಪನಿಷತ್ತುಗಳ ಅರ್ಥವಾಗಿರುತ್ತದೆ, ಇದು ಯೋಗಿಗಳ ಮಾರ್ಗ=ಮೋಕ್ಷಕ್ಕೆಹೋಗುವ ಜ್ಞಾನಿಯೋಗಿಗಳ ಮಾರ್ಗ;ಇದೇಯಾಗಿರುತ್ತದೆ, ಇದು ಗುರೂತ್ತಮರಮತ=ಇದು ಗುರುಪರಂಪರಾ ಸಾಂಪ್ರದಾಯವಾಗಿ ಬಂದಿರುವದು ಇದಕ್ಕೆ ಎಲ್ಲರ ಒಪ್ಪಿಗೆಯು ಇರುತ್ತದೆ, ಅಪ್ಪುದಾಗಿ=ಆದ್ದರಿಂದ, ಇಂತು=ಹೇಳಿದಪ್ರಕಾರ, ನಿಜಪದವನೆ=ನಿನ್ನ ನಿಜ ಸ್ವರೂಪವನ್ನು, ಮರೆಯದಿರು=ವಿಸ್ಮೃತಿಯನ್ನು ಹೊಂದದಿರು.

**ತಾತ್ಪರ್ಯ:-** ತನ್ನ ನಿಜವನ್ನು ತಾನು ಮರೆಯದೆ, ಅಖಂಡ ಸಚ್ಚಿದಾನಂದಾತ್ಮ ಸ್ವರೂಪಸ್ಥಿತಿಯಲ್ಲಿರುವದು . ಸಕಲೋಪನಿಷತ್ತುಗಳ **ತಾತ್ಪರ್ಯರೂಪ** ಅರ್ಥವಾಗಿರುತ್ತದೆ. ಹಾಗೂ ಈ ಮಾರ್ಗದಿಂದಲೇ ಅಂದರೆ; **ಶ್ರವಣ, ಮನನ, ನಿಧಿಧ್ಯಾಸನಗಳಿಂದಲೇ,** ಮುಮುಕ್ಷುಗಳು **ಮೋಕ್ಷವನ್ನು** ಹೊಂದುತ್ತಿರುವರೆಂಬ

ಭಾವವು. ಮತ್ತು ಇದು **ಗುರುಪರಂಪರಾ** ಸಾಂಪ್ರದಾಯ ಸಿದ್ಧವಾದದ್ದು ಆಗಿ ರುತ್ತದೆ. ಆದ್ದರಿಂದ ನಿನ್ನ ನಿಜವನ್ನು ನೀನು ಮರೆಯದೆ ಇರು, ಎಂದು ಹೇಳಿದರು.

## ಶ್ರೀಗುರುಸಂಬೋಧ ನಿರೂಪಣೆ ಸೂತ್ರ ೨ ಕ್ಕೆ ತ್ರಿವಿದಿ ೧೫

---

**ಬಳಿಕ,** ಆಪ್ತಪುರುಷನ 'ದಶಮಸ್ತ್ವಮಸಿ' ನೀನೇ ಹತ್ತನೆಯವನಿದ್ದಿ ಎಂಬ ವಚನದಿಂದ,ಹತ್ತನೆಯವನಿಗೆ ನಾನು ಹತ್ತನೆಯವನಿದ್ದೇನೆಂಬ ಅಪರೋಕ್ಷ ಜ್ಞಾನವಾಗುತ್ತದೆ. ಇದರಂತೆ ತತ್ತ್ವಮಸಿಯೆಂಬ ಮಹಾವಾಕ್ಯವನ್ನು ಗುರುಗಳು ಉಪದೇಶ ಮಾಡಲು; ನಾನು ಬ್ರಹ್ಮನೆಂಬ ಬ್ರಹ್ಮಾಪರೋಕ್ಷ ಜ್ಞಾನವಾಗುತ್ತದೆ. ಅನಂತರ ಏನಾದರೂ ಸಂಶಯ, ಅಸಂಭಾವನಾ, ವಿಪರೀತ ಭಾವನೆಗಳು ಬಂದರೆ ಅವುಗಳ ನಿವೃತ್ತಿಗಾಗಿ ಶ್ರವಣ, ಮನನ, ನಿಧಿಧ್ಯಾಸನಗಳು ಹೇಳಲ್ಪಡುತ್ತವೆ. ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಮುಖ್ಯವಾಗಿ ಮಹಾವಾಕ್ಯ ಶ್ರವಣವೇ ಕರಣವಾಗಿ ರುತ್ತದೆ. ಈ ಮಹಾವಾಕ್ಯವು ಶಿವಜೀವರ ಭೇದವನ್ನು ನಿರಾಕರಿಸಿ ಅಭೇದ ಬೋಧಕವಾಗಿರುತ್ತದೆ. ಆದ್ದರಿಂದ ಹಲವು ಮತವದರು 'ಈ ಮಹಾವಾಕ್ಯವು ಭೇದ ವನ್ನು ಹೇಳುತ್ತದೆ. ಅಭೇದವನ್ನು ಹೇಳುವದಿಲ್ಲ' ಎಂದು ನಾನಾಯುಕ್ತಿ ಪ್ರಯು ಕ್ತಿಗಳಿಂದ ಭೇದಪರ ವಿಕಲ್ಪರೂಪ ಅರ್ಥಗಳನ್ನು ಕಲ್ಪಿಸಿ ಹೇಳುತ್ತಾರೆ. ಅವರ ವಾಕ್ಯಗಳನ್ನು ಕೇಳಿ ಮುಂದ ಜಿಜ್ಞಾಸುಗಳಿಗೆ ಮಹಾವಾಕ್ಯವಾದ ಅಭೇದಪರ ಅರ್ಥ ದಲ್ಲಿ ಸಂಶಯವು ಬರುತ್ತದೆ. ಅನರ್ಥವು ಒದಗುತ್ತದೆ. ಹಾಗೆ ಆಗಬಾರದೆಂದು ತಿಳಿದು, ಗ್ರಂಥಕರ್ತರು ಈ ಸೂತ್ರದಲ್ಲಿ **ಭೇದಪರ ವಿಕಲ್ಪಾರ್ಥಗಳನ್ನು ಸಂಗ್ರ ಹಿಸಿ** ಹೇಳಿದ್ದಾರೆ. ಮತ್ತು ಇವು ನಿಜವೆಂದು ತಿಳಿಯಕೂಡದೆಂದೂ ಹೇಳಿರುವರು. ಯಾಕಂದರೆ; **'ಅನೇನ ಜೀವೇನಾತ್ಮನಾನು ಪ್ರವಿಶ್ಯ'** 'ಪರಮಾತ್ಮನಾದ ನಾನೇ ಈ ದೇಹದಲ್ಲಿ ಜೀವನಾಮಕದಿಂದ ಇರುತ್ತೇನೆ' ಹೀಗೆಂದು ಶ್ರುತಿಯಿರುವದರಿಂದ; ಭೇದಪರ ಅರ್ಥಗಳು ಶ್ರುತಿಗೆ ವಿರೋಧಗಳಾಗುತ್ತವೆ. ಅದರಿಂದ ತ್ಯಜಿಸಲಿಕ್ಕೆ ಯೋಗ್ಯಗಳಾಗಿರುತ್ತವೆ. ಜಿಜ್ಞಾಸುಗಳು ಅವುಗಳನ್ನು ನಂಬಕೂಡದು. **'ಶ್ರುತಿವಿ ರಹಿತ ಮತವನುಳಿವುದೇಳುಂದ,** ಎಂಬ ವಾಕ್ಯದಂತೆ ಶ್ರುತಿವಿರುದ್ಧ ಅರ್ಥ ಗಳನ್ನು ತ್ಯಾಗಮಾಡಬೇಕು. ಎಂಬ ಅಭಿಪ್ರಾಯವುಳ್ಳವರು ಆಗಿರುತ್ತಾರೆ.

ಉಕ್ತ ಅಭಿಪ್ರಾಯದಿಂದ ಶ್ರೀ. ಗುರುಗಳು "ಶಿಷ್ಯನಿಗೆ ಮಹಾವಾಕ್ಯಕ್ಕೆ ಭೇದಪರ ಅರ್ಥ ಮಾಡುವದು ಯೋಗ್ಯವಲ್ಲ" ಎಂದು ಹೇಳುತ್ತಲಿದ್ದಾರೆ

ಸೂತ್ರ॥ **ತತ್ತ್ವಮಸಿಯೆಂಬುದರೊಳೇ ನಾನುಮೊಂದು ಭೇ ।**
**ದತ್ವಮಂ ಪೇಳ್ದೊಡನುಚಿತಮಪ್ಪುದು ॥**

ಟೀಕಾ:-ತತ್ತ್ವಮಸಿಯೆಂಬುದರೊಳು = ತತ್ತ್ವಮಸಿಯೆಂಬ ವಾಕ್ಯದಲ್ಲಿ, ಏನಾನುಮೊಂದು= ಯಾವದಾದರೊಂದು, ಭೇದತ್ವಮಂ=ಭೇದವನ್ನು, ಪೇಳ್ದೊಡೆ= ಹೇಳಿದರೆ, ಅನುಚಿತಮಪ್ಪುದು=ಅಯೋಗ್ಯವಾಗಿರುವದು.

ತಾತ್ಪರ್ಯ:- ಶ್ರುತ್ಯರ್ಥಕ್ಕೆ ವಿರುದ್ಧಗಳಾದ ಭೇದಪರ ವಿಕಲ್ಪಾರ್ಥಗಳನ್ನು ಮಹಾವಾಕ್ಯಕ್ಕೆ ಮಾಡುವದು ಅಯೋಗ್ಯವಾಗಿರುತ್ತದೆ. ಅಂಥಾ ವಿಕಲ್ಪಾರ್ಥಗಳನ್ನು ಕೇಳಿ ಮುಮುಕ್ಷು ಜನರು ಮೋಸಹೋಗದೆ ಇರಬೇಕು. ಅಭೇದಪರ ಅರ್ಥದಲ್ಲಿ ವಿಶ್ವಾಸವುಳ್ಳವರಾಗಬೇಕು. ಎಂಬ ಭಾವವಾಗಿದೆ.

ಬಳಿಕ, ಆ ಪರಮಾತ್ಮನೇ ನೀನೆಂಬ ಮಹಾವಾಕ್ಯದರ್ಥವು ಸ್ತುತಿರೂಪ ಅರ್ಥವಾದ ಪರವೆಂದು ಶಂಕೆಯನ್ನು ಮಾಡಿದರೆ, ಅಲ್ಲವೆಂದು ಉತ್ತರವನ್ನು ಹೇಳುತ್ತಾರೆ

ಶಿಶುವೇ ಕೇಳಾ ತತ್ತ್ವಮಸಿ ವಾಕ್ಯದಲ್ಲಿ ನೀ ।
ನಸಮಚಿದಖಂಡವೆನುತಿರ್ಪುದರ್ಥವಾ ।
ದಸಮೇತವಾದುದೆನಲಿಲ್ಲ ॥೧॥

ಟೀಕಾ:-ಶಿಶುವೆ ಕೇಳ್=ಹೇ ಮಗುವೇ ಕೇಳು, ಆ ತತ್ತ್ವಮಸಿ ವಾಕ್ಯದಲ್ಲಿ= ಆ ಬ್ರಹ್ಮವೇ ನೀನಿದ್ದಿಯೆಂಬ ವಾಕ್ಯದಲ್ಲಿ, ನೀನು=ನೀನು. ಅಸಮ=ಸಮಾನವಿಲ್ಲದ, ಚಿದಖಂಡವೆನು ತಿರ್ಪುದು=ಅಖಂಡ ಚಿದ್ರೂಪನೆಂದು ಹೇಳುತ್ತಿರುವದು, ಅರ್ಥವಾದ=ಅಧಿಕವಾಗಿ ಹೊಗಳುವ ಅರ್ಥದಿಂದ, ಸಮೇತವಾದುದು=ಕೂಡಿದ್ದಾಗಿರುವದು, ಎನಲ್=ಹೀಗೆ ಹೇಳಿದರೆ, ಇಲ್ಲ=ಹೀಗೆ ಅರ್ಥವಾದಪರ ಅರ್ಥ ಮಾಡುವದು ಯೋಗ್ಯವಲ್ಲ.

ತಾತ್ಪರ್ಯ:- ಅತಿಶಯವಾಗಿ ಕೊಂಡಾಡುವ ವಾಕ್ಯಕ್ಕೆ ಅರ್ಥವಾದವೆನ್ನುವರು. ಈ ಮಹಾವಾಕ್ಯವು ಜೀವನನ್ನು ಕುರಿತು— 'ನೀನು ಆ ಬ್ರಹ್ಮನು ನಿನ್ನ ಸಮಾನ ಯಾರೂ ಇಲ್ಲ. ನೀನು ಆಖಂಡ, ಪೂರ್ಣನು, ದೊಡ್ಡವನಿದ್ದಿ' ಎಂದು ಕೊಂಡಾಡುತ್ತದೆ. ಆದರೂ ಈ ಜೀವನು ಹಾಗೆ ಇಲ್ಲ. ಕಿಂತು; ಹೇಳಿದ ಮಾತಿಗೆ ವಿಲಕ್ಷಣನು ಆಗಿದ್ದಾನೆ. ಆದ್ದರಿಂದ ಪರಮಾತ್ಮನಿಗಿಂತಲೂ ಜೀವನು ಬೇರೆಯಿದ್ದಾನೆ. ಆದರೂ ಈ ಮಹಾವಾಕ್ಯವು ಕೊಂಡಾಡುತ್ತದೆ. ಅದರಿಂದ ಅರ್ಥವಾದಪರವಾಗಿದೆ- ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಯಾಕಂದರೆ, ಮುಂದೆ ಸೂತ್ರದ ಅಂತ್ಯದಲ್ಲಿ ಹೇಳುವ ಶ್ರುತಿಗೆ ವಿರೋಧವಾದ್ದರಿಂದ ಎಂದು ತಿಳಿಯತಕ್ಕದ್ದು.

ಬಳಿಕ, ಕೆಲವರು ಇದನ್ನು ನುತಿಪರವೆಂದು ಹೇಳುತ್ತಾರೆ. ಅದು ಕೂಡಾ ಸರಿಯಿಲ್ಲವೆಂದು ಹೇಳುತ್ತಾರೆ.

**ಮನುಜನಂ ದೇವೇಂದ್ರನೆನುತೆ ಬಣ್ಣಿಸುವಂತೆ।**
**ಘನಪರಂಜ್ಯೋತಿ ನೀನೆಂಬ ವಾಕ್ಯವಿದ।**
**ನೆನಲಿಲ್ಲವೈಸೆ ನುತಿಯೆಂದು ॥೨॥**

**ಟೀಕಾ:-** ಮನುಜನಂ=ಮನುಷ್ಯನನ್ನು, ದೇವೇಂದ್ರನೆನುತೆ = ದೇವೇಂದ್ರನೆಂದು, ಬಣ್ಣಿಸುವಂತೆ = ವರ್ಣನೆ ಮಾಡುವಂತೆ, ಘನ = ಮಹತ್ತಾದ, ಪರಂಜ್ಯೋತಿ=ಸ್ವಯಂಪ್ರಕಾಶನು, ನೀನೆಂಬ=ನೀನಾಗಿರುವಿಯೆಂಬ, ವಾಕ್ಯವಿದನು= ಈ ಮಹಾವಾಕ್ಯವನ್ನು, ನುತಿಯೆಂದು = ಸ್ತುತಿಪರವೆಂದು, ಎನಲಿಲ್ಲವೈಸೆ = ಹೇಳಲಿಲ್ಲವಷ್ಟೆ.

**ತಾತ್ಪರ್ಯ:-** ಭಿಕ್ಷುಕನು ಧನಿಕರ ಮನೆಗೆ ಹೋಗಿ ಆ ಧನಿಕನನ್ನು ಕುರಿತು 'ನೀನು ಭೋಗದಲ್ಲಿ **ದೇವೇಂದ್ರನ** ಸಮಾನನಾಗಿರುವಿ. ಈಗ ಜಗತ್ತಿನಲ್ಲಿ ನಿನ್ನಂತೆ ಭೋಗಿಗಳು ಯಾರೂ ಇಲ್ಲ' ಎಂದು ವರ್ಣನ ಮಾಡುತ್ತಾನೆ. ಆದರೆ, ಅವನು ದೇವೇಂದ್ರನಾಗಬಹುದೆ? ಇಲ್ಲ. ಇದರಂತೆ ಈ ಮಹಾವಾಕ್ಯವು 'ನೀನು ವ್ಯಾಪಕನು, ಸ್ವಯಂಪ್ರಕಾಶನು, ಬ್ರಹ್ಮನು' ಎಂದು ಹೇಳಬಹುದು. ವರ್ಣನೆ ಮಾಡಿದರೂ, ಈ ಜೀವನು ಬ್ರಹ್ಮನಾಗುವದಿಲ್ಲ. ಆದ್ದರಿಂದ ಈ ಮಹಾವಾಕ್ಯವು **ನುತಿಪರ**ವಾಗುತ್ತದೆಂದು ವಾದಿಯು ಶಂಕೆಯನ್ನು ಮಾಡಿದರೆ, ಇದು ಸರಿಯಲ್ಲ. ಏಕಂದರೆ, ಭಿಕ್ಷುಕನಿಗೆ ಧನಿಕನಿಂದ ಧನಲಭ್ಯವಾಗಬೇಕಾದ್ದರಿಂದ ಹಾಗೆ **ನುತಿಸ**ಬಹುದು. ವೇದಪ್ರತಿಪಾದಿತ ಮಹಾವಾಕ್ಯವು ಜೀವಿನಿಂದ ಏನೊಂದು ಬೇಡದೆ ದಯೆಯಿಂದ ಭೋಧಿಸುತ್ತದೆ. ಆದ್ದರಿಂದ ಇದು **ನುತಿಪರ**ವೆಂದು ಹೇಳುವದು ಅನುಚಿತವಾಗುತ್ತದೆ. ಯೋಗ್ಯವಲ್ಲ ಎಂಬ ಭಾವವು.

ಬಳಿಕ, ಕೆಲವರು ಇದು ಔಪಚಾರಿಕವೆಂದು ಹೇಳುತ್ತಾರೆ. ಹೀಗೆ ಹೇಳುವದು ಅನುಚಿತವಾಗಿರುತ್ತದೆ.

**ಆಳನೊಲಿದರಸೆಂದು ಬೋಳೈಸುವಂತೆ ವಾ।**
**ಕ್ಯಾಳಿ ಪರಬೊಮ್ಮವದು ತಾನೆ ನೀನೆಂದು।**
**ಪೇಳದುಪಚಾರಕನೆಯಾಗಿ ॥೩॥**

**ಟೀಕಾ:-** ಆಳನು=ಸೇವಕನನ್ನು ಕುರಿತು, ಒಲಿದು=ಸಂತುಷ್ಟನಾಗಿ, ಅರಸೆಂದು=ನೀನು ಮಹಾರಾಜನೆಂದು, ಬೋಳೈಸುವಂತೆ, ಬೆನ್ನು ಮೇಲೆ ಕೈಎಳೆದು ಚಪ್ಪರಿಸುವಂತೆ, ವಾಕ್ಯಾಳಿ=ಮಹಾವಾಕ್ಯಗಳು, ಪರಬೊಮ್ಮವದು=ಆಸೃಷ್ಟಿ

ಪೂರ್ವದಲ್ಲಿದ್ದ ಪರಬ್ರಹ್ಮವೇ, ತಾನೆ=ಅದೇ, ನೀನೆಂದು=ನೀನಿರುವಿಯೆಂದು, ಉಪಚಾರಕವೆಯಾಗಿ=ಔಪಚಾರಿಕವಾಗಿ, ಪೇಳದು=ಹೇಳುವದಿಲ್ಲ.

**ತಾತ್ಪರ್ಯ:**-ಆಳು ಮಾಡುವ ಕೆಲಸಕ್ಕೆ ಮೆಚ್ಚಿ, ಯಜಮಾನನು 'ನೀನು ಮಹಾರಾಜ ಇರುವಿ ಎಂದೆನ್ನುತ್ತಾ ಅವನ ಬೆನ್ನ ಮೇಲೆ ಶಬಾಸ್ ಎಂದು ಚಪ್ಪರಿಸುತ್ತಾನೆ. ಆಳಿಗೆ ರಾಜಾ ಅಂದರೆ ಅವನು ರಾಜನಾಗಬಲ್ಲನೇ? ಎಂದೂ ಆಗನು. ಆಳು ಆಳೇ ಹೊರತು ಅರಸನೆಂದಿಗೂ ಆಗನು. ಈ ದೃಷ್ಟಾಂತದಂತೆ ಮಹಾವಾಕ್ಯಗಳು ಆಪರಬ್ರಹ್ಮವೇ ನೀನೆಂದು ಹೇಳುವದಾದರೂ ಹೀಗೆ ಇರುತ್ತದೆ. ಸಂಸಾರಿ ದುಃಖಿಯಾದ ಜೀವನಿಗೆ ನೀನು ಆಬ್ರಹ್ಮನು. ಅಂದರೆ ಜೀವನು ಹೋಗಿ ಆಬ್ರಹ್ಮನಾಗಬಹುದೇ? ಆಗನು. ಅದರಿಂದ ಮಹಾವಾಕ್ಯವು **ಉಪಚಾರದ** ಮಾತಾಗಿದೆ. ನಿಜವಾದ ಮಾತಲ್ಲ. ಎಂದು ಶಂಕೆಯನ್ನು ಮಾಡಿದರೆ, ಇದು ಉಚಿತವಲ್ಲ. ಏಕಂದರೆ, ಯಜಮಾನನು ಆಳಿನಿಂದ ಹೆಚ್ಚಿಗೆ ಕೆಲಸವನ್ನು ಮಾಡಿಸಿಕೊಳ್ಳುವದಕ್ಕಾಗಿ, ಅವನಿಗೆ ಉಪಚಾರದ ಮಾತುಗಳನ್ನು ಆಡಬಹುದು. ಮಹಾವಾಕ್ಯಗಳು ಜೀವನಿಂದ ಏನೊಂದು ಕಾರ್ಯಮಾಡಿಸಲೋಸುಗ ಹೇಳಿಲ್ಲ. ವಾಕ್ಯಗಳು **ನಿರಪೇಕ್ಷಗಳಾಗಿವೆ.** ಈಶ್ವರನ ವಾಣಿಯಾದ ಶ್ರುತಿಯು ಜೀವನಿಂದ ಯಾವಕಾರ್ಯದ ಅಪೇಕ್ಷೆಯನ್ನು ಮಾಡಲಾರದು. ಆದ್ದರಿಂದ ಮಹಾವಾಕ್ಯವು **ಔಪಚಾರಿಕವಲ್ಲ.** ಹೀಗಿದ್ದು ಔಪಚಾರಿಕವೆಂದು ಹೇಳುವದು ಅನುಚಿತವಾಗಿರುತ್ತದೆ.

ಬಳಿಕ, ಕೆಲವರು ಇದು **ಉಪಾಸನಾಪರವಾದದ್ದೆಂದು** ಹೇಳುವರು. ಅದು ಕೂಡಾ ಅಯೋಗ್ಯವಾಗಿರುತ್ತದೆಂದು ಹೇಳುತ್ತಾರೆ.

**ಪ್ರತಿಮೆಯಂ ದೇವತಾಕೃತಿಯೆಂಬ ಪೊಲು ತನ್ನ ।**
**ನತಿಶಯಿಪ ವಾಕ್ಯವದುಪಾಸನಾ ।**
**ರತಿಯಲ್ಲವೆಂದು ತಿಳಿನೀನು** ‖೪‖

**ಟೀಕಾ:**- ಪ್ರತಿಮೆಯಂ=ಮೂರ್ತಿಯನ್ನು, ದೇವತಾಕೃತಿಯೆಂಬವೊಲು=ದೇವತಾರೂಪವೆಂದು ಹೇಳುವಹಾಗೆ, ತನ್ನನು=ತನ್ನನ್ನು, ಅತಿಶಯಿಪ=ಗೌರವಿಸುವ, ವಾಕ್ಯವದು=ಆ ಮಹಾವಾಕ್ಯವು, ತಾನು=ಅದು, ಉಪಾಸನಾರತಿಯಿಲ್ಲವೆಂದು = ಉಪಾಸನದ ಪ್ರೇಮವನ್ನುಂಟುಮಾಡುವಂಥಾದ್ದು, ಅಲ್ಲವೆಂದು ತಿಳಿನೀನು=ಆಗುವದಿಲ್ಲೆಂದು ತಿಳಿ.

**ತಾತ್ಪರ್ಯ:**- ಉಪಾಸನಾವಾದಿ 'ಯಾವದಾದರೊಂದು ಮಣ್ಣು, ಕಲ್ಲು, ತಾಮ್ರ, ಹಿತ್ತಾಳಿ; ಬೆಳ್ಳಿ, ಭಂಗಾರದ ರಾಮ, ಕೃಷ್ಣ, ಹರಿ ಹರಾದಿ ಮೂರ್ತಿ

ಗಳನ್ನು ಮಾಡುತ್ತಾರೆ. ಅವುಗಳಿಗೆ ರಾಮ, ಕೃಷ್ಣ, ಗಣಪತಿ,ಶಿವನೆಂದು ಭಾವಿಸಿ ಕರೆಯುತ್ತಾರೆ. ಅರ್ಥಾತ್ ಅವೇ ದೇವರುಗಳೆಂದು ನಂಬಿ ಪೂಜಿಸಿ ಭಜಿಸುತ್ತಾರೆ. ಏತಕ್ಕೆ ಹೀಗೆ ದೇವರೆನ್ನುವಿರಿ? ಎಂದು ಕೇಳಿದರೆ, ಇವುಗಳಿಗೆ ದೇವರೆಂದು ಭಜಿಸ ಬೇಕು ಎಂಬದಾಗಿ ವೇದವಾಕ್ಯವನ್ನು ಪ್ರಮಾಣವಾಗಿ ಹೇಳುವರು. ದೇವರಲ್ಲದವು ಗಳಲ್ಲಿ ದೇವರೆಂದು ಭಾವಿಸಿರಿಯೆಂದು ಹೇಳುವ ಉಪಾಸನಾಪರ ವಾಕ್ಯಗಳನ್ನು ಪ್ರಮಾಣಕೊಡುವರು. ಪ್ರತ್ಯಕ್ಷವಾಗಿ ದೇವರಲ್ಲ ಎಂಬುದು ಕಂಡರೂ, ಉಪಾಸನಾ ಕಾಂಡದ ವಾಕ್ಯದಲ್ಲಿ ಶ್ರದ್ಧೆಯನ್ನಿಟ್ಟು, ಅದಕ್ಕೆ ದೇವರೆಂದು ಹೇಳುವರು. ವೇದ ವಾಕ್ಯವು ದೇವರೆಂದು ಹೇಳುವದರಿಂದ ನಾವು ದೇವರೆಂದು ಭಾವಿಸುತ್ತೇವೆಂದು ಹೇಳುವರು. ಉಪಾಸನಕ್ಕೆ ಮುಖ್ಯವಾಗಿ ನಂಬಿಗೆ ಕಾರಣವಾಗಿದೆ ಇಲ್ಲಿ ವಿಚಾರ ವಿಲ್ಲ. ಉಪಾಸನಾಪರ ವೇದವಾಕ್ಯಗಳು ದೇವರಲ್ಲದ ಮೂರ್ತಿಗಳಲ್ಲಿ ದೇವಬುದ್ಧಿ ಯನ್ನುಂಟು ಮಾಡುವಂತೆ, ಈ ಜ್ಞಾನಕಾಂಡದ ಮಹಾವಾಕ್ಯಗಳಾದರೂ ಬ್ರಹ್ಮ ನಲ್ಲದ ಜೀವನಲ್ಲಿ ಬ್ರಹ್ಮಬುದ್ಧಿಯನ್ನುಂಟು ಮಾಡುತ್ತವೆ. ಮೂರ್ತಿಗಳು ದೇವರು ಗಳು ಹೇಗೆ ಆಗುವದಿಲ್ಲವೋ, ಹಾಗೆ ಜೀವನಾದರೂ ಬ್ರಹ್ಮನಾಗಲಾರನು. ಆದ್ದರಿಂದ ಬ್ರಹ್ಮನಲ್ಲದ ಜೀವನಲ್ಲಿ ಬ್ರಹ್ಮಬುದ್ಧಿಯನ್ನುಂಟು ಮಾಡುವ ಮಹಾ ವಾಕ್ಯವು **ಉಪಾಸನಾಪರವಾಗಿರುತ್ತದೆ.** ಎಂದು ಶಂಕೆಯನ್ನು ಮಾಡುತ್ತಾರೆ. ಇದು ಅನುಚಿತವಾಗಿರುತ್ತದೆ. ಹೀಗೆ ಅರ್ಥವನ್ನು ಮಾಡುವದು ಅನರ್ಥವಾಗಿರುತ್ತ ದೆಂದು ಉತ್ತರವನ್ನು ಹೇಳುತ್ತಾರೆ. ಏಕಂದರೆ? ಉಪಾಸನಾಪರ ವಾಕ್ಯಗಳು ಮಂದಬುದ್ಧಿ ಜನರನ್ನು ಕುರಿತು ದೇವತಾ ಭಾವನಾರೂಪ ಸಂಸ್ಕಾರವನ್ನುಂಟು ಮಾಡುವದಕ್ಕಾಗಿ, ದೇವರಲ್ಲದ ಮೂರ್ತಿಗಳಲ್ಲಿ ಶ್ರದ್ಧಾಮೂಲಕ (ವಿವೇಕವಿಲ್ಲದೆ) ದೇವತೆಯ ಬುದ್ಧಿಯನ್ನು ಮಾಡಿಸುತ್ತವೆ. ಆ ವಾಕ್ಯವನ್ನು ನಂಬಿ ಉಪಾಸನೆ ಯನ್ನು ಮಾಡುವವನಿಗೆ ಫಲವೂ ಆಗುವದುಂಟು. ಪ್ರತ್ಯಕ್ಷವಾಗಿ ದೇವರಲ್ಲೆಂದು ತಿಳಿದರೂ, ದೇವರೆಂದು ತಿಳಿ. ನಿನಗೆ ಕಲ್ಯಾಣವಾಗುವದೆಂದು ವಾಕ್ಯಗಳು ಬಲಾತ್ಕಾರದಿಂದಾದರೂ, ದೇವತಾ ಬುದ್ಧಿಯನ್ನುಂಟುಮಾಡುತ್ತವೆ. ಆ ಮಾತು ಸರಿಯುಂಟು. ಅದರಂತೆ, ಈ ಜ್ಞಾನಕಾಂಡ ಪಠಿತವಾದ ಮಹಾವಾಕ್ಯವು ಒಂದರಲ್ಲಿ ಇನ್ನೊಂದು ಬುದ್ಧಿಯನ್ನು ಮಾಡಿಸುವದಲ್ಲ. ಕಿಂತು, ಬ್ರಹ್ಮನಾದ ಜೀವನಿಗೆ ಬ್ರಹ್ಮನಿದ್ದಿಯೆಂದು ಹೇಳುತ್ತವೆ. ಅಂದರೆ, ತಾನು ಬ್ರಹ್ಮನಾಗಿದ್ದೂ, ನಾನು ಬ್ರಹ್ಮನಲ್ಲ. ಜೀವನು ಸಂಸಾರಿ, ದುಃಖಿಯೆಂದು ಅವಿವೇಕದಿಂದ ಭಾವಿಸು ತ್ತಾನೆ. ಇವನಿಗೆ ವಿವೇಕವನ್ನು ಹೇಳಿ, ಅವಿವೇಕವನ್ನು ದೂರಮಾಡಿ,ಬ್ರಹ್ಮ ನಲ್ಲಿಯೇ ಬ್ರಹ್ಮಬುದ್ಧಿಯನ್ನುಂಟುಮಾಡಿಸುತ್ತದೆ. ಆದ್ದರಿಂದ ಮಹಾವಾಕ್ಯಗಳು **ಉಪಾಸನಾಪರಗಳಲ್ಲ.** ಕಿಂತು, ಯಥಾರ್ಥವಾಗಿ ಬ್ರಹ್ಮನಾದ ಜೀವನಲ್ಲಿಯೇ ಬ್ರಹ್ಮ ಬುದ್ಧಿಯನ್ನುಂಟು ಮಾಡುತ್ತವೆ. ಆದ್ದರಿಂದ ಮಹಾವಾಕ್ಯಗಳು ಜ್ಞಾನ ಕಾಂಡಗತ ವಾಕ್ಯಗಳಾಗಿರುತ್ತವೆ. ಇಲ್ಲದೆಹೋದರೆ, ಈ ಮಹಾವಾಕ್ಯಗಳು

ಉಪಾಸನಾಪರಗಳಾದರೆ, ವೇದದಲ್ಲಿ ಜ್ಞಾನಕಾಂಡವೇ ಇಲ್ಲದಂತಾದೀತು. ವೇದ ಗಳಲ್ಲಿ ಮೂರು ಕಾಂಡಗಳಿಲ್ಲ. ಎರಡೇ ಕಾಂಡಗಳುಂಟು ಎಂದು ನೀನನ್ನಬಹುದು. ಹೀಗಂದರೆ, ಶ್ರುತಿಗೂ ಆಚಾರ್ಯರ ಅನುಭವಕ್ಕೂ ವಿರೋಧವಾಗುತ್ತದೆ. ಆದ್ದ ರಿಂದ ಮಹಾವಾಕ್ಯವು **ಪುರುಷತಂತ್ರಾತ್ಮಕ** ಉಪಾಸನಾರತಿಪರವಲ್ಲ. ಕಿಂತು, ಇದ್ದದ್ದನ್ನು ಇದ್ದಂತೆ ಹೇಳುವ **ವಸ್ತುತಂತ್ರ** ಜ್ಞಾನಕಾಂಡವಾಗಿದೆ ಎಂದು ತಿಳಿ ಯೆಂಬ ಭಾವವು.

**ಬಳಿಕ,** ನಿರಾಕಾರ ಚೈತನ್ಯಸ್ವರೂಪನು ಬ್ರಹ್ಮನಾಗಿರುವಂತೆ ಜೀವನಾದರೂ ನಿರಾಕಾರ ಚೈತನ್ಯಸ್ವರೂಪನಾಗಿರುತ್ತಾನೆ. ಆದ್ದರಿಂದ ಜೀವನಿಗೆ ಬ್ರಹ್ಮನೆಂದು ಹೇಳುತ್ತದೆ. ಅದರಿಂದ ಈ ಮಹಾವಾಕ್ಯವು **ಸಾದೃಶ್ಯವನ್ನು** ಹೇಳುವದಾಗಿದೆ. ಅಂದರೆ, ಬ್ರಹ್ಮನಂತೆ ಜೀವನು ಇದ್ದಾನೆ. ಕಿಂತು; ಬ್ರಹ್ಮನಲ್ಲ ಎಂದು ಕೆಲವರು ಹೇಳುತ್ತಾರೆ. ಹೀಗೆ ಹೇಳುವದು ಉಚಿತವಲ್ಲ ಎಂದು ಉತ್ತರವನ್ನು ಹೇಳುತ್ತಾರೆ.

**ಅನಲನೀಮಾಣವಕನೆನುತಿರ್ಪ ಪಾಂಗು ನಿ।**
**ನ್ನನೆ ವಸ್ತುವೆಂಬ. ವಾಕ್ಯವದು ಸಾದೃಶ್ಯ।**
**ನೆನಲಿಲ್ಲವೆಂಬುದಿದು ಸಿದ್ಧ ||೫||**

**ಟೀಕಾ:-** ಈ ಮಾಣವಕನು=ಈ ಬ್ರಹ್ಮಚಾರಿಯು, ಅನಲನು=ಬೆಂಕಿಯಾಗಿ ರುವನು, ಎನುತಿರ್ಪ=ಅನ್ನುವ, ಪಾಂಗು=ಹಾಗೆ, ನಿನ್ನನೆ=ನಿನ್ನನ್ನೇ ಕುರಿತು, ವಸ್ತುವೆಂಬ=ಪರಬ್ರಹ್ಮವೆಂಬ, ವಾಕ್ಯವದು=ಆ ಮಹಾವಾಕ್ಯವು, ಸಾದೃಶ್ಯವೆನಲ್= ಸಾದೃಶ್ಯವನ್ನು ಹೇಳುವದೆಂದು ಎನಲಾಗಿ, ಅಲ್ಲ=ಹಾಗೆ ಹೇಳುವದಿಲ್ಲ, ಎಂಬು ದಿದು=ಹೀಗನ್ನುವದು. ಸಿದ್ಧ=ನಿಜವಾದ ಮಾತಾಗಿರುತ್ತದೆ.

**ತಾತ್ಪರ್ಯ:-** ಸಾದೃಶ್ಯಪರವಾದಿ "ಈ ಬ್ರಹ್ಮಚಾರಿಯು ಅಗ್ನಿಯಾಗಿರು ವನು. ಅಂದರೆ, ಇವನು ಬೆಂಕಿಯಾಗಿದ್ದಾನೆ. ಎಂದು ಹೀಗೆ ಲೋಕದಲ್ಲಿ ನುಡಿಯು ವದುಂಟು. ಬ್ರಹ್ಮಚಾರಿಯು ಊರ್ಧ್ವರೇತಸ್ಕನಾದ್ದರಿಂದ ತೇಜಃಪುಂಜ ಶರೀರ ವುಳ್ಳವನಾಗಿರುತ್ತಾನೆ; ಆದ್ದರಿಂದ ಈ ಬ್ರಹ್ಮಚಾರಿಯು ಅಗ್ನಿಯಂತೆ ಇರುವದ ರಿಂದ ಅಗ್ನಿಯಾಗಿದ್ದಾನೆಂದು ಹೇಳುತ್ತಾರೆ. ಆ ಬ್ರಹ್ಮಚಾರಿಯೇನು ಅಗ್ನಿಯಲ್ಲ. ಮತ್ತು ದೇವದತ್ತನೆಂಬವನು ಶೌರ್ಯಧೈರ್ಯಾದಿ ಗುಣಗಳಿಂದ ಕೂಡಿದ್ದರೆ, ದೇವದತ್ತನು ಸಿಂಹನಾಗಿರುತ್ತಾನೆಂದು ಹೇಳುತ್ತಾರೆ. ಆದರೆ ದೇವದತ್ತನು ಸಿಂಹ ನಲ್ಲ. ಕಿಂತು ಸಿಂಹನಲ್ಲಿದ್ದ ಗುಣಗಳು ದೇವದತ್ತನಲ್ಲಿರುವದರಿಂದ ಸಾದೃಶ್ಯತ್ವ ಮೂಲಕ ಸಿಂಹನೆಂದು ಕರೆಯುಬಹುದು. ಆದರೆ; ಸಿಂಹಬೇರೆ ದೇವದತ್ತನು ಬೇರೆ ಬ್ರಹ್ಮಚಾರಿಯು ಬೇರೆ, ಅಗ್ನಿಯು ಬೇರೆ, ಈ ದೃಷ್ಟಾಂತದಂತೆ. ಮಹಾವಾಕ್ಯವು. ಪರಮಾತ್ಮನಿಗೂ ಜ್ಞಾನಗುಣಮೂಲಕ ಸಾದೃಶ್ಯತ್ವವನ್ನು ಪ್ರತಿಪಾದನ ಮಾಡು

ವುದಾಗಿರುತ್ತದೆ. ಆದ್ದರಿಂದ ಜೀವನಿಗೆ ಪರಮಾತ್ಮನೆಂದು ಹೇಳಿರಬಹುದು. ಹೀಗೆ ಹೇಳಿದರೂ; ಪರಮಾತ್ಮನು ಬೇರೆ; ಜೀವನು ಬೇರೆ; ಬೇರೆ ಬೇರೆಯೇ ಆಗಿದ್ದಾರೆ. ಜೀವನು ಪರಮಾತ್ಮನೆಂದಿಗೂ ಆಗಲಾರನು" ಎಂದು ಶಂಕೆಯನ್ನು ಮಾಡಿದರೆ; ಇದು ಉಚಿತವಲ್ಲವೆಂದು ಉತ್ತರವನ್ನು ಹೇಳುತ್ತಾರೆ: 'ಧರ್ಮಿಗಳು ಎರಡು ಬೇರೆಯಿದ್ದು ಧರ್ಮ ಸಮಾನವಾಗಿದ್ದರೆ, ಅದಕ್ಕೆ ಸಾದೃಶ್ಯವೆಂದು ಹೇಳುತ್ತಾರೆ. ಈ ವಿಧವಾದ ಸಾದೃಶ್ಯವು ಇಲ್ಲಿ ಇಲ್ಲ. ಏಕೆಂದರೆ ಇಲ್ಲಿ ಚಿದ್ರೂಪು ಒಂದೇ ಇದೆ. ಸೃಷ್ಟಿಪೂರ್ವ ದಲ್ಲಿದ್ದ ಪರಮಾತ್ಮನು ಸೃಷ್ಟಿಯನ್ನು ಮಾಡಿ, ಅದರಲ್ಲಿ ತಾನೇ ಇರುವನೆಂದು **'ತತ್ಸೃಷ್ಟ್ವಾ ತದೇವಾನುಪ್ರವಿಶ್ಯತ್',** ಶ್ರುತಿಯು ಹೇಳುತ್ತದೆ. ಮತ್ತು ಗೀತೆ ಯಲ್ಲಿಯೂ **'ಕ್ಷೇತ್ರಜ್ಞಂಚಾಪಿಮಾಂ ವಿದ್ಧಿ',** ಈ ದೇಹದಲ್ಲಿ ಜೀವನೆಂಬ ಹೆಸರಿ ನಿಂದ ನಾನೇ ಇರುತ್ತೇನೆ. ಎಂದು ಭಗವಂತನು ಹೇಳಿದ್ದಾನೆ. ಆದ್ದರಿಂದ ಇಬ್ಬರಿಲ್ಲ ಒಬ್ಬನಿದ್ದಾನೆಂಬುದು ಶ್ರುತಿ ಸ್ಮೃತಿಗಳಿಂದ ಸಿದ್ಧವಾಗುತ್ತದೆ. ಹೀಗಾದಮೇಲೆ; ನೀನು ಸಾದೃಶ್ಯವನ್ನು ಹೇಗೆ ಹೇಳುವಿ ? ಒಂದುವೇಳೆ ಸಾದೃಶ್ಯವನ್ನು ಜ್ಞಾನ ದಿಂದ ಸಾದೃಶ್ಯವೋ? ಅಥವಾ ಸ್ವರೂಪದಿಂದ ಸಾದೃಶ್ಯವೋ? ಹೇಳು. ಜ್ಞಾನವು ಪರಮಾತ್ಮನಲ್ಲಿ ಅಧಿಕವಾಗಿದೆ. ಆದರಿಂದ ಸರ್ವಜ್ಞನೆನಿಸುವನು. ಜೀವನಲ್ಲಿ ಜ್ಞಾನವು ಅಲ್ಪವದೆ. ಅದರಿಂದ ಕಿಂಚಿಜ್ಞನೆನಿಸುವನು. ಹೀಗೆ ಜ್ಞಾನವು ನ್ಯೂನಾಧಿ ಕದಿಂದ ಭೇದವದೆ. ಎಂದು ಹೇಳಿದರೂ; ಇದರಿಂದ ಸಾದೃಶ್ಯವು ಸಂಭವಿಸಲಾರದು ಏಕಂದರೆ ಜ್ಞಾನವು ಹೆಚ್ಚುಕಡಿಮೆಯಾಗಿ ತೋರುವದು. ಅದು ಉಪಾಧಿಯ ಧರ್ಮ ವಾಗಿದೆ. ಸ್ವರೂಪತಃ ಜ್ಞಾನವು ಒಂದೇವಿಧವಾಗಿದೆ. ಹೇಗಂದರೆ; ಸೂರ್ಯನ ಪ್ರಕಾಶವು ಒಂದೇ ಆಗಿದ್ದರೂ ಕನ್ನಡಿಗಳ ತಾರತಮ್ಯ ಭೇದದಿಂದ ಬೆಳಕೂ ಭೇದ ವಾಗಿ ತೋರುತ್ತದೆ. ಹಾಗೆ ತೋರಿದರೂ ಬೆಳಕು ಒಂದೇ ಆದ್ದರಿಂದ ಅದರಲ್ಲಿ ಸಾದೃಶ್ಯವಿಲ್ಲ. ಇದರಂತೆ ಜ್ಞಾನದಲ್ಲಿಯೂ ಸಾದೃಶ್ಯವಿಲ್ಲೆಂದು ತಿಳಿ. ಅನಂತರ ಸ್ವರೂಪತಃ ಭೇದವನ್ನು ಹೇಳುತ್ತೇನೆಂದು ಅನ್ನಬಹುದು. ಆದರೆ, ಈ ಮಾತು ಅಸಂಗತವಾಗಿದೆ. ಏಕಂದರೆ, ಸ್ವರೂಪದಲ್ಲಿ ಭೇದವು ಕಿಂಚಿತ್ತಾದರೂ ಇಲ್ಲ. ಆದ್ದ ರಿಂದ ಉಭಯರೀತಿಯಿಂದಲೂ ಭೇದವು ಸಂಭವಿಸುವದಿಲ್ಲ.

ಒಂದುವೇಳೆ ಸಾದೃಶ್ಯ ಮೂಲಕ ಭೇದವಿರುತ್ತದೆಂದು ಹೇಳಬಹುದು. ಇದು ಸರಿಯಲ್ಲ. ಏಕಂದರೆ, ವಿಸದೃಶವಿದ್ದರೆ ಭೇದವಿರುತ್ತಿತ್ತು. ಸಾದೃಶ್ಯ ವನ್ನು ಹೇಳುವಿ. ಅದರಿಂದ ನೀನು ಅಭೇದವನ್ನೇ ಹೇಳಿದಂತಾಯಿತು. ನಮ್ಮ ಅಭೇದ ಸಿದ್ಧಾಂತವನ್ನು ನೀನೇ ಮಾಡುವಿ. ಅಂದಮೇಲೆ; ನೀನು ಧನ್ಯನೇ ಸರಿ ಎನಬೇಕು. ಎಂದು ಹಾಸ್ಯಾಸ್ಪದವಾಗಿ ಉತ್ತರವನ್ನು ಹೇಳಿದರೆಂಬ ಭಾವವು. ಆದ್ದರಿಂದ ಈ ಮಹಾವಾಕ್ಯವು ಸಾದೃಶ್ಯಾರ್ಥವನ್ನು ಪ್ರತಿಪಾದಿಸು ವದಲ್ಲೆಂದು ತಿಳಿ.

**ಬಳಿಕ, ಈ ಮಹಾವಾಕ್ಯವು ಕಾರ್ಯಕಾರಣ** ಭೇದವನ್ನು ಹೇಳುವದಿಲ್ಲ ವೆಂದು ಉತ್ತರವನ್ನು ಕೊಡುತ್ತಾರೆ.

**ಮೃದನನ್ಯ ಘಟವಿದೆಂಬುದರಂತೆ ನೀನೇ ತ।**
**ತ್ಪದವೆಂಬ ವಾಕ್ಯವದು ಕಾರ್ಯಕಾರಣವ।**
**ನೊದವಿಸುವದೆಂಬುದಿದು ಮಿಥ್ಯೆ** ॥೬॥

**ಟೀಕಾ:**-ಮೃತ್=ಮಣ್ಣಿನೊಡನೆ, ಅನನ್ಯ=ಅಭೇದವಾದದ್ದು, ಘಟವಿದು= ಈ ಕೊಡವು, ಎಂಬುದರಂತೆ=ಹೀಗೆ ನುಡಿಯುವಹಾಗೆ, ನೀನೆ=ನೀನೇ, ತತ್= ಆ ಬ್ರಹ್ಮರೂಪ, ಪದವೇ=ಸ್ವರೂಪವೇ ಆಗಿರುವಿ ಎಂಬ, ವಾಕ್ಯವದು= ಆ ಮಹಾ ವಾಕ್ಯವು, ಕಾರ್ಯಕಾರಣವನು=ಕಾರ್ಯ ಕಾರಣ ಭೇದವನ್ನು, ಒದವಿಸುವದು= ಉಂಟು ಮಾಡುವದು, ಎಂಬುದಿದು=ಹೀಗೆ ನುಡಿಯುವದು, ಮಿಥ್ಯೆ=ಸುಳ್ಳಾಗಿ ರುತ್ತದೆ.

**ತಾತ್ಪರ್ಯ:**- ಕಾರ್ಯವಾದ ಘಟವು ಕಾರಣವಾದ ಮಣ್ಣಿನೊಡನೆ ಅಭೇ ದವಾಗಿದ್ದರೂ, ಅವುಗಳಲ್ಲಿ ಕಾರ್ಯಕಾರಣ ಭೇದವಿರುತ್ತದೆ. ಇದರಂತೆ; ಈ ತತ್ತ್ವಮಸಿ ಮಹಾವಾಕ್ಯವಾದರೂ ಆ ಬ್ರಹ್ಮವೇ ನೀನು ಇದ್ದಿ, ಎಂದು ಹೇಳು ತ್ತದೆ. ಆದ್ದರಿಂದ ತತ್ ಅಂದರೆ, ಸೃಷ್ಟಿಪೂರ್ವದಲ್ಲಿದ್ದ ಕಾರಣವಾದ ಬ್ರಹ್ಮ ವಾಗಿದೆ. ತ್ವಂ ಅಂದರೆ, ಈ ದೇಹದಲ್ಲಿ ಕಾರ್ಯವಾದ ಜೀವವಾಗಿದೆ. ಈ ಕಾರ್ಯಕಾರಣಗಳಾದ ಜೀವಬ್ರಹ್ಮರಿಗೆ ಮಹಾವಾಕ್ಯವು ಅಭೇದವೆಂದು ಹೇಳಿ ದಾಗ್ಯಾದರೂ, ಅದರಲ್ಲಿ ಕಾರ್ಯಕಾರಣ ಭೇದವು ಇದ್ದೇ ಇರುತ್ತದೆ. ಆದ್ದರಿಂದ ಈ ಮಹಾವಾಕ್ಯವು ಜೀವನಿಗೆ ಬ್ರಹ್ಮನೆಂದು ಕೇವಲ ಅಭೇದವನ್ನು ಹೇಳುವದಿಲ್ಲ. ಎಂದು ಶಂಕೆಯನ್ನು ಮಾಡಲು; ಇದು ಅಯೋಗ್ಯವಾಗಿರುತ್ತದೆ. ಸರಿಯಲ್ಲ. ಈ ಮಾತು ಸುಳ್ಳಾಗಿರುತ್ತದೆಂದು ಹೇಳುತ್ತಾರೆ. "ಕುಂತೀ ಪುತ್ರನಾದ ಕರ್ಣನಿಗೆ ರಾಧಾ ಪುತ್ರ ಭಾವನೆಯಂತೆ; ವರವಿಪ್ರನಿಗೆ ಶೂದ್ರನೆಂಬ ಭಾವನೆ ಬಂದಂತೆ; ಶ್ರೀರಾಮಚಂದ್ರನಿಗೆ ಮನುಷ್ಯನೆಂಬಂತೆ; **ಬ್ರಹ್ಮದಲ್ಲಿ ಜೀವಭಾವನೆ** ಬಂದಿರು ತ್ತದೆ. ಆದ್ದರಿಂದ ಇಲ್ಲಿ **ಕಾರ್ಯಕಾರಣವಿಲ್ಲ.** ಅಂದಮೇಲೆ, ಭೇದವು ಎಲ್ಲಿ ರುವದು? ನೀನೇ ಹೇಳು. ಕಾರ್ಯಕಾರಣವಿಲ್ಲದಲ್ಲಿ ಕಲ್ಪನೆ ಮಾಡಿ ಭೇದವನ್ನು ಹೇಳುವಿ. ಇದು ಅನುಚಿತವಾಗಿರುತ್ತದೆ. ''**ಬ್ರಹ್ಮೈವ ಅವಿದ್ಯಯಾ ಸಂಸರತಿ ವಿದ್ಯಯಾ ಮುಚ್ಯತೆ, ಮರೆದೊಡೆ ಜೀವಾತ್ಮ ಅರಿದೊಡೆ ಪರಮಾತ್ಮ**'' ಎಂದು ಹೇಳುವ ವಾಕ್ಯಗಳಲ್ಲಿಯೂ **ಒಬ್ಬನೆಂದೇ** ಅರ್ಥವಾಗುತ್ತದೆ ಹೊರತು ಇಬ್ಬರೆಂದು ಹೇಳುವದಿಲ್ಲ. ಇದ್ದ ಒಂದೇ ವಸ್ತುವಿನಲ್ಲಿ ಅರವು ಮರವುಗಳ ಉಪಾಧಿಯಿಂದ; ಪರಮಾತ್ಮ ಜೀವಾತ್ಮರೆಂಬ ಎರಡು ನಾಮುಗಳ ವ್ಯವಹಾರ

ಭೇದವಲ್ಲದೆ, ವಸ್ತುಭೇದವಿಲ್ಲ. ಆದ್ದರಿಂದ ಜೀವಾತ್ಮ ಪರಮಾತ್ಮರುಗಳಿಗೆ ನೀನು **ಕಾರ್ಯಕಾರಣ** ಭೇದಪರ ಅರ್ಥವನ್ನು ಕಲ್ಪಿಸಿ ಹೇಳುವದು ಸುಳ್ಳಾಗಿ ರುತ್ತದೆ. ಆದ್ದರಿಂದ ನಿನ್ನ ಮಾತು ನಂಬಲಿಕ್ಕೆ ಯೋಗ್ಯವಲ್ಲವೆಂದು ತಿಳಿ. ಎಂಬ ದಾಗಿ ಉತ್ತರವನ್ನಿತ್ತರೆಂಬ ಭಾವವು.

**ಬಳಿಕ, ನೀಲೋತ್ಪಲದಂತೆ ಗುಣಗುಣಿ ಭೇದವನ್ನು ಈ ಮಹಾವಾಕ್ಯವು** ಹೇಳುವದಲ್ಲೆಂದು ಉತ್ತರವನ್ನು ಕೊಡುತ್ತಾರೆ.

**ಕುವರಕೇಳ್ ನೀಲೋತ್ಪಲವೆನಿಪ್ಪ ವೋಲು ವಾ ।**
**ಕ್ಯವೆ ನೀನೆ ಪರಮನೆಂದು ತದ್ಗುಣ ಗುಣಿ ।**
**ತ್ವವನುಂಟು ಮಾಡುತಿಹುದಲ್ಲ ॥೭॥**

**ಟೀಕಾ:-** ಕುವರಕೇಳ್=ಹೇಪುತ್ರನೇ. ನೀಲೋತ್ಪಲ ವೆನಿಪ್ಪವೊಲು= ಕಪ್ಪಾದ ಕಮಲವೆಂಬ ವಾಕ್ಯದಂತೆ, ನೀನೆ ಪರಮನೆಂದು=ನೀನು ಪರಮಾತ್ಮ ನೆಂದು, ವಾಕ್ಯವೆ=ಮಹಾವಾಕ್ಯವೆ, ತತ್‌ಗುಣ ಗುಣಿತ್ವವನು=ಆಗುಣ ಗುಣಿಭಾವ ವನ್ನು, ಉಂಟು ಮಾಡುತಿಹುದಲ್ಲ=ಹುಟ್ಟಿಸುವದಲ್ಲ.

**ತಾತ್ಪರ್ಯ:-** 'ನೀಲೋತ್ಪಲವೆಂಬ ವಾಕ್ಯದಲ್ಲಿ ನೀಲವೆಂಬ ಕಪ್ಪು ವಿಶೇಷ ಣವಾದ ಗುಣವಾಗಿದೆ. ಉತ್ಪಲವೆಂಬ ಕಮಲವು ವಿಶೇಷ್ಯವಾದ ಗುಣಿಯಾಗಿದೆ. ವಿಶೇಷಣವಾದ ನೀಲಗುಣವು ವಿಶೇಷ್ಯವಾದ ಉತ್ಪಲದೊಡನೆ ಕೂಡಿಕೊಂಡಿರು ತ್ತದೆ. ನೀಲತ್ವಗುಣ ವಿಶಿಷ್ಟವಾದ ಕಮಲವು ಒಂದಾಗಿ ತೋರಿದರೂ, ಅದರಲ್ಲಿ ವಿಶಿಷ್ಟವಾದ ಗುಣಗುಣಿಭೇದವಿರುತ್ತದೆ. ಇದರಂತೆ; 'ತತ್ತ್ವಮಸಿ, ಎಂಬ ಮಹಾ ವಾಕ್ಯದಲ್ಲಿ ಯಾದರೂ, ತತ್ಪದಾರ್ಥಬ್ರಹ್ಮವೆಂಬ ಗುಣವಿಶೇಷಣವು ತ್ವಂಪದಾರ್ಥ ರೂಪ ಜೀವನೆಂಬ ವಿಶೇಷ್ಯಗುಣಿಯೊಡನೆ ಕೂಡಿಕೊಂಡಿರುತ್ತದೆ. ಅದರಿಂದ ಆ ಬ್ರಹ್ಮನೀನು ಇದ್ದಿಯೆಂದು ವಾಕ್ಯವು ಹೇಳುತ್ತದೆ. ಹೀಗೆ ಹೇಳಿದರೂ, ಅದರಲ್ಲಿ ಗುಣಗುಣಿಗಳಾದ ಬ್ರಹ್ಮಜೀವರ ಭೇದವಿರುತ್ತದೆ. ಆದ್ದರಿಂದ ಮಹಾವಾಕ್ಯವು ಅಭೇದವನ್ನು ಹೇಳುವದಿಲ್ಲ 'ಎಂದು ಶಂಕೆಯನ್ನು ಮಾಡಿದರೆ; ಇದು ಉಚಿತವ ಲ್ಲೆಂದು ಉತ್ತರವನ್ನು ಹೇಳುತ್ತಾರೆ 'ಸತ್ವಾದಿ ಗುಣತ್ರಯಗಳಿಂದ ರಹಿತವಾದ್ದ ರಿಂದ ಬ್ರಹ್ಮವು ನಿರ್ಗುಣವಾಗಿದೆ. ಅದಕ್ಕೆ ಗುಣವೆಂದು ಹೇಳುವದು ಯೋಗ್ಯವಲ್ಲ. ಹಾಗು '**ಸಾಕ್ಷಿ ಚೇತಾ ಕೇವಲೋ ನಿರ್ಗುಣಶ್ಚ**, ಚೈತನ್ಯರೂಪ ಸಾಕ್ಷಿಆತ್ಮನೂ, ನಿರ್ಗುಣನಾಗಿರುತ್ತಾನೆಂದು ಶ್ರುತಿಯು ಹೇಳುತ್ತದೆ. ಇದರಲ್ಲಿ ಗುಣಿತ್ವವನ್ನು ಕಲ್ಪನೆಮಾಡಿ ಬ್ರಹ್ಮಗುಣದೊಡನೆ ಜೀವಗುಣಿಯು ಇರುತ್ತಾನೆಂದು ನೀನು ಹೇಳುವದು ಶ್ರುತಿವಿರೋಧವಾಗಿರುತ್ತದೆ. ಮತ್ತು

**ಸಂಸರ್ಗೋ ವಾ ವಿಶಿಷ್ಟೋ ವಾ ವ್ಯಾಕ್ಯಾರ್ಥೋ ನಾತ್ರಸಂಮತಃ**
**ಅಖಂಡೈಕರಸತ್ವೇನ ವಾಕ್ಯಾರ್ಥೋ ವಿದುಷಾಂಮತಃ ||**

**ಅರ್ಥ:-** ತ್ವಂ ಘಟಮಾನಯವೆಂಬ ವಾಕ್ಯದಂತೆ ಕರ್ತಾ, ಕರ್ಮ, ಕ್ರಿಯೆಗಳಿಂದ ಕೂಡಿದ ಸಂಸರ್ಗಪರವಾದದ್ದು ಅಲ್ಲ. ನೀಲೋತ್ಪಲವೆಂಬ ವಾಕ್ಯದಂತೆ, ವಿಶಿಷ್ಟವಾದ ಅರ್ಥವುಳ್ಳದ್ದು ಮಹಾವಾಕ್ಯವಲ್ಲ. ಕಿಂತು, ಅಖಂಡೈಕರಸವಾದ ಬ್ರಹ್ಮವೆಂದು ಹೇಳುವದೇ ಮಹಾವಾಕ್ಯಾರ್ಥವಾಗಿದೆ. ಈ ಅಭೇದರೂಪ ಅಖಂಡಾರ್ಥವು ವಿದ್ವಾಂಸರಿಗೆ ಸಮ್ಮತವಾಗಿರುತ್ತದೆ. ಎಂದು ಶ್ರೀ ಶಂಕರಾಚಾರ್ಯರು ವಾಕ್ಯವೃತ್ತಿಯಲ್ಲಿ ಹೇಳಿರುತ್ತಾರೆ. ಆದ್ದರಿಂದ ಗುಣಗುಣಿ ಭೇದಪರ ಅರ್ಥ ಮಾಡುವದು ಅಯೋಗ್ಯವಾಗಿದೆ. ಮತ್ತು ಉತ್ಪಲದಲ್ಲಿ ನೀಲಗುಣವು ಆಗಂತುಕವಾದ್ದರಿಂದ ಗುಣವಾಗಿದೆ. ಇದರಂತೆ ಬ್ರಹ್ಮವು ಆಗಂತುಕವಲ್ಲ. ಕಿಂತು ಅನಾದಿಯಾಗಿರುತ್ತದೆ. ಮತ್ತು ನಿರ್ಗುಣ ನಿಷ್ಕ್ರಿಯವಾಗಿದೆ. ಅದರಿಂದ ಬ್ರಹ್ಮಕ್ಕೆ ಗುಣವೆಂದು ಹೇಳುವದು ಅನುಚಿತವಾಗಿರುತ್ತದೆ. ಆದ್ದರಿಂದ ನಿಲೋತ್ಪಲವೆಂಬ ವಾಕ್ಯದಂತೆ ಗುಣಗುಣಿ ಭೇದವುಳ್ಳದ್ದು ಮಹಾವಾಕ್ಯವಾಗಿರುವದಿಲ್ಲ. ಕಿಂತು ಭೇದಾತೀತ ಅಖಂಡ ಏಕರಸವನ್ನೇ ಪ್ರತಿಪಾದಿಸುವದಾಗಿದೆ.

**ಬಳಿಕ,** ಈ ಮಹಾವಾಕ್ಯವು ಜಾತಿವ್ಯಕ್ತಿಗಳಂತೆ ಭೇದತ್ವವನ್ನು ಕಥನ ಮಾಡುವದಿಲ್ಲೆಂದು ನಿರೂಪಣಮಾಡುತ್ತಾರೆ.

**ಇದು ಗವಯಪಿಂಡವೆಂಬುದರಂತೆ ನೀನೇ ಚಿ |**
**ತ್ಪದವೆಂಬ ವಾಕ್ಯವನು ಜಾತಿವ್ಯಕ್ತಿ ದೋ |**
**ರ್ಪುದನಾಗಿ ತಿಳಿಯದಿರು ಪುತ್ರ | ||೮||**

**ಟೀಕಾ:-** ಇದು=ಈ ಕಾಣುವ, ಗವಯಪಿಂಡವೆಂಬುದರಂತೆ=ಗೋವಿನ ದೇಹವಿದೆಂಬ ವಾಕ್ಯದಂತೆ, ನೀನೇ=ನೀನು, ಚಿತ್ಪದವೆಂಬ=ಚಿದ್ರೂಪವಾದ ಬ್ರಹ್ಮವೆಂಬ, ವಾಕ್ಯವನು=ವಾಕ್ಯವನ್ನು, ಜಾತಿ=ಗೋತ್ವವೆಂಬ ಜಾತಿಯನ್ನು, ವ್ಯಕ್ತಿ=ಗೋವಿನ ದೇಹವನ್ನು, ತೋರ್ಪುದನಾಗಿ=ತೋರಿಸುವದನ್ನಾಗಿ, ತಿಳಿಯದಿರು ಪುತ್ರ=ಹೇ ಶಿಷ್ಯನೇ ನೀನು ತಿಳಿಯಬೇಡ.

**ತಾತ್ಪರ್ಯ:-** ವಾದಿಯು 'ಇದು ಗೋವಿನ ಶರೀರವೆಂಬಲ್ಲಿ, ಗೋತ್ವ ಜಾತಿಯಿಂದ ಕೂಡಿದ ಗೋವಿನ ದೇಹ ವ್ಯಕ್ತಿಯು ಗೋಚರವಾಗುತ್ತದೆ. ವ್ಯಕ್ತಿಗಳಾದ ಗೋವಿನ ಶರೀರಗಳು ಅನೇಕವಾಗಿವೆ. ಅವುಗಳಲ್ಲಿ ಗೋತ್ವ ಜಾತಿಯು ಅನುಗತವಾಗಿ ಏಕವಾಗಿರುತ್ತದೆ. ಮತ್ತು ವ್ಯಕ್ತಿಗಳಾದ ಶರೀರಗಳು ನಾಶವಾದರೂ, ಗೋತ್ವಜಾತಿಯು ನಾಶವಾಗುವದಿಲ್ಲ. (ನಿತ್ಯಮೇಕಂ ಅನೇಕ

**ಸಮವೇತತ್ವಂ ಜಾತಿ**). ಜಾತಿ ಅಂದರೆ, ಅದು ಅನೇಕ ವ್ಯಕ್ತಿಗಳಲ್ಲಿ ಕೂಡಿದ್ದು, ವ್ಯಕ್ತಿಯು ನಾಶವಾದರೂ, ತಾನು ಮಾತ್ರ ನಾಶವಾಗದೆ ಇರುತ್ತದೆ. ಅದಕ್ಕೆ ಜಾತಿಯೆಂಬ ಹೆಸರು ಬಂದಿರುತ್ತದೆ. ಗೋತ್ವ ಜಾತಿಯು ಆನೇಕ ಗೋವ್ಯಕ್ತಿಗಳಲ್ಲಿ ಅನುಗತವಾಗಿ ಒಂದಾಗಿ ತೋರಿದರೂ; ಅದರಲ್ಲಿ ಜಾತಿನಿತ್ಯ; ವ್ಯಕ್ತಿ ಅನಿತ್ಯ; ಎಂಬ ಈ ಭೇದವು ಇದ್ದೇ ಇರುತ್ತದೆ. ಇದರಂತೆ, ಅನೇಕರಾದ ಜೀವರೆಂಬ ವ್ಯಕ್ತಿಗಳಲ್ಲಿ ಚಿದ್ರೂಪ ಲಕ್ಷಣ ಬ್ರಹ್ಮವು ಗೋತ್ವದಂತೆ ಆ ಎಲ್ಲ ಜೀವರುಗಳಲ್ಲಿ ವ್ಯಾಪಕವಾಗಿರುತ್ತದೆ. ಜೀವರು ಅನೇಕರಾಗಿದ್ದಾರೆ. ಬ್ರಹ್ಮವು ಏಕವಾಗಿದೆ. '**ಅಂಶೋನಾನಾ ವ್ಯಪದೇಶಾತ್, ಮನ್ಯೈವಾಂಶ**' ಎಂಬದಾಗಿ, ಶ್ರುತಿ ಸ್ಮೃತಿಗಳು ಜೀವರು ಅನೇಕರಿದ್ದಾರೆಂದು ಹೇಳುತ್ತವೆ. '**ಏಕಮೇವಾ ದ್ವಿತೀಯಂ**' ಬ್ರಹ್ಮವು ಒಂದಾಗಿದೆಯೆಂದು ಹೇಳುತ್ತವೆ. ಆದ್ದರಿಂದ ಆ ಬ್ರಹ್ಮವು ಅನೇಕ ಜೀವರುಗಳಲ್ಲಿ ವ್ಯಾಪಕವಾಗಿರುತ್ತದೆ. ಅದರಿಂದ ಜೀವನಿಗೆ ಬ್ರಹ್ಮನೆಂದು ಈ ಮಹಾವಾಕ್ಯವು ಕರೆಯುತ್ತದೆ. ಆದರೂ ಜೀವನು ಬ್ರಹ್ಮನಾಗುವದಿಲ್ಲ; ಕಿಂತು ಬ್ರಹ್ಮಕ್ಕಿಂತಲೂ ಬೇರೆಯಾಗಿಯೇ ಇರುತ್ತಾನೆ. ಗೋವ್ಯಕ್ತಿಗಿಂತಲೂ ಗೋತ್ವಜಾತಿಯು ನಿತ್ಯವಾಗಿ ಬೇರೆಯಿದ್ದಂತೆ, ಜೀವರುಗಳಿಂದ ಬ್ರಹ್ಮವು ಬೇರೆ ಅದೆ. ಅದರಿಂದ ಈ ಮಹಾವಾಕ್ಯವು ಜೀವ ಬ್ರಹ್ಮರಿಗೆ ಅಭೇದವನ್ನು ಹೇಳುವದಿಲ್ಲ. ಕಿಂತು, ಭೇದವನ್ನು ಹೇಳುವದಾಗಿದೆ. ಎಂದು ವಾದಿಯು ಶಂಕೆಯನ್ನು ಮಾಡಿದರೆ, ಇದಕ್ಕೆ ಮುಂದೆ ಹೇಳುವರೀತಿಯಾಗಿ ಉತ್ತರವನ್ನು ಕೊಡುತ್ತಾರೆ. "ಗೋತ್ವ ಜಾತಿ ವ್ಯಕ್ತಿಗಳಂತೆ ಬ್ರಹ್ಮಜೀವರುಗಳಿಲ್ಲ. ಮತ್ತೇನಂದರೆ ಇದ್ದೊಬ್ಬ ಚಂದ್ರನೇ ಅನೇಕ ಜಲಗಳಲ್ಲಿ ಪ್ರತಿಬಿಂಬಿಸಿ ಅನೇಕ ಚಂದ್ರರಾಗಿ ಕಾಣಿಸುವಂತೆ, ಇದ್ದ ಒಂದು ಬ್ರಹ್ಮವೇ ಅನೇಕ ಉಪಾಧಿಗಳಿಂದ ಅನೇಕ ಜೀವರಾಗಿ ತೋರುತ್ತದೆ, ಆದ್ದರಿಂದ ಆನೇಕತ್ವವು ವ್ಯಕ್ತಿಗಳಂತೆ ಭಿನ್ನವಾಗಿರುವದಿಲ್ಲ. ಕಿಂತು, ಔಪಾಧಿಕದಿಂದ ತೋರಿದರೂ ಅನೇಕತ್ವವು ಮಿಥ್ಯೆಯಾಗಿರುತ್ತದೆ. ಉಪಾಧಿಸಹಿತತ್ವ, ಮತ್ತು ಉಪಾಧಿ ರಹಿತತ್ವ, ಇವುಗಳಿಂದ ಒಂದು ಬ್ರಹ್ಮವೇ ಏಕಾನೇಕವಾಗಿ ತೋರುವದರಿಂದ ದ್ರಾಷ್ಟಾಂತಕ್ಕೆ ದೃಷ್ಟಾಂತವು ಸರಿಹೋಗುವದಿಲ್ಲ. ಆದ್ದರಿಂದ ಈ ಮಹಾವಾಕ್ಯವು ಜಾತಿವ್ಯಕ್ತಿಗಳಂತೆ ಜೀವಬ್ರಹ್ಮರಿಗೆ ಭೇದವನ್ನು ಹೇಳುವದಿಲ್ಲ. ಕಿಂತು, ಬ್ರಹ್ಮನಾದ ಜೀವನಿಗೇ ಬ್ರಹ್ಮನೆಂದು ಹೇಳುವದಾಗಿದೆ. ಅರ್ಥಾತ್ ಬ್ರಹ್ಮವೇ ಜೀವನಾಮದಿಂದ ವ್ಯವಹರಿಸಲ್ಪಡುತ್ತದೆಂದು ತಿಳಿ, ಅದರಿಂದ ಮಹಾವಾಕ್ಯವು **ಕಾರ್ಯಕಾರಣ ಭೇದಪರವಲ್ಲ**. ಅಭೇದಬೋಧಕವಾಗಿರುತ್ತದೆ. ಈಗ ಹೇಳಿದ ಅರ್ಥವನ್ನೇ ಮುಂದಿನ ಪದ್ಯದಲ್ಲಿ ವಿಶೇಷವಾಗಿ ತಿಳಿಸುತ್ತಾರೆ.

**ಬಳಿಕ**, ಜೀವನು ಬ್ರಹ್ಮದ **ಅಂಶನೂ** ಅಲ್ಲ. ಬ್ರಹ್ಮದ **ವಿಕಾರನೂ** ಅಲ್ಲ. ಕಿಂತು ಬ್ರಹ್ಮಸ್ವರೂಪನೇ ಇರುತ್ತಾನೆ ತಿಳಿ ಎಂಬುದಾಗಿ ತಿಳಿಸುತ್ತಾರೆ.

**ಗಗನಾಂಶವೆಂದು ತದ್ಗಗನದ ವಿಕಾರವೆಂ।**
**ದುಗುಣಿಸಲ್ಬಾರದಿಹ ಘಟದ ಬಯಲಂತೆ।**
**ಮಗನೆ ನೀನಿರ್ಪೆ ನಿಜದಲ್ಲಿ ॥೯॥**

**ಟೀಕಾ:-** ಗಗನಾಂಶವೆಂದು=ಆಕಾಶದ ಒಂದು ಭಾಗವೆಂದು, ತತ್=ಆ, ಗಗನದ=ಆಕಾಶದ, ವಿಕಾರವೆಂದು=ರೂಪಾಂತರ ವಿಕಾರವೆಂದು, ಗಣಿಸಲ್=ವಿಚಾರಿಸಲಿಕ್ಕೆ, ಬಾರದಿಹ=ಬಾರದಿರುವ, ಘಟದ ಬಯಲಂತೆ=ಘಟದಲ್ಲಿರುವ ಆಕಾಶದಂತೆ, ಮಗನೆ=ಹೇ ಶಿಷ್ಯನೇ! ನಿಜದಲ್ಲಿ=ಸ್ವರೂಪದಲ್ಲಿ, ನೀನಿರ್ಪೆ=ನೀನಿರುವಿ.

**ತಾತ್ಪರ್ಯ:-** ಘಟಾಕಾಶವು ಆಕಾಶದ ಒಂದು ಭಾಗವೂ ಅಲ್ಲ. ಅಥವಾ ಅದರ ವಿಕಾರವೂ ಅಲ್ಲ. ಕಿಂತು; ಆಕಾಶದ ರೂಪವಾಗಿಯೇ ಇರುತ್ತದೆ. ಆಕಾಶವು ಪೂರ್ಣವಾಗಿರುವದರಿಂದ ಭಾಗಮಾಡುವದಕ್ಕೆ ಬರುವದಿಲ್ಲ. ಮತ್ತು ನಿರವಯವಾದ್ದರಿಂದ ವಿಕಾರವನ್ನು ತಾಳುವದೂ ಅಲ್ಲ. ಈ ಆಕಾಶದ ದೃಷ್ಟಾಂತದಂತೆ, ಪರಿಪೂರ್ಣವಾದ ಪರಬ್ರಹ್ಮವಾದರೂ ಇರುತ್ತದೆ. ಜೀವನು ಆ ಬ್ರಹ್ಮದ ಭಾಗನಲ್ಲ. ಅಂದರೆ ಅಂಶರೂಪನಲ್ಲ. ಯಾಕಂದರೆ, ಬ್ರಹ್ಮವು ನಿರಂಶವಾಗಿದೆ. ನಿರವಯವಾದ್ದರಿಂದ ವಿಭಾಗವಾಗುವದಲ್ಲ. ಆದ್ದರಿಂದ ಬ್ರಹ್ಮದ ಅಂಶರೂಪನು ಜೀವನೆಂದು ಹೇಳಲಿಕ್ಕೆ ಬರುವದಿಲ್ಲ. 'ಮಮೈವಾಂಶ' ಜೀವನು ಅಂಶವೆಂದು ಭಗವದ್ಗೀತಾದಿಗಳಲ್ಲಿ ಹೇಳಿರುತ್ತದೆಂದು ಹೇಳಿದರೆ, ಅದು ಘಟಾಕಾಶದಂತೆ ಅಂಶವೇನೋ ಎಂಬಂತೆ ತೋರುವದೇ ಹೊರತು, ನಿಜವಾಗಿ ಅಂಶವಲ್ಲವೆಂದು ತಿಳಿಯತಕ್ಕದ್ದು. **'ಅಂಶಇವಅಂಶ: ನತುಅಂಶಃ'** ಎಂಬದಾಗಿ ಉಕ್ತಾರ್ಥವನ್ನು ಭಾಷ್ಯಕಾರರು ಗೀತೆಯಲ್ಲಿ ಹೇಳಿದ್ದಾರೆ. ಜೀವನು ಬ್ರಹ್ಮದ ಅಂಶನಾಗದಹಾಗೆ ವಿಕಾರನೂ ಆಗುವದಿಲ್ಲ. ಯಾಕಂದರೆ, ಹಾಲುಕೆಟ್ಟು ಮೊಸರಾಗುವದಕ್ಕೆ ವಿಕಾರವೆನ್ನುವರು. ಅರ್ಥಾತ್ ಪೂರ್ವರೂಪವನ್ನು ತ್ಯಜಿಸಿ ಉತ್ತರರೂಪವನ್ನು ಧರಿಸುತ್ತಾ ಹೋದರೆ, ಅದು ವಿಕಾರವಾಗುವದು. ಬ್ರಹ್ಮವು ನಿರ್ವಿಕಾರವಾದ್ದರಿಂದ ಅದು ಎಂದೂ ವಿಕಾರವಾಗದು. ಅದರಿಂದ ಜೀವನು ಬ್ರಹ್ಮದ **ವಿಕಾರನೂ** ಅಲ್ಲ. ಕಿಂತು; ಕುಂತೀಪುತ್ರನಾದ ಕರ್ಣನಿಗೆ ರಾಧಾಪುತ್ರನೆಂಬ ಹೆಸರು ಬಂದಂತೆ, ಬ್ರಹ್ಮಕ್ಕೆ ಅವಿದ್ಯಾವಶಾತ್ ಜೀವನೆಂಬ ನಾಮವು ಬಂದಿರುತ್ತದೆ. ಆದ್ದರಿಂದ ಜೀವನು ಬ್ರಹ್ಮಕ್ಕಿಂತಲೂ ಭಿನ್ನನಲ್ಲ. ವಿಕಾರಿಯೂ ಅಲ್ಲ ಬ್ರಹ್ಮಸ್ವರೂಪನೇ ಇರುತ್ತಾನೆಂದು ತಿಳಿ, ಆದ್ದರಿಂದ ಅಗ್ನಿ ಮತ್ತು ಅದರ ಕಿಡಿಗಳಂತೆ **ಅಂಶನೂ** ಅಲ್ಲ. ಹಾಲುಹೋಗಿ **ಮೊಸರಾದಂತೆ ವಿಕಾರನೂ** ಅಲ್ಲ. ಕಿಂತು; **ಪರಿಪೂರ್ಣ ನಿರವಯವ ನಿರ್ವಿಕಾರವಾದ ಬ್ರಹ್ಮನೆಂದು ತಿಳಿ.**

ಬಳಿಕ, ಜೀವನು ಪರಬ್ರಹ್ಮ ಸ್ವರೂಪನೇ ಎಂಬುವದಕ್ಕೆ ಪ್ರಮಾಣಗೆ ಳುಂಟೇನು? ಎಂದು ಕೇಳಿದರೆ, ಇದಕ್ಕೆ ಶ್ರುತಿವಾಕ್ಯವದೆಯೆಂದು ಹೇಳುತ್ತಾರೆ.

**ನೀನಿಂತಿದಂ ತಿಳಿಯನೇನ ಜೀವೇನಾತ್ಮ।**
**ನಾನು ಪ್ರವಿಶ್ಯ. ನಾಮರೂಪೆಂಬ ಶ್ರುತಿ।**
**ತಾನಿರ್ಪುದಾದ ಕಥದಿಂದ ॥೧೧॥**

**ಟೀಕಾ:-** ನೀನು=ನೀನು, ಇಂತು=ಹೀಗೆ, ಇದಂ=ಈ ವಿಷಯವನ್ನು, ತಿಳಿ=ಅರಿ, ಅನೇನ=ಈ, ಜೀವೇನಾತ್ಮನಾ=ಜೀವರೂಪದಿಂದ, ಅನುಪ್ರವಿಶ್ಯ=ಪ್ರಕ ಟರೂಪದಿಂಧ ಹೊಕ್ಕು, ನಾಮರೂಪೆ=ನಾಮರೂಪಗಳನ್ನು, ವ್ಯಾಕರವಾಣಿ= ಮಾಡುತ್ತೇನೆ, ಎಂಬ=ಅನ್ನುವ, ಶ್ರುತಿ=ಉಪನಿಷದ್ವಾಕ್ಯವು, ತಾನಿರ್ಪುದಾದ ಕಥದಿಂದೆ=ತಾನಿರುವದರಿಂದ.

**ತಾತ್ಪರ್ಯ:-** ಜೀವನು ಪರಬ್ರಹ್ಮರೂಪನೇ ಇರುವನು. ಬ್ರಹ್ಮಕ್ಕೆ ಜೀವ ನೆಂಬ ನಾಮದ ವ್ಯವಹಾರವು ಬಂದಿರುತ್ತದೆ. ಜೀವನು ಬ್ರಹ್ಮಕ್ಕೆ ಅನ್ಯನಲ್ಲ ಎಂದು ಹೇಳವದು ಪ್ರಮಾಣ ಸಮ್ಮತವಾಗಿರುತ್ತದೆ. ಆ ಶ್ರುತಿಯು ಯಾವದು? ಅಂದರೆ ಕೇಳು. **'ಅನೇನ ಜೀವೇನಾತ್ಮನಾನು ಪ್ರವಿಶ್ಯ ನಾಮರೂಪೆ ವ್ಯಾಕರವಾಣಿ'** ಯೆಂಬ ಶ್ರುತಿಯುಂಟು. ಸೃಷ್ಟಿಪೂರ್ವದಲ್ಲಿ ಪರಮಾತ್ಮನು ಒಬ್ಬನೇ ಇದ್ದನು. ಅವನು ಬಹಳ ಪ್ರಜೆಗಳಾಗಬೇಕೆಂದು ಸಂಕಲ್ಪಮಾಡಿದನು. ಅನಂತರ ಭೂತ ಭೌತಿಕ ಪ್ರಪಂಚವನ್ನು ರಚನೆಮಾಡಿದನು. ಆ ಶರೀರದಲ್ಲಿ ಅಗ್ನ್ಯಾದಿ ದೇವತೆ ಗಳಿಗೆ ಹೋಗಿರೆಂದು ಆಜ್ಞೆಯಿತ್ತನು. ಅಗ್ನಿಯೇ ಮೊದಲಾದ ದೇವತೆಗಳು ಆಯಾ ಇಂದ್ರಿಯಗಳ ಗೋಲಕಗಳಲ್ಲಿ ಅಭಿಮಾನರೂಪ ದೇವತೆಗಳ ರೂಪದಿಂದ ವಾಸ ಮಾಡಿದರು. ಆದರೂ ಈ ದೇಹದ ವ್ಯವಹಾರವು ನಡೆಯಲಿಲ್ಲ. ಹೀಗಿರುವದನ್ನು ಕಂಡು ಪರಮಾತ್ಮನು ತಾನೇ ಆ ದೇಹದಲ್ಲಿ ಪ್ರಕಟನಾದನು. ಕನ್ನಡಿಯಲ್ಲಿ ಮುಖವು ಸೇರಿದೆಯಂದರೆ ಪ್ರಕಟವಾಗಿರುವದೆಂದು ಹೇಗೆ ಅರ್ಥವನ್ನು ಮಾಡು ವೆವೋ, ಹಾಗೆ ಇಲ್ಲಿಯೂ ಪರಮಾತ್ಮನು ದೇಹದಲ್ಲಿ ಸೇರಿದನಂದರೆ ಪ್ರಕಟವಾಗಿರು ವನೆಂದು ತಿಳಿಯತಕ್ಕದ್ದು. ಹಾವು ಇಲಿಗಳು ಗುದ್ದಿನಲ್ಲಿ ಹೊಕ್ಕಂತೆ ಪರಮಾತ್ಮನು ಈ ದೇಹದಲ್ಲಿ ಹೊಕ್ಕಿಲ್ಲ. ಯಾಕಂದರೆ, ಪರಮಾತ್ಮನು ಇಲಿ ಹಾವುಗಳಂತೆ ಸಾವಯವ ಪರಿಚ್ಛಿನ್ನನಾದವನಲ್ಲ. ಕಿಂತು, ನಿರವಯವ ಪರಿಪೂರ್ಣನಾಗಿರುತ್ತಾನೆ. ಆದ್ದರಿಂದ ದೇಹದಲ್ಲಿ ಸೇರಿದನೆಂಬರ್ಥವಲ್ಲ. ಪ್ರಕಟನಾಗಿರುವನೆಂದು ತಿಳಿಯ ತಕ್ಕದ್ದು. ಪರಮಾತ್ಮನು ಈ ದೇಹದಲ್ಲಿ ಪ್ರಕಟನಾಗಿ ನಾಮರೂಪ ವ್ಯವಹಾರ ವನ್ನು ಕಲ್ಪನೆಮಾಡುವಂಥವನಾದನು. ಬಳಿಕ, ಅವಿದ್ಯಾವಶಾತ್ ಅವನಿಗೆ ಈ ದೇಹವೇ ನಾನೆಂಬ ಭಾವನೆ ಬಂದಿತು. ಈ ದೇಹಾಭಿಮಾನದಿಂದಲೇ ಪರಮಾತ್ಮ

ನಿಗೆ **ಜೀವ**ನೆಂಬ ನಾಮವು ಬಂದಿತು. ಅಂದರೆ ಜೀವನೆಂಬ ಹೆಸರಿನಿಂದ ಕರೆಯಿಸಿ ಕೊಳ್ಳುವವನು ಪರಮಾತ್ಮನೇ ಆಗಿರುವನು. ಹೀಗೆಂದು ಶ್ರುತಿಯು ಹೇಳುವದು. ಈ ಶ್ರುತ್ಯರ್ಥವನ್ನು ಇದೇ ಗ್ರಂಥದ ಕೊನೆಯಲ್ಲಿ ವಿಸ್ತಾರವಾಗಿ ಹೇಳಿದೆ. ಅಲ್ಲಿ ಅವಲೋಕನವನ್ನು ಮಾಡತಕ್ಕದ್ದು.

ಇದರಿಂದ ಈ ದೇಹದಲ್ಲಿ ನಾನು ಎಂದು ವ್ಯವಹಾರಮಾಡುವವನು ಪರಮಾತ್ಮನೇ ಎಂದು ನಿಶ್ಚಯವಾಗುತ್ತದೆ. ಆದ್ದರಿಂದ ವಾದಿಗಳು ಅನೇಕ **ಭೇದಪರ** ವಿಕಲ್ಪಾರ್ಥಗಳನ್ನು ಕಲ್ಪಿಸಿದರೂ ಅವು ನಿಜವಲ್ಲ. ಯಾಕಂದರೆ, ಉಕ್ತ ಶ್ರುತಿಗೆ ಅವರ ಅರ್ಥಗಳು ವಿರೋಧಗಳಾಗಿರುತ್ತವೆ. ಆದರಿಂದ ಶ್ರುತಿ ವಿರೋಧ ವಿಕಲ್ಪಾರ್ಥಗಳನ್ನು ತ್ಯಜಿಸಬೇಕು. ಅವು ಸತ್ಯವೆಂದು ಮುಮುಕ್ಷುಗಳು ನಂಬಕೂಡದು.

**ಬಳಿಕ,** ಗುರುಗಳುಶಿಷ್ಯನನ್ನು ಕುರಿತು, 'ನಾನೇ ಸದಮಳ ಪರಿಪೂರ್ಣ ಪರಬ್ರಹ್ಮನೆಂದು ತಿಳಿದು ಸುಖವಾಗಿರು, ಎಂದು ಅನುಗ್ರಹವನ್ನು ಮಾಡುತ್ತಾರೆ.

**ಇದು ಕಾರಣಂ ನೀನೆ ಸದಮಲ ಬ್ರಹ್ಮವೆಂ ।**
**ಬುದರಲ್ಲಿ ವಿಮತಿಗಳ ಬಾಧೆಯಿಲ್ಲಾಗಿ ।**
**ಪದುಳದಿಂ ನಿಜದೊಳಿರು ಪುತ್ರ** ॥೧೧॥

**ಟೀಕಾ:-** ಇದುಕಾರಣಂ=ಮೇಲೆ ಹೇಳಿದ ಕಾರಣದಿಂದ, ನೀನೆ=ನೀನೆ, ಸದಮಲ=ಸದ್ರೂಪ ಚಿದ್ರೂಪ ನಿರ್ಮಲವಾದ, ಬ್ರಹ್ಮವೆಂಬುದರಲ್ಲಿ=ಬ್ರಹ್ಮಸ್ವರೂಪನೆಂದು ಹೇಳುವಲ್ಲಿ, ವಿಮತಿಗಳ=ಭೇದವಾದಿಗಳ, ಬಾಧೆಯಿಲ್ಲಾಗಿ=ಉಪದ್ರವವಿಲ್ಲದಿರುವದರಿಂದ, ಪದುಳದಿಂ=ಸಂತೋಷದಿಂದ, ನಿಜದೊಳು=ನಿನ್ನ ಸಹಜಾನಂದ ಸ್ವರೂಪದಲ್ಲಿ, ಪುತ್ರ=ಮಗನೇ ಇರು=ಸುಖವಾಗಿರು.

**ತಾತ್ಪರ್ಯ:-** ಶ್ರುತಿಯೇ ನೀನು ಪರಬ್ರಹ್ಮನೆಂದು ಹೇಳುತ್ತಿರುವದರಿಂದ ನೀನು ಇನ್ನು ಯಾವರೀತಿಯ ಸಂಶಯವನ್ನು ಮಾಡಬೇಡ. ಭೇದವಾದಿಗಳು ನ್ಯಾಯವ್ಯಾಕರಣಾದಿ ಗ್ರಂಥಗಳನ್ನು ಬಲಮಾಡಿಕೊಂಡು, ವೇದದಲ್ಲಿ ಹೇಳಿದ ಪೂರ್ವಾಪರ ವಾಕ್ಯಗಳ ತಾತ್ಪರ್ಯ ಜ್ಞಾನಶೂನ್ಯರಾಗಿ, ಶ್ರುತ್ಯರ್ಥಕ್ಕೆ ವಿರೋಧಗಳಾದ ಅನೇಕ **ವಿಕಲ್ಪಾರ್ಥ**ಗಳನ್ನು ಮಾಡುತ್ತಾರೆ. ಅವುಗಳಿಗೆ ಕಿವಿಗೊಡಬೇಡ. ನೀನು ನಿನ್ನ ನಿಜದಲ್ಲಿ **ಸುಖವಾಗಿರು.** ಅಂದರೆ, ದೇಹವೇ ನಾನೆಂಬುದರಲ್ಲಿ ನಿನಗೆ ಹೇಗೆ ನಿಶ್ಚಯವಿತ್ತೋ, ಹಾಗೆ ನಾನು ಅಸಂಗ ಸಚ್ಚಿದಾನಂದ ಬ್ರಹ್ಮಸ್ವರೂಪನೆಂದು ನಿಶ್ಚಯಮಾಡು. ಬಳಿಕ ನಿನ್ನ ಸಹಜಾನಂದ ಸಾಗರದಲ್ಲಿ ಮುಳುಗಿರು ಎಂದು ಹೇಳಿದರು.

**ವಾಕ್ಯಾರ್ಥಪ್ರತಿಪತ್ತಿ ನಿರಾಕರಣ ನಿರೂಪಣೆ ಸೂತ್ರ ೩ಕ್ಕೆ ತ್ರಿವಿಧಿ ೨೬**

**ಬಳಿಕ**, ತತ್ತ್ವಮಸಿಯೆಂಬ ಮಹಾವಾಕ್ಯಕ್ಕೆ ಅಹಂಬ್ರಹ್ಮಾಸ್ಮಿಯೆಂಬ ಅಪರೋಕ್ಷಜ್ಞಾನವು ಆಗುತ್ತದೆ. ಭೇದಪರವಾದಿಕಲ್ಪಿತ ಅರ್ಥಗಳು ಶ್ರುತಿರೋಧಗಳಾದ್ದರಿಂದ ಗ್ರಹಿಸಲಿಕ್ಕೆ ಯೋಗ್ಯಗಳಲ್ಲ. ಎಂಬುದನ್ನು ನಿಶ್ಚಯಮಾಡಿದ ಬಳಿಕ, ಶಿಷ್ಯನು ಸಕಲ ಸಂಶಯಗಳಿಂದ ರಹಿತನಾಗಿ ಪರಮಾನಂಧವುಳ್ಳವನಾದನು. ಇಂಥಾ ಅಗಾಧಮಹಿಮೆಯುಳ್ಳ ಬ್ರಹ್ಮಜ್ಞಾನೋಪದೇಶವನ್ನು ಮಾಡಿದ ಶ್ರೀ ಗುರುಗಳನ್ನು ಕುರಿತು ಅನೇಕ ವಿಧವಾಗಿ ಗುರುಗಳ **ಉಪಕಾರವನ್ನು** ಸ್ಮರಿಸುತ್ತಲಿದ್ದಾನೆ.

ಮತ್ತು ಅಜ್ಞಾನವಶದಿಂದ ಕಳೆದುಕೊಂಡ ತನ್ನ ನಿಜವನ್ನು ಜ್ಞಾನೋಪದೇಶದಿಂದ ಪ್ರಾಪ್ತಿಮಾಡಿಕೊಟ್ಟ ಶ್ರೀ ಗುರುಗಳಿಗೆ ಪ್ರತ್ಯುಪಕಾರ ಮಾಡಿ ತೀರಿಸುವದು ಶಿಷ್ಯನಿಂದ ಆಗದು. ಯಾಕಂದರೆ, ಶ್ರೀ ಗುರುಗಳು ಶಿಷ್ಯನಿಗೆ ನಿತ್ಯಶಿವ ಸಂಪತ್ತನ್ನುಂಟುಮಾಡಿರುವರು. ಇಂಥಾ ನಿತ್ಯವಸ್ತುವನ್ನು ಶಿಷ್ಯನು ಗುರುಗಳಿಗೆ ಕೊಡಲಾರನು. ಇನ್ನು ಏನು ಕೊಟ್ಟರೂ ಅನಿತ್ಯವಾದವುಗಳನ್ನೇ ಕೊಡಬಹುದು. ಅವುಗಳಿಂದ ಏನೂ ಪ್ರಯೋಜನವಿಲ್ಲ. ಈ ಕಾರಣದಿಂದ ತನ್ನಿಂದ ಯಾವ ಉಪಕಾರವೂ ಘಟಿಸುವದಿಲ್ಲ. ಎಂಬುದನ್ನು ತಿಳಿದು, ಶಿಷ್ಯನು ಶ್ರೀ ಗುರುಗಳ ಉಪಕಾರ ಸ್ಮರಣೆಯನ್ನೇ ಪುನಃ ಪುನಃ ಮಾಡುತ್ತಾನೆ. ಶ್ರೀ ಗುರುಗಳ ಚರಣಾರವಿಂದಕ್ಕೆ **ಶರಣುಹೋಗುವದೇ** ತನ್ನ ಕರ್ತವ್ಯವೆಂದು ಭಾವಿಸುತ್ತಾನೆ. ಅದರಿಂದ ಮುಂದೆ ಹೇಳುವ ಸೂತ್ರದಲ್ಲಿ ಅನೇಕ ಪ್ರಕಾರ **ಗುರುಗಳ ಸ್ತುತಿಯನ್ನು** ಮಾಡುತ್ತಲಿದ್ದಾನೆ.

ಸೂತ್ರ|| **ದೇಶಿಕೋತ್ತಮ ನಿನ್ನ ಕರುಣದಿಂದಾನಖಿಳ |**
**ಪಾಶವಿಲ್ಲದ ಪರಬ್ರಹ್ಮವಾದೆ ||**

**ಟೀಕಾ:-** ದೇಶಿಕೋತ್ತಮ=ಮುಕ್ತಿ ಮಾರ್ಗವನ್ನು ತೋರಿಸುವ ಗುರುವೇ! ನಿನ್ನ ಕೃಪೆಯಿಂದ=ನಿನ್ನ ಕರುಣದಿಂದ, ಆನು=ನಾನು, ಅಖಿಳ ಪಾಶವಿಲ್ಲದ=ಅವಿದ್ಯಾದಿ ಸಕಲ ಪಾಶವಿಲ್ಲದಂಥಾ, ಪರಬ್ರಹ್ಮವಾದೆ=ಪರಬ್ರಹ್ಮ ಸ್ವರೂಪನಾಗಿರುವೆನು.

**ತಾತ್ಪರ್ಯ:-** ಹೇ ದೇಶಿಕೋತ್ತಮನೆ! ಅಂದರೆ, ಈ ಜನನ ಮರಣರೂಪ ಭವಾರಣ್ಯದಲ್ಲಿ ಮೋಕ್ಷದ ದಾರಿಯನ್ನು ತಪ್ಪಿ, ಜನ್ಮಾಂತರಗಳಲ್ಲಿ ಅತ್ತಿತ್ತ ತಿರಿಗಿ ಬೇಸತ್ತು, ಶರಣು ಬಂದವರಿಗೆ ಮುಕ್ತಿಗೆ ಮಾರ್ಗವಾದ ಜ್ಞಾನೋಪದೇಶವನ್ನು ಮಾಡುವಿ. ಆದರಿಂದ ನಿನಗೆ **ದೇಶಿಕೋತ್ತಮನೆಂಬ** ನಾಮವು ಬಂದಿರುತ್ತದೆ. ನೀನು **ಕೃಪಾವಲೋಕನದಿಂದ** ನನ್ನನ್ನು ಕುರಿತು, ನನ್ನ ನಿಜವನ್ನು ಅರುಹಿದ ಕಾರಣದಿಂದ ನಾನು ಸಚ್ಚಿದಾನಂದರೂಪ ಪರಬ್ರಹ್ಮ ಸ್ವರೂಪನಾಗಿ

ರುವೆನು. ನಾನು ಜೀವನು ಸಂಸಾರಿಯೆಂಬ ಭ್ರಾಂತಿಯು ಅಡಗಿತು. ಹೇ ಗುರುವೇ ! ಇದು ನಿನ್ನ ಮಹಿಮೆಯಾಗಿರುವದು.

ಬಳಿಕ, ಉಕ್ತಮಹದುಪಕಾರವನ್ನು ಮಾಡಿದ ಗುರುಗಳಿಗೆ ಪ್ರತಿ ಉಪಕಾರವು ಯಾವದೂ ಇಲ್ಲೆಂದು ತಿಳಿದು; ಶ್ರೀಗುರುಗಳನ್ನು ಕುರಿತು ಶಿಷ್ಯನು **ಶರಣು** ಹೋಗುತ್ತಿರುವನೆಂದು ನಿರೂಪಣ ಮಾಡುತ್ತಾರೆ.

ತ್ರಿವಿದಿ|| **ಶರಣು ಗುರುಕುಲಭಾನು ಶರಣುನತಸುರಧೇನು।**
**ಶರಣು ನಿಮಗಾನು ಪರನಲ್ಲವಿನ್ನೇನು।**
**ಶರಣುಮಿಗೆ ಶರಣು ಗುರುವರ್ಯ** ||೧||

**ಟೀಕಾ:-** ಗುರುಕುಲಭಾನು=ಗುರುಕುಲಕ್ಕೆ ಸೂರ್ಯಸದೃಶನಾದವನೇ ಶರಣು=ನಮಸ್ಕಾರವು, ನತಸುರಧೇನು=ನಮಿಸಿದವರಿಗೆ ಕಾಮಧೇನುವಾಗಿರುವಿ, ಶರಣು=ನಮಸ್ಕಾರವು, ನಿಮಗೆ=ಸಚ್ಚಿದಾನಂದ ಸ್ವರೂಪರಾದ ತಮಗೆ, ಆನು= ದೇಹಾದಿಗಳಿಗೆ ಸಾಕ್ಷಿಯಾದ ನಾನು, ಪರನಲ್ಲ=ಬೇರೆಯಲ್ಲ. ಶರಣು=ನಮಸ್ಕಾರವು, ಗುರುವರ್ಯ= ಗುರುಶ್ರೇಷ್ಠನೇ!, ಇನ್ನೇನು=ಬೇರೆಯಾವದುಂಟು ಕೊಡುವದು ತಕ್ಕೊಳ್ಳುವದು ಏನೂ ಇಲ್ಲ. (ಆದ್ದರಿಂದ) ಶರಣು=ನಮಸ್ಕಾರವಿರಲಿ. ಮಿಗೆಶರಣು=ಹೆಚ್ಚಾಗಿ ನಮನಗಳಿರಲಿ,

**ತಾತ್ಪರ್ಯ:-** ಸೂರ್ಯನು ಕಮಲಗಳ ಸಮೂಹಕ್ಕೆ ಬಂಧುವಾಗಿರುವಂತೆ ನೀನು ಗುರುಗಳ ಕುಲಕ್ಕೆಲ್ಲಾ **ಸೂರ್ಯ**ನಾಗಿರುವಿ. ಅಂದರೆ; ನಿನ್ನಿಂದಲೇ ಗುರುವರ್ಗವು ತೋರುತ್ತಿರುತ್ತದೆ. ಇಂಥಾ ನಿನಗೆ ನನ್ನ **ನಮಸ್ಕಾರವಿರಲಿ.** ಮತ್ತು ಶರಣಾಗತರಾಗಿ ಬಂದವರ ಭೋಗಮೋಕ್ಷಾದಿ ವಾಂಛಿತಾರ್ಥಗಳನ್ನು ಕೊಡುವದರಿಂದ **ಕಾಮಧೇನು**ವಾಗಿರುವಿ. ನಿನಗೆ ನಮಸ್ಕಾರವಿರಲಿ. ಅಜ್ಞಾನವಶದಿಂದ ನಾನು ನಿಮಗಿಂತ ಬೇರೆಯಾಗಿದ್ದೆನು. ಈಗ ನಿನ್ನ ದಯಾವಲೋಕನದಿಂದೆ ನಾನು ನಿನ್ನ ಸ್ವರೂಪನೇ ಆಗಿರುವೆನು. ಅಂದರೆ, ನಿನ್ನ ನಿಜವು ನನ್ನ ಸಾಕ್ಷಿಸ್ವರೂಪಕ್ಕಿಂತ ಭಿನ್ನವಿಲ್ಲ. ನಮ್ಮ ನಿಮ್ಮ ಸ್ವರೂಪ ಒಂದೇಯಾಗಿರುತ್ತದೆ. ಆದ್ದರಿಂದ ಕೊಡುವವರಾರು? ತೆಗೆದುಕೊಳ್ಳುವರಾರು? ಅದಕ್ಕಾಗಿ ಇನ್ನೇನು ಎಂದು ನುಡಿದಿರುತ್ತಾನೆ. ಈ ವಿಧವಾದ ಅಭೇದ ನಿಶ್ಚಯ ಜ್ಞಾನವನ್ನು ಬೋಧಿಸಿದನಿನಗೆ **ಅನಂತ ನಮಸ್ಕಾರಗಳಿರಲಿ.** ಎಂದು ಶಿಷ್ಯನು ಆನಂದಸಾಗರದಲ್ಲಿ ಮುಳಗಿ ಶ್ರೀಗುರುವಿನನ್ನು ನಮಸ್ಕರಿಸುತ್ತಲಿದ್ದಾನೆ.

**ಬಳಿಕ,** ಜೀವತ್ವ ಬುದ್ಧಿಯಿಂದ ದುಃಖಿಯಾಗಿರಲು, ನೀನು ಬ್ರಹ್ಮನೆಂದು ಅರುಹಿದಿರಿ, ಸುಖವನ್ನು ನೀಡಿ ಕಾಪಾಡಿದಿರಿ. ಅದರಿಂದ ನೀನೇ ನಿಜವಾದ **ತಂದೆ**ಯಾಗಿರುವೆ ಎಂದು ಗುರುವಿನನ್ನು ಸ್ತುತಿಸುತ್ತಾನೆ.

**ತಂದೆ ಚಿತ್ತೈಸು ಪಲವಂದದಿಂದೆನ್ನನೇ ।**
**ಕುಂದಿಲ್ಲದಿರ್ಪ ನಿಜಪರಬ್ರಹ್ಮವಹು ।**
**ದೆಂದು ಬೋಧಿಸಿದಿರೊಲವಿಂದೆ ॥೨॥**

**ಟೀಕಾ:-** ತಂದೆ=ಹೇ ಗುರುವೆ!, ಚಿತ್ತೈಸು=ಏಕಾಗ್ರದಿಂದಾಲಿಸು, ಒಲವಿಂದೆ=ಕೃಪೆಯಿಂದ; ಎನ್ನನೇ=ನನ್ನನ್ನು ಕುರಿತು, ಪಲವಂದದಿಂದ=ಹಲವು ಬಗೆಯಿಂದ, ಕುಂದಿಲ್ಲದಿರ್ಪ=ಕೊರತೆಯಿಲ್ಲದ, ನಿಜ=ಸತ್ಯವಾದ, ಪರಬ್ರಹ್ಮವಹುದೆಂದು=ಪರಬ್ರಹ್ಮ ಸ್ವರೂಪನೇ ನೀನೆಂದು, ಬೋಧಿಸಿದಿರಿ=ತಿಳಿಸಿದಿರಿ.

**ತಾತ್ಪರ್ಯ:-** ಲೌಕಿಕ ತಂದೆಯು ಜನ್ಮಾಂತರಗಳಲ್ಲಿದ್ದ ನನ್ನನ್ನು ಈ ಜನ್ಮಕ್ಕೆ ತಂದು ರಕ್ಷಣೆಯನ್ನು ಮಾಡಿದ್ದರಿಂದ ತಂದೆಯೆನಿಸುವನು. ಆದರೆ ನೀನು ನನಗೆ ಹಲವು ಬಗೆಯಿಂದ ಶ್ರುತಿ,ಯುಕ್ತಿ,ಅನುಭವಗಳನ್ನು ಹೇಳಿ ನನ್ನ ಅಜ್ಞಾನವೆಂಬ ಕಾರ್ಗತ್ತಲೆಯನ್ನು ಕಳೆದು, ದೇಶ, ಕಾಲ,ವಸ್ತು, ಪರಿಚ್ಛಿನ್ನಗಳಿಂದ ರಹಿತವಾದ ಪರಿಪೂರ್ಣ ಪರಬ್ರಹ್ಮನೆಂದು ಬೋಧಿಸಿದಿರಿ. ಅದರಿಂದ ಜನನ ಮರಣರೂಪ ಸಂಸಾರಸಾಗರವನ್ನು ದಾಟಿದೆನು. ಜನ್ಮವಿದ್ದರೂ ಜನ್ಮದಿಂದ ರಹಿತನನ್ನಾಗಿ ಮಾಡಿದಿರಿ. ಅಂದರೆ, ಜನ್ಮವನ್ನು ಕಳೆದಿರಿ. ಅದರಿಂದ ನೀನೆ ತಂದೆಯಾಗಿರುವಿ. ಲೌಕಿಕ ತಂದೆಯು ಜನ್ಮಕ್ಕೆ ತಂದರೆ, ಅಲೌಕಿಕ ತಂದೆಯಾದ ನೀನು ಜನ್ಮವನ್ನು ನಾಶಮಾಡಿದಿ. ಈ ಕಾರಣದಿಂದ ನೀನೆ ನಿಜವಾದ ತಂದೆಯಾಗಿರುವಿ ಎಂಬ ಭಾವವು.

ಬಳಿಕ, ಶಿಷ್ಯನು 'ಹೇ ಗುರುವೇ! ನಿನ್ನ ಜ್ಞಾನಾಮೃತೋಪದೇಶದಿಂದ ಸಂಶಯವಳಿದು, ಸುಖಸಾಗರದಲ್ಲಿ ಮುಳಗಿರುವೆ' ಎಂದು ಹೇಳುತ್ತಾನೆ.

**ಸಂದೇಹವಿಲ್ಲದಾನೊಂದಿ ತದ್ಭಾವದೊಳು ।**
**ನಿಂದೆನದರಿಂದ ಲೆನಗಾದ ಸಂತಸವ ।**
**ನಿಂದು ಬಿನ್ನವಿಪೆ ನವಧರಿಸು ॥೩॥**

**ಟೀಕಾ:-** ಸಂದೇಹವಿಲ್ಲದೆ=ಸಂಶಯಂಗಳಿಲ್ಲದೆ, ಆನು=ನಾನು, ಒಂದಿ=ಕೂಡಿ, ತತ್=ಆಬ್ರಹ್ಮದ, ಭಾವದೊಳು=ಸ್ವರೂಪದಲ್ಲಿ, ನಿಂದೆನು=ಇರುವೆನು, ಅದರಿಂದಲೆ=ಈಕಾರಣದಿಂದಲೇ, ಎನಗಾದ=ನನಗೆ ಉಂಟಾದ, ಸಂತಸವನು=ಆನಂದವನ್ನು, ಇಂದು=ಈ ಹೊತ್ತು ಬಿನ್ನವಿಪೆನು=ಹೇಳಿಕೊಳ್ಳುತ್ತೇನೆ, ಅವಧರಿಸು=ಕೇಳಿರಿ,

**ತಾತ್ಪರ್ಯ:-**ಹೇಗುರುವೇ! ತಮ್ಮ ವಚನೋಪದೇಶದ ಅಮೃತದಿಂದ ನನ್ನ ಸಕಲ ಸಂಶಯಗಳು ನಿರಸನವಾಗಿ, ಪರಬ್ರಹ್ಮನೇ ನಾನಿರುವೆನೆಂದು ನಿಶ್ಚ

ಯವಾಗಿ ತಿಳಿದು, ಸುಖಿಯಾಗಿರುವೆನು; ಎಂದು ಶಿಷ್ಯನು ತನಗಾದ ಹರ್ಷವನ್ನು ಗುರುಗಳಿಗೆ ತಿಳಿಸುತ್ತಲಿರುವನು. ಏನೆಂದರೆ ನಾನು ಈದೇಹವೋ? ದೇಹಕ್ಕೆ ಭಿನ್ನನೋ? ದೇಹಕ್ಕೆ ಭಿನ್ನನಾದರೂ ಕರ್ತಾಭೋಕ್ತನೋ? ಅಕರ್ತನೋ? ಅಕರ್ತಾಸಾಕ್ಷಿಯಾದರೂ, ಏಕನೋ? ಅನೇಕನೋ?, ಏಕನಾದರೂ,ಪರಿಚ್ಛಿನ್ನನೋ? ಪೂರ್ಣನೋ? ಪೂರ್ಣನಾದರೂ ಬ್ರಹ್ಮದೊಡನೆ ಭಿನ್ನನೋ? ಅಭಿನ್ನನೋ? ಅಭಿನ್ನನಾದರೂ ಸದ್ಯಕ್ಕೆ ಅಭಿನ್ನನೋ? ಯಾವಾಗಲೂ ಅಭಿನ್ನನೋ? ಸದಾ ಅಭೇದರೂಪ ನಿರುವೆನೆಂದು ನಿಶ್ಚಯವಾಯಿತು ಉಕ್ತ ಅನೇಕವಿಧ ಸಂಶಯಗಳು ದೂರಾದವು. ಅಹಂಬ್ರಹ್ಮಾಸ್ಮಿಯೆಂಬ ನಿಶ್ಚಯಜ್ಞಾನದಿಂದ ಕೂಡಿರುವೆನು. ಅದರಿಂದ ಅಪುತ್ರನಿಗೆ ಪುತ್ರಪ್ರಾಪ್ತಿಯಂತೆ ಲೋಭಿಗೆ ಧನಪ್ರಾಪ್ತಿಯಂತೆ ನನಗೆ **ಪರಮಾನಂದವಾಗಿರುವದು.** ಇಂಥಾ ಬ್ರಹ್ಮನಿಷ್ಠಸ್ಥಿತಿಯು ತಮ್ಮಿಂದಲೇ ನನಗೆ ಒದಗಿರುವದು. ತಮ್ಮ ಈ ಉಪಕಾರವನ್ನು ಎಷ್ಟು ವರ್ಣಿಸಿದರೂ ತೀರದು; ಎಂದು ತನಗಾದ ಆನಂದದ ಉದ್ಗಾರಗಳನ್ನು ಆರುಹುತ್ತಲಿರುತ್ತಾನೆ.

ಬಳಿಕ- ಶಿಷ್ಯನು ಶ್ರೀಗುರುಗಳ **ಕರುಣಾರಸದ** ವರ್ಣನೆಯನ್ನು ಮಾಡುತ್ತಾನೆ.

**ಗುರುಪುಂಗವನೆ ನಿನ್ನೊಳುರವಣಿಸಿ ಮಿಂಚುತಿಹ |**
**ಕರುಣಾಂಬುವೆನ್ನ ಮನದ ಮಲಿನಂ ದೊಳೆಯೆ |**
**ಪರಿಶುದ್ಧನಾದೆನಿದು ಸತ್ಯ** ||೪||

**ಟೀಕಾ:**- ಗುರುಪುಂಗವನೆ=ಗುರುಗಳಲ್ಲಿ ಶ್ರೇಷ್ಠನಾದವನೇ ! ನಿನ್ನೊಳು= ನಿನ್ನಲ್ಲಿ, ಉರವಣಿಸಿ=ವಿಶೇಷ ಉದ್ರಿಕ್ತವಾಗಿ, ಮಿಂಚುತಿಹ=ಹೊಳೆಯುತ್ತಿರುವ, ಕರುಣಾಂಬುವು= ಕೃಪಾರೂಪ ಜಲವು, ಎನ್ನ = ನನ್ನ, ಮನದ= ಮನಸ್ಸಿನ, ಮಲಿನಂ=ಕಲ್ಮಷವನ್ನು, ತೊಳೆಯೆ=ತೊಳೆಯುತ್ತಿರಲಿಕ್ಕೆ, ಪರಿಶುದ್ಧನಾದೆನು= ನಿರ್ಮಲನಾಗಿರುವೆನು, ಇದು ಸತ್ಯ=ಇದು ನಿಜವು.

**ತಾತ್ಪರ್ಯ:**- ಹೇ ಗುರುವರ್ಯನೇ ! ನಿಮ್ಮ ಅಂತಃಕರಣದಲ್ಲಿರುವ ಕರುಣಾ ಎಂಬ ರಸವು ಉಕ್ಕೇರಿ ನೇತ್ರಗಳಿಗೆ ಬಂದಿತು. ಅಲ್ಲಿಂದ ಕಟಾಕ್ಷರೂಪದಿಂದ ಹೊರಬಿದ್ದು, ನನ್ನ ಮೇಲೆ ಬೀಳುವದರಿಂದ, ನನ್ನ ಮನಸ್ಸಿನ ಜನ್ಮಾಂತರ ಪಾಪವೆಂಬ ಮಲಿನವು. ಅಥವಾ ದುರ್ವಾಸನೆಗಳೆಂಬ ಮಲಿನವು ಹೊರಟುಹೋಯಿತು. ಅದರಿಂದ ಈಗ ನಾನು **ಪರಿಶುದ್ಧನಾಗಿರುವೆನು.** ದೊಡ್ಡ ಮಳೆ ಬೀಳುವದರಿಂದ ಕಾಲುವೆಗಳು ತುಂಬಿ ಹರಿಯುತ್ತವೆ. ಆಗ್ಯೆ ಆ ಕಾಲುವೆಗಳಲ್ಲಿದ್ದ ಹೊಲಸು ಎಲ್ಲಾ ಹೋಗಿ ಕೇರಿಗಳು ಹೇಗೆ ಝುಳಝುಳವಾಗು

ವವೋ, ಹಾಗೆ ನಿನ್ನ ಕರುಣಾ ಎಂಬ ಜಲವು ಹರಿಯುವದರಿಂದ ಮನಸ್ಸಿನಲ್ಲಿದ್ದ ಮಾಲಿನ್ಯವು ಹೊರಟುಹೋಯಿತು. ಹೇ ಗುರುವೇ! ನಿಮ್ಮ ಕರುಣಾರಸವು ನನ್ನನ್ನು ಶುದ್ಧನನ್ನಾಗಿ ಮಾಡಿರುತ್ತದೆ ಎಂದು ಕೊಂಡಾಡುತ್ತಲಿರುವನು.

**ಬಳಿಕ,** ಗುರುವೇ ನಿಮ್ಮ ಪಾದಕಮಲದಲ್ಲಿರುವ **ವಿಭೂತಿಯು ರೇಣುವು,** ಅಂಗಕ್ಕೆ ಸ್ಪರ್ಶ ಮಾಡುವ ಮಾತ್ರದಿಂದಲೇ, ಅಜ್ಞಾನವೆಂಬ ಪಿಶಾಚಿಯು ಓಡಿ ಹೋಯಿತು. ಎಂದು ಗುರುವಿನ ಪಾದ ರೇಣುವನ್ನು ಸ್ತುತಿಸುತ್ತಲಿದ್ದಾನೆ.

**ತವಪಾದ ರೇಣುವೆಂಬ ವಿಭೂತಿಯಿಂದೆನ್ನ |**
**ನವಿರತಂ ಭ್ರಾಂತಿ ಗೊಳಿಸುವಜ್ಞಾನ ಗ್ರ |**
**ಹವೆಪಿಂಗಿತಾತ್ಮರತವಂದ್ಯ ||೫||**

**ಟೀಕಾ:-** ಆತ್ಮರತವಂದ್ಯ=ಪ್ರತ್ಯಗಾತ್ಮನಲ್ಲಿ ಪ್ರೀತಿಯುಳ್ಳ ಜನರಿಂದ ನಮಸ್ಕರಿಸಲಿಕ್ಕೆ ಯೋಗ್ಯನಾದ ಗುರುವೇ! ತವ=ನಿನ್ನ, ಪಾದ=ಪಾದಗಳಲ್ಲಿರುವ, ರೇಣುವೆಂಬ=ಧೂಳಿಯೆಂದು ಹೇಳಿಕೊಳ್ಳುತ್ತಿರುವ, ವಿಭೂತಿಯಿಂದ=ಭಸ್ಮದಿಂದ, ಎನ್ನಂ=ನನ್ನನ್ನು, ಅವಿರತಂ=ಯಾವಾಗಲೂ, ಭ್ರಾಂತಿಗೊಳ್ಳುವ=ವಿಪರೀತ ಬುದ್ಧಿಯನ್ನುಂಟು ಮಾಡುವ, ಅಜ್ಞಾನಗ್ರಹವೇ=ಅಜ್ಞಾನವೆಂಬ ಪಿಶಾಚಿಯು, ಪಿಂಗಿತು=ಬಿಟ್ಟುಓಡಿತು.

**ತಾತ್ಪರ್ಯ:-** ಅಜ್ಞಾನವೆಂಬ ಪಿಶಾಚಿಯು ಅನಾದಿಕಾಲದಿಂದಲೂ ನನ್ನನ್ನು ಹಿಡಿದು, ಅನಾತ್ಮಗಳಾದ ದೇಹಾದಿಗಳಲ್ಲಿ ನಾನೆಂಬ ಭ್ರಮವನ್ನು ಹುಟ್ಟಿಸಿ, ಅನೇಕ ಜನ್ಮಾಂತರಕ್ಕೆ ಎಳೆದೊಯ್ದು ಬಹಳ ರೀತಿಯಿಂದ ಕಾಡುತ್ತಲಿತ್ತು. ನನ್ನ ಶಿರಸ್ಸು ನಿನ್ನ ಪಾದಕಮಲಗಳಿಗೆ ನಮಸ್ಕಾರ ಮಾಡಲು, ಆ ಪಾದಗಳಲ್ಲಿರುವ ಕಿಂಚಿತ್ತು ವಿಭೂತಿಯಧೂಳವು ಶಿರಕ್ಕೆಹತ್ತಿತು. ಅದರಿಂದ ಆ ಅಜ್ಞಾನ ಪಿಶಾಚಿಯು ಬಿಟ್ಟಿತು. ಅಂದರೆ, ನಿನ್ನ ಪಾದಕ್ಕೆ ನಾನು ಬರಲಾಗಿ ನಿನ್ನಲ್ಲಿರುವ ಜ್ಞಾನವೆಂಬ ವಿಭೂತಿಯು ಕಿಂಚಿತ್ತು ಸ್ಪರ್ಶವನ್ನು ಮಾಡುತ್ತಿರಲಿಕ್ಕೆ ಅಜ್ಞಾನವೆಂಬ ಪಿಶಾಚಿಯು ಓಡಿಹೋಯಿತು. ಮತ್ತೆ ಅದರ ಸುಳವೇ ತೋರುವದಿಲ್ಲ. ಆದ್ದರಿಂದ ಹೇ ಗುರುವೇ! ನಿನ್ನ ಪಾದದಲ್ಲಿರುವ **ವಿಭೂತಿಯು** ಇಷ್ಟು ಮಹಿಮೆಯುಳ್ಳದ್ದಾಗಿದೆ. ಎಂದು ಸ್ತುತಿ ಮಾಡಿದನು.

**ಬಳಿಕ,** ಗುರುಗಳ ಪಾದಕಮಲಗಳಲ್ಲಿರುವ ಸದ್ವಾಸನೆಯು ಹತ್ತಿ ನನ್ನ ಮನಸ್ಸಿನ ದುರ್ವಾಸನೆಗಳು ದೂರಗಳಾದವು. ಅದರಿಂದ ನಾನು ಶುಚಿಯಾಗಿರುವೆನೆಂದು ಪಾದಕಮಲ ಗಂಧವನ್ನು ಹೊಗಳುತ್ತಲಿದ್ದಾನೆ.

**ಪರಮಾತ್ಮ ನಿಮ್ಮ ಪದಸರಸಿಜಾಮೋದವದು ।**
**ಪರಿದೆನ್ನೊಳಿರ್ದ ದುರಿತ ದುರ್ವಾಸನೆಯು ।**
**ನೊರಿಸಲಾನಿಂದು ಶುಚಿಯಾದೆ ॥೬॥**

**ಟೀಕಾ:-** ಪರಮಾತ್ಮ=ಪರಬ್ರಹ್ಮ ಸ್ವರೂಪನೆ, ನಿಮ್ಮ=ತಮ್ಮಗಳ, ಪದಸರಸಿಜ=ಪಾದಗಳೆಂಬ ಕಮಲಗಳ, ಆಮೋದವದು=ಸುಗಂಧವು, ಪರಿದು=ವ್ಯಾಪಿಸಿ, ಎನ್ನೊಳಿರ್ದ=ನನ್ನಲ್ಲಿರುವ, ದುರಿತ=ಪಾಪವೆಂಬ, ದುರ್ವಾಸನೆಯನು=ದುಷ್ಟವಾಸನೆಗಳನ್ನು, ಒರಿಸಲ್=ತೆಗೆಯಲಾಗಿ, ಆನು=ನಾನು, ಇಂದು=ಈ ಹೊತ್ತು, ಶುಚಿಯಾದೆ=ಪರಿಶುದ್ಧನಾಗಿರುವೆನು,

**ತಾತ್ಪರ್ಯ:-** ಸಚ್ಚಿದಾನಂದ ಪರಬ್ರಹ್ಮ ಸ್ವರೂಪಿಗಳಾದ ಹೇಗುರುವೇ ತಮ್ಮ ಪಾದಕಮಲಗಳಲ್ಲಿರುವ **ಸದ್ವಾಸನೆಯು**, ನನ್ನ ದೇಹದಲ್ಲಿ ವ್ಯಾಪಿಸಿ ನನ್ನ ಮನಸ್ಸಿನಲ್ಲಿರುವ ದುರ್ವಾಸನೆಗಳನ್ನು ನಾಶಮಾಡಿತು. ಆದರಿಂದ ನಾನು **ಶುಚಿಯಾಗಿರುವೆನು** ಎಂದು ಹೊಗಳುತ್ತಲಿದ್ದಾನೆ.

**ಬಳಿಕ:-** ಶ್ರೀಗುರುಗಳ ಪವಿತ್ರಗಳಾದ ಪಾದ ಕಮಲಗಳ **ಸ್ಪರ್ಶದಿಂದ** ನನ್ನ ತನುಮೊದಲಾದವುಗಳು **ಪವಿತ್ರಗಳಾದವೆಂದು** ತ್ವಾಚದೀಕ್ಷಾ ಸಂಬಂಧಿಯಾದ ಸ್ಪರ್ಶನದ ಮಹಿಮೆಯನ್ನು ಹೇಳುತ್ತಲಿದ್ದಾನೆ.

**ಎನ್ನ ತನುಮುಖ್ಯವೆಲ್ಲಂ ನಿಮ್ಮ ಪದಸೋಂಕಿ ।**
**ನಿಂ ನಿರ್ಮಲತ್ವ ವಾಯ್ತು ಪುಷ್ಪಾದಿರುಮೆ ।**
**ಯುನ್ನೆರೆದು ಲವಣವೆನಿಪಂತೆ ॥೭॥**

**ಟೀಕಾ:-** ಎನ್ನ = ನನ್ನ, ತನು ಮುಖ್ಯವೆಲ್ಲಂ = ಶರೀರ ಮೊದಲಾದವುಗಳೆಲ್ಲವು, ನಿಮ್ಮ=ತಮ್ಮಗಳ, ಪದಸೋಂಕಿನಿಂ=ಪಾದಸ್ಪರ್ಶದಿಂದ, ನಿರ್ಮಲತ್ವವಾಯ್ತು=ಪರಿಶುದ್ಧವಾದವು, ಪುಷ್ಪಾದಿ=ಹೂವುಕಾಯಿ ಮೊದಲಾದವುಗಳು, ರುಮೆಯುನ್ನ=ಉಪ್ಪನ್ನು, ಎರದು=ಕೂಡಿ, ಲವಣವೆನಿಪಂತೆ=ಉಪ್ಪೇ ಆಗಿ ಹೋಗುವ ಹಾಗೆ. (ಆದವು).

**ತಾತ್ಪರ್ಯ:-** ಉಪ್ಪಿನೊಡನೆ ಬೆರತ ಹೂವುಕಾಯಿ ಮೊದಲಾದವುಗಳು, ಉಪ್ಪೇ ಆಗಿ ಉಪ್ಪಿನಕಾಯಿಗಳೆಂದು ಹೇಳಿಸಿಕೊಳ್ಳುವಂತೆ, ಪವಿತ್ರಗಳಾದ ತಮ್ಮ ಪಾದಗಳಸ್ಪರ್ಶದಿಂದ ನನ್ನ ಶರೀರ ಮೊದಲಾದವುಗಳು ಪವಿತ್ರಗಳಾಗಿರುತ್ತವೆ. ಎಂದು **ಸ್ಪರ್ಶಗುಣವನ್ನು** ಹೊಗಳುತ್ತಲಿದ್ದಾನೆ.

**ಬಳಿಕ,** ಶ್ರೀಗುರುಗಳ ಸಂಗದಿಂದ ಆವರಣರೂಪ ಮರವೆಯು ಹರಿಯಿತೆಂದು **ಸತ್ಸಂಗವನ್ನು** ವರ್ಣಿಸುತ್ತಾನೆ.

**ಮಂಗಳಾತ್ಮಕ ನಿನ್ನ ಸಂಗದಿಂದೆನ್ನ ಕರ ।**
**ಣಂಗಳಂ ಮರವೆ. ಮುಸಕದಾ ರವಿಯ ತುರ ।**
**ಗಂಗಳಿಗೆ ತಿಮಿರ ಭಯವೆಂತು** ||೮||

**ಟೀಕಾ:–** ಮಂಗಳಾತ್ಮಕ=ಸುಖರೂಪ ಮಂಗಳನಾದ ಗುರುವೇ! ನಿನ್ನ ಸಂಗದಿಂ=ನಿನ್ನ ಸಹವಾಸದಿಂದೆ, ಎನ್ನ=ನನ್ನ, ಕರಣಂಗಳಂ=ಮನೋಬುದ್ಧ್ಯಾ ದಿಗಳನ್ನು, ಮರವೆ=ಅಜ್ಞಾನವು, ಮುಸಕದು=ಮುಚ್ಚುವದಿಲ್ಲ. ಆ ರವಿಯ=ಆಸೂ ರ್ಯನ, ತುರಗಂಗಳಿಗೆ=ಅಶ್ವಾದಿಗಳಿಗೆ, ತಿಮಿರ=ಕತ್ತಲೆಯ, ಭಯವೆಂತು= ಭೀತಿಯು ಹೇಗಾದೀತು ?

**ತಾತ್ಪರ್ಯ:–** ಹೇಗುರುವೇ! ಪ್ರಕಾಶಮಾನನಾದ ಸೂರ್ಯನ ಕುದುರೆ ಗಳಿಗೆ ಕತ್ತಲೆಯ ಭಯವು ಹೇಗೆ ಇಲ್ಲವೋ,; ಹಾಗೇ ಸ್ವಯಂಪ್ರಕಾಶನೂ ಸುಖರೂ ಪನೂ ಆಗಿರುವ ನಿನ್ನ ಸಂಗದಿಂದ, ನನ್ನ ಮನೋಬುದ್ಧ್ಯಾದಿಗಳಿಗೂ ಮರವೆಯು ಇಲ್ಲ. ಅಹಂಬ್ರಹ್ಮಾಸ್ಮಿಯೆಂಬ ಬ್ರಹ್ಮಾಪರೋಕ್ಷನಾದ ನಿನ್ನ ಸಹವಾಸದಿಂದ ನನಗೆ ಆವರಣವಾದ ಮರವೆಯ ಭಯವಿಲ್ಲ. ಎಂಬದಾಗಿ ಇಲ್ಲಿ ಸತ್ಸಂಗದ ಮಹಿ ಮೆಯನ್ನು ಹೇಳಿದ್ದಾನೆ.

**ಬಳಿಕ, ಸುಖಸ್ವರೂಪನಾದ ನಿನ್ನನ್ನು ಹೊಂದಿ** ನನ್ನ ಮತಿ ಮೊದಲಾ ದವುಗಳು **ಸುಖಮಯಗಳಾದವೆಂದು** ಹೊಗಳುತ್ತಾನೆ.

**ಬೆಲ್ಲಮಂ ಕೂಡಿ ಬೇವೆಲ್ಲವಿನಿದಪ್ಪಂದ ।**
**ದಲ್ಲಿ ನಿನ್ನೊಲುಮೆ ವೆರೆದೆನ್ನ ಮತಿಮರವೆ ।**
**ಯಿಲ್ಲದಾಯಿತ್ತು ಸುಖರೂಪೆ** ||೯||

**ಟೀಕಾ:**-ಸುಖರೂಪೆ=ಹೇ ಆನಂದಮಯನಾದ ಗುರುವೇ, ಬೆಲ್ಲಮಂ=ಬೆಲ್ಲ ವನ್ನು, ಕೂಡಿ=ಬೆರತು, ಬೇವೆಲ್ಲವು=ಕಹಿಯಾದ ಬೇವಿನ ಮರದ ಹೂವು ಮೊದ ಲಾದವುಗಳು, ಇನಿದು=ಮಧುರಗಳು, ಅಪ್ಪಂದದಲ್ಲಿ=ಆಗುವ ಹಾಗೆ, ನಿನ್ನ= ನಿನ್ನ, ಒಲುಮೆ=ಪ್ರೀತಿಯು, ವೆರೆದು=ಕೂಡಿ, ಎನ್ನಮತಿ= ನನ್ನ ಬುದ್ಧಿಯು, ಮರವೆಯಿಲ್ಲದಾಯಿತ್ತು=ಅಜ್ಞಾನದಿಂದ ರಹಿತವಾಗಿರುತ್ತದೆ.

**ತಾತ್ಪರ್ಯ:**- ಸೀಯಾದ ಬೆಲ್ಲದೊಡನೆ ಬೆರತಿರುವ ಕಹಿಯಾದ ಬೇವಿನ ಹೂವುಗಳು ಸೀಯಾಗಿಯೇ ಹೇಗೇ ತೋರುತ್ತಿರುವವೋ; ಹಾಗೇ ಆನಂದಮಯ ವಾದ ನಿನ್ನನ್ನು ಹೊಂದಿ, ನನ್ನ ಮತಿ ಮೊದಲಾದವುಗಳು ಆನಂದರೂಪಗಳಾ ದವು. ಮತ್ತು ಅಜ್ಞಾನ ತತ್ಸಂಬಂಧವಾದ ಆವರಣ ಇವುಗಳಿಂದಲೂ ರಹಿತಗಳಾ

ದವು ಹೀಗೆ ಆಗಿರುವದು. ಹೇ ಗುರುವೇ! ನಿನ್ನ ಕೃಪೆಯ **ಮಹಿಮೆಯು** ಆಗಿರುತ್ತದೆ.

**ಬಳಿಕ**, ತಾವು ನನ್ನನ್ನು ಕುರಿತು, ಅಪರೋಕ್ಷನಾದಾತ್ಮನನ್ನು ಅನುಭವಕ್ಕೆ ಬರುವಹಾಗೆ ಉಪದೇಶ ಮಾಡಿದ್ದರಿಂದ; **ಸಕಲದುಃಖಗಳಿಂದ** ಬಿಡುಗಡೆಹೊಂದಿದೆನು. ಎಂದು ಗುರುವಿನ **ಅನುಭವವನ್ನು** ಹೊಗಳುತ್ತಾನೆ.

**ಕ್ಲೇಶಪಂಚಕ ಪಂಚಕೋಶ ನವಗುಣವಷ್ಟ ।**
**ಪಾಶಾಷ್ಟಪ್ರಕೃತಿಯಷ್ಟಪುರಗಳಳಿದ ।**
**ವೀಶ ನಿಮ್ಮನುಭವದೊಳೆನ್ನ** ॥೧೦॥

**ಟೀಕಾ:-** ಈಶ=ಸಮರ್ಥನಾದ ಗುರುವೇ!, ನಿಮ್ಮನುಭವದೊಳು=ನಿಮ್ಮ ಉಪದೇಶ ಜ್ಞಾನಾಮೃತದಿಂದ, ಎನ್ನ=ನನ್ನ, **ಕ್ಲೇಶಪಂಚಕ**=ಅವಿದ್ಯಾ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಂಗಳಾದ ಐದು ಕ್ಲೇಶಗಳು. **ಪಂಚಕೋಶ**=ಅನ್ನ, ಪ್ರಾಣ, ಮನ, ಬುದ್ಧಿ, ಆನಂದಮಯಗಳೆಂಬ ಐದು ಕೋಶಗಳು, **ನವಗುಣವು**= ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಭಾವನೆಗಳೆಂಬ ಒಂಭತ್ತುಗುಣಗಳು, **ಅಷ್ಟಪಾಶ**=ತೃಷೆ, ಶಂಕೆ, ಭೀತಿ, ಲಜ್ಜೆ, ಜಿಗುಪ್ಸೆ, ಕುಲ, ಶೀಲ, ಗರ್ವಗಳೆಂಬ ಎಂಟು ಪಾಶಗಳು, **ಅಷ್ಟಪ್ರಕೃತಿಯು**= ಭೂಮಿ, ಜಲ, ವಹ್ನಿ, ವಾಯು, ನಭ, ಮನಸ್ಸು, ಬುದ್ಧಿ. ಅಹಂಕಾರಗಳೆಂಬ, ಎಂಟು ಪ್ರಕೃತಿಗಳು, **ಅಷ್ಟಪುರವು**=ಭೂತಪಂಚಕ, ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ಪ್ರಾಣಪಂಚಕ, ಅಂತಃಕರಣ ಪಂಚಕ, ಅವಿದ್ಯಾ, ಕಾಮ, ಕರ್ಮಗಳೆಂಬ ಎಂಟು ಪುರಗಳು, ಅಳಿದವು=ನಾಶವಾದವು, ಇವುಗಳ ವಿಶೇಷವಾದ ಅರ್ಥಗಳನ್ನು ಗ್ರಂಥಾಂತರಗಳನ್ನು ಕಂಡು ತಿಳಿದುಕೊಳ್ಳಬೇಕು. ವಿಸ್ತಾರಭೀತಿಯಿಂದ ಬರೆಯುವದನ್ನು ಬಿಟ್ಟದೆ, ಅರ್ಥಾತ್ ಜ್ಞಾನದಿಂದ ದುಃಖದ ಅತ್ಯಂತ ನಿವೃತ್ತಿಯನ್ನು ಸೂಚಿಸಿದ್ದಾರೆಂಬ ಭಾವವು.

ಬಳಿಕ, ಗುರುಗಳ **ವಾಕ್ಯೋಪದೇಶವನ್ನು** ಹೊಂದಿ ಸುಖಮಯನಾದೆನೆಂದು **ಪರಮಾನಂದ ಪ್ರಾಪ್ತಿಯನ್ನು** ಕೊಂಡಾಡುತ್ತಾನೆ.

**ಶ್ರೀಗುರುವೆ ನಿಮ್ಮ ವಚನಾಗಮ ಪಯೋನಿಧಿಯು।**
**ನೀಗಳಾನ್ಯೆದಿ ಸುಖಸುಧಾರಸವನ್ನು ।**
**ಭೋಗಿಸುತ್ತಮೃತಮಯನಾದೆ** ॥೧೧॥

**ಟೀಕಾ:-** ಶ್ರೀಗುರುವೇ! = ಸಕಲೈಶ್ವರ್ಯಸಂಪನ್ನನಾದ ಗುರುನಾಥನೇ! ನಿಮ್ಮ=ತಮ್ಮಗಳ, ವಚನ=ವಚನಗಳೆಂಬ, ಆಗಮಪಯೋನಿಧಿಯ=ವೇದರೂಪ

ಸಮುದ್ರವನ್ನು, ಈಗಳ್=ಈಗ, ಆನೈದಿ=ನಾನುಹೊಂದಿ, ಸುಖಸುಧಾರಸವನ್ನು= ಆನಂದವೆಂಬ ಅಮೃತತ್ವವನ್ನು, ಭೋಗಿಸುತ್ತ=ಉಣ್ಣುತ್ತಾ, ಅಮೃತಮಯನಾದೆ= ಆನಂದಮಯನಾಗಿದ್ದೇನೆ.

**ತಾತ್ಪರ್ಯ:-** ಹೇ ಗುರುವೇ! ತಮ್ಮಗಳ ವಚನಾಮೃತವೆಂಬ ಸಮುದ್ರ ವನ್ನು ಹೊಂದಿ ಆನಂದಮಯನಾಗಿರುತ್ತೇನೆ. ಹೀಗೆಂದು ಹೇಳಿದ್ದರಿಂದ ದೇಹಾದಿ ಗಳಿಗೆ ವಿಲಕ್ಷಣಸಾಕ್ಷಿ ಸಚ್ಚಿದಾನಂದ ಸ್ವರೂಪ ಸ್ಥಿತಿಯಿಂದ ಇದ್ದು, ಜೀವನ್ಮುಕ್ತಿ ವಿಲಕ್ಷಣಾನಂದವನ್ನು ಅನುಭವಿಸುತ್ತಲಿದ್ದೇನೆ. ಎಂಬರ್ಥವನ್ನು ಪ್ರಕಟಮಾಡಿರು ವನು. ಮತ್ತು ಉಪಾಧಿಯಾದ ವೃತ್ತಿಯು ಅಳಿದೊಡನೆ ಕೇವಲ ಆನಂದಮಯನೇ ತಾನಾಗಿರುವೆನು. ಹೀಗನ್ನುವದರಿಂದ ಪರಮಾನಂದ ಪ್ರಾಪ್ತಿಯನ್ನು ಹೇಳಿದ್ದಾನೆ. ಅರ್ಥಾತ್ ಅತ್ಯಂತ ದುಃಖನಿವೃತ್ತಿಪೂರ್ವಕ ಪರಮಾನಂದ ಪ್ರಾಪ್ತಿರೂಪ ಪರಮ ಪ್ರಯೋಜನಾತ್ಮಕ **ಮುಕ್ತಿಯು** ನಿನ್ನಿಂದಲೇ ನನಗೆ ದೊರಕಿರುತ್ತದೆಂದು ಗುರು ಗಳನ್ನು ಸ್ತುತಿಸುತ್ತಾನೆ.

ಬಳಿಕ, ಅಕಲಂಕ ಪರಬ್ರಹ್ಮ ಸುಖಮಯವಾಗಿರುವದು ವಾಣಿಯಿಂದ ಹೇಳ ಲಿಕ್ಕೆ ಬರುವದಿಲ್ಲೆಂದೂ, ಇದು **ನಿನ್ನಕರುಣೆಯಿಂದ** ಆಗಿರುವದೆಂದೂ ಹೊಗಳು ತ್ತಲಿದ್ದಾನೆ.

**ಪಾಪ ಪುಣ್ಯಂಗಳಾರೋಪಕ್ಕೆ ಗುರಿಯಾಗ|**
**ದಾ ಪರಬ್ರಹ್ಮವಾದೆನಾ ಸುಖಮಂ ನಿ|**
**ರೂಪಿಸುವೆನೆಂತು ಕರುಣಾಬ್ಧಿ** ||೧೨||

**ಟೀಕಾ:-** ಪಾಪಪುಣ್ಯಂಗಳ=ಪುಣ್ಯಪಾಪಗಳ, ಆರೋಪಕ್ಕೆ=ದೂಷಣಕ್ಕೆ, ಗುರಿಯಾಗದ=ಸಿಲ್ಕದಿರುವ, ಆ ಬ್ರಹ್ಮವಾದೆನು=ಅಂಥಾ ಪರಬ್ರಹ್ಮಸ್ವರೂಪನೇ ನಾನು ಆದೆನು, ಕರುಣಾಬ್ಧಿ=ಸಮುದ್ರದೋಪಾಧಿ ಕರುಣಾವುಳ್ಳ ಗುರುವೇ! ಆ ಸುಖಮಂ=ಅಂಥಾ ಸುಖವನ್ನು, ಎಂತು=ಹೇಗೆ, ನಿರೂಪಿಸುವೆನು=ವರ್ಣನೆಯನ್ನು ಮಾಡುವೆನು?,

**ತಾತ್ಪರ್ಯ:-** ಹೇ ಕರುಣಾ ಸಮುದ್ರನಾದ ಗುರುವೇ! ನಿನ್ನದಯದಿಂದ ಪುಣ್ಯಪಾಪಾದಿ ಸಕಲ ದ್ವಂದಧರ್ಮಗಳಿಂದ ರಹಿತವಾದ ಪರಬ್ರಹ್ಮಸ್ವರೂಪ ನಾದೆನು. ಸಕಲ ದೋಷಗಳಿಂದ ನಿರ್ಮುಕ್ತವಾದ ಆಕಾಶವು ಸದಾನಿರ್ಮಲವಾಗಿ ರುವಂತೆ, ಆ ಅಸಂಗ ನಿರ್ಮಲ ಪರಿಪೂರ್ಣ ಪರಬ್ರಹ್ಮವಾಗಿರುವೆನು. ಬಡವನು ಹೋಗಿ ಧನಿಕನಾದಂತೆ ಪರಿಚ್ಛಿನ್ನ ಜೀವಭಾವವನ್ನು ನೀಗಿ ಸುಖಮಯ ಪೂರ್ಣ ಬ್ರಹ್ಮಸ್ವರೂಪನಾಗಿರುವದನ್ನು ನನ್ನಿಂದ ವರ್ಣಿಸಲಿಕ್ಕೆ ಬರುವದಿಲ್ಲ. ಎಂದು ಹೇಳಿ ದ್ದಾನೆ.

ಬಳಿಕ, ನಿನ್ನ ಪಾದಕಮಲಗಳನ್ನು ಹೊಂದಿ, ತಾನೇ ತಾನಾಗಿರಲು ಯಾರನ್ನು ಕುರಿತು ರಾಗದ್ವೇಷಗಳಾಗಬಹುದು? ಅಂದರೆ; ಏಕಾತ್ಮಜ್ಞಾನದಿಂದ ರಾಗದ್ವೇಷಾದಿಗಳು ಸಂಭವಿಸುವದಿಲ್ಲ ಎಂದು ಗುರುಗಳ ಪಾದಕಮಲಗಳನ್ನು ಹೊಗಳುತ್ತಲಿರುತ್ತಾನೆ.

**ಆರೊಡನೆ ವೈರ ಮತ್ತಾರೊಡನೆ ಮಿತ್ರತ್ವ।**
**ವಾರನ್ಯವೆನಗೆ. ಗುರುವರನೆ ತವ ಪಾದ।**
**ವಾರಿಜದೊಳೊಂದಿದೆನಗಿನ್ನು ॥೧೩॥**

**ಟೀಕಾ**:-ಗುರುವರನೆ=ಗುರೂತ್ತಮನೇ! ತವ=ನಿನ್ನ, ಪಾದವಾರಿಜದೊಳು= ಪಾದಕಮಲಗಳಲ್ಲಿ, ಒಂದಿದ=ಶರಣಾಗತನಾದ, ಎನಗೆ=ನನಗೆ, ಇನ್ನು=ಬಳಿಕ, ಆರೊಡನೆ=ಯಾರಕೂಡ, ವೈರ=ಶತ್ರುತ್ವವು, ಮತ್ತು=ಬಳಿಕ, ಆರೊಡನೆ=ಯಾರ ಕೂಡ, ಮಿತ್ರತ್ವವು=ಸ್ನೇಹವು, ಎನಗೆ=ನನಗೆ, ಆರನ್ಯವು=ಯಾರು ಬೇರೆಯಿರುವವರು?,

**ತಾತ್ಪರ್ಯ**:— ಹೇ ಗುರುವರ್ಯನೇ! ನಿನ್ನ ಪಾದಕಮಲಗಳನ್ನು ಕುರಿತು ನಾನು ಶರಣುಬಂದೆನು. ನನ್ನನ್ನು ಕೃಪಾದೃಷ್ಟಿಯಿಂದ ಅವಲೋಕನಮಾಡಲು; ನನಗೆ ಅಖಂಡ ಸಚ್ಚಿದಾನಂದ ಪರಬ್ರಹ್ಮನೇನಾನೆಂಬ ನಿಶ್ಚಯ ಜ್ಞಾನವಾಯಿತು. ಅಖಂಡ ಸ್ವರೂಪದಿಂದ ತಾನೇ ಎಲ್ಲವೂ ಆಗಿರುವೆನೆಂಬ ಜ್ಞಾನವಾಯಿತು. ಅಜ್ಞಾನದಿಂದ ತೋರುವ ಭೇದಬುದ್ಧಿಯು ಅಡಗಿತು. ಸುಜ್ಞಾನದಿಂದ ತಾನೇ ತಾನಾಗಿರಲು; ಆ ಜ್ಞಾನಾವಸ್ಥೆಯಲ್ಲಿ ಅನ್ಯವೇನೂ ತೋರದೆ ಹೋಯಿತು. ಅಂದಬಳಿಕ ಶತೃತ್ವವನ್ನು ಯಾರೊಡನೆ ಮಾಡಲಿ? ಅಥವಾ ಮಿತ್ರತ್ವವನ್ನಾದರೂ ಯಾರ ಕೂಡಮಾಡಲಿ?ಅಂದರೆ; ತನಗಿಂತ ಭಿನ್ನವಾಗಿರುವ ಅನ್ಯ; ಬುದ್ಧಿಯೇ ಇರದ್ದರಿಂದ ಶತ್ರುತ್ವ ಮಿತ್ರತ್ವಗಳಿಗೆ ಅವಕಾಶವೇ ಇಲ್ಲದಾಯಿತು. ಶತ್ರುಮಿತ್ರರೂಪದ್ವಂದ್ವ ದುಃಖಕ್ಕೆ ಅವಕಾಶವಿಲ್ಲದೆ ಇರುವ ಸ್ಥಿತಿರೂಪವು ನಿನ್ನಿಂದಲೇ ಪ್ರಾಪ್ತವಾಯಿತು. ಇದುನಿನ್ನ ಮಹಿಮೆಯಾಗಿದೆ. ಎಂದು ಶಿಷ್ಯನು ಗುರುಗಳನ್ನು ಕೊಂಡಾಡಿ ಆಶ್ಚರ್ಯಪಡುತ್ತಲಿರುವನು.

**ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ।**
**ಶುನಿಚೈವ ಸ್ವಪಾಕೇಚ ಪಂಡಿತಾ: ಸಮದರ್ಶಿನಃ॥**

ಎಂಬ ಗೀತಾವಾಕ್ಯವನ್ನು ವಿಚಾರಮಾಡಿದರೆ, ಉಕ್ತಅರ್ಥವೇ ತೋರುತ್ತದೆ. ಕಲ್ಪಿತಗಳಾದ ಊಚನೀಚ ದೇಹಾದಿಗಳ ಭೇದವನ್ನು ಕಾಣದೆ,ಎಲ್ಲ ದೇಹಗಳಲ್ಲಿಯೂ ನಾನೇ ಇರುವೆನೆಂಬ ಅಭೇದರೂಪ ಆತ್ಮನಿಶ್ಚಯುವೇ ಜ್ಞಾನಿಯ ಲಕ್ಷ

ಣವಾಗಿದೆ. ಭೇದತೋರದೆ ಸರ್ವತ್ರ ತಾನೇ ತೋರಲು ಅನ್ಯರೆಲ್ಲಿಹರು? ಅನ್ಯರೇ ಇಲ್ಲದಮೇಲೆ ಶತ್ರುಮಿತ್ರರು ಎಲ್ಲಿರುವರು? ಯಾರೂ ಇಲ್ಲ. ಆದರಿಂದ ಜ್ಞಾನಿಯು ಶತ್ರುಮಿತ್ರತ್ವ, ರಾಗದ್ವೇಷ, ಸುಖದುಃಖಾದಿ ದ್ವಂದದುಃಖಗಳಿಂದ ರಹಿತನಾಗಿರುತ್ತಾನೆಂದು ತಿಳಿಯತಕ್ಕದ್ದು. ಮತ್ತು ಶ್ರುತಿಯಾದರೂ 'ತತ್ರಕೋಮೋಹಃಕಃ ಶೋಕಃ ಏಕತ್ವಮನುಪಶ್ಯತಃ, ಜ್ಞಾನಪ್ರಾಪ್ತಿಯಾದರೆ ಯಾವನು ಅಖಂಡು ರೂಪನು ತಾನೇಯಿರುವೆನೆಂದು ತಿಳದಿರುವನೋ, ಅವನಿಗೆ ಮೋಹಶೋಕಗಳು ಇಲ್ಲೆಂದು ಹೇಳುತ್ತದೆ. ಆದ್ದರಿಂದ ಜ್ಞಾನಿಯು ಯಾವಾಗಲೂ ಆನಂದಸಾಗರದಲ್ಲಿದ್ದ ತೆರೆಯಂತೆ ಚರಿಸುತ್ತಿರುತ್ತಾನೆಂದು ತಿಳಿಯತಕ್ಕದ್ದು ಇಂಥಾ ಆನಂದಸ್ವರೂಪದಲ್ಲಿರುವ ಸ್ಥಿತಿಯು ಗುರುವೇ! ತಮ್ಮಿಂದ ಪ್ರಾಪ್ತವಾಯಿತೆಂದು ಶಿಷ್ಯನು ಇಲ್ಲಿ ಗುರುವಿನ **ಉಪಕಾರಸ್ಮರಣೆಯನ್ನು** ಮಾಡಿರುವನೆಂಬ ಭಾವವು.

**ಬಳಿಕ,** ಹೇ ಗುರುವೇ! ಪರಿಚ್ಛಿನ್ನನಾದ ನನ್ನನ್ನು **ಪೂರ್ಣನನ್ನಾಗಿ** ಮಾಡಿದ್ದು ನಿನ್ನ ಕರುಣೆಯಾಗಿರುತ್ತದೆಂದು ಸ್ತುತಿಸುತ್ತಾನೆ.

**ಪರಮಾಣುರೂಪಮಂ ಧರಿಸಿದೆನ್ನನೆ ಪೂರ್ಣ।**
**ಪರಮಾತ್ಮನೆನಿಸಿ. ತೋರಿತಾವುದು ನಿನ್ನ।**
**ಕರುಣವದು ಜಯತು ಗುರುವರ್ಯ** ॥೧೪॥

**ಟೀಕಾ:-** ಪರಮಾಣುರೂಪಂ=ಪರಿಚ್ಛಿನ್ನತ್ವವನ್ನು, ಧರಿಸಿದ=ಅಂಗೀಕರಿಸಿದ ಎನ್ನನೆ=ನನ್ನನ್ನೇ, ಪೂರ್ಣ=ವ್ಯಾಪಕವಾದ, ಪರಮಾತ್ಮನೆನಿಸಿ=ಪರಬ್ರಹ್ಮರೂಪವೆನಿಸಿ, ತೋರಿತು=ತೋರಿಸಿತು, ಆವುದು=ಯಾವುದು ಅಂದರೆ, ನಿನ್ನ ಕರುಣವದು= ನಿನ್ನ ಕೃಪೆಯಾಗಿದೆ. ಗುರುವರ್ಯ=ಗುರುಶ್ರೇಷ್ಠನೇ! ಜಯತು=ನಿನಗೆ ಜಯಜಯವಾಗಲಿ.

**ತಾತ್ಪರ್ಯ:-** ಅಜ್ಞಾನದಿಂದ ದೃಶ್ಯವಾಗಿರುವ ಪರಿಚ್ಛಿನ್ನ ದೇಹವೇ ನಾನೆಂದು ನಂಬಿ,ಅನೇಕ ಜನ್ಮಾದಿ ದುಃಖಗಳನ್ನು ಅನುಭವಿಸುತ್ತಿರುವಂಥಾ ನನಗೆ; ನಿನ್ನ ಕೃಪೆಯು ಆ ಪರಿಚ್ಛಿನ್ನತ್ವವನ್ನು ಬಿಡಿಸಿ, ದೇಶ, ಕಾಲ, ವಸ್ತು, ಪರಿಚ್ಛೇದ ರಹಿತವಾದ, ಅಖಂಡಸ್ವರೂಪ ಪರಮಾತ್ಮನೇ ನೀನು ಎಂದು ತೋರಿಸಿಕೊಟ್ಟಿತು. ಅಂದರೆ, ಅಜ್ಞಾನವಶಾತ್ ತೋರುವ **ಪರಿಚ್ಛಿನ್ನ** ಜೀವಭಾವವನ್ನು ಬಿಡಿಸಿ, ಸುಜ್ಞಾನದಿಂದ **ಪೂರ್ಣ ಪರಮಾತ್ಮನೆಂದು** ಬೋಧಿಸಿತು. ಇದು ನಿನ್ನ ಕೃಪಾಕಟಾಕ್ಷದ ಮಹಿಮೆಯಾಗಿರುತ್ತದೆ. ಇಂಥಾ ಅಘಟಿತ ಘಟನಾರೂಪ ಅನೇಕ ಮಹಿಮೆಗಳಿಂದ ಮೆರೆಯುವ ಗುರುವರ್ಯನೇ! ನಿನಗೆ ಜಯಜಯವಾಗಲಿ. ಎಂದು ಶಿಷ್ಯನು ಗುರುವಿನ ಮಹದುಪಕಾರವನ್ನು ಸ್ಮರಿಸುತ್ತಾ ಗುರುವಿಗೆ ಶುಭವಾಗಲೆಂದು ಆಶಿಸುತ್ತಿರುವನೆಂಬ ಭಾವವು.

## ನಿಜಸುಖ ನಿರೂಪಣೆ ಸೂತ್ರ ೪೨ಕ್ಕೆ ತ್ರಿವಿಧಿ ೪೦

**ಬಳಿಕ:-** ಹಿಂದಿನ ಸೂತ್ರದಲ್ಲಿ ಶ್ರೀಗುರುವಿನ ಉಪಕಾರವನ್ನು ಸ್ಮರಿಸುತ್ತಾ, ಗುರುಸ್ತುತಿಯನ್ನು ಮಾಡಿ, ಈ ಸೂತ್ರದಲ್ಲಿ ಈ ಗ್ರಂಥವನ್ನು ಹೊಗಳುತ್ತಾ, ಇದು ಮುಮುಕ್ಷುಗಳಿಗೆ **ಪರಮಪ್ರಯೋಜನವಾಗಿ**ರುತ್ತದೆಂದು ಹೇಳಿ **ಗ್ರಂಥ**ವನ್ನು ಉಪಸಂಹಾರ ಮಾಡುತ್ತಾರೆ.

**ಸೂತ್ರ ತಿಳಿಯಲನುಭವ ಸಾರವಿದು ಸಾಧಕರ್ಗೆನಿ |**
**ರ್ಮಳವಪ್ಪ ಕೈವಲ್ಯವನೆ ಮಾಳ್ಪುದು ||**

**ಟೀಕಾ:-** ತಿಳಿಯಲ್=ವಿಚಾರಮಾಡಲಾಗಿ, ಅನುಭವಸಾರವಿದು= ಈ ಅನುಭವಸಾರ ನಾಮಕ ಗ್ರಂಥವು, ಸಾಧಕರ್ಗೆ=ಮುಮುಕ್ಷುಗಳಿಗೆ, ನಿರ್ಮಳವಪ್ಪ= ಯಾವದೊಂದು ದೋಷವಿಲ್ಲದ, ಕೈವಲ್ಯವನೆ=ಮೋಕ್ಷವನ್ನೇ, ಮಾಳ್ಪುದು= ಮಾಡುವದು.

**ತಾತ್ಪರ್ಯ:-** ಈ ಗ್ರಂಥವನ್ನು ಮುಮುಕ್ಷುಗಳು ಗುರುಮುಖದಿಂದ ಶ್ರವಣವನ್ನು ಮಾಡುತ್ತಿರಲಿಕ್ಕೆ, ಅವರಿಗೆ ಈ ಗ್ರಂಥವು ಪರಮಪುರುಷಾರ್ಥ ರೂಪ ನಿರ್ಮಳವಾದ ಮೋಕ್ಷವನ್ನು ಕೊಡುತ್ತದೆ. ಹೀಗೆ ಹೇಳುವದರಿಂದ ಈ ಅನುಭವಸಾರ ಗ್ರಂಥದ ರಚನೆಯು ಪ್ರಯೋಜನಕರವಾಗಿದೆಯೆಂಬ ಭಾವವು. ಇಲ್ಲಿ **ನಿರ್ಮಳವಪ್ಪ ಕೈವಲ್ಯ**ವೆಂದು, ಮೋಕ್ಷಕ್ಕೆ ನಿರ್ಮಲವೆಂದು ವಿಶೇಷಣವನ್ನು ಕೊಟ್ಟದ್ದರಿಂದ, ಇತರ ಮತಾಂತರ ಮುಕ್ತಿಗಳೆಲ್ಲವು ದೋಷಮಯಗಳಾಗಿರುತ್ತವೆಂದು ವ್ಯಾವರ್ತಕಮಾಡಿ ಹೇಳಿದಂತಾಯಿತು. ಯಾಕಂದರೆ, ಈ ಗ್ರಂಥದಲ್ಲಿ ಹೇಳಿರುವ ಮೋಕ್ಷವು **'ನಿಜದಭಿವ್ಯಕ್ತಿಯಹ ಲೇಸಪ್ಪ ಮುಕ್ತಿ ಘಟಿಸುವದು:** ಎಂದು ಹೇಗೆಹೇಳಿದೆ. ಆದ್ದರಿಂದ ವೇದಾಂತ ಮಹಾವಾಕ್ಯೋಪದೇಶಜನ್ಯ ಅಹಂಬ್ರಹ್ಮಾಸ್ಮಿಯೆಂಬ ಅಪರೋಕ್ಷ ಜ್ಞಾನದಿಂದ, ಅತ್ಯಂತ ದುಃಖ ನಿವೃತ್ತಿ ಪೂರ್ವಕ ಪರಮಾನಂದ ಪ್ರಾಪ್ತಿರೂಪ ಮೋಕ್ಷವಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ದುಃಖದ ನಿವೃತ್ತಿಯೆಂಬಲ್ಲಿ **ಅಭಾವವದೆ.** ಆನಂದ ಪ್ರಾಪ್ತಿಯೆಂಬಲ್ಲಿ **ಭಾವವದೆ.**ಹೀಗೆ **ಭಾವಾಭಾವಲಕ್ಷಣ** ಮುಕ್ತಿಯು ವೇದಾಂತ ಗ್ರಂಥದಲ್ಲಿ ಹೇಳಿದೆ. ಇದಕ್ಕೆ ವಿಲಕ್ಷಣಗಳಾದ ಮುಕ್ತಿಗಳು ಇತರ ಮತಾಂತರ ಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದ ಆಮುಕ್ತಿಗಳು ನಿರ್ದೋಷಗಳಲ್ಲವೆಂದು ಹೇಳುತ್ತಾರೆ. ಹೇಗಂದರೆ, **ನೈಯಾಯಿಕರು** ಇಪ್ಪತ್ತೊಂದು ಪ್ರಕಾರದ ದುಃಖ ಧ್ವಂಸಕ್ಕೆ ಮೋಕ್ಷವೆಂದು ಹೇಳುವರು. ಪಂಚ ಜ್ಞಾನೇಂದ್ರಿಯಗಳು ಒಂದು ಮನಸ್ಸು ಕೂಡಿದರೆ,ಆರು ಇಂದ್ರಿಯಗಳು,ವಿಷಯಗಳು ಆರು; ಅಭಿಮಾನಿ ದೇವತೆಗಳು ಆರು; ಇವೆಲ್ಲಾ ಕೂಡಿ ಹದಿನೆಂಟು ಆಗುವವು. ಸುಖ, ದುಃಖ, ಮಿಶ್ರ, ಈ ಮೂರು ಸೇರಿ ಇಪ್ಪತ್ತೊಂದು ದುಃಖಗಳು. ಇವುಗಳ ನಿವೃತ್ತಿಗೆ

ಮೋಕ್ಷವೆಂದು ಹೇಳುವರು. ಇದು ಸಮೀಚೀನವಲ್ಲ. ಯಾಕಂದರೆ, ಇವರು ಕಾರ್ಯ ದುಃಖಕ್ಕೆ ನಿವೃತ್ತಿಯನ್ನು ಹೇಳಿದರಲ್ಲದೆ ಮೂಲಕಾರಣವಾದ ಅವಿದ್ಯಾ ನಿವೃತ್ತಿಯನ್ನು ಹೇಳಲಿಲ್ಲ. ಇದು ಹಾಗಿರಲಿ. ಕಾರ್ಯ ದುಃಖದ ಪ್ರಧ್ವಂಸ **ಅಭಾವಕ್ಕೆ** ಮೋಕ್ಷವೆಂದು ಹೇಳಿದರು. ಇದರಲ್ಲಿ ಆನಂದದ ಭಾವ ಲಕ್ಷಣವನ್ನು ಹೇಳಲಿಲ್ಲ. ದುಃಖದ ನಿವೃತ್ತಿಯು **ಪ್ರಧ್ವಂಸಾಭಾವವಾಗಿದೆ.** ಭಾವರೂಪ ಆತ್ಮನಿಗೆ ಅಭಾವ ಮೋಕ್ಷವನ್ನು ಹೇಳುವದು ಅನುಚಿತವಾಗಿರುತ್ತದೆ. ಮತ್ತು **ಸಾಂಖ್ಯರು** ಆಧ್ಯಾತ್ಮಿಕಾದಿ ತಾಪತ್ರಯ ದುಃಖಗಳ ನಿವೃತ್ತಿಯೇ ಮೋಕ್ಷವೆಂದು ಹೇಳುವರು. ಇವರಲ್ಲಿಯೂ ಕಾರ್ಯ ದುಃಖದ ನಿವೃತ್ತಿಯನ್ನು ಹೇಳಿದರಲ್ಲದೆ, ಕಾರಣವಾದ ಅವಿದ್ಯೆಯ ನಿವೃತ್ತಿಯನ್ನು ಹೇಳಲಿಲ್ಲ. **ಅವಿದ್ಯೆಯನ್ನೇ ಕುರಿತು** ಇವರು ಸುಖವೆಂದು ಮೋಕ್ಷವೆಂದು ನುಡಿಯುವರು. ಅಂದರೆ ಕಾರಣವಾದ ಅವಿದ್ಯಾರೂಪ ದುಃಖಕ್ಕೆ ಸುಖವೆಂದು ಮೋಕ್ಷವೆಂದು ನುಡಿಯ ಹತ್ತಿರುವರು. ಇದು ಕೇವಲ **ಅವಿವೇಕವಾಗಿರುತ್ತದೆ.** ಮತ್ತು ಇವರಲ್ಲಿಯೂ ಮೋಕ್ಷವು **ಅಭಾವರೂಪವಾಗಿದೆ.** ಆದ್ದರಿಂದ ಈ ಮುಕ್ತಿಗಳು ನಿರ್ದೋಷಗಳು ಅಲ್ಲ. ಕಿಂತು; ದೋಷಮಯಗಳಾಗಿವೆ. ಈ ಕಾರಣದಿಂದಲೇ ವೇದಾಂತಮತದಲ್ಲಿ ದುಃಖದ ಅಭಾವ ಪೂರ್ವಕ ಆನಂದದ ಭಾವರೂಪ ಮುಕ್ತಿಯು ಹೇಳಲ್ಪಟ್ಟಿರುತ್ತದೆ. ಇದರಂತೆ **ಕರ್ಮಿಗಳ ಮೋಕ್ಷವು** ಸ್ವರ್ಗಪ್ರಾಪ್ತಿಯಾಗಿರುತ್ತದೆ. ಅದು ಕೂಡಾ **ಪತನ** ಭಯದಿಂದ ಕೂಡಿರುವ ಕಾರಣ ದೋಷವುಳ್ಳದ್ದಾಗಿದೆ. **ಪಾತಂಜಲಿಯು** ಸಮಾಧಿಯಲ್ಲಿ ಮನೋಲಯವಾದರೆ ಮುಕ್ತಿಯೆಂದು ಹೇಳುವನು. ಇದು ನಿದ್ರೆಯಲ್ಲಿ ಮನೋಲಯವಾದಂತೆ ಆಗಿದೆ. ನಿದ್ರೆಯಿಂದ ಎಚ್ಚತ್ತಮೇಲೆ ಮತ್ತೆ ಜಗತ್ತು ತೋರಿದಂತೆ ಸಮಾಧಿಯಿಂದ ಉತ್ಥಾನವಾದ ಮನಸ್ಸಿಗೆ ಮತ್ತೆ ಜಗತ್ತು ಸತ್ಯವಾಗಿ ತೋರುತ್ತಿರುವದು. ಇದು ಲಯರೂಪವಾದ್ದರಿಂದ **ಅತ್ಯಂತಿಕ ನಿವೃತ್ತಿಯಾಗಲಿಲ್ಲ.** ಆದ್ದರಿಂದ ಪಾತಂಜಲಿಯ ಯೋಗದಿಂದಾಗುವ ಮುಕ್ತಿಯು ಕ್ಷಣಿಕ ವಿರುವದರಿಂದ **ನಿತ್ಯವಲ್ಲ.** ಅನಿತ್ಯದೋಷವುಳ್ಳದ್ದಾಗಿದೆ. ಮತ್ತು **ಸಿದ್ಧಾಂತಿಗಳು** ಶಿವಸಮಾನತ್ವಕ್ಕೆ ಮೋಕ್ಷವೆಂದು ಹೇಳುವರು. ಈ ಮೋಕ್ಷವು ಭೇದರೂಪ ದೋಷದಿಂದ ಕೂಡಿರುವದು. ಭೇದ ಬುದ್ಧಿಯೇ ದುಃಖರೂಪವಾಗಿದೆಯೆಂದು ಶ್ರುತಿಯು '**ದ್ವಿತೀಯಾದ್ವೈ ಭಯಂ ಭವತಿ** ಎಂದುಹೇಳುತ್ತದೆ. ಭೇದವು ಅಜ್ಞಾನದಿಂದ ಬಂದಿರುತ್ತದೆ. ಶಿವಸಮಾನತ್ವವೆಂಬಲ್ಲಿ **ಸಜಾತೀಯ ಭೇದವು** ಬರುತ್ತದೆ. ಭೇದವೇ ದುಃಖಬಂಧರೂಪವಾಗಿದೆ. ಭೇದರೂಪ ದುಃಖಕ್ಕೆ ಮುಕ್ತಿಯೆಂದು ಹೇಳುವದು ದೋಷವಾಗಿದೆ. ಆದ್ದರಿಂದ ಇದು ನಿರ್ಮಳವಲ್ಲ. ಇವುಗಳಂತೆ ಅನ್ಯಮತಗಳ ಮುಕ್ತಿಗಳಲ್ಲಿಯೂ ಅನೇಕ ದೋಷಗಳು ಇರುತ್ತವೆ. ಅವುಗಳನ್ನು ಊಹಿಸಿ ತಿಳಿದುಕೊಳ್ಳಬೇಕು. **ಹಾಲು** ಅಂದರೆ ಅನೇಕ ತರದ ಹಾಲುಗಳು ಅವೆ. ಎಮ್ಮೆ, ಕುರಿ, ಆಡು,

ಆಕಳು, ಕಳ್ಳೀಹಾಲು, ಎಕ್ಕೇ ಹಾಲು, ಹೀಗೆಂದು ಅನೇಕ ಬೆಳ್ಳಗಿರುವ ದ್ರವಕ್ಕೆ ಹಾಲೆಂದು ಕರೆಯುತ್ತಾರೆ. ಆದರೆ ಆಕಳ ಹಾಲು ಅಥವಾ ಆಡಿನ ಹಾಲು ಇವೇ ಶ್ರೇಷ್ಠಗಳು ಆಗಿವೆ. ಇವು ಶರೀರಕ್ಕೆ ಪುಷ್ಟಿ ಮತ್ತು ಆರೋಗ್ಯಗಳ ನ್ನುಂಟು ಮಾಡುತ್ತವೆ. ಎಮ್ಮೆಯ ಹಾಲು ಪುಷ್ಟಿಗೆ ಹೇತುವಾದರೂ ಆಕಳ ಹಾಲಿನಂತೆ ಆರೋಗ್ಯಕರವಲ್ಲ. ಕಳ್ಳಿ, ಎಕ್ಕೆ ಹಾಲುಗಳು ದೇಹಾರೋಗ್ಯವನ್ನು ಕೆಡಿಸುತ್ತವೆ. ಮತ್ತು ವಾಂತಿ ಭೇದಿಗಳನ್ನು ಮಾಡಿಸುತ್ತವೆ. ಇವು ಹಿತಕರ ಗಳಲ್ಲ. ಆದ್ದರಿಂದ ಹಾಲು ಎಂಬ ಶಬ್ದಕ್ಕೆ ಆಕಳ ಹಾಲನ್ನೇ ಹೇಗೆ ಗ್ರಹಿಸು ತ್ತೇವೋ; ಇದರಂತೆ ಮುಕ್ತಿಯು ಅಂದರೆ, ಅತ್ಯಂತ ದುಃಖ ನಿವೃತ್ತಿ ಪೂರ್ವಕ ಪರಮಾನಂದ ಪ್ರಾಪ್ತಿರೂಪ ಮೋಕ್ಷವೇ ನಿರ್ದೋಷವಾಗಿರುತ್ತದೆ.ಅನ್ಯ ಮತಾಂ ತರ ಮುಕ್ತಿಗಳು ಕಳ್ಳೀ ಹಾಲಿನಂತೆ ದೋಷಮಯಗಳಾಗಿರುತ್ತವೆಂದು ತಿಳಿಯತಕ್ಕದ್ದು. ಅಂಥಾ ಉಕ್ತ ನಿರ್ದೋಷವಾದ ಮುಕ್ತಿಯನ್ನು ಕೊಡುವದು ಈ ಗ್ರಂಥವಾಗಿದೆ. ಆದ್ದರಿಂದ ಮುಮುಕ್ಷುಗಳು ಅನ್ಯಮತ ಶಾಸ್ತ್ರ ಮುಕ್ತಿ ಗಳನ್ನು ಕಂಡು ಭ್ರಮಿಸದೆ, ಉಪನಿಷನ್ಮತವಾದ ಈ ಗ್ರಂಥೋಕ್ತ ಮುಕ್ತಿಯನ್ನು ಪಡೆಯತಕ್ಕದ್ದು. ಎಂಬ ಆಶಯವನ್ನು ಗ್ರಂಥಕರ್ತರು ಇಲ್ಲಿ ತೋರಿಸಿದ್ದಾರೆ. ಹೀಗೆ ಹೇಳುವದರಿಂದ ಅನ್ಯಶಾಸ್ತ್ರಗಳಿಗಿಂತಲೂ ಈ ಶಾಸ್ತ್ರವು ಪರಮ ಪ್ರಯೋ ಜನಾತ್ಮಕ ಮುಕ್ತಿಯನ್ನು ಕೊಡುವುದರಿಂದ **ಸರ್ವೋತ್ಕೃಷ್ಟವಾಗಿದೆ** ಯೆಂಬಲ್ಲಿ ಏನೂ ಸಂಶಯವಿಲ್ಲ ಎಂಬ ಭಾವವು.

**ಬಳಿಕ,** ಈ ಗ್ರಂಥವು ಪರಮ ಪ್ರಯೋಜನಾತ್ಮಕ ಮುಕ್ತಿಯನ್ನು ಕೊಡುವ ದಲ್ಲದೆ; ನೂತನ ಯುಕ್ತ್ಯನುಮಾನ ಅನುಭವಗಳಿಂದ ಕೂಡಿರುವ ಕಾರಣದಿಂದ ಸರ್ವೋತ್ಕೃಷ್ಟವಾಗಿದೆ. ಅದರಿಂದ ಇದು **ಸೇವ್ಯವಾಗಿದೆ** ಯೆಂದು ಹೇಳುತ್ತಾರೆ.

**ನವಯುಕ್ತಿಯನುಮಾನ ನಿವಹದೊಡಗೂಡಿಯನು ।**
**ಭವಸಾರಮಿಂತು ರಚಿತವಾಯಿತ್ತಿಳೆಯೊ ।**
**ಳವಿರತಂ ಸೇವ್ಯವೆನಿಪಂತೆ ॥೧॥**

**ಟೀಕಾ:-** ನವಯುಕ್ತಿ=ನೂತನಯುಕ್ತಿಗಳ, ಅನುಮಾನ=ಅನುಮಾನ ಪ್ರಮಾಣಗಳ, ನಿವಹ ದೊಡಗೂಡಿ=ಸಮೂಹದಿಂದ ಕೂಡಿಕೊಂಡು, ಅನು ಭವಸಾರಂ=ಅನುಭವಸಾರ ನಾಮಕ ಈ ಗ್ರಂಥವು, ಇಂತು=ಈ ರೀತಿ, ಅವಿ ರತಂ=ಯಾವಾಗಲೂ, ಇಳೆಯೊಳ್=ಜಗತ್ತಿನಲ್ಲಿ, ಸೇವ್ಯವೆನಿಪಂತೆ=ಎಲ್ಲರಿಂದಲೂ ಸ್ವೀಕಾರ ಮಾಡುವಹಾಗೆ, ರಚಿತವಾಯಿತ್ತು=ರಚಿಸಲ್ಪಟ್ಟಿರುತ್ತದೆ.

**ತಾತ್ಪರ್ಯ:-** ಈ ಗ್ರಂಥವು ನವೀನತರಯುಕ್ತಿಗಳಿಂದ ಕೂಡಿರುತ್ತದೆ. ಆ ಯುಕ್ತಿಗಳನ್ನು ಮೂರು ಐದು ಸಂಧಿಗಳಲ್ಲಿ ಹೇಳಿರುತ್ತೇವೆ, ಮತ್ತು ಅನು

ಮಾನ ಪ್ರಮಾಣಗಳಿಂದಲೂ ಕೂಡಿರುವದು. ಆ ಅನುಮಾನಗಳನ್ನು ಜಗತ್ತು ಮಿಥ್ಯಾ ವಿಷಯದಲ್ಲಿಯೂ, ಭೇದ ನಿರಾಕರಣದಲ್ಲಿಯೂ, ನಾಲ್ಕನೇ ಸಂಧಿ ಯಲ್ಲಿಯೂ ಅಲ್ಲಲ್ಲಿ ಹೇಳಿರುತ್ತಾರೆ. ಅಪರೋಕ್ಷೀ ಕರಿಸುವ ಅನುಭವವು ಪ್ರತಿ ಸೂತ್ರಾದಿಗಳಲ್ಲಿಯೂ ತುಂಬಿತುಳುಕುತ್ತಿರುತ್ತದೆ. ಈ ವಿಧವಾಗಿ ಹೇಳಲ್ಪಟ್ಟ ಕಾರಣ ಈ ಗ್ರಂಥವು ಮುಮುಕ್ಷು ಜನರಿಂದ ಆತ್ಮಾದರ ಪೂರ್ವಕ ಸ್ವೀಕಾರ ಮಾಡಲಿಕ್ಕೆ ಯೋಗ್ಯವಾಗಿರುತ್ತದೆ. ಆದ್ದರಿಂದ ಈ ಗ್ರಂಥವು ಎಲ್ಲರಿಂದ ಯಾವಾ ಗಲೂ ಸೇವ್ಯವಾಗಿದೆಯೆಂಬ ಭಾವವು.

**ಬಳಿಕ,** ಉಪನಿಷತ್ತುಗಳ ತಾತ್ಪರ್ಯವುಳ್ಳದ್ದರಿಂದಲೂ ಗುರುಸಾಂಪ್ರದಾಯ ಸಂಮ್ಮತವಾದ್ದರಿಂದಲೂ ಈ ಗ್ರಂಥವುಸೇವ್ಯವಾಗಿರುತ್ತದೆಂದು ಹೇಳುತ್ತಾರೆ.

**ಇದು ವೇದಶಿರದರ್ಥವಿದು ಸಕಲ ಶಾಸ್ತ್ರೋಕ್ತ |**
**ವಿದು ಪುರಾತನರ ಮತವಿದು ಗುರೂಕ್ತಿ ಮ |**
**ತ್ತಿದು ತತ್ತ್ವವಿದರ ನಿಜಮಾರ್ಗ ||೨||**

**ಟೀಕಾ:-** ಇದು ವೇದ ಶಿರದರ್ಥವಿದು=ಈ ಗ್ರಂಥವು ಉಪನಿಷತ್ತುಗಳ ಸಾರವಾಗಿರುವದು,ಇದು ಸಕಲ ಶಾಸ್ತ್ರೋಕ್ತವು=ಇದು ಸಕಲಶಾಸ್ತ್ರಗಳಿಂದ ಹೇಳ ಲ್ಪಟ್ಟ ಅರ್ಥವುಳ್ಳದ್ದಾಗಿದೆ, ಪುರಾತನರಮತವಿದು=ಪೂರ್ವಾಚಾರ್ಯರಿಗೆ ಸಮ್ಮತ ವಾದದ್ದು ಆದರೆ, ಗುರೂಕ್ತಿಯು=ಶ್ರೀಗುರುವು ಹೇಳಿದ ಉಪದೇಶವೂ ಇದಾಗಿದೆ, ಮತ್ತೆ=ಬಳಿಕ, ತತ್ತ್ವವಿದರ=ತತ್ತಜ್ಞಾನಿಗಳ, ನಿಜಮಾರ್ಗ=ಮಹಾನುಭಾವಿಗಳ ಸತ್ಯವಾದ ಮಾರ್ಗವಾಗಿದೆ.

**ತಾತ್ಪರ್ಯ:-** ಈ ಗ್ರಂಥವು ಮುಮುಕ್ಷುಗಳಿಂದ ಗ್ರಹಿಸಲಿಕ್ಕೆ ಸೇವ್ಯ ವಾಗಿರುತ್ತದೆ. ಯಾಕಂದರೆ, ಉಪನಿಷತ್ತುಗಳ ವಾಕ್ಯ ತಾತ್ಪರ್ಯವುಳ್ಳದ್ದಿರುವದು, ಅದರಿಂದ **ಸೇವ್ಯವಾಗಿದೆ.** ತಾತ್ಪರ್ಯವು ವಿಪರೀತವಾದದ್ದೂ ಆಗಿರಬಹುದು. ಅಂದರೆ? ಹಾಗಲ್ಲ. ಸಕಲ ಶಾಸ್ತ್ರಗಳ ಉಕ್ತಿಗಳಿಗೂ ಇದು ಸಮ್ಮತ ವಾಗಿರುತ್ತದೆ. ಈ ಗ್ರಂಥವು ಅನ್ಯಶಾಸ್ತ್ರಕ್ಕೆ ಸಮ್ಮತವಾದರೂ, ಗುರು ಪರಂಪರಾ ಸಾಂಪ್ರದಾಯಕ್ಕೆ ಸಮ್ಮತವಲ್ಲದ್ದರಿಂದ ಗ್ರಹಿಸಲಿಕ್ಕೆ ಯೋಗ್ಯವಲ್ಲ, ಎಂದು ಶಂಕೆಯನ್ನು ಮಾಡಿದರೆ, ಪುರಾತನ ಗುರುಗಳಿಗೆ ಸಮ್ಮತವೆಂದು ಹೇಳಿ ದ್ದಾರೆ. ಮತ್ತು ಗುರೂಕ್ತಿ ಅಂದರೆ, ನಮ್ಮ ಗುರುಗಳಾದರೂ ನನಗೆ ಹೀಗೆ ಬೋಧಿಸಿರುವರು. ಹೀಗೆ ಹೇಳುವದರಿಂದ ಈ ಗ್ರಂಥದಲ್ಲಿ ಹೇಳಿದ ಅರ್ಥವು ಗುರುಪರಂಪರಾಪ್ರಾಪ್ತವಾಗಿರುತ್ತದೆಂದು ತಿಳಿ. ಗುರುಕ್ತಿಯಾದರೂ ತತ್ವಜ್ಞಾನಿ ಗಳ ಅನುಭವಕ್ಕೆ ಬಾರದ್ದರಿಂದ ಸೇವ್ಯವಲ್ಲ. ಎಂದು ಹೇಳಿದರೆ, ಬಲ್ಲಮಹಾನು

ಭವಿಗಳ ಮಾರ್ಗವೂ ಇದೇ ಆಗಿರುತ್ತದೆಂದು ಹೇಳಿದ್ದಾರೆ. ಈ ಕಾರಣಗಳಿಂದಲೇ ಈ ಗ್ರಂಥವು ಲೋಕದಲ್ಲಿ ಸೇವ್ಯವಾಗಿರುವದೆಂಬಲ್ಲಿ ಯಾವ ಸಂಶಯವು ಇಲ್ಲೆಂದು ತಿಳಿ. ಎಂಬ ಅಭಿಪ್ರಾಯವು

**ಬಳಿಕ, ಈ ಗ್ರಂಥವು ಸೇವ್ಯವಾದ್ದರಿಂದ ಅನ್ಯಶಾಸ್ತ್ರಗಳನ್ನು ನೋಡಿ ಬಳಲದೆ, ಮುಮುಕ್ಷುಗಳು ಇದನ್ನು ಗುರುಮುಖದಿಂದ ಕೇಳಿ ತಿಳಿದು ಧನ್ಯರಾಗ ತಕ್ಕದ್ದೆಂದು ಹೇಳುತ್ತಾರೆ.**

**ಅದುಕಾರಣಂ ಮುಕ್ತಿ ಪದವನೆಳಸುವರೆಲ್ಲ ।**
**ರಿದನೆ ಗುರುಮುಖದೊಳೊಲಿದೋದಿ ಕೇಳಿ ತಿಳಿ।**
**ವುದು ಬಳಲದನ್ಯ ಮತದಲ್ಲಿ ॥೩॥**

**ಟೀಕಾ:-** ಅದು ಕಾರಣಂ=ಈಕಾರಣದಿಂದ, ಮುಕ್ತಿಪದವನೆಳಸುವರೆಲ್ಲರು= ಮೋಕ್ಷಾಪೇಕ್ಷಿಗಳು, ಅನ್ಯಮತದಲ್ಲಿ=ಈ ಅದ್ವೈತಬೋಧರೂಪ ಶಾಸ್ತ್ರಕ್ಕೆ ಭಿನ್ನವಾದ ಅನ್ಯಮತ ಶಾಸ್ತ್ರಗಳಲ್ಲಿ, ಬಳಲದೆ=ಅವುಗಳನ್ನು ನೋಡಿ ಕಷ್ಟಪಡದೆ, ಇದನೆ= ಈ ಗ್ರಂಥವನ್ನೇ, ಗುರುಮುಖದೊಳು=ಗುರುವಿನಿಂದ, ಓದಿ=ಪಠಿಸಿ ಕೇಳಿ=ಶ್ರವಣಮಾಡಿ, ತಿಳಿವುದು=ಅರಿಯತಕ್ಕದ್ದು.

**ತಾತ್ಪರ್ಯ:-** ಬ್ರಹ್ಮಾಪರೋಕ್ಷ ಜ್ಞಾನಿಗಳಿಗೆ ಈ ಗ್ರಂಥವು ಸಮ್ಮತವಾದ್ದರಿಂದ, ಈ ಗ್ರಂಥವನ್ನು ಗುರುಮುಖದಿಂದ ತಿಳಿಯಬೇಕು. ಗುರುಗಳ ವಿನಾ ತಾನೇ ನೋಡಿ ತಿಳಿಯಲಿಕ್ಕೆ ಹೋದರೆ ವಿಪರೀತ ಜ್ಞಾನವಾಗಬಹುದು. ಆದ್ದರಿಂದ ಬಲ್ಲಗುರುಗಳಿಂದ ಇದನ್ನು ತಿಳಿಯಬೇಕಾಗಿರುತ್ತದೆ. ಸಮುದ್ರದನೀರು ಉಪ್ಪಾಗಿವೆ. ಅದೇ ನೀರು ಮೇಘದ್ವಾರಾ ಬಂದರೆ, ಮಧುರವಾದಂತೆ, ಗ್ರಂಥ ನೋಡಿ ತಿಳಿಯುವದು ಉಪ್ಪು ನೀರಿನಂತೆ ಭ್ರಮರೂಪ ವಿಪರೀತ ಜ್ಞಾನವಾಗಿರುತ್ತದೆ. ಅದೇ ಗ್ರಂಥವನ್ನು ಗುರುವೆಂಬಮೇಘದಿಂದ ಬಂದರೆ,ಸೀಯಾದ ನೀರಿನಂತೆ ಯಥಾರ್ಥ ಅರ್ಥವಾಗುತ್ತದೆ. ಆದ್ದರಿಂದ ಗ್ರಂಥವನ್ನು ಗುರುಮುಖದಿಂದ ಅರಿಯಬೇಕು. ಇದಕ್ಕೆ ಭಿನ್ನಗಳಾದ ಅನ್ಯಶಾಸ್ತ್ರಗಳನ್ನು ನೋಡುತ್ತೇವೆಂದು ಹೇಳಿದರೆ, ನಿಮಗೆ ಸುಖವಾಗದು. ಯಾಕಂದರೆ, ಅನ್ಯಶಾಸ್ತ್ರಂಗಳು ಈ ಗ್ರಂಥದಂತೆ ಅಪರೋಕ್ಷಜ್ಞಾನ ಜನಕವಲ್ಲದ್ದರಿಂದಲೂ, ಪೂರ್ವಾಪರವಾಕ್ಯಗಳು ಬಹಳ ದೂರವಿರುವದರಿಂದಲೂ, ನಿಮಗೆ ಕಷ್ಟವೇ ಆಗುತ್ತದೆ. ಅಂದರೆ, ಇದರಂತೆ ಸುಗಮವಾಗಿ ಸ್ವಲ್ಪದರಲ್ಲಿ ನಿಜಜ್ಞಾನವನ್ನುಂಟುಮಾಡತಕ್ಕವು ಅಲ್ಲ. ಈ ಕಾರಣದಿಂದ ಆಯಾಸ ಬಾಹುಲ್ಯವುಳ್ಳವುಗಳು ಆಗಿವೆ. ಆದ್ದರಿಂದ ಮುಮುಕ್ಷುಗಳು ಈ ಗ್ರಂಥವನ್ನು ಅವಶ್ಯವಾಗಿ ಗುರುಮುಖದಿಂದ ತಿಳಿದು ಕೃತಾರ್ಥರಾಗತಕ್ಕದ್ದು.

**ಬಳಿಕ,:-** ಈ ಗ್ರಂಥದಂತೆ ಅನ್ಯರ ಗ್ರಂಥಗಳು ಮುಕ್ತಿಯನ್ನು ಕೊಡತಕ್ಕವು ಆಗಿವೆ. ಅವು ಯೋಗ್ಯಗಳು ಆಗಿವೆಯೆಂದು ಶಂಕೆಯನ್ನು ಮಾಡಿದರೆ, ಹಾಗಲ್ಲ. ಈ ಗ್ರಂಥದ ಅರ್ಥವು ಮುಕ್ತಿಯನ್ನು ಕೊಡುವದಲ್ಲದೆ, ಅನೇಕ ಸಂಶಯಗಳನ್ನು ದೂರು ಮಾಡುತ್ತದೆ. ಆದ್ದರಿಂದ ಈ ಗ್ರಂಥವೇ ಸೇವ್ಯವಾಗಿದೆಯೆಂದು ಹೇಳುತ್ತಾರೆ.

**ದಿನಪನುದಯಂ ತಮುವನೆನಿತು ಬೇಗಂ ತವಿಪು ।**
**ದನಿತು ಶೀಘ್ರದೊಳು ಸಕಲ ಸಂದೇಹಂಗ ।**
**ಳನು ಕಳೆವುದಿದರೊಳೆಸೆವರ್ಥ ॥೪॥**

**ಟೀಕಾ:-** ದಿನಪನ=ಸೂರ್ಯನ, ಉದಯಂ=ಮೂಡುವಿಕೆಯು, ಎನಿತು=ಎಷ್ಟು, ಬೇಗಂ=ಶ್ರೀಘ್ರವಾಗಿ, ತಮುವನು=ಕತ್ತಲೆಯನ್ನು, ತವಿಪುದು=ನಾಶಮಾಡುವದೋ, ಅನಿತು=ಅಷ್ಟೇ, ಶೀಘ್ರದೊಳು=ತೀವ್ರದಿಂದ' ಇದರೊಳು=ಈ ಗ್ರಂಥದಲ್ಲಿ, ಎಸೆವ=ಶೋಭಿಸುವ, ಅರ್ಥ=ಅರ್ಥವು, ಸಕಲ=ಎಲ್ಲ, ಸಂದೇಹಂಗಳನು=ಸಂಶಯಗಳನ್ನು, ಕಳೆವುದು=ನಾಶಮಾಡುವದು.

**ತಾತ್ಪರ್ಯ:-** ಸೂರ್ಯೋದಯ ಸಮಕಾಲದಲ್ಲಿಯೇ ಕತ್ತಲೆಯು ಕೆಡುವಂತೆ, ಈ ಗ್ರಂಥವನ್ನು ಗುರುಮುಖದಿಂದ ತಿಳದೊಡನೆ ಇದರಲ್ಲಿರುವರ್ಥವು ಸಕಲ ಸಂಶಯಗಳ ನಾಶವನ್ನು ಮಾಡುತ್ತದೆ· ಆದ್ದರಿಂದ ಈ ಗ್ರಂಥವು ಸೇವ್ಯವಾಗಿದೆ. ಅಂದರೆ, ಅನ್ಯಗ್ರಂಥಗಳಲ್ಲಿ ಯಾವದೊಂದು ವಿಷಯವು ಉಪಕ್ರಮವಾಗಿ ಬಹಳದೂರ ನೂರಾರು ಶ್ಲೋಕಗಳ ಪರ್ಯಂತರ ಹೋಗಿ, ಉಪಸಂಹಾರ ವಾಗುತ್ತದೆ. ಆಗ್ಯೆ ಆ ವಿಷಯದ ಅರ್ಥವು ಮನಸ್ಸಿಗೆ ಹೊಳೆಯುವದಿಲ್ಲ. ಈ ಗ್ರಂಥವು ಹಾಗಲ್ಲ, ಪ್ರತಿಯೊಂದು ಸೂತ್ರ ಸಂಧಿಗಳಲ್ಲಿ ಶೀಘ್ರವಾಗಿಯೇ ಪ್ರತಿಯೊಂದು ವಿಷಯುದರ್ಥವು ಮನಸ್ಸಿನಲ್ಲಿ ಪ್ರತಿಬಿಂಬಿಸುತ್ತದೆ. ಆದ್ದರಿಂದ ಸಂಶಯಗಳನ್ನು ಕಳೆಯುತ್ತದೆ. ಕೆಲವು ಪೂರ್ವದ ಗ್ರಂಥಗಳನ್ನು ನೋಡುವದರಿಂದ ಸಂಶಯಗಳು ಬರುತ್ತವೆ. ಆ ಸಂಶಯಗಳನ್ನು ಕಳೆಯುವದಕ್ಕಾಗಿ ಉತ್ತರ ಗ್ರಂಥಗಳು ರಚಿತಗಳಾಗಿರುತ್ತವೆ. ಮತ್ತು ಕೆಲವು ಗ್ರಂಥಗಳು ಮತಾಂತರಗಳನ್ನು ಖಂಡಿಸಿ ಸ್ವಮತವನ್ನು ಮಂಡನ ಮಾಡಲು ತತ್ಪರಗಳಾಗಿರುತ್ತವೆ. ಅವುಳಂತೆ ಈ ಗ್ರಂಥವಲ್ಲ. ಕಿಂತು; ಸ್ವಲ್ಪದರಲ್ಲಿಯೇ ಸ್ವರೂಪಜ್ಞಾನವನ್ನುಂಟು ಮಾಡುವ ಅರ್ಥವುಳ್ಳದ್ದಾಗಿದೆ. ಸೂರ್ಯೋದಯ ಸಮಕಾಲದಲ್ಲಿಯೇ ಕತ್ತಲೆಯು ಕೆಡುವಂತೆ, ಈ ಗ್ರಂಥವು ಶ್ರವಣಮಾಡಿದೊಡನೆಯೇ ಸಂಶಯಗಳನ್ನು ಕಳೆಯುತ್ತದೆ. ಅನ್ಯಗ್ರಂಥಗಳು ಶ್ರವಣೋತ್ತರ ಮನನಕಾಲಕ್ಕೆ ಸಂಶಯಗಳನ್ನು ಕಳೆಯುತ್ತವೆ. ಆದ್ದರಿಂದ ಅನ್ಯಗ್ರಂಥಗಳಿಗಿಂತಲೂ ಈ ಗ್ರಂಥವು ವಿಲಕ್ಷಣ

ಮತ್ತು ವಿಚಕ್ಷಣವಾಗಿರುತ್ತದೆಂಬುದನ್ನು ತಿಳಿಸುವದಕ್ಕಾಗಿ **ಸೂರ್ಯನ** ದೃಷ್ಟಾಂತವನ್ನು ಉದಾಹರಿಸಿರುವರು. ತತ್, ತ್ವಂ, ಅಸಿ, ಎಂಬ ಪದತ್ರಯ ಗಳ ಸಂಬಂಧಿ ಸಕಲ ಸಂಶಯಗಳನ್ನು ದೂರಮಾಡುತ್ತದೆ. ಆ ಸಕಲ ಸಂಶಯ ಗಳನ್ನು ವೃತ್ತಿ ಪ್ರಭಾಕರದ ಎಂಟನೇ ಸಂಧಿಯಲ್ಲಿ ನೋಡಬಹುದು. ಈ ಗ್ರಂಥವು ಶ್ರೀಘ್ರಸಂಶಯ ನಿವಾರಕವಾದ್ದರಿಂದ ಸೇವ್ಯವಾಗಿದೆಯೆಂಬ ಭಾವವು.

**ಬಳಿಕ,** ಈ ಗ್ರಂಥದಂತೆ ಅನ್ಯಕೆಲವು ಗ್ರಂಥಗಳು ಇದಕ್ಕೂ ಬೇಗನೆಸಂಶ ಯಗಳನ್ನು ಕಳೆಯುತ್ತವೆ.ಆದ್ದರಿಂದ ಇದು ಸೇವ್ಯವಲ್ಲ ಎಂದು ಶಂಕೆಮಾಡಿದರೆ, ಹಾಗಲ್ಲ. ಇದು ಸಂಶಯಗಳನ್ನು ಕಳೆಯುವದಲ್ಲದೆ, ಸ್ವರೂಪ ಸಾಕ್ಷಾತ್ಕಾರ ವನ್ನು ಮಾಡಿಕೊಡುತ್ತದೆ. ಆದ್ಧರಿಂದ ಈ ಗ್ರಂಥವು ಅನ್ಯಗ್ರಂಥಗಳಿಗಿಂತಲೂ ಸೇವ್ಯವೆಂದು ಹೇಳುತ್ತಾರೆ.

**ರನ್ನಗನ್ನಡಿಯಲ್ಲಿ ತನ್ನಮೊಗದಂದವಂ ।**
**ಚನ್ನಾಗಿಕಾಣ್ಬ ತೆರನಂತೆ ನಿಜವಿದರೊ ।**
**ಳಂ ನಾಡೆ ತೋರ್ಪುದಖಿಳರ್ಗೆ** ॥೫॥

**ಟೀಕಾ:–** ರನ್ನಗನ್ನಡಿಯಲ್ಲಿ=ರತ್ನಖಚಿತಕನ್ನಡಿಯಲ್ಲಿ, ತನ್ನಮೊಗದ= ತನ್ನ ಮುಖದ, ಅಂದವಂ=ಚಲ್ವಿಕೆಯನ್ನು, ಚನ್ನಾಗಿ=ಸ್ಪಷ್ಟವಾಗಿ, ಕಾಣ್ಬತೆ ರನಂತೆ=ನೋಡುವವನಹಾಗೆ, ಇದರೊಳು=ಈ ಗ್ರಂಥದಲ್ಲಿ, ನಿಜವು=ನಮ್ಮಗಳ ಸ್ವರೂಪು, ನಾಡೆ=ಚನ್ನಾಗಿ, ಅಖಿಳರ್ಗೆ=ಸರ್ವರಿಗೆ,ತೋರ್ಪುದು=ಅಪರೋಕ್ಷೀ ಕರಿಸಿ ಕೊಡುತ್ತದೆ.

**ತಾತ್ಪರ್ಯ:-** ಅನ್ಯಗ್ರಂಥಗಳು ಸಂಶಯಗಳನ್ನು ಕಳೆದು ನಿಜವನ್ನು ತಿಳಿಸಬಹುದು. ಆದರೂ, ಈ ಗ್ರಂಥದಂತೆ ಚನ್ನಾಗಿ ಸ್ವಸ್ವರೂಪ ಸಾಕ್ಷಾತ್ಕಾರ ವನ್ನು ಮಾಡಲಾರವು. ಹೇಗಂದರೆ, ಅನ್ಯರ ಗ್ರಂಥಗಳು ಸಾಧಾರಣ ಕನ್ನಡಿ ಗಳಿದ್ದಂತೆ ಇರುತ್ತವೆ. ಈ ಗ್ರಂಥವು ರತ್ನಖಚಿತ ಕನ್ನಡಿಯಂತಿರುತ್ತದೆ. ಅಂದರೆ, ಸಾಧಾರಣ ಕನ್ನಡಿಗಳು ಮುಖವನ್ನು ತೋರಿಸುತ್ತವೆ. ಆದರೆ ರತ್ನಗಳಿಂದ ಕೆಚ್ಚಿದ ಕನ್ನಡಿಯು ಮಾತ್ರ ಮುಖವನ್ನು ತೋರಿಸುವದಲ್ಲದೆ ಮುಖವನ್ನು ಬೆಳಗು ತ್ತದೆ. ಆದ್ದರಿಂದ ಸಾಧಾರಣ ಕನ್ನಡಿಗಿಂತಲೂ **ರತ್ನಖಚಿತ ಕನ್ನಡಿಯು** ವಿಶೇಷವಾಗಿರುತ್ತದೆ. ಇದರಂತೆ ಅನ್ಯಗ್ರಂಥಗಳು ನಿಜವನ್ನು ತಿಳಿಸಬಹುದು ಆದರೂ ಈ ಗ್ರಂಥದಂತೆ, ಸ್ವಸ್ವರೂಪವನ್ನು ವಿಶೇಷವಾಗಿ ಸಾಕ್ಷಾತ್ಕಾರವನ್ನು ಮಾಡಲಾರವು. ಆದರಿಂದ ಈ ಗ್ರಂಥವೇ ಸೇವ್ಯವಾಗಿದೆಯೆಂಬ ಭಾವವು.

ಈ ಗ್ರಂಥವು ಪ್ರತಿಯೊಂದು ಸೂತ್ರ ಸಂಧಿಗಳಲ್ಲಿ ಮುಮುಕ್ಷುಗಳ ನಿಜವನ್ನು ತಿಳಿಸುತ್ತಲಿರುತ್ತದೆ. ಆದರಿಂದ ಬ್ರಹ್ಮಾಪರೋಕ್ಷಜ್ಞಾನವನ್ನುಂಟು ಮಾಡುತ್ತಿ

ರುತ್ತದೆ. **'ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ'** ಎಂದು ಶ್ರುತಿಯು ಹೇಳಿರುತ್ತದೆ. ಸಚ್ಚಿದಾನಂದ ಲಕ್ಷಣವಾದ ಬ್ರಹ್ಮವು ಈ ಪಂಚಕೋಶಾದಿಗಳಿಗೆ ವಿಲಕ್ಷಣವಾಗಿ ಸಾಕ್ಷಿರೂಪದಿಂದ ಅಪರೋಕ್ಷವಾಗಿರುತ್ತದೆಂದು ಶ್ರುತಿಯು ಸಾರುತ್ತದೆ. ಈ ಶ್ರುತಿಯ ಸಮ್ಮತವಾಗಿ ಈ ಗ್ರಂಥವು ನಮ್ಮಗಳ ನಿಜವನ್ನು ಬೋಧಿಸುವದು. ಆದ್ದರಿಂದ ಸೇವ್ಯವಾಗಿರುತ್ತದೆ.

**ಬಳಿಕ,** ಪರಮ ಸೇವ್ಯವಾದ ಈ ಗ್ರಂಥವನ್ನು ಪ್ರೀತಿಯಿಂದ ಕೇಳಿದವರು ಶಿವಪದವನ್ನು ಸೂರೆಮಾಡುವರಲ್ಲದೆ, ನಿಜಸುಖದಲ್ಲಿ ಯಾವಾಗಲೂ ಮುಳಿಗಿರುತ್ತಾರೆಂದು ಹೇಳುತ್ತಾರೆ.

**ಬೇರೆ ಬೇರೋದಿ ಬಾಯಾರದಿದನೊಮ್ಮೆ ನಲ।**
**ವೇರಿ ಕೇಳ್ದವರು ಪರಮ ಶಿವಪದವನುರೆ ।**
**ಸೂರೆಗೊಂಡಿಹರು ಸುಖದಲ್ಲಿ** ॥೬॥

**ಟೀಕಾ:-** ಬೇರೆ ಬೇರೋದಿ=ಬೇರೆ ಬೇರೆ ಗ್ರಂಥವನ್ನು ಪಠಿಸಿ, ಬಾಯಾರದೆ=ಕಂಠವನ್ನು ಒಣಗಿಸಿಕೊಳ್ಳದೆ, ಇದನು=ಈ ಗ್ರಂಥವನ್ನು, ಒಮ್ಮೆ=ಒಂದು ಸಾರೆ, ನಲವೇರಿ=ಸಂತೋಷವು ಹೆಚ್ಚಾಗಿ, ಕೇಳ್ದವರು=ಶ್ರವಣಮಾಡಿದವರು, ಪರಮ=ಅತ್ಯಧಿಕವಾದ, ಶಿವಪದವನು=ಸ್ವಯಂ ಪ್ರಕಾಶರೂಪ ಸ್ವರೂಪವನ್ನು, ಉರೆ=ಹೆಚ್ಚಾಗಿ, ಸೂರೆಗೊಂಡು=ಲೂಟಮಾಡಿ (ತೂರಾಡಿ,) ಸುಖದಲ್ಲಿ=ಸಹಜಾನಂದದಲ್ಲಿ, ಇಹರು=ಇರುವರು.

**ತಾತ್ಪರ್ಯ:-** ನಿಜವನ್ನು ಅಪರೋಕ್ಷೀಕರಿಸುತ್ತಿರುವ ಈ ಗ್ರಂಥವನ್ನು ಬಿಟ್ಟು, ಅನ್ಯ ಗ್ರಂಥಗಳನ್ನು ಅವಲೋಕನಮಾಡಿ ಓದುತ್ತಾ ಹೋದರೆ, ಅವರು ಗಂಟಲು ಒಣಗಿ ಸುಮ್ಮನೆ ಆಯಾಸವನ್ನು ಹೊಂದುತ್ತಾರೆ. ಯಾಕಂದರೆ, ಅನ್ಯ ಗ್ರಂಥಗಳು ನಿಜವನ್ನು ಅಪರೋಕ್ಷವಾಗಿ ಬೋಧಿಸದೆ, ಪರೋಕ್ಷವಾಗಿ ಬೋಧಿಸುತ್ತವೆ. ಆದರಿಂದ ಅವರಿಗೆ ಆವರಣದೋಷ ನಿವೃತ್ತಿಯಾಗಿ ಸ್ವರೂಪಸಾಕ್ಷಾತ್ಕಾರವಾಗುವದಿಲ್ಲ. ಅದರಿಂದ ನಿಜಾನಂದ ಆವಿರ್ಭಾವವಿಲ್ಲದ್ದರಿಂದಲೇ ಬಾಯಾರಿ ಹೋಗುತ್ತಾರೆ. ಈ ಕಾರಣದಿಂದ ಅತ್ಯಧಿಕವಾದ ಪ್ರೀತಿಯಿಂದ ಕೂಡಿಕೊಂಡು ಒಂದುಸಾರೆ ಈ ಗ್ರಂಥವನ್ನು ನೋಡಿದರೆ, ಅವರು ಈ ದೇಹದಲ್ಲಿ ಸ್ವಯಂಪ್ರಕಾಶರೂಪ ಶಿವನನ್ನು ಸಾಕ್ಷಾತ್ಕಾರಮಾಡಿಕೊಳ್ಳುವರು. ಅಂದರೆ **ಅಯಮಾತ್ಮಾ ಬ್ರಹ್ಮ"** ಎಂಬ ಮಹಾವಾಕ್ಯಾನುಸಾರವಾಗಿ ಈ ಸಾಕ್ಷಿಯಾತ್ಮನೇ ಬ್ರಹ್ಮನು. ಇವನೇ ಶಿವನು. ಅನ್ಯರಿಲ್ಲೆಂಬ ನಿಶ್ಚಯ ಜ್ಞಾನವುಳ್ಳವರಾಗುತ್ತಾರೆ. ಇಂಥಾ ನಿಶ್ಚಯ ಅಪರೋಕ್ಷ ಜ್ಞಾನವುಳ್ಳವರು, ಶರಣಾಗತರಾದ ಅನ್ಯ ಮುಮುಕ್ಷು ಜನ

ರನ್ನು ಕುರಿತು,ಅವರಿಗೂ ಸಾಕ್ಷಿಯಾದ ಶಿವಸ್ವರೂಪವನ್ನು ಬೋಧಿಸಿತಿಳಿಸುತ್ತಾರೆ. ಹೀಗೆ ನಿಜಜ್ಞಾನವನ್ನು ಯಾರು ಬೇಕಾದವರಿಗೆ ಮನಬಂದಂತೆ ತೂರಾಡುವವರೂ ಆಗುತ್ತಾರೆ. ಮತ್ತು ಸ್ವಸ್ವರೂಪಾಕಾರವಾದ ಅಂತರ್ಮುಖ ವೃತ್ತಿಯಲ್ಲಿ ಪ್ರತಿಬಿಂಬಿತವಾದ ನಿಜಾನಂದವನ್ನು ಅನುಭವ ಮಾಡುವವರೂ ಆಗುತ್ತಾರೆ. ಆದ್ದರಿಂದ ಮುಮುಕ್ಷುಗಳು ಅನ್ಯಗ್ರಂಥಗಳನ್ನು ನೋಡಿ ಆಯಾಸಗೊಳ್ಳದೆ, ಅನಾಯಾಸವಾಗಿ ಲೀಲಾಮಾತ್ರದಿಂದ ಈ ಗ್ರಂಥವನ್ನು ಕೇಳಿ ಮುಕ್ತರಾಗಲಿ ಎಂಬ ಕನಿಕರದಿಂದ ಈ ವಾಕ್ಯವನ್ನು ನುಡದಿರುವರು. ಆದ್ದರಿಂದ ತಪ್ಪದೆ ಈ ಗ್ರಂಥವನ್ನು ಅವಶ್ಯವಾಗಿ ಶ್ರವಣಮಾಡತಕ್ಕದ್ದು.

ಬಳಿಕ, ಲೀಲೆಯಿಂದ ಅಪರೋಕ್ಷ ಜ್ಞಾನ ಜನಕವಾದ ಈ ಗ್ರಂಥವನ್ನು ಕೆಲವರು ನೋಡಿದರೂ, ಅವರಿಗೆ ಅಪರೋಕ್ಷ ಜ್ಞಾನವಾಗುವದಿಲ್ಲ. ಅಂದಮೇಲೆ; ಇದಕ್ಕೆ ಸೇವ್ಯವೆಂದು ಹೇಗೆ ಹೇಳುವಿರಿ ? ಎಂದು ಶಂಕೆಯನ್ನು ಮಾಡಿದರೆ, ಅನಧಿಕಾರಿಗಳಿಗೆ ಜ್ಞಾನವಾಗದೆಹೋದರೂ, ಅಧಿಕಾರಿಗಳಿಗೆ ಅವಶ್ಯವಾಗುತ್ತದೆ. ಆದ್ದರಿಂದ ಗ್ರಂಥವು ಪರಮ ಸೇವ್ಯವಾಗಿರುತ್ತದೆಂದು ಹೇಳುತ್ತಾರೆ.

> **ವೀತರಾಗರ್ಗೆ ವಿಖ್ಯಾತರ್ಗೆ ತಿಳಿವ ಸಂ ।**
> **ಪ್ರೀತಿಯುಳ್ಳರ್ಗೆ ಪೇಳ್ವುದಜ್ಞರ್ಗೆ ಮನ ।**
> **ವೋತುಸುರಲಾಗದಿದನೊಮ್ಮೆ ॥೭॥**

**ಟೀಕಾ:-** ವೀತರಾಗರ್ಗೆ=ವೈರಾಗ್ಯವುಳ್ಳವರಿಗೆ, ವಿಖ್ಯಾತರ್ಗೆ=ಕೀರ್ತವಂತ ಪುಣ್ಯಾತ್ಮರಿಗೆ,ತಿಳಿವ=ನಿಜವನ್ನರಿಯುವ,ಸಂಪ್ರೀತಿಯುಳ್ಳರ್ಗೆ=ಪ್ರೇಮವಿದ್ದವರಿಗೆ ಮಾತ್ರ, ಪೇಳ್ವುದು=ಹೇಳುವದು, ಅಜ್ಞರ್ಗೆ=ಅಜ್ಞಾನಿಗಳಿಗೆ, ಮನವೋತು=ಮನಸ್ಸಿನ ಪ್ರೀತಿಯಿಂದಾದರೂ, ಒಮ್ಮೆ=ಒಂದುಸಾರೆಯಾದರೂ, ಉಸರಲಾಗದು=ಹೇಳಬಾರದು.

**ತಾತ್ಪರ್ಯ:-** ವಿರತಿಶಮದಮಾದಿ ಸಾತ್ವಿಕ ಗುಣಗಳಿಂದ ಕೂಡಿದವರಿಗೆ, ಪರೋಪಕಾರಾದಿ ಪುಣ್ಯಕರ್ಮಗಳಿಂದ ಅಂತಃಕರಣ ಶುದ್ಧರಾದಂಥ ಕೀರ್ತಶಾಲಿಗಳಾದವರಿಗೆ, ನಮ್ಮ ನಿಜವನ್ನು ನಾವು ಅರಿಯಬೇಕು ಎಂಬುದರಲ್ಲಿ ಕುತೂಹಲವುಳ್ಳವರಿಗೂ ಈ ಗ್ರಂಥವನ್ನು ಹೇಳಬೇಕು. ಅಂದರೆ ಅಧಿಕಾರಿಗಳಾದ ಜನರು ಈ ಗ್ರಂಥವನ್ನು ಅವಶ್ಯವಾಗಿ ಬಹುಪ್ರೀತಿಯಿಂದ ಸ್ವೀಕಾರಮಾಡುತ್ತಾರೆ. ಅಜ್ಞಾನಿಗಳಾದ ಜನರು ಮಾತ್ರ ಇದನ್ನು ಗ್ರಹಿಸುವದಿಲ್ಲ. ಅವರಿಗೆ ಈ ಶಾಸ್ತ್ರವನ್ನು ಹೇಳಲಿಕ್ಕೆ ಹೋಗಬಾರದು. ತನ್ನ ಉದರದಿಂದ ಜನಿಸಿದ ಮಗನಾದರೂ ಆಗಲಿ, ಅನಧಿಕಾರಿಯಾಗಿದ್ದರೆ, ಪುತ್ರನೆಂಬ ಮೋಹದಿಂದ ಅವನಿಗೆ ಉಪದೇಶವನ್ನು ಮಾಡಬಾರದು. ಯಾಕಂದರೆ, ಹೇಳಿದ ಉಪದೇಶವು ನಿಷ್ಪ್ರಯೋಜನವಾಗುತ್ತದೆ. ಹೀಗೆ ಹೇಳುವದರಿಂದ ಅನಧಿಕಾರಿಗಳು ಈ ಗ್ರಂಥವನ್ನು ಸ್ವೀಕಾರಮಾಡದೆ

ಇದ್ದರೂ, ಅಧಿಕಾರಿಗಳು ಮಾತ್ರ ಸ್ವೀಕಾರವನ್ನು ಮಾಡೇ ಮಾಡುತ್ತಾರೆ. ರೋಗಿಗಳು ಕಲ್ಲುಸಕ್ಕರೆಯನ್ನು ಅಪೇಕ್ಷೆಮಾಡದಿದ್ದರೂ ಆರೋಗ್ಯವಂತರು ಮಾತ್ರ ಅಪೇಕ್ಷೆಯನ್ನು ಮಾಡುತ್ತಾರೆ. ಇದರಂತೆ ಅನಧಿಕಾರಿಗಳಿಗೆ ಈ ಗ್ರಂಥವು ರುಚಿಸದಿದ್ದರೂ ಅಧಿಕಾರಿಗಳಿಗೆ ಮಾತ್ರ ಅಧಿಕ ರುಚಿಯಾಗಿರುತ್ತದೆಂಬ ಭಾವವು.

ಬಳಿಕ, ಈ ಗ್ರಂಥವನ್ನು ಹೇಳಿದವರಿಗೆ ಮತ್ತು ಕೇಳಿದವರಿಗೆ ಅಖಂಡಾನಂದರೂಪ ಶಂಭುವಾಗಿರುವದೇ ಫಲವಾಗಿರುತ್ತದೆಂದು ಹೇಳುತ್ತಾರೆ.

**ಇದನೆ ಬರದೋದಿ ಕೇಳಿದವರರ್ಥಂಗಳಂ ।**
**ಮುದದಿಂದೆ ಪೇಳಿದವರುಮಾವರ ಶಂಭು ।**
**ಪದವೆ ತಾವಾಗಿ ಸುಖಮಿರ್ಕು ॥೮॥**

**ಟೀಕಾ:-** ಇದನೆ=ಈ ಗ್ರಂಥವನ್ನೇ, ಬರೆದು=ಕೈಯಿಂದ ಬರೆದು, ಓದಿ=ಪಠಣಮಾಡಿ, ಕೇಳಿದವರು=ಶ್ರವಣಮಾಡಿದವರು, ಅರ್ಥಂಗಳಂ=ಇದರಲ್ಲಿರುವ ಅರ್ಥಗಳನ್ನು, ಮುದದಿಂದೆ=ಪ್ರೀತಿಯಿಂದೆ. ಪೇಳಿದವರು=ಹೇಳಿದವರು, ಉಮಾವರ=ಪಾರ್ವತಿಗೆ ಪತಿಯಾದ, ಶಂಭುಪದವೆ=ಶಂಭುಲಿಂಗಸ್ವರೂಪರೆ, ತಾವಾಗಿ=ಅದೇರೂಪಾಗಿ, ಸುಖಮಿರ್ಕು=ಆನಂದರೂಪರಾಗಿರುವರು.

**ತಾತ್ಪರ್ಯ:-**ಅಧಿಕಾರಿಗಳಾಗಿ ಯಾವ ಜನರು ಈಗ್ರಂಥವನ್ನು ಓದಿ ಗುರುಮುಖದಿಂದ ಶ್ರವಣಮಾಡಿದವರಿಗೂ, ಹಾಗು ಈ ಗ್ರಂಥದಲ್ಲಿರುವ ಅರ್ಥಗಳನ್ನು ಸರಿಯಾಗಿ ತಿಳಿಸಿ ಹೇಳುವವರಿಗೂ, ಫಲವೇನು? ಎಂದು ಕೇಳಿದರೆ, ಉಭಯತರಿಗೂ ಆ ಪಾರ್ವತಿ ಪತಿಯಾದ ಶ್ರೀಗುರುಶಂಭುವಿನ ಸ್ವರೂಪರಾಗಿರುವದೇ **ಫಲವಾಗಿದೆ.** ಅರ್ಥಾತ್, ಅತ್ಯಂತ ದುಃಖನಿವೃತ್ತಿ ಪೂರ್ವಕ ಪರಮಾನಂದ ಪ್ರಾಪ್ತಿ ರೂಪರಾಗಿರುವದೇ ಮುಖ್ಯಫಲವಾಗಿರುತ್ತದೆ. ಪರಮಪುರುಷಾರ್ಥರೂಪ ನಿತ್ಯವಾದ ಮುಕ್ತಿಯು ಪ್ರಾಪ್ತವಾಗುತ್ತದೆಂಬ ಭಾವವು

ಬಳಿಕ, ಈಗ್ರಂಥದ ಉಪಸಂಹಾರದಲ್ಲಿ ಇಷ್ಟದೇವತೆಯಾದ ಶ್ರೀಶಂಭುವಿನನ್ನು ಕುರಿತು ಗ್ರಂಥಕರ್ತರಾದ ಶ್ರೀಮನ್ನಿಜಗುಣ ಶಿವಯೋಗಿಗಳು ಆಶೀರ್ವಾದ ಲಕ್ಷಣ ಮಂಗಲವನ್ನು ಆಚರಿಸಿ ಸಂಧಿಯನ್ನು ಸಮಾಪ್ತಮಾಡುತ್ತಾರೆ.

**ಇಂತು ನಿಜಗುಣಯೋಗಿ ಸಂತಸದೊಳೊರೆದಿದನ ।**
**ನಂತ ಮಹಿಮಾಂಬುನಿಧಿ ಶಂಭು ತಾನೊಪ್ಪಿ ।**
**ಸಂತರಿಂ ಪಾಡಿಸುತಮಿರ್ಕೆ ॥೯॥**

**ಟೀಕಾ:-** ಇಂತು=ಈ ರೀತಿ, ನಿಜಗುಣಯೋಗಿ= ನಿಜಗುಣ ನಾಮಕ ಶಿವಯೋಗಿಯು, ಸಂತಸದೊಳು=ಸಂತೋಷದಿಂದ, ಒರೆದ=ಹೇಳಿದನು, ಇದನು=ಈ

ಗ್ರಂಥವನ್ನು, ಅನಂತ ಮಹಿಮಾಂಬುನಿಧಿ = ಅನೇಕ ಮಹಿಮೆಗಳಿಗೆ ಸಮುದ್ರ ಪ್ರಾಯನಾದ, ಶಂಭು=ಶ್ರೀಶಂಭುಲಿಂಗನು, ತಾನೊಪ್ಪಿ=ತಾನು ಅನುಮತಿಸಿ, ಸಂತರಿಂ=ಜ್ಞಾನಿಗಳಿಂದ, ಪಾಡಿಸುತ= ಹಾಡಿಸುತ, ಇರ್ಕೆ=ಇರಲಿ.

**ತಾತ್ಪರ್ಯ**:- ಶ್ರೀ ಮನ್ನಿಜಗುಣನಾಮಕ ಶಿವಯೋಗಿಗಳು ಉಕ್ತಪ್ರಕಾರ ಪರಮ ಸೇವ್ಯವಾದ ಗ್ರಂಥವನ್ನು ಹೇಳಿರುವರು. ಈ ಗ್ರಂಥವನ್ನು ನೋಡಿ ಶ್ರೀ ಶಂಭುಲಿಂಗನು 'ಇದು ಸರಿಯಾಗಿದೆ. ಯಥಾರ್ಥವಾಗಿ ಹೇಳಿದ್ದಾರೆ. ಇದರಲ್ಲಿ ಯಾವ ದೋಷಗಳು ಇಲ್ಲ'. ಎಂದು ಸರ್ವಜ್ಞನೂ ಅನೇಕ ಮಹಿಮೆಗಳುಳ್ಳ ಪರ ಮಾತ್ಮನು ಸಮ್ಮತವನ್ನು ಪಟ್ಟು, ಯಾವಾಗಲೂ ಜ್ಞಾನಿಗಳಿಂದ ಇದನ್ನು ಹಾಡಿ ಸುತ್ತಾ ಇರಲಿ. ಸರ್ವಜ್ಞನಾದ ಶಿವನೇ ಒಪ್ಪಿದಮೇಲೆ, ಅಪರೋಕ್ಷಜ್ಞಾನಿಗಳೂ ಒಪ್ಪುತ್ತಾರೆ. ಅದರಿಂದ ಅವರು ತಮ್ಮ ಶಿಷ್ಯರುಗಳಿಗೆ ಈ ಗ್ರಂಥವನ್ನು ಉಪದೇಶ ಮಾಡುತ್ತಾರೆ. ಈ ರೀತಿ ಗುರುಪರಂಪರೆಯಾಗಿ ಸರ್ವದಾ ಈ ಗ್ರಂಥವು ಶ್ರೀಶಂಭು ವಿನಿಂದ ಹಾಡಿಸುತ್ತಿರಲಿ ಎಂದು ಹೇಳಿದ್ದಾರೆ. ಹೀಗೆ ಹೇಳುವದರಿಂದ ಗ್ರಂಥ ಕರ್ತರು ಗ್ರಂಥಸಮಾಪ್ತಕಾಲಕ್ಕೆ ಇಷ್ಟದೇವತೆಯಾದ ಶಂಭುಲಿಂಗನನ್ನು ಕುರಿತು, ಆಶೀರ್ವಾದ ಲಕ್ಷಣ ಮಂಗಳವನ್ನು ಆಚರಿಸಿದರೆಂಬ ಭಾವವು.

ಬಳಿಕ, ಸಂಧಿಯೊಳಗಿರುವ ಸೂತ್ರಾದಿಗಳ ಸಂಖ್ಯೆಯನ್ನು ತಿಳಿಸುತ್ತಾ ಸಂಧಿ ಯನ್ನು ಸಮಾಪ್ತಗೊಳಿಸುತ್ತಾರೆ.

> **ಉತ್ತಮ ಪದಂಗಳೈವತ್ತು ಸೂತ್ರಂಗಳೈ |**
> **ದುತ್ತಮರು ಮೆಚ್ಚುವಂತೆಂಟನೆಯಸಂಧಿ|**
> **ಯುತ್ತಮೋತ್ತಮವೆನಿಪುದಿಂತು ||೧೦||**

**ಟೀಕಾ**:- ಉತ್ತಮ ಪದಂಗಳು=ಮನೋಹರಗಳಾದ ಪದ್ಯಗಳು, ಐವತ್ತು= ಐವತ್ತು, ಸೂತ್ರಂಗಳೈದು= ಐದು ಸೂತ್ರಗಳು, ಉತ್ತಮರು=ಸಜ್ಜನರು, ಮೆಚ್ಚು ವಂತೆ=ಅಂಗೀಕರಿಸುವಂತೆ, ಇಂತು=ಈರೀತಿ, ಎಂಟನೆಯಸಂಧಿಯು=ಎಂಟನೇ ಸಂಧಿಯು, ಉತ್ತಮೋತ್ತಮವೆನಿಪುದು=ಸರ್ವೋತ್ಕೃಷ್ಟವಾಗಿರುವದು.

**ತಾತ್ಪರ್ಯ**:- ಈ ಎಂಟನೆಯ ಸಂಧಿಯಲ್ಲಿ ಐದು ಸೂತ್ರಗಳಿರುತ್ತವೆ. ಅವುಗಳಲ್ಲಿ ಐವತ್ತು ಪದ್ಯಗಳಿರುತ್ತವೆ. ಇವುಗಳು ಜ್ಞಾನಿಗಳಿಂದ ಮೆಚ್ಚುವಂತೆ ಹೇಳಲ್ಪಟ್ಟಿರುತ್ತವೆ. ಆದ್ದರಿಂದ ಸರ್ವೋತ್ಕೃಷ್ಟವಾದ ಈ ಎಂಟನೇ ಸಂಧಿಯು ಸಮಾಪ್ತವಾಗಿದೆ.

**ಗ್ರಂಥಪ್ರಾಶಸ್ತ್ಯ ನಿರೂಪಣೆ ಸೂತ್ರ ೫ಕ್ಕೆ ತ್ರಿವಿಧಿ ೫೦,**

ಬಳಿಕ, ಸಂಪೂರ್ಣವಾದ ಈ ಗ್ರಂಥದ ಸೂತ್ರಾದಿ ಸಂಖ್ಯೆಯನ್ನು ಹೇಳುತ್ತಾರೆ.

ಕಂದ॥ ತ್ರಿವಿದಿಗಳೈನೂರ್ಮೇಲೈ।
ದವಧಿಯ ಮೂವತ್ತು ಸೂತ್ರಗಳು ನಾಲ್ವತ್ತಾ।
ರವರಿರ್ದ ಸಂಧಿಯೆಂಟೆನು।
ಭವಸಾರದೊಳೆಸೆವವಖಿಳವಿಭುದರ್ಮೆಚ್ಚಲ್॥

**ಟೀಕಾ:**' ತ್ರಿವಿದಿಗಳು=ಪದ್ಯಗಳು, ಐನೂರು ಮೇಲೆ ಐದು ಅವಧಿಯ ಮೂವತ್ತು=ಐದುನೂರಾ ಮೂವತ್ತೈದು, ನಾಲ್ವತ್ತಾರು ಸೂತ್ರಂಗಳು=ನಾಲ್ವತ್ತಾರು ಸೂತ್ರಗಳು, ಅವರಿರ್ದ=ಅವುಗಳಿಂದ ಕೂಡಿದ, ಸಂಧಿಯೆಂಟು=ಎಂಟು ಸಂಧಿಗಳು, ಅಖಿಳ=ಸಮಸ್ತ, ವಿಭುದರ್=ಪಂಡಿತರು, ಮೆಚ್ಚಲ್=ಒಪ್ಪುವಹಾಗೆ, ಅನುಭವಸಾರದೊಳು = ಅನುಭವಸಾರದಲ್ಲಿ, ಎಸೆವವು=ಶೋಭಾಯಮಾನಗಳಾಗಿರುತ್ತವೆ.

ಅಂತು ಸಂಧಿ೮ ಕ್ಕಂ ಸೂತ್ರ ೪೬ ಕ್ಕಂ ತ್ರಿವಿದಿ ೫೩೫ ಕ್ಕಂ ಮಂಗಳಮಸ್ತು
ಇತಿ ಶ್ರೀ ನಿಜಗುಣ ಶಿವಯೋಗೀಂದ್ರರವರಿಂವಿರಚಿತಮಪ್ಪ ಅನುಭವಸಾರ

## ಸಂಪೂರ್ಣಂ

ಶ್ರೀ ಶಿವಪುತ್ರಸ್ವಾಮಿಗಳಿಂದ ಸಟೀಕಾ ತಾತ್ಪರ್ಯರೂಪ
ಅನುಭವಸಾರದ ಎಂಟನೆಯಸಂಧಿಯು ಸಮಾಪ್ತವಾದುದು.



ಅನುಭವಸಾರದೊಳಗಿನ

# ಶ್ರುತ್ಯರ್ಥ ಪ್ರಕಾಶಿಕೆ

## ೧ಸಂ, ೨ಸೂ- ೪ಪ.— "ವೇದಾಂತವಿಜ್ಞಾನ" ಕೈವಲ್ಯ ೧—೩

ಯತಿಗಳು ಬುದ್ಧಿಗೆಸಾಕ್ಷಿಯಾದ ಸ್ವಪ್ರಕಾಶಾತ್ಮನನ್ನು ಉಪನಿಷದ್ವಾಕ್ಯಗಳಿಂದ ಉತ್ಪನ್ನವಾದ ಜ್ಞಾನದಿಂದ (ಅಂದರೆ ನಾನೇ ಬ್ರಹ್ಮನಿದ್ದೇನೆಂಬ ಜ್ಞಾನದಿಂದ) ನಿಶ್ಚಯಿಸಲ್ಪಟ್ಟವರಾಗಿ ಮುಕ್ತರಾಗುತ್ತಾರೆ. ಪ್ರತಿಬಂಧಕದಿಂದ ಒಂದುವೇಳೆ ಆಗದೆ ಹೋದರೂ, ಕಾರ್ಯ ಬ್ರಹ್ಮನೊಡನೆ ಬ್ರಹ್ಮಲೋಕದಲ್ಲಿದ್ದು ಅಲ್ಲಿ ಸುಖವನ್ನು ಅನುಭವಿಸಿ, ಪ್ರಳಯಕಾಲದಲ್ಲಿ ಅವನೊಡನೆ ಮುಕ್ತರಾಗುತ್ತಾರೆಂದು ಈ ಮಂತ್ರದಲ್ಲಿ ಹೇಳಲ್ಪಡುತ್ತದೆ.

**"ಪರೇಣನಾಕಂ ನಿಹಿತಂ ಗುಹಾಯಾಂ ವಿಭ್ರಾಜತೆ ಯದ್ಯತಯೋ ವಿಶಂತಿ । ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ ॥ ತೆ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿಸರ್ವೇ" ॥ ೩ ॥**

**ಟೀಕಾ:-** ಪರೇಣ=ಶ್ರೇಷ್ಠನಾದ, ನಾಕಂ=ಆನಂದರೂಪ ಆತ್ಮನು, ಗುಹಾಯಾಂ=ಬುದ್ಧಿಯೆಂಬ ಗುಹೆಯಲ್ಲಿ, ನಿಹಿತಂ=ಇರಿಸಲ್ಪಟ್ಟಿದ್ದಾನೆ (ತಾನೇ ಇದ್ದಾನೆ) ವಿಭ್ರಾಜತೆ=ಸ್ವಯಂ ಪ್ರಕಾಶನಾಗಿದ್ದಾನೆ. ಯತ್=ಉಕ್ತ ಆತ್ಮನನ್ನು, ವೇದಾಂತ=ಉಪನಿಷತ್ತುಗಳಿಂದ ಉತ್ಪನ್ನವಾದ, ವಿಜ್ಞಾನ=ನಾನೇಬ್ರಹ್ಮನಿರುವೆನೆಂಬ ಜ್ಞಾನದಲ್ಲಿ, ಸುನಿಶ್ಚಿತಾರ್ಥಾಃ=ಅತ್ಯಂತದುಃಖನಿವೃತ್ತಿ ಪರಮಾನಂದ ಪ್ರಾಪ್ತಿರೂಪ ಪ್ರಯೋಜನವುಂಟೆಂದು ಚನ್ನಾಗಿ ನಿಶ್ಚಯವುಳ್ಳಂಥಾ, ಸನ್ಯಾಸಯೋಗಾತ್ = ಇಹಪರಭೋಗ ವೈರಾಗ್ಯದಿಂದ, ಯತಯಃ=ಪ್ರಯತ್ನಶೀಲರಾದಂಥಾ, ಶುದ್ಧಸತ್ವಾಃ=ರಾಗದ್ವೇಷಾದಿಕಲುಷವಿಲ್ಲದಂಥಾ, ಯತಯಃ=ಬ್ರಹ್ಮಜ್ಞಾನಿಗಳು. ವಿಶಂತಿ=ಸೇರುತ್ತಾರೆ. (ಅದೇನಾವಿದ್ದೇವೆಂಬ ಸಾಕ್ಷಾತ್ಕಾರದಿಂದ ಅದೇ ಆಗುತ್ತಾರೆ.) ತೆ=ಪ್ರತಿಬಂಧಕದಿಂದ ಸಾಕ್ಷಾತ್ಕಾರ ಆಗದೆ

ಇದ್ದವರು, ಬ್ರಹ್ಮಲೋಕೇಷು=ಕಾರ್ಯಬ್ರಹ್ಮನ, ಮೇಲೆ ಕೆಳಗೆಇದ್ದ ಲೋಕಗಳಲ್ಲಿ ಅಧಿಕಾರಾನುಗುಣವಾಗಿ ಸುಖಭೋಗಗಳನ್ನು ಅನುಭವಿಸುತ್ತಿದ್ದು, ಪರಾಂತಕಾಲೇ = ಆ ಕಾರ್ಯಬ್ರಹ್ಮನ ಅಂತ್ಯಕಾಲದಲ್ಲಿ, (ಪ್ರಳಯದಲ್ಲಿ) ಪರಾಮೃತಾತ್=ಉತ್ಕೃಷ್ಟವಾದ ಅಮರಣಧರ್ಮದಿಂದ (ವ್ಯಾಕೃತ ಕಾರ್ಯ ಬ್ರಹ್ಮದಿಂದ) ಸರ್ವೆ=ಎಲ್ಲರು, ಪರಿಮುಚ್ಯಂತೆ=ಮುಕ್ತರಾಗುತ್ತಾರೆ.

**ತಾತ್ಪರ್ಯ:-** ಯಾವ ನಿರತಿಶಯ ಆನಂದರೂಪನಾದ ಆತ್ಮನು ಬುದ್ಧಿಯೆಂಬ ಗುಹೆಯಲ್ಲಿ ಇದ್ದುಕೊಂಡು ಸ್ವಯಂಪ್ರಕಾಶನಾಗಿದ್ದಾನೆ. ಇಲ್ಲಿ ಬುದ್ಧಿ ಗುಹೆಯಲ್ಲಿ ಆತ್ಮನಿದ್ದಾನೆಂದು ಹೇಳುವದರಿಂದ, ಆತ್ಮನಿಗೆ ಪರಿಚ್ಛಿನ್ನತ್ವವು ಪ್ರಾಪ್ತವಾಯಿತು. ಅದರಿಂದ ಅನಿತ್ಯತ್ವವು. ಅದರಿಂದ ಪುರುಷಾರ್ಥ ರಾಹಿತ್ಯವು. ಇವೇ ಮೊದಲಾದ ದೋಷಗಳು ಬರುತ್ತವೆ, ಅಂದರೆ, ಇದು ಯೋಗ್ಯವಲ್ಲ, ಯಾಕಂದರೆ; ಘಟದಲ್ಲಿ ಬಯಲುಂಟು. ಅಂದರೆ, ಆ ಬಯಲು ಘಟದಲ್ಲಿ ಪರಿಚ್ಛಿನ್ನವಾಗಿ ಪ್ರವೇಶಿಸಲಿಲ್ಲ, ಕಿಂತು; ಘಟೋತ್ಪತ್ತಿಗಿಂತಲೂ ಪೂರ್ವದಲ್ಲಿಯೇ ಇತ್ತು. ಉತ್ಪತ್ತಿಯಾದನಂತರ ಅದರಲ್ಲಿ ಬಯಲುಂಟು ಎಂಬುದು ಉಪಚಾರ ಮಾತ್ರವಾಗಿರುವದು ಹೇಗೋ, ಹಾಗೇ ಈ ಆತ್ಮನು ಮೊದಲು ಇದ್ದವನೇ ಹೊರ್ತು ಬುದ್ಧಿಯಲ್ಲಿ ಹೊಕ್ಕವನಲ್ಲ. ಆದರೂ ಔಪಚಾರಿಕ ವ್ಯವಹಾರವು ಸಂಭವಿಸಿರುತ್ತದೆ. ಇಂಥಾ ವಿಶ್ವವ್ಯಾಪಿಯಾದ ಆತ್ಮನನ್ನು ಯತಿಗಳು ತಮ್ಮ ಸ್ವರೂಪವೆಂದು ತಿಳಿದು ಮುಕ್ತರಾಗುತ್ತಾರೆ. ಯಾಕಂದರೆ, ಈ ಯತಿಗಳು, ಉಪನಿಷದ್ವಾಕ್ಯಗಳ ಶ್ರವಣ ಮನನ ನಿಧಿಧ್ಯಾಸನದಿಂದ ಉತ್ಪನ್ನವಾದ, ನಾನೇ ಬ್ರಹ್ಮನಿದ್ದೇನೆಂಬ ಜ್ಞಾನದಿಂದಲೇ ಪುರುಷಾರ್ಥವುಂಟು. ಬೇರೊಂದರಿಂದ ಆಗುವದಿಲ್ಲೆಂದು ನಿಶ್ಚಯವಾಗಿ ತಿಳಿದಂಥವರು ಆಗಿರುತ್ತಾರೆ. ಇವರಿಗೆ ಇಂಥಾ ಜ್ಞಾನವು ಲಭಿಸಬೇಕಾದರೆ, ಕಾಕಾದಿಗಳ ಮಲದಂತೆ, ಇಹ ಪರಭೋಗಗಳನ್ನು ತ್ಯಜಿಸಿ, ರಾಗದ್ವೇಷಾದಿ ಕಾಲುಷ್ಯದಿಂದ ರಹಿತವಾದ ಶುದ್ಧಾಂತಃಕರಣವುಳ್ಳವರಾಗಿರುವದರಿಂದಲೇ ಉಕ್ತಜ್ಞಾನವನ್ನು ಪಡೆದು, ನಿರತಿಶಯಾನಂದರೂಪ ಮೋಕ್ಷವನ್ನು ಹೊಂದುತ್ತಾರೆ. ಒಂದು ಪಕ್ಷಕ್ಕೆ ಯಾವದಾದರೊಂದು ಪ್ರತಿಬಂಧಕದಿಂದ ಈ ಜನ್ಮದಲ್ಲಿ ಜ್ಞಾನೋದಯವಾಗದೆ ಹೋದರೂ, ಅಲ್ಲಿ ತಮ್ಮತಮ್ಮ ಅಧಿಕಾರಕ್ಕನುಗುಣವಾಗಿ ತಾರತಮ್ಯ ಸುಖಗಳನ್ನನುಭವಿಸುತ್ತಾ ಇದ್ದು, ಆ ಬ್ರಹ್ಮನೊಡನೆ ತಾವು ಬ್ರಹ್ಮಜಿಜ್ಞಾಸವನ್ನು ಮಾಡುತ್ತಾ, ನಿಶ್ಚಯ ಜ್ಞಾನವುಳ್ಳವರಾಗಿ, ಪ್ರಳಯ ಕಾಲದವರೆಗೆ ಇದ್ದು, ಪ್ರಳಯಕಾಲದಲ್ಲಿ ಆ ಕಾರ್ಯ ಬ್ರಹ್ಮನು ನಾಶವಾಗುವಾಗ್ಯೆ ಇವರೆಲ್ಲರು ಅವನೊಡನೆ ಮುಕ್ತರಾಗುತ್ತಾರೆ.

**'ಜ್ಞಾನಾದೇವತು ಕೈವಲ್ಯಂ,** ಜ್ಞಾನದಿಂದಲೇ ಮೋಕ್ಷವಾಗುತ್ತದೆ. ಕರ್ಮೋಪಾಸನೆಗಳಿಂದ ಆಗುವದಿಲ್ಲೆಂತಲೂ **'ನಾನ್ಯಃಪಥಾವಿದ್ಯತೆ** ಅಯ

ನಾಯ' ಈ ಜ್ಞಾನಮಾರ್ಗವನ್ನು ಬಿಟ್ಟು ಮುಕ್ತಿಯನ್ನು ಹೊಂದುವದಕ್ಕೋಸ್ಕರ ಬೇರೆಮಾರ್ಗವಿಲ್ಲೆಂದು, ಹೀಗೆ ಜ್ಞಾನವೇ ಮೋಕ್ಷಕ್ಕೆ ಪರಮಸಾಧನವಾಗಿರುತ್ತದೆಂದು ಹೇಳುವಲ್ಲಿ ಅನೇಕ ಶ್ರುತಿಸ್ಮೃತಿವಾಕ್ಯಗಳು ಉದಾಹರಣೀಯಗಳು ಆಗಿರುವವು ಎಂದು ತಿಳಿಯತಕ್ಕದ್ದು.

೧ ಸಂ. ೪ಸೂ. ೭ಪ. 'ದೇವಾತ್ಮಶಕ್ತಿ' ಶ್ವೇತಾ ೧-೩.

ಒಂದು ಕಾಲದಲ್ಲಿ ಮುನಿಗಳು ಏಕತ್ರಕೂಡಿ, ಈ ಜಗತ್ತಿಗೆ ಮೂಲಕಾರಣವು ಯಾವದಿರಬಹುದೆಂದು ಆಲೋಚಿಸುತ್ತಾ. ಕಾಲ, ಸ್ವಭಾವ, ನಿಯತಿ, ಮೊದಲಾದವುಗಳನ್ನು ಕುರಿತು ತರ್ಕ ವಿತರ್ಕಾದಿಗಳನ್ನು ಮಾಡಿ, ಅವುಗಳನ್ನು ಬಿಟ್ಟು ಬಳಿಕ;ಎಲ್ಲರೂ ಧ್ಯಾನದಿಂದ ಏಕಾಗ್ರಚಿತ್ತವುಳ್ಳವರಾಗಿ ನೋಡಲು;ತ್ರಿಗುಣಗಳಿಂದೊಡಗೂಡಿದ್ದೊಂದು ಶಕ್ತಿಯು ಪರಬ್ರಹ್ಮದಲ್ಲಿ ಅಭೇದದಿಂದ ಇರುತ್ತದೆ. ಅದೇ ಜಗತ್ತಿಗೆ ಮೂಲ ಕಾರಣವಾಗಿದೆಯೆಂದು ಗುರ್ತನ್ನು ಹಿಡಿಯುವಂಥವರಾದರು ಎಂಬುದನ್ನು ಈ ಮಂತ್ರವು ಹೇಳುತ್ತದೆ.

**"ತೇಧ್ಯಾನಯೋಗಾನುಗತಾ ಅಪಶ್ಯನ್ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ। ಯಃಕಾರಣಾನಿ ನಿಖಿಲಾನಿ ತಾನಿ ಕಾಲಾತ್ಮಯುಕ್ತಾನ್ಯಧಿತಿಷ್ಠತ್ಯೇಕಃ॥**

**ಟೀಕಾ:-** ತೆ=ಬ್ರಹ್ಮವಿತ್ತರಾದ ಮುನಿಗಳು, ಧ್ಯಾನಯೋಗಾನುಗತಾಃ= ಧ್ಯಾನಯೋಗದೊಡನೆ ಕೂಡಿದವರಾಗಿ, ಸ್ವಗುಣೈಃ=ಸ್ವಕೀಯ ಸತ್ವ, ರಜ,ತಮಗಳೆಂಬ ಗುಣಗಳಿಂದ, ನಿಗೂಢಾಂ=ಗುಪ್ತವಾಗಿರುವಂಥಾ, ದೇವಾತ್ಮಶಕ್ತಿಂ=ಸ್ವಯಂ ಪ್ರಕಾಶಮಾನನಾದಆತ್ಮನ ಸ್ವರೂಪವಾಗಿರುವ ಮಾಯಾನಾಮಕ ಶಕ್ತಿಯನ್ನು, ಅಪಶ್ಯನ್=ಕಂಡರು; ಯಃ=ಆಮಾಯೋಪಾಧಿಯಿಂದೊಡಗೂಡಿದ ಮಹೇಶ್ವರನು, ಏಕಃ=ಒಬ್ಬನೇ, ತಾನಿ=ಆ, ನಿಖಿಲಾನಿ=ಎಲ್ಲ,ಕಾರಣಾನಿ=ಕಾರಣಗಳೆಂದು ಪೂರ್ವದಲ್ಲಿ ಹೇಳಿರುವ, ಕಾಲಾತ್ಮ ಯುಕ್ತಾನಿ=ಕಾಲ ಮೊದಲು ಪುರುಷಕಡೆಯಾಗಿರುವ ಎಲ್ಲವುಗಳನ್ನು ಕುರಿತು, ಅಧಿತಿಷ್ಠತಿ=ಅಧಿಷ್ಠಾನರೂಪನಾಗಿರುತ್ತಾನೆ. (ಅವುಗಳಿಗೆಲ್ಲಕ್ಕೂ ಸತ್ತಾಸ್ಫುರಣವನ್ನು ಕೊಡತ್ತಾನೆಂಬ ಭಾವವು)

**ತಾತ್ಪರ್ಯ:-** **ನೈಯಾಯಿಕರು** ಈ ಜಗತ್ತಿಗೆ ಪರಮಾಣುಗಳೇ ಕಾರಣವೆಂದು ಹೇಳುವರು. ಹೇಗಂದರೆ, ಅವುಗಳ ಸಂಯೋಗವೇ ಸೃಷ್ಟಿ ವಿಯೋಗವೇ ಪ್ರಳಯವು ಆದ್ದರಿಂದ ಪರಮಾಣುಗಳೇ ಕಾರಣವೆನ್ನುವರು

**ಕಾಲವಾದಿ** 'ಇದುಯೋಗ್ಯವಲ್ಲ. ಯಾಕಂದರೆ ಕಾಲಕ್ಕೆ ಅನುಗುಣವಾಗಿ ಸಂಯೋಗವಿಯೋಗಗಳು ಆಗುತ್ತವೆ. ಆದ್ದರಿಂದ ಭೂತ, ವರ್ತಮಾನ, ಭವಿಷ್ಯ ರೂಪದಿಂದ ವ್ಯವಹರಿಸುವಕಾಲವೇ ಕಾರಣವು.

**ಲೋಕಾಯುತಿಕ, ಸ್ವಭಾವವಾದಿಃ-** ಕಾಲವಾದರೂ ಪ್ರತಿಯೊಂದು ಪದಾರ್ಥಗಳ ಸ್ವಭಾವದ ವ್ಯತಿರಿಕ್ತ ಏನೊಂದನ್ನು ಮಾಡಲಾರದು, ಹೇಗಂದರೆ; ಅಗ್ನಿಯು ಉಷ್ಣಪ್ರಕಾಶವಾಗಿರುವಿಕೆಯು, ಜಲವು ಕೆಳಮುಖವಾಗಿ ಹರಿಯುವಿಕೆ ಇವು ಆ ಬೆಂಕಿ ನೀರುಗಳ ಸ್ವಭಾವವದೆ, ಇದನ್ನು ಕಾಲವು ಕೆಡಿಸಿ ವಿಪರೀತವಾಗಿ ಮಾಡಲಾರದು. ಆದ್ದರಿಂದ ಕಾಲಕ್ಕಾದರೂ ಸ್ವಭಾವವೇ ಮೂಲ ಕಾರಣವು.

**ಪೂರ್ವಮೀಮಾಂಸಕರ:ನಿಯತಿ:-** ಅಂಥಾ ಸ್ವಭಾವವಾದರೂ, ನಿಯತಿ ವಿನಾಕಾರಣವಾಗಲಾರದು. ನಿಯತಿ ಅಂದರೆ, ಸ್ತ್ರೀಯರು ಋತುಮತಿಯರು ಆದ ಮೇಲೆ ಗರ್ಭವತಿಯರಾಗುವದು. ಚಂದ್ರೋದಯವಾದಮೇಲೆ ಸಮುದ್ರವು ಉಕ್ಕೇರುವದು (ನಿಯತಿ) ಕಟ್ಟಳೆಯಾಗಿರುವದು. ಆದ್ದರಿಂದ ಈ ಅದೃಷ್ಟವನ್ನು ಮೀರಿ ಸ್ವಭಾವವು ತಾನೇನುಮಾಡೀತು?

**ನಿರೀಶ್ವರನು, ಯದೃಚ್ಛಾವಾದಿ—** ನಿಯತಿ ಅಂದರೆ ಅದೃಷ್ಟ, ಅಥವಾ ಪೂರ್ವಕೃತಕರ್ಮ, ಇದಾದರೂ ಫಲವನ್ನುಂಟುಮಾಡುವದು ನಿಯಮವಲ್ಲ. ಆದ್ದರಿಂದ ಕಾಕತಾಲೀಯ ನ್ಯಾಯದಂತೆ, ಆಕಸ್ಮಾತ್ ಸ್ತ್ರೀಯಳು ಗರ್ಭವಾದಂತೆ ಯಾವದಾದರೊಂದು ಲಾಭವು ಆಗುತ್ತದೆ. ಅದರಿಂದ ನಿಯತಿಗಾದರೂ (ಯದೃಚ್ಛಾ)ಆಕಸ್ಮಾತ್ ಕಾರಣವಾಗಿರುವದು.

**ಭೂತವಾದಿ—** ಪಂಚಭೂತಗಳು ಇಲ್ಲದಿದ್ದರೆ ಆಕಸ್ಮಾತ್ತಾಗಿ ಯಾವದೂ ಏನೂ ಆಗಲಾರದು. ನಾಲ್ಕಾಗಲಿ ಅಥವಾ ಐದಾಗಲಿ ಈ ಭೂತಗಳು ಒಂದಕ್ಕೊಂದು ಕಲೆತರೆ, ಎಲೆ ಅಡಿಕೆ ಸುಣ್ಣ ಕೂಡಿದರೆ ಕೆಂಪಾದಂತೆ, ತೈಲ, ಬತ್ತಿ, ಅಗ್ನಿಗಳು ಬೆರೆತರೆ ದೀಪವಾದಂತೆ, ದೇಹವುಂಟಾಗಿ ಅದರಲ್ಲಿ ಚೈತನ್ಯವೂ ತೋರುವದರಿಂದ ಯದೃಚ್ಛಾಕ್ಕೆ ಆದರೂ ಪಂಚಭೂತಗಳೇಕಾರಣಗಳು.

**ಶಕ್ತಿಯ ಪ್ರಕೃತಿವಾದಿ:-** ಈ ಪಂಚಭೂತಗಳು ಕಾರ್ಯಗಳಾಗಿರುತ್ತವೆ. ಇವುಗಳಿಗೆ ಪ್ರಕೃತಿ ಕಾರಣವಾಗಿರುತ್ತದೆ. ಆದ್ದರಿಂದ ಜಗತ್ತಿಗೆ ಪ್ರಕೃತಿಯೇ ಕಾರಣವು.

**ಪುರುಷವಾದಿ—** ಭೂತಗಳಂತೆ ಪ್ರಕೃತಿಯಾದರೂ ಜಡವಾಗಿರುವದರಿಂದ ಕಾರಣವಾಗಲಾರದು. ಕಿಂತು, ಚೇತನ ರೂಪನಾದ ಹಿರಣ್ಯಗರ್ಭ ಪುರುಷನೇ ಕಾರಣನು.

**ಜೀವವಾದಿ—** ಈಗ ಮೇಲೆ ಹೇಳಿರುವಂಥವುಗಳು ಕಾರಣವಲ್ಲ. ಇವುಗಳ ಸಮೂಹವಾದರೂ ಕಾರಣವಾಗಲಾರದು. ಯಾಕಂದರೆ; ಇವೆಲ್ಲ ಭೋಗ್ಯಗಳಾಗಿ

ಕುತ್ತವೆ. ಆ ಭೋಗ್ಯವಸ್ತುಗಳು ಭೋಕ್ತಾರೂಪ ಜೀವನಿಗಾಗಿಯೇ ಉತ್ಪನ್ನಗಳಾಗಿರುತ್ತವೆ- ಅಂದಮೇಲೆ ಜೀವನೇ ಕಾರಣನು.

**ಬ್ರಹ್ಮವಾದಿಃ-** ಈ ಜೀವನಾದರೂ ಪುಣ್ಯ ಪಾಪ ಕರ್ಮ ಫಲಗಳಾದ ಸುಖ ದುಃಖಗಳನ್ನುಪಭೋಗಿಸುತ್ತಾ **ಪರತಂತ್ರ**ನಾಗಿರುತ್ತಾನೆ. ಆದ್ದರಿಂದ ಪರಾಧೀನವಾದ ಜೀವನು ಜಗತ್ಕಾರಣನಾಗಲಾರನು. ಆದ್ದರಿಂದ ಬ್ರಹ್ಮವೇ ಜಗತ್ತಿಗೆ ಕಾರಣವಾಗಿರುವದು.

**ಬಳಿಕ ಮುನಿಗಳು:-** ಆ ಬ್ರಹ್ಮವಾದರೂ ಅಸಂಗ ಉದಾಸೀನವಾಗಿರೋಣದರಿಂದ ಅದೂ ಕಾರಣವಾಗಲಾರದು. ಅಂದಮೇಲೆ, ಜಗತ್ತಿಗೆ ಏನು ಕಾರಣವಿರಬಹುದು? ಎಂದು ವಿಚಾರಮಾಡುತ್ತಾ, ಧ್ಯಾನಯೋಗದಿಂದ ಯುಕ್ತರಾಗಿ ಏಕಾಗ್ರಮನಸ್ಸುಳ್ಳವರಾದರು.

ಅನಂತರ ಆ ಸಕಲ ಮುನಿಗಳು, ಸ್ವಯಂಪ್ರಕಾಶನಾದ ಆತ್ಮನ ಶಕ್ತಿಯನ್ನು ಕಾಣುವಂಥವರಾದರು. ಆಶಕ್ತಿಯು ಸತ್ವ, ರಜ, ತಮಾದಿ ಗುಣಗಳಿಂದ ಕೂಡಿಕೊಂಡು ಗೂಢವಾಗಿರುವದು. ಅಂದರೆ, ಗುಣಗಳ ವಿನಾ ಅದನ್ನು ತಿಳಿಯುವದಕ್ಕೆ ಶಕ್ಯವಲ್ಲ. ಆದ್ದರಿಂದ ಅದು ಗೂಢವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಇದಕ್ಕೆ ಅವಿದ್ಯಾ, ಮಾಯಾಯೆಂಬ ಪರ್ಯಾಯನಾಮಗಳಿಂದ ಕರೆಯುತ್ತಾರೆ. ಅದ್ವಿತೀಯವಾದ ಬ್ರಹ್ಮನು ಉಪಾದಾನ ಕಾರಣನೂ ಅಲ್ಲ. ನಿಮಿತ್ತಕಾರಣವೂ ಅಲ್ಲ. ಕಿಂತು; ಉಕ್ತ ಶಕ್ತಿಯ ಉಪಾಧಿ ಮೂಲಕ ಉಪಾದಾನ ಕಾರಣವೆಂತಲೂ ನಿಮಿತ್ತ ಕಾರಣವೆಂತಲೂ ಹೇಳಿಸಿಕೊಳ್ಳುವದು. ಈ ಶಕ್ತಿಯು ಬೇರೆ ಸ್ವತಂತ್ರವಾಗಿ ಇಲ್ಲ. ಈ ಶಕ್ತಿಗೆ ಆಶ್ರಯನೂ ವಿಷಯನೂ ಆಗಿರುವ ಯಾವ ಸ್ವಯಂಪ್ರಕಾಶರೂಪ ಆತ್ಮನಿರುತ್ತಾನೆ. ಕಾಲ ಮೊದಲು ಪುರುಷಕಡೆಯಾದ ಸಕಲ ಕಾರಣಗಳೆಂದು ಪೂರ್ವದಲ್ಲಿ ಹೇಳಿರುವವು. ಅವುಗಳೆಲ್ಲಾ ಕಲ್ಪಿತಗಳಾಗಿರುತ್ತವೆ. ಈ ಕಲ್ಪಿತಕ್ಕೆ ಸ್ವಪ್ರಕಾಶನಾದ ಆತ್ಮನು ಅಧಿಷ್ಠಾನನಾಗಿರುತ್ತಾನೆ.

**೧ ಸಂ, ಪ೧೪. ಸೂ 'ಸರ್ವಮಾತ್ಮೇತಿ' ನೃಸಿಂಹ ಉ. ೯.**

ಭಿನ್ನವಾಗಿ ಕಾಣುತ್ತಿರುವ ಈ ಜೀವ, ಈಶ್ವರ, ಜಗತ್ತೆಲ್ಲಾ ಕಲ್ಪಿತವಾಗಿರುವದರಿಂದ ಬಾಧಾ ಸಾಮಾನಾಧಿಕರಣ್ಯದಿಂದಲೂ ಮುಖ್ಯ ಸಾಮಾನಾಧಿಕರಣ್ಯದಿಂದಲೂ ನೋಡಿದರೆ, ಇದೆಲ್ಲವೂ ಪರಬ್ರಹ್ಮರೂಪವಾಗಿರುವದೆಂಬ ಅರ್ಥವನ್ನು ಈ ಮಂತ್ರವು ಹೇಳುತ್ತದೆ.

**"ಸ, ವಾ, ಏಷ ಆತ್ಮಾ, ಪರಏಷ್ಯೈವ ಸರ್ವಂ ತಥಾಹಿ ಪ್ರಜ್ಞೇನೈಷಾ ವಿದ್ಯಾ ಜಗತ್ಸರ್ವಮಾತ್ಮಾ ಪರಮಾತ್ಮೈವ ಸ್ವಪ್ರಕಾಶೋಽಪ್ಯವಿಷಯ ಜ್ಞಾನತ್ವಾತ್"**

**ಟೀಕಾ:**- ಸವಾಃ=ಆ ಪರಬ್ರಹ್ಮನೇ, ಏಷ ಆತ್ಮಾ=ಈ ಅಪರೋಕ್ಷನಾದ ಜೀವಾತ್ಮನು, ಪರಏಷ್ಯೈವ ಸರ್ವಂ=ಪರಮಾತ್ಮನೇ ಜಗತ್ತೂ ಆಗಿರುವನು, ತಥಾಹಿ=ಹೀಗೆ ಭಿನ್ನ ತೋರಿದಾಗ್ಯಾದರೂ, ಪ್ರಜ್ಞೇನ=ಜ್ಞಾನ ಪುರುಷನಿಂದ, ಜಗತ್ ಸರ್ವಂ= ಎಲ್ಲ ಜಗತ್ತು, ಆತ್ಮಾ ಪರಮಾತ್ಮೈವ=ಜೀವಾತ್ಮ ಪರಮಾತ್ಮ ಗಳಾದರೂ, ಏಷಾ ವಿದ್ಯಾ = ಜ್ಞಾನರೂಪಗಳಾಗಿಯೇ ತೋರುವವು. ಅವಿ ಷಯ ಜ್ಞಾನತ್ವಾತ್=ಯಾವ ಜ್ಞಾನಕ್ಕೂ ವಿಷಯನಾಗದ್ದರಿಂದ, ಸ್ವಪ್ರಕಾಶ ಅಪಿ ಸ್ವಯಂಪ್ರಕಾಶ ರೂಪನಾಗಿಯೂ ಇರುತ್ತಾನೆ.

**ತಾತ್ಪರ್ಯ:**- ಒಂದಾನೊಂದು ಕಾಲದಲ್ಲಿ ಇಂದ್ರಾದಿ ದೇವತೆಗಳು ಚತು ರ್ಮುಖಬ್ರಹ್ಮನನ್ನು ಕುರಿತು, ಓಂಕಾರರೂಪ ಪರಬ್ರಹ್ಮ ಸ್ವರೂಪವನ್ನು ನಮಗೆ ಉಪದೇಶಮಾಡಬೇಕೆಂದು ಕೇಳಿದರು. ಹಾಗೇ ಆಗಲಿ ಎಂದು ಆ ಬ್ರಹ್ಮನು ಹೇಳುವದಕ್ಕೆ ಉದ್ಯುಕ್ತನಾದನು. "ಹೇ ದೇವತೆಗಳಿರಾ ! ಕೇಳಿರಿ. ಅವಿಕಾರಿ ಚಿನ್ಮಯ ಲಕ್ಷಣ ಪರಬ್ರಹ್ಮನೇ! ಎಲ್ಲಕಡೆಗೂ ಉಪದ್ರಷ್ಟಾ (ಸಾಕ್ಷಿ) ಅನುಮಂತಾ (ಜ್ಞಾನರೂಪ) ನಾಗಿರುತ್ತಾನೆ. ಇವನ ವ್ಯತಿರಿಕ್ತ ಬೇರೆ ದ್ವೈತವೂ ಇಲ್ಲ. ಅದ್ವಿತೀಯನಾದ ಆತ್ಮನೊಬ್ಬನೆ ಇದ್ದಾನೆ. ಹೀಗಿದ್ದರೂ ಮಾಯಾ ಮೂಲಕ ಭಿನ್ನವಾಗಿದ್ದಂತೆ ತೋರುತ್ತಾನೆ. ಆದ್ದರಿಂದ ಆ ಬ್ರಹ್ಮವೇ ಈ ಜೀವಾತ್ಮ ಪರಮಾತ್ಮ, ಜಗತ್ತು. ಇವುಗಳ ರೂಪವಾಗಿರುತ್ತದೆ. ಈ ಮಾತು ವಿದ್ವಾಂಸ ಪುರುಷನ ಅನುಭವ ಸಿದ್ಧವಾಗಿರುತ್ತದೆ. ಯಾಕಂದರೆ ಜೀವಾತ್ಮ ಪರಮಾತ್ಮ ಜಗತ್ತು ಇವುಗಳನ್ನು ತನ್ನ ಆತ್ಮರೂಪವಾಗಿಯೇ ಕಾಣುತ್ತಾನೆ. ಆದ್ದರಿಂದ ಉಕ್ತ ಓಂಕಾರರೂಪ ನೃಸಿಂಹನಾಮಕ ಪರಬ್ರಹ್ಮವು ಯಾವಜ್ಞಾನಕ್ಕೂ ವಿಷ ಯವಾಗುವದಿಲ್ಲ. ಆದ್ದರಿಂದ ಸ್ವಯಂ ಪ್ರಕಾಶವೆಂಬ ಹೆಸರಿನಿಂದ ಕರೆಯಿಸಿಕೊ ಳ್ಳಲ್ಪಡುತ್ತದೆ. ಅದು ಜ್ಞಾನರೂಪವಾಗಿದ್ದರೂ ತನಗಿಂತಭಿನ್ನವಾಗಿ ಏನೊಂದನ್ನೂ ತಿಳಿಯುವದಿಲ್ಲ. ಅಂದರೆ ಒಂದೇ ಅದ್ವಿತೀಯ ಬ್ರಹ್ಮವೇ ಉಂಟು, ಬೇರೊಂದಿಲ್ಲ ಎಂಬ ಅಭಿಪ್ರಾಯವು.

**೧ ಸಂ. ೭ ಸಂ. ೯ ಪ. ಜ್ಞಾತೃಜ್ಞಾನ ವಿಜ್ಞೇಯಸುವಿಹೀನಃ ನೃ್ಯ ೩. ೧೩.**

ಈ ದ್ವೈತರೂಪ ತ್ರಿಪುಟಿಯು ಅದ್ವೈತಾತ್ಮನಲ್ಲಿ ಇಲ್ಲೆಂತಲೂ ಆತ್ಮನು ತ್ರಿಪುಟಿಗೆ ಸಾಕ್ಷಿಯಾಗಿರುವೆನೆಂದೂ, ಈ ಮಂತ್ರವು ಹೇಳುತ್ತದೆ.

**"ಮಾತೃಮಾನವಿಹೀನ್ಯೋಸ್ಮಿಮೇಯಹೀನ ಶಿವ್ಯೋಸ್ಮ್ಯಹಂ**

**ಟೀಕಾ:**- ಮಾತೃ=ಅಂತಃಕರಣ ವಿಶಿಷ್ಟ ಚೇತನವು, ಮಾನ=ಅಂತಃಕರಣ ವೃತ್ತಿ ಅವಚ್ಛಿನ್ನವಾದ ಚೇತನವು, ಇವೆರಡರಗಳಿಂದ, ವಿಹೀನಃ=ರಹಿತನಾದ

ವನು, ಅಸ್ಮಿ=ಇದ್ದೇನೆ, ಮೇಯ=ವಿಷಯಾವಚ್ಛಿನ್ನ ಚೇತನ, ಹೀನ=ಇಲ್ಲದವನಾಗಿ, ಅಹಂ=ನಾನು, ಶಿವಃ=ಸ್ವಯಂಪ್ರಕಾಶನು, ಅಸ್ಮಿ=ಇದ್ದೇನೆ.

**ತಾತ್ಪರ್ಯ:-** ತಿಳಿಯುವದು, ತಿಳಿಯುವಿಕೆಯು, ತಿಳಿಸಿಕೊಳ್ಳುವದೆಂಬ ಈ ತ್ರಿಪುಟಿಯು ಕಲ್ಪಿತವಾದ್ದರಿಂದ ಮಿಥ್ಯೆಯಾಗಿರುತ್ತದೆ, ಈ ತ್ರಿಪುಟಿಗೆ ಸಾಕ್ಷಿಯಾದ ಆತ್ಮನುಸ್ವಯಂಪ್ರಕಾಶರೂಪನಾಗಿ ನಿತ್ಯನಾಗಿರುತ್ತಾನೆ. ಆದ್ದರಿಂದ ತಾನು ಅಕಲ್ಪಿತನು ಎಂಬ ಭಾವವು.

**೧ಸ. ೬.ಸೂ, ೯ಪ, "ತದೇತತ್ ಓಮಿತಿ" ನಾರಾ ೪,**

ಓಂಕಾರರೂಪನಾದ ಒಬ್ಬ ಆತ್ಮನೇ ಈ ತ್ರಿಪುಟಿಮಯ ಪ್ರಪಂಚರೂಪನಾಗಿರುತ್ತಾನೆ. ಬಳಿಕ ಯೋಗಿಯು ಎಲ್ಲವು ಓಂಕಾರವೆಂದು ತಿಳಿದು ಮುಕ್ತನಾಗುತ್ತಾನೆ. ಹೀಗೆಂದು ಈ ಮಂತ್ರವು ಹೇಳುತ್ತದೆ.

> **ಪ್ರತ್ಯಗಾನಂದಂ ಬ್ರಹ್ಮಪುರುಷಂ ಪ್ರಣವ ಸ್ವರೂಪಂ।**
> **ಅಕಾರ ಉಕಾರೋ ಮಕಾರ ಇತಿ। ತಾ ಅನೇಕಧಾ ಸಮಭವತ್ತದೇ ದೋಮಿತಿ ಯಮುಕ್ತ್ವಾ ಮುಚ್ಯತೆ ಯೋಗೀ ಜನ್ಮಸಂಸಾರ ಬಂಧನಾತ್"**

**ಟೀಕಾ:-** ಪ್ರತ್ಯಗಾನಂದಂ=ತ್ವಂಪದಲಕ್ಷ್ಯರೂಪನಾದಾತ್ಮನು, ಬ್ರಹ್ಮಪುರುಷಂ=ತತ್ಪದ ಲಕ್ಷ್ಯನಾದ ಪರಮಾತ್ಮನು, ಪ್ರಣವ ಸ್ವರೂಪಂ=ಇವರಿಬ್ಬರು ಅಭೇದವಾಗಿರುವದರಿಂದ ಚಿದೇಕರಸವಾದ ಪರಬ್ರಹ್ಮವಸ್ತುವೇ ಓಂಕಾರರೂಪವು, ಅಕಾರ ಉಕಾರ, ,ಮಕಾರ, ಇತಿ=ಪ್ರತ್ಯಗಾತ್ಮನು, ವಿಶ್ವ ತೈಜಸ, ಪ್ರಾಜ್ಞನೆಂತಲೂ, ಈಶ್ವರನು ವಿರಾಟ್, ಹಿರಣ್ಯಗರ್ಭ, ಅಂತರ್ಯಾಮಿಯೆಂತಲೂ, ಒಂದು ಓಂಕಾರವೇ ಅಕಾರ, ಉಕಾರ, ಮಕಾರ, ವೆಂತಲೂ, ತಾಅನೇಕಧಾ ಸಮಭವತ್=ಹೀಗೆ ಒಂದೊಂದು ಮೂರು ಮೂರು ಭೇದಗಳಾಗಿ ತೋರುವವು. ಯೋಗೀ=ಅಧಿಕಾರಿಯು, ತತ್=ಆ ಪರಮಾತ್ಮನನ್ನು, ಏತತ್=ಈ ಜೀವವನ್ನೂ, ಓಮಿತಿ=ಶಿವಜೀವರುಗಳ ವಾಚ್ಯ ಭಾಗಗಳನ್ನು ಬಿಟ್ಟು, ಲಕ್ಷ್ಯ ಭಾಗವನ್ನು ಸ್ವೀಕರಿಸಿ, ಆ ಅಖಂಡವಾದ ಬ್ರಹ್ಮವೇ ಓಂಕಾರವು. ಓಂಕಾರವೇ ಆ ಬ್ರಹ್ಮವು, ಅಂಥಾ ಓಂಕಾರ ರೂಪ ಬ್ರಹ್ಮವೇ ನಾನಿದ್ದೇನೆಂದು ತಿಳಿದುಕೊಂಡು, ಯಂ=ತನ್ನ ಅಖಂಡ ಸ್ವರೂಪವನ್ನು ಲಕ್ಷಿಸಿ, ಉಕ್ತ್ವಾ=ಓಂಕಾರವನ್ನು ಉಚ್ಚರಿಸಿ, ಜನ್ಮಸಂಸಾರಬಂಧನಾತ್=ಈ ಜನ್ಮವೇ ಸಂಸಾರವು. ಮತ್ತು ಇದೇ ಬಂಧವು. ಇದರಿಂದ, ಮುಚ್ಯತೆ =(ಬಿಡಲ್ಪಡುತ್ತಾನೆ) ಬಿಡುಗಡೆಯನ್ನುಹೊಂದುತ್ತಾನೆ. ಅಂದರೆ ಮುಕ್ತನಾಗುತ್ತಾನೆಂಬ ಭಾವವು.

**ತಾತ್ಪರ್ಯ:-** ಓಂಕಾರವು; ಪ್ರತ್ಯಗಾತ್ಮನನ್ನು ಪರಮಾತ್ಮನನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ಓಂಕಾರವು ವಾಚಕವಾಗಿದೆ. ಪ್ರತ್ಯಗಾತ್ಮ ಪರಮಾತ್ಮರಿಬ್ಬರು ವಾಚ್ಯರಾಗಿರುವರು. ಅರ್ಥಾತ್ ತ್ವಂಪದ ಲಕ್ಷ್ಯ ತತ್ಪದ ಲಕ್ಷ್ಯ ಇವೆರಡು ನಾಮಮಾತ್ರ ವ್ಯವಹಾರದಿಂದ ಭೇದಗಳಾಗಿವೆ ಹೊರ್ತು ಸ್ವರೂಪದಿಂದಲ್ಲ. ಆದ್ದರಿಂದ ಓಂಕಾರವೇ ಬ್ರಹ್ಮವೆಂದೂ, ಬ್ರಹ್ಮವೇ ಓಂಕಾರವೆಂದು ಸಿಧ್ಧಾಂತವಾಗುವದು. ಒಂದು **ಓಂಕಾರವೇ** ಅಕಾರಾದಿ ಭೇದದಿಂದ ಅನೇಕವಾದಂತೆ, ಒಬ್ಬ **ಆತ್ಮನೇ** ವಿಶ್ವಾದಿ ಭೇದದಿಂದ ಅನೇಕವಾದಂತೆ, ಒಬ್ಬ **ಪರಮಾತ್ಮನೇ** ವಿರಾಟಾದಿ ಭೇದದಿಂದೆ ಅನೇಕವಾದಂತೆ, ಪ್ರತೀತಿ ಯಾಗುತ್ತಿರುವದು. ಈ ಭೇದವು ಉಪಾಧಿಯಿಂದ ಕಲ್ಪಿತವಾದದ್ದು ಹೊರ್ತು ಸಹಜವಲ್ಲ. ಆದ್ದರಿಂದಲೇ ಅಧಿಕಾರಿಯಾದ ಯಾವನೊಬ್ಬ ಯೋಗಿಯು, ಜೀವ,ಶಿವ,ಓಂಕಾರ ಇವುಗಳ ವಿಚಾರವನ್ನು ಮಾಡುತ್ತಾ,ವಿಶ್ವತ್ರಯ ವಿರಾಟ್‌ತ್ರಯ ಅಕಾರತ್ರಯ ಉಪಾಧಿರೂಪ ವಾಚ್ಯಾಂಶಗಳನ್ನು ಬೇರ್ಪಡಿಸಿ, ಲಕ್ಷ್ಯವಾದ ಪ್ರತ್ಯಗಾತ್ಮ ಪರಮಾತ್ಮ ಓಂಕಾರ, ಇವುಗಳನ್ನು ಸ್ವೀಕರಿಸಿ, ಆತನೇ ಈತನೆಂಬ ವಾಕ್ಯದಂತೆ ಅಭೇದವನ್ನು ನಿಶ್ಚೈಸಿ, ಅಖಂಡ ಪರಬ್ರಹ್ಮರೂಪನೇ ನಾನು, ಓಂಕಾರಕ್ಕಾದರೂ ನಾನೇ ಅರ್ಥರೂಪನಾಗಿರುವೆನು. ಮುಖದಿಂದ ಓಂಕಾರವನ್ನು ಉಚ್ಚರಿಸುತ್ತಾ, ತನ್ನ ಅಖಂಡ ಸ್ವರೂಪವನ್ನು ಸ್ಮರಿಸುತ್ತಾ **ಜೀವನ್ಮುಕ್ತಿ ಸುಖವನ್ನು** ಅನುಭವಿಸುತ್ತಾನೆ. ಆದ್ದರಿಂದ ಆ ಯೋಗಿಯು ಈ ಜನ್ಮರೂಪ ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾನೆ- ಎಂಬರ್ಥವು ಹೊರಡುತ್ತದೆ. ಆದಕಾರಣ ಈ ತ್ರಿಪುಟಿ ಭೇದವು ಕಲ್ಪಿತವಾದ್ದರಿಂದ ಮಿಥ್ಯೆಯಾಗಿರುತ್ತದೆಂತಲೂ ಆತ್ಮನು ಅಕಲ್ಪಿತನಾದ್ಧರಿಂದ ಸತ್ಯನೆಂತಲೂ ಹೇಳಿದ್ದಾಯಿತು. ಎಂಬ ತಾತ್ಪರ್ಯವು.

**೧ ಸಂ- ೬ ಸೂ. ೧೨ ಪ. ನತತ್ರರಥಾ ಬೃ ೪. ೩. ೧೦**

ಮೊದಲು ಸ್ವಪ್ನದಲ್ಲಿ ಏನೂ ಇದ್ದಿಲ್ಲ. ಬಳಿಕ ರಥ, ಅಶ್ವ,ಮಾರ್ಗ ವೊದಲಾದವುಗಳು ತೋರಿದವೆಂದು ಹೇಳುತ್ತಾರೆ.

**'ನತತ್ರರಥಾ ನರಥಯೋಗಾ ನ ಪಂಥಾನೋಭವಂತ್ಯಥ ರಥಾನ್‌ರಥಯೋಗಾನ್‌ಪಥಃ ಸೃಜತೆ"**

**ಟೀಕಾ:-** ತತ್ರ=ಸ್ವಪ್ನದಲ್ಲಿ, ನರಥಾ=ರಥಗಳು ಇಲ್ಲ; ನರಥಯೋಗಾಃ=ಅಶ್ವಗಳು ಇಲ್ಲ, ನಪಂಥಾನೋಭವಂತಿ = ಮಾರ್ಗಗಳು ಇಲ್ಲ, ಅಥ = ಬಳಿಕ, ರಥಾನ್=ರಥಗಳನ್ನು, ರಥಯೋಗಾನ್=ಅಶ್ವಗಳನ್ನು, ಪಥಃ=ಮಾರ್ಗಗಳನ್ನು, ಸೃಜತೆ=ನಿರ್ಮಾಣ ಮಾಡುತ್ತಾನೆ.

**ತಾತ್ಪರ್ಯ:**- ಮೊದಲು ಸ್ವಪ್ನದಲ್ಲಿ ಯಾವ ಪದಾರ್ಥಗಳೂ ಇರುವದಿಲ್ಲ. ಬಳಿಕ ವಾಸನಾನುಸಾರವಾಗಲಿ ಅಥವಾ ಜ್ಞಾನಕ್ಕೆ ಅನುಗುಣವಾಗಲಿ ಆಯಾಯ ಪದಾರ್ಥಗಳು ತೋರುತ್ತವೆ. ಮೊದಲು ರಥಗಳಿರಲಿಲ್ಲ. ಅಶ್ವಗಳೂ ಇಲ್ಲ. ಮಾರ್ಗಗಳೂ ಇಲ್ಲ. ಬಳಿಕ ಆಯಾಯ ವಸ್ತುಗಳ ಜ್ಞಾನ ಅಥವಾ ವಾಸನಾ ಇವುಗಳ ಸಮಕಾಲದಲ್ಲಿಯೇ ರಥಗಳೂ ಅಶ್ವಗಳೂ ಮಾರ್ಗಗಳೂ ತೋರಲಿಕ್ಕೆ ಹತ್ತುವವು. ಹೀಗೆಯೇ ಪರಬ್ರಹ್ಮದಲ್ಲಿಯಾದರೂ ಮೊದಲು ಏನೂ ಇದ್ದಿಲ್ಲ. ಅನಂತರ ಈ ಸೃಷ್ಟಿಯು ಕಲ್ಪಿತವಾಗಿರುವದೆಂಬ ಭಾವವು.

**೧ ಸಂ, ೭ ಸೂ, ೯ ಪ, ಉದರಮಾದಿ ವಾಕ್ಯದೊಳು ತೈ ೨-೭**

ಕಾರ್ಯಕಾರಣ ವಿಲಕ್ಷಣವಾದ ಬ್ರಹ್ಮನೇ ನಾನೆಂದು ತಿಳಿದರೆ ಅವನು ಭಯರಹಿತನಾಗುತ್ತಾನೆಂತಲೂ, ತನಗಿಂತ ಭಿನ್ನವಾಗಿ ತಿಳಿದರೆ ಭಯವುಳ್ಳವನಾಗುತ್ತಾನೆಂತಲೂ ಈ ಮಂತ್ರವು ಹೇಳುತ್ತದೆ.

**'ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽ ನಿರುಕ್ತೇಽ ನಿಲಯನೇಽ ಭಯಂ ಪ್ರತಿಷ್ಠಾಂ ವಿಂದತೇ। ಅಥ ಸೋಽ ಭಯಂ ಗತೋ ಭವತಿ। ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ। ಅಥ ತಸ್ಯ ಭಯಂ ಭವತಿ। ತತ್ವೇವ ಭಯಂ ವಿದುಷೋಽ ಮನ್ವಾನಸ್ಯ। ತದಪ್ಯೇಷ ಶ್ಲೋಕೋ ಭವತಿ।**

**ಟೀಕಾ:**- ಯದಾ=ಯಾವಾಗ್ಯೆ, ಏಷಃ ಹ್ಯೇವ=ಸಾಧಕನಿಗೆ, ಏತಸ್ಮಿನ್=ಈ ಅದೃಶ್ಯೆ=ಅವಿಷಯವಾದ, ಅನಾತ್ಮ್ಯೆ=ಶರೀರವಿಲ್ಲದ, ಅನಿರುಕ್ತೆ=ವಚಿಸಲಿಕ್ಕೆ ಬಾರದ, ಅನಿಲಯನೆ=ಆಶ್ರಯವಿಲ್ಲದ ಬ್ರಹ್ಮದಲ್ಲಿ, ಅಭಯಂ=ಭಯರಹಿತವಾದ, ಪ್ರತಿಷ್ಠಾಂ=ಅದೇ ನಾನೆಂಬ ಭಾವವನ್ನು, ವಿಂದತೆ=ಪಡೆಯುತ್ತಾನೋ, ಅಥ=ಅನಂತರ, ಸಃ=ಅವನು, ಅಭಯಂ=ಬ್ರಹ್ಮವನ್ನು, ಗತಃ=ಹೊಂದಿದವನು, ಭವತಿ=ಆಗುತ್ತಾನೆ, ಯದಾ=ಯಾವಾಗ್ಯೆ, ಹಿ=ನಿಶ್ಚಯವಾಗಿ, ಏಷಃ ಏವ=ಈತನೇ, ಏತಸ್ಮಿನ್=ಭೇದರಹಿತ ಬ್ರಹ್ಮದಲ್ಲಿ, ಉದರಂ=ಅಲ್ಪವಾದ, ಅಂತರಂ = ಭೇದವನ್ನು ಕುರುತೆ=ಮಾಡುತ್ತಾನೋ, ಅಥ=ಅನಂತರ, ತಸ್ಯ=ಅವನಿಗೆ, ಭಯಂ=ದುಃಖವು, ಭವತಿ=ಆಗುತ್ತದೆ, ಅಮನ್ವಾನಸ್ಯ=ಯಥಾರ್ಥವಾಗಿ ತಿಳಿಯದಿರುವ, ವಿದುಷಃ=ಬಲ್ಲವಗೆ, ತತ್ವೇವ=ಬ್ರಹ್ಮವೇ, ಭಯಂ=ಭಯರೂಪಾಗಿರುವದು, ತದಪಿ=ಈ ಅರ್ಥ ವಿಷಯದಲ್ಲಿ, ಏಷಃಈ, ಶ್ಲೋಕಃ ಭವತಿ=ಮಂತ್ರವು ಇರುತ್ತದೆ.

**ತಾತ್ಪರ್ಯ:**- ಯಾವ ಕಾಲಕ್ಕೆ ಸಾಧಕ ಪುರುಷನು ಅವಿಕಾರಿಯಾದ ಬ್ರಹ್ಮವು ದೃಶ್ಯವಾಗುವದಿಲ್ಲ, ಆದರಿಂದಲೇ ಅದಕ್ಕೆ ಶರೀರಗಳು ಇಲ್ಲ. ಶರೀರಗಳಿಲ್ಲ

ದ್ದರಿಂದಲೇ ವಾಣಿಗೆ ವಿಷಯವಲ್ಲ. ಆದ್ದರಿಂದಲೇ ಅದಕ್ಕೆ ಬೇರೊಂದು ಆಶ್ರಯ ವಿಲ್ಲ. ಈ ಕಾರ್ಯಕಾರಣ ವಿಲಕ್ಷಣವಾದ ಬ್ರಹ್ಮವೇ ನಾನೆಂದು ತಿಳಿಯುತ್ತಾನೋ, ಆಗ್ಯೆ ಅವನು ಸುಖವುಳ್ಳವನಾಗುತ್ತಾನೆ. ಯಾಕಂದರೆ, ಭಯಕ್ಕೆ ಕಾರಣವಾದದ್ದು ನಾನಾ ಭೇದದಿಂದೊಡಗೂಡಿದ ಅವಿದ್ಯೆಯಾಗಿರುವದು. ಅದು ನಷ್ಟವಾದ್ದರಿಂದ ಅವನಿಗೆ ಭಯವೇ ಇಲ್ಲ. ಅಂದರೆ ವಿದ್ವಾಂಸರು ಬ್ರಹ್ಮವ್ಯತಿರಿಕ್ತ ಜಗತ್ತು ಜೀವಾದಿ ಈ ಭೇದವನ್ನು ಕಾಣುವದಿಲ್ಲ. ಆದ್ದರಿಂದ ಬ್ರಹ್ಮವಿತ್ತರು ಸರ್ವತ್ರ ನಿರ್ಭಯ ರಾಗಿರುವುದು ಕಂಡುಬರುತ್ತದೆ. ಮತ್ತು ಯಾವಾತನು ಅವಿದ್ಯೆಯಿಂದೊಡಗೂಡಿ ಕತ್ತಲೆಯ ದೋಷದಿಂದ, ಇಬ್ಬರು ಚಂದ್ರರನ್ನು ಕಾಣುವಂತೆ, ತನಗಿಂತಲೂ (ಬ್ರಹ್ಮಕ್ಕಿಂತಲೂ) ಭಿನ್ನವಾಗಿ ಸ್ವಲ್ಪಾದರೂ ಜಗತ್ತಾದಿ ಭೇದವನ್ನು ಕಂಡದ್ದಾದರೆ, ಅವನಿಗೆ ಭಯವು ಉಂಟಾಗುತ್ತದೆ. ಆದ್ದರಿಂದ ಭೇದವನ್ನು ಕಾಣುವಂಥವನು ವಿದ್ವಾಂಸನಾದರೂ ಅವನು ಅವಿದ್ವಾಂಸನೆಂದೇ ಹೇಳತಕ್ಕದ್ದು ಎಂಬ ಈ ಅರ್ಥವಿಷಯದಲ್ಲಿ ಮಂತ್ರವು ಇರುತ್ತದೆ. ಆದ್ದರಿಂದ ಈ ಜಗತ್ತು ಜೀವಾದಿ ಭೇದವು ಅಖಂಡ ಬ್ರಹ್ಮದಲ್ಲಿ ಇಲ್ಲ. ಕಿಂತು ಅವಿದ್ಯಾ ದೋಷಮೂಲಕ ಸ್ವಪ್ನದಂತೆ ಪ್ರತೀತಿಯಾಗಿ ತೋರುತ್ತದೆ. ಆದ್ದರಿಂದ ದೃಷ್ಟಿ ಸೃಷ್ಟಿವಾದವು ಸಂಭವಿಸುತ್ತದೆ ಎಂಬ ತಾತ್ಪರ್ಯವು.

ಈ ಕಾರಣದಿಂದಲೇ ಮೂಲ ಗ್ರಂಥಕರ್ತರು ಮೊದಲಿಲ್ಲದೆ ಈ ರೀತಿ ತೋರುತ್ತದೆ. ಇದು ಯಥಾರ್ಥವಲ್ಲ. ಮಿಥ್ಯೆಯಾಗಿರುವದೆಂದು ಹೇಳುತ್ತಲಿದ್ದಾರೆ.

### ೧ ಸೆಂ, ೮ ಸೂ, ೧೧ ಪ, 'ಸದೇವ ಸೋಮ್ಯತಿ' ಛಾಂ ೬, ೨-೧

ಈ ಜಗತ್ತು ಉತ್ಪತ್ತಿ ಪೂರ್ವಕಾಲದಲ್ಲಿ ಸದ್ರೂಪ ಬ್ರಹ್ಮವೇ ಆಗಿತ್ತು ಎಂಬ ವರ್ಥವನ್ನು ಶ್ರುತಿಯು ಹೇಳುತ್ತದೆ.

**''ಸದೇವ ಸೋಮ್ಯೇದಮಗ್ರ ಆಸೀದೇಕ ಮೇವಾದ್ವಿತೀಯಂ। ತದ್ಧೈಕ ಆಹುರಸದೇವೇದಮಗ್ರ ಆಸೀದೇಕ ಮೇವಾದ್ವಿತೀಯಂ ತಸ್ಮಾದಸತಃ ಸಜ್ಜಾಯತೆ ॥೧॥**

**ಟೀಕಾ:**-ಹೇ ಸೋಮ್ಯ=ಎಲೈ ಶಿಷ್ಯನೇ! ಇದಂ=ಈ ಜಗತ್ತು, ಅಗ್ರೇ=ಸೃಷ್ಟಿ ಪೂರ್ವದಲ್ಲಿ, ಏಕಮೇವ=ಒಂದೇ, ಅದ್ವಿತೀಯ=ವಿಜಾತಿಯಿಲ್ಲದಂಥಾ, ಸದೇವ= ಸದ್ವಸ್ತುವೇ, ಆಸೀತ್=ಇತ್ತು, ಹಿ=ನಿಶ್ಚಯವಾಗಿ, ತತ್=ಅದು, ಏಕ=ಒಂದೇ ಯೆಂದು, ಆಹುಃ=ಹೇಳುತ್ತಾರೆ. ಇದು=ಈ ಜಗತ್ತು, ಅಗ್ರೇ=ಪೂರ್ವದಲ್ಲಿ, ಏಕ ಮೇವಾದ್ವಿತೀಯಂ=ಬೇರೊಂದಿಲ್ಲದ ಒಂದೇ, ಅಸದೇವ=ಅಭಾವವೇ, ಆಸೀತ್= ಇತ್ತೆಂದು ಹೇಳಿದರೆ, ತಸ್ಮಾತ್=ಅಂಥಾ, ಅಸತಃ=ಅಭಾವದಿಂದ, ಸತ್=ಭಾವವು, ಜಾಯತೆ=ಉತ್ಪತ್ತಿಯಾಗುವದೇ, ಇಲ್ಲವೆಂಬ ತಾತ್ಪರ್ಯವು.

**ತಾತ್ಪರ್ಯ:-** ಎಲೈ ಶಿಷ್ಯನೇ! ಕೇಳು. ನಾಮ, ರೂಪ, ಕ್ರಿಯಾದಿಗಳಿಂದ ವಿಕಾರಾತ್ಮಕವಾಗಿ ತೋರುವ ಈಜಗತ್ತು,ಸೃಷ್ಟಿ ಪೂರ್ವದಲ್ಲಿ ಸೂಕ್ಷ್ಮ ನಿರ್ವಿಶೇಷ ವ್ಯಾಪಕ, ನಿರಂಜನ, ನಿರವಯುವ, ಜ್ಞಾನರೂಪವಾದ ಸದ್ರೂಪು ಒಂದೇ ಆಗಿತ್ತು.

**ಶಂಕಾ:-** ಈ ಜಗತ್ತು ಪೂರ್ವಕಾಲದಲ್ಲಿಯೇ ಸದ್ವಸ್ತು ಆಗಿತ್ತು. ಅಂದ ಮೇಲೆ ಈಗ ಸತ್ ಆಗಿಲ್ಲವೆಂದು ಹೇಳಿದಂತಾಗಲಿಲ್ಲವೆ? ಯಾಕಂದರೆ ಪೂರ್ವದಲ್ಲಿ ಎಂದು ವಿಶೇಷಣ ಹಚ್ಚುವದರಿಂದ.

**ಸಮಾಧಾನ:-**ಹಾಗಲ್ಲ. ಮತ್ತೇನಂದರೆ,ಈಗಾದರೂ ಈ ಜಗತ್ತು ಸದ್ರೂಪವೇ; ಆದಾಗ್ಯಾದರೂ ನಾಮರೂಪ ವಿಶೇಷಣಗಳಿಂದ ಕೂಡಿಕೊಂಡು ಇದಂ ಎಂಬ ಬುದ್ಧಿಗೆ ವಿಷಯುವಾಗುತ್ತದೆ. ಆದ್ದರಿಂದ ಸದ್ರೂಪು ಬುದ್ಧಿಯಲ್ಲಿ ಸ್ಪಷ್ಟವಾಗಿ ಹೊಳೆಯುುವದಿಲ್ಲೆಂದು ತಿಳಿದು ಉತ್ಪತ್ತಿ ಪೂರ್ವದಲ್ಲಿ ಈ ಜಗತ್ತು ಸದ್ರೂಪವೇ ಆಗಿತ್ತು ಎಂದು ಹೇಳಿದರೆ; ಸದ್ಬುದ್ಧಿಯು ಮಾತ್ರ ಅನುಭವಕ್ಕೆ ಬರುತ್ತದೆಂದು ಹೀಗೆ ಹೇಳಿರುತ್ತದೆ. ಉತ್ಪತ್ತಿಗಿಂತ ಪೂರ್ವಕಾಲದಲ್ಲಿರುವ ಸತ್ತನ್ನು ನಾಮದಂತೆ ರೂಪದಂತೆ ಗ್ರಹಣ ಮಾಡಲಿಕ್ಕೆ ಬರುವದಿಲ್ಲ. ಹೇಗಂದರೆ; ಸುಷ್ತಿಯಲ್ಲಿ ಸತ್ತನ್ನು ಹೇಗೆ ಗ್ರಹಿಸಲಿಕ್ಕೆ ಬರುವದಿಲ್ಲವೋ ಹಾಗೆ ಸೃಷ್ಟಿ ಪೂರ್ವದಲ್ಲಿರುವ ಸತ್ತನ್ನು ದೃಶ್ಯವಾಗಿ ಅರಿಯಲಿಕೆ ಬರುವದಿಲ್ಲ. ಕಿಂತು; ನಿದ್ರೆಯಿಂದೆದ್ದವನು ಸುಷ್ತಿಯಲ್ಲಿ ಕೇವಲ ಸನ್ಮಾತ್ರವೇ ಇತ್ತೆಂದು ಅನುಭವಿಸುತ್ತಾನೆ. ಹೇಗೋ, ಹಾಗೇ ಉತ್ಪತ್ತಿ ಪೂರ್ವ ಈಜಗತ್ತುಸತ್ತು ಆಗಿತ್ತೆಂದು ತಿಳಿಯುುವನು.

ಮತ್ತು ಒಬ್ಬ ಪುರುಷನು ಪ್ರಾತಃಕಾಲದಲ್ಲಿ ಒಂದು ಊರಿಗೆ ಹೊರಟನು. ಊರ ಹೊರಗೆ ಹೋಗುವಷ್ಟರಲ್ಲಿ ಕುಂಬಾರ ಮನೆಯನ್ನು ಕಂಡನು. ಅಲ್ಲಿ ಕುಂಬಾರನು ಮಣ್ಣನ್ನು ಕೆಸರು ಮಾಡುತ್ತಿರುವದನ್ನು ನೋಡಿ, ಹಾಗೇ ಊರಿಗೆ ಹೊರಟುಹೋದನು,;ತಿರಿಗಿ ಸಾಯಂಕಾಲಕ್ಕೆ ಬಂದು ನೋಡಲು ಅನೇಕ ಹರಿವೆ, ಗಡಿಗೆ, ಮುಚ್ಚಳ ವಗೈರೆ ಆಗಿರುವದನ್ನು ಕಂಡು- ಇವೆಲ್ಲಾ ಈಗ ಆಗಿವೆ. ನಾನು ಪ್ರಾತಃಕಾಲದಲ್ಲಿ ಹೋಗುವಾಗ್ಯೆ ಏನೂ ಇದ್ದಿಲ್ಲ. ಆದ್ದರಿಂದ ಇವೆಲ್ಲ ಪೂರ್ವ ದಲ್ಲಿ ಕೆಸರಿನ ಮುದ್ದಿಯೇ ಆಗಿದ್ದವು. ಎಂದು ಅನ್ನುವಂತೆ, ಈ ಜಗತ್ತು ಉತ್ಪತ್ತಿ ಪೂರ್ವದಲ್ಲಿ ಸದ್ರೂಪು ಆಗಿತ್ತೆಂದು ಹೇಳವದು ನ್ಯಾಯುವಾಗಿರುತ್ತದೆ.

ಸತ್ತಿಗೆ ಭಿನ್ನವಾಗಿ ಏನೊಂದಿಲ್ಲದ್ದರಿಂದ ಏಕವೆಂದು ಹೇಳಲ್ಪಡುತ್ತಿದೆ. ಘಟೋತ್ಪತ್ತಿಗೆ ಉಪಾದಾನ ಕಾರಣವಾದ ಮಣ್ಣನ್ನು ಬಿಟ್ಟು ನಿಮಿತ್ತ ಕಾರಣ ನಾದ ಕುಲಾಲನು ಇದ್ದಂತೆ, ಸತ್ತಿಗೆ ಸಹಕಾರಿ ಕಾರಣವು ಇಲ್ಲೆಂದು ಹೇಳುವ ದಕ್ಕಾಗಿ 'ಅದ್ವಿತೀಯ' ಎಂದು ಹೇಳಿರುತ್ತದೆ. ಆದ್ದರಿಂದ ಸತ್ತಿಗೆ ಏಕಮೇವ ಅದ್ವಿತೀಯುಂ ಎಂದು ವಿಶೇಷಣ ಉಂಟು.

**ಶಂಕಾ:-** ವೈಶೀಷಿಕರಾದರೂ ದ್ರವ್ಯ, ಗುಣ, ಕರ್ಮಾದಿಗಳಲ್ಲಿ ಸತ್ ದ್ರವ್ಯಂ,ಸನ್ ಗುಣಃ,ಸತ್‌ಕರ್ಮ,ಎಂದು ಎಲ್ಲ ಕಡೆಗೆ ಸತ್ತಾ ಜಾತಿಯು ಇರುವಿಕೆ ಯನ್ನು ಅಂಗೀಕಾರ ಮಾಡಿರುತ್ತಾರೆ. ಈಗ ನೀವು ಹೇಳುವ ಸತ್ತಾ ಅದೆಯೋ? ಅಥವಾ ಅದಕ್ಕಿಂತಲೂ ಬೇರೆ ಯಾದದ್ದೋ ?

**ಸಮಾಧಾನ:-** ಆ ವೈಶೇಷಿಕರು ಅಂಗೀಕಾರ ಮಾಡಿರುವ ಸತ್ತಿಗೂ ನಮ್ಮ ಸತ್ತಿಗೂ ಬಹಳ ಅಂತರವುಂಟು. ಹೇಗಂದರೆ; ಅವರು ವರ್ತಮಾನಕಾಲದಲ್ಲಿರುವ ದ್ರವ್ಯಾದಿಗಳನ್ನು ಕುರಿತು ಸತ್ತಾ ಜಾತಿಯನ್ನು ಸ್ವೀಕಾರ ಮಾಡುತ್ತಾರೆ, ಆದರೆ, ಸೃಷ್ಟಿ ಪೂರ್ವದಲ್ಲಿ ಮಾತ್ರ ಅಂಗೀಕಾರ ಮಾಡುವದಿಲ್ಲ. ಯಾಕಂದರೆ ಅವರ ಮತದಲ್ಲಿ ಈ ಕಾರ್ಯವು ಉತ್ಪತ್ತಿಕಿಂತ ಪೂರ್ವದಲ್ಲಿ ಅಸತ್ತಾಗಿರುವದೆಂದು ಅಂಗೀ ಕರಿಸಿರುವರು. ಒಂದೇ ಸತ್ತು ಇರುವದೆಂದು ಒಪ್ಪುವದಿಲ್ಲ, ಅದ್ದರಿಂದ ವೈಶೇಷಿಕ ರಿಂದ ಪರಿಕಲ್ಪಿತವಾದ ಸತ್ತಿಗಿಂತಲೂ ಈ ಸತ್ತು ಬೇರೆಯಾಗಿರುತ್ತದೆ.

## ಮತಾಂತರ ಶಂಕೆಗಳು

**೧] ವೈನಾಸಿಕರು**-ಈ ಜಗತ್ತು ಉತ್ಪತ್ತಿ ಪೂರ್ವದಲ್ಲಿ ಏಕಮೇವಾದ್ವಿತೀಯ ವಾಗಿ ಸತ್ ಅಭಾವ ಮಾತ್ರ ಅಸದ್ವಸ್ತು ಆಗಿತ್ತೆಂದು ಹೇಳುತ್ತಾರೆ. (ಇಲ್ಲೆಂದು ಕರಿಸಿಕೊಂಡಿತ್ತು ಎಂಬರ್ಥವು)

**೨) ಬೌದ್ಧರು** ಈ ಜಗತ್ತಿನ ಉತ್ಪತ್ತಿ ಪೂರ್ವದಲ್ಲಿ ಶೂನ್ಯವೇ ಇತ್ತು. ಬೇರೆ ಏನೂ ಇಲ್ಲ, ಎಂದು ಹೇಳುತ್ತಾರೆ.

**೩) ನೈಯಾಯಿಕರು** ಸತ್ ಇದಕ್ಕೆ ವಿಪರೀತವಾದದ್ದು ಅಸತ್ ಇವೆರಡು ತತ್ವಗಳು ಇರುತ್ತವೆಂದು ಹೇಳುತ್ತಾರೆ.

## ಶಂಕೆಗಳಿಗೆ ಉತ್ತರಗಳು

**೧) ವೈನಾಸಿಕನು** ಸದಭಾವ ಮಾತ್ರ ಅಸದ್ವಸ್ತುಆಗಿತ್ತೆಂದು ಹೇಳಿದರೆ (ಪೂರ್ವದಲ್ಲಿ) ಎಂಬಲ್ಲಿ ಕಾಲಸಂಬಂಧ(ಅದ್ವಿತೀಯ)ಎಂಬಲ್ಲಿ ಸಂಖ್ಯಾಸಂಬಂಧ ಇವುಗಳನ್ನು ಗ್ರಹಣಮಾಡಬಾರದಾಗಿತ್ತು ಮಾಡುತ್ತಾನೆ. ಆದ್ದರಿಂದ ಅಸತ್ತೆಂದು ಹೇಳಲಿಕ್ಕೆ ಆಗುವದಿಲ್ಲ.

**೨. ಭೌದ್ಧನು** ಶೂನ್ಯವೇ ಇತ್ತೆಂದು ಹೇಳವದು ಸಂಭವಿಸುವದಿಲ್ಲ. ಯಾಕಂದರೆ, ಆ ಶೂನ್ಯವನ್ನು ಅನುಭವಿಸುವನು ಒಬ್ಬನು ಇರಲಿಕ್ಕೆ ಬೇಕಾಗುವದು. ಅನುಭವಿ ಸುವವನು ಈಗ ಇದ್ದಾನೆ. ಸೃಷ್ಟಿಪೂರ್ವದಲ್ಲಿ ಇದ್ದಿಲ್ಲ ಎಂದು ಹೇಳಿದರೆ, ಅದು ಯೋಗ್ಯವಲ್ಲ. ಯಾಕಂದರೆ, ಸೃಷ್ಟಿಪೂರ್ವದಲ್ಲಿ ಸತ್ತು ಇದ್ದಿಲ್ಲ ವೆಂಬುವದಕ್ಕೆ ಪ್ರಮಾಣವೇ ಇಲ್ಲ. ಆದ್ದರಿಂದ ಶೂನ್ಯವುಂಟೆಂದು ಹೇಳುವದು ಸರಿಯಲ್ಲ.

೩ ನೈಯಾಯಿಕರು, ವಿರುದ್ಧಗಳಾದ ಭಾವ ಅಭಾವಗಳನ್ನು ಅಂಗೀಕಾರ ಮಾಡುವದು, ಬೆಳಕು ಕತ್ತಲೆಗಳಂತೆ ವಿರುದ್ಧವಾಗಿರುತ್ತದೆ. ಆದ್ದರಿಂದ ಅವರ ಯುಕ್ತಿಯೂ ಸರಿಯಾದದ್ದು ಅಲ್ಲ.

ಆದ್ದರಿಂದಲೇ ಶ್ರುತಿಯಾದರೂ ಏನೊಂದಿಲ್ಲದ ಅಭಾವದಿಂದ ಸೃಷ್ಟಿಯು ಹೇಗೆ ಉತ್ಪನ್ನವಾಗುವದು ? ಎಂದು ಆಕ್ಷೇಪ ಪೂರ್ವಕ ಸಮಾಧಾನವನ್ನು ಹೇಳಿ ರುತ್ತದೆ. ಅಂದಮೇಲೆ, ಈ ಜಗತ್ತು ಉತ್ಪತ್ತಿ ಪೂರ್ವದಲ್ಲಿ ಸತ್ತು ಆಗಿತ್ತು.

೧ ಸ, ೮ ಸೂ, ೧೧ ಪ, "ಆತ್ಮೈವೇದಮಿತಿ" ಛಾ. ೭-೨೫-೨

ಒಬ್ಬ ಆತ್ಮನೇ ಎಲ್ಲ ಕಡೆಗೂ ತುಂಬಿಕೊಂಡಿರುವನೆಂದು ಈ ಶ್ರುತಿಯು ಹೇಳುತ್ತದೆ.

**"ಅಥಾತ ಆತ್ಮಾದೇಶ ಏವಾऽತ್ಮೈವಾಧಸ್ತಾ ದಾತ್ಮೋಪರಿಷ್ಟಾ ದಾತ್ಮಾ ಪಶ್ಚಾದಾತ್ಮಾ ಪುರಸ್ತಾದಾತ್ಮಾ ದಕ್ಷಿಣತ ಆತ್ಮೋತ್ತರತ ಆತ್ಮೈ ವೇದಂ ಸರ್ವಮಿತಿ"**

**ಟೀಕಾ:-** ಅಥ = ಅನಂತರ, ಅತಃ = ಅವಿವೇಕಿದೆಶೆಯಿಂದ, ಆತ್ಮಾದೇಶ ಏವ=ಆತ್ಮೋಪದೇಶವುಂಟು, ಅಧಸ್ತಾತ್=ಕೆಳಗೂ, ಆತ್ಮೈವ=ಆತ್ಮನೇ, ಉಪರಿ ಷ್ಟಾತ್=ಮೇಲೆಯೂ, ಆತ್ಮಾ ಆತ್ಮನೇ, ಪಶ್ಚಾತ್=ಪಶ್ಚಿಮದಿಕ್ಕಿನಲ್ಲಿಯೂ, ಆತ್ಮಾ=ಆತ್ಮನೇ, ಪುರಸ್ತಾತ್=ಪೂರ್ವದಿಕ್ಕಿನಲ್ಲಿಯೂ, ಆತ್ಮಾ=ಆತ್ಮನೇ! ದಕ್ಷಿ ಣತಃ=ದಕ್ಷಿಣದಿಕ್ಕಿನಲ್ಲಿಯೂ,ಉತ್ತರತಃ=ಉತ್ತರದಿಕ್ಕಿನಲ್ಲಿಯೂ,ಆತ್ಮಾ=ಆತ್ಮನೇ, ಇದಂಸರ್ವಂ=ಈ ಸರ್ವಜಗತ್ತು, ಆತ್ಮೈವ=ಆತ್ಮಸ್ವರೂಪವೇ ಆಗಿರುವದು.

**ತಾತ್ಪರ್ಯ:-** ಅವಿವೇಕಿಗಳಾದ ಜನರು ಅಹಂಕಾರದಿಂದೊಡಗೂಡಿದ ದೇಹಾದಿ ಸಂಘಾತಕ್ಕೆ ಆತ್ಮನೆಂದು ತಿಳಿಯುವರು. ಆದ್ದರಿಂದ ಈ ಪರಿಚ್ಛಿನ್ನ ಬುದ್ಧಿಯನ್ನು ಹೋಗಲಾಡಿಸುವದಕ್ಕಾಗಿ ಆತ್ಮೋಪದೇಶವನ್ನು ಮಾಡುತ್ತಾರೆ. ಹೇಗಂದರೆ, ಆತ್ಮನು ಆಕಾಶದಂತೆ ಒಳಹೊರಗೆ ವ್ಯಾಪಕನಾಗಿ ಸದ್ರೂಪತ್ವದಿಂದ ಶುದ್ಧನಾಗಿಯೇ ಇದ್ದಾನೆ. ಮೇಲೆ, ಕೆಳಗೆ, ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಎಲ್ಲ ಕಡೆಗೂ ವ್ಯಾಪಿಸಿರುತ್ತಾನೆ. ಅಷ್ಟೇಕೆ ಈ ಕಾಣುತ್ತಿರುವ ಜಗತ್ತಾದರೂ ಆತ್ಮರೂಪವೇ ಆಗಿರುತ್ತದೆ. ಎಂದು ಹೇಳುತ್ತಾರೆ. ಆದ್ದರಿಂದ ವರ್ತಮಾನ ಕಾಲದಲ್ಲಿ ತೋರುವ ಜಗತ್ತಾದರೂ ಆತ್ಮಸ್ವರೂಪವೆಂದು ಶ್ರುತಿಯು ಹೇಳುತ್ತದೆ.

೧ ಸಂ. ೮ ಸೂ. ೧೧ ಪ. "ಸವಾಽಯ ಮಾತ್ಮೇತಿ" ಬೃ ೨-೫-೧೫.

ಸಕಲ ಬ್ರಹ್ಮಾದಿಸ್ಥಾವರಾಂತಭೂತಗಳು, ಲೋಕಗಳು ಮೊದಲಾದವೆಲ್ಲಾ ಅಂದರೆ ಈ ಸರ್ವ ಜಗತ್ತು ಈ ಆತ್ಮನಲ್ಲಿಯೇ ಅರ್ಪಿಸಲ್ಪಟ್ಟಿರುತ್ತದೆಂದು ಈ ಮಂತ್ರವು ಹೇಳುತ್ತದೆ.

"ಸವಾಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ ತದ್ಯಥಾ ರಥನಾಭೌಚ ರಥನೇಮೌಚಾರಾಃ ಸರ್ವೇ ಸಮರ್ಪಿತಾ ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ, ಸರ್ವೇದೇವಾಃ ಸರ್ವೇಲೋಕಾಃ ಸರ್ವೇಪ್ರಾಣಾಃ ಸರ್ವ ಏತ ಆತ್ಮನಃ ಸಮರ್ಪಿತಾಃ"

ಟೀಕಾ:- ಸವಾ=ಆ ಪರಮಾತ್ಮನೇ, ಅಯಮಾತ್ಮಾ=ಈ ಅಪರೋಕ್ಷವಾದ ಆತ್ಮನು, ಸರ್ವೇಷಾಂ=ಎಲ್ಲ, ಭೂತಾನಾಂ=ಬ್ರಹ್ಮಾದಿ ಸ್ಥಾವರಾಂತಗಳಿಗೆ, ಅಧಿಪತಿಃ=ಸ್ವತಂತ್ರನು, ಸರ್ವೇಷಾಂ=ಎಲ್ಲ, ಭೂತಾನಾಂ=ಪ್ರಾಣಿವರ್ಗಕ್ಕೆ, ರಾಜಾ=ಒಡೆಯನು, ತತ್=ಅದು, ಯಥಾ=ಹೇಗಂದರೆ, ರಥನಾಭೌ=ಚಕ್ರದಗಡ್ಡಿಯಲ್ಲಿ, ಚ=ಮತ್ತು, ರಥನೇಮೌ=ಚಕ್ರದ ಪುಟಿಯಲ್ಲಿಯೂ, ಸರ್ವೇ=ಎಲ್ಲ, ಚಾರಾಃ=ಹಲ್ಲುಗಳು, ಸಮರ್ಪಿತಾಃ=ಇರಿಸಲ್ಪಟ್ಟಿರುತ್ತವೆ, ಏವಮೇವ=ಇದರಂತೆ, ಅಸ್ಮಿನ್=ಈ, ಆತ್ಮನಿ=ಆತ್ಮಸ್ವರೂಪದಲ್ಲಿ, ಸರ್ವಾಣಿಭೂತಾನಿ=ಬ್ರಹ್ಮಾದಿ ಸ್ಥಾವರಾಂತ ಭೂತಗಳು, ಸರ್ವೇದೇವಾಃ=ಅಗ್ನ್ಯಾದಿ ಸರ್ವ ದೇವತೆಗಳು, ಸರ್ವೇಲೋಕಾಃ=ಭೂಲೋಕವೇ ಮೊದಲಾದ ಎಲ್ಲ ಲೋಕಗಳು, ಸರ್ವೇಪ್ರಾಣಾಃ=ವಾಗಾದಿ ಸಕಲ ಇಂದ್ರಿಯಗಳು, ಸರ್ವ=ಎಲ್ಲ, ಏತೆ=ಈ, ಆತ್ಮನಃ=ಆತ್ಮರುಗಳು, (ಜೀವಗಳು) ಸಮರ್ಪಿತಾಃ=ಇರಿಸಲ್ಪಟ್ಟವೆ (ಅಂದರೆ ಅಧಿಷ್ಠಾನದಲ್ಲಿ ಕಲ್ಪಿತಗಳಾಗಿರುತ್ತವೆಂಬ ಭಾವವು)

ತಾತ್ಪರ್ಯ:- ಅವಿದ್ಯಾಕೃತ ಕಾರ್ಯಕಾರಣ ಸಂಘಾತದಲ್ಲಿ ಇರೋಣದರಿಂದ ಯಾವಾತನು ಜೀವಾತ್ಮನೆಂದು ಕರೆಯಿಸಿಕೊಳ್ಳುತ್ತಾನೆ. ಪುನಃ ಬ್ರಹ್ಮವಿದ್ಯೆಯಿಂದ ಉಪಾಧಿಗಳನ್ನು ನೀಗಿಗೆಳೆದು, ತನ್ನ ಪಾರಮಾರ್ಥಿಕ ಸ್ವರೂಪವನ್ನು ಅರಿತರೆ, ಅವನೇ ಅಖಂಡೈಕರಸನು ಪ್ರಜ್ಞಾನ ಘನನೆಂದು ಕರೆಯಲ್ಪಡುತ್ತಾನೆ. ಇಂಥಾ ಪ್ರಜ್ಞಾನ ಘನರೂಪನಾದ ಆತ್ಮನೇ ಸರ್ವರಿಂದ ಉಪಾಸಿಸಲಿಕ್ಕೆ ಯೋಗ್ಯನಾಗಿದ್ದಾನೆ. ಯಾಕಂದರೆ, ಸರ್ವ ಭೂತಗಳಿಗೂ ಅಧಿಪತಿಯಾಗಿದ್ದಾನೆ. ಅಂದರೆ, ರಾಜಬಾಲಕನಂತೆ, ಮಂತ್ರಿಯಂತೆ, ಪರಾಧೀನನಲ್ಲ. ಕಿಂತು, ಸ್ವತಂತ್ರನಿದ್ದಾನೆಂಬ ಭಾವವು. ಸರ್ವ ಭೂತಗಳಿಗೆ ರಾಜನಾಗಿರುತ್ತಾನೆ. ಅಂದರೆ, ರಾಜತ್ವ ವಿಶೇಷಣದಿಂದ ಕೂಡಿದವನೇ ಅಧಿಪತಿಯಾಗುತ್ತಾನೆ. ಯಾಕಂದರೆ, ಯಾವನೊಬ್ಬನು ತನ್ನ ವೃತ್ತಿಗೆ ಬೇಕಾದಷ್ಟು ಜಮೀನವನ್ನು ಸಂಗ್ರಹಿಸದವನೂ ನಾಮಮಾತ್ರ ರಾಜನೆಂದು ಹೇಳಿಸಿಕೊಳ್ಳುತ್ತಾನೆ. ಆದರೆ ಅವನಲ್ಲಿ ಒಡೆಯತನವಿಲ್ಲ. ಆದ್ದರಿಂದ ಸ್ವತಂತ್ರನೂ ರಾಜನೂ ಆಗಿರಬೇಕೆಂಬ ಭಾವವು. ಈ ಲಕ್ಷಣಾತ್ಮಕವಾದ ಆತ್ಮನು ಬ್ರಹ್ಮವಿತ್ತನಾದ ವಿದ್ವಾಂಸನೇ ಆಗುವನು. ಯಾಕಂದರೆ, ಯಾವಾತನು ಬ್ರಹ್ಮವನ್ನು ತಿಳಿಯುತ್ತಾನೋ ಅವನು ಸರ್ವಾತ್ಮರೂಪನು ಆಗುತ್ತಾನೆ. ಆದ್ದರಿಂದ ಶ್ರುತಿ ಗುರುಗಳಿಂದಲೂ ತರ್ಕದಿಂದಲೂ ತನ್ನಾತ್ಮವನ್ನು ಕುರಿತು ಸರ್ವಾತ್ಮತ್ವ

ರೂಪಾಗಿ ತಿಳಿಯತಕ್ಕದ್ದು. ಅಂದರೆ ಬ್ರಹ್ಮವೇ ಅವಿದ್ಯೆಯಿಂದ ಅಬ್ರಹ್ಮರೂಪಾಗಿ (ಜೀವರೂಪಾಗಿ) ತೋರಿತ್ತು. ಬ್ರಹ್ಮವಿದ್ಯೆಯಿಂದ ಅವಿದ್ಯೆಯು ತಿರಸ್ಕೃತವಾಗುತ್ತಿರಲು, ಆ ಬ್ರಹ್ಮವೇ ನಾನು ಇರುವೆನು. ನಾನು ಸರ್ವಾತ್ಮರೂಪವಾಗಿರುವೆನು. ಹೀಗೆ ತಿಳಿದರೆ, ಇದು ಶಾಸ್ತ್ರಾರ್ಥವು ಪರಿಸಮಾಪ್ತಿಯಾಯಿತು. ಇಂಥಾ ಸರ್ವಾತ್ಮಭೂತ ಬ್ರಹ್ಮವಿತ್ತನಾದ ಆತ್ಮನಲ್ಲಿ ಸರ್ವ ಜಗತ್ತು ಇರಿಸಲ್ಪಟ್ಟಿರುತ್ತದೆ. ಎಂಬುದಕ್ಕೆ ದೃಷ್ಟಾಂತವನ್ನು ಹೇಳುತ್ತಾರೆ. ಚಕ್ರದ ಗಡ್ಡಿಯಲ್ಲಿಯೂ ಪುಟಿಯಲ್ಲಿಯೂ ಹಲ್ಲುಗಳು ಯಾವ ರೀತಿ ಇರಿಸಲ್ಪಟ್ಟಿರುತ್ತವೆಯೋ, ಹಾಗೆ ಈ ಆತ್ಮನಲ್ಲಿ ಬ್ರಹ್ಮಾದಿ ಸ್ತಂಭ ಪರ್ಯಂತರಗಳಾದ ಭೂತಗಳು, ಅಗ್ನ್ಯಾದಿ ದೇವತೆಗಳು, ಭೂರಾದಿ ಲೋಕಗಳು, ವಾಗಾದಿ ಇಂದ್ರಿಯಗಳು, ಜಲದಲ್ಲಿದ್ದ ಪ್ರತಿಬಿಂಬಗಳಂತೆ ತೋರುತ್ತಿರುವ ಅವಿದ್ಯಾಕಲ್ಪಿತ ಅನೇಕ ಜೀವರು, ಈ ಸರ್ವ ಜಗತ್ತು ಇರಿಸಲ್ಪಟ್ಟಿರುತ್ತದೆ. ಆದ್ದರಿಂದ ವಾಮದೇವಮಹರ್ಷಿಯು 'ನಾನು ಸೂರ್ಯನೂ ಮನುವೂ' ಆಗಿರುವೆನೆಂದು ಹೇಳಿದ್ದಾನೆ. ಅಂದರೆ, ಸರ್ವಾತ್ಮನನ್ನು ತನ್ನ ಅನುಭವದಿಂದ ನುಡಿದಿದ್ದಾನೆ. ಹೀಗೆ ತಿಳಿದವನೇ ನಿರುಪಾಧಿಕನು, ಒಳಗೂಹೊರಗೂ ಪೂರ್ಣನಾದವನು, ಜನ್ಮ, ಜರಾ, ಮರಣಾದಿಗಳಿಂದ ರಹಿತನಾದವನು. 'ನೇತಿ' ಇದು ಆತ್ಮನಲ್ಲ, ಇದು ಆತ್ಮನಲ್ಲ ಎಂದು ಶ್ರುತಿಯು ಎಲ್ಲವನ್ನೂ ಕಳೆಯುತ್ತಾ ಈತನನ್ನೇ ಕಡೆಗೆ ತೋರಿಸುತ್ತಾ ಸುಮ್ಮನಾಗುತ್ತದೆ. ಆದ್ದರಿಂದ ಇಂಥಾ ಪೂರ್ಣಾತ್ಮನನ್ನು ಪಾಂಡಿತ್ಯ, ಅಭಿಮಾನದಿಂದಾಗಲಿ, ತರ್ಕದಿಂದಾಗಲಿ ತಿಳಿಯುವದಕ್ಕೆ ಬರುವದಿಲ್ಲ. ಕಿಂತು, ಶ್ರುತಿ ಆಚಾರ್ಯರು ತೋರಿಸಿದ ಮಾರ್ಗದಿಂದ ಹೋದರೆ, ಅವಿದ್ಯಾರೂಪ ಸಮುದ್ರವನ್ನು ದಾಟಿ, ಮುಕ್ತಿರೂಪ ಥಡವನ್ನು ಹೊಂದಿ ಸುಖಿಗಳಾಗುತ್ತಾರೆ. ಸ್ವಬುದ್ಧಿ ಕೌಶಲ್ಯದಿಂದ ಎಂದೂ ದಾಟಲಾರರು. ಇಂಥಾ ಆತ್ಮನಲ್ಲಿ ಜಗತ್ತು ಕಲ್ಪಿತವಾಗಿರುತ್ತದೆ. ಆದ್ದರಿಂದ ಕಲ್ಪಿತ ವಸ್ತು ಅಧಿಷ್ಠಾನಕ್ಕಿಂತಲೂ ಭಿನ್ನವಾಗಲಾರದು. ಆದರಿಂದಲೇ ಲೋಕ ಜೀವ ಮೊದಲಾದವುಗಳು ಆತ್ಮರೂಪವಾಗಿರುತ್ತವೆಂಬ ಭಾವವು.

---

## ೨ ಸಂ, ೩ ಸೂ, ೧೦ ಪ, 'ಯದಿದಂ' ಛಾಂ ೮-೧

ದಿಕ್ಕು, ದೇಶ, ಗುಣ, ಗತಿ, ಫಲ ಭೇದಗಳಿಂದ ರಹಿತವಾದ ಪಾರಮಾರ್ಥಿಕ ಅದ್ವಿತೀಯ ಸದ್ವಸ್ತು ಬ್ರಹ್ಮವು, ಮಂದ ಬುದ್ಧಿಗಳಿಗೆ ಇಲ್ಲದಂತೆ ತೋರುತ್ತದೆ. ಆದ್ದರಿಂದ ಇವರು ಮೊದಲು ಸನ್ಮಾರ್ಗಸ್ಥರಾಗಲಿ, ಅನಂತರ ಮೆಲ್ಲಮೆಲ್ಲನೆ ಪಾರಮಾರ್ಥಿಕ ಬ್ರಹ್ಮವನ್ನು ಹಿಡಿಸೋಣವೆಂದು ತಿಳಕೊಂಡು, ಶ್ರುತಿಯು ಹೃದಯ ದೇಶದಲ್ಲಿ ಪರಮಾತ್ಮನಿದ್ದಾನೆಂದು ಹೇಳುತ್ತದೆ.

**ಅಥ ಯದಿದಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶ ಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯ ಮಿತಿ**

**ಟೀಕಾ:-** ಅಥ=ಬಳಿಕ, ಅಸ್ಮಿನ್=ಈ, ಬ್ರಹ್ಮಪುರೇ=ಶರೀರದಲ್ಲಿ ಯತ್= ಯಾವ, ಇದಂ=ಈ, ದಹರಂ=ಅಲ್ಪವಾದ, ಪುಂಡರೀಕಂ=(ಕಮಲ ಸದೃಶ್ಯವಾದ) ಬಿಳೀ ಕಮಲವು, ವೇಶ್ಮ=ಮನೆಯು, ದಹರಂ=ಅತ್ಯಲ್ಪವಾಗಿರುವದು, ಅಸ್ಮಿನ್= ಇದರಲ್ಲಿ, ಅಂತರ = ಒಳಗೆ, ಆಕಾಶಃ = ಪೊಳ್ಳುವಿರುವದು, ತಸ್ಮಿನ್ ಅಂತಃ=ಆ ಹೃದಯದ ಒಳಗೆ, ತತ್=ಆ ಬ್ರಹ್ಮವನ್ನು, ಅನ್ವೇಷ್ಟವ್ಯಂ=ಹುಡುಕತಕ್ಕದ್ದು, ತದ್ವಾವ=ಅದನ್ನೇ, ವಿಜಿಜ್ಞಾಸಿತವ್ಯಂ=ಸಾಕ್ಷಾತ್ಕಾರ ಮಾಡಿಕೊಳ್ಳತಕ್ಕದ್ದು, ಇತಿ= ಹೀಗೆಂದು ಹೇಳುತ್ತದೆ.

**ತಾತ್ಪರ್ಯ:-** ಅನಂತರ ಈ ಶರೀರವು ರಾಜನಿರುವ ಪುರದಂತೆ ಬ್ರಹ್ಮಪುರ ವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಹೇಗಂದರೆ, ಸ್ವಾಮಿ ಕಾರ್ಯವನ್ನು ಮಾಡತಕ್ಕ ಅನೇಕ ಮಂತ್ರಿವರ್ಯರಿಂದ ಕೂಡಿಕೊಂಡು ಹೇಗೆ ರಾಜನ ಪುರವುಂಟೋ, ಹಾಗೇ ಅನೇಕ ಇಂದ್ರಿಯ ಮನೋಬುಧ್ಯಾದಿಗಳಿಂದ ಕೂಡಿಕೊಂಡು ಬ್ರಹ್ಮನು ಇರುವ ಈ ಶರೀರವು ಬ್ರಹ್ಮಪುರವಿರುತ್ತದೆ. ಇದರಲ್ಲಿ ಅಲ್ಪವಾದ ಬಿಳೀ ಕಮಲ ಸದೃಶ ವಾದ ಒಂದು ಮನೆಯು ಇರುತ್ತದೆ. ಅಂದರೆ ಬ್ರಹ್ಮವು ದೊರೆಯುವ ಸ್ಥಳವಿದೆಂಬ ಭಾವವು. ಹೇಗೆ ವಿಷ್ಣು ಶಾಲಿಗ್ರಾಮದಲ್ಲಿರುವನೋ ಹಾಗೇ ಬ್ರಹ್ಮನು ಈ ಮನೆ ಯಲ್ಲಿದ್ದಾನೆ, ಮತ್ತು ಆ ಪರಮಾತ್ಮನೇ ಜೀವರೂಪದಿಂದ ಈ ಹೃದಯ ಕಮಲ ರೂಪ ಮನೆಯಲ್ಲಿ ಪ್ರವೇಶಿಸಿದ್ದಾನೆ. ಯಾರು ಸತ್ಯ, ಬ್ರಹ್ಮಚರ್ಯಾದಿ ಸಾಧನ ಗಳಿಂದ ಯುಕ್ತರಾಗಿ ಧ್ಯಾನಮಾಡುತ್ತಾರೋ, ಅವರು ಆ ಬ್ರಹ್ಮವನ್ನು ಹೊಂದು ತ್ತಾರೆ. ಮನೆಯೇ ಅಲ್ಪವಾದದ್ದು. ಅದರಲ್ಲಿ ಅಲ್ಪತರವಾದದ್ದು ಆಕಾಶನಾಮಕ ಬ್ರಹ್ಮವಿರುವದು. ಆಕಾಶದಂತೆ ಬ್ರಹ್ಮವು ಅಶರೀರವಾದ್ದರಿಂದಲೂ ಸೂಕ್ಷ್ಮ ಮತ್ತು ವ್ಯಾಪಕವಾಗಿರುವದರಿಂದಲೂ ಬ್ರಹ್ಮಕ್ಕೆ ಆಕಾಶವೆಂಬ ಹೆಸರನ್ನು ಕೊಟ್ಟಿ ರುತ್ತಾರೆ. ಗುರುಗಳನ್ನು ಹೊಂದಿ ಶ್ರವಣಾದಿಗಳಿಂದ ಅಂಥಾ ಹೃದಯಾಕಾಶದಲ್ಲಿ ರುವ ಬ್ರಹ್ಮವನ್ನು ಹುಡುಕತಕ್ಕದ್ದು. ಅದನ್ನೇ ವಿಶೇಷ ಜಿಜ್ಞಾಸಮಾಡಿ ಸಾಕ್ಷಾ ತ್ಕಾರ ಮಾಡಿಕೊಳ್ಳತಕ್ಕದ್ದು ಎಂಬ ತಾತ್ಪರ್ಯವು.

---

**೨ ಸಂ, ೩ ಸೂ, ೧೪ ಪ "ತಸ್ಯಮಧ್ಯೆ" ನಾರಾಯಣ, ೧೩–೨**

ಹೃದಯ ಕಮಲದಲ್ಲಿ ಜೀವನು ಅಗ್ನಿಯ ಜ್ವಾಲೆಯಂತೆ, ಪ್ರಕಾಶಮಾನನಾ ಗಿರುವನು. ಅಂಥಾ ಜೀವನ ಮಧ್ಯದಲ್ಲಿ ಪರಮಾತ್ಮನು ಇದ್ದಾನೆಂಬರ್ಥವನ್ನು ಈ ಮಂತ್ರವು ಹೇಳುತ್ತದೆ.

"ತಸ್ಯಮಧ್ಯೆ ವಹ್ನಿಶಿಖಾ ಅಣೀಯೋರ್ಧ್ವಾವ್ಯವಸ್ಥಿತಃ। ನೀಲತೋಯ ಮಧ್ಯಸ್ಥಾದ್ವಿದ್ಯುಲ್ಲೇಖೇವ ಭಾಸ್ವರಾ । ನೀವಾರಶೂಕವತ್ತನ್ವೀ ಪೀತಾಭಾಸ್ವತ್ಯಣೂಪಮಾ । ತಸ್ಯಶಿಖಾಯಾ ಮಧ್ಯೆ ಪರಮಾತ್ಮಾ ವ್ಯವಸ್ಥಿತಃ ಸಬ್ರಹ್ಮಾಸಶಿವಃ ಸಹರಿಃ ಸೇಂದ್ರಃ ಸೋಽಕ್ಷರಃ ಪುರುಷಃ ಸ್ವರಾಟ್

**ಟೀಕಾ:-** ವಹ್ನಿಶಿಖಾ=ಅಗ್ನಿಜ್ವಾಲೆಯು, ತಸ್ಯಮಧ್ಯೇ=ಅದರ ಮಧ್ಯದಲ್ಲಿ, ಅಣೀಯೋರ್ಧ್ವಾ=ಅತಿಸೂಕ್ಷ್ಮನಾಗಿ, ವ್ಯವಸ್ಥಿತಃ=ಇರುವನು, ನೀಲತೋಯ=ಕಪ್ಪು ಮೋಘದ, ಮಧ್ಯಸ್ಥಾತ್=ಒಳಗಿರುವ, ವಿದ್ಯುತ್=ಮಿಂಚಿನ, ಲೇಖೇವ=ಗೆರೆಯಂತೆ (ಹೊಳಪಿನಂತೆ) ಭಾಸ್ವರಾ=ಪ್ರಕಾಶಮಾನನಾದ, ನೀವಾರಶೂಕವತ್=ತೃಣಧಾನ್ಯ ದಮುಳ್ಳಿನಂತೆ, ತನ್ವೀ=ಸೂಕ್ಷ್ಮನಾದ, ಪೀತಾ=ಹಳದಿಬಣ್ಣದ್ದಾಗಿ (ಸುವರ್ಣತೇಜ ದಂತೆ) ಅಣೂಪಮಾ=ಅಣುವಿಗೆ ಸದೃಶವಾಗಿ, ಭಾಸ್ವತಿ=ಜೀವನು ಹೊಳೆಯುತ್ತಿ ರುತ್ತಾನೆ. ತಸ್ಯ=ಆ, ಜೀವನ, ಶಿಖಾಯಾ=ಪ್ರಕಾಶದ, ಮಧ್ಯೆ=ಅಂತರದಲ್ಲಿ, ಪರ ಮಾತ್ಮಾ=ಶಿವನು, ವ್ಯವಸ್ಥಿತಃ=ಇರುವನು.

**ತಾತ್ಪರ್ಯ:-** ನಾಭಿಯ ಮೇಲ್ಭಾಗದಲ್ಲಿ ಅಧೋಮುಖವಾಗಿ ಪದ್ಮಕೋಶ ದಂತೆ ಹೃದಯವಿರುವದು. ಅದರಲ್ಲಿ ಸೂಕ್ಷ್ಮವಾದದ್ದೊಂದು (ಸುಷಿರ) ಪೊಳ್ಳು ಇರುವದು. ಅದರಲ್ಲಿ ಜ್ವಾಲಾಮಯವಾದ ಅಗ್ನಿಯು ಇರುತ್ತದೆ. ಅದರ ಕಿರಣ ಗಳು ಶರೀರದ ತುಂಬ ಪಸರಿಸಿರುತ್ತವೆ. ಅಂಥಾ ಅಗ್ನಿಯ ಶಿಖೆಯ ಮಧ್ಯದಲ್ಲಿ ಕಪ್ಪು ಮೋಘದ ಮಧ್ಯದಲ್ಲಿರುವ ಮಿಂಚಿನಂತೆ, ಪ್ರಕಾಶವುಳ್ಳವನಾಗಿಯೂ, ಬತ್ತದ ಮುಳ್ಳಿನ ತುದಿಯಂತೆ ಸೂಕ್ಷ್ಮಾಗ್ರಿಯೂ, ಸುವರ್ಣದ ಕಾಂತಿಯಂತೆ ಹೊಳೆಯು ವಂಥವನಾಗಿಯೂ, ಅತಿಸೂಕ್ಷ್ಮನಾಗಿ ಜೀವನಿರುತ್ತಾನೆ. ಇಂಥಾ ಜೀವನ ಮಧ್ಯ ದಲ್ಲಿ ಪರಮಾತ್ಮನು ವಾಸಮಾಡಿಕೊಂಡಿರುವನು. ಆತನೇ ಬ್ರಹ್ಮ, ಶಿವ, ಹರಿ, ಇಂದ್ರ, ಅಕ್ಷರ, ಸ್ವರಾಟ ಎಂಬ ಹೆಸರುಗಳಿಂದ ಹೊಗಳಿಸಿಕೊಳ್ಳುತ್ತಿರುತ್ತಾನೆ.

**೨ ಸಂ, ೩ ಸೂ, ೧೫ ಪ, "ದ್ವಾಸುಪರ್ಣಾ" ರುದ್ರಹೃದಯ-೪೧-**

ಜೀವಶಿವರಿಬ್ಬರು ಪಕ್ಷಿಗಳಂತೆ ಕೂಡಿದ್ದರೂ ಜೀವನು ಕರ್ಮ ಫಲವನ್ನು ಉಣ್ಣುತ್ತಾನೆ. ಶಿವನು ಉಣ್ಣುವದಿಲ್ಲ ಎಂಬುದನ್ನು ಹೇಳುತ್ತಾರೆ.

"ದ್ವಾಸುಪರ್ಣೌ ಶರೀರೇಽಸ್ಮಿನ್ ಜೀವೇಶಾಖ್ಯೌಸಹಸ್ಥಿತೌ ।
ತಯೋರ್ಜೀವಃ ಫಲಂಭುಕ್ತೆ ಕರ್ಮಣೋನ ಮಹೇಶ್ವರಃ" ॥

**ಟೀಕಾ:-** ಅಸ್ಮಿನ್=ಈ, ಶರೀರೇ=ದೇಹದಲ್ಲಿ, ಜೀವೇಶಾಖ್ಯೌ=ಜೀವ ಈಶ ರೆಂಬ, ದ್ವಾ=ಎರಡು, ಸುಪರ್ಣೌ=ಪಕ್ಷಿಗಳು, ಸಹಸ್ಥಿತೌ=ಕೂಡಿಯೇ ಇರುತ್ತವೆ.

ತಯೋಃ=ಅವೆರಡರಲ್ಲಿ, ಜೀವಃ=ಜೀವನು, ಫಲಂ=ಕರ್ಮಫಲವನ್ನು, ಭುಂಕ್ತೆ= ಭೋಗಿಸುತ್ತಾನೆ. ಮಹೇಶ್ವರಃ=ಪರಮಾತ್ಮನು, ಕರ್ಮಣಃ = ಕರ್ಮದ, ಫಲಂ= ಸುಖ ದುಃಖಗಳನ್ನು, ನ=ಊಟಮಾಡುವದಿಲ್ಲ.

**ತಾತ್ಪರ್ಯ:-** ಈ ಶರೀರರೂಪ ವೃಕ್ಷದಲ್ಲಿ ಜೀವ ಶಿವರೆಂಬ ಹೆಸರಿನ ಎರಡು ಪಕ್ಷಿಗಳು ಯಾವಾಗಲೂ ಕೂಡಿಕೊಂಡೇ ಇರುತ್ತವೆ. ಪಕ್ಷಿಯು ಒಂದಿರುವ ದಿಲ್ಲ ಜೊತೆಯಾಗಿರುತ್ತವೆ. ಆದ್ದರಿಂದಲೇ ಈ ಪಕ್ಷಿಗಳ ಉಪಮಾನವನ್ನು ಕೊಟ್ಟಿರು ತ್ತಾರೆ. ಅದರಂತೆ ಶಿವನನ್ನು ಬಿಟ್ಟು ಜೀವನಾಗಲಿ ಜೀವನನ್ನು ಬಿಟ್ಟು ಶಿವನಾಗಲಿ ಇರುವದಿಲ್ಲೆಂಬ ಭಾವವು.

**ಶಂಕಾ:-** ಜೀವ ಶಿವರು ಕೂಡಿಕೊಂಡು ಇದ್ದಮೇಲೆ ಇಬ್ಬರೂ ಕರ್ಮಫಲ ವನ್ನು ಉಪಭೋಗಿಸಬಹುದು. ಯಾಕಂದರೆ; ಒಂದು ಪಕ್ಷಿಯು ಹಣ್ಣನ್ನು ತಿನ್ನು ವಾಗ್ಯೆ ಮತ್ತೊಂದು ತಿನ್ನದಿದ್ದೀತೆ? ಎಂದಿಗೂ ಇರಲಾರದು. ಅದರಂತೆ ಶಿವಜೀವ ರಿಬ್ಬರು ಕರ್ಮಫಲವನ್ನು ಉಣ್ಣುವರೆಂಬ ಭಾವವು.

**ಸಮಾಧಾನ**—ಈ ಶರೀರರೂಪ ಮರದಲ್ಲಿರುವ ಕರ್ಮ ಫಲರೂಪಗಳಾದ ಸುಖದುಃಖಗಳನ್ನು ಜೀವಪಕ್ಷಿಯೇ ತಿನ್ನುತ್ತದೆ. ಈಶ್ವರಪಕ್ಷಿಯು ತಾನು ತಿನ್ನದೆ ಆ ಕರ್ಮಫಲವನ್ನು ಈ ಜೀವಪಕ್ಷಿಗೆ ತಿನ್ನಲಿಕ್ಕೆ ಕೊಡುತ್ತದೆ. ಅಂದರೆ ತಾನು ಆ ಶರೀರರೂಪ ಮರದಲ್ಲಿದ್ದರೂ ಆ ಕರ್ಮಫಲವನ್ನು ಕೊಟ್ಟರೂ ಅಸಂಗವಾಗಿಯೇ ಇದೆ. ಅದಕ್ಕೆ ಆ ಕರ್ಮದ ಲೇಪವಿಲ್ಲ. ಈಶನು ನಿತ್ಯತೃಪ್ತನಾಗಿರುತ್ತಾನೆ. ಅದ ರಿಂದ ಅವನಿಗೆ ಅದರಲ್ಲಿ ಇಚ್ಛೆಯಿಲ್ಲ.

**೨ ಸಂ, ೪ ಸೂ, ೪ ಪ, "ಪೂರ್ವೆ" ಧ್ಯಾನಬಿಂದೋ ೯೪**

ಹೃದಯ ಕಮಲ ಮಧ್ಯದಲ್ಲಿರುವ ಜೀವನು, ಕರ್ಮಾನುಗುಣದಿಂದ ಒಂದು ದಳವನ್ನು ಬಿಟ್ಟು ಮತ್ತೊಂದು ದಳಕ್ಕೆ ಹೋಗುತ್ತಾನೆ. ಆ ದಳ ಸಂಬಂಧದಿಂದ ಅವನಿಗೆ ಆಯಾಯ ಗುಣಗಳು ಸಂಭವಿಸುತ್ತವೆಂದು ಹೇಳುತ್ತಾರೆ.

**"ಪೂರ್ವದಳೇ ವಿಶ್ರಮತೆ ಪೂರ್ವದಳಂ ಶ್ವೇತವರ್ಣಂ। ತದಾ ಭಕ್ತಿ ಪುರಃಸರಂ ಧರ್ಮೇ ಮತಿರ್ಭವತಿ,॥ ಯದಾಗ್ನೇಯದಳೇ ವಿಶ್ರಮತೇ। ತದಾಗ್ನೇಯದಳಂ ರಕ್ತವರ್ಣಂ। ತದಾ ನಿದ್ರಾಲಸ್ಯಮತಿರ್ಭವತಿ॥ ಯದಾ ದಕ್ಷಿಣದಳೇ ವಿಶ್ರಮತೇ ತದ್ದಕ್ಷಿಣದಳಂ ಕೃಷ್ಣವರ್ಣಂ। ತದಾ ದ್ವೇಷ ಕೋಪಮತಿರ್ಭವತಿ॥ ಯದಾ ನೈರುತ್ಯದಳೇ ವಿಶ್ರಮತಿ। ತನ್ನೈರುತ್ಯದಳಂ ನೀಲವರ್ಣಂ। ತದಾ ಪಾಪಕರ್ಮ ಹಿಂಸಾ ಮತಿರ್ಭವತಿ। ಯದಾ ಪಶ್ಚಿಮ**

ದಳೇ ವಿಶ್ರಮತೇ। ತತ್ಪಶ್ಚಿಮದಳಂ ಸ್ಫಟಿಕವರ್ಣಂ ತದಾ। ಕ್ರೀಡಾವಿನೋದೇ ಮತಿರ್ಭವತಿ॥ ಯದಾ ವಾಯುವ್ಯದಳೇ ವಿಶ್ರಮತೇ। ವಾಯುವ್ಯದಳಂ ಮಾಣಿಕ್ಯವರ್ಣಂ ತದಾ। ಗಮನಚಾಲನವೈರಾಗ್ಯ ಮತಿರ್ಭವತಿ॥ ಯದೋತ್ತರದಳೇ ವಿಶ್ರಮತೇ। ತದುತ್ತರದಳಂ ಪೀತವರ್ಣಂ ತದಾ। ಸುಖಶೃಂಗಾರ ಮತಿರ್ಭವತಿ॥ ಯದೀಶಾನದಳೇ ವಿಶ್ರಮತೇ। ತದೀಶಾನದಳಂ ವೈಡೂರ್ಯವರ್ಣಂ ತದಾ। ದಾನಾದಿ ಕೃಪಾ ಮತಿರ್ಭವತಿ ॥

ಟೀಕಾ:-ಯದಾ=ಯಾವಾಗ್ಯೆ, ಪೂರ್ವದಳೇ=ಪೂರ್ವ ದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ = ವಿಶ್ರಾಂತಿಯನ್ನು ಹೊಂದುತ್ತಾನೋ, ಪೂರ್ವದಳಂ ಶ್ವೇತವರ್ಣಂ=ಆ ಪೂರ್ವದಿಕ್ಕಿನ ದಳವು ಬಿಳೇ ಬಣ್ಣದ್ದುಂಟು, ತದಾ=ಆ ಕಾಲಕ್ಕೆ, ಭಕ್ತಿಃ ಪುರಃ ಸರಂ=ಭಕ್ತಿಯೇ ಮುಂತಾಗಿ, ಧರ್ಮೇ=ಧರ್ಮವಿಷಯದಲ್ಲಿ, ಮತಿರ್ಭವತಿ=ಬುದ್ಧಿಯುತ್ಪನ್ನವಾಗುತ್ತದೆ, ಯದಾ=ಯಾವಾಗ್ಯೆ, ಆಗ್ನೇಯ ದಳೆ=ಆಗ್ನೇಯ ದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ=ಜೀವನು ಬಂದುನಿಲ್ಲುತ್ತಾನೋ, ತದಾಗ್ನೇಯಂ=ಆ ಆಗ್ನೇಯದಳವು, ರಕ್ತವರ್ಣಂ=ಕೆಂಪುಬಣ್ಣದ್ದು, ತದಾ=ಆಗ್ಯೆ, ನಿದ್ರಾಲಸ್ಯ = ನಿದ್ರೆಮಾಡುವದರಲ್ಲಿಯೂ, ಸೋಮಾರಿತನಮಾಡುವದರಲ್ಲಿಯೂ, ಮತಿರ್ಭವತಿ=ಬುದ್ಧಿಯುಂಟಾಗುತ್ತದೆ, ಯದಾ=ಯಾವಾಗ್ಯೆ, ದಕ್ಷಿಣದಳೇ=ದಕ್ಷಿಣ ದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ=ಜೀವನು ನಿಲ್ಲುವನೋ, ತದ್ದಕ್ಷಿಣ ದಳಂ=ಆ ದಕ್ಷಿಣ ಎಲೆಯು, ಕೃಷ್ಣವರ್ಣಂ=ಕಪ್ಪು ಬಣ್ಣದ್ದು, ತದಾ=ಆಗ್ಯೆ, ದ್ವೇಷ=ವೈರತ್ವದಲ್ಲಿಯೂ, ಕೋಪ = ಸಿಟ್ಟಿನಲ್ಲಿಯೂ, ಮತಿರ್ಭವತಿ=ಬುದ್ಧಿಯು ಆಗುತ್ತದೆ, ಯದಾ=ಯಾವಾಗ್ಯೆ, ನೈರುತ್ಯದಳೇ=ನೈರುತ್ಯದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ=ವಿಶ್ರಾಂತಿಯನ್ನು ಹೊಂದುತ್ತಾನೋ, ತನ್ನೈರುತ್ಯ ದಳಂ=ಆ ನೈರುತ್ಯ ದಳವು, ನೀಲವರ್ಣಂ=ನೀಲವರ್ಣದ್ದುಂಟು, ತದಾ=ಆಗ್ಯೆ, ಪಾಪಕರ್ಮ=ನಿಷಿದ್ಧ ಕರ್ಮಗಳಲ್ಲಿಯೂ, ಹಿಂಸಾ=ಪ್ರಾಣಿ ಕೊಲ್ಲುವದರಲ್ಲಿಯೂ, ಮತಿರ್ಭವತಿ=ಬುದ್ಧಿಯಾಗುತ್ತದೆ, ಯದಾ=ಯಾವಾಗ್ಯೆ, ಪಶ್ಚಿಮ ದಳೇ=ಪಶ್ಚಿಮ ದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ=ನಿಲ್ಲುತ್ತಾನೋ, ತತ್ಪಶ್ಚಿಮ ದಳಂ=ಆ ಪಶ್ಚಿಮ ಎಲೆಯು, ಸ್ಫಟಿಕ ವರ್ಣಂ=ಸ್ಫಟಿಕದಂತೆ ಶುಭ್ರವಾಗಿದೆ, ತದಾ=ಆಗ್ಯೆ, ಕ್ರೀಡಾ ಲೀಲೆಯಲ್ಲಿಯೂ, ವಿನೋದೆ=ಸಂತೋಷದಲ್ಲಿಯೂ, ಮತಿರ್ಭವತಿ=ಬುದ್ಧಿ ತೋರುವದು, ಯದಾ=ಯಾವಾಗ್ಯೆ, ವಾಯುವ್ಯ ದಳೆ=ವಾಯುವ್ಯ ದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ=ವಿಶ್ರಾಂತಿಯನ್ನು ಹೊಂದುತ್ತಾನೋ, ವಾಯುವ್ಯ ದಳಂ ಮಾಣಿಕ್ಯ ವರ್ಣಂ=ಆ ವಾಯುವ್ಯ ದಳವು ಮಾಣಿಕ್ಯ ಬಣ್ಣದ್ದಿರುವದು, ತದಾ=ಆಗ್ಯೆ, ಗಮನ=ಹೋಗುವದರಲ್ಲಿ, ಚಾಲನ=ತಿರುಗುವದರಲ್ಲಿ, ವೈರಾಗ್ಯೆ=ವಿರಕ್ತಿಯಲ್ಲಿ, ಮತಿರ್ಭವತಿ = ಬುದ್ಧಿಯಾಗುತ್ತದೆ. ಯದಾ=ಯಾವಾಗ್ಯೆ, ಉತ್ತರದಳೇ=ಉತ್ತರದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ=

ಜೀವನು ವಿಶ್ರಾಂತಿಯನ್ನು ಹೊಂದುತ್ತಾನೋ, ತದುತ್ತರದಳಂ=ಆ ಉತ್ತರದ ಳವು, ಪೀತವರ್ಣಂ=ಹಳದಿ ಬಣ್ಣದ್ದು, ತದಾ=ಆಗ್ಯೆ, ಸುಖ=ಸುಖದಲ್ಲಿಯೂ, ಶೃಂಗಾರ=ಅಲಂಕಾರದಲ್ಲಿಯೂ, ಮತಿರ್ಭವತಿ=ಬುದ್ಧಿ ತೋರುವದು, ಯದಾ= ಯಾವಾಗ್ಯೆ,ಈಶಾನದಳೇ=ಈಶಾನ್ಯ ದಿಕ್ಕಿನಲ್ಲಿರುವ ದಳದಲ್ಲಿ, ವಿಶ್ರಮತೆ=ಜೀವ ನಿರುತ್ತಾನೋ, ತದೀಶಾನ್ಯದಳಂ=ಆ ಈಶಾನ್ಯದಳವು, ವೈಡೂರ್ಯವರ್ಣಂ= ವೈಡೂರ್ಯದ ಬಣ್ಣವುಳ್ಳದ್ದು. ತದಾ=ಆಗ್ಯೆ, ದಾನಾದಿ=ದಾನಾದಿ ಪುಣ್ಯಕರ್ಮ ಗಳಲ್ಲಿಯೂ, ಕೃಪಾ=ದುಃಖಿಗಳಲ್ಲಿ ಕರುಣಾರಸದಲ್ಲಿಯೂ, ಮತಿರ್ಭವತಿ=ಮನಸ್ಸು ಆಗುತ್ತದೆ. (ಸುಗಮವಿದ್ದದರಿಂದ ತಾತ್ಪರ್ಯವನ್ನು ಬರೆಯುವದಿಲ್ಲ.)

ಹಂಸೋಪನಿಷತ್ತು—೨-ಇದರಲ್ಲಿಯೂ ಕೂಡಾ ಹೇಳಿರುತ್ತದೆ. ಹೇಗಂದರೆ **"ಪೂರ್ವದಳೇ ಪುಣ್ಯಮತಿಃ ಆಗ್ನೇಯೇ ನಿದ್ರಾಲಸ್ಯಾದಯೋಭವಂತಿ ಯಾಮ್ಯೆಕ್ರೌರೇಮತಿಃ ನೈರುತ್ಯೆಪಾಪೇಮನೀಷಾ ವಾರಣ್ಯಾಕ್ರೀಡಾ ವಾಯ ವ್ಯೆಗಮನಾದೌಬುದ್ಧಿಃ ಸೌಮ್ಯೇರತಿಃ ಪ್ರೀತಿಃ ಈಶಾನ್ಯೇದ್ರವ್ಯದಾನಂ ಮಧ್ಯೆವೈರಾಗ್ಯಂ ಕೇಶರೇ ಜಾಗ್ರದವಸ್ಥಾ ಕರ್ಣಿಕಾಯಾಂ ಸ್ವಪ್ನಂ ಲಿಂಗೇ ಸುಷುಪ್ತಿ ಪದ್ಮೇತುರೀಯಂ ಯದಾ ಹಂಸೋನಾದೇಲೀನೋ ಭವತಿ ತದಾ ತುರ್ಯಾತೀತ ಮುನ್ಮನನ ಮಜಪೋಪ ಸಂಹಾರ ಮಿತ್ಯಭಿಧೀಯತೆ"** ಈ ಮಂತ್ರದಲ್ಲಿಯಾದರೂ ಮೇಲೆ ಹೇಳಿದ ಪ್ರಕಾರ ಎಂಟು ದಿಕ್ಕುಗಳಲ್ಲಿ ಎಂಟು ಗುಣಗಳ ಉತ್ಪತ್ತಿಯನ್ನು ಹೇಳಿ, ಆ ಕಮಲದ ದಳಗಳ ಮಧ್ಯದಲ್ಲಿ ಜೀವನು ಬಂದರೆ ಆಗ್ಯೆ ಜೀವನಿಗೆ ವೈರಾಗ್ಯವು ಬರುತ್ತದೆ. ಕೇಸರಗಳಿಗೆ ಬಂದರೆ ಜಾಗ್ರದ ವಸ್ಥೆಯು ಬರುವದು. ಕರ್ಣಿಕೆಗೆ;ಇಳಿದರೆ ಸ್ವಪ್ನಾವಸ್ಥೆ,ಗಡ್ಡಿಯಲ್ಲಿ;ಬಂದರೆ ಸುಪ್ತಿ, ನಾಳಕ್ಕಿಳಿದರೆ ತುರೀಯಾವಸ್ಥಾ,ಜೀವನು ನಾದದಲ್ಲಿ ಲೀನನಾದರೆ ತುರ್ಯಾತೀತ ಅವಸ್ಥಾ, ಅಥವಾ ಉನ್ಮನಿ ಅವಸ್ಥೆ, ಇಲ್ಲಿಗೆ ಆ ಜಪಮಂತ್ರವೂ ಕೂಡಾ ಉಪ ಸಂಹಾರವಾಗುತ್ತದೆಂದು ಹೇಳಲ್ಪಡುತ್ತದೆ.

**೨ ಸಂ, ೪ ಸೂ, ೧೨ ಪ, "ತಸ್ಯತ್ರಯ ಆವಸಥಾಃ" ಐತ್ ೧—೩-೧೨**

ಪರಮಾತ್ಮನು ಈ ಶರೀರ ಮಸ್ತಕದಲ್ಲಿರುವ ಬ್ರಹ್ಮರಂಧ್ರ ದ್ವಾರಾ ಒಳಗೆ ಹೊಕ್ಕನು. ಅಲ್ಲಿ ಇವನಿಗೆ ಜೀವನೆಂಬ ಹೆಸರಾಯಿತು. ಅಲ್ಲಿ ಮೂರು ಸ್ಥಳಗಳೂ ಮೂರು ಆವಸ್ಥೆಗಳೂ ಪ್ರಾಪ್ತಗಳಾದವೆಂದು ಹೇಳುತ್ತಾರೆ.

**"ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾಪ್ರಾಪದ್ಯತ। ಸೈಷಾ ವಿದೃತಿರ್ನಾಮ ದ್ವಾಸ್ತದೇ ತನ್ನಾಂದನಂ ತಸ್ಯತ್ರಯ ಆವಸಥಾ ಸ್ತ್ರಯಃ ಸ್ವಪ್ನಾ ಅಯಮಾವ ಸಥೋಽಯ ಮಾವಸಥೋಽಯ ಮಾವಸಥ ಇತಿ"**

**ಟೀಕಾ:-** ಸಃ=ಈಶ್ವರನು, ಏತಮೇವ=ಇದೇ, ಸೀಮಾನಂ=ಮಸ್ತಕದ ಮಧ್ಯಸ್ಥಳವನ್ನು, ವಿದಾರ್ಯ=ಇಬ್ಭಾಗಮಾಡಿ, ಏತಯಾ=ಈ, ದ್ವಾರಾ=ಮಾರ್ಗ ದಿಂದ, ಪ್ರಾಪದ್ಯತ=ಪ್ರವೇಶಮಾಡಿದನು. ಸಾ=ಅದೇ, ಏಷಾ=ಇದು, ವಿದೃತಿ ನಾಮ=ವಿದಾರಣವೆಂಬ ಹೆಸರಿನ, ದ್ವಾಃ=ಮಾರ್ಗವು, ತತ್=ಆ, ಏತತ್=ಈ ದ್ವಾರವು, ನಾಂದನಂ=ಆನಂದರೂಪವಾಗಿರುವದು, ತಸ್ಯ=ಪ್ರವೇಶಮಾಡಿ ಅಲ್ಲಿದ್ದ ವನಿಗೆ, ತ್ರಯ=ಮೂರು, ಆವಸಥಾ=ಜಾಗ್ರಾದಿ ಅವಸ್ಥೆಗಳು, ತ್ರಯಃಸ್ವಪ್ನಾಃ= ಮೂರೂ ಸ್ವಪ್ನಗಳೇ ಆಗಿರುವವು, ಅಯಮಾವಸಥಃ=ಮೂರು ಅವಸ್ಥೆಗಳಲ್ಲಿ ಮೂರು ಸ್ಥಳಗಳಲ್ಲಿರತಕ್ಕವನು ಆಗಿರುತ್ತಾನೆ.

**ತಾತ್ಪರ್ಯ:-** ಭೃತ್ಯರು ಪ್ರವೇಶಮಾಡಿದ ಮಾರ್ಗದಿಂದ ರಾಜನು ಹೇಗೆ ಪ್ರವೇಶ ಮಾಡುವದಿಲ್ಲವೋ, ಹಾಗೆ ಇಂದ್ರಿಯ ಪ್ರಾಣಾದಿಗಳು ಪ್ರವೇಶ ಮಾಡಿದ ಮಾರ್ಗದಿಂದೆ ತಾನು ಪ್ರವೇಶ ಮಾಡಬಾರದೆಂದು ವಿಚಾರಮಾಡಿ, ಮಸ್ತಕದ ಕೇಶವಿಭಾಗದ ಅವಸಾನರೂಪವಾದ ಸೀಮಾನವನ್ನು ವಿಧಾರಣಮಾಡಿ, ಅದೇ ಮಾರ್ಗದಿಂದಲೇ ಈ ಶರೀರದಲ್ಲಿ ಪ್ರವೇಶ ಮಾಡಿದನು. ಆದ ಕಾರಣದಿಂದಲೇ ಈ ದ್ವಾರವು "ವಿದೃತಿ" ಯೆಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ತೈಲಾದಿಗಳನ್ನು ಮಸ್ತಕಕ್ಕೆ ಲೇಪನ ಮಾಡುವ ಕಾಲಕ್ಕೆ ಆದ್ವಾರದಿಂದ ತೈಲವು ಇಳಿಯುತ್ತದೆ. ಮತ್ತು ತಂಪು ಆಗುತ್ತದೆ. ಆದಕ್ಕೆ ಲೌಕಿಕರು ನೆತ್ತಿಯು ಎಣ್ಣೆಯನ್ನು ಕುಡಿಯು ತ್ತದೆಂದು ಹೇಳುವರು. ಶ್ರೋತ್ರ ನೇತ್ರ ಮೊದಲಾದ ದ್ವಾರಗಳು ಸೇವಕರು ಹೋಗಿ ಬರುವ ಮಾರ್ಗಗಳಂತೆ ಸಾಧಾರಣಗಳಾಗಿರುತ್ತವೆ. ಆನಂದಕ್ಕೆ ಕಾರಣವಲ್ಲೆಂದು ತಿಳಿದು, ಮಸ್ತಕದ ದ್ವಾರದಿಂದಲೇ ಪ್ರವೇಶ ಮಾಡಿದನು. ಇದು ಪರಮಾತ್ಮ ನಿಂದ ಪ್ರವೇಶ ಮಾಡಿದ ಮಾರ್ಗವಾಗಿರೋಣದರಿಂದ ಆನಂದರೂಪವಾಗಿರುತ್ತದೆ. ಇದೇ ದ್ವಾರದಿಂದ ಯೋಗಿಗಳು ಹೊರಟು ಪರಬ್ರಹ್ಮದಲ್ಲಿ ಆನಂದವುಳ್ಳವರಾಗು ತ್ತಾರೆ. ಈ ರೀತಿ ಸೃಷ್ಟಿಮಾಡಿ ಪ್ರವೇಶ ಮಾಡಿದ ಬಳಿಕ ಜೀವನೆಂಬ ಹೆಸರು ಪ್ರಾಪ್ತವಾಯಿತು. ರಾಜನಿಗೆ ವಿಶ್ರಾಂತಿಗೋಸುಗ ಮೂರು ಪುರಗಳಿದ್ದಂತೆ, ಈ ಜೀವನಿಗೆ ಜಾಗ್ರದಲ್ಲಿ ನೇತ್ರ, ಸ್ವಪ್ನದಲ್ಲಿ ಮನಸ್ಸು, ಸುಷ್ಪ್ತಿಯಲ್ಲಿ ಹೃದಯ; ಹೀಗೆ ಮೂರು ಅವಸ್ಥೆಗಳಲ್ಲಿ ಮೂರು ಸ್ಥಳಗಳಲ್ಲಿದ್ದು ವಿಶ್ರಾಂತಿಯನ್ನು ಪಡೆಯುತ್ತಿರು ತ್ತಾನೆ. ಅಥವಾ ತಂದೆಯಲ್ಲಿದ್ದುದ್ದು ಒಂದುಸ್ಥಳ, ತಾಯಿಯ ಗರ್ಭದಲ್ಲಿರುವದು ಎರಡನೇಸ್ಥಳ, ಈ ಶರೀರದಲ್ಲಿರುವದು ಮೂರನೇ ಸ್ಥಳ ಹೀಗಾದರೂ ತಿಳಿಯ ಬಹುದು. ಈ ಜೀವನಿಗೆ ಜಾಗ್ರತ್ಸ್ವಪ್ನಸುಪ್ತಿ ಮೂರು ಅವಸ್ಥೆಗಳು ಸ್ವಪ್ನಗಳೇ ಆಗಿರುತ್ತವೆ.

**ಶಂಕಾ:-** ಜಾಗ್ರದವಸ್ಥೆಯು ಎಚ್ಚರಿಕೆಯಾಗಿರುವದರಿಂದ ಇದು ಸ್ವಪ್ನ ವೆಂದು ಹೇಗೆ ಹೇಳುತ್ತೀರಿ?

**ಸಮಾಧಾನ:-** ಈ ಜಾಗ್ರತ್ತಾದರೂ ಪಾರಮಾರ್ಥಿಕವಾದ ಆತ್ಮನಜ್ಞಾನ ವಿಲ್ಲದ್ದರಿಂದಲೂ ಸ್ವಪ್ನದಂತೆ (ಅಸತ್) ಮಿಥ್ಯಾಪದಾರ್ಥಗಳು ಗೋಚರವಾಗುವದರಿಂದಲೂ ಸ್ವಪ್ನವೇ ಆಗಿರುವದು. ಈ ಜೀವನು ಜಾಗ್ರದಲ್ಲಿ ಬಲಗಡೆಯ ನೇತ್ರದಲ್ಲಿದ್ದು ಸ್ಥೂಲ ವಿಷಯಗಳನ್ನು ಅನುಭವಿಸುತ್ತಾನೆ. ಸ್ವಪ್ನದಲ್ಲಿ ಮನಸ್ಸಿನಲ್ಲಿದ್ದು ಮನೋಕರಣದಿಂದ ವಾಸನಾಮಯ ವಿಷಯಗಳನ್ನು ಅನುಭವಿಸುತ್ತಾನೆ. ಸುಷ್ತಿಯಲ್ಲಿ ಹೃದಯದಲ್ಲಿ ನಿಂತು ಅವಿದ್ಯಾಕರಣದಿಂದ ಕ್ಷಣಿಕ ಆನಂದವನ್ನು ಅನುಭವಿಸುತ್ತಾನೆ. ಈ ರೀತಿ ಮೂರು ಅವಸ್ಥಾ ಮೂರು ಸ್ಥಳಗಳಲ್ಲಿ ಅವಿದ್ಯೆಯಿಂದ ಸ್ವಾಭಾವಿಕವಾಗಿ ಸಂಚರಿಸುತ್ತಾನೆ. ತನ್ನನ್ನು ಮರೆತು ದೀರ್ಘಕಾಲದವರೆಗೂ ಅವಿದ್ಯೆಯೆಂಬ ನಿದ್ರೆಯಲ್ಲಿಯೇ ಮುಳಿಗಿ ಹೋಗಿದ್ದಾನೆ. ಸಾವಿರಾರು ಭಯಂಕರ ದುಃಖಗಳು ಸಂಭವಿಸಿದರೂ ಇವನು (ಎಚ್ಚರಿಕೆ) ತನ್ನ ಜ್ಞಾನವು ಆಗುವದೇ ಇಲ್ಲ ಎಂಬ ಭಾವವು.

**೨ ಸಂ. ೪ ಸೂ., ೧೪ ಪ. "ಯೋಽಂತರೋ ನಿಯಮಯತಿ" ಬೃ. ೩-೭-೧**

ಸರ್ವ ಪ್ರಾಣಿಗಳ ಒಳಗಿದ್ದು ಸರ್ವ ಜೀವಿಗಳನ್ನು ಪರಮಾತ್ಮನು ಪ್ರೇರಿಸುತ್ತಾನೆಂದು ಅಂತರ್ಯಾಮಿಯ ಸ್ವರೂಪವನ್ನು ಹೇಳುತ್ತದೆ.

**"ಯ ಇಮಂಚ ಲೋಕಂ ಪರಂಚ ಲೋಕಂ ಸರ್ವಾಣಿಚ ಭೂತಾನಿ ಯೋಽಂತರೋ ನಿಯಮಯತೀತಿ"**

**ಟೀಕಾ:-** ಯಃ=ಯಾವ, ಇಮಂಚ=ಈ, ಲೋಕಂ=ಶರೀರವನ್ನು, ಪರಂಚ= ಮುಂದೆ ಬರುವ, ಲೋಕಂ=ಶರೀರವನ್ನು, ಸರ್ವಾಣಿಚ = ಸಕಲ, ಭೂತಾನಿ = ಜೀವಿಗಳನ್ನು ಕುರಿತು, ಅಂತರಃ = ಒಳಗಿದ್ದು, ಯಃ = ಯಾವಾತನು, ನಿಯಮಯತಿ= ಪ್ರೇರಿಸುತ್ತಾನೆ. (ಅವನೇ ಅಂತರ್ಯಾಮಿಯು.)

**ತಾತ್ಪರ್ಯ:-** ಈ ಶರೀರವನ್ನು, ಮುಂದೆ ಬರತಕ್ಕ ಶರೀರವನ್ನು, ಎಲ್ಲ ಜೀವಿಗಳನ್ನು ಕುರಿತು ಯಾವಾತನು ಕಟ್ಟಿಗೆಯ ಗೊಂಬೆಗಳನ್ನು ಸೂತ್ರಧಾರನು ಕುಣಿಸುವಂತೆ ಪ್ರೇರಿಸುತ್ತಾನೆ. ಸೂತ್ರಧಾರನು ಪರದೆಯ ಮರೆಗಿದ್ದು ಹೇಗೆ ಕುಣಿಸುತ್ತಾನೋ, ಹಾಗೇ ಈತನಾದರೂ ಒಳಗಿದ್ದುಕೊಂಡು ಮನಸ್ಸಿನ ವ್ಯಾಪಾರಗಳನ್ನು ಮಾಡಿಸುತ್ತಾನೆ. ಈತನೇ ಅಂತರ್ಯಾಮಿಯು ಎಂದು ತಿಳಿಯತಕ್ಕದ್ದು.

---

**೨ ಸಂ, ೫ ಸೂ ೧೮ ಪ "ತದೇವಾನು ಪ್ರಾವಿಶತ" ತೈ ೨-೬**

ಪರಮಾತ್ಮನು ಈ ದೇಹವನ್ನು ರಚನೆಮಾಡಿ ಇದರಲ್ಲಿ ಪ್ರವೇಶಮಾಡಿದನೆಂಬ ವಿಷಯವನ್ನು ಈ ಶ್ರುತಿಯು ಹೇಳುತ್ತದೆ.

**" ಯದಿದಂ ಕಿಂಚ ಸೃಷ್ಟ್ವಾ । ತದೇವಾನು ಪ್ರಾವಿಶತ "**

**ಟೀಕಾ:**-ಯತ್=ಯಾವ, ಇದಂ=ಪರಿದೃಶ್ಯವಾದ, ಕಿಂಚ=ಯಾವತ್ತನ್ನು, ಸೃಷ್ಟ್ವಾ=ರಚನೆಮಾಡಿ, ತದೇವ ಹುಟ್ಟಿಸಲ್ಪಟ್ಟ ಜಗತ್ತನ್ನು ಕುರಿತು, ಅನುಪ್ರಾವಿಶತ್=ಪ್ರವೇಶಮಾಡಿದನು.

**ತಾತ್ಪರ್ಯ:**- ಪರಮಾತ್ಮನು ಈ ದೇಹಾದಿ ಯಾವತ್ತು ಸೃಷ್ಟಿಯನ್ನು ರಚಿಸಿ, ಇದರಲ್ಲಿ ತಾನೇ ಪ್ರವೇಶ ಮಾಡಿದನೆಂದು ಹೇಳಿದರೆ; ಹೇಗೆ ಪ್ರವೇಶ ಮಾಡ ತಕ್ಕದ್ದದೆ? ಮತ್ತು ಯಾವಾತನು ಸೃಷ್ಟಿಯನ್ನು ಮಾಡಿದನೋ ಅವನು ತನ್ನ ಸ್ವಕೀಯ ರೂಪದಿಂದ ಪ್ರವೇಶಮಾಡಿದನೋ? ಅಥವಾ ಬೇರೆ ಯಾವದಾದರೊಂದು ಅನ್ಯರೂಪದಿಂದ ಪ್ರವೇಶಮಾಡಿದನೋ ? ಎಂಬುದನ್ನು ಮೊದಲು ವಿಚಾರ ಮಾಡಬೇಕು.

**ಸಿದ್ಧಾಂತಿ**— 'ಸೃಷ್ಟ್ವಾ' ಎಂಬ ಈ ಪದದಲ್ಲಿ 'ಕ್ತ್ವಾ, ಪ್ರತ್ಯಯವಿರುವದರಿಂದ ಸೃಷ್ಟಿಯನ್ನು ಯಾವಾತನು ಮಾಡಿದನೋ ಅವನೇ ಪ್ರವೇಶಮಾಡಿದನೆಂಬ ಅರ್ಥವು ತೋರುತ್ತದೆ.

**ಪೂರ್ವಪಕ್ಷಿ**— ಹೀಗೆ ಹೇಳುವದು ಯೋಗ್ಯವಲ್ಲ. ಯಾಕಂದರೆ, ಮಣ್ಣಿನಂತೆ ಬ್ರಹ್ಮವು ಉಪಾದಾನಕಾರಣವಾಗಿರುತ್ತದೆ. ಆದರೆ ರೂಪಾಗಿಯೇ ಈ ಕಾರ್ಯ ಪ್ರಪಂಚವಿರುತ್ತದೆ. ಅಂದರೆ, ಕಾರಣವೇ ಕಾರ್ಯರೂಪದಿಂದ ಪರಿಣಾಮವಾಗಿರುತ್ತದೆ. ಆದ್ದರಿಂದ ಪ್ರವೇಶಮಾಡದ ಪುರುಷನ ಹಾಗೆ, ಕಾರ್ಯೋ, ತ್ಪತ್ತಿಯಾದಮೇಲೆಯೂ ಪುನಃ ಬೇರೆ ಕಾರಣಕ್ಕೆ ಪ್ರವೇಶವನ್ನು ಹೇಳುವದು ಅಯೋಗ್ಯವಾಗಿರುತ್ತದೆ. ಘಟರೂಪ ಪರಿಣಾಮವಾಗುವದರ ಹೊರತು ಮಣ್ಣಿಗೆ ಕೊಡದಲ್ಲಿ ಪ್ರವೇಶವೇ ಸಂಭವಿಸುವದಿಲ್ಲ. ಹೇಗಂದರೆ ಮಣ್ಣು ಚೂರುಚೂರಾಗಿ ಕೊಡದಲ್ಲಿ ಸೇರಿದೆಯೆಂದು ಹೇಳಲಿಕ್ಕೆ ಆದೀತೆ? ಎಂದಿಗೂ ಆಗಲಾರದು. ಆದ್ದರಿಂದ ತನ್ನ ಸ್ವಕೀಯರೂಪದಿಂದಲೇ ಪ್ರವೇಶ ಮಾಡಿದನೆಂಬುದು ಸಂಭವಿಸುವದಿಲ್ಲ.

ಇನ್ನು **" ಅನೇನ ಜೀವೇನಾತ್ಮನಾಽನುಪ್ರವಿಶ್ಯ "** ಜೀವಾತ್ಮರೂಪದಿಂದ ಪ್ರವೇಶ ಮಾಡಿದನೆಂಬ ಶ್ರುತಿಯು ಇರುವದು. ಅದರಿಂದ ಸ್ವಕೀಯ ರೂಪದಿಂದ ಪ್ರವೇಶ ಮಾಡಲಿಲ್ಲ. ಜೀವಾತ್ಮರೂಪದಿಂದ ಪ್ರವೇಶವು ಸಂಭವಿಸುತ್ತದೆಂದು ಹೇಳಿದರೆ, ಅದೂ ಯೋಗ್ಯವಲ್ಲ. ಯಾಕಂದರೆ! ಆ ಜೀವಾತ್ಮನಾದರೂ ಬ್ರಹ್ಮದೊಡನೆ ಏಕವಾಗಿರುವದರಿಂದ; ಮಣ್ಣು ತನ್ನ ರೂಪದಿಂದ ಅನೇಕವಾಗಿರುವದರಿಂದಲೂ, ಸಾವಯುವವಾಗಿರುವದರಿಂದಲೂ,, ತುಂಡು ತುಂಡಾಗಿ ಕೊಡದಲ್ಲಿ ಪ್ರವೇಶ

ಮಾಡುವದು ಯೋಗ್ಯವಾಗಿರುತ್ತದೆ. ಯಾಕಂದರೆ, ಮಣ್ಣು ಚೂರ್ಣರೂಪದಿಂದ ಕೊಡದಲ್ಲಿ ಮೊದಲು ಇದ್ದಿಲ್ಲ. ಆದ್ದರಿಂದ ಅನಂತರ ಪ್ರವೇಶ ಹೇಳಲಿಕ್ಕೆ ಬರುವದು. ಆತ್ಮನು ಏಕರೂಪನಾದ್ದರಿಂದಲೂ, ನಿರವಯುವನಾದ್ದರಿಂದಲೂ, ಈತನು ಸೇರದ ದೇಶವೇ ಇಲ್ಲದ್ದರಿಂದಲೂ, ಪ್ರವೇಶವನ್ನು ಹೇಳುವದು ಸಂಭವಿಸದು.

**ಸಿದ್ಧಾಂತ್ಯೇಕದೇಶೀ**—' ತದೇವಾನು ಪ್ರಾವಿಶತ್ ' ಅವನೇ ಪ್ರವೇಶ ಮಾಡಿದನೆಂದು ಶ್ರುತಿಯು ಹೇಳುತ್ತದೆ. ಅಂದಮೇಲೆ ಹೇಗೆ ಪ್ರವೇಶವು ಸಂಭವಿಸುವದು? ನಿರವಯುವವಿರುವದರಿಂದ ಪ್ರವೇಶ ಸಂಭವಿಸುವದಿಲ್ಲೆಂದು ಹೇಳಿದರೆ; ಸಾವಯುವಾಗಿರಲಿ. ಮುಖದಲ್ಲಿ ಹಸ್ತ ಪ್ರವೇಶವು ಹೇಗೆ ಸಂಭವಿಸುವದೋ, ಹಾಗೆ ದೇಹದಲ್ಲಿ ಜೀವಾತ್ಮರೂಪದಿಂದ ಪ್ರವೇಶವು ಯೋಗ್ಯವಾಗಿದೆ.

**ಪೂರ್ವಪಕ್ಷೀ**–ಪ್ರವೇಶವೇ ಸಂಭವಿಸುವದಿಲ್ಲ. ಯಾಕಂದರೆ. ತಾನು ಇಲ್ಲದ ದೇಶವೇ ಇಲ್ಲದ್ದರಿಂದ; ಕಾರ್ಯರೂಪದಿಂದ ಪರಿಣಾಮವಾಗಿರುವ ನಾಮ ರೂಪ ಕಾರ್ಯವಾದ ದೇಶದ ವ್ಯತಿರಿಕ್ತ ಆತ್ಮನಿಲ್ಲದ ಪ್ರದೇಶವೇ ಇರುವದಿಲ್ಲ. ಅಂದ ಮೇಲೆ ಜೀವಾತ್ಮರೂಪದಿಂದ ಏನನ್ನು ಕುರಿತು ಪ್ರವೇಶಮಾಡುವನು? ಕಾರಣವನ್ನೇ ಕುರಿತು ಪ್ರವೇಶಮಾಡುತ್ತಾನೆಂದು ಹೇಳಿದರೆ, ಜೀವಾತ್ಮತ್ವವನ್ನು ತ್ಯಾಗಮಾಡಬೇಕಾಗುವದು. ಹೇಗಂದರೆ; ಘಟವು ಮೃತ್ತಿಕೆಯನ್ನು ಪ್ರವೇಶಮಾಡಿದರೆ, ಘಟತ್ವವನ್ನು ತ್ಯಾಗಮಾಡಬೇಕಾಗುತ್ತದೆ. ಆದ್ದರಿಂದ ಪ್ರವೇಶ ಶ್ರುತಿಗೆ ;ಕಾರಣವಾದ ಬ್ರಹ್ಮವನ್ನೇ ಕುರಿತು ಕಾರ್ಯವಾದ ಜೀವಾತ್ಮರೂಪದಿಂದ ಪ್ರವೇಶ ಮಾಡಿದನೆಂಬ ಅರ್ಥವು ಯೋಗ್ಯವಲ್ಲ. ಶ್ರುತಿಗೆ ವಿರೋಧವಾಗುತ್ತದೆ.

**ಸಿದ್ಧಾಂತ್ಯೇಕ ದೇಶೀ**:- ಹಾಗಾದರೆ, ಕಾರಣವನ್ನು ಕುರಿತು ಪ್ರವೇಶಪೇಳುವದು ಬೇಡ. ಬೇರೊಂದು ಕಾರ್ಯವನ್ನು ಕುರಿತು ಪ್ರವೇಶವನ್ನು ಹೇಳಬಹುದು. ಅಂದರೆ; ಜೀವಾತ್ಮರೂಪ ಕಾರ್ಯವು ನಾಮರೂಪ ಪರಿಣಾಮವಾಗಿರುವ ದೇಹವನ್ನು ಕುರಿತು ಪ್ರವೇಶವಾಗುತ್ತದೆಂದು ಹೇಳಬಹುದು. ಯಾಕಂದರೆ; ಅಲ್ಲಿ ಪ್ರವೇಶ ಮೊದಲು ಆಗದೇ ಇರೋಣದರಿಂದ;

**ಪೂರ್ವಪಕ್ಷೀ**:- ಹಾಗೆ ಆಗುವದಿಲ್ಲ. ನೀನು ಹೇಳುವದು ಶ್ರುತಿಗೆ ವಿರೋಧವಾಗುತ್ತದೆ. ಘಟವು ಬೇರೊಂದು ಘಟವನ್ನು ಕುರಿತು ಹೊಂದುವದಿಲ್ಲ. ಮತ್ತು ಕಾರ್ಯಗಳಾದ ನಾಮರೂಪುಗಳಿಗಿಂತಲೂ ಜೀವನು ಬೇರೆ ಯಾಗಿರುವನೆಂಬದು ಶ್ರುತಿಗಳಿಗೆ ವಿರೋಧವಾಗುತ್ತದೆ. ಕಾರ್ಯಗಳಾದ ನಾಮರೂಪಗಳಲ್ಲಿ ಅಂತಃಪಾತಿಯಾದವನೇ ಜೀವನೆಂದು ಹಟವನ್ನು ಹಿಡಿದು ಕಾರ್ಯರೂಪನೆಂದು ಅಂಗೀಕರಿಸಿದರೆ, ಮೋಕ್ಷವಿಲ್ಲದಾಗುವದು. ಯಾವಾತನು ಯಾವುದರಿಂದ ಬಿಡುಗಡೆಯಾಗು

ತ್ಮಾನೋ ಅವನು ಅದರ ರೂಪು ಎಂದೂ ಆಗುವದಿಲ್ಲ. ಹೇಗಂದರೆ, ಬೇಡಿಯಿಂದ ಬಂಧಿಸಲ್ಪಟ್ಟ ಕಳ್ಳನು ಬೇಡಿಯಿಂದ ಬಿಡುಗಡೆ ಯಾಗಬೇಕಾಗಿದೆ. ಅವನು ಆ ಕಬ್ಬಿಣ ಬೇಡಿಗಳ ರೂಪು ಹೇಗೆ ಆಗುವದಿಲ್ಲವೋ, ಹಾಗೆ ಜೀವನಾದರೂ ಕಾರ್ಯ ರೂಪ ನಾಮರೂಪಗಳುಳ್ಳವನು ಆಗುವದಿಲ್ಲ.

**ಸಿದ್ಧಾಂತ್ಯೇಕದೇಶಿ**- ಆ ಕಾರಣವಾದ ಬ್ರಹ್ಮವು ಒಳಗೂ ಹೊರಗೂ ಭೇದ ದಿಂದ ಪರಿಣಾಮವಾಗಿರುವದೆಂದು ಹೇಳಿದರೆ, ಪ್ರವೇಶಾರ್ಥವು ಸಂಭವಿಸುತ್ತದೆ. ಹೇಗಂದರೆ, ಕಾರಣವಾದ ಬ್ರಹ್ಮವೊಂದೇ ಶರೀರಾದಿ ಆಧಾರ ರೂಪದಿಂದಲೂ, ಅದರ ಒಳಗಿರುವ ಜೀವಾತ್ಮರೂಪದಿಂದ **ಆಧೇಯತ್ವ**ವಾಗಿಯೂ, ಪರಿಣಾಮ ವನ್ನು ಹೊಂದಿರುವದೆಂದು ಹೇಳಬಹುದು.

**ಪೂರ್ವಪಕ್ಷೀ**— ಹಾಗಲ್ಲ. ಹೊರಗಿದ್ದವನೀಗೇನೇ ಪ್ರವೇಶ ಹೇಳುವದು ಸಂಭವಿಸುತ್ತದೆ. ಯಾವನು ಯಾವುದರ ಒಳಗಿರುವನೋ, ಅವನು ಅದರಲ್ಲಿಪ್ರವೇಶ ವಾಗಿರುವನೆಂದು ಹೇಳಲಿಕ್ಕೆ ಬರುವದಿಲ್ಲ. ಹೊರಗಿರುವವನಿಗೆ ಪ್ರವೇಶವು ಸಂಭವಿ ಸುತ್ತದೆ. ಲೋಕದಲ್ಲಿಯಾದರೂ ಪ್ರಸಿದ್ಧವಾಗಿ ಈ ಅರ್ಥವೇ :ಕಂಡು ಬರುತ್ತದೆ. ಹೇಗಂದರೆ; ಯಾವಾತನು ಗ್ರಹವನ್ನು ರಚನೆಮಾಡಿದನೋ ಅವನೇ ಆ ಮನೆಯಲ್ಲಿ ಪ್ರವೇಶ ಮಾಡಿದನೆಂದು ಹೇಳುವಂತೆ;

**ಸಿದ್ಧಾಂತ್ಯೇಕದೇಶೀ**–ಜಲದಲ್ಲಿ ಸೂರ್ಯನ ಪ್ರತಿಬಿಂಬದಂತೆ ಶರೀರದಲ್ಲಿ ಬ್ರಹ್ಮನ ಪ್ರತಿಬಿಂಬವು ಬೀಳುತ್ತದೆ. ಇದಕ್ಕೆ ಪ್ರವೇಶವೆನ್ನಬಹುದು.

**ಪೂರ್ವಪಕ್ಷೀ**--ಅದೂ ಸಂಭವಿಸುವದಿಲ್ಲ. ಯಾಕಂದರೆ, ಬ್ರಹ್ಮವು ಅಪರಿ ಚ್ಛಿನ್ನವಾಗಿಯೂ ಅಮೂರ್ತವಾಗಿಯೂ ಇರೋಣದರಿಂದ; ಯಾವದು ಪರಿಚ್ಛಿನ್ನ ವಾಗಿ( ಮೂರ್ತ ) ಆಕಾರವುಳ್ಳದ್ದಾಗಿರುವದೋ, ಅದೇ ಪ್ರತಿಬಿಂಬವುಳ್ಳದ್ದಾಗು ತ್ತದೆ. ಹೇಗಂದರೆ, ಸ್ವಭಾವತಃ ನಿರ್ಮಲಗಳಾದ ಜಲಾದಿಗಳಲ್ಲಿ ಸೂರ್ಯಾದಿಗಳ ಪ್ರತಿಬಿಂಬೋದಯವು ಆಗುವಂತೆ,ಆತ್ಮನು ಆಕಾಶದಂತೆ ವ್ಯಾಪಕನಾದ್ದರಿಂದಲೂ, ಇಷ್ಟೇ ಅಲ್ಲ. ಆಕಾಶಕ್ಕಾದರೂ ಕಾರಣನಾಗಿರುವದರಿಂದಲೂ, ಆಕಾರ ರಹಿತನಾಗಿ ರುವದರಿಂದಲೂ, ಆತ್ಮನಿಗೆ ಪ್ರತಿಬಿಂಬವನ್ನು ಹೇಳಲಿಕ್ಕೆ ಬರುವದಿಲ್ಲ. ಒಂದುವೇಳೆ ಹೇಳಿದರೆ; ಪರಿಚ್ಛಿನ್ನತ್ವ ಆಕಾರತ್ವವುಳ್ಳವನಾಗಬೇಕಾದೀತು. ಮತ್ತು ಅವಕಾಶ ರೂಪ ಪ್ರದೇಶವೂ ಪ್ರತಿಬಿಂಬಕ್ಕೆ ಆಧಾರವಾದ ವಸ್ತು ಯಾವದೂ ಇಲ್ಲದ್ದರಿಂದ, ಪ್ರತಿಬಿಂಬದಂತೆ ಪ್ರವೇಶವು ಸಂಭವಿಸುವದಿಲ್ಲ.

ಆದ್ದರಿಂದ ಬ್ರಹ್ಮಕ್ಕೆ ಸ್ವತಃ ಪ್ರವೇಶವೂ ಸಂಭವಿಸುವದಿಲ್ಲ. ಅನ್ಯ ಜೀವಾತ್ಮ ರೂಪದಿಂದಲೂ ಪ್ರವೇಶವು ಸಂಭವಿಸುವದಿಲ್ಲ. ಅಂದಮೇಲೆ, ಇನ್ನು ಗತಿಯೇ

ಇಲ್ಲದಂತಾಯಿತು. **"ತದೇವಾನು ಪ್ರಾವಿಶತ್"** ಅವನೇ ಪ್ರವೇಶಮಾಡಿದನೆಂಬ ಶ್ರುತಿಯೇನೋ ಉಂಟು. ಆ ಶ್ರುತಿಯಾದರೂ ನಮ್ಮಗಳಿಗೆ ಅತೀಂದ್ರಿಯ ವಿಷಯದಲ್ಲಿ ಜ್ಞಾನವನ್ನುಂಟು ಮಾಡುವದಕ್ಕೆ ಕಾರಣವಾಗಿರುತ್ತದೆ. ಆದಾಗ್ಯಾದರೂ ಯತ್ನವುಳ್ಳ ನಮ್ಮಂಥವರಿಗೆ ವಾಕ್ಯದಿಂದ ಜ್ಞಾನವು ದೊರೆಯಲೊಲ್ಲದು. ಆದ್ದರಿಂದ ಸದ್ಯಕ್ಕೆ **ತತ್ ಸೃಷ್ಟ್ವಾ** "ತದೇವಾನು ಪ್ರಾವಿಶತ್" ಈ ವಾಕ್ಯವೇ ಅನರ್ಥವನ್ನುಂಟುಮಾಡುವದರಿಂದ ಈ ವಾಕ್ಯವನ್ನೇ ನಿರಾಕರಿಸುವದು ಯೋಗ್ಯವಾಗಿರುತ್ತದೆ.

**ಸಿದ್ಧಾಂತಿ:.** ಹಾಗಲ್ಲ. ಬೇರೊಂದು ಅರ್ಥವಿರುತ್ತದೆ. ಚರ್ಚಾಯಿಲ್ಲದ ಸ್ಥಳದಲ್ಲಿ ಚರ್ಚೆಯನ್ನು ಮಾಡುವದು ಯೋಗ್ಯವಲ್ಲ. ಪ್ರಕೃತ ಶ್ರುತಿಗೆ ಮುಂದೆ ಹೇಳುವ ಅರ್ಥವು ಸಮೀಚೀನವಾಗಿರುತ್ತದೆ. ಅದನ್ನು ಲಕ್ಷ್ಯಗೊಟ್ಟು ಕೇಳಿರಿ. ಬ್ರಹ್ಮವಿತ್ತನು ಬ್ರಹ್ಮವೇ ಆಗುತ್ತಾನೆಂತಲೂ, ಆ ಬ್ರಹ್ಮವು ಸತ್ಯ ಜ್ಞಾನ ಅನಂತ ಲಕ್ಷಣವುಳ್ಳದ್ದಾಗಿರುವದೆಂದೂ, ಅದು ಈ ಬುದ್ಧಿರೂಪ ಗುಹೆಯಲ್ಲಿರುವದೆಂದೂ, ಶ್ರುತಿಯು ಹೇಳುವದರಿಂದ ಅದನ್ನು ಅರಿಯತಕ್ಕದೆಂಬುದೇ ಇಲ್ಲಿ ಪ್ರಕೃತ ವಿಷಯವಾಗಿದೆ. ಹಾಗಾದರೆ, ಆ ಬ್ರಹ್ಮವನ್ನು ತಿಳಿಯುವ ಬಗೆ ಹೇಗೆ? ಎಂದು ಆಲೋಚಿಸಲು; ಆಕಾಶಾದಿ ಅನ್ನಮಯ ಪರ್ಯಂತ ಕಾರ್ಯರೂಪ ಸೃಷ್ಟಿಯನ್ನು ಹೇಳಿ, ಬ್ರಹ್ಮವನ್ನು ತಿಳಿಯುವ ಮಾರ್ಗವನ್ನು ತಿಳಿಸಿತು. ಬಳಿಕ ಅದು ಅಪರೋಕ್ಷವಾಗುವ ಬಗೆ ಹೇಗೆನ್ನಲು? ಅನ್ನಮಯ ಕೋಶ ಮೊದಲುಗೊಂಡು ಆನಂದಮಯ ಪರ್ಯಂತರ, ಒಂದರ ಒಳಗೊಂದು ಇರುತ್ತವೆಂತಲೂ, ಒಂದಕ್ಕಿಂತ ಒಂದು ಸೂಕ್ಷ್ಮ ವ್ಯಾಪಕವಾಗಿರುತ್ತವೆಂತಲೂ ತೋರಿಸುತ್ತಾ, ಪರಮಾನಂದ ಚಿನ್ಹದ ಮೇಲಿಂದ ಕೇವಲ ಆನಂದರೂಪನಾಗಿಯೂ, ಆನಂದಮಯಕೋಶಕ್ಕೆ ಅಧಿಷ್ಠಾನರೂಪನಾಗಿಯೂ, ಸರ್ವ ವಿಕಲ್ಪಗಳಿಗೆ ಆಶ್ರಯವಾಗಿಯೂ, ನಿರ್ವಿಕಲ್ಪನಾಗಿಯೂ ಇದೇ ಕೋಶರೂಪ ಗುಹೆಯಲ್ಲಿ ಇದ್ದಾನೆ. ಈತನೇ ನಾನಿದ್ದೇನೆಂದು ತಿಳಿಯತಕ್ಕದ್ದು. ಹೀಗೆ ಆ ಬ್ರಹ್ಮವೇ ನಾನಿದ್ದೇನೆಂದು ತಿಳಿಯುವದು. ಇದೇ ಪ್ರವೇಶ ಶಬ್ದಕ್ಕೆ ಅರ್ಥವಾಗಿರುತ್ತದೆ. ಅಂದರೆ, ಆ ಬ್ರಹ್ಮವು ಪಂಚಕೋಶಗಳಿಗೆ ಅಧಿಷ್ಠಾನರೂಪದಿಂದಿರುವದರಿಂದಲೇ ಅದಕ್ಕೆ **ಪ್ರವೇಶ**ಎಂಬ ಶಬ್ದವು ಪ್ರಯೋಗವಾಗಿರುತ್ತದೆ.

ಈ ಉಕ್ತ ಅಪರೋಕ್ಷವಾಗಿರುವ **ಸ್ಥಳವನ್ನು** ಬಿಟ್ಟು ಬೇರೊಂದು ಸ್ಥಳದಲ್ಲಿ ಬ್ರಹ್ಮವು ತೋರಲಾರದು. ಯಾಕಂದರೆ, ನಿರ್ವಿಶೇಷವಾಗಿರುವದರಿಂದ; ನಿರ್ವಿಶೇಷವಾದ ಬ್ರಹ್ಮವು ಯಾವದಾದರೊಂದು ವಿಶೇಷಕ್ಕೆ ಸಂಬಂಧವಾದರೆ ಅಪರೋಕ್ಷಜ್ಞಾನಕ್ಕೆ ಕಾರಣವಾಗುತ್ತದೆ. ಇಲ್ಲದಿದ್ದರೆ ಆಗುವದಿಲ್ಲ. ಹೇಗಂದರೆ; ರಾಹು

ಚಂದ್ರ ಸೂರ್ಯರೊಡನೆ ವಿಶಿಷ್ಟ ಸಂಬಂಧವಾದರೆ ತೋರುತ್ತಾನೆ. ಇಲ್ಲದಿದ್ದರೆ ತೋರುವದಿಲ್ಲ. ಇದರಂತೆ ಅಂತಃಕರಣರೂಪ ಗುಹೆಗೂ ಆತ್ಮನಿಗೂ ಸಂಬಂಧವಾದರೆ; ಬ್ರಹ್ಮಾಪರೋಕ್ಷಕ್ಕೆ ಕಾರಣವಾಗಿರುವದು. ಯಾಕಂದರೆ; ಅಂತಃಕರಣವು ಆತ್ಮನಿಗೆ ಅತಿಸಮೀಪವಾಗಿರುವದರಿಂದಲೂ, ಪ್ರಕಾಶಾತ್ಮಕವಾಗಿರುವದರಿಂದಲೂ, ಅಪರೋಕ್ಷಜ್ಞಾನಕ್ಕೆ ಸ್ಥಾನವಾಗಿರುತ್ತದೆ. ಪ್ರಕಾಶದಿಂದೊಡಗೂಡಿದ ಘಟಾದಿಗಳು ಹೇಗೆ ಪ್ರಾಪ್ತಿಗೆ ಹೇತುಗಳಾಗಿರುತ್ತವೆಯೋ, ಅದರಂತೆ ಬುದ್ಧಿ ವೃತ್ತಿರೂಪ ಪ್ರಕಾಶದಿಂದ ವಿಶಿಷ್ಟವಾದ ಆತ್ಮನು ಪ್ರಾಪ್ತಿಯಾಗುತ್ತಾನೆ. ಆದ್ದರಿಂದ ಉಪಲಬ್ಧಿಗೆ ಹೇತುಭೂತವಾದ ಬುದ್ಧಿಗುಹೆಯಲ್ಲಿ ಆತ್ಮನಿದ್ದಾನೆಂದು ಹೇಳುವದಕ್ಕಾಗಿಯೇ ಅದನ್ನು ಸೃಷ್ಟಿಸಿ ಅದರಲ್ಲಿ ಪ್ರವೇಶಿಸಿದನೆಂದು ಶ್ರುತಿಯು ಹೇಳುತ್ತದೆ. ಯಾವ ಆಕಾಶಾದಿ ಕಾರಣಕಾರ್ಯರೂಪ ಸೃಷ್ಟಿಯನ್ನು ಮಾಡಿ, ಅದರಲ್ಲಿ ಪ್ರವೇಶಮಾಡಿದನೋ ಏನೋ ಅನ್ನುವ ಹಾಗೆ, ಬುದ್ಧಿಯೆಂಬ ಗುಹೆಯಲ್ಲಿದ್ದು ನೋಡುವವನಾಗಿಯೂ, ಕೇಳುವವನಾಗಿಯೂ ಮನನ ಮಾಡುವವನಾಗಿಯೂ, ತಿಳಿಯುವವನಾಗಿಯೂ, ವಿಶೇಷವಾಗಿರುವಂತೆ ಕಂಡು ಬರುತ್ತಾನೆ. ಇದೇ ಅವನ ಪ್ರವೇಶವು ಬೇರೊಂದು ರೀತಿಯಿಂದಲ್ಲ.

### ೨ ಸಂ, ೭ ಸೂ, ೯ ಪ, "ಕರ್ತೃತ್ವೇತಿ" ಸಿದ್ಧಾಂತದರ್ಶನಂ ೨-೩=೭

ಮಾಯೋಪಾಧಿಯಿಂದ ಮಹೇಶ್ವರನಿಗೆ ಜಗದುತ್ಪತ್ತ್ಯಾದಿಗಳ ಕರ್ತೃತ್ವವು ಸಂಭವಿಸುತ್ತದೆಂದು ವೇದವ್ಯಾಸ ಮಹರ್ಷಿಗಳಿಂದ ರಚಿತವಾದ ಸಿದ್ಧಾಂತದರ್ಶನದಲ್ಲಿ ಹೇಳಿರುತ್ತದೆ.

**" ಈಡಾಯತ್ತ ಮಾಯಃ ಸರ್ವಜ್ಞಃ ಪೂರ್ವಕರ್ತಾಽಂಕುರೋ ದ್ವಯಾತಿಗತ್ವಾತ್ "**

**ಟೀಕಾ:–** ಈಟ್=ಈಶ್ವರನು ಆಯತ್ತಮಾಯಃ= ಸ್ವಾಧೀನಪಡಿಸಿಕೊಂಡ ಮಾಯಾವುಳ್ಳವನು, ಸರ್ವಜ್ಞಃ=ಸಾಮಾನ್ಯ ವಿಶೇಷಗಳೆಲ್ಲವನ್ನು ತಿಳಿಯುವವನು, ಪೂರ್ವಕರ್ತಾ=ಸೃಷ್ಟಿ, ಸ್ಥಿತಿ, ಲಯಗಳಿಗೆ ಆದಿಕರ್ತನು, ಅಂಕುರಃ = ಜಗತ್ತಿಗೆ ಉಪಾದಾನ ಕಾರಣನು, ದ್ವಯಾತಿಗತ್ವಾತ್ = ರಜ ತಮ ಗುಣಗಳನ್ನು ದಬ್ಬಿ ವಿಶೇಷವಾದ ಸತ್ವಗುಣವುಳ್ಳವನಾದ್ದರಿಂದ.

**ತಾತ್ಪರ್ಯ:-** ಪಾರಮಾರ್ಥಿಕ ದೃಷ್ಟಿಯಿಂದ ನೋಡಿದರೆ, ಜೀವನು ಅಕರ್ತಾ ಅಭೋಕ್ತಾ ಇದ್ದಂತೆ, ಈಶ್ವರನಾದರೂ ಬ್ರಹ್ಮರೂಪನಿರುತ್ತಾನೆ. ಅವನಿಗೂ ಜಗತ್ತಿನ ಕರ್ತೃತ್ವವು ಇಲ್ಲ. ಆದರೆ ಮಾಯಾ ಉಪಾಧಿಯಾಗುವದರಿಂದ ಆ

ಮಾಯಾವೃತ್ತಿರೂಪ ಸಾಧನದಿಂದ, ಜಗತ್ತಿನ ಸಂಬಂಧವಾದ ಸಾಮಾನ್ಯ ಮತ್ತು ವಿಶೇಷ ಇವುಗಳನ್ನು ಅರಿಯುವದರಿಂದ ಈಶ್ವರನು ಸರ್ವಜ್ಞನೆಂದು ಹೇಳಿಸಿ ಕೊಳ್ಳುವನು, ಇದೇ ಮೇರೆಗೆ ಮಾಯೆಯಿಂದಲೇ ಜಗತ್ತಿನ ಉತ್ಪತ್ತಿ, ಸ್ಥಿತಿ ಲಯ ಗಳು ಆಗುತ್ತಿರಲು, ಅದಕ್ಕೆ ಈಶ್ವರನು ಆದಿಕರ್ತಾ ಎಂದು ಹೇಳಿಸಿಕೊಳ್ಳುತ್ತಾನೆ. ಈ ಮಾಯೋಪಾಧಿ ಮೂಲಕ ಈಶ್ವರನು ಜಗತ್ತಿಗೆ ಉಪಾದಾನ ಕಾರಣನೆಂದು ಹೇಳಿಸಿಕೊಳ್ಳುವನು. ಇಲ್ಲದಿದ್ದರೆ, ಇವನು ಉಪಾದಾನ ಕಾರಣನೂ ಅಲ್ಲ. ನಿಮಿತ್ತ ಕಾರಣನೂ ಅಲ್ಲ.

**ಶಂಕಾ**-ಈಶ್ವರನು ಜೀವನಂತೆ ಮಾಯೋಪಾಧಿಯಿಂದ ಯುಕ್ತನಾಗಿ ಸರ್ವ ಜ್ಞತ್ವ ಕರ್ತೃತ್ವ ಉಪಾದಾನತ್ವಾದಿಗಳುಳ್ಳವನಾದಮೇಲೆ,ತನ್ನ ನಿಜವನ್ನು ಮರೆತು ಬದ್ಧನಾಗ ಬೇಕಾಯಿತಲ್ಲ?

**ಸಮಾಧಾನ**-- ಈ ಜೀವನು ಅವಿದ್ಯೋಪಾಧಿಯಿಂದ ಕೂಡಿ ಕರ್ತೃತ್ವ ಭೋಕ್ತೃತ್ವಾದಿ ಅನಾತ್ಮಧರ್ಮಗಳೊಡನೆ, ಅಧ್ಯಾಸ ಯುಕ್ತನಾಗಿ ತನ್ನನ್ನು ತಾನು ಹೇಗೆ ಮರೆತು ಬದ್ಧನಾದನೋ! ಹಾಗೆ ಈಶ್ವರನು ಆಗಲಿಲ್ಲ. ಯಾಕಂದರೆ; ಆವ ರಣರೂಪಗಳಾದ ರಜತಮ ಗುಣಗಳನ್ನು ದಬ್ಬಿರುವ ಉತ್ಕರ್ಷವಾದ ಸತ್ವಗುಣೋ ಪಾಧಿಯಿಂದ ಕೂಡಿರುವನು. ಆದ್ದರಿಂದ ಅವನಿಗೆ ಆವರಣವಿಲ್ಲ. ( ಸ್ವರೂಪದ ಮರೆವೆಯಿಲ್ಲ) ಅದರಿಂದ ಅವನಿಗೆ ಬದ್ಧತ್ವವಿಲ್ಲ, ಈ ರೀತಿ ಈಶ್ವರನ ಲಕ್ಷಣವು ನಿರ್ದೋಷವಾಗಿದ್ದರೂ ಈಶ್ವರನ ಗುರ್ತನ್ನು ಚನ್ನಾಗಿ ಗುರ್ತಿಸಲಿಕ್ಕೆ ಆಗದೆ, ವಾದಿಗಳು ಈಶ್ವರತತ್ವ ವಿಷಯದಲ್ಲಿಯೂ ವಾದ ವಿವಾದಗಳನ್ನು ಮಾಡುತ್ತ ಲಿದ್ದಾರೆ.

**ತಾರ್ಕಿಕರು**-ಈಶ್ವರನು ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನೆಂಬ ಶ್ರುತಿಯಿರುವದರಿಂದಲೂ, ಜೀವರಿಗಿಂತಲೂ ವೈಲಕ್ಷಣ್ಯವುಳ್ಳವನಾಗಿ ನಿತ್ಯ ಜ್ಞಾನ ಇಚ್ಛಾಪ್ರಯತ್ನ ಶಾಲಿಯಾಗಿರುವನು. ಎಂದು ಹೇಳುತ್ತಾರೆ.

**ಹೈರಣ್ಯಗರ್ಭೋಪಾಸಕರು**-ಈಶ್ವರನು ತನ್ನ ಇಚ್ಛಾ ಮೂಲಕ ಸೃಷ್ಟಿ ಯನ್ನು ಮಾಡುತ್ತಾನೆಂದು ಹೇಳಿದರೆ, ಇಚ್ಛೆಯು ನಿತ್ಯವಾದ್ದರಿಂದ ಸೃಷ್ಟಿಯಾ ದರೂ ನಿತ್ಯವಾಗಬೇಕಾಯಿತು. ಮತ್ತು ಯಾವಾಗಲೂ ಸೃಷ್ಟಿಗಳು ಆಗುತ್ತಲೇ ಇರಬೇಕಾಯಿತು.ಕಾಲ ಮತ್ತು ಕರ್ಮ ಇವುಗಳ ಮೂಲಕ ಸೃಷ್ಟಿಯಾಗುವದರಿಂದ ಇಚ್ಛೆಗೆ ಕಾರಣತ್ವವನ್ನು ಹೇಳುವದು ಅಯೋಗ್ಯವಾಗಿರುತ್ತದೆ. ಮತ್ತು ಈಶ್ವರನು ನಿಮಿತ್ತವಿಲ್ಲದೆ ತನ್ನ ಇಚ್ಛಾಪೂರ್ವಕ ಸೃಷ್ಟಿಗಳನ್ನು ಮಾಡುತ್ತಾ ಹೋದರೆ, ಅವನಲ್ಲಿ ಭಕ್ತಿ ಪ್ರೇಮ ಮೊದಲಾದವುಗಳು ಇಲ್ಲದೆ ಹೋಗುತ್ತವೆ. ಅಂದರೆ ಈಶ್ವರ

ನಲ್ಲಿ ಅವಿಶ್ವಾಸವುಳ್ಳವರಾಗಿ ಉಪಾಸನೆಯನ್ನು ಮಾಡುವದಿಲ್ಲೆಂಬ ಭಾವವು. ಆದ್ದರಿಂದ ಸರ್ವ ಶರೀರಗಳ ಸಮಷ್ಟಿ ಅಭಿಮಾನಿಯಾದ ಹಿರಣ್ಯಗರ್ಭನೇ ಈಶ್ವರನು. ಇವನ ಮಹಾತ್ಮ್ಯಕೀರ್ತನವನ್ನು ಉದ್ಗೀಥ ಬ್ರಾಹ್ಮಣದಲ್ಲಿ ಮಾಡಿರುವದರಿಂದಲೂ, ಜೀವವಿಲಕ್ಷಣನಾದ್ದರಿಂದಲೂ, ಈತನೇ ಈಶ್ವರನು, ಎಂದು ಹೇಳುತ್ತಾರೆ.

**ವಿರಾಡುಪಾಸಕರು:**– ಆ ಲಿಂಗ ಶರೀರಿಯಾದ ಹೈರಣ್ಯಗರ್ಭನು ಸ್ಥೂಲ ಶರೀರವಿಲ್ಲದೆ ತೋರನು. ಆದ್ದರಿಂದ ಸಾವಿರ ಕಣ್ಣುಗಳುಳ್ಳವನೂ, ಸಾವಿರ ಪಾದಗಳುಳ್ಳವನೂ, ಸ್ಥೂಲ ಶರೀರಗಳ ಸಮಷ್ಟಿ ಅಭಿಮಾನಿಯಾದ ವಿರಾಟನೇ ಈಶ್ವರನು ಎಂದು ಹೇಳುತ್ತಾರೆ.

**ಪ್ರಜಾಪತಿ ಉಪಾಸಕರು:**- ಸಾವಿರಕಣ್ಣು ಕಾಲುಗಳಿದ್ದದ್ದಕ್ಕೆ ಈಶ್ವರನೆಂದು ಹೇಳಿದರೆ, ಸಾವಿರಾರು ಕಾಲುಗಳುಳ್ಳ ಕೀಟಾದಿಗಳಿಗೂ ಈಶ್ವರ ಎಂದು ಹೇಳಬೇಕಾದೀತು. ಆದ್ದರಿಂದ ಚತುರ್ಮುಖನಾದ ಬ್ರಹ್ಮನೇ ಈಶ್ವರನು ಎಂದು ಹೇಳುತ್ತಾರೆ.

**ವೈಷ್ಣವರು:**-ಆ ಚತುರ್ಮುಖ ಬ್ರಹ್ಮನಾದರೂ ನಮ್ಮ ವಿಷ್ಣುವಿನ ನಾಭಿಕಮಲದಿಂದ ಉದ್ಭವನಾದ್ದರಿಂದ ಈಶ್ವರನು ಅಲ್ಲ. ಅವನ ಉತ್ಪತ್ತಿಗೆ ಹೇತುಭೂತನಾದ ವಿಷ್ಣುವೇ ಈಶ್ವರನು ಎಂದು ಹೇಳುತ್ತಾರೆ.

**ಶೈವರು:**- ಆ ವಿಷ್ಣುವಾದರೂ ವರಾಹರೂಪದಿಂದ ನಮ್ಮ ಶಿವನ ಪಾದಗಳನ್ನು ಅಳೆಯುವದಕ್ಕೆ ಹೋಗಿ ಅಶಕ್ತನಾದನು. ಬಳಿಕ ಭಕ್ತಿಯುಕ್ತನಾಗಿ ಸ್ತುತಿಸಲಿಕ್ಕೆ ಪ್ರಸನ್ನನಾದನೆಂದು ಹೇಳುವದರಿಂದ ವಿಷ್ಣು ಈಶನಲ್ಲ, ಶಿವನೇ ಈಶನು ಎಂದು ಹೇಳುತ್ತಾರೆ.

**ಗಾಣಪತ್ಯಾ:**– ಅಂಥಾ ಶಿವನಾದರೂ ತ್ರಿಪುರಗಳನ್ನು ನಾಶಮಾಡುವದಕ್ಕೋಸ್ಕರ ಎಷ್ಟೋ ದಿವ್ಯ ಸಹಸ್ರ ವರ್ಷಗಳ ಪರ್ಯಂತರ ಕಷ್ಟಪಟ್ಟರೂ ಆಗದೇ ಹೋಗಲು; ನಮ್ಮ ಗಣಪತಿಯನ್ನು ಪೂಜಿಸಿ, ಅವನ ಮಹಿಮೆಯನ್ನು ಕೇಳಿ,ವಿಘ್ನಗಳನ್ನು ನಿವಾರಣೆಮಾಡಿದ ಬಳಿಕ ತ್ರಿಪುರ ದಹನವನ್ನು ಮಾಡಿದನು. ಆದ್ದರಿಂದ, ಗಣಪತಿಯೇ ಈಶ್ವರನು. ಇವನ ಮುಖದಿಂದ ಎಷ್ಟೋ ಬ್ರಹ್ಮಾಂಡಗಳು **ಗಚ್ಛಂತಿ ಜಾಯಂತೆ ಇತಿ ಗಜಾನನಃ,** ಹುಟ್ಟುತ್ತವೆ. ನಾಶವಾಗುತ್ತವೆ. ಆದ್ದರಿಂದ ಗಜಾನನವೆಂಬ ಹೆಸರು ಬಂದಿರುವದು. ಆದ್ದರಿಂದ ಗಣಪತಿಯೇ ಈಶ್ವರನು, ಎಂದು ಹೇಳುತ್ತಾರೆ.

**ಸೌರಾಃ**- ಗಣಪತಿಯೇ ಈಶ್ವರನಾದಮೇಲೆ ಅನ್ಯರಾದರೂ ಯಾಕಾಗಬಾರದು. ಸೂರ್ಯನು ಉದಯನಾಗದಿದ್ದರೆ ಯಾವ ಕರ್ಮಗಳೂ ನಡೆಯುವ

ದಿಲ್ಲ. ಆದ್ದರಿಂದ ಸೂರ್ಯನೇ ಬ್ರಹ್ಮನಿದ್ದಾನೆಂದು ಶ್ರುತಿಯು ಹೇಳುತ್ತದೆ. ಅದರಿಂದ ಸೂರ್ಯನೇ ಈಶ್ವರನು ಎಂದು ಹೇಳುತ್ತಾರೆ.

ಈ ರೀತಿ ಈಶ್ವರನ ವಿಷಯದಲ್ಲಿ ವಿವಾದ ಮಾಡಿದರೂ ಈಶ್ವರನು ಒಬ್ಬಾತ ನಿರುವನೆಂಬುದು ಎಲ್ಲರಿಗೂ ಇಷ್ಟವದೆ. ಆದ್ದರಿಂದ ಮಾಯೋಪಾಧಿಯುಳ್ಳವನೇ ಮಹೇಶ್ವರನೆಂದು ಉಕ್ತ ಲಕ್ಷದಿಂದ ಸಿದ್ಧಿಸುತ್ತದೆ. ಈಶ್ವರನು ವ್ಯಾಪಕನಾದ್ದರಿಂದ ಯಾರು ಯಾರು ಯಾವ ಯಾವದನ್ನು ಕುರಿತು ಈಶ್ವರನೆಂದು ಉಪಾಸನೆ ಮಾಡುತ್ತಾರೋ, ಅವರಿಗೆ ಆದರ ಫಲವನ್ನು ಕೊಡುತ್ತಾನೆ ಪೂಜ್ಯ ಪೂಜನಗಳ ಹೆಚ್ಚು ಕಡಿಮೆಯಿಂದ ಫಲವಾದರೂ ಹೆಚ್ಚು ಕಡಿಮೆಯಾಗುತ್ತದೆ.

**೨ ಸಂ, ೭ ಸೂ, ೧೨ ಪ, " ಅಯಮಾತ್ಮಾದಿ, ಶುಕರಹಸ್ಯ— ೧**

ಈ ಮಹಾವಾಕ್ಯಗಳು ನೀನೇ ಬ್ರಹ್ಮನಿದ್ದಿಯೆಂದು ಬೋಧಿಸುತ್ತದೆ.

**'ಪ್ರಜ್ಞಾನಂ ಬ್ರಹ್ಮ' 'ಅಹಂ ಬ್ರಹ್ಮಾಸ್ಮಿ' 'ತತ್ತ್ವಮಸಿ' 'ಅಯಮಾತ್ಮಾ ಬ್ರಹ್ಮ'**

**ಟೀಕಾ:**– ಪ್ರಜ್ಞಾನಂ=ನಿತ್ಯ ಪೂರ್ಣವಾದ ಜ್ಞಾನವೇ, ಬ್ರಹ್ಮ=ಬ್ರಹ್ಮವೆಂದೂ, ಅಹಂ=ನಾನು, ಬ್ರಹ್ಮ=ಪರಮಾತ್ಮನು, ಅಸ್ಮಿ=ಇದ್ದೇನೆ, ತತ್=ಅದೇ, ತ್ವಂ=ನೀನು, ಅಸಿ=ಇದ್ದೀ, ಈ ಅಪರೋಕ್ಷನಾದ ಆತ್ಮನೇ, ಬ್ರಹ್ಮ=ಪರಮಾತ್ಮನಿರುವನು.

ಈ ರೀತಿ ನಾಲ್ಕು ಮಹಾವಾಕ್ಯಗಳು ಇರುತ್ತವೆ. ಇವು ಶಿವಜೀವರಿಗೆ ಐಕ್ಯವನ್ನೂ ಬೋಧಿಸುತ್ತವೆ. ಸರ್ವಜ್ಞತ್ವ ಕಿಂಚಿಜ್ಞತ್ವಾದಿ ವಿರುದ್ಧ ಧರ್ಮಗಳಿರುವದರಿಂದ ಜೀವೇಶ್ವರರಿಗೆ ಐಕ್ಯತ್ವವು ಸಂಭವಿಸುವದಿಲ್ಲ. ಆದ್ದರಿಂದ ಸೋಯಂ ದೇವದತ್ತ ಎಂಬ ವಾಕ್ಯದಂತೆ ಭಾಗತ್ಯಾಗ ಲಕ್ಷಣದಿಂದ ವಿರುದ್ಧ ಧರ್ಮಗಳನ್ನು ತ್ಯಜಿಸಿ, ಅವಿರುದ್ಧವಾದ ಚೈತನ್ಯ ಲಕ್ಷ್ಯ ಭಾಗಕ್ಕೆ ಐಕ್ಯವು ಸಂಭವಿಸುತ್ತದೆ. ಈ ಸಂಪೂರ್ಣ ವಿಚಾರವನ್ನು ಇಲ್ಲಿ ಬರೆಯುತ್ತಾ ಹೋದರೆ, ವಿಸ್ತಾರವಾಗುವದೆಂಬ ಭೀತಿಯಿಂದ ಬಿಟ್ಟಿರುತ್ತೇವೆ. ಇವುಗಳ ಅರ್ಥವು ಪಂಚದಶೀಯ ಮಹಾವಾಕ್ಯ ವಿವೇಕ ಪ್ರಕರಣದಲ್ಲಿಯೂ ವಿವೇಕ ಚಿಂತಾಮಣಿಯಲ್ಲಿಯೂ ಅನೇಕ ವೇದಾಂತ ಗ್ರಂಥಗಳಲ್ಲಿಯೂ ವಿಸ್ತಾರವಾಗಿ ಉಂಟು. ಅಲ್ಲಿ ಅವಲೋಕನಮಾಡಬಹುದು.

**೩ ಸಂ, ೪ ಸೂ, ೧೨ ಪ, 'ದ್ವಿತಿಯಾದ್ವೈಭಯಂ ಭವತಿ' ಬೃ ೧-೪೨.**

ಪ್ರಜಾಪತಿಯು ಮೊದಲು ಏಕಾಕಿಯಾಗಿ ಭಯವುಳ್ಳವನಾದನು. ಬಳಿಕ ನನಗಿಂತ ಬೇರೇ ಯಾರೂ ಇಲ್ಲ. ನಾನು ಯಾಕೆ ಭಯಗ್ರಸ್ತನಾಗಬೇಕು ? ಎಂದು

ತನ್ನೊಳಗೆ ವಿಚಾರಮಾಡಲು, ಭಯವೆಲ್ಲವೂಹೋಗಿ ನಿರ್ಭಯನಾದನು ಎಂಬ ಈ ಅರ್ಥವನ್ನು ಶ್ರುತಿಯು ಹೇಳುತ್ತದೆ.

**' ಸೋಽಬಿಭೇತ್ತಸ್ಮಾದೇಕಾಕೀಬಿಭೇತಿ ಸಹಾಯ ಮೀಕ್ಷಾಂಚಕ್ರೆ ಯನ್ಮದನ್ಯನ್ನಾಸ್ತಿ ಕಸ್ಮಾನ್ನು ಬಿಭೇಮಿತಿ ತತ ಏವಾಸ್ಯ ಭಯಂ ವೀಯಾಯ ಕಸ್ಮಾದ್ಧ್ಯಭೇಷ್ಯತ್ ದ್ವಿತೀಯಾದ್ವೈ ಭಯಂ ಭವತಿ"**

**ಟೀಕಾ:-** ಸಃ=ಪ್ರಥಮ ಶರೀರವುಳ್ಳ ಪ್ರಜಾಪತಿಯು, ಅಬಿಭೇತ್=ಭಯವುಳ್ಳವನಾದನು, ತಸ್ಮಾತ್=ಆದ್ದರಿಂದ, ಏಕಾಕೀ=ಒಬ್ಬನೇ, ಬಿಭೇತಿ=ಭಯವುಳ್ಳವನಾಗುತ್ತಾನೆ, ಸಃ = ಆ ಪ್ರಜಾಪತಿಯು, ಹ = ನಿಶ್ಚಯವಾಗಿ, ಅಯಂ = ಈ, ಈಕ್ಷಾಂ = ಆತ್ಮ ದರ್ಶನರೂಪ ಆಲೋಚನೆಯನ್ನು, ಚಕ್ರೆ = ಮಾಡಹತ್ತಿದನು (ಏನಂದರೆ,) ಯತ್=ಯಾವ ಕಾರಣದಿಂದ, ಮತ್ = ನನಗಿಂತಲೂ, ಅನ್ಯತ್=ಬೇರೆಯಾದ ವಸ್ತು, ನಾಸ್ತಿ = ಇರುವದಿಲ್ಲ, (ಅಂದಮೇಲೆ) ಕಸ್ಮಾನ್ನು=ಯಾವ ಕಾರಣದೆಶೆಯಿಂದ , ಬಿಭೇಮಿ=ಭಯವುಳ್ಳವನಾಗಬೇಕು , ಇತಿ=ಹೀಗೆಂದು , ( ಆಲೋಚಿಸಲು ) ತತಏವ=ಯಥಾರ್ಥ ಜ್ಞಾನವಾದ್ದರಿಂದಲೇ, ಅಸ್ಯ=ಪ್ರಜಾಪತಿಯ, ಭಯಂ=ಭಯವು. ವೀಯಾಯ=ಚನ್ನಾಗಿ ಹೋಯಿತು, ಕಸ್ಮಾದ್ಧ್ಯಃ=ಯಾವುಗಳಿಂದ, ಭೇಷ್ಯತ್=ಭಯವುಳ್ಳವನಾದಾನು, ದ್ವಿತೀಯಾತ್=ಅನ್ಯದರಿಂದ, ವೈ=ನಿಶ್ಚಯವಾಗಿ, ಭಯಂ=ಭಯವು, ಭವತಿ=ಆಗುತ್ತದೆ.

**ತಾತ್ಪರ್ಯ:-** ಪುರುಷ ಶರೀರಧಾರಿಯಾದ ಆ ಪ್ರಜಾಪತಿಯು ಭಯವುಳ್ಳವನಾದನು. ಯಾಕಂದರೆ, ಶರೀರೇಂದ್ರಿಯಗಳುಳ್ಳವನು ನಾನು ಎಲ್ಲಿ ನಾಶನಾಗುತ್ತೇನೋ ಎಂದು ವಿಪರೀತವಾದ ಮಿಥ್ಯಾಜ್ಞಾನದಿಂದ ಏಕಾಕಿಯಾಗಿ ಭಯವುಳ್ಳವನಾದನು. ಅದರಿಂದ ಸಾಮಾನ್ಯವಾಗಿ ನಾವು ಒಬ್ಬರೇ ಇದ್ದಾಗ್ಯೆ ಹೆದರುವದುಂಟು. ಆದ್ದರಿಂದ ನಮ್ಮಗಳಂತೆಯೇ ಆ ಪ್ರಜಾಪತಿಯು ಭಯಕ್ಕೆ ಕಾರಣವಾದ ವಿಪರೀತ ಜ್ಞಾನವನ್ನು ಹೋಗಲಾಡಿಸುವದಕ್ಕಾಗಿ, ಯಥಾರ್ಥವಾದ ಆತ್ಮಜ್ಞಾನವನ್ನು ಆಲೋಚನೆ ಮಾಡಹತ್ತಿದನು. ಹೇಗಂದರೆ—ನನಗಿಂತಲೂ ಭಿನ್ನವಾಗಿರುವ ವಸ್ತುವೇ ಇಲ್ಲ. ಅಂದರೆ, ನನ್ನನ್ನು ನಾಶಮಾಡುವಂಥಾ ಅನ್ಯ ವಸ್ತುವೇ ಇಲ್ಲ. ಅಂದಮೇಲೆ; ನಾನು ಯಾಕೆ ಭಯವುಳ್ಳವನಾಗಬೇಕು. ಹೀಗೆಂದು ಆಲೋಚನೆ ಮಾಡಿದನು. ಯಥಾರ್ಥವಾದ ಆತ್ಮಸ್ವರೂಪದ ಜ್ಞಾನವಾಗುವದರಿಂದ ಪ್ರಜಾಪತಿಯಭಯವು ಚನ್ನಾಗಿ ನಾಶವಾಯಿತು. ಅಂದರೆ, ಆ ಪ್ರಜಾಪತಿಗೆ ಯಾವ ಭಯವಿತ್ತೋ?, ಅದು ಕೇವಲ ಅವಿದ್ಯಾ ನಿಮಿತ್ತವಾಗಿಯೇ ಇತ್ತು. ಪರಮಾರ್ಥ ವಸ್ತು ಸಾಕ್ಷಾತ್ಕಾರವಾಗುತ್ತಿರಲಿಕ್ಕೆ ಇಲ್ಲದಂತಾಯಿತು. ಪರಮಾರ್ಥವಸ್ತು ಸಾಕ್ಷಾತ್ಕಾರವಾಗುತ್ತಿರಲಿಕ್ಕೆ ಯಾವುದರಿಂದ ಭಯವುಳ್ಳವನಾದಾನು? ಭಯವೇ

ಇಲ್ಲೆಂಬ ಭಾವವು. ಯಾಕಂದರೆ; ತನಗಿಂತಲೂ ಭಿನ್ನವಾಗಿರುವದರಿಂದ ಭಯ ವಾಗಬೇಕು. ತನಗಿಂತಲೂ ಭಿನ್ನವಾದದ್ದು. ಅದು ಅವಿದ್ಯೆಯಿಂದ ಉತ್ಪನ್ನ ವಾಗಿರಲಿಕ್ಕೇಬೇಕು. ಯಥಾರ್ಥ ಜ್ಞಾನದಿಂದ ಎಲ್ಲ ಕಡೆಗೂ ಏಕತ್ವವನ್ನು ಅವ ಲೋಕಿಸುತ್ತಿರಲು; ಆಗ್ಯೆ ಶೋಕಮೋಹಗಳಿಲ್ಲಿ, ಭಯಕ್ಕೆ ಕಾರಣವಾದ ಅನ್ಯ ವಸ್ತುವಾದರೂ ಎಲ್ಲಿ ಪ್ರತೀತಿಯಾದೀತು. ಅಂದರೆ ಏಕತ್ವಜ್ಞಾನದಿಂದ ಭಯಕ್ಕೆ ಕಾರಣವಾದ ಅವಿದ್ಯೆಯೇ ನಾಶವಾಗುವದೆಂಬುದು ಯುಕ್ತವಾಗಿರುತ್ತದೆ. ಯಾಕಂದರೆ ಪ್ರತಿದ್ವಂದಿಯಾದ ಎರಡನೇ ವಸ್ತುವಿನಿಂದ ಭಯವಾಗುತ್ತದೆ. ಏಕತ್ವಜ್ಞಾನದಿಂದ ದ್ವಿತೀಯ ವಸ್ತುವೇ ಗೋಚರವಾಗುವದಿಲ್ಲ. ಅಂದಮೇಲೆ ಭಯವೆಲ್ಲಿಂದ ಬಂದೀತು? ಇಲ್ಲವೆಂಬ ತಾತ್ಪರ್ಯವು.

**ಪ್ರಶ್ನೆ:-** ಪ್ರಜಾಪತಿಯು ಏಕಾಕಿಯಾಗಿದ್ದನು. ಅದರಿಂದಲೇ ಹೆದರಿದ ನೆಂದು ಹೇಳಿದಿರಿ. ಅವನಿಗೆ ಯಾರು ಬ್ರಹ್ಮೋಪದೇಶವನ್ನು ಮಾಡಿದರು. ಅವನಿಗೆ ಏಕತ್ವ ಜ್ಞಾನವಾದರೂ ಎಲ್ಲಿಂದ ಉತ್ಪನ್ನವಾಯಿತು? ಗುರುಶಾಸ್ತ್ರಗಳ ಉಪದೇಶ ವಿಲ್ಲದಿದ್ದರೂ ತನ್ನಷ್ಟಕ್ಕೆ ತಾನೇ ಪ್ರಕಟವಾಯಿತೆಂದು ಹೇಳಿದರೆ, ನಮ್ಮಗಳಿಗಾದರೂ ಹಾಗೇ ಆಗಬೇಕು. ಜನ್ಮಾಂತರಗಳಲ್ಲಿದ್ದ ಆತ್ಮಜ್ಞಾನದ ಸಂಸ್ಕಾರವು ಈ ಜನ್ಮದಲ್ಲಿ ಉದಯವಾಗಿರುತ್ತದೆಂದು ಹೇಳಿದರೆ, ಏಕತ್ವಜ್ಞಾನವು ಅನರ್ಥವಾಗಿರುವದೆಂಬ ಪ್ರಸಂಗವು ಪ್ರಾಪ್ತವಾಗುವದು. ಯಾಕಂದರೆ ಪ್ರಜಾ ಪತಿಯ ಹಿಂದಿನ ಜನ್ಮಗಳಲ್ಲಿ ಏಕತ್ವ ಜ್ಞಾನವಿದ್ದರೂ ಬಂಧನಕ್ಕೆ ಕಾರಣವಾದ ಅವಿದ್ಯೆಯನ್ನು ನಾಶಮಾಡಲಿಲ್ಲ. ಆದ್ದರಿಂದಲೇ ಪ್ರಜಾಪತಿಯು ಅವಿದ್ಯೆ ಯಿಂದೊಡಗೂಡಿದವನಾದ್ದರಿಂದಲೇ ಭಯವುಳ್ಳವನಾದನು. ಇದೇ ಮೇರೆಗೆ ಸರ್ವರಲ್ಲಿ ಆಗಿರುವ ಏಕತ್ವ ಜ್ಞಾನವು ಅನರ್ಥವನ್ನೇ ಹೊಂದುತ್ತದೆ. ಅಂತ್ಯ ದಲ್ಲಿ ಆದ ಏಕತ್ವ ಜ್ಞಾನವೇ ಅವಿದ್ಯೆಯನ್ನು ನಿವೃತ್ತಿ ಮಾಡುತ್ತದೆಂದು ಹೇಳಿದರೆ; ಅದು ಸಂಭವಿಸುವದಿಲ್ಲ. ಯಾಕಂದರೆ ಪೂರ್ವ ಜನ್ಮದಲ್ಲಿದ್ದಾಗ್ಯೆ ಹೇಗೆ ನಿವೃತ್ತಿ ಯನ್ನು ಮಾಡಿಲ್ಲವೋ; ಹಾಗೇ ಉತ್ತರ ಜನ್ಮದಲ್ಲಿ ಯಾದರೂ ಏಕತ್ವ ಜ್ಞಾನವು ಅವಿದ್ಯಾ ನಿವೃತ್ತಿಯನ್ನು ಮಾಡುವದು ನಿಯಮವಲ್ಲ. ಆದ್ದರಿಂದ ಏಕತ್ವ ಜ್ಞಾನವು ಅನರ್ಥವುಳ್ಳದ್ದಾಗಿರುತ್ತದೆ.

**ಉತ್ತರ:-** ಇದೇನೂ ದೋಷವಲ್ಲ. ಯಾಕಂದರೆ, ಉತ್ತಮವಾದ ಸಂಸ್ಕಾ ರವು ಪ್ರಕಟವಾಗುತ್ತದೆ. ಈ ರೀತಿಯಾಗುವದೂ ಕೂಡಾ ಲೋಕದಲ್ಲಿ ಕಂಡು ಬರುತ್ತದೆ. ಹೇಗಂದರೆ, ಪುಣ್ಯಕರ್ಮಗಳಿಂದ ಉದ್ಭವವಾದ ಸಂಸ್ಕಾರವುಳ್ಳವರು ಪೂರ್ವ ಜನ್ಮವನ್ನು ಬಿಟ್ಟು ಎರಡನೇ ಜನ್ಮದಲ್ಲಿ ಬರುತ್ತಿರಲು ಅವರಿಗೆ ಪ್ರಜ್ಞಾ, ಮೇಧಾ, ಸ್ಮೃತಿ ಮೊದಲಾದವುಗಳು ವಿಶಾಲವಾಗಿರುವದು ಕಂಡುಬರುತ್ತದೆ.

ಹಾಗೇ ಪ್ರಜಾಪತಿಗಾದರೂ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಇವುಗಳಿಗೆ ವಿಪರೀತವಾಗಿ ಯಾವ ಕಾರಣಗಳುಂಟೋ, ಅವು ಎಲ್ಲಾ ನಾಶವಾದ್ದರಿಂದಲೂ, ಪರಿಶುದ್ಧ ಪುಣ್ಯಮಯುಗಳಾದ ಶರೀರೇಂದ್ರಿಯಂಗಳಿಂದ ಕೂಡಿದ ಜನ್ಮವನ್ನು ತಾಳುತ್ತಿರಲಿಕ್ಕೆ, ಗುರುಶಾಸ್ತ್ರೋಪದೇಶ ಸಾಧನವಿಲ್ಲದಿದ್ದರೂ, ಏಕತ್ವಜ್ಞಾನವು ಉದ್ಭವವಾಗುತ್ತದೆ. ಹಾಗೇ ಸ್ಮೃತಿಯೂ ಕೂಡಾ ಇರುತ್ತದೆ.

'ಜ್ಞಾನಮಪ್ರತಿಘಂ ಯಸ್ಯ ವೈರಾಗ್ಯಂಚ ಜಗತ್ಪತೇಃ।
ಐಶ್ವರ್ಯಂಚೈವ ಧರ್ಮಶ್ಚ ಸಹಸಿದ್ಧಂ ಚತುಷ್ಟಯಂ ॥

ಜನ್ಮಾಂತರ ಸುಕೃತಶಾಲಿಗಳಿಗೆ ಅಪ್ರತಿಬದ್ಧವಾದ ಜ್ಞಾನ, ವೈರಾಗ್ಯ, ಐಶ್ವರ್ಯ, ಧರ್ಮ ಈ ನಾಲ್ಕು ಕೂಡಿಯೇ ಉತ್ಪನ್ನಗಳಾಗುತ್ತವೆ ಎಂದು ಹೇಳುತ್ತದೆ.

ಪ್ರಶ್ನೆ- ಹಾಗಾದರೆ, ಪ್ರಜಾಪತಿ ಜನ್ಮವೆತ್ತಿದ ಕೂಡಲೇ ಅವನಿಗೆಜ್ಞಾನವಿದ್ದ ಬಳಿಕ ಭಯವಾಗಬಾರದಾಗಿತ್ತು. ಆದಿತ್ಯನೊಡನೆ ತಮವು ಹೇಗೆ ಉದಯವಾಗುವದಿಲ್ಲವೋ; ಹಾಗೆ ಜ್ಞಾನದೊಡನೆ ಭಯವು ಉತ್ಪನ್ನವಾಗಲಾರದು.

ಉತ್ತರ- ಹಾಗಲ್ಲ. ಜ್ಞಾನಾದಿಗಳು ಕೂಡಿಯೇ ಉತ್ಪನ್ನಗಳಾಗುತ್ತವೆಂದು ಶ್ಲೋಕದಲ್ಲಿ ಹೇಳಿದ್ದು, ಗುರುಶಾಸ್ತ್ರಗಳ ಉಪದೇಶವಿಲ್ಲದೆ, ಪ್ರಾಪ್ತಗಳಾಗುತ್ತವೆಂಬ ಭಾವವು. ಅಥವಾ ಜ್ಞಾನೋತ್ಪತ್ತಿಪೂರ್ವದಲ್ಲಿ ಭಯವಾಗುವದು ಸಹಜವೇ, ಜ್ಞಾನವಾದ ಮೇಲಾದರೂ ಅಜ್ಞಾನಲೇಶವಿರುವದರಿಂದ ಭಯವಾದರೂ ಇರಬಹುದು. ಏನೂ ವಿರೋಧವಿಲ್ಲ. ಇಲ್ಲದಿದ್ದರೆ, ನೀನು ಹೇಳಿದಮೇರೆಗೆ ಒಡಂಬಟ್ಟರೆ, ಶ್ರುತಿಸ್ಮೃತಿಗಳಿಗೆ ವಿರೋಧವಾಗುತ್ತದೆ.

ಪ್ರಶ್ನೆ- ಪ್ರಜಾಪತಿಯಂತೆ ಜನ್ಮಾಂತರಗಳಲ್ಲಿ ಮಾಡಿದ ಧರ್ಮವೇ ಕಾರಣವೆಂದು ಹೇಳಿದರೆ, ಇಂದ್ರಿಯ ನಿಗ್ರಹವುಳ್ಳವನೂ ಶ್ರದ್ಧಾವಂತನೂ ಜ್ಞಾನವನ್ನು ಪಡೆಯುತ್ತಾನೆ. ನಮಸ್ಕಾರ, ಪ್ರಶ್ನೆ, ಸೇವೆ ಇವುಗಳಿಂದ ಜ್ಞಾನವನ್ನು ತಿಳಿ. ಎಂದು ಶ್ರುತಿ ಸ್ಮೃತಿಗಳು ಶ್ರದ್ಧಾ ನಮಸ್ಕಾರ ಮೊದಲಾದವುಗಳು ಜ್ಞಾನಕ್ಕೆ ಸಾಧನಗಳೆಂದು ಹೇಳುವದು ವ್ಯರ್ಥವಾಗಬೇಕಾದೀತು.

ಉತ್ತರ:-ನಿಮಿತ್ತ, ವಿಕಲ್ಪ, ಸಮುಚ್ಚಯ, ಗುಣಾಗುಣಗಳು ಕಾರ್ಯೋತ್ಪತ್ತಿಯಲ್ಲಿ ವಿಶೇಷ ಸಂಭಂಧವಾದ್ದರಿಂದ ಶ್ರದ್ಧಾದಿ ವಿಧಿಗಳು ಅನರ್ಥವಾಗುವದಿಲ್ಲ. ಯಾಕಂದರೆ ಲೋಕದಲ್ಲಿ ಪ್ರತಿಯೊಂದು ಕಾರ್ಯವು ಅನೇಕನಿಮಿತ್ತಗಳಿಂದ ಆಗುವದು. ಕಂಡು ಬರುತ್ತದೆ. ಹೇಗಂದರೆ, ಒಂದು ರೂಪ ಜ್ಞಾನ

ವಾಗುವಕಾರ್ಯದಲ್ಲಿ ಪ್ರಕಾಶವಿಲ್ಲದಿದ್ದರೂ ಕತ್ತಲೆಯಲ್ಲಿಯೇ ರೂಪಜ್ಞಾನವು ಗೂಗಿ ಮೊದಲಾದವುಗಳಿಗೆ ಸಂಭವಿಸುತ್ತದೆ. (ಇದು ವಿಕಲ್ಪ) ಯೋಗಿಗಳಿಗೆ ಕೇವಲ ಮನೋಸಂಬಂಧವಾದರೆ ರೂಪಜ್ಞಾನವಾಗುತ್ತದೆ. (ನಿಮಿತ್ತ) ನಮ್ಮ ಗಳಿಗೆ ಸೂರ್ಯಚಂದ್ರಾದಿ ಪ್ರಕಾಶ ಸಹಿತವಾದ ವಿಷಯಗಳು ನೇತ್ರಸಂಯೋಗ ವಾದರೆ ರೂಪಜ್ಞಾನವಾಗುತ್ತದೆ. ಇದು (ಸಮುಚ್ಚಯ) ಹಾಗೂ ಬೆಳಕು ವಿಶೇಷ ವಾಗಿಯೂ ಮಂದವಾಗಿಯೂ ಇರೋಣದರಿಂದ ರೂಪಜ್ಞಾವು ಹೆಚ್ಚುಕಡಿಮೆ ಯಾಗಿಯೂ ತೋರಬಹುದು. (ಇದು ಗುಣಾಗುಣಭೇದವು)

ಇದೇ ಮೇರೆಗೆ ಆತ್ಮೈಕತ್ವಜ್ಞಾನವಾದರೂ ಕೆಲವುಕಡೆಯಲ್ಲಿ ಜನ್ಮಾಂತರ ಗಳಲ್ಲಿ ಮಾಡಲ್ಪಟ್ಟ ಕರ್ಮವೇ ನಿಮಿತ್ತವಾಗಿರುತ್ತದೆ. ಹೇಗೆ ಪ್ರಜಾಪತಿ ಗಾದಂತೆ, ಕೆಲವು ಕಡೆಯಲ್ಲಿ ತಪಸ್ಸು ನಿಮಿತ್ತವಾಗಿರುತ್ತದೆ. ಆದ್ದರಿಂದ ತಪಸ್ಸಿ ನಿಂದ ಬ್ರಹ್ಮಜಿಜ್ಞಾಸನಮಾಡು. ಎಂಬ ಶ್ರುತಿಇರುವದು. ಕೆಲವುಕಡೆ ಆಚಾರ್ಯ ನಿದೊಂಡಗೂಡಿದವನೇ ಬ್ರಹ್ಮವನ್ನು ತಿಳಿಯುತ್ತಾನೆಂದು ಹೇಳುತ್ತದೆ. ಶ್ರದ್ಧಾ ವಂತನು ಜ್ಞಾನವನ್ನು ಪಡೆಯುತ್ತಾನೆ. ನಮಸ್ಕಾರಾದಿಗಳಿಂದ ತಿಳಿ. ಆಚಾರ್ಯ ರಿಂದಲೇ ಕೇಳತಕ್ಕದ್ದು, ನೋಡತಕ್ಕದ್ದು. ಎಂಬ ಅನೇಕ ಶ್ರುತಿಸ್ಮೃತಿಗಳಿಂದ ಅನೇಕ ಶ್ರದ್ಧಾದಿ ಉಪಾಯಗಳಿಂದ ಜ್ಞಾನವಾಗುತ್ತದೆ. ಶ್ರದ್ಧಾದಿಗಳು ಅಧ ರ್ಮಾದಿಗಳನ್ನು ಕಳೆಯುತ್ತವೆ. ವೇದಾಂತ ಶ್ರವಣ, ಮನನ, ನಿಧಿಧ್ಯಾಸನ ಗಳಿಂದ ಜ್ಞೇಯವಾದ ಬ್ರಹ್ಮವು ಸಾಕ್ಷಾತ್ಕಾರವಾಗುತ್ತದೆ. ಪಾಪಾದಿ ಪ್ರತಿ ಬಂಧಕಗಳು ಕ್ಷಯವಾಗುತ್ತಿರಲಿಕ್ಕೆ ಮನಸ್ಸಿಗೆ ಯಥಾರ್ಥಜ್ಞಾನವಾಗುವದು ಸ್ವಭಾವಸಿದ್ಧವಾಗಿರುತ್ತದೆ. ಆದ್ದರಿಂದ ಶ್ರದ್ಧಾದಿಗಳು ಜ್ಞಾನಕ್ಕೆ ಕಾರಣಗಳು ಆಗುವದಿಲ್ಲೆಂಬುದು ಒಂದು ಕಾಲಕ್ಕೂ ಸಂಭವಿಸಲಾರದು.

**೩ ಸಂ, ೪ ಸೂ೧೩ ಪ "ನೇಹನಾನಾಸ್ತಿ" ಕ-೨-೧-೧೧**
**೩ಸ, ೪ಸೂ, ೧೪ ಪ 'ಮೃತ್ಯೋಸ್ಯ ಮೃತ್ಯುಂ, ಬೃ ೪-೪-೧೯**

ಬ್ರಹ್ಮದಲ್ಲಿ ಭೇದವು ಕಿಂಚಿತ್ತಾದರೂ ಇಲ್ಲೆಂತಲೂ, ಆ ಭೇದವನ್ನು ಕಾಣು ವವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆಂತಲೂ, ಶ್ರುತಿಗಳು ಹೇಳು ತ್ತವೆ.

**'ಮನಸೈವೇದ ಮಾಪ್ತವ್ಯಂ ನೇಹನಾನಾಸ್ತಿ ಕಿಂಚನ ।**
**ಮೃತ್ಯೋಃ ಸಃ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ||**

**ಟೀಕಾ:-** ಇದಂ=ಈ ಅಖಂಡೈಕರಸವಾದ ಬ್ರಹ್ಮವನ್ನು, ಮನಸಾಏವ= ಗುರುಶಾಸ್ತ್ರಗಳ ಉಪದೇಶದಿಂದ ಸಂಸ್ಕೃತವಾದ ಮನಸ್ಸಿನಿಂದಲೇ, ಆಪ್ತವ್ಯಂ=

ಅದೇ ನಾನೆಂದು ತಿಳಿಯತಕ್ಕದ್ದು, ಇಹ=ಬ್ರಹ್ಮದಲ್ಲಿ, ನಾನಾ=ಭೇದವು, ಕಿಂಚನ= ಸ್ವಲ್ಪಾದರೂ, ನಾಸ್ತಿ=ಇರುವದಿಲ್ಲ. ಯಃ=ಯಾವನಾದರೂ ಭೇದವುಂಟೆಂದು ತಿಳಿದರೆ, ಸಃ = ಅವನು, ಮೃತ್ಯೋಃ=ಮರಣದಿಂದ, ಮೃತ್ಯುಂ=ಮರಣವನ್ನು, ಗಚ್ಛತಿ=ಹೊಂದುತ್ತಾನೆ.

**ತಾತ್ಪರ್ಯ:-** ಸ್ವಪ್ನದಲ್ಲಿ ನಾನತ್ವವಿಲ್ಲದಿದ್ದರೂ ನಾನತ್ವವನ್ನು ಆರೋಪಿಸಿ ಕೊಂಡು ಸತ್ಯವೆಂದೇ ಹೇಗೆ ವ್ಯವಹರಿಸುತ್ತಾನೋ, ಹಾಗೇ ಜಾಗರಣದಲ್ಲಿ ಯಾದರೂ ಭೇದವಿಲ್ಲದ ಬ್ರಹ್ಮದಲ್ಲಿ ಭೇದವನ್ನು ಆರೋಪಿಸಿ, ಆ ಭೇದವೂ ಸತ್ಯ ವೆಂದೇ ಯಾವಾತನು ವ್ಯವಹಾರ ಮಾಡುತ್ತಾನೋ, ಅವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ. ಅಂದರೆ ಪುನಃ ಪುನಃ ಜನನ ಮರಣಗಳನ್ನು ಹೊಂದುತ್ತಾನೆ. ಆದ್ದರಿಂದ ಆ ಅಖಂಡೈಕರಸವಾದ ಬ್ರಹ್ಮವೇ ನಾನೆಂದು ತಿಳಿಯ ತಕ್ಕದ್ದು. ಈ ಭೇದವು ಅವಿದ್ಯಾ ಮೂಲಕ ಉಪಾಧಿ ದೃಷ್ಟಿಯಿಂದ ಆದದ್ದೇ ಹೊರ್ತು ವಾಸ್ತವಿಕ ವಿಲ್ಲೆಂಬ ಭಾವವು.

**೪ ಸಂ, ೨ ಸೂ ೪ ಪ "ವಿಕಾರೋನಾಮ ರೂಪಂ" ಛಾಂ ೬-೧-೪**

ಘಟವೆಂಬ ಹೆಸರಿನಿಂದಲೂ ತಳದಲ್ಲಿ ವಿಸ್ತಾರ ಕಂಠದಲ್ಲಿ ಸಂಕೋಚ ಲಕ್ಷಣ ರೂಪದಿಂದಲೂ ತೋರುತ್ತಿರುವ ಯಾವ ವಿಕಾರವೆಂಬ ಹೆಸರಿನ ಘಟವುಂಟೋ, ಇದು ಮೃತ್ತಿಕೆಯಿಂದ ಬೇರಾಗಿ ತೋರುವದಿಲ್ಲ. ಆದ್ದರಿಂದ ಕಾರಣವಾದ ಮೃತ್ತಿ ಕೆಯು ಸತ್ಯ; ಕಾರ್ಯವಾದ ಘಟವು ಮಿಥ್ಯೆಯೆಂದು ಶ್ರುತಿಯು ಹೇಳುತ್ತದೆ.

**"ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋನಾಮಧೇಯಂ ಮೃತ್ತಿಕೇ ತ್ಯೇವ ಸತ್ಯಂ"**

**ಟೀಕಾ:-**ಹೇ ಸೋಮ್ಯ=ಎಲೈ ಶಿಷ್ಯನೇ!, ಯಥಾ=ಹೇಗೆ, ಏಕೇನ=ಒಂದಾದ ಮೃತ್ಪಿಂಡೇನ = ಮಣ್ಣಿನ ಮುದ್ದಿಯಿಂದ, ಸರ್ವಂ = ಘಟಶರಾವಾದಿಗಳು, ಮೃನ್ಮಯಂ=ಮಣ್ಣಿನ ರೂಪಗಳೆಂದು, ವಿಜ್ಞಾತಂ=ಅರಿಯಲ್ಪಟ್ಟದ್ದು, ಸ್ಯಾತ್= ಆಯಿತು. (ಯಾಕಂದರೆ)ವಾಚಾರಂಭಣಂ=ವಾಣಿಯಿಂದ ಆರಂಭಮಾಡಿದ, ನಾಮ ಧೇಯಂ=ನಾಮಮಾತ್ರ ವ್ಯವಹಾರ ಯೋಗ್ಯವಾದದ್ದು, ವಿಕಾರಃ=ಘಟವಿರುತ್ತದೆ ಮೃತ್ತಿಕೇತ್ಯೇವ=ಮಣ್ಣುಮಾತ್ರವೇ, ಸತ್ಯಂ=ಯಥಾರ್ಥವಾಗಿರುತ್ತದೆ.

**ತಾತ್ಪರ್ಯ:-** ಹೇ ಸೋಮ್ಯ! ಲೋಕದಲ್ಲಿ ಕಾರಣಗಳಾದ ಮೃತ್ತಿಕಾ ಸುವ ರ್ಣಾದಿಗಳಜ್ಞಾನವಾಗುವದರಿಂದ ಅವುಗಳ ಕಾರ್ಯಗಳಾದ ಘಟಾದಿಗಳೂ ಕಟ ಕಾದಿಆಭರಣಗಳೂ ಮೃನ್ಮಯ ಸುವರ್ಣಮಯಗಳೆಂದು ತಿಳದದ್ದೇ ಆಯಿತು.

**ಶಂಕಾ:–** ಕಾರಣವಾದ ಮೃತ್ಪಿಂಡದ ಜ್ಞಾನವಾಗುತ್ತಿರಲಿಕ್ಕೆ ಅನ್ಯವಾದ ಕಾರ್ಯದ ಜ್ಞಾನವು ಹೇಗೆ ಆಗುವದು ?

**ಸಮಾಧಾನ:-** ಇದೇನೂ ದೋಷವಲ್ಲ. ಯಾಕಂದರೆ, ಕಾರಣದಿಂದ ಕಾರ್ಯವು ಭಿನ್ನವಲ್ಲ. ಕಿಂತು ಅಭೇದವಾಗಿರುತ್ತದೆ. ಅನ್ಯವನ್ನು ತಿಳಿಯೋಣದ ರಿಂದ ಬೇರೊಂದು ತಿಳಿಯುವದಿಲ್ಲೆಂದು ನೀನು ಏನು ಹೇಳುತ್ತೀ,ಅದು ಸತ್ಯವೇ. ಆದರೆ, ಅದು ಕಾರಣಕ್ಕಿಂತಲೂ ಕಾರ್ಯವು ಭಿನ್ನವಾಗಿರಲಿಕ್ಕೇಬೇಕು. ಹಾಗೇನೂ ಇದು ಕಾರಣಕ್ಕಿಂತಲೂ ಕಾರ್ಯವು ಬೇರೆಯಾಗಿಲ್ಲ. ಹೇಗಂದರೆ, ಲೋಕದಲ್ಲಿಯಾದರೂ ಇದು ಕಾರಣವು, ಇದು ಇದರ ವಿಕಾರವು (ಕಾರ್ಯವು) ಹೀಗೆಂದು ನುಡಿಯುತ್ತಾರೆ. ಆದರೆ ಇದರ ರಹಸ್ಯವನ್ನು ಕೇಳು.ಆ ಕಾರ್ಯವಾದ ಘಟವು ಯಾವದೆಂದು ಕೇಳಿದರೆ, ವಾಣಿಯಿಂದ ಉಚ್ಚರಿಸುವ ನಾಮಮಾತ್ರ ವಾಗಿರುವದು. ಅಂದರೆ ವಾಗೀಂದ್ರಿಯ ಆಶ್ರಯವಾದ ನಾಮವೇ ಹೊರ್ತು ವಿಕಾರವೆನ್ನುವದು ಒಂದು ವಸ್ತು ಅಲ್ಲ. ಕಿಂತು ಪರಮಾರ್ಥವಾಗಿ ಮೃತ್ತಿಕೆಯೇ ಸತ್ಯವಾಗಿರುತ್ತದೆ.

ಳ ಸಂ., ೩ ಸೂ., ೧೫ ಪ. "ನೇತಿ ನೇತೀತಿ" ಬೃ. ೪-೪-೨೨

ಈ ಆತ್ಮನು ಕರ್ಮಫಲಗಳಂತೆ ಸಾಧನಗಳಿಂದ ಸಾಧ್ಯನಾಗುವವನಲ್ಲ. ಯಾಕಂದರೆ, ವೇದ್ಯನಲ್ಲ. ಕಿಂತು, ಅವೇದ್ಯನಾಗಿರುತ್ತಾನೆ. ಆದ್ದರಿಂದಲೇ ಸ್ವತಃ ಸಿದ್ಧನಿರುತ್ತಾನೆ ಎಂಬುದನ್ನು ಹೇಳುತ್ತದೆ.

"ಸ ಏಷ ನೇತಿ ನೇತ್ಯಾತ್ಮಾಽಗೃಹ್ಯೋ ನ ಹಿ ಗೃಹ್ಯತೇ ಶೀರ್ಯೋ ನ
ಹಿ ಶೀರ್ಯತೇ ಸಂಗೋ ನ ಹಿ ಸಜ್ಜತೇ ಸಿತೋನ ವ್ಯಥತೇ ನ ರಿಷ್ಯತಿ"

**ಟೀಕಾ:–** ಸಃ=ಯಾವ, ಏಷಃ=ಈ ಆತ್ಮನು, ನ ಇತಿ=ತಿಳಿಸಿಕೊಳ್ಳುವದು ಆತ್ಮವಲ್ಲ, ನೇತಿ=ದೃಶ್ಯವಾದದ್ದು ಆತ್ಮವಲ್ಲ, ಆತ್ಮಾ=ಅಪರೋಕ್ಷನಾದ ಈ ಆತ್ಮನು, ಅಗೃಹ್ಯಃ=ಹಿಡಿಯಲಿಕ್ಕೆ ಬಾರದವನು, ನಹಿಗೃಹ್ಯತೆ=ಯಾರಿಂದಲೂ ಹಿಡಿಯಲ್ಪಡುವದಿಲ್ಲ, ಅಶೀರ್ಯಃ=ಪರಿಣಾಮ ರಹಿತನು, ನಹಿ ಶೀರ್ಯತೆ= ಯಾವ ಕಾರಣದಿಂದಲೂ ರೂಪಾಂತರವನ್ನು ಹೊಂದುವದಿಲ್ಲ,ಅಸಂಗಃ=ಸಂಬಂಧ ವಿಲ್ಲದವನು, ನಹಿ ಸಜ್ಜತೆ=ಯಾವುದರಿಂದಲೂ ಕೂಡುವದಿಲ್ಲ, ಅಸಿತಃ=ಬಂಧ ರಹಿತನು, ನವ್ಯಥತೆ=ಯಾರಿಂದಲೂ ದುಃಖಪಡುವದಿಲ್ಲ, ನರಿಷ್ಯತಿ=ಯಾರಿಂದಲೂ ನಾಶವಾಗುವವನಲ್ಲ.

**ತಾತ್ಪರ್ಯ:-** ಯಾವ ಮಹಾತ್ಮರು ಪುತ್ರಕಳತ್ರವಿತ್ತಾದಿ ಈಷಣತ್ರಯ ವನ್ನು ಬಿಟ್ಟು ಆತ್ಮಸಾಕ್ಷಾತ್ಕಾರಕ್ಕೋಸ್ಕರ ಸನ್ಯಾಸ ಸ್ವೀಕಾರ ಮಾಡುತ್ತಾರೆ.

ಅಂದರೆ ನಮ್ಮಗಳಿಗೆ ಈ ಆತ್ಮನೇ ಪುತ್ರಪಿತ್ರಾದಿಗಳಾಗಿರುವನು ಎಂದು ತಿಳಿದು ಅವನನ್ನೇ ಅರಿಯುವದರಲ್ಲಿ ತತ್ಪರರು ಆಗಿರುತ್ತಾರೆ.

**ಶಂಕಾ:-** ಹಾಗಾದರೆ, ಆ ಆತ್ಮ ಪ್ರಾಪ್ತಿಯಾಗಬೇಕಾದರೆ, ಪ್ರಾಪ್ತಿಸಾಧನ ಗಳಾದ ಕರ್ಮಗಳನ್ನೇ ಆರಂಭ ಮಾಡಲಿ. ಸನ್ಯಾಸ ಸ್ವೀಕಾರ ಮಾಡುವದ ರಿಂದಲೂ ಅರಿಯುವದರಿಂದಲೂ ಏನು ಪ್ರಯೋಜನ ?

**ಸಮಾಧಾನ:-** ಈ ಅಪರೋಕ್ಷನಾದ ಆತ್ಮನು ಕರ್ಮಗಳಿಂದ ಸಂಬಂಧ ನಾಗುವದಿಲ್ಲ. ಮತ್ತು ಕರ್ಮದ ಫಲಗಳಾದ ಪ್ರಾಪ್ಯ, ವೈಕಾರಿಕ, ಸಂಸ್ಕಾರಿಕ, ಉತ್ಪಾದ್ಯಗಳಲ್ಲಿ ಒಂದು ಫಲರೂಪನೂ ಅಗುವದಿಲ್ಲ. ಈಗ ಹೇಳಿದ ಕರ್ಮಫಲ ಗಳಿಗೆ ವಿಲಕ್ಷಣವಾದ ಲಕ್ಷಣವುಳ್ಳವನಿರುತ್ತಾನೆ. ಆದ್ದರಿಂದಲೇ ಶ್ರುತಿಯು "ನೇತಿ ನೇತಿ" ಆತ್ಮನು ವೇದ್ಯನಾಗುವನಲ್ಲ. ವಿಷಯನಾಗುವನಲ್ಲ. ಅಂದರೆ, ಕರ್ಮಫಲದಂತೆ ಹೊಂದಲಿಕ್ಕೂ, ವಿಕಾರವಾಗುವದಕ್ಕೂ ಬರತಕ್ಕವನಲ್ಲ. ಕಿಂತು, ಯಾರಿಂದಲೂ ಗ್ರಹಿಸಲಿಕ್ಕೆ ಬರುವದಿಲ್ಲ. ಆದರಿಂದಲೇ ಅವನು ಕರ್ಮಗಳಿಂದ ಹೊಂದಲಿಕ್ಕೆ ಯೋಗ್ಯನಲ್ಲ. ಅಂದರೆ ಪ್ರಾಪ್ಯನು ಅಲ್ಲ. ವಿಕಾರರಹಿತನಿದ್ದಾನೆ. ಅದರಿಂದ ಯಾರಿಂದಲೂ ಯಾವುದರಿಂದಲೂ ರೂಪಾಂತರವನ್ನು ಹೊಂದುವನಲ್ಲ. ಆದ್ದರಿಂದ ವೈಕಾರಿಕನು ಅಲ್ಲ. ಸಂಗರಹಿತನಿರುವನು. ಅದರಿಂದ ಯಾ ದರಿಂದಲೂ ಸಂಬಂಧವಾಗುವದಿಲ್ಲ. ಸಂಸ್ಕಾರ್ಯನೂ ಅಲ್ಲ. ಬಂಧರಹಿತನು. ಅದರಿಂದ ಯಾರಿಂದಲೂ ಕಷ್ಟವನ್ನು ಹೊಂದುವನಲ್ಲ. ನಾಶನಾಗುವವನೂ ಅಲ್ಲ. ಆದ್ದರಿಂದ ಉತ್ಪಾದ್ಯ ಅಲ್ಲ. ಈ ರೀತಿ ಕರ್ಮಫಲಗಳಿಗೆ ವಿಲಕ್ಷಣನಾದವನು ಇದ್ದಾನೆ. ಸರ್ವ ಸಂಸಾರ ಧರ್ಮಕ್ಕೂ ವಿಲಕ್ಷಣನೂ, ಹಸಿವೆ ನೀರಡಿಕೆಗಳಿಲ್ಲದ ವನೂ, ಸ್ಥೂಲ, ಸೂಕ್ಷ್ಮ ಹ್ರಸ್ವ ದೀರ್ಘಾದಿ ಆಕಾರರಹಿತನೂ, ಜನ್ಮಜರಾಮರಣಾದಿ ಗಳಿಲ್ಲದವನೂ-ಉಪ್ಪಿನ ಹರಳಿನಂತೆ ಕೇವಲವಿಜ್ಞಾನೈಕರಸನೂ, ಸ್ವಯಂಜ್ಯೋತಿ ಸ್ವರೂಪನೂ, ಏಕಮೇವಾದ್ವಿತೀಯನೂ, ಕಾರ್ಯ ಕಾರಣರಹಿತನೂ, ಒಳಗಿರು ವವನೂ ಅಲ್ಲ, ಹೊರಗಿರುವವನೂ ಅಲ್ಲ. ಎಂಬ ಅನೇಕ ಲಕ್ಷಣಗಳಿಂದ ಜನಕ ಯಾಜ್ಞವಲ್ಕ್ಯರ ಸಂವಾದದಿಂದ ಯಾವ ಆತ್ಮನುನಿಶ್ಚಯಿಸಲ್ಪಟ್ಟಿರುವನೋ, ಅಂಥಾ ನಿರ್ವಿಶೇಷ ಆತ್ಮನನ್ನೇ ಇಲ್ಲಿ ಸ್ವೀಕಾರ ಮಾಡಿರುತ್ತದೆ. ಇವನು ಯಾವ ಕರ್ಮಕ್ಕೂ ದೊರೆಯತಕ್ಕವನಲ್ಲ. ಕಣ್ಣಿದ್ದವನು ಹಗಲಲ್ಲಿ ಮಾರ್ಗ ಹಿಡಿದು ಹೋಗುತ್ತಿರಲಿಕ್ಕೆ ಬಾವಿಯಲ್ಲಾಗಲಿ, ಮುಳ್ಳಿನಲ್ಲಾಗಲಿ ಬೀಳುವದಿಲ್ಲ. ಅದ ರಂತೆ ಸಕಲ ಕರ್ಮಫಲಗಳು ವಿದ್ಯಾಫಲದಲ್ಲಿ ಅಂತಃಭೂತಗಳಾಗಿರುತ್ತಿರಲಿಕ್ಕೆ ಅಂದರೆ, ಅಯತ್ನದಿಂದ ಪ್ರಾಪ್ತವಾಗುವ ವಸ್ತುವಿನಲ್ಲಿ ವಿದ್ವಾಂಸನು ಯತ್ನವನ್ನು ಮಾಡಲಾರನು. ತೊಡೆಯ ಮೇಲೆಯೇ ಜೇನು ಇರಲಿಕ್ಕೆ ಪರ್ವತಕ್ಕೇಕೆ ಹೋಗ

ಬೇಕು. ಇಷ್ಟಾರ್ಥವು ತಾನಾಗಿ ಪ್ರಾಪ್ತವಾಗುತ್ತಿರಲು ವಿದ್ವಾಂಸನು ಯಾಕೆ ಯತ್ನವನ್ನು ಮಾಡಲಿಕ್ಕೆ ಹೋದಾನು. ಸರ್ವ ಕರ್ಮಗಳ ಫಲವು ಜ್ಞಾನದಲ್ಲಿ ಪರಿಸಮಾಪ್ತಿಯಾಗುತ್ತದೆಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. ಇಲ್ಲಿಯಾದರೂ ಬ್ರಹ್ಮವಿತ್ತನಿಗೆ ಪ್ರಾಪ್ತವಾದ ಬ್ರಹ್ಮಾನಂದದ ಕಿಂಚಿತ್ ಲೇಶ ಆನಂದವನ್ನು ಗ್ರಹಿಸಿ ಅನ್ಯಜೀವಿಗಳು ಸಂತುಷ್ಟರಾಗುತ್ತಾರೆಂದು ಹೇಳಿದೆ. ಆದ್ದರಿಂದ ಬ್ರಹ್ಮವಿತ್ತರಿಗೆ ಕರ್ಮದ ಅವಶ್ಯಕತೆಯಿಲ್ಲ. ಕರ್ಮಗಳನ್ನು ಮಾಡುವದು ನಿಷ್ಪ್ರಯೋಜನವಾಗಿರುವದೆಂಬ ಭಾವವು.

### ೫ ಸಂ, ೨ ಸೂ, ೯ ಪ 'ನಹಿದ್ರಷ್ಟು' ಬೃ-೪-೩-೨೩

ಸ್ತ್ರೀ ಪುರುಷರಂತೆ ಸುಪ್ತಿಯಲ್ಲಿ ಜೀವನು ಪರಮಾತ್ಮದೊಡನೆ ಐಕ್ಯನಾಗಿದ್ದರಿಂದ ತಿಳಿಯುವದಿಲ್ಲ. ಮತ್ತು ಸ್ವಯಂಜ್ಯೋತಿರೂಪನೂ ಇದ್ದಾನೆ. ಹೇಗೆ ಅಗ್ನಿಯು ಉಷ್ಣ ಪ್ರಕಾಶದಿಂದೊಡಗೂಡಿರುವದೋ, ಹಾಗೆ ಆತ್ಮನು ಚೈತನ್ಯ ಸ್ವಭಾವದಿಂದಿರುವನು. ಸುಪ್ತಿಯಲ್ಲಿ ಪರಮಾತ್ಮನೊಡನೆ ಐಕ್ಯನಾದಾಗ್ಯಾದರೂ ತನ್ನ ಸ್ವಭಾವವನ್ನು ಹೇಗಾದರೂ ಬಿಡುವದಿಲ್ಲ, ಮತ್ತು ತಿಳಿಯುವದಿಲ್ಲ.

**ಶಂಕಾ:-** ಸುಪ್ತಿಯಲ್ಲಿ ಆತ್ಮನು ತನ್ನ ಚೈತನ್ಯಾತ್ಮ ಸ್ವಭಾವವನ್ನು ಬಿಡುವದಿಲ್ಲ, ಮತ್ತು ತಿಳಿಯುವದಿಲ್ಲ ಎಂದು ಹೀಗೆ ಹೇಳುವದು ವಿರುದ್ಧವಾಗಿರುತ್ತದೆ.

**ಸಮಾಧಾನ:-** ಇದೇನೂ ವಿರುದ್ಧವಲ್ಲ. ಈ ಎರಡೂ ಸಂಗತಿಗಳು ಸಂಭವಿಸುತ್ತವೆ. ಹೇಗಂದರೆ:—

> **ಯದ್ವೈ ತನ್ನ ಪಶ್ಯತಿ ಪಶ್ಯನ್ವೈ ತನ್ನ ಪಶ್ಯತಿ ನಹಿದ್ರಷ್ಟುರ್ದ್ರೇಷ್ಟೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್ ನತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್'**

**ಟೀಕಾ:-** ವೈ = ನಿಶ್ಚಯವಾಗಿ, ಯತ್ = ಯಾವದೋ, ತತ್ = ಅದನ್ನು (ರೂಪಾದಿಗಳನ್ನು), ನ ಪಶ್ಯತಿ=ತಿಳಿಯುವುದಿಲ್ಲ, ವೈ=ನಿಶ್ಚಯವಾಗಿ, ಪಶ್ಯನ್= ಅರಿಯುವಂಥಾ ಆತ್ಮನಿದ್ದರೂ, ತತ್ = ಅದನ್ನು, ನ ಪಶ್ಯತಿ = ಅರಿಯುವದಿಲ್ಲ, ದ್ರಷ್ಟುಃ=ಆತ್ಮನ, ದೃಷ್ಟಿಗೆ=ಜ್ಞಾನಕ್ಕೆ, ವಿಪರಿಲೋಪಃ=ನಾಶವು, ನಹಿ ವಿದ್ಯತೆ= ಇರುವದಿಲ್ಲ, (ಯಾಕಂದರೆ) ಅವಿನಾಶಿತ್ವಾತ್=ಆತ್ಮನು ನಾಶರಹಿತನಿರುವದರಿಂದ, ತತಃ = ಆತ್ಮನಿಗಿಂತಲೂ, ಅನ್ಯತ್ = ಬೇರೆಯಾಗಿ, ವಿಭಕ್ತಂ = ವಿಷಯವಾಗಿರುವಂಥಾದ್ದು, ದ್ವಿತೀಯಂ = ಎರಡನೇ ವಸ್ತು, ನತು ತತ್ ಅಸ್ತಿ = ಅದಿರುವದಿಲ್ಲ, ಯಾತ್=ಯಾವದನ್ನು, ಪಶ್ಯೇತ್=ಅರಿತಾನು.

**ತಾತ್ಪರ್ಯ**- ಆತ್ಮನು ಚಿದ್ರೂಪನಾಗಿದ್ದರೂ ಸುಪ್ತಿಯಲ್ಲಿ ವಿಶೇಷವಾಗಿ ತಿಳಿಯುವದಿಲ್ಲ. ಆದ್ದರಿಂದ ಚೈತನ್ಯಸ್ವಭಾವದಿಂದಿರುವದು ಮತ್ತು ವಿಶೇಷಜ್ಞಾನ ರಾಹಿತ್ಯನಾಗಿರುವದು ಇವೆರಡು ಸಂಭವಿಸುತ್ತವೆ. ಆದ್ದರಿಂದಲೇ ಸುಷುಪ್ತಿಯಲ್ಲಿ ಅರಿಯುವಂಥವನು ಇದ್ದಾಗ್ಯಾದರೂ ಅರಿಯುವದಿಲ್ಲೆಂದು ಶ್ರುತಿಯು ಹೇಳುತ್ತದೆ.

**ಶಂಕಾ**:- ಆತ್ಮನು ಜಾಗ್ರದಂತೆ ಸುಪ್ತಿಯಲ್ಲಿ ಅರಿಯುವದಿಲ್ಲೆಂದು ತಿಳಿಯುತ್ತೇವೆ. ಯಾಕಂದರೆ, ಅಲ್ಲಿ ಅರಿಯುವದಕ್ಕೆ ನೇತ್ರವಾಗಲಿ ಮನಸ್ಸಾಗಲಿ ಯಾವ ಕರಣವೂ ಇರುವದಿಲ್ಲ. ನೇತ್ರ ಶ್ರೋತ್ರಗಳು ವ್ಯವಹರಿಸುತ್ತಿರಲಿಕ್ಕೆ, ನೋಡುತ್ತಾನೆ ಕೇಳುತ್ತಾನೆ ಎಂಬ ವ್ಯವಹಾರವು ಆಗುವದು. ಸುಪ್ತಿಯಲ್ಲಿ ನಾವು ವ್ಯಾಪಾರಯುಕ್ತ ಕರಣಗಳನ್ನು ಕಾಣುವದಿಲ್ಲ. ಆದ್ದರಿಂದ ಸುಪ್ತಿಯಲ್ಲಿದ್ದ ಆತ್ಮನು ಏನೂ ತಿಳಿಯುವದಿಲ್ಲ.

**ಸಮಾಧಾನ**:- ಹಾಗಲ್ಲ. ಮತ್ತೇನಂದರೆ, ಅರಿಯುವಂಥವನು ಇದ್ದಾನೆ. ಹೇಗಂದರೆ, ಜ್ಞಾನರೂಪ ದೃಷ್ಟಿಗೆ ಕರ್ತನಾದ ಯಾವ ದೃಷ್ಟಾರೂಪ ಆತ್ಮನಿರುತ್ತಾನೆ. ಅವನ ದೃಷ್ಟಿರೂಪ ಜ್ಞಾನಕ್ಕೆ ನಾಶವಿಲ್ಲ, ಹೇಗಂದರೆ, ಯಾವ ಅಗ್ನಿಯ ಉಷ್ಣವುಂಟೋ ಅದು ಅಗ್ನಿಯಿರುವ ಪರ್ಯಂತರವೂ ಇರುತ್ತದೆ. ಆದರಂತೆ, ದ್ರಷ್ಟಾರೂಪ ಆತ್ಮನು ಅವಿನಾಶಿಯಾಗಿರುತ್ತಾನೆ. ಆದ್ದರಿಂದ ಅವನ ದೃಷ್ಟಿರೂಪ ಜ್ಞಾನವಾದರೂ ನಾಶರಹಿತವಾಗಿಯೇ ಇರುತ್ತದೆ.

**ಶಂಕಾ**:- ದ್ರಷ್ಟಾರೂಪ ಆತ್ಮನ ದೃಷ್ಟಿರೂಪ ಯಾವ ಅರುವುಂಟು. ಅದು ನಾಶವಾಗುವದಿಲ್ಲೆಂದು ಏನು ಹೇಳಲ್ಪಡುತ್ತದೆಯೋ, ಅದು ವಿರೋಧವಾಗಿರುತ್ತದೆ. ಯಾಕಂದರೆ, ದೃಷ್ಟಿಯೇ ದ್ರಷ್ಟನನ್ನುಂಟು ಮಾಡುತ್ತದೆ. ದೃಷ್ಟಿಯೇ ಕರ್ತೃವಾದ್ದರಿಂದ ನಿಶ್ಚಯವಾಗಿ ದ್ರಷ್ಟಾಯೆಂದು ಹೇಳಲ್ಪಡುತ್ತಾನೆ. ಆದ್ದರಿಂದ ದ್ರಷ್ಟನನ್ನುಂಟುಮಾಡುವ ದೃಷ್ಟಿಯು ನಾಶವಾಗುವದಿಲ್ಲೆಂದು ನೀವು ಹೇಳುವದು ಅಶಕ್ಯವಾಗಿರುತ್ತದೆ, ನಾಶವಾಗುವದಿಲ್ಲೆಂದು ಶ್ರುತಿವಚನವಿರುತ್ತದೆ. ಆದ್ದರಿಂದ ದೃಷ್ಟಿಯು ಅವಿನಾಶಿಯಾಗಿರುವುದೆಂದು ಹೇಳಿದರೆ, ಅದು ಸಂಭವಿಸುವದಿಲ್ಲ. ಯಾಕಂದರೆ; ಹಾಗೆ ಹೇಳುವ ಶ್ರುತಿಯು ನಷ್ಟವಸ್ತುವಿನ ಜ್ಞಾಪಕ ಅಂದರೆ ಸ್ಮರಣವನ್ನುಂಟುಮಾಡುವಂಥಾದ್ದಾಗಿರುತ್ತದೆ. ಯಾವದು ಕಾರ್ಯವೋ ಅದು ಅವಶ್ಯನಾಶವಾಗಲಿಕ್ಕೇಬೇಕು. ಇದು ಲೋಕದಲ್ಲಿ ನ್ಯಾಯವುಂಟು. ಈ ನ್ಯಾಯದಿಂದ ಪ್ರಾಪ್ತವಾದ ವಿನಾಶವು ನೂರಾರು ಶ್ರುತಿಗಳಿಂದಲೂ ನಿವಾರಣೆಮಾಡಲಿಕ್ಕೆ ಆಗುವದಿಲ್ಲ. ಆದ್ದರಿಂದ ಆ ಶ್ರುತಿಯು ಸ್ಮರಣಾರ್ಥವುಳ್ಳದ್ದಾಗಿರುತ್ತದೆ.

**ಸಮಾಧಾನ:-** ಸೂರ್ಯಾದಿಗಳ ಪ್ರಕಾಶದಂತೆ ದೃಷ್ಟಿಗೆ ನಿತ್ಯತ್ವವು ಸಂಭವಿಸುತ್ತದೆ. ಹೇಗೆ ಸೂರ್ಯಾದಿಗಳು ನಿತ್ಯಪ್ರಕಾಶ ಸ್ವಭಾವವುಳ್ಳವರಾಗಿಯೇ ಸ್ವಾಭಾವಿಕ ನಿತ್ಯವಾದ ಪ್ರಕಾಶದಿಂದಲೇ ಪ್ರಕಾಶವನ್ನು ಮಾಡುತ್ತಾರೆ. ಅಪ್ರಕಾಶ ಸ್ವರೂಪರಾಗಿದ್ದು ಪ್ರಕಾಶವನ್ನುಂಟು ಮಾಡುತ್ತಾರೆಂದು ಹೇಳಲ್ಪಡುವದಿಲ್ಲ. ಮತ್ತೇನಂದರೆ, ಸ್ವಾಭಾವಿಕ ನಿತ್ಯವಾದ ಪ್ರಕಾಶದಿಂದಲೇ ಪ್ರಕಾಶಿಸುತ್ತಾರೆ. ಆದರಂತೆ ಈ ಆತ್ಮನಾದರೂ ನಾಶರಹಿತ ಸ್ವಭಾವವಾದ ನಿತ್ಯವಾದ ದೃಷ್ಟಿಯಿಂದಲೇ ದ್ರಷ್ಟನೆಂದು ಹೇಳಲ್ಪಡುತ್ತಾನೆ.

**ಶಂಕಾ:-** ಹಾಗಾದರೆ, ಆ ದ್ರಷ್ಟೃತ್ವವು ಗೌಣವಾಗಿರಬಹುದು.

**ಸಮಾಧಾನ:-** ಗೌಣವಲ್ಲ. ಕಿಂತು ಮುಖ್ಯವಾಗಿರುತ್ತದೆ. ಒಂದು ವೇಳೆ ಆತ್ಮನಿಗೆ ದ್ರಷ್ಟತ್ವವು ಬೇರೆಯಾಗಿದ್ದರೆ ಆಗ್ಯೆ ಇವನ ದ್ರಷ್ಟೃತ್ವಕ್ಕೆ ಗೌಣತ್ವವು ಬರುತ್ತಿತ್ತು. ಆತ್ಮನಿಗಿಂತಲೂ ಭಿನ್ನವಾಗಿ ಅರಿಯುವಿಕೆಯು ಇರುವದಿಲ್ಲ. ಆದ್ದರಿಂದಲೇ ಆತ್ಮನಿಗೆ ದ್ರಷ್ಟೃತ್ವವು ಮುಖ್ಯವಾಗಿರುತ್ತದೆ. ಹೇಗಂದರೆ, ಸೂರ್ಯನಿಗಿಂತಲೂ ಪ್ರಕಾಶಮಾಡುವವರು ಬೇರೆ ಯಾರೂ ಇಲ್ಲದ್ದರಿಂದ ನಿತ್ಯವಾಧ ಸ್ವಾಭಾವಿಕವಾದ ಅಕ್ರಿಯಾತ್ಮಕವಾದ ಪ್ರಕಾಶದಿಂದಲೇ ಸೂರ್ಯಾದಿಗಳಿಗೆ ಯಾವ ಪ್ರಕಾಶ ಮಾಡುವತನವುಂಟೋ, ಅದೇ ಮುಖ್ಯವೆಂದು ಹೇಳಲ್ಪಡುತ್ತದೆ. ಆದ್ದರಿಂದ ದ್ರಷ್ಟನ ದೃಷ್ಟಿಯು ನಾಶವಾಗುವದಿಲ್ಲೆಂದು ಹೇಳಿದ್ದರಲ್ಲಿ ವಿರೋಧದ ಗಂಧವಾದರೂ ಕೂಡಾ ಇರುವದಿಲ್ಲ.

**ಶಂಕಾ:-** ಅನಿತ್ಯಕ್ರಿಯೆಗೆ ಕರ್ತನಾದವನಲ್ಲಿಯೇ 'ತೃಚ್' ಪ್ರತ್ಯಯ ಅಂತವುಳ್ಳ ಶಬ್ದದ ಪ್ರಯೋಗವು ಕಂಡುಬರುತ್ತದೆ. ಹೇಗಂದರೆ, 'ಛೇತ್ತಾ' ಕಡಿಯುವವನು 'ಭೇತ್ತಾ" ಭೇದಮಾಡುವವನು, 'ಗಂತಾ' ಹೋಗುವವನು ಇವುಗಳಂತೆ ದ್ರಷ್ಟಾ ಎಂಬುವಲ್ಲಿಯೂ ತಿಳಿಯತಕ್ಕದ್ದು.

**ಸಮಾಧಾನ:-** ಹಾಗಲ್ಲ. ಯಾಕಂದರೆ ಎಲ್ಲೆಲ್ಲಿ ತೃಚ್ ಪ್ರತ್ಯಯಾಂತ ಶಬ್ದ ಪ್ರಯೋಗ ವಿರುತ್ತದೆಯೋ ಅಲ್ಲಲ್ಲಿ ಅನಿತ್ಯಕ್ರಿಯೆಗೆ ಕರ್ತೃವಾಗಿರುವದು ಕಂಡುಬರುತ್ತದೆಂದು ನೀನು ಏನು ವ್ಯಾಪ್ತಿಹೇಳುವಿಯೋ, ಅದು ವ್ಯಭಿಚಾರದೋಷವುಳ್ಳದ್ದಾಗಿರುತ್ತದೆ. ಹೇಗಂದರೆ, ಸೂರ್ಯಾದಿಗಳಲ್ಲಿ (ಪ್ರಕಾಶಯಿತೃ) ಎಂಬಲ್ಲಿ ತೃಚ್ ಪ್ರತ್ಯಯಾಂತ ಶಬ್ದವೇನೋ ಉಂಟು. ಆದರೆ ಪ್ರಕಾಶರೂಪ ಕ್ರಿಯೆಗೆ ಅನಿತ್ಯತ್ವವಿಲ್ಲ. ಕಿಂತು ನಿತ್ಯವಾಗಿರುತ್ತದೆ.

**ಶಂಕಾ:-** ಪ್ರಕಾಶಮಾಡುವ ಸೂರ್ಯಾದಿಗಳಲ್ಲಿ ಹಾಗಿರಲಿ. ಅನ್ಯಕಡೆಗೆ ಈ ಮಾತು ಸಂಭವಿಸುವದಿಲ್ಲ. ಅದರಂತೆ ಆತ್ಮನಲ್ಲಿರುವ ದೃಷ್ಟಿಗೂ ನಿತ್ಯತ್ವ ಸಂಭವಿಸುವದಿಲ್ಲ.

**ಸಮಾಧಾನ:-** ಹಾಗಲ್ಲ. ಯಾಕಂದರೆ ಶ್ರುತಿಯು ದೃಷ್ಟಿಗೆ ನಿತ್ಯತ್ವವನ್ನು ಹೇಳುತ್ತದೆ.

**ಶಂಕಾ:-** ಜಾಗ್ರದಲ್ಲಿ ನಾನು ತಿಳಿಯುತ್ತೇನೆಂದು ತೋರುವದು. ಅಂದರೆ, ಸುಪ್ತಿಯಲ್ಲಿ ನಾನೇನೂ ತಿಳಿಯುವದಿಲ್ಲೆಂಬುದು ಅನುಭವರೂಪವಾಗಿದೆ. ಆದ್ದರಿಂದ ಜ್ಞಾನರೂಪ ದೃಷ್ಟಿಗೆ ಹೇಗೆ ನಿತ್ಯತ್ವವನ್ನು ಹೇಳುತ್ತೀರಿ. ಶ್ರುತಿಗಿಂತಲೂ ಅನುಭವವು ಪ್ರಬಲವಾಗಿದೆ.

**ಸಮಾಧಾನ:—** ಹಾಗಲ್ಲ. ತಿಳಿಯುತ್ತೇನೆ. ತಿಳಿಯುವದಿಲ್ಲೆಂದು ಹೇಳುವದು ಇದು ಚಕ್ಷುರಾದಿ ಕರಣಗಳ ವ್ಯಾಪಾರ ಭಾವ ಅಭಾವದಿಂದಲೇ ಹೇಳತಕ್ಕದ್ದಿರುತ್ತದೆ. ಜಾಗ್ರದಲ್ಲಿಯೂ ಸ್ವಪ್ನದಲ್ಲಿಯೂ ಆತ್ಮನ ಜ್ಞಾನರೂಪ ದೃಷ್ಟಿಯು ನಿತ್ಯವಾಗಿರುತ್ತದೆ. ಆದ್ದರಿಂದ ಸುಪ್ತಿಯಲ್ಲಿ ಕರಣಗಳ ವ್ಯಾಪಾರವಿಲ್ಲದಿದ್ದರೂ ಸ್ವಾಭಾವಿಕ ನಿತ್ಯವಾದ ದೃಷ್ಟಿಯಿಂದ ಆತ್ಮನು ಸ್ವಂಯಂಜ್ಯೋತಿ ರೂಪದಿಂದ ಅರಿಯುತ್ತಲೇ ಇದ್ದಾನೆ.

**ಶಂಕಾ:—**ಜಾಗ್ರತ ಸ್ವಪ್ನಗಳಂತೆ ಸುಪ್ತಿಯಲ್ಲಾದರೂ ಆತ್ಮನು ಸ್ವಯಂಜ್ಯೋತಿ ಸ್ವಭಾವದಿಂದ ಅರಿಯುತ್ತಾ ಇದ್ದಮೇಲೆ, ನಾನು ಅರಿಯುತ್ತೇನೆಂದು ಅನುಭವವಿರಬೇಕಾಗಿತ್ತು. ನಾನೇನೂ ಅರಿಯಲಿಲ್ಲೆಂದು ಯಾಕೆ ಹೇಳುತ್ತಾನೆ. ?

**ಸಮಾಧಾನ:—** ಸುಪ್ತಿಯಲ್ಲಿ ದ್ರಷ್ಟಾರೂಪ ಆತ್ಮನಿಗಿಂತಲೂ ಭಿನ್ನವಾಗಿ ಅರಿಸಿಕೊಳ್ಳುವಂಥಾ ವಸ್ತು ಯಾವದೂ ಇಲ್ಲ. ಆದ್ದರಿಂದ ನಾನು ಅರಿಯಲಿಲ್ಲೆಂದು ಅನುಭವವಾಗಿರುತ್ತದೆ. ಈ ಅನುಭವದ ಮೇಲಿಂದ ಆತ್ಮನಲ್ಲಿ ಅರುವಿಲ್ಲವೆಂಬರ್ಥವಲ್ಲ. ಕಿಂತು ಅರಿಸಿಕೊಳ್ಳುವ ಪದಾರ್ಥವಿಲ್ಲೆಂದು ತಿಳಿಯತಕ್ಕದ್ದು. ಜಾಗ್ರತ್ಸ್ವಪ್ನಗಳಲ್ಲಿ ಪ್ರಮಾತೃ ಪ್ರಮಾಣ ಪ್ರಮೇಯಗಳು ಅವಿದ್ಯೆಯಿಂದ ರಚಿಸಲ್ಪಟ್ಟವು ಭಿನ್ನವಾಗಿ ಇರುತ್ತವೆ. ಅದರಿಂದ ವಿಶೇಷ ಜ್ಞಾನವು ಇರುತ್ತದೆ. ಸುಪ್ತಿಯಲ್ಲಿ (ಕಾರ್ಯ ಪ್ರಪಂಚವು ಕಾರಣರೂಪ ಅವಿದ್ಯೆಯನ್ನು ಹೊಂದಿ ಅಭಿವ್ಯಕ್ತವಾಗಿರುವದಿಲ್ಲ.) ಆತ್ಮನು ಪರಮಾತ್ಮನೊಡನೆ ಐಕ್ಯನಾಗಿರುತ್ತಾನೆ. ಮತ್ತು ದ್ರಷ್ಟನು ಯಾವದಾದರೊಂದು ಪರಿಚ್ಛಿನ್ನ ವಸ್ತುವಿನ ವಿಶೇಷ ಜ್ಞಾನವಾಗಬೇಕಾದರೆ, ಅನ್ಯವಾದ ಕರಣವು ಬೇಕಾಗುತ್ತದೆ. ಈ ಆತ್ಮನು ಸುಪ್ತಿಯಲ್ಲಿ ಸರ್ವಾತ್ಮನಾದ ಪರಮಾತ್ಮನೊಡನೆ ಪ್ರಿಯಳನ್ನು ಕೂಡಿದ ಪುರುಷನಂತೆ ಕೂಡಿಕೊಂಡಿರುತ್ತಾನೆ. ಆದ್ದರಿಂದ ಆತ್ಮನಿಗಿಂತಲೂ ಭಿನ್ನವಾಗಿ ಕರಣಗಳಾಗಲಿ ವಿಷಯಗಳಾಗಲಿ ಇರುವದೇ ಇಲ್ಲ. ಆದ್ದರಿಂದಲೇ ವಿಶೇಷ ಜ್ಞಾನವಿಲ್ಲ. ಆ ವಿಶೇಷಜ್ಞಾನವಿರುವದು ಇಲ್ಲದಿರುವದು ಆ ಕರಣಾದಿಗಳ ಮೂಲಕವಾದದ್ದೇ ಹೊರ್ತು ಆತ್ಮನಮೂಲಕ

ವಾದದ್ದಲ್ಲ. ಆದಾಗ್ಯಾದರೂ ಇದು ಆತ್ಮನಿಂದಲೇ ಆಯಿತೋ ಏನೋ ಅನ್ನು ವಂತೆ ತೋರುತ್ತದೆ. ಆದ್ದರಿಂದ ಸುಪ್ತಿಯಲ್ಲಿ ಆತ್ಮನ ದೃಷ್ಟಿರೂಪ ಜ್ಞಾನವಿಲ್ಲೆಂದು ತೋರುವದು ಭ್ರಾಂತಿ ರೂಪವಾಗಿರುತ್ತದೆ.

**೫ ಸಂ, ೩ ಸೂ, ೧೭ ಪ, 'ಪ್ರಾಜ್ಞೇನಾತ್ಮನಾ' ಬೃ-೨೧ -೪-೩**

ಈ ಆತ್ಮನು ಸುಪ್ತಿಯಲ್ಲಿ ಪಾರಮಾರ್ಥಿಕ ಬ್ರಹ್ಮದೊಡನೆ ಐಕ್ಯನಾದ್ದರಿಂದ ಏನೊಂದನ್ನು ತಿಳಿಯುವದಿಲ್ಲ. ಹೇಗಂದರೆ, ಕಾಮಿಯು ತನ್ನ ಪ್ರಿಯಳನ್ನು ಆಲಿಂಗನ ಮಾಡಿಕೊಂಡು ಇರುವಾಗ್ಗೆ ಹೊರಗಿನದನ್ನೂ ಒಳಗಿನದನ್ನೂ ಹೇಗೆ ತಿಳಿಯುವದಿಲ್ಲವೋ, ಹಾಗೆ. ಆದ್ದರಿಂದಲೇ ಅವಿದ್ಯಾಭಯ ಮೊದಲಾದದ್ದೇ ನೊಂದಿಲ್ಲದೆ ಕೇವಲ ಸುಖಮಯನಾಗಿರುವನೆಂಬುದನ್ನು ಈ ಶ್ರುತಿಯು ಹೇಳು ತ್ತದೆ.

> **'ತದ್ವಾ ಅಸ್ಯೈತದತಿಚ್ಛಂದಾ ಅಪಹತಪಾಪ್ಮಾಭಯಂ ರೂಪಂ I ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚಿನ ವೇದನಾಂತರಮೇವ ಮೇವಾಯಂ ಪುರುಷಃ ಪ್ರಾಜ್ಞೇನಾಽಽ ತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚಿನ ವೇದನಾಂತರಂ ತದ್ವಾ ಅಸ್ಯೈತದಾಪ್ತ ಕಾಮಮಾತ್ಮಕಾಮಮಕಾಮಂ ರೂಪಂ ಶೋಕಾಂ ತರಂ'**

**ಟೀಕಾ:-** ತತ್=ಆ, ವಾ=ಅಥವಾ, ಅಸ್ಯ=ಆತ್ಮನ, ಏತತ್=ಈ, ರೂಪಂ= ಸರ್ವಾತ್ಮ ಭಾವವು, ಅತಿಚ್ಛಂದಾ=ಕಾಮವಿಲ್ಲದ್ದರಿಂದ ಅತಿ ಮನೋಹರವಾಗಿರು ವದು, ಅಪಹತಪಾಪ್ಮಾ=ಪುಣ್ಯ ಪಾಪಗಳಿಂದ ರಹಿತನಾಗಿರುವನು, ಅಭಯಂ= ಕಾರ್ಯ ಸಹಿತ ಕಾರಣ ಅವಿದ್ಯಾ ರಹಿತವಾಗಿರುವದು, ತತ್=ಅದು, ಯಥಾ= ಹೇಗಂದರೆ, ಪ್ರಿಯಯಾ=ಇಷ್ಟವಾದ, ಸ್ತ್ರಿಯಾ=ಸ್ತ್ರೀಯಳಿಂದ, ಸಂಪರಿಷ್ವಕ್ತಃ= ಸಂಯೋಗವುಳ್ಳವನು, ಬಾಹ್ಯಂ=ತನಗಿಂತಲೂ ಬೇರೆ ಯಾವದೊಂದು ಇರುವದು ಎಂಬುದನ್ನು, ಕಿಂಚನ=ಸ್ವಲ್ಪಾದರೂ, ನವೇದ=ತಿಳಿಯುವದಿಲ್ಲ, ಅಂತರಂ=ಒಳಗೆ ನಾನು ಸುಖೀ ದುಃಖೀ ಇದ್ದೇನೆ ಎಂಬುವದನ್ನು, ನವೇದ=ತಿಳಿಯುವದಿಲ್ಲ, ಏವ ಮೇವ=ಈ ದೃಷ್ಟಾಂತದಂತೆ, ಅಯಂ=ಈ, ಪುರುಷಃ=ಜೀವಾತ್ಮನು, ಪ್ರಾಜ್ಞೇನ= ಪಾರಮಾರ್ಥಿಕವಾದ, ಆತ್ಮನಾ=ಪರಬ್ರಹ್ಮದೊಡನೆ, ಸಂಪರಿಷ್ವಕ್ತಃ=ಏಕೀಭೂತ ನಾಗಿ, ಬಾಹ್ಯಂ=ತನಗಿಂತ ಭಿನ್ನವಾಗಿ ಕಿಂಚನ=ಸ್ವಲ್ಪವನ್ನೂ, ನವೇದ=ತಿಳಿಯು ವದಿಲ್ಲ, ಅಂತರಂ=ಒಳಗೆ ನಾನು ಇದ್ದೇನೆ ಸುಖಿ ದುಃಖಿಯೆಂದೂ, ನವೇದ=ತಿಳಿ ಯುವದಿಲ್ಲ, ತದ್ವಾ=ಅದೇ, ಅಸ್ಯ=ಈ ಆತ್ಮನ, ರೂಪಂ=ಸ್ವರೂಪವು, ಏತತ್=

ಇದು, ಆಪ್ತಕಾಮಂ=ಇದರಲ್ಲಿ ಎಲ್ಲಾ ಇಚ್ಛೆಗಳು ಹೊಂದಲ್ಪಟ್ಟಿರುವವು, ಆಪ್ತ ಕಾಮಂ=ಆತ್ಮನೇ ಇಲ್ಲಿ ಇಚ್ಛೆಗೆ ವಿಷಯನಾಗಿದ್ದಾನೆ, ಅಕಾಮಂ = ಇಲ್ಲಿ ಬೇರೆ ಯಾವವೂ ಇಚ್ಛೆಗೆ ವಿಷಯಗಳಿಲ್ಲ. ಶೋಕಾಂತರಂ=ದುಃಖವಿಲ್ಲದ್ದಾಗಿರುವದು.

**ತಾತ್ಪರ್ಯ:-** ಕ್ರಿಯಾಕಾರಕಗಳಿಂದ ಜನ್ಯವಾದ ಫಲದಿಂದ ರಹಿತವಾದಂಥಾ ಯಾವ ಸರ್ವಾತ್ಮಭಾವರೂಪ ಮೋಕ್ಷವೇ ವಿದ್ಯೆಗೆ ಫಲವೆಂದು ಹೇಳಲ್ಪಟ್ಟಿರುತ್ತದೆ. ಅದನ್ನೇ ಇಲ್ಲಿ ಪ್ರತ್ಯಕ್ಷವಾಗಿ ತೋರಿಸುತ್ತಾರೆ. ಹೇಗಂದರೆ, ಸುಪ್ತನು ಏನೊಂದನ್ನು ಬಯಸುವದಿಲ್ಲ ಸ್ವಪ್ನವನ್ನು ಕಾಣುವದೂ ಇಲ್ಲ. ಮತ್ತು ಸುಪ್ತಿಯಲ್ಲಿ ಅವಿದ್ಯಾ ಕಾಮಕರ್ಮಾದಿಗಳು ಇರುವದೂ ಇಲ್ಲ. ಇದೇ ಈ ಆತ್ಮನ ಸರ್ವಾತ್ಮ ಭಾವರೂಪ ಮೋಕ್ಷವಾಗಿರುತ್ತದೆ. ಇದನ್ನು ಹೊಂದಿದಮೇಲೆ ಯಾವದಾದರೊಂದು ವಸ್ತುವಿನ ಇಚ್ಛೆಯು ಆಗುವದಿಲ್ಲ. ಆದ್ದರಿಂದ ಇದುಅತಿಚ್ಛಂದವಾಗಿರುವದು. ಧರ್ಮಾಧರ್ಮಗಳಿಂದ ರಹಿತವಾಗಿಯೂ, ಭಯ ಮೊದಲಾದ ಕಾರ್ಯ ಸಹಿತ ಕಾರಣವಾದ ಅವಿದ್ಯೆಯಿಂದ ರಹಿತವಾಗಿಯೂ, ಯಾವ ಸರ್ವಾತ್ಮ ಭಾವವು ಬ್ರಹ್ಮವಿದ್ಯೆಯ ಫಲವಾಗಿರುತ್ತದೆ. ಈ ವಿಷಯವು ಪೂರ್ವದಲ್ಲಿಯೇ ಹೇಳಲ್ಪಟ್ಟಿರುವದು. ಆದರೂ ಅದು ದೃಢವಾಗುವದಕ್ಕೋಸ್ಕರ ಇಲ್ಲಿ ತರ್ಕದಿಂದಸಿದ್ಧಮಾಡುತ್ತಾರೆ. ಯಾವ ಈ ಸ್ವಯಂಜ್ಯೋತಿ ಸ್ವಭಾವನಾದ ಆತ್ಮನು ಸರ್ವವನ್ನು ತನ್ನ ಚೈತನ್ಯ ಪ್ರಕಾಶದಿಂದಲೇ ಬೆಳಗುತ್ತಾನೆ. ಜಾಗ್ರ ಸ್ವಪ್ನಗಳಲ್ಲಿ ಮಾತ್ರ ನೋಡುತ್ತಾನೆ. ರಮಿಸುತ್ತಾನೆ. ನಡಿಯುತ್ತಾನೆ. ತಿಳಿಯುತ್ತಾನೆ. ಎಂದು ಹೇಳಲ್ಪಟ್ಟಿರುವದು. ಅಂಥಾ ಯಾವ ಆತ್ಮನುಈ ಸುಪ್ತಿಯಲ್ಲಿ ತಾನು ನಾಶನಾಗದೆ ಸ್ವಯಂಜ್ಯೋತಿ ಸ್ವರೂಪದಿಂದಿರುತ್ತಾನೆ. ಆದರೆ ಜಾಗ್ರತ್ಸ್ವಪ್ನಗಳಲ್ಲಿ ಹೇಗೆ ತನಗಿಂತಲೂ ಭಿನ್ನಗಳಾದವುಗಳನ್ನು ತಿಳಿಯುತ್ತಿದ್ದನೋ, ಹಾಗೆ ಸುಪ್ತಿಯಲ್ಲಿ ತನಗೆ ಭಿನ್ನವಾದ ಯಾವ ಭೂತಗಳನ್ನಾಗಲಿ ನಾನಿದ್ದೇನೆಂಬುದನ್ನಾಗಲಿ ತಿಳಿಯುವದಿಲ್ಲ. ಯಾಕಂದರೆ; ಹಾಗೆ ತಿಳಿಯದೇ ಇರುವದಕ್ಕೆ ಏಕತ್ವವೇ ಕಾರಣವಾಗಿರುವದು. ಹೇಗೆಂದರೆ; ಹೇಗೆ ಒಬ್ಬಾನೊಬ್ಬ ಕಾಮುಕನು ತನ್ನ ಪ್ರೀತಿಯ ಸ್ತ್ರೀಯಳಿಂದ ಸುರತಕ್ರೀಡೆಯಲ್ಲಿ ತತ್ಪರನಾಗಿರಲು, ಆಗ್ಯೆ ತನಗಿಂತ ಭಿನ್ನವಾದ ವಸ್ತು ಇರುವದೆಂದೂ ಅಥವಾ ನಾನು ಸುಖೀ ದುಃಖೀ ಎಂಬದಾಗಿಯೂ ತಿಳಿಯುವದಿಲ್ಲ-ಸ್ತ್ರೀಯಳೊಡನೆ ಕೂಡದೆ ಇದ್ದಾಗ್ಯೆ ಹೊರಗಿನ ಒಳಗಿನ ಸರ್ವವಸ್ತುವನ್ನು ತಿಳಿಯುತ್ತಿದ್ದನು. ಸಂಯೋಗದಉತ್ತರ ಕಾಲದಲ್ಲಿ ಏಕತ್ವವಾಗುವದರಿಂದ ಏನೂ ತಿಳಿಯುವದಿಲ್ಲ. ಈ ದೃಷ್ಟಾಂತವು ಹೇಗೋ,ಹಾಗೇ ಶರೀರೇಂದ್ರಿಯಗಳಿಂದ ವಿಲಕ್ಷಣನಾದ ಉಪ್ಪಿನ ಹರಳಿನಂತೆ ಅಭಿನ್ನಾಗಿಯೂ, ಜಲಾದಿಗಳಲ್ಲಿ ಚಂದ್ರಾದಿ ಪ್ರತಿಬಿಂಬದಂತೆ ಕಾರ್ಯಕಾರಣ ಸಂಘಾತದಲ್ಲಿ ಪ್ರವೇಶನಾದಂಥಾ, ಈ ಜೀವನು ಸ್ವಾಭಾವಿಕ ಪಾರಮಾರ್ಥಿಕವಾದ, ತನ್ನಾತ್ಮರೂಪವಾದ ಪರಬ್ರಹ್ಮ ಜ್ಯೋತಿಯೊಡನೆ ಐಕ್ಯ

ನಾಗಿ, ಯಾವಾಗಲೂ ಪೂರ್ಣನಾಗಿರುವದರಿಂದ; ಆಗ್ಯೆ ತನಗಿಂತ ಬೇರೊಂದು ಇದೆಯೆಂತಲೂ ಅಥವಾ ನಾನಿದ್ದೇನೆಂತಲೂ ಸುಖಿದುಃಖಿಯೆಂತಲೂ ತಿಳಿಯುವ ದಿಲ್ಲ. ಯಾಕಂದರೆ; ಆತ್ಮನು ಸುಪ್ತಿಯಲ್ಲಿ ಸ್ವಯಂಜ್ಯೋತಿ ಸ್ವಭಾವದಿಂದಿರಲು ಯಾಕೆ ತಿಳಿಯುವದಿಲ್ಲವೆಂಬುದಕ್ಕೆ; ಸ್ತ್ರೀ ಪುರುಷರಂತೆ ಏಕತ್ವವಾಗಿರೋಣರಿಂದ ತಿಳಿಯುವದಿಲ್ಲೆಂಬುದನ್ನು ಹೇಳಿದ್ದೇವೆ. ಅರ್ಥಾತ್ ವಿಶೇಷಜ್ಞಾನಕ್ಕೆ ನಾನತ್ವವೇ ಕಾರಣವಾಗಿರುವದು. ನಾನತ್ವಕ್ಕೆ ಅವಿದ್ಯೆಯೇ ಕಾರಣವಾಗಿರುವದು. ಅಂಥಾ ಅವಿದ್ಯೆಯೇ ಅಲ್ಲಿ ಇಲ್ಲದ್ದರಿಂದ ಜ್ಞಾನಜ್ಞೇಯಾದಿ ವಿಭಾಗವೇ ಇಲ್ಲ. ಅಂದಮೇಲೆ; ವಿಶೇಷ ಜ್ಞಾನದ ಉತ್ಪತ್ತಿಯಾದರೂ ಎಲ್ಲಿಂದ ಬಂದೀತು. ಆತ್ಮಜ್ಯೋತಿಯು ಸ್ವಾಭಾವಿಕ ಸ್ವರೂಪದಿಂದಿರಲು ಕಾಮವಾದರೂ ಉತ್ಪನ್ನವಾದೀತೆ? ಎಂದೂ ಆಗ ಲಾರದು. ಸ್ವಯಂಜ್ಯೋತಿ ಆತ್ಮನಲ್ಲಿ ಸರ್ವವೂ ಏಕವಾಗಿರುವದರಿಂದ ಅಭೇದ ವಾಗಿರುವದೇ ಈತನ ರೂಪವಾಗಿರುತ್ತದೆ. ಇದರಲ್ಲಿ ಎಲ್ಲ ಕಾಮನೆಗಳು ಪ್ರಾಪ್ತ ಗಳಾಗಿರುತ್ತವೆ. ಜಾಗ್ರದಲ್ಲಿ ದೇವದತ್ತನು ಭಿನ್ನವಾಗಿರುವಂತೆ ತನ್ನ ಸ್ವರೂಪದಲ್ಲಿ ಬೇರೆಯಾವದೊಂದು ಕಾಮಿಸಲಿಕ್ಕೆ ಯೋಗ್ಯವಾದದ್ದು ತೋರುವದಿಲ್ಲ. ಆದ್ದರಿಂದ ಆಪ್ತಕಾಮನು ಅನ್ಯವನ್ನುಂಟುಮಾಡುವ ಅವಿದ್ಯೆಯೇ ಇಲ್ಲದ್ದರಿಂದ ಅಕಾಮ ನಾಗಿಯೂ ಯಾವದೊಂದು ದುಃಖಗಳಿಲ್ಲದವನಾಗಿಯೂ, ಇರುವನು.

೬ ಸಂ, ೨ ಸೂ, ೧೨ ಪ "ಅಸ್ಯಜೀವತ್ವಂ" ಸರ ೨೦-

'ಚಿತಿಚ್ಛಾಯಾ ಸಮಾವೇಶಾಜ್ಜೀವಃ ಸ್ಯಾದ್ವ್ಯಾವಹಾರಿಕಃ।
ಅಸ್ಯಜೀವತ್ವಮಾರೋಪಾತ್ಸಾಕ್ಷಿಣ್ಯೈವ ಭಾಸತೆ ॥

ಟೀಕಾ- ಚಿತಿ=ಚಿದ್ರೂಪದ, ಛಾಯಾ=ಪ್ರತಿಬಿಂಬವು ಸಮಾವೇಶಾತ್= ಪ್ರತಿಬಿಂಬಿಸುವದರಿಂದ, ವ್ಯಾವಹಾರಿಕಃ=ವ್ಯವಹಾರವುಳ್ಳಂಥಾ, ಜೀವಃ= ವಿಶ್ವ ಜೀವನು, ಸ್ಯಾತ್=ಆಗುವನು. ಅಸ್ಯ=ಈತನಿಗೆ, ಜೀವತ್ವಂ=ಅಬ್ರಹ್ಮತ್ವವು, ಆರೋ ಪಾತ್=ಉಪಾಧಿಧರ್ಮಗಳ ಮೂಲಕ, ಸಾಕ್ಷಿಣಿ=ಪ್ರತ್ಯಗಾತ್ಮನಲ್ಲಿ, ಅವಭಾಸತೆ= ತೋರುತ್ತದೆ.

ತಾತ್ಪರ್ಯ:- ಸಚ್ಚಿತ್‌ಸ್ವರೂಪನಾದ ಪ್ರತ್ಯಗಾತ್ಮನ ಪ್ರತಿಬಿಂಬವು ಅಂತಃ ಕರಣದಲ್ಲಿ ಬೀಳೋಣದರಿಂದ ಜೀವನೆಂಬ ಹೆಸರು ಬಂದಿರುವದು. ಈ ಜೀವ ತ್ವವು ಉಪಾಧಿಗಳಾದ ಅಹಂಕಾರ ವೊದಲಾದ ಅನಾತ್ಮ ಧರ್ಮಗಳ ಆರೋಪ ವಾಗಿರುವದರಿಂದ, ನಾನು ಕರ್ತಾ ನಾನು ಭೋಕ್ತಾ ಎಂದು ತಿಳಿಯುತ್ತಾನೆ, ಆದರಿಂದ ಬಂದಿರುತ್ತದೆ. ಉಪಾಧಿ ಧರ್ಮಗಳನ್ನು ಬೇರ್ಪಡಿಸಿದರೆ ಜೀವತ್ವವೇ ಇಲ್ಲ. ಹೇಗಂದರೆ; ಮೇಘಗಳ ಗಮನವನ್ನು ಗಮನರಹಿತ ಚಂದ್ರನಲ್ಲಿ ಹೇಗೆ

ಆರೋಪಿಸಲ್ಪಡುತ್ತದೆಯೋ, ಹಾಗೇ ಅಹಂಕಾರಾದಿಗಳ ಧರ್ಮವು ಸಾಕ್ಷಿ ಪ್ರತ್ಯಗಾತ್ಮನಲ್ಲಿ ಆರೋಪ ಮಾಡಿರುತ್ತದೆ. ವಾಸ್ತವಿಕವಿಲ್ಲ ಸ್ವಭಾವತ ಬ್ರಹ್ಮರೂಪನೇ ಇದ್ದಾನೆ.

**೬ಸಂ, ೨ಸೂ, ೧೪ ಪ "ಮುಕ್ತಶ್ಚ ಮುಚ್ಯತೆ" ಕಠ-೨-೨-೧**

ಮೊದಲೇ ಮುಕ್ತನು ಇದ್ದವನಿಗೆ ಪುನಃ ಮುಕ್ತನೆಂದು ಹೇಳಿರುತ್ತದೆ. ಅಂದರೆ ಬಂಧವು ಭ್ರಾಂತಿರೂಪವಾಗಿರುವದು ಎಂಬುದನ್ನು ಈ ಶ್ರುತಿಯು ಹೇಳುತ್ತದೆ.

**'ಪುರಮೇಕಾದಶ ದ್ವಾರಮಜಸ್ಯಾವಕ್ರ ಚೇತಸಃ |**
**ಅನುಷ್ಠಾಯ ನಶೋಚತಿ ವಿಮುಕ್ತಶ್ಚ ವಿಮುಚ್ಯತೆ ಏತದ್ವೈತತ್"**

**ಟೀಕಾಃ-** ಪುರಂ=ಶರೀರವು, ಏಕಾದಶದ್ವಾರಂ=ಹನ್ನೊಂದು ಬಾಗಿಲಗಳಿಂದ ಕೂಡಿದ್ದು, ಅಜಸ್ಯ=ಉತ್ಪತ್ತಿಯಿಲ್ಲದ, ಅವಕ್ರಚೇತಸಃ=ಒಂದೇ ರೂಪದಿಂದಿರುವ, (ಬ್ರಹ್ಮವನ್ನು) ಅನುಷ್ಠಾಯ=ಚನ್ನಾಗಿ ತಿಳಿದು, ನಶೋಚತಿ=ದುಃಖಪಡುವದಿಲ್ಲ, ವಿಮುಕ್ತಃ=ಅವಿದ್ಯಾದಿಗಳಿಂದ ಬಿಡಲ್ಪಟ್ಟವನಾಗಿ. ವಿಮುಚ್ಯತೆ=ಮತ್ತೆ ಶರೀರವನ್ನು ಹೊಂದುವದಿಲ್ಲ. ಏತತ್=ಇದು, ವೈತತ್=ನಿಶ್ಚಯವಾಗಿರುವದಷ್ಟೇ.

**ತಾತ್ಪರ್ಯಃ-** ದ್ವಾರಪಾಲಕರಿಂದೊಡಗೂಡಿದ ಪುರದಂತೆ, ಈ ಶರೀರವು ಹನ್ನೊಂದು ದ್ವಾರಗಳಿಂದ ಯುಕ್ತವಾಗಿರುವದು. ಶಿರದಲ್ಲಿ ಏಳು ದ್ವಾರಗಳು, ನಾಭಿ ಹಿಡಿದು ಕೆಳಗಿನ ಮೂರು ದ್ವಾರಗಳು, ಬ್ರಹ್ಮರಂಧ್ರ ಒಂದು ಹೀಗೆ ಹನ್ನೊಂದು ದ್ವಾರಗಳು ಇರುತ್ತವೆ. ಈ ಶರೀರರೂಪ ಪುರದಲ್ಲಿ ಆತ್ಮನು ರಾಜನೋಪಾಧಿಯಲ್ಲಿ ಶೋಭಾಯಮಾನನಾಗಿರುವನು. ಅಂದರೆ ಶರೀರಕ್ಕೆ ವಿಲಕ್ಷಣವಾಗಿರುವನೆಂಬ ಭಾವವು. ಆದ್ದರಿಂದಲೇ ಅವನಿಗೆ ಉತ್ಪತ್ತಿಯಿಲ್ಲ. ಯಾವಾಗಲೂ ಒಂದೇ ಪ್ರಕಾಶಮಾನವಾದ ರೂಪವುಳ್ಳವನಾಗಿರುವನು. ಅಂದರೆ ಬ್ರಹ್ಮರೂಪನೇ ಇರುವನು. ಹೀಗೆ ಇದ್ದಾಗ್ಯಾದರೂ ತನ್ನ ಸ್ವರೂಪವನ್ನು ಮರೆತು ನಾನು ಜೀವನೆಂದು ಅವಿದ್ಯೆಯಿಂದ ತಿಳಿದು ಕೊಂಡಿರುತ್ತಾನೆ. ಆದ್ದರಿಂದ ಬದ್ಧನಂತೆ ತೋರುತ್ತಿರುವನು. ಸರ್ವ ಏಷಣಾತ್ರಯಗಳಿಂದ ರಹಿತನಾಗಿ ಈ ಪುರಸ್ವಾಮಿಯಾದ ಬ್ರಹ್ಮನೇ ನಾನಿದ್ದೇನೆಂದು ಯಥಾರ್ಥವಾಗಿ ತಾನು ತನ್ನನ್ನು ತಿಳಿದರೆ, ಅವಿದ್ಯಾ ಸಹಿತ ಭ್ರಮವೇ ಇಲ್ಲದಮೇಲೆ ಶೋಕವನ್ನು ಯಾತಕ್ಕೆ ಮಾಡಲಿಕ್ಕೆ ಹೋದಾನು. ಇಲ್ಲಿಯೇ ಅವಿದ್ಯಾಕಾಲ ಕರ್ಮಗಳಿಂದ ಬಿಡಲ್ಪಟ್ಟವನಾಗಿ, ಪುನಃ ಶರೀರವನ್ನು ಹೊಂದುವದೇ ಇಲ್ಲ. ಮೊದಲು ಆರೋಗ್ಯವಿದ್ದವನಿಗೆ ಯಾವದಾದರೊಂದು ದೋಷದಿಂದ ರೋಗ ಬಂದು ದುಃಖಿಯಾಗಿ ತೋರುತ್ತಾನೆ. ಪುನಃ ಸದ್ವೈದ್ಯ

ನಿಂದ ಔಷಧವನ್ನು ಸ್ವೀಕರಿಸಿ ರೋಗವನ್ನು ಪರಿಹರಿಸಿಕೊಂಡರೆ, ಆರೋಗ್ಯವು ಪ್ರಾಪ್ತವಾಯಿತು ಎಂದು ಅನಿಸುತ್ತದೆ. ಆದರೆ ಆರೋಗ್ಯವು ಮೊದಲು ಇದ್ದು ಅದು ದೋಷದಿಂದ ಗ್ರಸ್ತವಾಗುವದರಿಂದ ಇಲ್ಲದಂತಾಗಿತ್ತು. ಕಿಂತು, ಅದು ಮೊದಲು ಇದ್ದದ್ದೇ ಅಂದರೆ; ವೈದ್ಯರು ಔಷಧವನ್ನು ಆರೋಗ್ಯ ಪ್ರಾಪ್ತಿಗೆ ಕೊಡಲಿಲ್ಲ.ದೋಷನಿವೃತ್ತಿಗೆ ಕೊಟ್ಟಿರುವರು. ಅದರಂತೆ ಗುರುಗಳು ಜ್ಞಾನವನ್ನು ಮುಕ್ತಿ ಪ್ರಾಪ್ತಿಗೆ ಕೊಡಲಿಲ್ಲ. ಅವಿದ್ಯಾರೂಪಬಂಧ ನಿವೃತ್ತಿಗೆ ಹೇಳಿರುವರು. ಮುಕ್ತನು ಮೊದಲೇ ಇದ್ದವನಿಗೆ ಮುಕ್ತನೆಂದು ಹೇಳಿರುವದು ಯೋಗ್ಯ ವಾಗಿರುತ್ತದೆ ಎಂಬ ಭಾವವು.

**೭ ಸಂ, ೧ ಸೂ, ೨ ಪ, 'ಸ ಗುರುಮೇವ' ಮುಂ –೧–೨–೧೩**

ಸಾಧನ ಸಾಧ್ಯರೂಪ ಸಂಸಾರದಿಂದ ವಿರಕ್ತನಾದವನಿಗೆ ಪರಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಈ ಶ್ರುತಿಯು ಹೇಳುತ್ತದೆ.

**'ಪರೀಕ್ಷ್ಯ ಲೋಕಾಕ್ಕರ್ಮ ಚಿತಾ ನ್ಬ್ರಾಹ್ಮಣೋ ನಿರ್ವೇದ ಮಾಯಾ ನ್ನಾಸ್ತ್ಯ ಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃಶ್ರೋತ್ರಿಯಂ ಬ್ರಹ್ಮನಿಷ್ಠಂ'**

**ಟೀಕಾ:**- ಬ್ರಾಹ್ಮಣಃ=ಮೋಕ್ಷಾಪೇಕ್ಷಿಯು, ಕರ್ಮಚಿತಾನ್=ಕರ್ಮಗಳಿಂದ ಪ್ರಾಪ್ತವಾದ, ಲೋಕಾನ್ = ಲೋಕಾಂತರ ಫಲಗಳನ್ನು ಪರೀಕ್ಷ್ಯ= ವಿಚಾರಿಸಿ, ನಿರ್ವೇದಂ=ವೈರಾಗ್ಯವನ್ನು, ಆಯಾತ್=ಹೊಂದತಕ್ಕದ್ದು, ಅಕೃತಃ=ಮೋಕ್ಷವು, ಕೃತೇನ=ಕರ್ಮದಿಂದ, ನಾಸ್ತಿ=ಆಗುವದಿಲ್ಲ (ಆದ್ದರಿಂದ) ತತ್=ಪರಬ್ರಹ್ಮವನ್ನು, ವಿಜ್ಞಾನಾರ್ಥಂ=ತಿಳಿಯುವದಕ್ಕಾಗಿ, ಸಃ = ಮುಮುಕ್ಷು, ಸಮಿತ್ಪಾಣಿಃ = ಅರಳಿ ಕಟ್ಟಿಗೆಗಳನ್ನು ಹಿಡಿದುಕೊಂಡು,ಶ್ರೋತ್ರಿಯಂ ಶ್ರುತಿಜ್ಞಾನವುಳ್ಳ, ಬ್ರಹ್ಮನಿಷ್ಠಂ= ತಪೋನಿಷ್ಠನಾದ, ಗುರುಮೇವ=ಗುರುಗಳನ್ನೇ ಕುರಿತು, ಅಭಿಗಚ್ಛೇತ್=ಶರಣಾಗತನಾಗತಕ್ಕದ್ದು.

**ತಾತ್ಪರ್ಯ:**- ವೇದದಲ್ಲಿರುವ ಅಪರ ವಿದ್ಯೆಯು, ಸ್ವಾಭಾವಿಕ ಅವಿದ್ಯಾ ಕಾಮುಕರ್ಮಾದಿಗಳಿಂದ ಕೂಡಿರುವ ಪುರುಷನನ್ನೇ ಕುರಿತು, ಅನುಷ್ಠಿಸತಕ್ಕ ಕರ್ಮಗಳನ್ನು ಹೇಳಿರುತ್ತದೆ. ದಕ್ಷಿಣ ಮತ್ತು ಉತ್ತರ ಮಾರ್ಗಗಳಿಂದ ಹೋಗಿ ಅವುಗಳ ಫಲಗಳನ್ನುಪಭೋಗಿಸಬೇಕಾಗುತ್ತದೆ. ವಿಹಿತ ಕರ್ಮಗಳನ್ನು ಮಾಡದಿರುವದರಿಂದಲೂ, ಪಾಪಕರ್ಮಗಳನ್ನು ಮಾಡುವದರಿಂದಲೂ, ಈ ದೋಷಗಳಿಂದ ಪ್ರಾಪ್ತಗಳಾದ ನರಕ, ಪಶು, ಪಕ್ಷಿ, ಪಿಶಾಚಾದಿ ಫಲಗಳನ್ನು ಪ್ರತ್ಯಕ್ಷ, ಅನುಮಾನ, ಉಪಮಾನ ಆಗಮುಗಳಿಂದ ಚನ್ನಾಗಿ ವಿಚಾರಿಸಿ, ಅಂದರೆ, ಬೀಜಾಂಕುರ

ದಂತೆ ಪರಸ್ಪರ ಉತ್ಪತ್ತಿ ನಿಮಿತ್ತವುಳ್ಳಂಥಾ, ಸಾವಿರಾರು ಅನರ್ಥಗಳಿಂದ ಕೂಡಿದಂಥಾ, ಬಾಳೆಯ ಗರ್ಭದಂತೆ ಅಸಾರವಾದಂಥಾ, ಇಂದ್ರಜಾಲ, ಮೃಗಜಲ, ಗಂಧರ್ವನಗರ, ಸ್ವಪ್ನ, ಜಲದಗುರಿಳೆಯಂತೆ ತೋರಿ ಕ್ಷಣದಲ್ಲಿ ನಷ್ಟವಾಗಿ ಹೋಗುವಂಥಾ, ಕರ್ಮಫಲಗಳಾಗಿರುತ್ತವೆಂದು ತಿಳಿದು ಸಾಧ್ಯ ಸಾಧನಗಳನ್ನು ಬಿಟ್ಟು, ವೈರಾಗ್ಯವುಳ್ಳವನಾಗಿ 'ಸರ್ವ ಲೋಕಗಳು ಕರ್ಮರಚಿತಗಳಾಗಿರುವದರಿಂದ ಅನಿತ್ಯಗಳಾಗಿರುತ್ತವೆ. ನಿತ್ಯವೆಂಬುದು, ಕಿಂಚಿತ್ತಾದರೂ ಇಲ್ಲ. ಉತ್ಪಾದ್ಯ, ಪ್ರಾಪ್ಯ, ಸಂಸ್ಕಾರ್ಯ್ಯ ವೈಕಾರ್ಯ್ಯಗಳೆಂಬ ನಾಲ್ಕು ಕರ್ಮದ ಫಲಗಳು ಅನಿತ್ಯಗಳಾಗಿಯೇ ಇರುವವು. ನಾನಾದರೋ ನಿತ್ಯ ಅಭಯ, ಅಚಲ, ಅಮೃತವಾದ ಮೋಕ್ಷವನ್ನು ಬಯಸುತ್ತಿರುತ್ತೇನೆ. ಈ ಮೋಕ್ಷವು ಕರ್ಮದಿಂದಾಗುವದಿಲ್ಲ. ಕಿಂತು, ಆಯಾಸವೇ ಅಧಿಕವಾಗುತ್ತದೆ. ಆದ್ದರಿಂದ ಅಭಯ, ಶಿವ, ನಿತ್ಯ, ಪದ ಸ್ವರೂಪವನ್ನು ತಿಳಿಯುವದಕ್ಕಾಗಿ, ಪರಾವಿದ್ಯೆಯನ್ನು ಪಡೆಯುವದಕ್ಕಾಗಿ, ಶಾಸ್ತ್ರಜ್ಞಾನ ಸಂಪನ್ನನಾಗಿಯೂ, ಅನುಭವಿಕನಾಗಿಯೂ, ಶಮದಮಾದಿಗಳಿಂದ ಕೂಡಿರುವ ಗುರುಗಳನ್ನೇ ಕುರಿತು; ಕೈಯಲ್ಲಿ ಅರಳಿ ಕಟ್ಟಿಗೆಗಳನ್ನು ಹಿಡಿದುಕೊಂಡು, ಶರಣಾಗತನಾಗತಕ್ಕದ್ದು. ಅನಂತರ ಅಕ್ಷರ ಆತ್ಮನ ವಿದ್ಯೆಯನ್ನು ಕೇಳತಕ್ಕದ್ದು.

---

## ೭ ಸಂ, ೧ ಸೂ, ೨ ಪ "ನ ಗುರೋರಧಿಕ" ಯೋಗಶಿಖಾ—೫—೫೭

ಶ್ರೀ ಸದ್ಗುರುವಿನಗಿಂತಲೂ ಅಧಿಕರಾದವರು ಯಾರೂ ಇಲ್ಲೆಂಬುದನ್ನು ಈ ಶ್ರುತಿಯು ಹೇಳುತ್ತದೆ.

**"ಗುರುಬ್ರಹ್ಮಾ ಗುರುರ್ವಿಷ್ಣು ಗುರುರ್ದೇವಃ ಸದಾಚ್ಯುತಃ**
**ನ ಗುರೋರಧಿಕಃ ಕಶ್ಚಿತ್ತ್ರಿಷು ಲೋಕೇಷು ವಿದ್ಯತೆ"**

**ಟೀಕಾ:-** ಗುರು=ಬ್ರಹ್ಮೋಪದೇಶವನ್ನು ಮಾಡುವಂಥಾ ಗುರುವು, ಬ್ರಹ್ಮಾ= ಜ್ಞಾನೋತ್ಪತ್ತಿಯನ್ನು ಮಾಡುವದರಿಂದ ಬ್ರಹ್ಮನು, ಗುರುರ್ವಿಷ್ಣು=ಉತ್ಪನ್ನವಾದ ಜ್ಞಾನವನ್ನು ರಕ್ಷಣೆ ಮಾಡುವದರಿಂದ ವಿಷ್ಣುವಾಗಿರುವನು, ಗುರುದೇವಃ= ಅವಿದ್ಯೆಯನ್ನು ಸಂಹಾರಮಾಡುವದರಿಂದ ರುದ್ರನು, ಸದಾ=ಯಾವಾಗಲೂ, ಅಚ್ಯುತಃ= ನಾಶರಹಿತನಾಗಿರುವನು, ಗುರೋಃ = ಇಂಥಾ ಸದ್ಗುರುವಿಗಿಂತಲೂ, ಅಧಿಕಃ=ಶ್ರೇಷ್ಠನಾದವನು, ತ್ರಿಷುಲೋಕೇಷು=ಸ್ವರ್ಗ,ಮೃತ್ಯು, ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ, ನವಿದ್ಯತೆ=ಇರುವದಿಲ್ಲ.

ಈ ಅರ್ಥವು ಶತಶ್ಲೋಕಿ ಗ್ರಂಥದ ೧ನೇ ಶ್ಲೋಕದಲ್ಲಿ ವಿಸ್ತಾರವಾಗಿರುವದು. ಅಲ್ಲಿ ಅವಲೋಕನಮಾಡಬಹುದು.

**೭ಸಂ, ೨ಸೂ, ೧೨ ಫ " ತಸ್ಯ ತಾವದೇವಚಿರಂ " ಛಾಂ ೬-೧೪-೨**

ಶರೀರ ನಿರ್ಮಾಣಕ್ಕೆ ಹೇತುವಾದ ಪ್ರಾರಬ್ಧ ಕರ್ಮವು ಇರುವವರೆಗೂ ಜ್ಞಾನೋತ್ತರ ಕಾಲದಲ್ಲಾಬ್ಯದರೂ ಈ ಶರೀರವು ಇರುತ್ತದೆ. ಆ ಪ್ರಾರಬ್ಧ ಕರ್ಮವು ಉಪಭೋಗದಿಂದ ಕ್ಷಯುವಾಗಲು, ತಕ್ಷಣವೇ ಶರೀರ ನಾಶವಾಗಿ ಆನಂತರ ಕೇವಲ ಸದ್ರೂಪ ಬ್ರಹ್ಮನೇ ಆಗಿರುವನೆಂಬರ್ಥವನ್ನು ಶ್ರುತಿಯು ಹೇಳುತ್ತದೆ.

**"ತಸ್ಯ ಯಥಾಭಿನಹನಂ ಪ್ರಮುಚ್ಯ ಪ್ರಬ್ರೂಯಾದೇತಾಂ ದಿಶಂ ಗಂಧಾರಾ ಏತಾಂ ದಿಶಂ ವ್ರಜೇತಿ ಸ ಗ್ರಾಮಾದ್ಗ್ರಾಮಂ ಪೃಚ್ಛ ಸ್ಪಂಡಿತೋ ಮೇಧಾವೀ ಗಂಧಾರಾನೇವೋಪಸಂಪದ್ಯೈತೈವ ಮೇವೇ ಹಾಽಽಚಾರ್ಯವಾನ್ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯ ಇತಿ'**

**ಟೀಕಾ:**– ತಸ್ಯ=ಅವನಿಗೆ, ಯಥಾ ಅಭಿನಹನಂ = ಹಾಗೇ ಇದ್ದ ಬಂಧನ ವನ್ನು, ಪ್ರಮುಚ್ಯ=ಬಿಡಿಸಿ, ಏತಾಂ=ಈ, ದಿಶಂ=ದಿಕ್ಕನ್ನು ಕುರಿತು, ಗಂಧಾರಾ= ಗಂಧಾರ ದೇಶವಿರುವದು, ಏತಾಂ = ಈ, ದಿಶಂ= ದಿಕ್ಕನ್ನು ಕುರಿತು, ವ್ರಜೇತಿ= ಹೋಗತಕ್ಕದ್ದೆಂದು, ಪ್ರಬ್ರೂಯಾತ್=ಹೇಳಿದನು, ಸಃ=ಅವನು, ಗ್ರಾಮಾತ್= ಊರಿಂದ, ಗ್ರಾಮಂ=ಊರನ್ನು, ಪೃಚ್ಛನ್=ಕೇಳುತ್ತಾ, ಪಂಡಿತಃ = ಉಪದೇಶ ವುಳ್ಳಂಥಾ, ಮೇಧಾವೀ = ಸ್ಮರಣಶಕ್ತಿಯುಳ್ಳವನು, ಗಂಧಾರಾನೇವ = ಗಾಂಧಾರ ದೇಶವನ್ನೇ ಕುರಿತು, ಉಪಸಂಪದ್ಯೇತ್=ಹೊಂದಿದನು, ಏವಮೇವ= ಈ ದೃಷ್ಟಾಂತ ದಂತೆ, ಇಹ=ಇಲ್ಲಿ, ಆಚಾರ್ಯವಾನ್=ಗುರುಸಮೇತನಾದ, ಪುರುಷಃ=ಪುರುಷನು, ವೇದ=ತನ್ನನ್ನು ತಾನು ತಿಳಿಯುವನೋ ತಸ್ಯ=ಅವನಿಗೆ, ಯಾವತ್=ಎಲ್ಲಿಯವರೆಗೆ; ನವಿಮೋಕ್ಷ್ಯೆ = ಬಿಡುಗಡೆಯಿಲ್ಲೋ, ತಾವದೇವ=ಪ್ರಾರಬ್ಧ ಕರ್ಮವಿರುವವರೆಗೆ, ಚಿರಂ=ಅವಕಾಶವಿರುವದು, ಅಥ= ಆನಂತರ, ಸಂಪತ್ಸ್ಯ ಇತಿ = ಸದ್ರೂಪವನ್ನೇ ಹೊಂದುವನು.

**ತಾತ್ಪರ್ಯ:**– ಹೇ ಸೋಮ್ಯನೇ! ಒಬ್ಬಾನೊಬ್ಬ ಗಂಧಾರದೇಶದ ಪುರು ಷನು ಧನವಂತನಿದ್ದದರಿಂದ ಮುತ್ತು ರತ್ನಾಭರಣಗಳನ್ನು ಧರಿಸಿದ್ದನು. ಕಳ್ಳರು ಅವನನ್ನು ಹಿಡಿದು ಅವನ ಕಣ್ಣು ಕೈಕಾಲುಗಳನ್ನು ಕಟ್ಟಿ, ನಿರ್ಜನವಾದ ಭೀಕರ ವಾದ ಅರಣ್ಯದಲ್ಲಿ ತಂದಿಳಿಸಿ, ದ್ರವ್ಯವನ್ನಪಹರಿಸಿಕೊಂಡು ಹೋದರು. ಆ ಬಂಧಿ ಸಲ್ಪಟ್ಟ ಪುರುಷನು ದಿಗ್ಭ್ರಮವುಳ್ಳವನಾಗಿ ಶೋಕವನ್ನು ಮಾಡಹತ್ತಿದನು. ಅದೇ ಅರಣ್ಯದಲ್ಲಿ ಒಬ್ಬಾನೊಬ್ಬ ಕಾರುಣಿಕ ಪುರುಷನು; ಈತನು ಅಳುವ ಧ್ವನಿಯನ್ನು ಕೇಳಿ, ಈತನ ಹತ್ತಿರ ಬಂದು ಕಣ್ಣು ಕೈಕಾಲುಗಳನ್ನು ಬಿಚ್ಚಿ, ನೀನು ಯಾರು?

ಈ ಅರಣ್ಯಕ್ಕೆ ಯಾಕೆ ಬಂದಿ? ನಿನ್ನನ್ನು ಹೀಗೆ ಯಾರು ಕಟ್ಟಿರುವರು? ಎಂದು ಕೇಳಿದನು. ಅದಕ್ಕೆ ಆತನು ''ನಾನು ಗಂಧಾರ ದೇಶದವನು. ಕಳ್ಳರು ನನ್ನನ್ನು ಬಂಧಿಸಿ ದ್ರವ್ಯವನ್ನು ಅಪಹರಿಸಿ ನನ್ನನ್ನು ಇಲ್ಲಿ ಒಗೆದು ಹೋಗಿರುವರು'' ಎಂದು ಹೇಳಿದನು. ಆಗ್ಯೆ ಆ ಕರುಣಾಶಾಲಿಯು ''ಇದೇ ಉತ್ತರದಿಕ್ಕು. ಈ ದಿಕ್ಕಿಗೆ ಗಂಧಾರದೇಶವಿರುವದು. ಊರಿಂದ ಊರನ್ನು ಕೇಳುತ್ತಾ ಹೋದರೆ; ನೀನು ನಿನ್ನ ಗಂಧಾರ ದೇಶವನ್ನು ಹೊಂದುವಿ. ಎಂದು ಹೇಳಿದನು. ಅದೇ ಪ್ರಕಾರ ಆ ಪುರುಷನು ಪರದಿಂದ ಉಪದೇಶಿಸಲ್ಪಟ್ಟವನೂ, ಅವರು ಹೇಳಿದ್ದನ್ನು ಸ್ಮರಣದಲ್ಲಿಟ್ಟು ಕೊಳ್ಳುವ ಸಾಮರ್ಥ್ಯವುಳ್ಳವನೂ ಆಗಿ; ಗಂಧಾರ ದೇಶವನ್ನು ಹೊಂದಿದನು. ಈ ದೃಷ್ಟಾಂತದಂತೆ; ಜಗದಾತ್ಮರೂಪ ಅಂದರೆ, ಪೂರ್ಣಾತ್ಮರೂಪ ಗಂಧಾರ ದೇಶ ದಿಂದ ಜೀವನೆಂಬ ಪುರುಷನನ್ನು ಅವಿದ್ಯಾ, ಕಾಮ, ಪುಣ್ಯ ಪಾಪ ಕರ್ಮ ಗಳೆಂಬ ಕಳ್ಳರು ಹಿಡಿದು ತಂದು, ಪಂಚಭೂತಾತ್ಮಕವಾದ ದೇಹರೂಪ ಅರಣ್ಯದಲ್ಲಿ ಹೊಗಿಸಿ, ವಾತ, ಪಿತ್ತ, ಕಫ, ರಕ್ತ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜಾ ಶುಕ್ರ, ಕೃಮಿ, ಮೂತ್ರ, ಮಲ, ಶೀತೋಷ್ಣಾದಿ ಅನೇಕ ದ್ವಂದದುಃಖಗಳಿಂದ ಕೂಡಿದ ಶರೀರವೇ ನಾನಲ್ಲೆಂದು ತಿಳಿಯದೆ, ಇದೇ ನಾನೆಂದು ನಂಬಿದನು. ಇವನ ವಿವೇಕರೂಪ ನೇತ್ರಗಳನ್ನು ಈ ಮೋಹರೂಪ ವಸ್ತ್ರದಿಂದ ಬಿಗಿದು ಕಟ್ಟಿರುವರು. ಸ್ತ್ರೀ, ಪುತ್ರ, ಮಿತ್ರ, ಪಶು, ಬಂಧುಗಳೆಂಬ ದೃಷ್ಟಾದೃಷ್ಟ ಅನೇಕ ವಿಷಯ ಗಳನ್ನು ಅಪೇಕ್ಷಿಸುವದರಿಂದ, ಈ ತೃಷ್ಣಾರೂಪ ಪಾಶದಿಂದ ಈತನ ವೈರಾಗ್ಯವೆಂಬ ಪಾದಗಳನ್ನು ಬಂಧಿಸಿ, ಸ್ವರೂಪ ಜ್ಞಾನವೆಂಬ ಧನವನ್ನು ಅಪಹರಿಸಿಕೊಂಡು ಹೋದರು. ಆದ್ದರಿಂದಲೇ ಈ ಜೀವ ಪುರುಷನು ''ನಾನು ಇಂಥವನ ಮಗನು, ಇವರೆಲ್ಲರು ನನ್ನ ಬಾಂಧವರು, ನಾನು ಸುಖೀ, ದುಃಖೀ, ಮೂಢನೂ, ಪಂಡಿತನೂ, ಧಾರ್ಮಿಕನೂ, ಬಂಧುವುಳ್ಳವನೂ ಇದ್ದೇನೆ. ಹುಟ್ಟಿದ್ದೇನೆ. ಮುದಕನಾದೆ. ಸಾಯುತ್ತೇನೆ. ನಾನು ಬಹಳ ಪಾಪಿ. ನನ್ನ ಪುತ್ರರು ಮೃತರಾಗಿ ಹೋದರು. ನನ್ನ ದ್ರವ್ಯವೆಲ್ಲಾ ನಷ್ಟವಾಗಿ ಹೋಯಿತು. ಇನ್ನೇನು ಮಾಡಲಿ. ನಾನು ಹತಭಾಗ್ಯನಿದ್ದೇನೆ. ಹೇಗೆ ಜೀವಿಸಲಿ? ನನ್ನ ಗತಿಯೇನು?" ಹೀಗೆಂದು ನೂರಾರು ಸಾವಿರ ಅನರ್ಥಗಳನ್ನು ಚಿಂತಿಸುತ್ತಿರುವದೇ ಆಳೋಣವು. ಹೀಗೆ ಆಳುತ್ತಾ ಜನ್ಮಾಂತರಗಳಲ್ಲಿ ತಿರಗುತ್ತಿರಲಾಗಿ, ಇವನ ಪೂರ್ವ ಪುಣ್ಯೋದಯ ದಿಂದ ಪರಮಕಾರುಣಿಕನಾದ ಬ್ರಹ್ಮವಿತ್ತ ಸದ್ಗುರುನಾಥನು ಭೆಟ್ಟಿಯಾಗಿ "ಹೇ ಜೀವನೇ! ನೀನುಯಾರು? ಈ ದೇಹದಲ್ಲಿ ಯಾತಕ್ಕೆ ಬಂದೆ? ಹೀಗೆ ಸುಮ್ಮನೆ ಏನು ಕಾರಣ ರೋದನ ಮಾಡುವಿ'' ಎಂದು ಕೇಳಲು; ಭೋಸ್ವಾಮಿನ್! ನಾನು ಯಾರೆಂಬುದು ನನಗೆ ಗೊತ್ತಿಲ್ಲ. ಈ ದೇಹದೊಳು ಯಾರು ಹೊಗಿಸಿದರೆಂಬುದು ನನಗೆ ಅರುವಿಲ್ಲ. ಆದರೆ ಈ ದುಃಖವನ್ನು ಬಿಡಿಸಿ ನನಗೆ ಸುಖವನ್ನು ಕೊಡಿರಿ.'' ಎಂದು ಕೇಳಹತ್ತಿದನು. ಆಗ್ಯೆ ಬ್ರಹ್ಮವೆತ್ತರಾದ ಮಹಾತ್ಮಾರು "ಹೇ ಜೀವನೇ!

ನೀನು ನಿನ್ನ ಸ್ವರೂಪವೆಂಬ ಗಂಧಾರ ದೇಶವನ್ನು ಹೊಂದಿ ಸುಖಿಯಾಗಬೇಕಾದರೆ, ಇಹಪರ ಭೋಗವಿಷಯುಗಳಲ್ಲಿ ಅನಿತ್ಯ,ಅಶುಚಿ,ದುಃಖವೆಂಬ ದೋಷದರ್ಶನದಿಂದ ವಿಷಯ ತ್ಯಾಗರೂಪ ಮಾರ್ಗವನ್ನು ಹಿಡಿದು, ಅಂದರೆ ವಿರಕ್ತನಾಗಿ ಶಮದಮಾದಿ ಸಾಧನಗಳಿಂದೊಡಗೂಡಿದವನಾಗು. ಹೀಗೆ ಸುಮ್ಮನೆ ಯಾಕೆ ಶೋಕಿಸುತ್ತಿರುವಿ ಎಂದು ಹೇಳಿ, ವಿವೇಕ ವೈರಾಗ್ಯಗಳನ್ನು ಉಪದೇಶಿಸಿ. ಆಶಾರೂಪ ಪಾಶವನ್ನೂ ಮೋಹರೂಪ ಪಟಲವನ್ನೂ ಪರಿಹಸಿರಿ, ನೀನು ಸಂಸಾರಿ ಜೀವನಲ್ಲ. ಹುಟ್ಟು, ಸಾವುಗಳು ನಿನಗಿಲ್ಲ. ನೀನು ಕೇವಲ ಸಚ್ಚಿದಾನಂದರೂಪ ಬ್ರಹ್ಮನೇ ಇರುವಿ. ಹೀಗಿದ್ದು ಅಜ್ಞಾನದಿಂದ ಅನಾತ್ಮಧರ್ಮಗಳನ್ನು ಪರಿಗ್ರಹಿಸಿ ದುಃಖಿಯಾಗಿರುವಿ. ತತ್ತ್ವಮಸ್ಯಾದಿ ಮಹಾವಾಕ್ಯಗಳನ್ನು ವಿಚಾರಿಸಿ. ಪಂಚಕೋಶಾದಿ ಅನಾತ್ಮ ವರ್ಗಗಳನ್ನು ಬೇರ್ಪಡಿಸಿ ಸಾಕ್ಷಿಯಾಗಿರುವ ನಿರ್ವಿಕಾರ ಕೂಟಸ್ಥ ತುರ್ಯಾತ್ಮನೇ ಬ್ರಹ್ಮನು; ಆ ಬ್ರಹ್ಮನೇ ನಾನಿರುವೆನೆಂದು ನಿರ್ಧರಿಸು. ಅಂದರೆ ಗಂಧಾರ ದೇಶದ ಪುರುಷನಂತೆ ನೀನು ನಿನ್ನ ಸಚ್ಚಿದಾನಂದರೂಪ ದೇಶವನ್ನು ಹೊಂದಿ ಸುಖಿಯಾಗುವಿ. ಈ ರೀತಿ ಗುರುಗಳು ಶಿಷ್ಯನನ್ನು ಕುರಿತು. ಉಪದೇಶಿಸಿದರು. ಅದೇ ರೀತಿ ಶಿಷ್ಯನು ಶ್ರವಣ, ಮನನ, ನಿಧಿಧ್ಯಾಸನಮಾಡುತ್ತಾ ತನ್ನ ಸ್ವರೂಪವನ್ನು ಹೊಂದಿ ಸುಖಿಯಾದನು. ಈ ರೀತಿ ಗುರುವಿನುಪದೇಶವನ್ನು ಹೊಂದಿದ ಪುರುಷನು; ಎಲ್ಲಿಯುವರೆಗೆ ದೇಹವನ್ನು ಆರಂಭ ಮಾಡಿರುವ ಪ್ರಾರಬ್ಧಕರ್ಮಗಳು ಉಪಭೋಗದಿಂದ ಕ್ಷಯುವಾಗಿರುವದಿಲ್ಲವೋ, ಅಲ್ಲಿಯತನಕ ಅವನು ಈ ಶರೀರದಿಂದ ಜೀವಿಸಿಕೊಂಡು ಇರುವ ಹಾಗೆ ತೋರುತ್ತಾನೆ. ಅಂದರೆ, ಶರೀರಕ್ಕೆ ಉಪಾದಾನ ಕಾರಣವಾದ ಅವಿದ್ಯೆಯು ಜ್ಞಾನದಿಂದ ನಷ್ಟವಾದರೂ, ಕಾರ್ಯರೂಪ ದೇಹವು ಕುಲಾಲಚಕ್ರದ ಭ್ರಮಣದಂತೆ ಸಂಸ್ಕಾರದಿಂದ ಜೀವಿಸುತ್ತಿರುವದು. ಅದರಿಂದ ಈತನು ಬ್ರಹ್ಮನಾಗಿಲ್ಲವೋಏನೋ ಎಂಬಂತೆ ತೋರುವನು. ಕರ್ಮ ಕ್ಷಯದಿಂದ ದೇಹಪಾತವಾದ ಕೂಡಲೇ ಬ್ರಹ್ಮವಿತ್ತನು ಸದ್ರೂಪವನ್ನು ಹೊಂದಿದನೆಂಬಂತೆ ತೋರುವದು. ಇದು ದೇಹೋಪಾಧಿಯಿಂದ ಹೀಗೆ ತೋರುವದೇ ಹೊರತು ಸಹಜವಲ್ಲ. ಅವನು ಕೇವಲ ಬ್ರಹ್ಮಮೂರ್ತಿಯೇ ಆಗಿರುವನು. ಅಂದರೆ, ದೇಹ ಪಾತಕ್ಕೂ ಬ್ರಹ್ಮವನ್ನು ಹೊಂದುವದಕ್ಕೂ ಕಾಲಭೇದವಿಲ್ಲೆಂಬ ಭಾವವು.

**ಶಂಕಾ-** ಪ್ರಾರಬ್ಧಕರ್ಮ ಮೂಲಕ ಜ್ಞಾನೋತ್ಪತ್ತಿ ಉತ್ತರಕಾಲದಲ್ಲಿಯೇ ದೇಹಪಾತವೂ ಬ್ರಹ್ಮವನ್ನು ಪೊಂದುವದೂ ಹೇಗೆ ಆಗುವದಿಲ್ಲವೋ, ಹಾಗೆಯೇ ಫಲವನ್ನು ಕೊಡದೆ ಇರತಕ್ಕ ಜ್ಞಾನೋತ್ಪತ್ತಿಗಿಂತಲೂ ಪೂರ್ವಜನ್ಮಾಂತರಗಳಲ್ಲಿ ಸಂಪಾದಿಸಿದ ಸಂಚಿತ ಕರ್ಮಗಳು ಇರುತ್ತವೆ. ಈ ಶರೀರವು ಬಿದ್ದುಹೋದರೂ, ಅವು ತಮ್ಮ ಫಲಗಳನ್ನು ಕೊಡುವದಕ್ಕಾಗಿ, ಮತ್ತೊಂದು ಶರೀರವನ್ನು ಉತ್ಪತ್ತಿ ಮಾಡುತ್ತವೆ, ಮತ್ತೂ ಜ್ಞಾನೋತ್ತರ ಕಾಲದಲ್ಲಿಯಾದರೂ ಜೀವಿಸಿಕೊಂಡಿರುವ

ವರೆಗೆ ಪುಣ್ಯಗಳನ್ನಾಗಲಿ ಅಥವಾ ಪಾಪಕರ್ಮಗಳನ್ನಾಗಲಿ ಮಾಡುತ್ತಲೇ ಇರುವನು. ಆ ಕರ್ಮಗಳ ಫಲವನ್ನುಪಭೋಗ ಮಾಡುವದಕ್ಕಾಗಿ ಬೇರೊಂದು ಶರೀರವನ್ನು ರಚಿಸಲಿಕ್ಕೇಬೇಕು. ಅದರಿಂದ ಕರ್ಮಗಳು .ಆ ಕರ್ಮಗಳಿಂದ ಪುನಃ ಶರೀರವು ಈ ರೀತಿ ಕರ್ಮಗಳ ಫಲವು ಆಗುವದರಿಂದ ಜ್ಞಾನವು ಅನರ್ಥವುಳ್ಳದ್ದಾಗಿರುವದು.

ಜ್ಞಾನವುಳ್ಳ ಪುರುಷನ ಕರ್ಮಗಳು ನಾಶವಾಗುತ್ತವೆ. ಜ್ಞಾನೋತ್ಪತ್ತಿ ಸಮಕಾಲದಲ್ಲಿಯೇ ಅವನು ಬ್ರಹ್ಮವನ್ನು ಹೊಂದುತ್ತಾನೆ. ಅಂದರೆ ಜ್ಞಾನೋತ್ಪತ್ತಿ ಕಾಲದಲ್ಲಿಯೇ ಅವನ ದೇಹವು ಪಾತವಾಗಬೇಕಾಯಿತು. ಹಾಗಾದರೆ ಆಚಾರ್ಯರೇ ಇಲ್ಲದಂತಾಗುವದು. ಆಚಾರ್ಯನಿಲ್ಲದಲೇ ಜ್ಞಾನವಾಗುವದಿಲ್ಲ. ಜ್ಞಾನವಿಲ್ಲದೆ ಮೋಕ್ಷವಿಲ್ಲ. ಅಂದಮೇಲೆ ಗಂಧಾರ ದೇಶದ ಪುರುಷನಂತೆ ಜ್ಞಾನದಿಂದ ಮೋಕ್ಷವನ್ನು ಹೊಂದುವದು ನಿಯಮವಲ್ಲ.

**ಸಮಾಧಾನ**- 'ಹಾಗಲ್ಲ. ಕೆಲವು ಕರ್ಮಗಳು ಫಲವನ್ನುಂಟುಮಾಡುವದಕ್ಕೆ ಉದ್ಯುಕ್ತಗಳಾಗಿರುವವು. ಕೆಲವು ಕರ್ಮಗಳು ಉದ್ಯುಕ್ತಗಳಾಗಿರುವದಿಲ್ಲ. ಆದ್ದರಿಂದ ಈ ವ್ಯವಸ್ಥೆಯು ಯೋಗ್ಯರೀತಿ ಸಂಭವಿಸುತ್ತದೆ. ಬ್ರಹ್ಮವಿತ್ತನ ಶರೀರಪಾತಾನಂತರದಲ್ಲಿಯೂ ಸಂಚಿತ ಕರ್ಮಗಳು ತಮ್ಮ ಫಲವನ್ನು ಕೊಡುವದಕ್ಕಾಗಿ ದೇಹೋತ್ಪತ್ತಿಯನ್ನು ಮಾಡುತ್ತವೆಂದು ನೀನು ಏನು ಹೇಳಿದಿಯೋ, ಅದು ಮಿಥ್ಯೆಯಾಗಿರುವದು. ಯಾಕಂದರೆ, ವಿದ್ವಾಂಸನಿಗೆ ಪ್ರಾರಬ್ಧ ಕರ್ಮವಿರುವವರೆಗೆ ತಡವೆಂಬ ಶ್ರುತಿಪ್ರಮಾಣವಿರುವದರಿಂದ, ದೇಹೋತ್ಪತ್ತಿಯನ್ನು ಹೇಳಲಾಗದು.

ಶಂಕಾ- ಪುಣ್ಯ ಕರ್ಮದಿಂದ ಪುಣ್ಯವು ಆಗುತ್ತದೆ. ಅದರಿಂದ ಜನ್ಮ ಬರುವದು. ಅದರಲ್ಲಿಯೂ ಅವನು ಪುಣ್ಯವನ್ನೇ ಮಾಡುತ್ತಾನೆ. ಹೀಗೆಂಬ ಶ್ರುತಿ ಪ್ರಮಾಣವೂ ಉಂಟು.

**ಸಮಾಧಾನ**- ಇದು ಖರೆ. ಆದರೂ ಫಲವನ್ನು ಕೊಡುವದಕ್ಕೆ ಪ್ರವೃತ್ತಿಗಳಾದಂಥಾ, ಆಗದೇ ಇರುವಂಥಾ, ಕರ್ಮಗಳ ಮೂಲಕ ವಿಶೇಷವಾಗಿರುತ್ತದೆ. ಹೇಗಂದರೆ, ಯಾವ ಕರ್ಮಗಳು ಈ ಶರೀರಕ್ಕೆ ಫಲವನ್ನು ಕೊಡುವದಕ್ಕೆ ಉದ್ಯುಕ್ತಗಳಾಗಿರುವವೋ, ಅವು ಉಪಭೋಗದಿಂದಲೇ ಕ್ಷಯಗಳಾಗುತ್ತವೆ. ಹುಲಿಯೆಂದು ತಿಳಿದು ಗುರಿಯನ್ನು ಲಕ್ಷಿಸಿ ಬಿಟ್ಟ ಬಾಣಗಳು ಆಕಳೆಂದು ತಿಳಿದು ಹಿಂದಕ್ಕೆ ತಿರುಗಿಸಲಿಕ್ಕೆ ಬರುವದಿಲ್ಲ. ಅವು ವೇಗಕ್ಷಯವಾದಮೇಲೆಯೇ ಹೇಗೆ ಬೀಳುತ್ತವೆಯೋ; ಹಾಗೆ ಆ ಕರ್ಮಗಳು ಉಪಭೋಗದಿಂದ ಕ್ಷಯವಾಗುತ್ತವೆ. ಜ್ಞಾನಾಗ್ನಿಯು ಸರ್ವ ಕರ್ಮಗಳನ್ನು ಬೂದಿಮಾಡುತ್ತದೆಂಬ ಸ್ಮೃತಿಯೂ,

ಈತನ ಸರ್ವ ಕರ್ಮಗಳು ನಾಶವಾಗುತ್ತವೆಂಬ ಶ್ರುತಿಯೂ ಇರುವದರಿಂದ, ಪ್ರಾಯಶ್ಚಿತ್ತದಿಂದ ಸಕಲ ಪಾಪಗಳು ನಾಶವಾಗುವಂತೆ, ಸಂಚಿತ ಆಗಾಮಿ ಕರ್ಮಗಳು ನಾಶವಾಗುತ್ತವೆ. ಬ್ರಹ್ಮವಿತ್ತನು ಜೀವಿಸಿಕೊಂಡಿರುವಲ್ಲಿ ಪ್ರಯೋಜನವಿಲ್ಲದಿದ್ದರೂ, ದೇಹಾರಂಭಮಾಡಿದ ಕರ್ಮಗಳು ಅವಶ್ಯಫಲವನ್ನು ಕೊಡುತ್ತವೆ. ಬಿಟ್ಟ ಬಾಣದಂತೆ,ಆದ್ದರಿಂದ ಅಲ್ಲಿಯವರೆಗೆ ತಡವೆಂದು ಹೇಳಿರುವದು ಯುಕ್ತವೇ ಆಗಿದೆ. ಇದರಲ್ಲಿ ಕಿಂಚಿತ್ತಾದರೂ ದೋಷವು ಇಲ್ಲ. ಜ್ಞಾನೋತ್ಪತ್ತಿಯ ಅನಂತರ ಬ್ರಹ್ಮವಿತ್ತನಿಗೆ ಕರ್ಮದ ಲೇಪವಿಲ್ಲ ಎಂಬುದನ್ನು ಬ್ರಹ್ಮನಿಷ್ಠನು ಅಮೃತವನ್ನು ಹೊಂದುತ್ತಾನೆಂಬಲ್ಲಿ ಹೇಳಿದ್ದೇವೆ. ಅದನ್ನು ಇಲ್ಲಿ ಸ್ಮರಿಸತಕ್ಕದ್ದು.

**೭ ಹಂ, ೩ ಸೂ, ೧೪ ಪ "ಯೋಽನ್ಯಾಂ ದೇವತಾಂ" ಬೃ ೧-೪-೧೦**

ಈ ಸೃಷ್ಟಿ ಪೂರ್ವದಲ್ಲಿ ಬ್ರಹ್ಮವು ಒಂದೇ ಇತ್ತು. ಅಂಥಾ ಬ್ರಹ್ಮವೇ ನಾನಿರುವೆನೆಂದು ದೇವ, ಋಷಿ, ಮನುಷ್ಯ ಇವರುಗಳಲ್ಲಿ ಯಾವಾತನು ತಿಳಿಯುತ್ತಾನೋ, ಅವನು ಬ್ರಹ್ಮವೇ ಆಗುವನು. ಹೀಗೆ ವಾಮದೇವ ಋಷಿಯು ತಿಳಿದು ಸರ್ವಾತ್ಮಭಾವವುಳ್ಳವನಾದನು. ಅವನನ್ನು ಆಳುವದಕ್ಕೆ ದೇವತೆಗಳು ಕೂಡಾ ಸಮರ್ಥರಾಗಲಾರರು.ಯಾಕಂದರೆ ಆ ಬ್ರಹ್ಮವಿತ್ತನು ಆ ದೇವತೆಗಳ ಆತ್ಮರೂಪನೇ ಆಗಿರುವನು. ಬಳಿಕ ಯಾವನು ಬ್ರಹ್ಮಕ್ಕಿಂತ ನಾನು ಭಿನ್ನ, ನನಗಿಂತಲೂ ಬ್ರಹ್ಮಭಿನ್ನವೆಂದು ತಿಳಿಯುವನೋ, ಅವನು ಯಥಾರ್ಥ ಬಲ್ಲವನಲ್ಲ. ಅವನು ದೇವತೆಗಳಿಗೆ ಪಶು ಆಗಿರುವನು. ಒಬ್ಬನು ಅನೇಕ ಪಶುಗಳನ್ನು ಪಾಲಿಸುತ್ತಿರಲು; ಅದರೊಳಗೊಂದು ತಪ್ಪಿಸಿಕೊಂಡು ವ್ಯಾಘ್ರಾದಿ ಕ್ರೂರಪ್ರಾಣಿಗೆ ಸಿಕ್ಕು ಸಾಯಲು; ಹೇಗೆ ಕಷ್ಟಪಡುತ್ತಿರುವನೋ, ಹಾಗೇ ದೇವತೆಗಳು ಈ ಅವಿದ್ಯಾಯುಕ್ತರಾದ ಪಶುಸಮಾನರಾದ ಜೀವಿಗಳನ್ನು ಕಾಪಾಡುತ್ತಾರೆ. ಇದರೊಳಗಿಂದ ಯಾವನಾದರೊಬ್ಬನು ಆಚಾರ್ಯರೆಂಬ ಹುಲಿಯ ಕೈಗೆ ಸಿಕ್ಕು, ಬ್ರಹ್ಮವಿದ್ಯೆಯಿಂದ ಜೀವತ್ವವನ್ನು ಕಳೆದು ಬ್ರಹ್ಮಭೂತನಾದರೆ; ಇದು ದೇವತೆಗಳಿಗೆ ಪ್ರೀತಿಕರವಾಗುವದಿಲ್ಲ. ಈ ಮಾತು ಎಲ್ಲರಿಗೂ ತಿಳದೇ ಇರುವದು. ಎಂಬ ಅರ್ಥವನ್ನು ಈ ಶ್ರುತಿವಾಕ್ಯವು ಹೇಳುತ್ತದೆ.

**"ಬ್ರಹ್ಮವಾ ಇದಮಗ್ರ ಆಸೀತ್ತದಾತ್ಮಾನ ಮೇವಾವೇತ್। ಅಹಂ ಬ್ರಹ್ಮಾಸ್ಮೀತಿ। ತಸ್ಮಾತ್ತತ್ಸರ್ವಮಭವತ್ತದ್ಯೋಯೋ ದೇವಾನಾಂ ಪ್ರತ್ಯಬುಧ್ಯತ ಸಏವ ತದಭವತ್ತ ಥರ್ಷೀಣಾಂ ತಥಾ ಮನುಷ್ಯಾಣಾಂ ತದ್ಧೈತತ್ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂಮನುರಭವಂ ಸೂರ್ಯಶ್ಚೇತಿ। ತದಿದಮಪ್ಯೇತರ್ಹಿಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ**

**ಭವತಿ ತಸ್ಯಹ ನ ದೇವಾಶ್ಚ ನಾಭೂತ್ಯಾ ಈಶತೇ। ಆತ್ಮಾ ಹ್ಯೇಷಾಂ ಸ ಭವತಿ ಅಥ ಯೋऽನ್ಯಾಂ ದೇವತಾಮುಪಾಸ್ತೇऽನ್ಯೋऽಸಾವನ್ಯೋऽಹ ಮಸ್ಮೀತಿ ನ ಸವೇದ ಯಥಾ ಪಶುರೇವಂ ಸ ದೇವಾನಾಂ। ಯಥಾಹವೈಬಹವಃ ಪಶವೋ ಮನುಷ್ಯಂ ಭುಂಜುರೇವಮೇಕೈಕಃ ಪುರುಷೋ ದೇವಾನ್ಭುನಕ್ತ್ಯೇಕಸ್ಮಿ ನ್ನೇವ ಪಶಾವಾದೀಯಮಾನೇऽಪ್ರಿಯಂ ಭವತಿ ಕಿಮು ಬಹುಷು ತಸ್ಮಾ ದೇಷಾಂ ತನ್ನಪ್ರಿಯಂ ಯದೇ ತ್ಮನುಷ್ಯಾ ವಿದ್ಯುಃ**

**ಟೀಕಾ:-** ಇದಂ=ಇದು, ಅಗ್ರೇ = ಪೂರ್ವದಲ್ಲಿ, ಬ್ರಹ್ಮವಾ=ಬ್ರಹ್ಮವೇ, ಆಸೀತ್=ಆಗಿತ್ತು, ತತ್=ಆ, ಆತ್ಮಾನಂ ಏವ=ಆತ್ಮನನ್ನೇ ಲಕ್ಷಿಸಿ, ಅಹಂ=ನಾನು, ಬ್ರಹ್ಮಾಸ್ಮೀತಿ=ಬ್ರಹ್ಮನಿದ್ದೇನೆಂದು, ಅವೇತ್=ತಿಳಿಯುವನೋ, ತಸ್ಮಾತ್=ಆದ್ದರಿಂದ, ತತ್=ಆ, ಸರ್ವಂ=ಎಲ್ಲವು, ಅಭವತ್=ಆಗುವನು, ತತ್=ಆ ಬ್ರಹ್ಮವನ್ನು ಕುರಿತು,ದೇವಾನಾಂ=ದೇವತೆಗಳ ಮಧ್ಯದಲ್ಲಿ, ಯಃ ಯಃ=ಯಾವ ಯಾವನು, ಪ್ರತ್ಯಬುಧ್ಯತ=ತಿಳಿಯುತ್ತಾನೋ, ಸ ಏವ=ಅವನೇ,ತತ್ ಅಭವತ್=ಆ ಬ್ರಹ್ಮನೇ ಆಗುವನು, ತಥಾ ಋಷೀಣಾಂ = ಋಷಿಗಳಲ್ಲಿಯೂ ಹಾಗೇ, ತಥಾ ಮನುಷಾಣಾಂ=ಹಾಗೂ ಮನುಷ್ಯರಲ್ಲಿಯೂ, ತತ್=ಅಂಥಾ, ಹಿ ಏತತ್=ನಿಶ್ಚಯವಾಗಿ ಬ್ರಹ್ಮವನ್ನೇ, ಪಶ್ಯನ್=ಅಪರೋಕ್ಷೀಕರಿಸಿಕೊಂಡು, ಋಷಿಃ ವಾಮದೇವಃ=ವಾಮದೇವ ನಾಮಕ ಋಷಿಯು, ಅಹಂ=ನಾನು, ಮನುರಭವಂ=ನಾನು ಮನು ಇದ್ದೇನೆ, ಸೂರ್ಯಶ್ಚೇತಿ=ಸೂರ್ಯನೂ ಇದ್ದೇನೆ, (ಹೀಗೆಂದು ಸರ್ವಾತ್ಮ ಭಾವವನ್ನು) ಪ್ರತಿಪೇದೆ=ಹೊಂದಿದನು, ತತ್=ಅಂಥಾ, ಇದಮಪಿ=ಈ ಬ್ರಹ್ಮವನ್ನೇ ಕುರಿತು, ಏತರ್ಹಿ=ಈಗಾದರೂ, ಅಹಂ=ನಾನು, ಬ್ರಹ್ಮಾಸ್ಮೀತಿ=ಬ್ರಹ್ಮನಿದ್ದೇನೆಂದು, ಯಃ=ಯಾವನು ಏವಂ=ಹೀಗೆ, ವೇದ=ತಿಳಿಯುತ್ತಾನೋ,ಸಃ=ಅವನು, ಇದಂ=ಈ, ಸರ್ವಂ=ಪೂರ್ಣ ರೂಪನು, ಭವತಿ=ಆಗುತ್ತಾನೆ, ತಸ್ಯಹ=ಆತನನ್ನು ಕುರಿತು, ದೇವಾಶ್ಚ=ದೇವತೆಗಳಾದರೂ, ನಾಭೂತ್ಯಾ=ಜೀವತ್ವವನ್ನುಂಟುಮಾಡುವದಕ್ಕಾಗಿ, ನಈಶತೇ = ಸಮರ್ಥರಾಗುವದಿಲ್ಲ, (ಯಾಕಂದರೆ) ಸಃ = ಅವನು, ಹ್ಯೇಷಾಂ=ಇವರುಗಳ, ಆತ್ಮಾ=ಪ್ರತ್ಯಗಾತ್ಮಸ್ವರೂಪನು, ಭವತಿ=ಆಗಿರುತ್ತಾನೆ. ಅಥ=ಬಳಿಕ, ಯಃ=ಯಾವಾತನು, ಅಸೌ=ಈ ದೇವತೆಯು, ಅನ್ಯಃ=ನನಗೆ ಭಿನ್ನವಾಗಿರುವದು, ಅಹಂ=ನಾನು, ಅಸೌ=ಈ ದೇವತೆಗೆ, ಅನ್ಯಃ=ಭಿನ್ನವಾಗಿರುವವನು, ಅಸ್ಮಿ=ಇದ್ದೇನೆ, ಇತಿ=ಹೀಗೆಂದು, ಅನ್ಯಾಂ=ಬೇರೆಯಾದ, ದೇವತಾಂ=ದೇವತೆಯನ್ನು, ಉಪಾಸ್ತೆ=ಉಪಾಸನೆಯನ್ನು ಮಾಡುತ್ತಾನೋ, ಸಃ=ಅವನು,ನವೇದ=ಚನ್ನಾಗಿ ಅರಿತವನಲ್ಲ. ಸಃ=ಅವನು, ಯಥಾ=ಹೇಗೆ, ದೇವಾನಾಂ=ದೇವತೆಗಳ, ಪಶುರೇವಂ=ಪಶು ಸಮಾನನಾಗಿದ್ದಾನೆ, ಯಥಾ=ಹೇಗೆ, ಹವೈ=ನಿಶ್ಚಯವಾಗಿ, ಬಹವಃ ಪಶವಃ = ಬಹಳಪಶುಗಳು, ಮನುಷ್ಯಂ = ಒಬ್ಬಾತನನ್ನು ಕುರಿತು, ಭುಂಜುಃ=ಹಾಲನ್ನು ಕರೆದುರಕ್ಷಿಸುತ್ತಿರುವವೋ, ಏವಂ=ಹೀಗೆಯೇ, ಏಕೈಕಃ

ಪುರುಷಃ=ಒಬ್ಬೊಬ್ಬ ಪುರುಷನು, ದೇವಾನ್ = ಇಂದ್ರಾದಿ ದೇವತೆಗಳನ್ನು ಕುರಿತು, ಭುನಕ್ತಿ=ಸ್ತುತಿ, ನಮಸ್ಕಾರ, ಹವಿರ್ಭಾಗಗಳಿಂದ ಸಂತೋಷಪಡಿಸುವರು, ಏಕಸ್ಮಿನ್ನೇವ ಪಶೌ=ಹಿಂಡಿನೊಳಗಿನದೊಂದು ದನವು, ಆದೀಯಮಾನೇ= ಯಾರಾದರೂ ಅಪಹರಿಸಿದರೆ (ಕಳೆದುಹೋದರೆ) ಅಪ್ರಿಯಂ=ಅಸಂತೋಷವು, ಭವತಿ=ಆಗುತ್ತದೆ. ಬಹುಷುಕಿಂ=ಬಹಳ ದನಗಳು ಕಳೆದುಹೋದರೆ ಇನ್ನೇನು ಹೇಳತಕ್ಕದ್ದು. ತಸ್ಮಾತ್=ಆದ್ದರಿಂದ ಏಷಾಂ=ದೇವತೆಗಳಿಗೆ, ತತ್=ಮನುಷ್ಯನು ಬ್ರಹ್ಮಜ್ಞಾನಸಂಪನ್ನನಾಗಿ ತಮ್ಮವಶದಿಂದ ತಪ್ಪಿಸಿಕೊಂಡು ಹೋಗುವದು, ನಪ್ರಿಯಂ = ಹಿತಕರವಾಗುವದಿಲ್ಲ. ಯತ್=ಯಾವ, ಏತತ್=ಈ ವಿಷಯವನ್ನು, ಮನುಷ್ಯಾಃ=ಮನುಷ್ಯರು, ವಿದ್ಯು=ತಿಳಿಯುತ್ತಾರೆ.

**ತಾತ್ಪರ್ಯ:**- ಈ ಮಂತ್ರದಲ್ಲಿ ಯಾವಾತನು ಬ್ರಹ್ಮವೇ ನಾನಿದ್ದೇನೆಂದು ತಿಳಿಯುವನೋ, ಅವನು ಸರ್ವವೂ ಆಗುತ್ತಾನೆ. ಅಂದರೆ ಪರಿಪೂರ್ಣಸ್ವರೂಪನಾಗುತ್ತಾನೆಂಬ ಅರ್ಥವನ್ನು ಹೇಳುತ್ತದೆ. ಆದ್ದರಿಂದ ಇಲ್ಲಿ ಸಾಮಾನ್ಯವಾದ ಬ್ರಹ್ಮಶಬ್ದವುಂಟು. ಇದಕ್ಕೆ ಪರಬ್ರಹ್ಮವೆಂದು ಅರ್ಥವಾಗುತ್ತದೆಯೋ? ಅಪರ ಬ್ರಹ್ಮವೆಂದು ಅರ್ಥವಾಗುತ್ತದೆಯೋ? ಎಂಬ ಸಂಶಯವೂ ಬರುತ್ತದೆ. ಈ ವಿಷಯದಲ್ಲಿ—

**ವೃತ್ತಿಕಾರ ಮತಾನುಸಾರಿ:**- "ಅಪರಬ್ರಹ್ಮವೇ ಇಲ್ಲಿ ಸರ್ವಭಾವವನ್ನು ಹೊಂದುವದಕ್ಕೆ ಯೋಗ್ಯವಾಗಿರುತ್ತದೆ. ಪರಬ್ರಹ್ಮಕ್ಕೆ ವಿಜ್ಞಾನದಿಂದ ಸಾಧ್ಯವಾದ ಸರ್ವಭಾವತ್ವವನ್ನು (ಪೂರ್ಣತ್ವವನ್ನು) ಹೇಳುವದು ಸರಿಯಲ್ಲ. ಯಾಕಂದರೆ, ಅದು ಮೊದಲೇ ಪೂರ್ಣವಿರುವದು. ಶ್ರುತಿಯಾದರೂ ತಿಳಿಯುವದರಿಂದ ಸರ್ವಭಾವನಾದನೆಂಬುವದನ್ನು ಹೇಳುವದು. ಆದ್ದರಿಂದ ಸೃಷ್ಟಿಪೂರ್ವದಲ್ಲಿ ಅಪರಬ್ರಹ್ಮನೇ (ಚತುರ್ಮುಖಬ್ರಹ್ಮನೆ) ಇದ್ದನೆಂದು ಹೇಳುವದೂ ಕೂಡಾ ಸಮಂಜಸವೆನಿಸುತ್ತದೆ ಎಂದು ಹೇಳುತ್ತಾನೆ.

**ಭತೃಪ್ರಪಂಚ ಮತಾನುಸಾರಿ:**-"ಆ ಅಪರಬ್ರಹ್ಮನಾದರೂ ಸೃಷ್ಟಿ ಉತ್ಪತ್ತಿ ಸಮಯದಲ್ಲಿ ಜ್ಞಾನ ಸಹಿತ ಉತ್ಪನ್ನನಾಗೋಣದರಿಂದ ಅವನಿಗೆ ಪುನಃ ಜ್ಞಾನೋಪದೇಶವು ಉಪಯೋಗವಿಲ್ಲ. ಮತ್ತು ಭೋಗಮೋಕ್ಷಂಗಳಿಗೆ ಮನುಷ್ಯರೇ ಅಧಿಕಾರಿಗಳಾಗಿರುತ್ತಾರೆ. ಆದ್ದರಿಂದ ಇಲ್ಲಿ ಪರಬ್ರಹ್ಮನನ್ನಾಗಲಿ (ಅಪರಬ್ರಹ್ಮನನ್ನಾಗಲಿ) ಪ್ರಜಾಪತಿಯನ್ನಾಗಲಿ ಅರ್ಥಮಾಡಬಾರದು. (ಗ್ರಹಿಸಬಾರದು.) ಯಾವಾತನು ಅಪರಬ್ರಹ್ಮವಿದ್ಯೆಯಿಂದ ಅಂದರೆ ಕರ್ಮೋಪಾಸನೆಗಳಿಂದ ಅಪರ ಬ್ರಹ್ಮವನ್ನು ಹೊಂದಿ ಭೋಗದಲ್ಲಿ ನಿರಿಚ್ಛೆಯುಳ್ಳವನಾಗಿ, ಕಾಮಕರ್ಮ ಬಂಧನದಿಂದ ಬಿಡುಗಡೆಯಾಗಿ ಬ್ರಹ್ಮವಿದ್ಯೆಯಿಂದ (ಭಾವೀ) ಮುಂದೆ ನಾನು ಬ್ರಹ್ಮ

ನಾಗಬೇಕೆಂದು ಇಚ್ಛೆಮಾಡುವವನೇ ಅಧಿಕಾರಿಯಾಗಿರುತ್ತಾನೆ. ಲೋಕದಲ್ಲಾದರೂ ಮುಂದಾಗುವದನ್ನು ಲಕ್ಷಿಸಿ ಶಬ್ದಪ್ರಯೋಗ ಮಾಡುವದೂ ಕಂಡು ಬರುತ್ತದೆ. ಹೇಗಂದರೆ, ಅನ್ನವನ್ನು ಮಾಡುತ್ತಾನೆ. ಶಾಸ್ತ್ರದಲ್ಲಾದರೂ ಸನ್ಯಾಸಿಯು ಸರ್ವ ಭೂತಗಳಿಗೆ ಅಭಯದಾಯಕನಾಗುತ್ತಾನೆ. ಎಂಬದಾಗಿ ಹೇಗೆ ಉಂಟೋ, ಹಾಗೇ ಇಲ್ಲಿಯಾದರೂ ಬ್ರಹ್ಮನಾಗಬೇಕೆಂಬ ಪುರುಷನೇ ಅಧಿಕಾರಿಯಾಗಿರುವನು. ಅಂದರೆ ಜೀವನು ಸ್ವಭಾವತಃ ಪರಿಚ್ಛಿನ್ನನಿದ್ದಾನೆ. ಬ್ರಹ್ಮಜ್ಞಾನ ಉತ್ತರ ಕಾಲದಲ್ಲಿ ಇವನು ಸರ್ವಭಾವ (ಪೂರ್ಣನು) ಆಗುತ್ತಾನೆಂದು ಇವನ ಅಭಿಪ್ರಾಯವಿರುವದು.

ಸಿದ್ಧಾಂತಿ:– ಅದು ಹಾಗಲ್ಲ. ಯಾಕಂದರೆ ಬ್ರಹ್ಮಜ್ಞಾನದಿಂದ ಜೀವನಿಗೆ ಸರ್ವಭಾವತ್ವವು ಪ್ರಾಪ್ತವಾದರೆ, ಅದಕ್ಕೆ ಅನಿತ್ಯತ್ವ ದೋಷ ಬರುವದು. ಲೋಕದಲ್ಲಿ ಯಾವದಾದರೂ ಯಾವದಾದರೊಂದು ನಿಮಿತ್ತದಿಂದ ಪ್ರಾಪ್ತವಾದರೆ ಅದಕ್ಕೆ ನಿತ್ಯವೆಂದು ಹೇಳುವದಿಲ್ಲ. ಬ್ರಹ್ಮವಿಜ್ಞಾನ ನಿಮಿತ್ತದಿಂದ (ಸರ್ವ ಭಾವಾಪತ್ತಿಯು) ಪೂರ್ಣರೂಪದಿಂದಿರುವಿಕೆಯು ಉಂಟಾಗುವದೆಂದೂ, ಮತ್ತು ಅದು ನಿತ್ಯವಾಗಿರುವದೆಂದೂ ನೀನು ಹೇಳುವದು ಸರಿಯಲ್ಲ. ಅನಿತ್ಯವೆಂದು ಅಂಗೀಕರಿಸಿದರೆ, ಜ್ಞಾನಫಲವು ಕರ್ಮಫಲಕ್ಕೆ ಸಮಾನವಾಯಿತೆಂಬ ದೋಷವು ಬರುತ್ತದೆ. ಜೀವನಿಗೆ ಅವಿದ್ಯೆಯಿಂದ (ಅಸರ್ವತ್ವ) ಪರಿಚ್ಛಿನ್ನತ್ವವು ಬಂದಿತ್ತು. ಅದು ಬ್ರಹ್ಮಜ್ಞಾನದಿಂದ ಸರ್ವಾತ್ಮತ್ವವು ಬರಲಾಗಿ ನಿವೃತ್ತಿಯಾಯಿತೆಂದು ಹೇಳಿದರೆ, ಪುರುಷನು ಕೆಲವು ಕಾಲದಮೇಲೆ ಸರ್ವಾತ್ಮರೂಪನಾಗುತ್ತಾನೆಂಬ ಅರ್ಥಕ್ಕೆ ಭಂಗಬರುತ್ತದೆ. ಅಂದರೆ ಬ್ರಹ್ಮಭಾವೀ ಪುರುಷನ ಕಲ್ಪನಾ ವ್ಯರ್ಥವಾಗುವದೆಂಬ ಭಾವವು. ಹಾಗಾದರೆ, ಬ್ರಹ್ಮಜ್ಞಾನಕ್ಕಿಂತಲೂ ಪೂರ್ವದಲ್ಲಿಯೇ ಸಕಲ ಜಂತುಗಳು ಬ್ರಹ್ಮಸ್ವರೂಪರಾಗಿರುವದರಿಂದ ಪಾರಮಾರ್ಥಿಕ ನಿತ್ಯವಾದ ಸರ್ವಾತ್ಮತ್ವರಾಗಿರುವರು. ಅವಿದ್ಯೆಯಿಂದ (ಅಬ್ರಹ್ಮತ್ವ ಅಸರ್ವತ್ವ) ನಾನು ಬ್ರಹ್ಮನಲ್ಲ ಪರಿಚ್ಛಿನ್ನನಾಗಿರುವೆನೆಂಬುದು ಅಧ್ಯಾರೋಪವಾಗಿರುವದು. ಹೇಗೆ ಶುಕ್ತಿಯಲ್ಲಿ ರಜತವು, ಆಕಾಶದಲ್ಲಿ ಕೊಪ್ಪರಿಗೆ ಆಕಾರವು ನೀಲಬಣ್ಣ, ಮಲಿನತ್ವಾದಿಗಳು ಅಧ್ಯಾರೋಪಿತಗಳಾಗಿರುವವೋ; ಹಾಗೆ ಬ್ರಹ್ಮದಲ್ಲಿಯಾದರೂ ಅವಿದ್ಯೆಯಿಂದ ಅಬ್ರಹ್ಮತ್ವ ಅಸರ್ವತ್ವಾದಿಗಳು ತೋರಿದವು. ಬ್ರಹ್ಮವಿದ್ಯೆಯಿಂದ ನಿವೃತ್ತ್ಯರ್ಗಳಾಗುತ್ತವೆಂದು ನೀನು ಅಂಗೀಕರಿಸಿದರೆ ಅದು ಯೋಗ್ಯವೇ. ಪಾರಮಾರ್ಥಿಕ ಮುಖ್ಯಾರ್ಥವಾದ ಬ್ರಹ್ಮವನ್ನೇ ಇಲ್ಲಿ ಬ್ರಹ್ಮ ಶಬ್ದಕ್ಕೆ ಅರ್ಥಮಾಡಿದರೆ ಸೃಷ್ಟಿ ಪೂರ್ವದಲ್ಲಿ ಬ್ರಹ್ಮವೇ ಇತ್ತು ಎಂದು ಹೇಳುವ ಶ್ರುತ್ಯರ್ಥಕ್ಕೂ ಕಲೆಯುತ್ತದೆ. ಮತ್ತು ವೇದವಾದರೂ ಹೇಗಿದ್ದ ವಸ್ತುವನ್ನು ಹಾಗೇ ತಿಳಿಸುವದಾಗಿರುತ್ತದೆ. ಈ ರೀತಿ ಬ್ರಹ್ಮ ಶಬ್ದಕ್ಕೆ ಮುಖ್ಯಾರ್ಥವೇ ಸಂಭವಿಸುತ್ತಿರಲಿಕ್ಕೆ ಇದನ್ನು ಬಿಟ್ಟು ಬ್ರಹ್ಮ ಶಬ್ದಕ್ಕೆ ವಿಪರೀತವಾದ ಬ್ರಹ್ಮಭಾವೀ

ಪುರುಷಬ್ರಹ್ಮನೆಂದು ಹೇಳಲ್ಪಡುತ್ತಾನೆಂದು ಅರ್ಥಮಾಡುವದು ಶ್ರುತಹಾನಿ ಅಶ್ರುತ ಕಲ್ಪನಾರೂಪ ಅನ್ಯಾಯವಾಗಿರುತ್ತದೆ.

**ಶಂಕಾ:-** ಅಬ್ರಹ್ಮತ್ವ, ಅಸರ್ವಜ್ಞತ್ವ, ಇವುಗಳು ಅವಿದ್ಯೆಯಿಂದಲೇ ಆರೋಪಿಸಲ್ಪಟ್ಟಿರುವವೆಂದು ಹೇಳಿದರೆ, ವಿಶೇಷ ಮಹತ್ತರವಾದ ಪ್ರಯೋಜನವೇನೂ ಕಾಣುವದಿಲ್ಲ. ಆದ್ದರಿಂದ ಅವಿದ್ಯಾ ವ್ಯತಿರಿಕ್ತ ಇವು ತೋರುತ್ತಿರುವವು. ಅಂದರೆ ಏನು ದೋಷ?

**ಸಮಾಧಾನ:—** ಅವಿದ್ಯಾವ್ಯತಿರಿಕ್ತ ಅಬ್ರಹ್ಮತ್ವ ಅಸರ್ವಜ್ಞತ್ವಗಳು ತೋರಿದರೆ, ಅವುಗಳ ನಾಶವು ಬ್ರಹ್ಮವಿದ್ಯೆಯಿಂದ ಆಗುವದೇ ಇಲ್ಲ. ಬ್ರಹ್ಮವಿದ್ಯೆಯು ಎಲ್ಲಿಯಾದರೂ ಯಾವದಾದರೊಂದು ವಸ್ತುವಿನ ಧರ್ಮವನ್ನು ಸಾಕ್ಷಾತ್ ನಾಶಕ್ಕೆ ಕರ್ತೃವಾಗಿರುವದೆಂಬುದು ಕಂಡು ಬರುವದಿಲ್ಲ. ಅವಿದ್ಯಾ ನಿವೃತ್ತಿಯು ಮಾತ್ರ ಎಲ್ಲ ಕಡೆಗೆ ಕಂಡು ಬರುತ್ತದೆ. ಅದರಂತೆ ಇಲ್ಲಿಯಾದರೂ ಅಬ್ರಹ್ಮತ್ವ ಅಸರ್ವಜ್ಞತ್ವ ಇವು ಬ್ರಹ್ಮವಿದ್ಯೆಯಿಂದ ನಿವೃತ್ತಗಳಾಗುತ್ತವೆ. ಆದ್ದರಿಂದ ಅವಿದ್ಯಾಕೃತಗಳೆಂದೇ ತಿಳಿಯತಕ್ಕದ್ದು ಬ್ರಹ್ಮವಿದ್ಯೆಯು ಪಾರಮಾರ್ಥಿಕ ವಸ್ತು ಧರ್ಮವನ್ನು ನಿವರ್ತನ ಮಾಡುವದಕ್ಕೆ ಯೋಗ್ಯವಾದದ್ದಾಗಿರುವದಿಲ್ಲ. ಆದ್ದರಿಂದ ಶ್ರುತಹಾನಿ ಅಶ್ರುತ ಕಲ್ಪನೆಯು ವ್ಯರ್ಥವಾಗಿರುತ್ತದೆ.

**ಶಂಕಾ:—** ಪ್ರಕಾಶಮಾನ ಸೂರ್ಯನಲ್ಲಿ ಕತ್ತಲೆಯಂತೆ ಸರ್ವಜ್ಞರೂಪವಾದ ಬ್ರಹ್ಮನಲ್ಲಿ ಅವಿದ್ಯೆಯೇ ಸಂಭವಿಸುವದಿಲ್ಲ.

**ಸಮಾಧಾನ:-** ಬ್ರಹ್ಮದಲ್ಲಿ ವಿದ್ಯೆಯನ್ನು ಹೇಳುವದರಿಂದ ಅವಿದ್ಯೆಯಿಲ್ಲೆಂದು ಹೇಳಲಿಕ್ಕೆ ಆಗುವದಿಲ್ಲ. ಶುಕ್ತಿಯಲ್ಲಿ ರಜತಾಧ್ಯಾಸವೇ ಇಲ್ಲದಿದ್ದರೆ, ಇದು ಶುಕ್ತಿಯೆಂದು ಜ್ಞಾಪಕಕ್ಕೆ ತಂದುಕೊಡುತ್ತಿರಲಿಲ್ಲ. ನಿನ್ನ ಕಣ್ಣಿಗೆ ತೋರಿದ್ದು ಕಪ್ಪಿಚಿಪ್ಪೇ ಹೊರ್ತು ಬೆಳ್ಳಿಯಲ್ಲ' ಎಂಬುದರಂತೆ, ಬ್ರಹ್ಮದಲ್ಲಿ ಅವಿದ್ಯಾ ಅಧ್ಯಾರೋಪವು ಇಲ್ಲದಿದ್ದರೆ 'ಇದೆಲ್ಲವೂ ಸದ್ರೂಪವೇ ಆಗಿತ್ತು, 'ಇದೆಲ್ಲವು ಬ್ರಹ್ಮವೇ' 'ಈ ಸರ್ವವು ಆತ್ಮರೂಪವೇ' ಅಬ್ರಹ್ಮವಾದ ದೃಶ್ಯ ಪ್ರಪಂಚವು ಕಿಂಚಿತ್ತಾದರೂ ಇಲ್ಲ, ಹೀಗೆಂದು ಬ್ರಹ್ಮದಲ್ಲಿ ಏಕತ್ವ ವಿಜ್ಞಾನವನ್ನು ವಿಧಾನ ಮಾಡಬಾರದಾಗಿತ್ತು ಮಾಡುತ್ತವೆ. ಆದ್ದರಿಂದ ಅವಿದ್ಯೆಯುಂಟು.

**ಶಂಕಾಃ-** ಶುಕ್ತಿಯಂತೆ; ಬ್ರಹ್ಮದಲ್ಲಿ ಅಧ್ಯಾಸವಿಲ್ಲೆಂದು ನಾವೇ ಹೇಳುವದಿಲ್ಲ. ಮತ್ತೇನಂದರೆ-ತನ್ನಲ್ಲಿ ಅನ್ಯಧರ್ಮಗಳ ಅಧ್ಯಾರೋಪಕ್ಕೆ ನಿಮಿತ್ತವಾದದ್ದು ಅವಿದ್ಯೆಯಲ್ಲದೆ ಬ್ರಹ್ಮವಲ್ಲ ಎಂಬುದನ್ನು ನಾವು ಹೇಳುತ್ತೇವೆ.

**ಸಮಾಧಾನ—** ಬ್ರಹ್ಮದಲ್ಲಿ ಅಧ್ಯಾಸಕ್ಕೆ ಅವಿದ್ಯೆಯೇ ಕರ್ತೃವಾಗಿರಲಿ. ಯಾಕಂದರೆ, ಅವಿದ್ಯೆಯು ಅನಾದಿಯಿರುವದರಿಂದ, ಅದನ್ನು ಬಿಟ್ಟರೆ ಬೇರೆ

ಕರ್ತರು ಇಲ್ಲದ್ದರಿಂದ, ಅವಿದ್ಯೆಯೇ ಕರ್ತೃ ಆಗಿರಲಿ. ಆದಾಗ್ಯಾದರೂ ಈ ಅವಿದ್ಯೆಯಿಂದ ಬ್ರಹ್ಮವು ಭ್ರಾಂತವಾಗಿಲ್ಲ. ಮತ್ತು ಈ ಬ್ರಹ್ಮಕ್ಕೆ ಭಿನ್ನವಾಗಿ ಚೇತನರೂಪನು ಭ್ರಾಂತನು ಅವಿದ್ಯೆಗೆ ಕರ್ತನಾದವನು ಇದ್ದಾನೆಂದು ಅಂಗೀಕರಿಸುವದಿಲ್ಲ ಯಾಕಂದರೆ; 'ಬ್ರಹ್ಮಕ್ಕೆ ಭಿನ್ನವಾಗಿ ತಿಳಿಯುವವನು ಇಲ್ಲ' 'ಅದೇ ನೀನಿದ್ದಿ' 'ಆತ್ಮನನ್ನು ತಿಳಿಯತಕ್ಕದ್ದು' 'ನಾನು ಬ್ರಹ್ಮನಿದ್ದೇನೆ' 'ಯಾವನು ಬೇರೆಯಾಗಿ ತಿಳಿಯುವನೋ ಅವನು ತಿಳದಿಲ್ಲ' ಇತ್ಯಾದಿ ಶ್ರುತಿಗಳಿಂದಲೂ; ಎಲ್ಲಾ ಭೂತಗಳಲ್ಲಿ ಸಮಾನನಾಗಿರುವನು, 'ಅರ್ಜುನನೇ ನಾನು ಆತ್ಮನಾಗಿದ್ದೇನೆ' 'ನಾಯಿ ಚಾಂಡಾಲಾದಿಗಳಲ್ಲಿ ಏಕರೂಪನಾಗಿರುವನು' 'ಸರ್ವ ಭೂತಗಳಲ್ಲಿ ಒಬ್ಬನಿದ್ದಾನೆ' 'ಯಾವಾತನಲ್ಲಿ ಸರ್ವಭೂತಗಳು ಇರುವವು" ಎಂದು ಸ್ಮೃತಿಗಳಿಂದಲೂ ಬ್ರಹ್ಮಕ್ಕೆ ಭಿನ್ನ ಬೇರೊಬ್ಬನು ಇಲ್ಲೆಂಬುದನ್ನು ನಿರೂಪಿಸುತ್ತದೆ.

**ಶಂಕಾ:-** ಅವಿದ್ಯಾಮೂಲಕವಾದ ಅಧ್ಯಾಸದಿಂದ ಬ್ರಹ್ಮಕ್ಕೆ ಭ್ರಾಂತಿಯಿಲ್ಲೆಂದು ಹೇಳಿದಿರಿ. ಮತ್ತು ಭ್ರಾಂತನು ಬೇರೊಬ್ಬನಿರುವನು ಅಂದರೆ; ಶ್ರುತಿಸ್ಮೃತಿ ಪ್ರಮಾಣಗಳಿಂದ ಬೇರೆ ಯಾರೂ ಇಲ್ಲೆಂದು ಹೇಳುತ್ತೀರಿ. ಅಂದಮೇಲೆ, ಭ್ರಾಂತರೇ ಇಲ್ಲದ ಮೇಲೆ, ಶಾಸ್ತ್ರೋಪದೇಶವು ಅನರ್ಥವಾಗಬೇಕಾಯಿತು. ಯಾಕಾಗವಲ್ಲದೆಂದು ಅಂಗೀಕರಿಸಿದರೆ, ಉಪದೇಶದಂತೆ ಅದರಿಂದುತ್ಪನ್ನವಾದ ಜ್ಞಾನವಾದರೂ ಅನರ್ಥವೇ ಆಯಿತು.

**ಸಮಾಧಾನ:-** ಹಾಗಲ್ಲ. ಜ್ಞಾನದಿಂದ ಅಜ್ಞಾನ ನಿವೃತ್ತಿಯು ಕಂಡುಬರುತ್ತದೆ. ಆದ್ದರಿಂದ ಸಾರ್ಥಕ್ಯವಾಗಿರುವದು.

**ಶಂಕಾ:-** ಆ ಅಜ್ಞಾನವು ಬ್ರಹ್ಮಕ್ಕೆ ಭಿನ್ನವೋ? ಅಭಿನ್ನವೋ? ಭಿನ್ನವು ಅಂದರೆ ದ್ವೈತಾಪತ್ತಿ ಸಂಭವಿಸುವದು. ಅಭಿನ್ನವೆಂದಂಗೀಕರಿಸಿದರೆ ನಿವೃತ್ತಿಯೇ ಸಂಭವಿಸುವದಿಲ್ಲ,

**ಸಮಾಧಾನ:-** ಹೀಗೆ ಹೇಳುವದು ಯೋಗ್ಯವಲ್ಲ. ಯಾಕಂದರೆ, ಪ್ರತ್ಯಕ್ಷ ವಿರೋಧವಾಗಿರುತ್ತದೆ. ಮತ್ತು ಏಕತ್ವ ಜ್ಞಾನದಿಂದ ಅಜ್ಞಾನ ನಿವೃತ್ತಿಯು ಕಂಡುಬರುತ್ತದೆ. ಕಂಡಾಗ್ಯೂ ನಿವೃತ್ತಿ ಸಂಭವಿಸುವದಿಲ್ಲೆಂದು ಹೇಳಿದರೆ, ಪ್ರತ್ಯಕ್ಷ ವಿರೋಧ ಸಂಭವಿಸುತ್ತದೆ. ಯಾವನಿಂದಾದರೂ ಪ್ರತ್ಯಕ್ಷ ವಿರೋಧತ್ವವು ಅಂಗೀಕರಿಸಲ್ಪಡುವದಿಲ್ಲ. ನಿವೃತ್ತಿಯು ಅನುಭವಸಿದ್ಧವಿರಲಿಕ್ಕೆ ಇದರಲ್ಲಿ ಅಸಂಭವವು ಸಂಭವಿಸುವದೇ ಇಲ್ಲ. ಯುಕ್ತಿಗೆ ಅನುಭವವು ವಿರುದ್ಧವಿದ್ದರೆ ಆ ಅನುಭವವನ್ನು ಯಾಕೆ ತ್ಯಾಗಮಾಡಬಾರದು. ಅಂದರೆ ಅದು ಯೋಗ್ಯವಲ್ಲ. ಅನುಭವದ ಅನುಸಾರ ಯುಕ್ತಿ ಇರದಿದ್ದರೆ ಆ ಯುಕ್ತಿಯನ್ನೇ ತ್ಯಾಗಮಾಡಬಹುದು.

**ಶಂಕಾ:-** 'ಪುಣ್ಯ ಕರ್ಮದಿಂದ ನಿಶ್ಚಯವಾಗಿ ಪುಣ್ಯವೇ ಆಗುತ್ತದೆ. 'ಜೀವನನ್ನು ಕುರಿತು ಕರ್ಮೋಪಾಸನೆಗಳ ಸಂಸ್ಕಾರಗಳು ಹೊರಡುವವು. 'ಮಂತನು, ಬೋದ್ಧನು, ಕರ್ತನು, ವಿಜ್ಞಾನಾತ್ಮನು, ಪುರುಷನಿರುವನು. ಇವೇ ಮೊದಲಾದ ಶ್ರುತಿಸ್ಮೃತಿ ನ್ಯಾಯಗಳಿಂದ ಪರಮಾತ್ಮನಿಗಿಂತಲೂ ವಿಲಕ್ಷಣನಾಗಿ ರುವ ಅನ್ಯ ಸಂಸಾರೀ ಜೀವನಿದ್ದಾನೆಂದು ತಿಳಿಯಲ್ಪಡುತ್ತದೆ. ಈತನಿಗೆ ವಿಲಕ್ಷಣ ನಾದವನು ಪರಮಾತ್ಮನಿದ್ದಾನೆ. 'ಅವನು ಇದು ಅಲ್ಲ. ಇದು ಅಲ್ಲ., 'ಹಸಿವೆ ನೀರ ಡಿಕೆ ಇವುಗಳಿಲ್ಲದವನು, 'ಯಾವಾತನು ಅವಿದ್ಯೆಯಿಂದ ರಹಿತನು, ಜರಾಮರಣ ಗಳಿಲ್ಲದವನು, 'ಈ ಅಕ್ಷರಾತ್ಮನು ಆಜ್ಞಾ ಮಾಡುತ್ತಿರಲಿಕ್ಕೆ ಈ ಶ್ರುತಿಗಳಿಂದಲೂ ಕಣಾದ, ಅಕ್ಷಪಾದ ಮೊದಲಾದವರು ತರ್ಕಶಾಸ್ತ್ರಗಳಲ್ಲಿಯೂ ಸಂಸಾರಿಗಿಂತಲೂ ವಿಲಕ್ಷಣನಾದವನು ಈಶ್ವರನೆಂದು ಯುಕ್ತಿಯಿಂದ ಸಾಧಿಸುತ್ತಾರೆ. ಸಂಸಾರ ದುಃಖದ ನಿವೃತ್ತಿಗಾಗಿ ಪ್ರವರ್ತಿಸುವದು ಚನ್ನಾಗಿ ಕಂಡುಬರುವದರಿಂದ ಈಶ್ವರ ನಿಗಿಂತಲೂ ಸಂಸಾರಿಯು ಬೇರಾಗಿರುವನು. 'ಅವನನ್ನು ಹುಡುಕತಕ್ಕದ್ದು ತಿಳಿಯ ತಕ್ಕದ್ದು. ಅವನನ್ನು ತಿಳಿದರೆ ಲೇಪಾಯಮಾನನಾಗುವದಿಲ್ಲ. ಬ್ರಹ್ಮವಿತ್ತನು ಪರ ಬ್ರಹ್ಮವನ್ನು ಹೊಂದುತ್ತಾನೆ. ಒಂದನ್ನೇ ಕಾಣತಕ್ಕದ್ದು. ಹೇಗಾರ್ಗಿ ! ಈ ನಿತ್ಯ ವನ್ನು ತಿಳಿ. ಧೀರನು ಅದನ್ನೇ ತಿಳಿಯುವನು, ಓಂಕಾರವೇ ಧನಸ್ಸು, ಆತ್ಮನೇ ಬಾಣಬ್ರಹ್ಮವೇ ಲಕ್ಷ್ಯವೆಂದು ಇವೇ ಮೊದಲಾದ ವಾಕ್ಯಗಳು ಜೀವನು ಕರ್ತ ನೆಂದೂ ಬ್ರಹ್ಮವು ಕರ್ಮವೆಂದೂ ತೋರಿಸುತ್ತವೆ.

ಮತ್ತು ಮುಮುಕ್ಷುವಿಗೆ ಅರ್ಚಿರಾದಿ ಮಾರ್ಗವನ್ನು ಬ್ರಹ್ಮಲೋಕಾದಿ ದೇಶ ವಿಶೇಷವನ್ನು ಉಪದೇಶಮಾಡುವದು ಕಂಡುಬರುವದು. ಭೇದವೇ ಇಲ್ಲದಿದ್ದರೆ ಗಮನವೆಲ್ಲಿ? ಗಮನವಿಲ್ಲದಿದ್ದರೆ ದಕ್ಷಿಣೋತ್ತರ ಮಾರ್ಗಗಳೆಲ್ಲಿ? ಮಾರ್ಗಗಳಿಲ್ಲದಿ ದ್ದರೆ, ದೇಶವೆಲ್ಲಿ? ಆದ್ದರಿಂದ ಪರಮಾತ್ಮನಿಗಿಂತಲೂ ಜೀವನು ಭಿನ್ನವಾಗಿರೋಣದ ರಿಂದ ಇದೆಲ್ಲವು ಸಂಭವಿಸುತ್ತದೆ. ಕರ್ಮಜ್ಞಾನಗಳ ಉಪದೇಶವು ಭೋಗ ಮೋಕ್ಷ ಗಳ ದೆಶೆಯಿಂದ ಇರುತ್ತದೆ. ಈಶ್ವರನು ಆಪ್ತಕಾಮನಾಗಿರುವದರಿಂದ ಅವನಿಗೆ ಉಪದೇಶವು ಬೇಕಾಗಿಲ್ಲ. ಆದ್ದರಿಂದ ಬ್ರಹ್ಮಭಾವೀ ಪುರುಷನೇ ಇಲ್ಲಿ ಬ್ರಹ್ಮನೆಂದು ಹೇಳಲ್ಪಡುತ್ತಾನೆ.

**ಸಮಾಧಾನ:—** ಹೀಗೆ ಅರ್ಥ ಮಾಡಿದರೆ, ಬ್ರಹ್ಮೋಪದೇಶವು ಅನರ್ಥ ವಾದೀತು. ಯಾಕಂದರೆ; ಬ್ರಹ್ಮಭಾವೀ ಸಂಸಾರಿಯು ಅಬ್ರಹ್ಮನಾಗಿದ್ದು ತನ್ನನ್ನು ತಿಳಿದು, ನಾನು ಬ್ರಹ್ಮನಿದ್ದೇನೆಂದು ಸರ್ವಾತ್ಮನಾದರೆ; ಅವನಿಗೆ ಸಂಸಾರಿ ಆತ್ಮ ನನ್ನು ತಿಳಿಯುವದರಿಂದಲೇ ಸರ್ವಾತ್ಮ ಭಾವರೂಪ ಫಲವು ಸಿದ್ಧವಾದರೆ; ಪರ ಬ್ರಹ್ಮೋಪದೇಶವು ನಿಶ್ಚಯವಾಗಿ ಅನರ್ಥವೇ ಆಗಬೇಕಾಯಿತು.

**ಶಂಕಾ:—** ಜೀವನು ತನ್ನನ್ನು ತಾನು ತಿಳಿಯುವದರಿಂದ ಪುರುಷಾರ್ಥ ಸಾಧನದಲ್ಲಿ ಉಪಯೋಗವಿಲ್ಲದಿದ್ದರೂ, ಸಂಸಾರಿಯಾದ ನಾನು ಬ್ರಹ್ಮನಿದ್ದೇನೆಂದು ತನಗೆ ಬ್ರಹ್ಮತ್ವವನ್ನು ಸಂಪಾದನ ಮಾಡುವದಕ್ಕಾಗಿ ಉಪದೇಶವು ಸಂಭವಿಸುತ್ತದೆ.

**ಸಮಾಧಾನ:—** ಬ್ರಹ್ಮಸ್ವರೂಪವು ತಿಳಿಯದಿರುತ್ತಿರಲಿಕ್ಕೆ ನಾನು ಬ್ರಹ್ಮನಿದ್ದೇನೆಂದು ಏನು ಸಂಪಾದನ ಮಾಡುವನು? ತಿಳದಂಥಾ ಬ್ರಹ್ಮದಲ್ಲಿ ಸಂಪತ್ ಮಾಡುವದಕ್ಕೆ ಶಕ್ಯವಾಗುವದು. ಆದರೆ, 'ಈ ಆತ್ಮನೇ ಬ್ರಹ್ಮನು' 'ಬ್ರಹ್ಮವು ಪ್ರತ್ಯಗಾತ್ಮರೂಪದಿಂದ ಅಪರೋಕ್ಷವಾಗಿರುತ್ತದೆ, 'ಯಾವನು ಆತ್ಮನು' ಯಾವದು ಸತ್ಯವೋ ಅದೇ ಆತ್ಮನು' 'ಬ್ರಹ್ಮವಿತ್ತನು ಬ್ರಹ್ಮವನ್ನು ಹೊಂದುತ್ತಾನೆ' ಹೀಗೆ ಆರಂಭಮಾಡಿ 'ಆ ಪರಮಾತ್ಮದಿಂದಾಗಲಿ ಈ ಆತ್ಮನಿಂದಾಗಲಿ.' ಎಂಬ ಸಾವಿರಾರು ಬ್ರಹ್ಮಮತ್ತು ಆತ್ಮ ಈ ಎರಡು ಶಬ್ದಗಳಿಗೆ ಸಾಮಾನಾಧಿಕರಣ್ಯದಿಂದ ಏಕಾರ್ಥವೇ ತಿಳಿಯಲ್ಪಡುತ್ತದೆ. ಒಂದಕ್ಕೆ ಒಂದು ಬೇರಾಗಿದ್ದರೆ ಸಂಪತ್ತು ಹೇಳಲ್ಪಡುತ್ತದೆ. ಅಭೇದವಿದ್ದರೆ ಹೇಳಲ್ಪಡುವದಿಲ್ಲ. 'ಇದೆಲ್ಲವು ಆ ಆತ್ಮರೂಪವೇ ಆಗಿರುವದು' ಎಂಬ ಶ್ರುತಿಯು ದ್ರಷ್ಟವ್ಯ ಆತ್ಮನೊಡನೆ ಏಕತ್ವವನ್ನು ಹೇಳುತ್ತದೆ. ಆದ್ದರಿಂದ ಆತ್ಮನಿಗೆ ಬ್ರಹ್ಮತ್ವ ಸಂಪತ್ ಉಪಪತ್ತಿಯು ಆಗುವದಿಲ್ಲ. ಮತ್ತು ಇದಕ್ಕಿಂತಲೂ ಬ್ರಹ್ಮೋಪದೇಶಕ್ಕೆ ಬೇರೊಂದು ಪ್ರಯೋಜನವು ಕಂಡುಬರುವದಿಲ್ಲ. 'ಬ್ರಹ್ಮವನ್ನರಿತವನು ಬ್ರಹ್ಮನಾಗುತ್ತಾನೆ' 'ಹೇ ಜನಕ! ಆ ಯವನ್ನು ಹೊಂದಿರುವಿ' 'ಅಭಯವಾದದ್ದು ನಿಶ್ಚಯವಾಗಿ ಬ್ರಹ್ಮವಿರುವದು' ಹೀಗೆಂದು ಬ್ರಹ್ಮಸ್ವರೂಪವನ್ನೇ ಪ್ರತಿಪಾದನಮಾಡುತ್ತವೆ. ಸಂಪತ್ ಪ್ರಾಪ್ತಿಯಾಗುತ್ತದೆಂದು ಹೇಳಿದರೆ, ಬ್ರಹ್ಮಸ್ವರೂಪತ್ವವು ಆಗಲಾರದು. ಯಾಕಂದರೆ, ಅನ್ಯನಿಗೆ ಅನ್ಯಸ್ವರೂಪವು ಉಪಪನ್ನವಾಗಲಾರದು.

**ಶಂಕಾ:-** ಉಪಾಸಕರು ಯಾವ ಯಾವ ರೂಪದಿಂದ ಉಪಾಸನೆ ಮಾಡುತ್ತಾರೋ, ಅದೇ ರೂಪದಿಂದ ನಾನು ಅವರಿಗೆ ಪ್ರತ್ಯಕ್ಷನಾಗುತ್ತೇನೆಂಬ ವಚನವಿರುವಮೂಲಕ ಸಂಪತ್ತಾದರೂ ಆ ಬ್ರಹ್ಮಭಾವಾಪತ್ತಿಯೇ ಆಗುವದು.

**ಸಮಾಧಾನ:-** ಹಾಗಲ್ಲ. (೧) ಸಂಪತ್ತು ಅಂದರೆ ಬ್ರಹ್ಮಸ್ವರೂಪವಲ್ಲ. ಕಿಂತು ಆ ರೂಪವೃತ್ತಿ ತೋರುವಿಕೆ ಮಾತ್ರವಾಗಿರುವದು. ಜ್ಞಾನವು ಮಿಥ್ಯಾಜ್ಞಾನವನ್ನು ನಿವೃತ್ತಿಮಾಡುವದರ ಹೊರ್ತು ಬೇರೊಂದನ್ನು ಏನೂ ಮಾಡುವದಿಲ್ಲೆಂದು ಹೇಳುತ್ತೇವೆ. ನೀನು ಉದಾಹರಿಸಿದ ವಚನವು ವಸ್ತುವಿಗೆ ಸಾಮರ್ಥ್ಯವನ್ನುಂಟು

---

(೧) ತನಗಿಂತಲೂ ಭಿನ್ನವಾದ ವಸ್ತುವನ್ನು ಕುರಿತು ತನ್ನರೂಪೆಂದು ಭಾವಿಸುವದೇ ಸಂಪತ್ತಿಯೆನಿಸುವದು.

ಮಾಡುವಂಥಾದ್ದಲ್ಲ. ಶಾಸ್ತ್ರವು ನಿಶ್ಚಯವಾಗಿ ತಿಳಿಸುತ್ತದೆ. ಏನೂ ಮಾಡುವದಿಲ್ಲ. ಇದು ಯಥಾರ್ಥವಾಗಿರುವನು. ಅವನೇ ಇಲ್ಲಿ ಪ್ರವೇಶನಾಗಿರುವನೆಂಬ ಮೊದಲಾದ ವಾಕ್ಯಗಳಲ್ಲಿ ಪರಬ್ರಹ್ಮವೇ ಪ್ರವೇಶವಾಗಿರುವದೆಂದು ಹೇಳಿರುತ್ತದೆ. ಆದ್ದರಿಂದ ಇಲ್ಲಿ ಬ್ರಹ್ಮವು ಅಂದರೆ, ಬ್ರಹ್ಮಭಾವೀ ಪುರುಷ ಕಲ್ಪನಾ ಮಾಡುವದು ಒಳ್ಳೇದಲ್ಲ.

ಮತ್ತು ಇಷ್ಟವಾದ ಅರ್ಥವನ್ನೂ ತ್ಯಾಗಮಾಡಬೇಕಾಗುತ್ತದೆ. ಉಪ್ಪಿನ ಘಟ್ಟಿಯಂತೆ ಒಳಗೂ ಹೊರಗೂ ಏಕರಸವಾದದ್ದು ಬ್ರಹ್ಮವೇ ಎಂದು ಸಕಲ ಉಪ ನಿಷತ್ತುಗಳಲ್ಲಿ ಹೇಳಲ್ಪಡುವ ಅರ್ಥವಾಗಿರುತ್ತದೆ. ಮಧುಕಾಂಡ ಮುನಿಕಾಂಡ ಗಳಲ್ಲಿಯೂ ಇದೇ ಅಮೃತರೂಪವಾಗಿದೆ ಎಂದು ನಿಶ್ಚಯಿಸಲ್ಪಟ್ಟಿರುತ್ತದೆ. ಹಾಗೂ ಸರ್ವ ಶಾಖೋಪನಿಷತ್ತುಗಳಲ್ಲಿಯೂ ಬ್ರಹ್ಮವು ಏಕವೆಂದು ನಿಶ್ಚಯಿಸಲ್ಪಟ್ಟಿರು ತ್ತದೆ. ಹೀಗಿದ್ದು ಸಂಸಾರಿ, ಬ್ರಹ್ಮಕ್ಕಿಂತಲೂ ಅನ್ಯನಾದವನು ತನ್ನನ್ನು ತಿಳಿಯು ತ್ತಾನೆಂದು ಅರ್ಥಮಾಡಿದರೆ, ಇಷ್ಟಾರ್ಥವು ಬಾಧವಾಗುತ್ತದೆ. ಹಾಗೂ ಶಾಸ್ತ್ರದ ಉಪಕ್ರಮ ಉಪಸಂಹಾರಗಳಿಗೂ ವಿರೋಧವಾಗುವದರಿಂದ ಅಸಮಂಜಸವಾದ ಅರ್ಥವು ಕಲ್ಪಿಸಿದಂತಾಗುವದು. ಉಪದೇಶವಾದರೂ ಉಪಪತ್ತಿಯಾಗುವದಿಲ್ಲ. ಸಂಸಾರಿಯು ತನ್ನನ್ನು ತಾನು ತಿಳಿಯುತ್ತಾನೆಂದು ಅರ್ಥವನ್ನು ಕಲ್ಪಿಸಿದರೆ, ಬ್ರಹ್ಮವಿದ್ಯೆಯೆಂಬ ಉಪದೇಶವು ಆಗಬಾರದಾದೀತು. ಆತ್ಮವನ್ನು ತಿಳಿಯುವ ನೆಂಬುದಕ್ಕೆ ಸಂಸಾರಿಗೆ ಸಂಸಾರಿಯೇ ವೇದ್ಯವಾಗಬೇಕಾಯಿತು.

**ಶಂಕಾ:**– ಇಲ್ಲಿ ಆತ್ಮನೆಂಬ ಶಬ್ದಕ್ಕೆ ತಿಳಿಯುವವನಕಿಂತಲೂ ಬೇರೆಂದು ಅರ್ಥಮಾಡಿದರೆ ಯಾವ ದೋಷವೂ ಬರುವದಿಲ್ಲ.

**ಸಮಾಧಾನ:**– ನಾನು ಬ್ರಹ್ಮನು ಇದ್ದೇನೆ ಎಂಬ ವಿಶೇಷಣದಿಂದ ಹಾಗೆ ಹೇಳಲಿಕ್ಕೆ ಬರುವದಿಲ್ಲ. ವೇದ್ಯನಾಗುವವನು ಬೇರೊಬ್ಬನಿದ್ದರೆ ಇವನು, ಅವನು ಎಂಬ ವಿಶೇಷಣಗಳಾಗಿರಬೇಕಾಗಿತ್ತು. ನಾನಿದ್ದೇನೆಂದು ಇರಬಾರದಾಗಿತ್ತು. ನಾನಿದ್ದೇನೆಂದು ವಿಶೇಷಣವಿದ್ದದರಿಂದಲೂ, ಆತ್ಮನನ್ನೇ ತಿಳಿಯತಕ್ಕದೆಂದು ನಿರ್ಧರಿಸಲ್ಪಟ್ಟಿದ್ದರಿಂದಲೂ ಆತ್ಮನೇ ಬ್ರಹ್ಮವೆಂದು ತಿಳಿಯಲ್ಪಡುತ್ತದೆ. ಹೀಗಾ ದರೇನೇ ಬ್ರಹ್ಮವಿದ್ಯೋಪದೇಶವು ಸಂಭವಿಸುತ್ತದೆ. ಬೇರೆ ರೀತಿ ಸಂಭವಿಸುವದಿಲ್ಲ. ಸಂಸಾರಿ ವಿದ್ಯಾ ಬೇರೊಂದು ರೀತಿಯಾಗುವದು. ವಿರುದ್ಧಗಳಾದ ಬೆಳಕು ಕತ್ತಲೆ ಗಳು ಸೂರ್ಯನಲ್ಲಿ ಹೇಗೆ ಸಂಭವಿಸುವದಿಲ್ಲವೋ; ಹಾಗೇ ಒಂದೇ ವಸ್ತುವಿಗೆ ಪರಮಾರ್ಥದಿಂದ ಬ್ರಹ್ಮತ್ವ ಅಬ್ರಹ್ಮತ್ವಗಳು ಸಂಭವಿಸಲಾರವು.

ಬ್ರಹ್ಮ ಮತ್ತು ಆತ್ಮ ಇವರು ಭಿನ್ನರೂ ಮತ್ತು ಅಭಿನ್ನರೂ ಆಗಿರುವರು. ಆದ್ದರಿಂದ ಬ್ರಹ್ಮವಿದ್ಯೋಪದೇಶವು ಯುಕ್ತವೆಂದು ಹೇಳಿದರೆ, ಅದೂ ಯೋಗ್ಯ

ವಲ್ಲ. ಯಾಕಂದರೆ, ಹಾಗೆ ಆಗಿದ್ದರೆ, ಬ್ರಹ್ಮವಿದ್ಯೆಯೆಂದೂ ಸಂಸಾರಿ ವಿದ್ಯೆಯೆಂದೂ ಎರಡು ರೀತಿಯಾಗಿ ಹೇಳಬೇಕಾಗಿತ್ತು. ತತ್ವಜ್ಞಾನ ವಿಚಾರಮಾಡುವ ಸಮಯದಲ್ಲಿ ಒಂದೇ ವಸ್ತುವಿಗೆ ಭೇದಾಭೇದರೂಪ (*) ಅರ್ಧ ಜರತೀಯತ್ವ ನ್ಯಾಯವನ್ನು ಕಲ್ಪಿಸುವದು ಯೋಗ್ಯವಲ್ಲ. ಹೀಗೆ ಹೇಳಿದರೆ ಕೇಳುವವರಿಗೆ ಸಂಶಯ ಉತ್ಪನ್ನವಾಗುವದು ನಿಶ್ಚಯ ಜ್ಞಾನವೇ ಪುರುಷಾರ್ಥ ಪ್ರಾಪ್ತಿಗೆ ಸಾಧನವಾಗಿರುತ್ತದೆ. 'ಯಾವನಿಗೆ ಇದು ಲಭ್ಯವಾಗುವದು. ಇದರಲ್ಲಿ ಸಂಶಯವಿಲ್ಲ.' 'ಸಂಶಯಾತ್ಮನು ನಾಶನಾಗುತ್ತಾನೆ.' ಶ್ರುತಿ ಸ್ಮೃತಿ ವಾಕ್ಯಗಳಿರುವದರಿಂದ, ಪರರಿಗೆ ಹಿತವನ್ನು ಬಯಸುವವನು ಸಂಶಯವಾದ ವಾಕ್ಯಾರ್ಥವನ್ನು ನುಡಿಯಕೂಡದು.

**ಶಂಕಾ:**-ಹಾಗಾದರೆ ಆ ಆತ್ಮನನ್ನು ಲಕ್ಷಿಸಿ ನಾನೆಂದು ತಿಳಿದನು. ಆದರಿಂದ ಸರ್ವಾತ್ಮರೂಪನು ಆದನು. ಎಂಬ ಶ್ರುತಿ ವಾಕ್ಯದ ಮೇಲಿಂದ, ಬ್ರಹ್ಮವು ಅರಿಯುದದರಿಂದ ಜ್ಞಾನಕ್ಕೆ ಕರ್ತೃವೆಂತಲೂ ಅರಿಸಿಕೊಳ್ಳುವದರಿಂದ ಕರ್ಮವಾಗಿದೆಯೆಂತಲೂ ಹೇಳಬೇಕಾಗುವದು. ಜ್ಞಾನಮೂರ್ತಿಯಾದ ಬ್ರಹ್ಮದಲ್ಲಿ ಜ್ಞಾತೃತ್ವ ಮತ್ತು ಕರ್ಮತ್ವ ಇವುಗಳನ್ನು ಹೇಳುವದು ಯೋಗ್ಯವಲ್ಲ. ಯಾಕಂದರೆ, ಬ್ರಹ್ಮವು ಕರ್ತೃಕ್ರಿಯಾಕಾರಕ ಫಲಗಳಿಂದ ವಿಲಕ್ಷಣವಾಗಿರುವದು. ಆದ್ದರಿಂದ ನಮ್ಮಗಳಂತೆ ಬ್ರಹ್ಮದಲ್ಲಿ ಸಾಧಕತ್ವಾದಿ ಕಲ್ಪನೆಯನ್ನು ಮಾಡುವದು ಮನೋಹರವಾದದ್ದಲ್ಲ. ಆದರಿಂದ ಶ್ರುತಿಯಲ್ಲಿರುವ ಬ್ರಹ್ಮ ಶಬ್ದಕ್ಕೆ ಪರಬ್ರಹ್ಮವೆಂದು ಅರ್ಥವನ್ನು ಮಾಡಕೂಡದು.

**ಸಮಾಧಾನ**- ಅಪೌರುಷೇಯವಾದ ಶಾಸ್ತ್ರವು ನಿರ್ದೋಷವಾಗಿರುವದು. ಅದೇ ಹಾಗೆ ಹೇಳುವದರಿಂದ ಆ ಮಾತನ್ನು ಸ್ವೀಕರಿಸತಕ್ಕದ್ದು

ಈ ಮಂತ್ರವು ನಮ್ಮಿಂದ ಕಲ್ಪನೆಯನ್ನು ಮಾಡಿದ್ದಲ್ಲ. ಶಾಸ್ತ್ರಕರ್ತನಿಂದಲೇ ಮಾಡಲ್ಪಟ್ಟಿದೆ. ಶಾಸ್ತ್ರದ ಅನುಭವವಾದರೂ ಹೀಗೇ ಅದೆ. ಬ್ರಹ್ಮ ವಿಚಾರಮಾಡತಕ್ಕ ಪುರುಷನಿಂದ ಶಾಸ್ತ್ರಾರ್ಥವಿಪರೀತ ಕಲ್ಪನೆಯನ್ನು ಮಾಡುವದು. ಪ್ರಾಪ್ತವಾದ ಅರ್ಥವನ್ನು ಪರಿತ್ಯಾಗ ಮಾಡುವದು ಯೋಗ್ಯವಲ್ಲ. ಬ್ರಹ್ಮವು ನಿತ್ಯ ಮುಕ್ತರೂಪವಾಗಿದೆ. ಅದು ಏನೊಂದು ಸಾಧನವನ್ನು ಅಪೇಕ್ಷಿಸುವದಿಲ್ಲ. ಸಾಧನವಿಲ್ಲದೆ ಭೋಗ ಮೋಕ್ಷಗಳು ಸಂಭವಿಸುವದಿಲ್ಲ. ಬ್ರಹ್ಮವ್ಯತಿರಿಕ್ತ ತಿಳಿಯುವವರು ಯಾರೂ ಇಲ್ಲ. ಹೀಗೆಂದು ಶಾಸ್ತ್ರವು ಹೇಳುತ್ತದೆ. ಆದ್ದರಿಂದ ಅರಿಯುವದು ಅರುಹಿಸಿಕೊಳ್ಳುವದು ಅವಿದ್ಯಾ ಮೂಲಕ ಬ್ರಹ್ಮದಲ್ಲಿ ಈ ಭೇದವು ಕಲ್ಪಿತವಾಗಿರುವದೆಂದು ಅರ್ಥಮಾಡಿದರೆ; ಯಾವ ದೋಷವೂ ಬರುವದಿಲ್ಲ. ಅದ

* ಕೋಳಿಯ ಅರ್ಧ ಶರೀರವನ್ನು ಭಕ್ಷಿಸಿ, ಅರ್ಧ ಶರೀರವನ್ನು ಮೊಟ್ಟೆ ಹಾಕುವ ಪಕ್ಕೆ ಇರಿಸಿದ್ದೇನೆಂಬಂತೆ ವಿರೋಧವಾಗಿರುವದೆಂಬ ಭಾವವು.

ರಿಂದ ನಿನ್ನ ಯುಕ್ತಿಗಳು ಅಯೋಗ್ಯಗಳಾಗಿರುತ್ತವೆ. ಈ ಭೇದವು ಬ್ರಹ್ಮದಲ್ಲಿ ಕಲ್ಪಿತವಾಗಿದೆಯೆಂಬುದು ನಿಮಗೆ ಹೇಗೆ ಗೊತ್ತಾಯಿತು? ಅಂದರೆ; ಕೇಳು. 'ಒಂದನ್ನೇ ಕಾಣತಕ್ಕದ್ದು' 'ಇದರಲ್ಲಿ ಭೇದವು ಸ್ವಲ್ಪಾದರೂ ಇಲ್ಲ' 'ಯಾವ ಬ್ರಹ್ಮದಲ್ಲಿ ದ್ವೈತವಿದ್ದಂತೆ ತೋರುವದು' 'ಏನೊಂದಿಲ್ಲದ್ದೊಂದೇ ಉಂಟು' ಎಂಬ ಅನೇಕ ಶ್ರುತಿವಾಕ್ಯಗಳಿಂದ ಸರ್ವ ಈ ಲೋಕ ವ್ಯವಹಾರವು ಬ್ರಹ್ಮದಲ್ಲಿ ಕಲ್ಪಿತವಾಗಿದೆ. ಪಾರಮಾರ್ಥಿಕವಿಲ್ಲ ಎಂದು ನಿರೂಪಿಸುತ್ತಿರಲಿಕ್ಕೆ; ಬ್ರಹ್ಮದಲ್ಲಿ ಸಾಧನತ್ವಾದಿ ಕಲ್ಪನೆ ಮನೋಹರವಾದದ್ದಲ್ಲೆಂಬ ನಿನ್ನ ಪ್ರಶ್ನೆಯು ಅತ್ಯಲ್ಪ ವಾಗಿರುವದು. ಅಂದರೆ, ಆಭಾಸವಾಗಿರುವದೆಂಬ ಭಾವವು. ಆದ್ದರಿಂದ ಯಾವದು ಸೃಷ್ಟಿಯನ್ನು ಮಾಡಿ ಅದರಲ್ಲಿ ಪ್ರವಿಷ್ಟವಾಗಿದೆಯೋ, ಅದೇ ಬ್ರಹ್ಮವೆಂದು ಇಲ್ಲಿ ಅರ್ಥಮಾಡಬೇಕಾಗುತ್ತದೆ. ಆ ಬ್ರಹ್ಮವೇ ಈ ಶರೀರದಲ್ಲಿರುವದೆಂದು ಗ್ರಹಣ ಮಾಡಲ್ಪಡುತ್ತದೆ. ಅರಿಯುವದಕ್ಕಿಂತ ಪೂರ್ವದಲ್ಲಿಯಾದರೂ ಇದೆಲ್ಲವು ಬ್ರಹ್ಮವೇ ಆಗಿರುವದು. ಕಿಂತು ಅವಿದ್ಯಾಮೂಲಕ ಅಬ್ರಹ್ಮತ್ವ ಅಸರ್ವಜ್ಞತ್ವ ಮೊದಲಾದವುಗಳು ಅಧ್ಯಾರೋಪಗಳಾಗಿರುವದರಿಂದ, ನಾನು ಕರ್ತಾ, ನಾನು ಕ್ರಿಯೆಗಳುಳ್ಳವನು, ಫಲಗಳನ್ನುಪಭೋಗಿಸುವವನು, ಸುಖೀ ದುಃಖೀ ಸಂಸಾರಿಯೆಂದು ತಿಳಿದುಕೊಳ್ಳು ತ್ತಾನೆ. ಪರಮಾರ್ಥದಿಂದ ನೋಡಿದರೆ; ಉಕ್ತ ಅರ್ಥಗಳಿಗೆ ವಿಲಕ್ಷಣವಾದ ಬ್ರಹ್ಮವೇ ಇರುವನು. ಅದರಿಂದ ಯಾವನಾದರೊಬ್ಬ ದಯಾಳುವಾದ ಆಚಾ ರ್ಯನು ಪ್ರಾಪ್ತನಾಗಿ; ನೀನು ಸಂಸಾರಿಯಲ್ಲ. ನಿನ್ನ ಯಥಾರ್ಥವಾದ ಸ್ವರೂಪ ವನ್ನು ತಿಳಿ. ಎಂದು ಉಪದೇಶಿಸುತ್ತಿರಲಿಕ್ಕೆ; ಅವಿದ್ಯಾ ಅಧ್ಯಾರೋಪಿತವೆಲ್ಲವು ನಿವೃತ್ತಿಯಾಗುತ್ತದೆ. ಎಂಬ ತಾತ್ಪರ್ಯವು.

**ಶಂಕಾ-** ಯಾವ ಆತ್ಮನನ್ನು ತಿಳಿಯುವದರಿಂದ ಬ್ರಹ್ಮನಾಗುವನು. ಅಂಥಾ ಸ್ವಾಭಾವಿಕ ಆತ್ಮನು ಯಾವನು?

**ಸಮಾಧಾನ-** ಯಾವನು ಈ ಶರೀರದಲ್ಲಿ ಪ್ರವೇಶಿಸಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನನಾಮಕ ವಾಯುಗಳಿಂದ ಕೂಡಿರುವಂಥವನೇ ಆತ್ಮ ನೆಂದು ಹೇಳಿರುತ್ತೇನೆ. ಅದನ್ನು ಮರೆತಿರುರುವಿಯಾ? ಅಥವಾ ಪ್ರಾಣಾದಿ ವಾಯು ಗಳ ಮೇಲಿಂದ ಅನುಮಾನ ಮಾಡಿ ನಿನ್ನಿಂದಲೇ ತಿಳಿದುಕೊಳ್ಳುವದಕ್ಕೆ ಶಕ್ಯವಿದ್ದ ದರಿಂದ ನಾನೇನು ಇದಕ್ಕೆ ಉತ್ತರ ಹೇಳುವ ಅವಶ್ಯವಿಲ್ಲ.

**ಶಂಕಾ-** ಇದು ಆಕಳು, ಇದು ಕುದುರೆ ಎಂಬಂತೆ ಈ ಆತ್ಮನೆಂದು ಶ್ರುತಿ ಯಲ್ಲಿ ಹೇಳುತ್ತದೆ. ಅಂಥಾ ಪ್ರತ್ಯಕ್ಷನಾದ ಆತ್ಮನನ್ನು ನೀವು ತೋರಿಸುವದಿಲ್ಲ ವಲ್ಲ. ಅಂದರೆ, ನಾನು ಆತ್ಮನನ್ನು ಪ್ರತ್ಯಕ್ಷೀಕರಿಸುವದಕ್ಕಾಗಿ ಪ್ರಶ್ನೆ ಮಾಡಿದರೆ, ನೀನು ಪರೋಕ್ಷವಾಗಿ ಆತ್ಮನನ್ನು ತಿಳಿಸುವದು ಪ್ರಶ್ನಕ್ಕೆ ಸರಿಯಾದ ಉತ್ತರವಲ್ಲ.

**ಸಮಾಧಾನ-** ಹಾಗಾದರೆ, ಯಾವನು ನೋಡುತ್ತಾನೆ, ಕೇಳುತ್ತಾನೆ, ಮನನಮಾಡುತ್ತಾನೆ, ತಿಳಿಯುತ್ತಾನೆ ಅವನೇ ಆತ್ಮನೆಂದು ತಿಳಿ. ನೋಡು. ಆತ್ಮನನ್ನು ಪ್ರತ್ಯಕ್ಷವಾಗಿಯೇ ತೋರಿಸಿದ್ದೇವೆ.

**ಶಂಕಾ-** ಈಗ ಹೇಳಿದ್ದರಲ್ಲಿಯೂ ದರ್ಶನಾದಿ ಕ್ರಿಯೆಗಳಿಗೆ ಕರ್ತನಸ್ವರೂಪವನ್ನು ತಿಳಿಸಿದ್ದಾಯಿತೆ ಹೊರ್ತು ಆತ್ಮನನ್ನು ಪ್ರತ್ಯಕ್ಷವಾಗಿ ತೋರಿಸಲಿಲ್ಲ. ಮತ್ತು ಗಮನವು ನಡೆಯತಕ್ಕ ಮನುಷ್ಯನ ಸ್ವರೂಪವಲ್ಲ. ಅದರಂತೆ, ಕಡಿಯುವಿಕೆಯು ಕಡಿಯತಕ್ಕವನ ಸ್ವರೂಪವಲ್ಲ. ಇವುಗಳಂತೆ ನೋಡುವದು, ಕೇಳುವದು ಇವು ಆತ್ಮನ ಸ್ವರೂಪಗಳಾಗಲಾರವು.

**ಸಮಾಧಾನ-** ಹಾಗಾದರೆ, ಯಾವನು ದೃಷ್ಟಿಗೆ ದ್ರಷ್ಟನಾಗಿಯೂ, ಶ್ರವಣಕ್ಕೆ ಶ್ರೋತಾನಾಗಿಯೂ,ಮನಸ್ಸಿಗೆ ಮಂತನಾಗಿಯೂ, ಬುದ್ಧಿಗೆ ವಿಜ್ಞಾತನಾಗಿಯೂ, ಇರುವನೋ ಅವನೇ ಆತ್ಮನೆಂದು ತಿಳಿ. ಅಂದರೆ, ಇಲ್ಲಿ ದೃಷ್ಟಿ, ಶ್ರವಣ, ಮನನ, ಮೊದಲಾದವುಗಳಿಗೆ ಸಾಕ್ಷಿಯಾಗಿರುವವನೇ ಆತ್ಮನೆಂದು ಹೇಳಿದ್ದೇವೆ. ಶ್ರುತಿಯೂ ಉಂಟು. ಈಗಾದರೂ ನಿನಗೆ ಸಮಾಧಾನವಾಯಿತೇ ?

**ಶಂಕಾ-** ಈ ದ್ರಷ್ಟನಲ್ಲಾ್ಯದರೂ ಏನು ವಿಶೇಷವಾಗಿರುವದು? ಘಟಕ್ಕೆ ಹೇಗೆ ದ್ರಷ್ಟನುಂಟೋ, ಹಾಗೇ ದೃಷ್ಟಿಗೆ ದ್ರಷ್ಟನೆಂದು ಹೇಳಿರುವಿರಿ. ದೃಷ್ಟಿಗೆ ದ್ರಷ್ಟನೆಂಬಲ್ಲಿ ನೀವು ವಿಶೇಷವುಂಟೆಂದು ಹೇಳುತ್ತೀರಿ. ಅದೇನೂ ಕಾಣಿಸುವದಿಲ್ಲ. ಎರಡರಲ್ಲಿಯೂ ದ್ರಷ್ಟನೇ ನೋಡಲಿಕ್ಕೆ ಯೋಗ್ಯನಿದ್ದಾನೆ. ಹೇಗೆ ದೃಷ್ಟಿಗೆ ದ್ರಷ್ಟನಾಗಿರುವನೋ ಹಾಗೇ ಘಟಕ್ಕೂ ದ್ರಷ್ಟನಾಗಿದ್ದಾನೆ. ದ್ರಷ್ಟನಲ್ಲಿ ಏನೂ ವಿಶೇಷ ತೋರುವದಿಲ್ಲ.

**ಸಮಾಧಾನ-** ಹಾಗಲ್ಲ. ವಿಶೇಷವಿರುತ್ತದೆ. ಏನಂದರೆ, ಯಾವನು ಜ್ಞಾನರೂಪ ದೃಷ್ಟಿಗೆ ದ್ರಷ್ಟವಾಗಿರುವನು. ಆ ದೃಷ್ಟಿಯು ನಿತ್ಯವಾಗಿರುವದು. ಮತ್ತು ಘಟವನ್ನರಿಯುವ ದೃಷ್ಟಿಯನ್ನು ತಿಳಿಯುತ್ತದೆ. ತಾನು ಮಾತ್ರ ಯಾವಾಗಲೂ ಯಾವುದರಿಂದಾಗಲಿ ದೃಶ್ಯವಾಗುವದಿಲ್ಲ. ಅಂಥಾ ನಿತ್ಯವಾದ ದೃಷ್ಟಿಯಿಂದ ಕೂಡಿ ದ್ರಷ್ಟನಿರುವನು. ದ್ರಷ್ಟನ ದೃಷ್ಟಿಯು ಅನಿತ್ಯವಾದರೆ, ದೃಶ್ಯವಾಗಿರಬೇಕು. ಒಂದು ವೇಳೆ ತೋರದೆ ಸುದ್ಧಾ ಇರಬೇಕು. ಹೇಗೆ ಅನಿತ್ಯವಾದ ನೇತ್ರ ದೃಷ್ಟಿಯಿಂದ ಅರಿಸಿಕೊಳ್ಳತಕ್ಕ ಘಟಾದಿಗಳು ತೋರಿ ತೋರದೇ ಇರುವವೋ, ಹಾಗೆ ದ್ರಷ್ಟನು ಅನಿತ್ಯವಾದ ದೃಷ್ಟಿಯುಳ್ಳವನಲ್ಲ. ಕಿಂತು ನಿತ್ಯವಾದ ದೃಷ್ಟಿಯುಳ್ಳವನಾದ್ದರಿಂದ ಯಾವಾಗಲೂ ದ್ರಷ್ಟನಿರುತ್ತಾನೆ.

ದ್ರಷ್ಟುವಿನ ಜ್ಞಾನರೂಪ ದೃಷ್ಟಿಯು ಅದೃಶ್ಯವಾಗಿ ನಿತ್ಯವಾಗಿರುವದೊಂದು ನೇತ್ರರೂಪ ದೃಷ್ಟಿ ದೃಶ್ಯವಾಗಿ ಅನಿತ್ಯವಾಗಿರುವದೊಂದು ಹೀಗೆ ಎರಡು ದೃಷ್ಟಿ

ಗಳು ಇರುತ್ತವೆ. ಅನಿತ್ಯವಾದ ದೃಷ್ಟಿಯು ಕಣ್ಣಿದ್ದವರಲ್ಲಿ ಉಂಟೆಂದೂ, ಇಲ್ಲದವರಲ್ಲಿಯೂ ಇಲ್ಲೆಂದೂ ಪ್ರಸಿದ್ಧವಾಗಿರುತ್ತದೆ. ದೃಶ್ಯವಾಗಿರುವ ದೃಷ್ಟಿಯು ಅನಿತ್ಯವೆಂದು ಒಪ್ಪದೆ ನಿತ್ಯವೆಂದಗೀಕರಿಸಿದರೆ, ಎಲ್ಲರೂ ಕಣ್ಣುಗಳಿದ್ದವರೇ ಆಗಬೇಕಾಗಿತ್ತು. ಈ ಮಾತು ಅಸಂಭವು.

ದ್ರಷ್ಟ್ರುವಿನ ಯಾವ ಜ್ಞಾನರೂಪ ದೃಷ್ಟಿಯುಂಟೋ ಅದು ನಿತ್ಯವಾಗಿರುವದು ಯಾಕಂದರೆ; 'ದ್ರಷ್ಟುವಿನ ದೃಷ್ಟಿಗೆ ನಾಶವಿಲ್ಲೆಂಬ'' ಶ್ರುತಿಯುಂಟು. ಮತ್ತು ಅನುಮಾನ ಪ್ರಮಾಣದಿಂದಲೂ ತಿಳಿಯಬಹುದು. ಹೇಗಂದರೆ; ಕುರುಡನಿಗಾದರೂ ಸ್ವಪ್ನದಲ್ಲಿ ಘಟಾದಿ ವಿಷಯಗಳನ್ನು ಅರಿಯುವ ದೃಷ್ಟಿಯು ತೋರುತ್ತದೆ. ಆ ಜ್ಞಾನರೂಪ ದೃಷ್ಟಿಯು ಇತರ ದೃಷ್ಟಿಗಳು ನಾಶವಾದಾಗ್ಯಾದರೂ ನಾಶವಾಗುವದಿಲ್ಲ. ಆ ದ್ರಷ್ಟುವಿನ ಜ್ಞಾನರೂಪ ದೃಷ್ಟಿಯು ನಿತ್ಯವಾಗಿ ಸ್ವಯಂಜ್ಯೋತಿರೂಪ ಆತ್ಮನ ಸ್ವರೂಪಭೂತವಾಗಿರುತ್ತದೆ. ಮತ್ತು ಜಾಗ್ರತ್ಸ್ವಪ್ನಗಳಲ್ಲಿರುವ ವಾಸನಾರೂಪ ಅನಿತ್ಯವಾದ ದೃಷ್ಟಿಯನ್ನು ಅರಿಯುವದರಿಂದಲೇ ಅದಕ್ಕೆ ದ್ರಷ್ಟಾ ಎಂಬ ಹೆಸರು ಬಂದಿರುವದು. ಅಂದರೆ ದೃಷ್ಟಿಯೇ ದ್ರಷ್ಟನ ಸ್ವರೂಪವಾಗಿರುವದು. ಹೇಗಂದರೆ; ಉಷ್ಣವು ಅಗ್ನಿಯ ಸ್ವರೂಪವಾದಂತೆ, ಅಂದರೆ, ಕಣಾದ ಮೊದಲಾದವರು ದೃಷ್ಟಿಯ ವ್ಯತಿರಿಕ್ತ ಅನ್ಯದ್ರಷ್ಟನನ್ನು ಸ್ವೀಕಾರ ಮಾಡಿರುವರು. ಅವರಂತೆ ನಾವು ಮಾಡುವದಿಲ್ಲ. ನಾವು ಅಗ್ನಿಯಂತೆ, ಸೂರ್ಯನಂತೆ, ಒಂದೇ ಸ್ವರೂಪವನ್ನಾಗಿ ಅಂಗೀಕರಿಸುತ್ತೇವೆ. ಆದ್ದರಿಂದ ಆ ಬ್ರಹ್ಮವು ನಿತ್ಯದೃಗ್ರೂಪವಾದ ತನ್ನ ಆತ್ಮನನ್ನು ಕುರಿತು ಅಧ್ಯಾರೋಪಿತ ಅನಿತ್ಯಗಳಾದ ದೃಷ್ಟಿಗಳನ್ನು ನಿವಾರಿಸುತ್ತಿರಲಿಕ್ಕೆ, ಆತ್ಮನನ್ನು ತಿಳಿದಂತೆ ಆಯಿತು.

**ಶಂಕಾ:**– ನೀವು ವಿರುದ್ಧ ಹೇಳುತ್ತೀರಿ. ಇದು ಸರಿಯಲ್ಲಾ ಯಾಕಂದರೆ, 'ಬುದ್ಧಿಯು ಅರಿಯುವವನನ್ನು ಅರಿಯಲಾರಿ. ಹೀಗೆಂದು ಶ್ರುತಿಯು ತಿಳಿಯುವವನನ್ನು ತಿಳಿಯುವದು ನಿಷೇಧಿಸಲ್ಪಟ್ಟಿರುತ್ತದೆ. ನೀವು ತಿಳಿಯಲಿಕ್ಕೆ ಬರುತ್ತದೆಂದು ಹೇಳುವಿರಿ. ಅಂದಮೇಲೆ ವಿರೋಧವಾಗುವದು.

**ಸಮಾಧಾನ:**–ಜ್ಞಾನರೂಪ ದೃಷ್ಟಿಗೆ ದ್ರಷ್ಟಾ ಸ್ವಯಂಪ್ರಕಾಶರೂಪನೆಂದು ಹೀಗೆ ಅರಿಯಲಿಕ್ಕೆ ಬರುತ್ತದೆ. ಈ ರೀತಿ ಅರಿಯಲಿಕ್ಕೆ ಬರುವದರಿಂದ ಯಾವದೊಂದು ವಿರೋಧವು ಆಗುವದಿಲ್ಲ. ಯಾಕಂದರೆ, ನಾವು ಅರಿಯುವದಕ್ಕಾಗಿ ಆತ್ಮನ ವ್ಯತಿರಿಕ್ತ ಮತ್ತೊಂದನ್ನು ಅಪೇಕ್ಷಿಸುವದಿಲ್ಲ. ದ್ರಷ್ಟುವಿನ ದೃಷ್ಟಿಯು ನಿತ್ಯವಾದದ್ದು ಎಂದು ಅರಿಯುವದರಲ್ಲಿ ದ್ರಷ್ಟನನ್ನು ವಿಷಯಮಾಡುವಂಥಾ ಬೇರೊಂದು ದೃಷ್ಟಿಯನ್ನು ಅಪೇಕ್ಷಿಸುವದಿಲ್ಲ. ದ್ರಷ್ಟನನ್ನು ವಿಷಯ ಮಾಡುವ ದೃಷ್ಟಿ ಅಪೇಕ್ಷೆಯು ಅಸಂಭವವಾದ್ದರಿಂದ, ಅದು ನಿವೃತ್ತಿಯೇ ಆಗುತ್ತದೆ.

ವಿಷಯವು ಗೋಚರವಾಗದೇ ಇರುತ್ತಿರಲಿಕ್ಕೆ ಅದರಲ್ಲಿ ಅಪೇಕ್ಷೆಯು ಯಾರಿಗೂ ಆಗುವದಿಲ್ಲ. ಮತ್ತು ದೃಶ್ಯವಾದ ದೃಷ್ಟಿಯಾದರೂ ದ್ರಷ್ಟನನ್ನು ವಿಷಯ ಮಾಡುವ ದಕ್ಕೆ ಸಾಮರ್ಥ್ಯವುಳ್ಳದ್ದಾಗುವದಿಲ್ಲ. ಅಂದಮೇಲೆ, ಯಾತಕ್ಕೆ ಅದನ್ನು ಅಪೇಕ್ಷಿಸ ಬೇಕು? ತನಗಾದರೂ ತನ್ನ ಸ್ವರೂಪವನ್ನು ವಿಷಯ ಮಾಡಬೇಕೆಂಬ ಇಚ್ಛೆಯೂ ಇರುವದಿಲ್ಲ. ಆದ್ದರಿಂದ ಅಜ್ಞಾನ ಮೂಲಕ ಅಧ್ಯಾರೋಪಿತಗಳ ನಿವೃತ್ತಿಯೇ ಆತ್ಮನನ್ನು ತಿಳಿಯಬೇಕೆಂದು ಶ್ರುತಿ ಹೇಳಿದ ತಾತ್ಪರ್ಯವು. ಇದರ ವ್ಯತಿರಿಕ್ತ ಆತ್ಮನನ್ನು ವಿಷಯ ಮಾಡುವದಕ್ಕೆ ತಿಳಿಯೋಣವೆಂಬರ್ಥವಲ್ಲ.

ಅದು ಹೇಗಂದರೆ- ದೃಷ್ಟಿಗೆ ದ್ರಷ್ಟನಾದ ನಾನು ಬ್ರಹ್ಮನಿದ್ದೇನೆ. ಯಾವ ಬ್ರಹ್ಮವು ಸಾಕ್ಷಾತ್ ಅಪರೋಕ್ಷವಾಗಿರುತ್ತದೆ. ಹಸಿವೆ, ನೀರಡಿಕೆ, ಶೋಕ, ಮೋಹ ಮೊದಲಾದ ಧರ್ಮಗಳಿಗೆ ಅತೀತವಾಗಿರುವದು. ಅದು ದೃಶ್ಯವಾಗಿ ಇದುಯೆಂದು ತಿಳಿಸಿಕೊಳ್ಳುವದಲ್ಲ. ಅದು ಸ್ಥೂಲ ಹ್ರಸ್ವ ದೀರ್ಘಾದಿಗಳಿಗೆ ವಿಲಕ್ಷಣವಾದದ್ದು. ಅದೇ ನಾನಿದ್ದೇನೆ. ನೀನು ಹೇಳಿದ ಸಂಸಾರಿಯು ನಾನಲ್ಲ. ಹೀಗೆ ತಿಳಿಯುವದ ರಿಂದಲೇ ಆ ಬ್ರಹ್ಮನು ಸರ್ವಾತ್ಮಕನಾದನು. ಅಧ್ಯಾರೋಪಿತವಾದ ಅಬ್ರಹ್ಮತ್ವವು ಹೊರಟು ಹೋಗುವದರಿಂದ, ಅದರ ಕಾರ್ಯವಾದ ಅಸರ್ವತ್ವ (ಪರಿಚ್ಛಿನ್ನತ್ವವೂ) ಹೊರಟುಹೋಗಿ, ಸರ್ವಾತ್ಮಭಾವವು ಆಯಿತು. ಆದ್ದರಿಂದ ಮನುಷ್ಯರು ಬ್ರಹ್ಮ ವಿದ್ಯೆಯಿಂದ ಪೂರ್ಣಾತ್ಮರಾಗುತ್ತೇವೆಂದು ತಿಳಿಯುವದು ಯೋಗ್ಯವಾಗಿರುತ್ತದೆ. ಅಂದರೆ ಬ್ರಹ್ಮವೇ ಅವಿದ್ಯೆಯಿಂದ ಸಂಸಾರಿಯಾಗಿತ್ತು. ವಿದ್ಯೆಯಿಂದ ಬಿಡಲ್ಪಟ್ಟಿ ತೆಂಬ ಭಾವವು. ಯಾವ ಬ್ರಹ್ಮವನ್ನು ತಿಳಿಯುವದರಿಂದ ಸರ್ವಾತ್ಮನಾಗುವೆ ನೆಂದು ನೀನು ಕೇಳಿದ್ದಿಯೋ, ಅದು ಈಗ ನಿರ್ಣಯಿಸಲ್ಪಟ್ಟಿತು. ಹೇಗಂದರೆ, ಈ ಸೃಷ್ಟಿ ಪೂರ್ವದಲ್ಲಿ ಬ್ರಹ್ಮವಿತ್ತು. ಅದು ತನ್ನನ್ನು ಕುರಿತು ನಾನೇ ಬ್ರಹ್ಮ ನಿದ್ದೇನೆಂದು ತಿಳಿಯಿತು. ಆದರಿಂದ ಸರ್ವಾತ್ಮತ್ವವುಳ್ಳದ್ದಾಯಿತು. ಈ ಹೇಳ ಲ್ಪಟ್ಟ ರೀತಿಯಂತೆ ದೇವತೆಗಳ ಮಧ್ಯದಲ್ಲಿ ಯಾವ ಯಾವನು ತನ್ನನ್ನು ತಿಳಿ ಯುವನೋ, ಅವನು ಬ್ರಹ್ಮವೇ ಆಗುವನು. ಹಾಗೆ ಋಷಿಗಳಲ್ಲಿಯೂ ಮನುಷ್ಯ ರಲ್ಲಿಯೂ ಎಂದು ತಿಳಿಯತಕ್ಕದ್ದು. 'ದೇವತೆಗಳು' ಎಂಬಲ್ಲಿ ಏನು ಅನೇಕತ್ವ ವನ್ನು ಸ್ವೀಕಾರ ಮಾಡಿರುವೆವೋ, ಅದು ಲೋಕದೃಷ್ಟಿಯಿಂದ ಸ್ವೀಕಾರ ಮಾಡಿದ್ದೇ ಹೊರ್ತು ಬ್ರಹ್ಮದೃಷ್ಟಿಯಿಂದಲ್ಲ. ಈ ಶರೀರರೂಪ ಪುರದಲ್ಲಿ ಎಲ್ಲ ಕಡೆಗೂ ಬ್ರಹ್ಮವೇ ಪ್ರವೇಶವಾಗಿರುವದೆಂದು ನಾವು ಹೇಳಿದ್ದೇವೆ. ಆದ್ದರಿಂದ ಶರೀರಾದಿ ಉಪಾಧಿಗಳಿಂದ ಜನಿತವಾದ ಲೋಕದೃಷ್ಟಿ ಅಪೇಕ್ಷೆಯಿಂದಲೇ ದೇವತೆ ಗಳೆಂದು ಬಹುವಚನವನ್ನು ಸ್ವೀಕಾರ ಮಾಡಿದ್ದೇವೆ. ಪರಮಾರ್ಥ ದೃಷ್ಟಿಯಿಂದ ಅಲ್ಲಲ್ಲಿ ಬ್ರಹ್ಮವೇ ಮೊದಲಿತ್ತು. ಈಗಲಾದರೂ ದೇವತೆಗಳ ಶರೀರದಲ್ಲಿ ತಿಳಿಯುವ ದಕ್ಕಿಂತ ಪೂರ್ವದಲ್ಲಿ ಅನ್ಯಥಾರೂಪದಿಂದ ತೋರುವದು ಅದೇ. ಆದು ತನ್ನನ್ನು

ತಾನು ತಿಳಿಯುವದರಿಂದ ಸರ್ವವಾಯಿತು. ಈ ಬ್ರಹ್ಮವಿದ್ಯೆಗೆ ಪೂರ್ಣಾತ್ಮ ಭಾವವೇ ಫಲವೆಂಬ ಅರ್ಥವನ್ನು ದೃಢೀಪಡಿಸುವದಕ್ಕಾಗಿ ಶ್ರುತಿಯು ಹೀಗೆ ಹೇಳುತ್ತದೆ. ಹೇಗಂದರೆ– ಪೂರ್ವದಲ್ಲಿ ವಾಮದೇವನಾಮಕ ಋಷಿಯು ತನ್ನ ಆತ್ಮನನ್ನು ಕುರಿತು ನಾನೇ ಬಹ್ಮನಿದ್ದೇನೆಂದು ತಿಳಿದು. ಅನಂತರ ನಾನು ಮನು ವಿದ್ದೇನೆ, ಸೂರ್ಯನಿದ್ದೇನೆ, ಎಂದು ತಿಳಿಯುವಂಥವನಾದನು. ಹೀಗೆ ಹೇಳು ವದರಿಂದ ಬಹ್ಮವಿದ್ಯೆಗೆ ಸರ್ವಾತ್ಮರೂಪ ಫಲವು ಉಂಟೆಂದು ತಿಳಿಯುತ್ತದೆ. ತನ್ನನ್ನು ತಿಳಿದು ಸರ್ವಾತ್ಮಭಾವರೂಪ ಫಲವನ್ನು ಹೊಂದಿದನೆಂದು ಹೇಳೋಣ ದರಿಂದ ಬ್ರಹ್ಮವಿದ್ಯೆಯು ಸಾಧನಸಾಧ್ಯಾದಿ ಅಪೇಕ್ಷೆಯನ್ನು ಮಾಡದೆ, ಮೋಕ್ಷ ವನ್ನು ಕೊಡುತ್ತದೆಂಬ ಭಾವವು. ಹೇಗಂದರೆ, ಊಟಮಾಡಿದ ಕೂಡಲೇ ತೃಪ್ತಿ ಯನ್ನು ಹೊಂದಿದನೆಂಬ ವಾಕ್ಯದಂತೆಂದು ತಿಳಿಯತಕ್ಕದ್ದು.

**ಶಂಕಾ:-** ಆ ಬ್ರಹ್ಮವಿದ್ಯೆಯ ಸರ್ವಾತ್ಮತ್ವರೂಪ ಫಲವು ಮಹತ್ತರವೀರ್ಯ (ಶಕ್ತಿ)ಶಾಲಿಗಳಾದ ದೇವತೆಗಳಿಗಾಗಬಹುದು. ಈ ಕಲಿಕಾಲದಲ್ಲಿಯ ಮನುಷ್ಯರು ಅಲ್ಪ ವೀರ್ಯಗಳುಳ್ಳವರಾದ್ದರಿಂದ ಬ್ರಹ್ಮವನ್ನು ತಿಳಿಯಬೇಕೆಂಬ ಬುದ್ಧಿಯು ಅದರ ಫಲವು ಒಬ್ಬನಿಗಾದರೂ ಆಗಲಾರದು.

**ಸಮಾಧಾನ:—** ಪ್ರಕೃತವಾದ ಬ್ರಹ್ಮವು ಸರ್ವಭೂತಗಳಲ್ಲಿ ಪ್ರವಿಷ್ಟವಾಗಿ ರುವದು. ದೃಷ್ಟಿಕ್ರಿಯಾದಿ ಚಿನ್ಹಗಳಿಂದ ತಿಳಿಯಲಿಕ್ಕೆ ಯೋಗ್ಯವಾದದ್ದು. ಇದನ್ನು ಕುರಿತು ವರ್ತಮಾನ ಕಾಲದಲ್ಲಾದರೂ ಯಾವನೊಬ್ಬನು ಬಾಹ್ಯ ವಿಷಯಗಳ ಅಭಿಲಾಷೆಯನ್ನು ತ್ಯಜಿಸಿ, ನಾನು ಬ್ರಹ್ಮನಿದ್ದೇನೆಂದು ತಿಳಿದು, ಉಪಾಧಿ ಜನಿತ ಭ್ರಾಂತಿಗಳನ್ನು ತಿರಸ್ಕರಿಸಿ, ಅಧ್ಯಾರೋಪಿತ ಸಕಲ ಸಂಸಾರ ಧರ್ಮಗಳಿಂದ ರಹಿ ತವಾದ, ಒಳಗೂ ಹೊರಗೂ ಏಕರಸವಾದ ಕೇವಲ ಬ್ರಹ್ಮನೇ ನಾನು ಇದ್ದೇನೆ. ಎಂದು ಹೀಗೆ ಅರಿಯುವದರಿಂದ ಅವಿದ್ಯೆಯಿಂದಾದ ಅಸರ್ವತ್ವವು ನಿವೃತ್ತಿಯಾಗಿ ಸರ್ವಾತ್ಮಭಾವವು ಫಲಿಸುತ್ತದೆ. ಮಹಾವೀರ್ಯವುಳ್ಳ ಪೂರ್ವಿಕರಾದ ವಾಮ ದೇವಾದಿಗಳಲ್ಲಾಗಲಿ, ಹೀನವೀರ್ಯರಾದ ಆಧುನಿಕ ನಮ್ಮಗಳಲ್ಲಾಗಲಿ, ಬ್ರಹ್ಮ ಮತ್ತು ಬ್ರಹ್ಮಜ್ಞಾನ ಇವುಗಳಲ್ಲಿ ಏನೂ ಭೇದವಿಲ್ಲವು. ಹೀಗೆ ಹೇಳುವದರಿಂದ '--ಅಹಂಬ್ರಹ್ಮಾಸ್ಮಿ, ಎಂಬ ಮಹಾವಾಕ್ಯವು ವೇದವಾಕ್ಯವಾಗಿರುವದು. ಆ ವೇದ ವನ್ನು ಈಶ್ವರನು ಮಾಡಿದನು. ಆ ಈಶ್ವರನೇ ನಾನು ಬ್ರಹ್ಮನಿದ್ದೇನೆಂದು ನುಡಿ ಯುತ್ತಾನೆ. ನೀನು ಬ್ರಹ್ಮವೆಂದು ನುಡಿಯುವದಿಲ್ಲ. ಆದ್ದರಿಂದ ಅಹಂ ಬ್ರಹ್ಮಾಸ್ಮಿ ಎಂಬ ಮಹಾವಾಕ್ಯವು ಜೀವಬ್ರಹ್ಮೈಕ್ಯವನ್ನು ಪ್ರತಿಪಾದಿಸುವದಿಲ್ಲ. ಎಂಬ ಊಹಾಪೋಹಕ್ಕೂ ಇಲ್ಲಿ ಉತ್ತರವನ್ನು ಕೊಟ್ಟಂತಾಯಿತು.

**ಶಂಕಾ-** ಒಳ್ಳೇ ಕಾರ್ಯಕ್ಕೆ ಬಹು ವಿಘ್ನಗಳೆಂಬ ನ್ಯಾಯದಂತೆ, ಬ್ರಹ್ಮ ವಿದ್ಯೆಯ ಫಲವಾದರೂ ಪ್ರಾಪ್ತಿಯಾಗುವಲ್ಲಿ ನಿಶ್ಚಯವಿಲ್ಲ.

**ಸಮಾಧಾನ-** ನಾವು ಹಿಂದಕ್ಕೆ ಹೇಳಿದ ರೀತಿಯಂತೆ ಯಾವನು ಬ್ರಹ್ಮ ವನ್ನು ಸಾಕ್ಷಾತ್ಕರಿಸಿಕೊಂಡಿರುವನು. ಅವನ ಸರ್ವಾತ್ಮಭಾವರೂಪ ಫಲವನ್ನು ಕೆಡಿಸುವದಕ್ಕಾಗಿ ಮಹಾವೀರ್ಯವಂತರಾದ ದೇವತೆಗಳೂ ಕೂಡಾ ಶಕ್ತರಾಗ ಲಾರರು. ಅಂದಮೇಲೆ ಅನ್ಯರು ಯಾರು ವಿಘ್ನವನ್ನುಂಟು ಮಾಡುವರು?

**ಶಂಕಾ-** ಬ್ರಹ್ಮವಿದ್ಯಾಫಲ ಪ್ರಾಪ್ತಿ ವಿಷಯದಲ್ಲಿ ದೇವತೆಗಳು ವಿಘ್ನ ವನ್ನುಂಟು ಮಾಡುವದಕ್ಕೆ ಶಕ್ತರಾಗುವದಿಲ್ಲ ಎಂಬಲ್ಲಿ ಸಂಶಯವುಂಟು. ಯಾಕಂದರೆ, ದೇವತೆಗಳನ್ನು ಕುರಿತು ಮನುಷ್ಯರು ಋಣಿಗಳಾಗಿರುವರು. ಮನು ಷ್ಯನು ಉತ್ಪನ್ನನಾದೊಡನೆ ಋಣತ್ರಯದಿಂದ ಕೂಡಿರುವನು. ಆದ್ದರಿಂದ ಬ್ರಹ್ಮ ಚರ್ಯದಿಂದ ಋಷಿಗಳ ಋಣವನ್ನೂ, ಯಜ್ಞಾದಿಗಳಿಂದ ದೇವತೆಗಳ ಋಣ ವನ್ನೂ, ಪ್ರಜೆಯಿಂದ ಪಿತೃಗಳ ಋಣವನ್ನೂ ತೀರಿಸುತ್ತಾನೆಂದು ಶ್ರುತಿಯಿರು ವದು. ದೇವತೆಗಳಿಗೆ ಮನುಷ್ಯರು ಪಶು ಸಮಾನರಾಗಿರುವರು. ಯಾಕಂದರೆ ಹವಿ ರ್ಭಾಗಗಳನ್ನು ಕೊಟ್ಟು ದೇವತೆಗಳ ತೃಪ್ತಿಯನ್ನು ಮನುಷ್ಯರು ನಡಿಸತಕ್ಕವರಾಗಿ ದ್ದಾರೆ. ಆದ್ದರಿಂದ ಉತ್ತಮ ವರ್ಣದವರು ಅಧಮ ವರ್ಣದವರನ್ನು ಕುರಿತು ಲೋಕದಲ್ಲಿ ಹೇಗೆ ವಿಘ್ನವನ್ನು ಮಾಡುತ್ತಾರೋ, ಹಾಗೇ ದೇವತೆಗಳಾದರೂ ತಮ್ಮ ವೃತ್ತಿಸ್ಥಿತಿಯನ್ನು ರಕ್ಷಿಸುವದಕ್ಕಾಗಿ ಮೋಕ್ಷವನ್ನು ಪಡೆಯಬೇಕೆಂದಿರುವ ಪರತಂತ್ರರಾಗಿರುವ ಕರ್ಮಿಗಳನ್ನು ಕುರಿತು, ವಿಘ್ನವನ್ನುಂಟುಮಾಡುವದು ನ್ಯಾಯ ವಾಗಿರುತ್ತದೆ. ನಾವು ನಮ್ಮ ಶರೀರಗಳನ್ನೂ ಮತ್ತು ಪಶುಗಳನ್ನು ಹೇಗೆ ರಕ್ಷಿಸು ತ್ತಿರುವೆವೋ, ಹಾಗೆ ದೇವತೆಗಳು ಕರ್ಮಾಧೀನವಾದ ತಮ್ಮ ಮಹತ್ತರ ವೃತ್ತಿ ಯನ್ನು ರಕ್ಷಿಸುತ್ತಾರೆ. ಒಬ್ಬನು ತನ್ನ ಜೀವನಕ್ಕಾಗಿ ನೂರಾರು ಪಶುಗಳನ್ನು ಸಾಕಿ ದಂತೆ, ದೇವತೆಗಳಾದರೂ ತಮ್ಮ ಜೀವನಾರ್ಥ ಅನೇಕ ಮರ್ತ್ಯರನ್ನು ರಕ್ಷಿಸು ತ್ತಾರೆ. ಆದ್ದರಿಂದ ಮನುಷ್ಯರು ಬ್ರಹ್ಮಜ್ಞಾನ ಸಂಪನ್ನರಾಗುವದು ದೇವತೆಗಳಿಗೆ ಪ್ರೀತಿಕರವಲ್ಲವೆಂದು ಶ್ರುತಿಯು ಮುಂದೆ ಹೇಳುತ್ತದೆ. ಮತ್ತು ಲೋಕದಲ್ಲಿ ಯಾವ ನಾದರೂ ನಾನು ಶ್ರೇಷ್ಠನು. ನೀವೆಲ್ಲರು ನನ್ನ ಅಧೀನರಾದವರೆಂದು ಅನ್ಯರಿಗೆ ಉಪದ್ರವಮಾಡಿದರೆ; ಅವರೆಲ್ಲರು ಅವನಿಗೆ ಉಪದ್ರವಮಾಡುವದು ನ್ಯಾಯವಾಗಿದೆ. ಅದರಂತೆ ಬ್ರಹ್ಮವಿತ್ತನು ನಾನು ಸ್ವತಂತ್ರನೆಂದು ತಿಳಿದು ಪರಾಧೀನತ್ವವನ್ನು ನಿವೃತ್ತಿಮಾಡಿಕೊಳ್ಳುವದಕ್ಕೆ ಹೋದರೆ, ಬ್ರಹ್ಮವಿದ್ಯಾ ಫಲಪ್ರಾಪ್ತಿ ವಿಷಯದಲ್ಲಿ ದೇವತೆಗಳು ವಿಘ್ನವನ್ನು ಅವಶ್ಯಮಾಡುತ್ತಾರೆ. ಮತ್ತು ಅವರು ಇವನಗಿಂತಲೂ ಸಾಮರ್ಥ್ಯವುಳ್ಳವರಿರುತ್ತಾರೆ.

**ಏಕದೇಶೀ ಪ್ರಶ್ನೆ:—** ಬ್ರಹ್ಮವಿದ್ಯಾಫಲ ಪ್ರಾಪ್ತಿಯಲ್ಲಿ ದೇವತೆಗಳು ವಿಘ್ನ ಗಳನ್ನುಂಟುಮಾಡುತ್ತಾರೆಂದು ಹೇಳಿದರೆ, ಕರ್ಮಫಲಪ್ರಾಪ್ತಿಯಲ್ಲಿಯೂ ವಿಘ್ನ ವನ್ನುಂಟು ಮಾಡಬಹುದು. ಯಾಕಂದರೆ; ಮರ್ತ್ಯರು ಪುಣ್ಯಕರ್ಮ ಪ್ರಭಾವ

ದಿಂದ ಮರ್ತ್ಯತ್ವನ್ನು ನೀಗಿ ದೇವತೆಗಳ ಸಮಾನವಾದ ದೇವಶರೀರವನ್ನು ಹೊಂದು ವನು. ಆಗ ದೇವತೆಗಳು ಈತನು ನಮ್ಮ ಅಧೀನನಾದವನು. ಈಗ ಸ್ವತಂತ್ರನೂ ನಮ್ಮ ಸಮಾನಸ್ಕನೂ ಆಗುತ್ತಾನೆಂದು ತಿಳಿದು, ಕರ್ಮಫಲ ಪ್ರಾಪ್ತಿಯ ವಿಷಯ ದಲ್ಲಿಯೂ ವಿಘ್ನಮಾಡಬಹುದು.

**ಪೂರ್ವಪಕ್ಷೀ ಉತ್ತರ—** ಭೋಗಮೋಕ್ಷ ಸಾಧನಗಳ ಅನುಷ್ಠಾನ ವಿಷ ಯದಲ್ಲಿ ವರ್ತಮಾನ: ಕಾಲಕ್ಕೆ ಅವಿಶ್ವಾಸವೇ ಇರುವದು. ಈಶ್ವರನು ಅಚಿಂತ್ಯಶಕ್ತಿ ಯುಳ್ಳವನಾದ್ದರಿಂದ ವಿಘ್ನಮಾಡುವದರಲ್ಲಿ ಸಮರ್ಥನಿದ್ದಾನೆ. ಆದ್ದರಿಂದಲೇ ಕಾಲ, ಕರ್ಮ, ಮಂತ್ರ, ಔಷಧಿ, ತಪಸ್ಸು ಇವುಗಳ ಫಲಸಂಪತ್ತು ಒಮ್ಮೊಮ್ಮೆ ವಿಪತ್ತಿಗೆ ಕಾರಣವಾದದ್ದಾಗಿಯೂ ಕಂಡು ಬರುವದು. ಶಾಸ್ತ್ರಲೋಕಗಳಲ್ಲಿ ಪ್ರಸಿ ದ್ಧವಾಗಿರುತ್ತದೆ. ಆದ್ದರಿಂದ ಶಾಸ್ತ್ರಾನುಷ್ಠಾನ ವಿಷಯದಲ್ಲಿ ವಿಶ್ವಾಸವಿಲ್ಲ.

**ಸಮಾಧಾನ:-** ಹಾಗಲ್ಲ. ಸರ್ವ ಪದಾರ್ಥಗಳಿಗೂ ಅದೃಷ್ಟನಿಮಿತ್ತ ಉಪಾ ದಾನವಾಗಿರುವದರಿಂದ, ಜಗತ್ತಾದರೂ ವೈಚಿತ್ರ್ಯವಾಗಿ ಕಂಡುಬರುವದು. ಸ್ವಭಾ ವವಾದಪಕ್ಷದಲ್ಲಿ ಅದೃಷ್ಟಕ್ಕೆ ನಿಮಿತ್ತತ್ವವು ಜಗದ್ವೈಚಿತ್ರ್ಯವು ಎರಡೂ ಸಂಭವಿಸು ವದಿಲ್ಲ. ಸುಖದುಃಖ ಫಲಗಳಿಗೆ ನಿಮಿತ್ತವಾದದ್ದು ಕರ್ಮವುಂಟೆಂಬ ಪಕ್ಷದಲ್ಲಿ, ವೇದ ಸ್ಮೃತಿನ್ಯಾಯ ಲೋಕಗಳಿಂದ ಅಂಗೀಕರಿಸಲ್ಪಟ್ಟದ್ದರಲ್ಲಿ, ದೇವ, ಈಶ್ವರ, ಕಾಲ ಗಳು ಕರ್ಮಫಲವನ್ನು ವಿಫಲಮಾಡುವದಕ್ಕೆ ಸಮರ್ಥಗಳಾಗಲಾರರು. ಇಚ್ಛೈಸಿ ಮಾಡಲ್ಪಟ್ಟ ಕರ್ಮದ ಫಲವನ್ನುಂಟುಮಾಡತಕ್ಕವರಿದ್ದಾರೆ. ಪುರುಷರುಗಳ ಶುಭಾ ಶುಭ ಕರ್ಮವಾದರೂ ದೇಶ, ಕಾಲ, ಈಶ್ವರಾದಿಕಾರಕ ಸಮೂಹವನ್ನು ಅಪೇಕ್ಷಿ ಸದೆ, ಯಾವಾತನನ್ನು ಕುರಿತು ಹೊಂದಲರಿಯುದು, ಹೊಂದಿದಾಗ್ಯಾದರೂ ಫಲ ವನ್ನು ಕೊಡಲಾರದು. ಯಾಕಂದರೆ ಕರ್ಮವು ತಾನುತ್ಪತ್ತಿಯಲ್ಲಿಯೂ ಫಲವನ್ನು ಕೊಡುವದರಲ್ಲಿ ಕಾರಕಾದಿ ಅನೇಕ ನಿಮಿತ್ತ ಉಪಾದಾನವಾಗಿರುವದು ಸ್ವಭಾವ ವಾಗಿದೆ. ಆದ್ದರಿಂದ ಕರ್ಮಾನುಗುಣವಾಗಿಯೇ ದೇವ ಈಶ್ವರಾದಿಗಳು ಫಲವನ್ನು ಕೊಡುತ್ತಾರೆ. ಆದರಿಂದ ಕರ್ಮಫಲವಿಷಯದಲ್ಲಿ ಅವಿಶ್ವಾಸವಿರುವದಿಲ್ಲ. ಕಿಂತು. ವಿಶ್ವಾಸವಿದೆ ಎಂಬ ಭಾವವು

ಮತ್ತು ಕೆಲವು ಕಡೆಗಳಲ್ಲಿ ದೇವತೆಗಳ ಸಾಮರ್ಥ್ಯವು ಅಡಗುವದರಿಂದ ಇವರಾದರೂ ಕರ್ಮಕ್ಕೆ ವಶಗತರಾದವರೆಂದು ಕಂಡು ಬರುತ್ತದೆ. ಕರ್ಮ, ಕಾಲ, ದೈವ, ದ್ರವ್ಯಾದಿಗಳ ಸ್ವಭಾವಗಳಲ್ಲಿ ಇದೇ ಶ್ರೇಷ್ಠವೆಂಬುದು ನಿಯಮವಲ್ಲ. ದುರ್ವಿಜ್ಞೇಯವಾಗಿರುತ್ತದೆ. ಈ ಬಗ್ಗೆ ಲೋಕಕ್ಕೆ ಮೋಹ ಪ್ರಾಪ್ತವಾಗಿರುತ್ತದೆ. ಯಾಕಂದರೆ, ಫಲಪ್ರಾಪ್ತಿಯಲ್ಲಿ ಕರ್ಮವೇ ಕಾರಣವಾಗಿರುವದು ಬೇರೊಂದಿಲ್ಲ ವೆಂದು ಕೆಲವರು ಹೇಳುತ್ತಾರೆ. ದೈವವೆಂದು ಕೆಲವರು, ಕಾಲವೆಂದು ಕೆಲವರು,

ದ್ರವ್ಯಾದಿಗಳ ಸ್ವಭಾವವಾಗಿದೆಯೆಂದು ಕೆಲವರು, ಇವೆಲ್ಲವು ಕೂಡಿದ್ದರೆ ಆಗುವ ದೆಂದು ಕೆಲವರು, 'ಪುಣ್ಯದಿಂದ ಪುಣ್ಯಕರ್ಮವೂ, ಪಾಪಕರ್ಮದಿಂದ ಪಾಪವೂ ಆಗುವದೆಂದು ಶ್ರುತಿ ಸ್ಮೃತಿ ವಾದಗಳಿರುವವು.ಒಳ್ಳೇದು; ಒಂದು ಕಾಲಕ್ಕೆ ಯಾವ ದಾವದರೊಂದರ ಶಕ್ತಿಯು ಫಲಕೊಡುವದರಲ್ಲಿ ಪ್ರಾಧಾನ್ಯವಾಗಿ ಉದ್ಭವಿಸಿದರೆ; ಆ ಕಾಲಕ್ಕೆ ಇತರಗಳ ಶಕ್ತಿಯು ಸ್ತಂಭರೂಪವಾಗಿರುತ್ತದೆ. ಆದಾಗ್ಯಾದರೂ ಕರ್ಮವು ಫಲಪ್ರಾಪ್ತಿಯನ್ನು ಕೊಡುವಲ್ಲಿ ನಿಶ್ಚಯವಿರುತ್ತದೆ. ಯಾಕಂದರೆ; ಕರ್ಮಪ್ರಾಧಾನ್ಯ ವಿಷಯದಲ್ಲಿ ಶಾಸ್ತ್ರ ನ್ಯಾಯಗಳಿಂದ ನಿರ್ಧರಿಸಲ್ಪಟ್ಟಿರುತ್ತದೆ.

ಮತ್ತು ಬ್ರಹ್ಮಪ್ರಾಪ್ತಿಫಲ ವಿಷಯದಲ್ಲಿ ದೇವತೆಗಳು ವಿಘ್ನವನ್ನುಂಟು ಮಾಡುತ್ತಾರೆಂದು ನೀನು ಏನು ಹೇಳಿದೆಯೋ ಅದೂ ಸಂಭವಿಸುವದಿಲ್ಲ. ಯಾಕಂದರೆ ಬ್ರಹ್ಮಪ್ರಾಪ್ತಿಫಲಕ್ಕೆ ಅವಿದ್ಯಾಮಾತ್ರ ನಿವೃತ್ತಿಯಾಗಬೇಕಾಗುತ್ತದೆ. ಈ ವಿಷಯದಲ್ಲಿ ದೇವತೆಗಳಿಗೆ ವಿಘ್ನಮಾಡುವ ಸಾಮರ್ಥ್ಯವಿಲ್ಲ. ಯಾಕಂದರೆ, ವಿದ್ಯಾಪ್ರಾಪ್ತಿ ಸಮಕಾಲದಲ್ಲಿಯೇ ಬ್ರಹ್ಮಪ್ರಾಪ್ತಿ ಫಲವಿರುತ್ತದೆ. ಹೇಗಂದರೆ, ಲೋಕದಲ್ಲಿ ನೋಡತಕ್ಕ ಪುರುಷನ ನೇತ್ರಗಳು ಸೂರ್ಯಾದಿ ಪ್ರಕಾಶದೊಡನೆ ಸಂಯೋಗವಾದ ಘಟಕ್ಕೆ ಯಾವ ಕಾಲಕ್ಕೆ ಸಂಬಂಧವಾಗುವವೋ, ಅದೇ ಕಾಲದಲ್ಲಿ ಆ ಘಟದ ರೂಪದ ಅಭಿವ್ಯಕ್ತಿಯಾಗುತ್ತದೆ. ಇದರಂತೆ ಆತ್ಮವಿಷಯಕ ವಿಜ್ಞಾನವು ಯಾವ ಕಾಲದಲ್ಲಿ ಆಯಿತೋ, ಅದೇ ಕಾಲದಲ್ಲಿ ಅಜ್ಞಾನದ ತಿರೋಭಾವವಾಗುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯಿರುತ್ತಿರಲಿಕ್ಕೆ ಅವಿದ್ಯಾ ಕಾರ್ಯವು ತೋರುವದಿಲ್ಲ. ದೀಪವಿರಲಿಕ್ಕೆ ಕತ್ತಲೆಯ ಕಾರ್ಯವಿರದಂತೆ, ದೇವತೆಗಳು ಯಾವುದರಿಂದ ಯಾರಿಗೆ ವಿಘ್ನವನ್ನುಂಟುಮಾಡುವರು ? ಬ್ರಹ್ಮವಿತ್ತರು ಆ ಕಾಲಕ್ಕೆ ದೇವತೆಗಳ ಆತ್ಮರೂಪರೇ ಆಗಿರುವರು. ಯಾವ ಸರ್ವ ಶಾಸ್ತ್ರಗಳಿಂದ ಜ್ಞೇಯವಾದದ್ದೂ ಚಿಂತಿಸಲಿಕ್ಕೆ ಯೋಗ್ಯವಾದದ್ದೂ ಯಾವ ಬ್ರಹ್ಮವುಂಟೋ, ಅದು ಬ್ರಹ್ಮವಿತ್ತರ ಆತ್ಮರೂಪವಾಗಿದೆ. ಅಂಥಾ ಬ್ರಹ್ಮವಿತ್ತರು ದೇವತೆಗಳ ಪ್ರತ್ಯಗಾತ್ಮ ಸ್ವರೂಪರಾಗಿರುವರು. ರಜತ ಪ್ರತೀತಿಯು ಶುಕ್ತಿಯ ಜ್ಞಾನವಾದ ಕೂಡಲೇ ನಿವೃತ್ತಿಯಾಗಿ ಶುಕ್ತಿಯ ಸ್ವರೂಪವೇ ಹೇಗೆ ಆಗಿದೆಯೋ, ಹಾಗೆ ಬ್ರಹ್ಮವಿದ್ಯಾ ಸಮಕಾಲದಲ್ಲಿಯೇ ಅವಿದ್ಯೆಯು ನಿವೃತ್ತಿಯಾದ್ದರಿಂದ ಸರ್ವಾತ್ಮತ್ವವು ಲಭಿಸುವದೆಂದು ಹೇಳುತ್ತೇವೆ. ಅನಂತರ ದೇವತೆಗಳು ತಮಗೆ ಪ್ರತಿಕೂಲವಾಗುವ ವಿಷಯದಲ್ಲಿ ಎಂದೂ ಪ್ರಯತ್ನವನ್ನು ಮಾಡಲಾರರು. ಅಜ್ಞಾನಿಯನ್ನು ಕುರಿತು ಅನಾತ್ಮವಾದ ಫಲವನ್ನು ದೇಶ ಕಾಲ ನಿಮಿತ್ತಾದಿಗಳಿಂದ ಅವಕಾಶಮಾಡಿಕೊಂಡು ಕೊಡುವದರಲ್ಲಿ ದೇವತೆಗಳು ವಿಘ್ನವನ್ನಾಚರಿಸಬಹುದು. ವಿದ್ಯಾ ಸಮಕಾಲದಲ್ಲಿಯೇ ಆತ್ಮಭೂತನಾದ ಬ್ರಹ್ಮವಿತ್ತನನ್ನು ಕುರಿತು, ದೇಶ ಕಾಲ ನಿಮಿತ್ತಾದಿಗಳ ಅವಕಾಶವಿಲ್ಲದೆ ವಿಘ್ನವನ್ನು ಆಚರಿಸುವದು ಶಕ್ಯವಿಲ್ಲ.

**ಶಂಕಾ:—** ವಿದ್ಯಾಸಮಕಾಲ ವಿದ್ಯಾಫಲ ಪ್ರಾಪ್ತಿಯಾಗುವದರಿಂದ ದೇವತೆಗಳು ವಿಘ್ನವನ್ನು ಮಾಡಲಾರರೆಂದು ಹೇಳಲ್ಪಟ್ಟಿತು. ಅದು ಸಂಭವಿಸಲಾರದು. ಯಾಕಂದರೆ ಅಜ್ಞಾನಿಗಳಂತೆ ಜ್ಞಾನಿಗಳಿಗಾದರೂ ಅಹಂಬ್ರಹ್ಮಾಸ್ಮಿಯೆಂಬ ವಿದ್ಯಾವೃತ್ತಿಗಳ ಸಂತತಿ ಯಾವಾಗಲೂ ಇರುವದಿಲ್ಲ. ಆದ್ದರಿಂದ ಅಜ್ಞಾನವನ್ನು ನಿವೃತ್ತ ಮಾಡಲಾರವು. ಮತ್ತು ಜ್ಞಾನೋತ್ಪತ್ತಿ ಪೂರ್ವದಂತೆ ಉತ್ತರ ಕಾಲದಲ್ಲಿಯಾದರೂ ಅಜ್ಞಾನದ ಕಾರ್ಯಗಳಾದ ರಾಗದ್ವೇಷಾದಿಗಳು ತೋರುವದರಿಂದ; ಮರಣ ಸಮಯದಲ್ಲಿರುವ ಅಂತ್ಯವಿದ್ಯಾವೃತ್ತಿಯೇ ಅವಿದ್ಯೆಯನ್ನು ನಿವೃತ್ತಿಮಾಡುತ್ತದೆಯೆಂದು ಹೇಳಿದರೆ, ಮೊದಲಿನ ವಿದ್ಯಾವೃತ್ತಿ ಅವಿದ್ಯೆಯನ್ನು ನಿವೃತ್ತಿ ಮಾಡುವದಿಲ್ಲೆಂದು ಹೇಳಬೇಕಾಯಿತು. ಅಂದಮೇಲೆ ಜೀವನ್ಮುಕ್ತಿಯೇ ಇಲ್ಲವೆಂದು ಅಂಗೀಕರಿಸಬೇಕಾಯಿತು. ಯಾವಾಗ್ಯೆ ಪ್ರಥಮ ಆತ್ಮವಿಷಯಕವೃತ್ತಿಯು ಅವಿದ್ಯೆಯನ್ನು ನಿವೃತ್ತಿಮಾಡದಮೇಲೆ ಹಾಗೇ ಅಂತ್ಯವೃತ್ತಿಯಾದರೂ ಮಾಡಲಾರದು.

ಯಾವಾಗಲೂ ಅವಿದ್ಯಾ ನಿವರ್ತಕ ಜ್ಞಾನಸಂತತಿ ಉಂಟು. ಇನ್ನುಮೇಲೆ ಅಜ್ಞಾನವನ್ನು ನಿವೃತ್ತಿಮಾಡುತ್ತದೆಂದು ಹೇಳಿದರೆ, ಅದೂ ಯೋಗ್ಯವಲ್ಲ. ಯಾಕಂದರೆ ಹಸಿವೆಯುಳ್ಳವನಾಗಿದ್ದೇನೆ. ಊಟಮಾಡುತ್ತೇನೆ ಎಂಬ ಜೀವನಾದಿ ಹೇತು ಪ್ರತ್ಯಯಗಳು ಇರುತ್ತಿರಲಿಕ್ಕೆ, ಇದಕ್ಕೆ ವಿರುದ್ಧವಾದ ಅಹಂ ಬ್ರಹ್ಮಾಸ್ಮಿಯೆಂಬ ಅವಿಚ್ಛಿನ್ನ ವೃತ್ತಿಯ ಸಂತತಿಯು ತೋರಲಾರದು. ಮತ್ತು ಒಂದುವೇಳೆ ಜೀವನಕ್ಕೆ ಹೇತುಭೂತಗಳಾದ ಪ್ರತ್ಯಯಗಳನ್ನು (ವೃತ್ತಿಗಳನ್ನು) ತಿರಸ್ಕಾರ ಮಾಡುವದರಿಂದ ಮರಣವಾಗುವ ಪರ್ಯಂತರವೂ ವಿದ್ಯಾವೃತ್ತಿ ಸಂತತಿಯು ಇರುತ್ತದೆ ಎಂದು ಹೇಳಬಹುದು. ಇದೂ ಕೂಡಾ ಸಂಭವಿಸುವದಿಲ್ಲ. ಯಾಕಂದರೆ ಅನಾತ್ಮಕಾರ ವೃತ್ತಿಗಳು ಇಷ್ಟೇ ಎಂದು ನಿಶ್ಚಯಮಾಡಲಿಕ್ಕೆ ಬರುವದಿಲ್ಲ. ಶಾಸ್ತ್ರವಾದರೂ ನಿರ್ಧರಿಸಲಿಲ್ಲ. ಮತ್ತು ಇಷ್ಟು ವಿದ್ಯಾವೃತ್ತಿಗಳ ಸಂತತಿಯು ಅವಿದ್ಯೆಯನ್ನು ನಿವೃತ್ತಿಮಾಡಿರುವದೆಂದೂ ಶಾಸ್ತ್ರಾರ್ಥವು ಹೇಳಲಿಲ್ಲ. ಇದು ಅತ್ಯಂತ ಅಯೋಗ್ಯವಾಗಿರುವದು. ವಿದ್ಯಾವೃತ್ತಿ ಸಂತತಿಯು ಇರುತ್ತದೆಂದು ಶಾಸ್ತ್ರವು ನಿಶ್ಚಯಿಸಲ್ಪಟ್ಟಿದೆಯೆಂದು ಹೇಳಿದರೆ, ಹಾಗೆ ಹೇಳುವದೂ ಸರಿಯಲ್ಲ. ಯಾಕಂದರೆ ಮೊದಲಿಂದ ಕಡೆತನಕ ವೃತ್ತಿಗಳು ಸಮಾನಗಳಾಗಿರುತ್ತವೆ. ಇದು ಮೊದಲಿನ ವೃತ್ತಿ ಇದು ಅಂತ್ಯವೃತ್ತಿಯೆಂದು ವಿಶೇಷವೇನೂ ತೋರುವದಿಲ್ಲ. ಎರಡೂ ವೃತ್ತಿಗಳಲ್ಲಿಯೂ ಅವಿದ್ಯಾನಿವೃತ್ತಿ ಮಾಡುವ ಸಾಮರ್ಥ್ಯವು ಇಲ್ಲವೇ ಇಲ್ಲ. ಹೀಗಾದ ಮೇಲೆ ಅವಿದ್ಯೆಯು ನಿವೃತ್ತಿಯೇ ಆಗಲಿಲ್ಲ ಎಂದು ಒಪ್ಪಬೇಕಾಯಿತು.

**ಸಮಾಧಾನ–** 'ಹಾಗೆ ಅರಿಯುವದರಿಂದ ಸರ್ವಾತ್ಮನಾದನು., 'ಹೃದಯ ಗ್ರಂಥಿಯು ಭೇದಿಸಲ್ಪಟ್ಟಿತು., 'ಅಲ್ಲಿ ಶೋಕ ಮೋಹಗಳೆಲ್ಲಿ, ಇತ್ಯಾದಿ ಶ್ರುತಿ

ಸ್ಮೃತಿಗಳಿಂದ ವಿದ್ಯಾವೃತ್ತಿಯು ಅವಿದ್ಯೆ ನಿವೃತ್ತಿಯನ್ನು ಮಾಡಿರುವದು ಕಂಡು ಬರುತ್ತದೆ. ಈ ಶ್ರುತಿಸ್ಮೃತಿಗಳು ಅರ್ಥವಾದ ಪರಗಳೆಂದು ಹೇಳಿದರೆ, ಸರ್ವ ಶಾಖಾಉಪನಿಷತ್ತುಗಳು ಅರ್ಥವಾದಪರಗಳೆಂದುಹೇಳಬೇಕಾದೀತು. ಯಾಕಂದರೆ ಎಲ್ಲಾ ಶಾಖೆಯ ಉಪನಿಷತ್ತುಗಳು ಈ ಅರ್ಥವನ್ನು ಹೇಳುವದರಲ್ಲಿಯೇ ತತ್ಪರ ಗಳಾಗಿರುವವು.

**ಶಂಕಾ:-** ಹಾಗಲ್ಲ. ಆತ್ಮನು ಮಾನಕ್ಕೆ ಅಗೋಚರನಿದ್ದರೂ ಶ್ರುತಿಗಳು ಪ್ರತ್ಯಕ್ಷ ವಿಷಯನಾಗಿರುವನೆಂದು ಹೇಳುತ್ತವೆ. ಆದ್ದರಿಂದ ಅರ್ಥವಾದ ವಾಕ್ಯ ಗಳೆಂದು ಹೇಳಬೇಕು.

**ಸಮಾಧಾನಃ-** ವಿದ್ಯಾವೃತ್ತಿಯು ಅವಿದ್ಯಾ, ಶೋಕ, ಮೋಹ, ಭಯಾದಿ ದೋಷಗಳನ್ನು ನಿವೃತ್ತಿಮಾಡುವದರಿಂದ ಪ್ರತ್ಯಕ್ಷವೆಂದು ಉತ್ತರ ಹೇಳಲ್ಪಡುತ್ತದೆ. ಆದ್ದರಿಂದ ಆದ್ಯವೋ? ಅಂತ್ಯವೋ? ಸಂತತವೃತ್ತಿಯೋ? ಅಸಂತತ ವೃತ್ತಿಯೋ? ಎಂಬ ಪ್ರಶ್ನೆಮಾಡುವದು ಅಯೋಗ್ಯವಾಗಿರುವದು. ಯಾಕಂದರೆ, ಅವಿದ್ಯಾ ದೋಷ ನಿವೃತ್ತಿ ಫಲಾವಸಾನವುಳ್ಳದ್ದು ವಿದ್ಯೆಯಾಗಿರುತ್ತದೆ. ಆದ್ದರಿಂದ ಅವಿ ದ್ಯಾದಿ ದೋಷ ನಿವೃತ್ತಿ ಫಲವನ್ನು ಮಾಡತಕ್ಕದ್ದು. ಯಾವ ವೃತ್ತಿಯೋ ಅದೇ ವಿದ್ಯಾ ವೃತ್ತಿಯೆಂದು ನಾವು ಅಂಗೀಕರಿಸಿದ್ದೇವೆ. ಆದರಿಂದ ಮೊದಲಿ ನದೋ, ಕಡೆಯದೋ, ನಡುವಿನದೋ ಎಂಬ ಪ್ರಶ್ನೆಕ್ಕೆ ಅವಕಾಶವೇ ಇಲ್ಲ.

ಮತ್ತು ವಿದ್ಯಾವೃತ್ತಿಗೆ ವಿಪರೀತವಾದ ಅಜ್ಞಾನದ ಕಾರ್ಯರೂಪ ರಾಗ ದ್ವೇಷಾದಿ ವೃತ್ತಿಗಳು ತೋರುವದರಿಂದ ವಿದ್ಯಾವೃತ್ತಿಯೇ ಇಲ್ಲೆಂದು ಏನು ಹೇಳ ಲ್ಪಟ್ಟಿತೋ, ಅದೂ ಸಂಭವಿಸುವದಿಲ್ಲ. ಯಾಕಂದರೆ, ಯಾವ ಕರ್ಮದಿಂದ ಶರೀರವು ಆರಂಭ ಮಾಡಲ್ಪಟ್ಟಿರುವದೋ, ಆ ಪ್ರಾರಬ್ಧಕರ್ಮವು ವಿಪರೀತ ಪ್ರತ್ಯಯ ದೋಷಗಳಿಗೆ ನಿಮಿತ್ತವಾಗಿರುತ್ತದೆ. ಆದರಿಂದ ಅದು ವಿಪರೀತ ವೃತ್ತಿ ದೋಷದಿಂದ ಕೂಡಿ ಫಲವನ್ನು ಕೊಡುವದಕ್ಕೆ ಸಾಮರ್ಥ್ಯವುಳ್ಳದ್ದಾಗಿರುವದು. ಎಲ್ಲಿಯ ವರೆಗೂ ಶರೀರಪಾತವಾಗಿರುವದಿಲ್ಲವೋ, ಅಲ್ಲಿಯ ವರೆಗೆ ವಿದ್ಯಾವೃತ್ತಿಗೆ ವಿಪರೀತವಾದ ರಾಗಾದಿ ದೋಷರೂಪ ವೃತ್ತಿಗಳನ್ನುಂಟುಮಾಡುತ್ತದೆ. ಮುಕ್ತ ಬಾಣದಂತೆ ಆ ಕರ್ಮವು ಫಲವನ್ನು ಕೊಡುವದಕ್ಕೆ ಉದ್ಯುಕ್ತವಾಗಿರುತ್ತದೆ. ಇದು ವಿದ್ಯೆಗೆ ವಿರೋಧವಲ್ಲದ್ದರಿಂದ ಆ ವಿದ್ಯಾವೃತ್ತಿಯು ಈ ಆಭಾಸವೃತ್ತಿಗಳನ್ನು ನಾಶ ಮಾಡುವದಿಲ್ಲ. ಕಿಂತು ತನಗೆ ವಿರೋಧವಾದ ಸಂಚಿತ ಕರ್ಮವನ್ನು ಮಾತ್ರ ನಾಶ ಮಾಡುತ್ತದೆ.

ಮತ್ತು ವಿದ್ಯಾವಂತನಿಗೆ ವಿಪರೀತ ರಾಗಾದಿವೃತ್ತಿಗಳಿದ್ದರೂ ಉತ್ಪನ್ನಗಳಾ ಗುವದಿಲ್ಲ. ಯಾಕಂದರೆ; ನಿರ್ವಿಷಯಗಳಾಗಿರುವದರಿಂದ, ಹೇಗಂದರೆ; ಶುಕ್ತಿಯು

ವಿಶೇಷರೂಪದ ಜ್ಞಾನವಿಲ್ಲದೆ ಸಾಮಾನ್ಯಮಾತ್ರವಾದರೆ ಅವನಿಗೆ ಅದರಲ್ಲಿ ರಜತ ಭ್ರಮವು ತೋರುತ್ತದೆ. ಶುಕ್ತಿಯ ವಿಶೇಷ ಸ್ವರೂಪದ ಯಥಾರ್ಥ ಜ್ಞಾನವಾದರೆ; ರಜತ ಭ್ರಾಂತಿಯು ತೋರುವದಿಲ್ಲ. ಹೇಗೋ ಹಾಗೇ ಆತ್ಮಸ್ವರೂಪದ ಅಸಂಗ ಅದ್ವಿತೀಯ ಜ್ಞಾನವಿಲ್ಲದೆ ನಾನಿದ್ದೇನೆಂಬ ಸಾಮಾನ್ಯ ಜ್ಞಾನಮಾತ್ರವಾದರೆ; ವಿಪರೀತ ರಾಗಾದಿವೃತ್ತಿಗಳು ತೋರುತ್ತವೆ. ಆತ್ಮನ ವಿಶೇಷ ಸ್ವರೂಪದ ಯಥಾರ್ಥಜ್ಞಾನವಾದರೆ; ವಿಪರೀತ ಪ್ರತ್ಯಯರೂಪ ಭ್ರಾಂತಿಯಾದರೂ ತೋರುವದಿಲ್ಲ. ಕೆಲವು ಕಡೆಗಳಲ್ಲಿ ತೋರುವದೂ ಉಂಟು. ಹೇಗಂದರೆ, ವಿದ್ಯೋತ್ಪತ್ತಿಗಿಂತ ಪೂರ್ವದಲ್ಲಿ ಉತ್ಪನ್ನ ವಿಪರೀತ ವೃತ್ತಿಗಳ ಮೂಲಕ ಜನಿತ ಸಂಸ್ಕಾರಗಳಿಂದ ವಿಪರೀತ ಪ್ರತ್ಯಯರೂಪ ಭ್ರಾಂತಿ ಸ್ಮೃತಿಗಳು ವೃತ್ತಿಗಳೂ (ಅನಾತ್ಮಾಕಾರ ಸ್ಮೃತಿ ವೃತ್ತಿಗಳು) ಅಕಸ್ಮಾತ್ ಉತ್ಪನ್ನಗಳಾಗುವದುಂಟು. ಯಥಾರ್ಥವಾಗಿ ಪೂರ್ವದಿಕ್ಕುಗಳನ್ನು ಬಲ್ಲವನಿಗಾದರೂ ಅಕಸ್ಮಾತ್ ದಿಗ್ಭ್ರಾಂತಿಯು ತೋರುತ್ತದೆ. ಹೀಗೆ ಹೇಳುವದರಿಂದ '—ಸಮ್ಯಕ್ ಜ್ಞಾನಿಗೆ ಪೂರ್ವದಂತೆ ವಿಪರೀತ ಪ್ರತ್ಯಯಗಳು ಉತ್ಪನ್ನವಾದರೆ; ಜ್ಞಾನಿಯಲ್ಲಿ ವಿಶ್ವಾಸ ಉಳಿಯುವದಿಲ್ಲ. ಆದ್ದರಿಂದ ಶಾಸ್ತ್ರಾರ್ಥಜ್ಞಾನ ವಿಷಯದಲ್ಲಿ ಪ್ರವೃತ್ತಿಯೂ ಅಸಮಂಜಸವು. ಪ್ರಮಾಣವು ಅಪ್ರಮಾಣವೆನಿಸುವದು. ಜ್ಞಾನವಾದ ಕೂಡಲೇ ಶರೀರವೇ ಪಾತವಾಗಬೇಕು' ಎಂಬ ವಿಕಲ್ಪಗಳಿಗೂ ಉತ್ತರವನ್ನು ಕೊಟ್ಟಂತಾಯಿತು.

ಮತ್ತು ಜ್ಞಾನೋತ್ಪತ್ತಿಯ ಪೂರ್ವದಲ್ಲಿರುವ ಸಂಚಿತ ಕರ್ಮವು ಮತ್ತು ಉತ್ತರದಲ್ಲಿ ಆಗುವ ಆಗಾಮಿ ಕರ್ಮವು, ಇವೆರಡು ಫಲವನ್ನುಂಟುಮಾಡುವದಕ್ಕೆ ಸದ್ಯಕ್ಕೆ ಯೋಗ್ಯಗಳಾಗಿಲ್ಲ. ಅದರಿಂದ ಇವೆರಡು ಕರ್ಮಗಳು ಜ್ಞಾನದಿಂದ ನಾಶಗಳಾಗುತ್ತವೆ 'ಈತನ ಕರ್ಮಗಳೆಲ್ಲ ನಾಶವಾಗಲ್ಪಡುತ್ತವೆ' 'ಅವನಿಗೆ ಅಲ್ಲಿಯವರೆಗೆ ಅವಕಾಶ' 'ಸರ್ವಕರ್ಮಗಳುನಾಶವಾಗುತ್ತವೆ.' 'ಅವನನ್ನು ತಿಳಿದು ಪಾಪಕರ್ಮದಿಂದಲೋಪಾಯಮಾನನಾಗುವದಿಲ್ಲ.' 'ಈತನನ್ನು ಕುರಿತು ಸಂಚಿತಆಗಾಮಿಗಳು ಫಲಕೊಡುವದಿಲ್ಲ, 'ಈತನನ್ನು ಕುರಿತು ಪುಣ್ಯಪಾಪಗಳು ತಾಪವನ್ನು ಕೊಡುವದಿಲ್ಲ.' 'ಇವನಿಗೆ ದುಃಖವನ್ನು ಕೊಡುವದಿಲ್ಲ.' 'ಯಾರಿಂದಲೂ ಭಯವು ಲೈಪಸಾಗುವದಿಲ್ಲ.' 'ಜ್ಞಾನರೂಪ ಅಗ್ನಿಯು ಸರ್ವಕರ್ಮಗಳನ್ನು ಬೂದಿಮಾಡುತ್ತದೆ' ಎಂಬ ಶ್ರುತಿಸ್ಮೃತಿಗಳಿಂದ ಸಂಚಿತಾಗಾಮಿ ಕರ್ಮಗಳ ನಾಶವೂ ಪ್ರಾರಬ್ಧ ಕರ್ಮ ಮೂಲಕ ಶರೀರ ಸ್ಥಿತಿಯೂ ಅಂಗೀಕರಿಸಲ್ಪಟ್ಟಿರುತ್ತದೆ.

ಮತ್ತು ಬ್ರಹ್ಮಜ್ಞಾನವು ತನ್ನ ಫಲವನ್ನುಂಟುಮಾಡುವದರಲ್ಲಿ ಋಣಸಂಬಂಧದಿಂದ ಪ್ರತಿಬಂಧಿಸಲ್ಪಡುತ್ತದೆಂದು ಏನು ಹೇಳಲ್ಪಟ್ಟಿತೋ ಅದೂ ಸಂಭವಿಸುವದಿಲ್ಲ. ಅದು ಅವಿದ್ಯಾವಂತನ ವಿಷಯವಾಗಿದೆ. ಅವಿದ್ಯೆಯುಳ್ಳವನೇ ಋಣಿಯು.

ಆವನಿಗೆ ಕರ್ತೃತ್ವಾದಿಗಳು ಸಲ್ಲುತ್ತವೆ. ಬ್ರಹ್ಮಕ್ಕೆ ನಾನು ಭಿನ್ನ. ನನಗೆ ಬ್ರಹ್ಮಭಿನ್ನ ಎಂದು ಯಾವಾತನು ತಿಳಿಯುತ್ತಾನೆ. ಹೀಗೆಂದು ಶ್ರುತಿಯು ಹೇಳುವಂಥಾದ್ದಿರುತ್ತದೆ. ಅಭೇದವಾದ ಸದ್ವಸ್ತುವೇ ಅವಿದ್ಯಾಮೂಲಕ ತಿಮಿರಾದಿ ದೋಷದಿಂದ ತೋರುವ ದ್ವಿಚಂದ್ರಾದಿಗಳಂತೆ, ಅನೇಕ ಕಾರಕ ಕರ್ಮಫಲಗಳುಳ್ಳಂತೆ ತೋರುತ್ತದೆ. ಯಾವಾಗ್ಯೆ ಪುನಃ ವಿದ್ಯೆಯು ಪ್ರಾಪ್ತವಾಗುತ್ತಿರಲಿಕ್ಕೆ ಅನೇಕತ್ವ ಭ್ರಾಂತಿಯು ಹೊರಟುಹೋಗುವದು. ಆ ಕಾಲಕ್ಕೆ ಯಾವುದರಿಂದ ಏನನ್ನು ಕಾಣುವನು? ಎಂದು ಕರ್ಮದ ಅಭಾವವನ್ನು ಶ್ರುತಿಯು ಹೇಳಿರುತ್ತದೆ. ಆದ್ದರಿಂದ ಅವಿದ್ಯಾವಂತನಲ್ಲಿಯೇ ಋಣರೂಪ ಕರ್ಮತ್ವವು ಸಂಭವಿಸುತ್ತದೆ. ಅನ್ಯರಲ್ಲಿ ಇಲ್ಲ.

ಏತತ್ ವಿಷಯವನ್ನೇ ಮುಂದೆ ವಿಸ್ತಾರಪೂರ್ವಕ ನಿರೂಪಿಸುವವರು ಇದ್ದೇವೆ. ಹೇಗೆಂದರೆ, ಯಾವ ಅಜ್ಞಾನಿಯು ತನಗೆ ಭಿನ್ನವಾದ ಯಾವ ದೇವತೆಯನ್ನು ಕುರಿತು ಸ್ತುತಿ, ನಮಸ್ಕಾರ, ಗಂಧಪುಷ್ಪಾದಿಗಳಿಂದ ಪೂಜಾ ( ಯಾಗ ) ನೈವೇದ್ಯ ಸಮರ್ಪಿಸೋಣ (ಬಲಿ) ಏಕಾಗ್ರ ವೃತ್ತಿಯನ್ನು ಮಾಡೋಣ, ಅಲ್ಲಿಯೇ ಆ ವೃತ್ತಿಯನ್ನು ಇರಿಸೋಣ (ಧ್ಯಾನ) ಇವುಗಳಿಂದ ಉಪಾಸಿಸುತ್ತಾನೋ, ಅವನು ಈ ಉಪಾಸ್ಯ ದೇವತಾ ನನಗೆ ಭಿನ್ನವಾಗಿರುವದು. ನಾನು ಇದಕ್ಕೆ ಭಿನ್ನವಾಗಿ ಕರ್ಮವನ್ನು ಮಾಡತಕ್ಕವನಿದ್ದೇನೆ, ಋಣಿಯಿದ್ದೇನೆ. ಅದರ ಮೋಚನಾರ್ಥ ಈ ಕರ್ಮವನ್ನು ಮಾಡುತ್ತಿದ್ದೇನೆ ಎಂದು ಹೀಗೆ ತಿಳಿಯುತ್ತಾನೆ. ಇವನು ಯಥಾರ್ಥ ತತ್ವವನ್ನು ತಿಳಿದವನಲ್ಲ ಅವಿದ್ಯಾವಂತನೇ, ನಮಗೆ ಪಶುವು ಭಾರವನ್ನು ಹೊರುವುದರಿಂದ ಹಾಲನ್ನು ಕರೆಯುವದರಿಂದ ಹೇಗೆ ಉಪಕಾರವಾಗಿದೆಯೋ, ಹಾಗೇ ಈತನಾದರೂ ಹವಿರ್ಭಾಗಗಳನ್ನು ದೇವತೆಗಳಿಗೆ ಕೊಟ್ಟು ಸಂತೋಷಪಡಿಸುವದರಿಂದ ದೇವತೆಗಳಿಗೆ ಈತನು ಪಶುವಾಗಿದ್ದಾನೆ. ಕರ್ಮಕ್ಕೆ ಅಧಿಕಾರಿಯಾಗಿರುವನು. ಅಂದರೆ ವರ್ಣಾಶ್ರಮಾದಿ ಅಭಿಮಾನಿಯಾಗಿ ಅವಿದ್ಯಾವಂತನಾಗಿರುವ ಪುರುಷನೇ ಶಾಸ್ತ್ರೋಕ್ತ ಕರ್ಮೋಪಾಸನೆಗಳನ್ನು ಮಾಡಲು ಮನುಷ್ಯತ್ವ ಮೊದಲು ಬ್ರಹ್ಮನ ವರೆಗಿರುವ ಉತ್ಕರ್ಷರೂಪ ಫಲವನ್ನು ಪಡೆಯುತ್ತಾನೆ. ಶಾಸ್ತ್ರೋಕ್ತಕ್ಕೆ ವಿರುದ್ಧವಾಗಿ ಸ್ವಾಭಾವಿಕ ಪಾಪಕರ್ಮವನ್ನು ಮಾಡಿದರೆ, ಮನುಷ್ಯತ್ವ ಮೊದಲುಗೊಂಡು ಸ್ಥಾವರಪರ್ಯಂತರದವರೆಗಿರುವ ಕನಿಷ್ಠ ಶರೀರಗಳನ್ನು ಹೊಂದುವನು. ಆದ್ದರಿಂದ ಅಜ್ಞಾನಿಯಾದ ಪುರುಷನನ್ನು ಕುರಿತು ದೇವತೆಗಳು ವಿಘ್ನಮಾಡುವದಕ್ಕೂ ಅನುಗ್ರಹಮಾಡುವದಕ್ಕೂ ಸಮರ್ಥರಿರುತ್ತಾರೆ. ಅನೇಕ ಪಶು ಅಶ್ವಾದಿಗಳು ಒಬ್ಬ ಯಜಮಾನನನ್ನು ಕುರಿತು ಹೇಗೆ ಉಪಕಾರದಿಂದ ಪಾಲನಮಾಡುವಂಥವಗಳಾಗಿವೆಯೋ, ಹಾಗೆ ಈ ಅಜ್ಞಾನಿಗಳಾದ ಮನುಷ್ಯರೂ ಯಜ್ಞಾದಿಗಳಿಂದ ದೇವತೆಯನ್ನು ಸಂತುಷ್ಟಪಡಿಸುವರು. ದನದ ಹಿಂಡಿನೊಳಗಿನದೊಂದು ಪಶುವು ಅಡವಿ

ಯಲ್ಲಿ ಹುಲಿಯಿಂದ ಹಿಡಿಯಲ್ಪಟ್ಟಿತೆಂದು ತಿಳಿದಕೂಡಲೇ,ಯಜಮಾನನಿಗೆ ಹೇಗೆ ದುಃಖವಾಗುತ್ತದೆಯೋ, ಹಾಗೇ ಮನುಷ್ಯರಲ್ಲಿ ಯಾವನಾದರೊಬ್ಬನು ಬ್ರಹ್ಮ ವಿದ್ಯೆಯಿಂದ ಜೀವತ್ವರೂಪಪರಾಧೀನತ್ವವನ್ನು ಪರಿಹರಿಸಿಕೊಂಡು; ಬ್ರಹ್ಮಸ್ವರೂಪ ನಾದರೆ ದೇವತೆಗಳು ನಮ್ಮ ಪಶುಗಳಲ್ಲಿ ಒಂದು ಪಶು ಹೋಗಿಬಿಟ್ಟಿತು. ಬ್ರಹ್ಮ ಜ್ಞಾನರೂಪ ಹುಲಿಯ ಕೈಗೆ ಸಿಕ್ಕು ಸತ್ತಿತು. ಎಂದು ಬಹಳ ವ್ಯಸನಪಡುತ್ತಾರೆ. ಆದ್ದರಿಂದ ಮನುಷ್ಯರು ಬ್ರಹ್ಮವಿದ್ಯೆಯಿಂದ ಸಂಪನ್ನರಾಗುವದು ದೇವತೆಗಳಿಗೆ ಪ್ರೀತಿಯಿಲ್ಲ.

ಮತ್ತು ಮನುಷ್ಯರು ಈ ಲೋಕದಲ್ಲಿ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಮಾಡಿ ಸ್ವರ್ಗಕ್ಕೆ ಹೋಗುತ್ತಾರೆ. ಇದರಿಂದಲೇ ಸ್ವರ್ಗಲೋಕವು ತುಂಬಿರುವದು. ಈ ರೀತಿ ಮನುಷ್ಯರು ತಮಗಿಂತಲೂ ಮೇಲೇರಿ ಬರುವದು ಅವರಿಗೆ ಇಷ್ಟವಿಲ್ಲ.

ಆದ್ದರಿಂದಲೇ ದೇವತೆಗಳು- "ಈ ಮನುಷ್ಯರು ನಮ್ಮ ಆಧೀನರಾಗಿಯೇ ಇರತಕ್ಕದ್ದು. ನಮ್ಮ ಕೈಯೊಳಗಿಂದ ಪಾರಾಗಬಾರದು." ಎಂದು ತಿಳಿದು ಬ್ರಹ್ಮ ಜ್ಞಾನಕ್ಕೂ, ತಪಕ್ಕೂ, ಕರ್ಮಕ್ಕೂ ವಿಘ್ನಗಳನ್ನು ಮಾಡುವರು. ಅಂದರೆ, ಯಾವುದರಲ್ಲಿ ಈತನು ಶ್ರದ್ಧೆಯಿಂದ ಕೂಡಿರುವನೋ ಅಲ್ಲಿ ಅಶ್ರದ್ಧೆಯನ್ನು ಉತ್ಪನ್ನಮಾಡುವರು.

ಆದ್ದರಿಂದ ಮುಮುಕ್ಷು ಪುರುಷನು ಶ್ರದ್ಧಾಭಕ್ತಿಯಿಂದ ಕೂಡಿ ಗುರುದೇವಾರಾಧನ ತತ್ಪರನಾಗಿ ಯಾವಾಗಲೂ ವಿನಯನಾಗಿರತಕ್ಕದ್ದು. ಅದರಿಂದ ವಿದ್ಯೆಯನ್ನು ಪಡಯುತ್ತಾನೆ. ಅಂದರೆ, ದೇವತೆಗಳು ಸಂತುಷ್ಟರಾಗಿ, ಇವನು ನಮಗೆ ವಿರೋಧಿಯಲ್ಲೆಂದು ತಿಳಿದು, ಅನುಗ್ರಹವನ್ನು ಮಾಡುತ್ತಾರೆಂಬ ಭಾವವು. ಆದ್ದರಿಂದ ಅವಿದ್ಯಾವಂತನು ಪಶು ಸಮಾನ ಆಗಿರುವನು. ಹೀಗೆ ಶ್ರುತಿಯು ಭೇದದರ್ಶಿಗೆ ನಿಂದೆಯನ್ನುಮಾಡಿರುವ

**೭ ಸಂ, ೩ ಸೂ, ೧೪ ಪ್ರ,"ಧ್ಯಾಯತೀವ ಲೇಲಾಯತೀವ" ಬೃ. ೪-೩-೭**

ಜನಕರಾಜನು ಯಾಜ್ಞವಲ್ಕ್ಯರನ್ನು ಕುರಿತು:- 'ದೇಹ, ಇಂದ್ರಿಯ, ಪ್ರಾಣ, ಮನಸ್ಸು ಇವುಗಳಲ್ಲಿ ಯಾವದು ಆತ್ಮವಾಗಿರುವದು?' ಎಂದು ಕೇಳಲು, ಇವು ಯಾವೂ ಆತ್ಮವಲ್ಲ. ಇವುಗಳಿಗೆ ವಿಲಕ್ಷಣನಾಗಿ ಸ್ವಯಂಪ್ರಕಾಶರೂಪನಿದ್ದಾನೆ. ಆದರೂ ಬುದ್ಧಿ ಉಪಾಧಿಯಿಂದ ಅದರಂತೆ ಆಗಿ ಇಹಲೋಕ ಪರಲೋಕಗಳನ್ನು ಕುರಿತು ಸಂಚರಿಸುತಾನೆ. ಬುದ್ಧಿ ಧ್ಯಾನಮಾಡಿದರೆ, ತಾನು ಧ್ಯಾನಮಾಡಿದವಂತೆ,

ಚಂಚಲವಾದರೆ, ತಾನೂ ಚಂಚಲವಾದಂತೆ ತೋರುವನು. ಬುದ್ಧಿ ಸ್ವಪ್ನಾವಸ್ಥೆಗೆ ಬಂದರೆ ಅವನು ಸ್ವಪ್ನದಲ್ಲಿದ್ದು, ಜಾಗ್ರಕ್ಕೆ ಬಂದು ಅನಂತರ ಅವಿದ್ಯಾ ಕಾಮ ಕರ್ಮಾದಿಗಳನ್ನು ದಾಟಿ, ಸುಪ್ತಿಯಲ್ಲಿ ಪುನಃ ಸ್ವಯಂಜ್ಯೋತಿರೂಪದಿಂದ ಇರುತ್ತಾನೆ. ಅವನೇ ನೀನು, ಎಂದು ಉಪದೇಶ ಮಾಡಿದನು. ಅಂದರೆ, ಸ್ವಯಂಜೋತಿರೂಪನಾದ ತನಗೆ ಬುದ್ಧಿ ಉಪಾಧಿ ಮೂಲಕ ಸಂಸಾರ ತೋರುವದು. ಯಥಾರ್ಥವಲ್ಲೆಂಬ ಅಭಿಪ್ರಾಯವನ್ನು ಈ ಶ್ರುತಿಯು ವಿಸ್ತಾರಪೂರ್ವಕ ಹೇಳುತ್ತದೆ.

**''ಕತಮ ಆತ್ಮೇತಿಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷ: ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ ಧ್ಯಾಯತೀವ ಲೇಲಾಯತೀವ ಸ ಹಿ ಸ್ವಪ್ನೋಭೂತ್ವೇಮಂಲೋಕಮತಿಕ್ರಾಮತಿ ಮೃತ್ಯೋರ್ರೂಪಾಣಿ''**

**ಟೀಕಾ:—** ಕತಮಃ = ಯಾವನು, ಆತ್ಮೇತಿ = ಆತ್ಮವಾಗಿರುವನೆಂದು, (ಕೇಳಲು) ಯಃ=ಅನ್ಯನಾದ ಯಾವನು, ಅಯಂ=ಈ ದೃಶ್ಯವಾದ, ವಿಜ್ಞಾನಮಯಃ=ಬುದ್ಧಿ ಉಪಾಧಿಯುಮಯನಾಗಿ, ಪ್ರಾಣೇಷು=ಇಂದ್ರಿಗಳಲ್ಲಿ, ಹೃದಿ=ಮನಸ್ಸಿನಲ್ಲಿ, ಅಂತರ್ಜ್ಯೋತಿಃ=ಒಳಗೆ ಸ್ವಯಂಪ್ರಕಾಶನಾದ, ಪುರುಷಃ=ಬ್ರಹ್ಮನು, ಸಃ=ಅವನು, ಸಮಾನಃಸನ್=ಉಪಾಧಿಯಾದ ಬುದ್ಧಿಯ ಸಮಾನವುಳ್ಳವನಾಗಿ, ಉಭೌ=ಎರಡು, ಲೋಕೌ=ಇಹಪರ ಲೋಕಗಳನ್ನು ಕುರಿತು, ಅನುಸಂಚರತಿ=ಅನುಸರಿಸಿ ತಿರುಗುತ್ತಿರುವನು, ಧ್ಯಾಯತೀವ=ಧ್ಯಾನಮಾಡುವನಂತೆ, ಲೇಲಾಯತೀವ=ಚಂಚಲವಾದವನಂತೆ, (ಆಗುತ್ತಾನೆ) ಸಃ=ಅವನು ಹಿ=ನಿಶ್ಚಯವಾಗಿ, ಸ್ವಪ್ನಃ = ಸ್ವಪ್ನಾವಸ್ಥೆಯುಳ್ಳವನು, ಭೂತ್ವಾ=ಆಗಿ, ಇಮಂ=ಈ, ಲೋಕಂ=ಜಾಗ್ರದವಸ್ಥೆಯನ್ನು, (ಹೊಂದಿ) ಮೃತ್ಯೋರ್ರೂಪಾಣಿ= (ಕಾರ್ಯಕಾರಣಾತ್ಮಕಗಳಾದ) ಅವಿದ್ಯಾ ಕಾಮಕರ್ಮಾದಿಗಳನ್ನು, ಅತಿಕ್ರಾಮತಿ=ದಾಟುತ್ತಾನೆ.

**ತಾತ್ಪರ್ಯ:—** ಜನಕ ಮಹಾರಾಜನು ಯಾಜ್ಞವಲ್ಕ್ಯ ಮಹರ್ಷಿಯವರನ್ನು ಕುರಿತು ''ಹೇ ಯಾಜ್ಞವಲ್ಕ್ಯರೇ! 'ಕಿಂಜ್ಯೋತಿಃ' ಈ ಪುರುಷನು ಯಾವ ಪ್ರಕಾಶದಿಂದ ವ್ಯವಹರಿಸುತ್ತಾನೆ'' ಎಂದು ಕೇಳಿದನು. ಅದಕ್ಕೆ ಯಾಜ್ಞವಲ್ಕ್ಯರು ''ಸೂರ್ಯಪ್ರಕಾಶದಿಂದ ಪುರುಷನು ಹೋಗೋಣ ಬರೋಣ ಮೊದಲಾದ ವ್ಯಾಪಾರವನ್ನು ಮಾಡುತ್ತಾನೆ'' ಎಂದು ಹೇಳಿದನು. ಆದಿತ್ಯನು ಅಸ್ತಂಗತನಾದರೆ ಚಂದ್ರಜ್ಯೋತಿಯಿಂದ ವ್ಯವಹರಿಸುವನು. ಚಂದ್ರನು ಅಸ್ತಂಗತನಾದರೆ, ಅಗ್ನಿಜ್ಯೋತಿಯಿಂದ ವ್ಯವಹರಿಸುವನು. ಅಗ್ನಿಯು ಶಾಂತವಾದರೆ ವಾಕ್ ಜ್ಯೋತಿಯಿಂದ ವ್ಯವಹರಿಸುವನು. ಜಾಗ್ರದಲ್ಲಿ ವಾಕ್‌ಜ್ಯೋತಿಯುಂಟು. ಸ್ವಪ್ನ ಸುಪ್ತಿಯಲ್ಲಿ

ಶಾಂತವಾಗುತ್ತದೆ. ಆಗ್ಯೆ ಆತ್ಮಜ್ಯೋತಿಯಿಂದಲೇ ವ್ಯವಹರಿಸುವನು. ಉಕ್ತ ಜ್ಯೋತಿಗಳೆಲ್ಲಾ ವ್ಯತಿರಿಕ್ತವಾಗಿ, ಯಾವ ಜ್ಯೋತಿಯಿರುವದೋ ಅದೇ ತಾನಿ ರುವನೆಂಬುದು. ಅರ್ಥಾತ್ ಸಿದ್ಧವಾಯಿತು. ಆದರೂ ಜ್ಯೋತಿ ಸಮಾನಗಳಾಗಿ ಕರಣಗಳು ಬೆಳಗುವದರಿಂದ, ಕರಣಗಳಲ್ಲಿ ಯಾವದಾದರೊಂದು ಆತ್ಮವಾಗಿರು ವದೋ ಅಥವಾ ಭಿನ್ನವಾಗಿರುವದೋ ಎಂಬ ಸಂಶಯವು ಅವಿವೇಕದಿಂದ ಪ್ರಾಪ್ತವಾಗುತ್ತದೆ. ಮತ್ತು ಆತ್ಮಜ್ಯೋತಿಯು ದುರ್ವಿಜ್ಞೇಯವಿರುವದರಿಂದ ಭ್ರಾಂತಿಯು ಉತ್ಪನ್ನವಾಗುವದು. ಅಥವಾ ಶರೀರಕ್ಕೆ ಆತ್ಮನು ಭಿನ್ನವಾಗಿದ್ದರೂ ಕರಣಗಳು ವಿಜ್ಞಾನವುಳ್ಳವುಗಳಂತೆ ತೋರುತ್ತವೆ. ಆದ್ದರಿಂದ ವಿವೇಕಮಾಡಿ ದರೂ ಯಾವದಾತ್ಮವಾಗಿರಬಹುದೆಂದು ನಿಶ್ಚಯಮಾಡಲಿಕ್ಕೆ ಬರುವದಿಲ್ಲ. ಆದ್ದ ರಿಂದ ದೇಹ, ಇಂದ್ರಿಯ, ಪ್ರಾಣ, ಮನಸ್ಸು ಇವುಗಳಲ್ಲಿ ಯಾವದಾತ್ಮಜ್ಯೋತಿ ಯಾಗಿರಬಹುದೆಂದು ಪ್ರಶ್ನೆಯು ಉತ್ಪನ್ನವಾಗುತ್ತದೆ.

ನೇತ್ರ ಶ್ರೋತ್ರ ಮೊದಲಾದ ಇಂದ್ರಿಯಗಳಾದರೂ ವಿಜ್ಞಾನಮಯಗಳಂತೆಯೇ ತೋರುತ್ತವೆ. ಆದ್ದರಿಂದ ಇವುಗಳಲ್ಲಿ ಯಾವದು ಆತ್ಮವಾಗಿರಬಹುದು ? ಅನೇಕ ಜನ ಬ್ರಾಹ್ಮಣರ ಸಮುದಾಯದಲ್ಲಿ ಎಲ್ಲರೂ ತೇಜಸ್ವಿಗಳೇ ಇರುವದರಿಂದ, ಇವರುಗಳಲ್ಲಿ ಯಾವಾತನು ಷಡಂಗ ಬಲ್ಲವನು ಎಂಬ ಪ್ರಶ್ನೆಯು ಹೇಗೆ ಉತ್ಪನ್ನ ವಾಗುವದೋ, ಹಾಗೇ ಇಂದ್ರಿಯಗಳೆಂಬ ಪ್ರಾಣಗಳಲ್ಲಿಯೂ, ತಪಸ್ವಿಗಳಲ್ಲಿಯೂ ಜ್ಯೋತಿರೂಪನಾದ ಪುರುಷನು ಯಾವನಿದ್ದಾನೆ? ಇಲ್ಲಿಯವರೆಗೆ ಪ್ರಶ್ನದ ವಾಕ್ಯವುಂಟು. ಅನಂತರ ಯಾವನು ಪ್ರತ್ಯಕ್ಷವಾಗಿ ವಿಜ್ಞಾನಪ್ರಾಯನಾಗಿ (ಬುದ್ಧಿಯುಕ್ತರೂಪನಾಗಿ) ರುವನೋ ಅವನೇ ಆತ್ಮನು, ಎಂಬುದನ್ನು ನಿಶ್ಚಯಪಡಿಸಿ ಮಂತ್ರದ ಅಂತ್ಯದವರೆಗೂ ಅವನ ವಿಶೇಷರೂಪದ ಬಗ್ಗೆ ಉತ್ತರನ್ನು ಹೇಳುತ್ತಿರು ತ್ತಾರೆ. ವಿಜ್ಞಾನವಂದರೆ ಬುದ್ಧಿಯು. ಆ ಬುದ್ಧಿಯ ಉಪಾಧಿ ಸಂಪರ್ಕ ಮೂಲಕ ಅವಿವೇಕದಿಂದ ವಿಜ್ಞಾನಮಯನಂತೆ ಕಾಣುತ್ತಾನೆ. ಸೂರ್ಯ ಚಂದ್ರರ ಸಂಬಂಧ ದಿಂದ ರಾಹು ತೋರಿದಂತೆ, ಬುದ್ಧಿಯ ಸಂಪರ್ಕದಿಂದಲೇ .ಆತ್ಮನು ಅಪರೋಕ್ಷ ವಾಗುತ್ತಾನೆ. ಬುದ್ಧಿಯು ಸಕಲ ಜ್ಞಾನಕ್ಕೂ ಸಾಧಾರಣಕರಣವಾಗಿರುತ್ತದೆ. ಕತ್ತಲೆ ನಿವಾರಣಕ್ಕೆ ದೀಪ ಸಹಾಯವಾದಂತೆ ದೃಶ್ಯವಾಗಿರುತ್ತದೆ. ಆದ್ದರಿಂದಲೇ ಶ್ರುತಿಯಾದರೂ ಮನಸ್ಸಿನಿಂದಲೇ ನೋಡುತ್ತಾನೆ, ಮನಸ್ಸಿನಿಂದಲೇ ಕೇಳು ತ್ತಾನೆ, ಎಂಬದಾಗಿ ಹೇಳುತ್ತದೆ. ಆದ್ದರಿಂದ ಮುಂದಿದ್ದ ಪ್ರದೀಪದ ಪ್ರಕಾಶ ದಿಂದೊಡಗೂಡಿದ ವಿಷಯಗಳು ಪ್ರತ್ಯಕ್ಷವಾದಂತೆ ಬುದ್ಧಿಪ್ರಕಾಶದಿಂದೊಡಗೂಡಿದ ಸರ್ವ ವಿಷಯ ಸಮೂಹಗಳು ಅಪರೋಕ್ಷವಾಗುತ್ತವೆ. ಶ್ರೋತ್ರ, ನೇತ್ರ ಮೊದ ಲಾದ ಇಂದ್ರಿಯಗಳು ಬುದ್ಧಿಗೆ ಸಾಧನಗಳಾದ ದ್ವಾರಗಳಾಗಿರುತ್ತವೆ. ಅಂದರೆ ಬುದ್ಧಿಯೇ ಆಯಾಯ ಇಂದ್ರಿಯಗಳ ದ್ವಾರಾ ವಿಷಯಾದಿಗಳನ್ನು ಗ್ರಹಿಸುತ್ತ

ಡೆಂಬ ಭಾವವು. ಆದ್ದರಿಂದ ಅದೇ ಇಲ್ಲಿ ವಿಜ್ಞಾನಮಯ ಶಬ್ದದಿಂದ ವಿಶೇಷವಾಗಿ ಹೇಳಿರುತ್ತಾರೆ.

ವಿಜ್ಞಾನಮಯ ಶಬ್ದಕ್ಕೆ ಭರ್ತೃಪ್ರಪಂಚ ಮತದವರು 'ವಿಜ್ಞಾನವೆಂದರೆ ಪರಬ್ರಹ್ಮವೆಂತಲೂ ವಿಜ್ಞಾನಮಯನು ಅಂದರೆ ಜೀವನೆಂತಲೂ ಅರ್ಥಮಾಡು ತ್ತಾರೆ. ಮತ್ತು ಮಯಟ್ ಎಂಬ ಈ ಪ್ರತ್ಯಯಕ್ಕೆ ಬೇರೊಂದು ಗ್ರಂಥದಲ್ಲಿ ವಿಕಾರ ಅರ್ಥವಾಗುವದಿಲ್ಲೆಂದು ಹೇಳಿ ಇಲ್ಲಿ ವಿಕಾರ ಅರ್ಥವನ್ನು ಅಂಗೀಕರಿಸಿ ರುವರು., ಆದ್ದರಿಂದ ಇವರ ವಾಕ್ಯಾರ್ಥವು ಪರಸ್ಪರವಿರೋಧವಾಗಿರುವದು. ಅದರಿಂದ ಈ ಪ್ರಕಾರ ಅರ್ಥವನ್ನು ಪರಿಗ್ರಹಿಸದೆ ವಾಕ್ಯತಾತ್ಪರ್ಯಬಲದಿಂದಲೂ ನ್ಯಾಯಬಲದಿಂದಲೂ, ಉತ್ತರಮಂತ್ರದ 'ಸಧೀ,ಯೆಂಬ ಶಬ್ದದಿಂದಲೂ ಬುದ್ಧಿಗೆ ಸಾಕ್ಷಿಯಾದ ಆತ್ಮನು ಬುದ್ಧಿಯ ರೂಪವಾಗಿ ತೋರುತ್ತಿರುವದರಿಂದಲೇ ವಿಜ್ಞಾನ ಮಯನೆಂದು ಅರ್ಥಮಾಡುವದು ಯೋಗ್ಯವಾಗಿರುತ್ತದೆ.

ನೇತ್ರಾದಿ ಇಂದ್ರಿಯಗಳಲ್ಲಿ ಹೃದಯದಲ್ಲಿ ವಿಜ್ಞಾನಮಯನು ಇದ್ದಾನೆ. ಎಂಬ ವಾಕ್ಯದಲ್ಲಿ ಸಪ್ತಮೀ ವಿಭಕ್ತಿಯಿರುವದರಿಂದ ಇಂದ್ರಿಯಗಳು ಆಧಾರ ವಾಗಿವೆಯೆಂದು ಅರ್ಥಮಾಡಕೂಡದು. ಸಪ್ತಮೀ ವಿಭಕ್ತಿಯು ಸಮೀಪ ಅರ್ಥ ವನ್ನು ಕೂಡಾ ಕೊಡುತ್ತದೆ. ಹೇಗಂದರೆ ಪಾಷಾಣಗಳಲ್ಲಿ ವೃಕ್ಷಗಳಿರುತ್ತವೆ ಎಂದು ಹೇಳಿದರೆ, ಕಲ್ಲುಗಳ ಸಮೀಪದಲ್ಲಿ ಗಿಡಗಳುಂಟೆಂಬ ಅರ್ಥವು ಹೇಗೋ, ಹಾಗೇ ಪ್ರಾಣಗಳಲ್ಲಿ ಆತ್ಮನಿದ್ದಾನೆಂದು ಹೇಳಿದರೆ, ಪ್ರಾಣನಾಮಕ ಇಂದ್ರಿಯಗಳ ವ್ಯತಿ ರಿಕ್ತ ಅವುಗಳ ಸಮೀಪದಲ್ಲಿಯೇ ಆತ್ಮನಿದ್ದಾನೆಂದು ಅರ್ಥಮಾಡಬೇಕಾಗುವದು.

'ಹೃದ್ಯಂತ ಜ್ಯೋತಿಃ, ಹೃದಯವು ಅಂದರೆ ಬಿಳೇ ಕಮಲದ ಆಕಾರವಾದ ಮಾಂಸದ ಪಿಂಡವು. ಅದರಲ್ಲಿ ಬುದ್ಧಿಯಿರುವದು. ಅದಕ್ಕೆ ಹೃದಯವೆಂದು ಕರೆ ಯುತ್ತಾರೆ. ಇಂಥಾ ಹೃದಯದಲ್ಲಿ ಆತ್ಮನಿದ್ದಾನೆಂದು ಹೇಳಿದರೂ, ಆ ಬುದ್ಧಿಗೆ ಬೇರೆ ಸಾಕ್ಷಿಯಾಗಿ ಸಮೀಪದಲ್ಲಿರುವನೆಂದೇ ಅರ್ಥ ಮಾಡಬೇಕು. ಬುದ್ಧಿಗೆ ಬೇರೆ ಯಾದ ಆತ್ಮನು ಸ್ವಯಂಜ್ಯೋತಿರೂಪನಾಗಿರುತ್ತಾನೆ. ಆವನ ಪ್ರಕಾಶದಿಂದೊಡ ಗೂಡಿದ ಈ ಶರೀರವು ತಾನೂ ಚೇತನವೇನೋ ಎಂಬಂತೆ ಕರ್ಮವನ್ನು ಮಾಡುತ್ತದೆ.

ಸೂರ್ಯನ ಪ್ರಕಾಶದಲ್ಲಿದ್ದ ಘಟವು ತಾನು ಹೇಗೆ ಪ್ರಕಾಶಮಯವಾಗಿ ತೋರುತ್ತದೆಯೋ; ಅಥವಾ ಮರಕತಾದಿಮಣಿಯು ಪರೀಕ್ಷಾರ್ಥಕ್ಕಾಗಿ ಹಾಲಾದಿ ಗಳಲ್ಲಿರಿಸಲು; ಆ ಕ್ಷೀರಾದಿ ದ್ರವ್ಯವನ್ನು ತಮ್ಮ ವರ್ಣವುಳ್ಳವುಗಳನ್ನಾಗಿಯೇ ಹೇಗೆ ಮಾಡುತ್ತವೆಯೋ; ಹಾಗೇ, ಈ ಆತ್ಮಜ್ಯೋತಿಯಾದರೂ ಅತ್ಯಂತ ಸೂಕ್ಷ್ಮವಾಗಿ ರುವದರಿಂದ, ಹೃದಯಾದಿ ಕಾರ್ಯಕರಣ ಸಂಘಾತರೂಪವನ್ನೆಲ್ಲಾ ಆತ್ಮಜ್ಯೋತಿ ರೂಪವನ್ನಾಗಿಯೇ ಮಾಡುತ್ತದೆ. ಬುದ್ಧಿಯು ಎಲ್ಲಕ್ಕೂ ಸ್ವಚ್ಛವಾಗಿರುವದ

ರಿಂದಲೂ ಅಂತರವಿದ್ದದರಿಂದಲೂ, ಆತ್ಮನಿಗೆ ಅತಿ ಸಮೀಪದಲ್ಲಿರುವದರಿಂದಲೂ, ಆತ್ಮಜ್ಯೋತಿ ಛಾಯೆಯನ್ನು ಹೊಂದಿ, ಆತ್ಮನಂತೇ ತೋರುತ್ತದೆ. ರಾಜನ ಸನ್ನಿಧಿಯಲ್ಲಿರುವ ಮಂತ್ರಿಯಂತೆ; ಆದ್ದರಿಂದ ವಿವೇಕಿಗಳಿಗಾದರೂ ಈ ಬುದ್ಧಿಯಲ್ಲಿಯೇ ನಾನೆಂಬ ಅಭಿಮಾನವು ತೋರುತ್ತದೆ. ಆ ಬುದ್ಧಿಯ ಸಂಪರ್ಕದಿಂದ ಮನಸ್ಸು ಚೇತನದಂತೆ ತೋರುತ್ತದೆ. ಮನಃ ಸಂಯೋಗದಿಂದ ಇಂದ್ರಿಯಗಳು ಇಂದ್ರಿಯ ಸಂಬಂಧದಿಂದ ಶರೀರ, ಈ ರೀತಿ ಪರಂಪರವಾಗಿ ಕಾರ್ಯಕರಣ ಸಂಘಾತರೂಪ ಶರೀರವು, ಚೈತನ್ಯರೂಪ ಜ್ಯೋತಿಯಿಂದ ಯುಕ್ತವಾಗಿರುವದು. ಆದ್ದರಿಂದ ಶರೀರದಲ್ಲಿಯೂ ನಾನೆಂಬ ಅಭಿಮಾನವು ತೋರುವದು. ಇದೇ ಅರ್ಥವನ್ನು ಭಗವಂತನು ಗೀತೆಯಲ್ಲಿ ಹೇಳಿರುತ್ತಾನೆ. "ಒಬ್ಬ ಸೂರ್ಯನೇ ಈ ಎಲ್ಲ ಜಗತ್ತನ್ನು ಹೇಗೆ ಪ್ರಕಾಶಿಸುತ್ತಾನೋ, ಹಾಗೇ ಈ ಎಲ್ಲ ಶರೀರಗಳನ್ನು ಒಬ್ಬಾತ್ಮನೇ ಬೆಳಗುತ್ತಾನೆ" 'ಸೂರ್ಯನನ್ನು ಹೊಂದಿದ ಪ್ರಕಾಶವೇ ಜಗತ್ತನ್ನು ಬೆಳಗುತ್ತದೆ' 'ಯಾವನು ನಿತ್ಯಗಳಿಗೆ ನಿತ್ಯನಾಗಿಯೂ' 'ದೇಹೇಂದ್ರಿಯಾದಿ ಚೇತನಗಳಿಗೆ ಚೇತನನಾಗಿಯೂ ಎಂದು, ಹೇಳಿದೆ.' 'ಪ್ರಕಾಶರೂಪ ಆತ್ಮನ ಪ್ರಕಾಶದಿಂದಲೇ ಸೂರ್ಯ, ಚಂದ್ರ, ಅಗ್ನಿ ಮೊದಲಾದವುಗಳು ಪ್ರಕಾಶವಂತವಾಗಿವೆ. ಅದರ ಪ್ರಕಾಶದಿಂದಲೇ ಈ ಜಗತ್ತು ತೋರುತ್ತದೆ.' 'ಯಾವಾತನಿಂದಲೇ ಸೂರ್ಯನು ಪ್ರಕಾಶಮಾನನಾಗಿದ್ದಾನೆ.' ಎಂದು ಶ್ರುತಿ ಸ್ಮೃತಿಗಳು ಹೇಳುತ್ತವೆ. ಅಂಥಾ ಪ್ರಕಾಶಾತ್ಮನೇ ಈ ಹೃದಯದಲ್ಲಿರುವ ಆತ್ಮಜ್ಯೋತಿ ಪುರುಷನಿದ್ದಾನೆ. ಈ ಜ್ಯೋತಿಯು ಆಕಾಶದಂತೆ ಪೂರ್ಣವಾಗಿರುವದರಿಂದ ಪುರುಷ ಎಂದು ಹೇಳಿಸಿಕೊಳ್ಳಲ್ಪಡುತ್ತದೆ. ಸರ್ವವನ್ನು ಪ್ರಕಾಶಿಸಿ ತಾನು ಮಾತ್ರ ಅನ್ಯರಿಂದ ಬೆಳಗಿಸಿಕೊಳ್ಳದ್ದರಿಂದ; ನಿರತಿಶಯವಾದ ಸ್ವಯಂಜ್ಯೋತಿ ಪುರುಷನಾಗಿರುವನು. ನೀನು ಆತ್ಮನು ಯಾವನೆಂದು ಏನು ಕೇಳಿದ್ದಿಯೋ, **ಈ ಸ್ವಯಂಜ್ಯೋತಿಯೇ ಆತ್ಮನೆಂದು ತಿಳಿ.** ಬಾಹ್ಯೇಂದ್ರಿಯಂಗಳ ಜ್ಯೋತಿಯು ಅಡಗಿದಾಗ್ಯಾದರೂ ಅಂತಃಕರಣ ದ್ವಾರದಿಂದ ಹೃದ್ಯಂತ ಜ್ಯೋತಿರೂಪಾತ್ಮನೇ, ಎಲ್ಲ ಕರಣಗಳಿಗೂ ಅನುಗ್ರಹವನ್ನು ಮಾಡುತ್ತಾನೆಂದು ಹೇಳಲ್ಪಟ್ಟಿತು. ಬಾಹ್ಯ ನೇತ್ರಾದಿ ಕರಣಗಳಿಗೆ ಅನುಗ್ರಹವನ್ನು ಮಾಡುವಂಥಾ, ಸೂರ್ಯಾದಿಗಳ ಪ್ರಕಾಶವು, ಹೊರಗಿನ ಘಟಪಟಾದಿಗಳನ್ನರಿಯುವದಕ್ಕೆ ಸಹಾಯವೇನೋ ಆಗಬಹುದು. ಆದರೆ ಈ ಶರೀರವೇ ಅಚೈತನ್ಯವಾಗಿದ್ದರೆ ಸೂರ್ಯಾದಿಗಳ ಪ್ರಕಾಶವೇನು ಮಾಡುವದು. ಅಂದರೆ ಆತ್ಮಜ್ಯೋತಿಯು ಶರೀರಕ್ಕೆ ಅನುಗ್ರಹವನ್ನು ಮಾಡದಿದ್ದರೆ, ಶರೀರವು ಯಾವದೊಂದು ವ್ಯವಹಾರವನ್ನು ಮಾಡುವದಕ್ಕೂ ಸಮರ್ಥವಾಗಲಾರದು. ಆತ್ಮಜ್ಯೋತಿಯ ಅನುಗ್ರಹದಿಂದಲೇ ಸರ್ವದಾ ಸರ್ವ ವ್ಯವಹಾರವು ಸಂಭವಿಸಿರುತ್ತದೆ. "ಆತ್ಮಚೈತನ್ಯದಿಂದ ಮನಸ್ಸು ಧಾರಣಮಾಡಲ್ಪಡುವದು. ಅದರಿಂದಲೇ ಜ್ಞಾನಯುಕ್ತವಾಗಿರುವದು" ಎಂಬ ಶ್ರುತಿಯುಂಟು. ಅಭಿಮಾನಪೂರ್ವಕವೇ ಸಕಲ

ಪ್ರಾಣಿಗಳ ವ್ಯವಹಾರವಿರುವದು. ಅಭಿಮಾನ ಕಾರಣವನ್ನು ಮರಕತಮಣಿಯ ದೃಷ್ಟಾಂತದಿಂದ ಹೇಳಿದ್ದೇವೆ.

ಹೀಗಿದ್ದಾಗ್ಯಾದರೂ ಆತ್ಮಜ್ಯೋತಿಯು ಸಕಲ ಕರಣಗಳಿಗೆ ಅಗೋಚರವಾಗಿರುವದು. ಮತ್ತು ಜಾಗ್ರದವಸ್ಥೆಯಲ್ಲಿ ಶರೀರದ ಒಳಹೊರಗಿನ ಕರಣಗಳ ವ್ಯಾಪಾರವು ಕೂಡಿರುವದರಿಂದ, ಮುಂಜಿನಾಮಕ ಹುಲ್ಲಿನೊಳಗಿಂದ ಕಡ್ಡಿಯನ್ನು ಕಿತ್ತುತೆಗೆದಂತೆ, ಆತ್ಮಜ್ಯೋತಿಯನ್ನು ಪೃಥಃಕ್ಕರಿಸಿ ತೋರಿಸಲಿಕ್ಕೆ ಬರುವದಿಲ್ಲ. ಆದ್ದರಿಂದ ಸ್ವಪ್ನದಲ್ಲಿ ಬಾಹ್ಯಕರಣಗಳ ಜ್ಯೋತಿಯು ಅಡಗಿರುವದು. ಆತ್ಮಜ್ಯೋತಿಯು ಈ ಸ್ವಪ್ನಾವಸ್ಥೆಯಲ್ಲಿ ಸ್ಪಷ್ಟ ಅನುಭವಕ್ಕೆ ತಂದುಕೊಡಲಿಕ್ಕೆ ಬರುತ್ತದೆಂದು ಹೀಗೆ ಹೇಳುತ್ತಾನೆ. ಹೇಗಂದರೆ ಆ ಸ್ವಯಂಜ್ಯೋತಿ ರೂಪನಾದ ಆತ್ಮನು ಅತ್ಯಂತ ಸಮೀಪದಲ್ಲಿರುವ ಬುದ್ಧಿಯ ಸಮಾನ ಆಗುತ್ತಾನೆ. ಅಂದರೆ ಅದರ ರೂಪಾಗಿಯೇ ತೋರುವನು. ವಿವೇಕಮಾಡಿದರೂ ಅಶ್ವ ಮಹಿಷಾದಿಗಳು ಬೇರೆ ಬೇರೆಯಾಗಿ ತೋರುವಂತೆ ತೋರುವದಿಲ್ಲ. ಈ ಬುದ್ಧಿಯು ಪ್ರಕಾಶಮಾಡಿಸಿಕೊಳ್ಳುವಂಥಾದ್ದು. ಆತ್ಮನು ಪ್ರಕಾಶ ಮಾಡುವಂಥವನು ಎಂದು ಭೇದವಾಗಿ ಹೊಳೆಯುವದಿಲ್ಲ. ಅವಭಾಸ್ಯ ಅವಭಾಸಕಗಳು ವಿವೇಕಮಾಡಿದರೂ ಭಿನ್ನವಾಗಿ ತೋರುವದಿಲ್ಲೆಂಬುದು ಲೋಕದಲ್ಲಿ ಪ್ರಸಿದ್ಧವಾಗಿರುವದು. ಹೇಗಂದರೆ– ಅತ್ಯಂತ ಪರಿಶುದ್ಧವಾದ ಪ್ರಕಾಶವು ಪ್ರಕಾಶಮಾಡಿಸಿಕೊಳ್ಳುವದರ ಸದೃಶವೇ ಆಗುತ್ತದೆ. ಸೂರ್ಯ ಪ್ರಕಾಶವು ರಕ್ತವನ್ನು ಬೆಳಗುವಂಥಾದ್ದಾಗಿ ರಕ್ತ ಸದೃಶ್ಯವೇ ರಕ್ತಾಕಾರವೇ ಆಗುತ್ತದೆ. ಅದರಂತೆ ಹಸರು, ಕಪ್ಪು, ಕೆಂಪು ಮೊದಲಾದ ಬಣ್ಣಗಳನ್ನು ಬೆಳಗುತ್ತಾ, ಅವುಗಳ ಸಮಾನವೇ ಆಗುತ್ತದೆ. ಹಾಗೇ ಈ ಸ್ವಯಂಜ್ಯೋತಿ ಪುರುಷನು ಬುದ್ಧಿಯನ್ನು ಬೆಳಗುತ್ತಾ ಬುದ್ಧಿಯ ದ್ವಾರಾ ದೇಹಾದಿ ಸಂಘಾತವನ್ನು ಮರಕತಮಣಿಯ ದೃಷ್ಟಾಂತದಂತೆ ಬೆಳಗುತ್ತಾ, ಸರ್ವಮಯನಾಗಿರುತ್ತಾನೆ. ಆದ್ದರಿಂದಲೇ ಎಲ್ಲಿಯಾದರೂ ಮುಂಜಿನಾಮಕ: ಹುಲ್ಲಿನ ಕಡ್ಡಿಯಂತೆ, ಪೃಥಕ್ಕರಿಸಿ ಜ್ಯೋತಿರೂಪದಿಂದ ತೋರಿಸಲಿಕ್ಕೆ ಬರುವದಿಲ್ಲ. ಆದರಿಂದ ನಾಮರೂಪಗತವಾದ ಜ್ಯೋತಿ ಧರ್ಮವನ್ನು ನಾಮರೂಪಗಳಲ್ಲಿ, ನಾಮರೂಪಗಳನ್ನು ಆತ್ಮಜ್ಯೋತಿಯಲ್ಲಿ, ಅಧ್ಯಾರೋಪಮಾಡಿ ಸರ್ವ ಜಗತ್ತು ಮೋಹಯುಕ್ತವಾಗಿರುತ್ತದೆ. ಈತನಾತ್ಮನೆಂದೊಬ್ಬನು, ಈತನಲ್ಲೆಂದೊಬ್ಬನು, ಈ ಧರ್ಮಗಳಿಂದ ಕೂಡಿದವನೆಂದೂ, ಕೂಡದವನೆಂದೂ, ಕರ್ತನೆಂದೂ, ಅಕರ್ತನೆಂದೂ, ಶುದ್ಧನೆಂದೂ, ಅಶುದ್ಧನೆಂದೂ, ಬದ್ಧನೆಂದೂ, ಮುಕ್ತನೆಂದೂ, ಸ್ಥಿತನೆಂದೂ, ಹೋಗುವನೆಂದೂ, ಹೋಗದವನೆಂದೂ, ಇದ್ದವನೆಂದೂ, ಇಲ್ಲದವನೆಂದೂ ಅನೇಕ ವಿಕಲ್ಪಗಳಿಂದ ಮೋಹಯುಕ್ತರಾಗಿರುವರು. ಆದ್ದರಿಂದ ಆತ್ಮನು ಬುದ್ಧಿಯ ರೂಪಾಗಿ, ಇಹಲೋಕ ಮತ್ತು ಪರಲೋಕ ಇವುಗಳಲ್ಲಿ ತ್ಯಾಗಮಾಡಬೇಕಾದ ಶರೀರೇಂದ್ರಿಯ

ಸಂಘಾತವನ್ನು ಬಿಡುತ್ತಾ, ಪಡೆಯಬೇಕಾದ ನೂರಾರು ಶರೀರಗಳನ್ನು ಧರಿಸುತ್ತಾ, ಕ್ರಮವಾಗಿ ಸಂಚರಿಸುತ್ತಿರುತ್ತಾನೆ. ಅಂದರೆ ಬುದ್ಧಿಯ ಸಾದೃಶ್ಯವಾಗಿಯೇ ಇಹಪರ ಎರಡು ಲೋಕಗಳಲ್ಲಿ ಸಂಚರಿಸುತ್ತಾನೆ ಹೊರ್ತು ಸ್ವತಃ ಇಲ್ಲೆಂಬ ಭಾವವು. ಭ್ರಾಂತಿ ನಿಮಿತ್ತ ನಾಮರೂಪ ಉಪಾಧಿ ಸಾದೃಶ್ಯವಾಗುವದೇ ಹೊರ್ತು ಸ್ವತಃ ಅಲ್ಲ. ಆತ್ಮನು ಬುದ್ಧಿಯರೂಪಾಗಿ ಇಹಪರ ಲೋಕಗಳಲ್ಲಿ ಸಂಚರಿಸುತ್ತಾನೆಂದು ಏನು ಪರೋಕ್ಷವಾಗಿ ಹೇಳಲ್ಪಟ್ಟಿತೋ, ಅದನ್ನು ಅಪರೋಕ್ಷವಾಗಿ ಈಗ ತಿಳಿಸುತ್ತಾರೆ. ಹೇಗಂದರೆ--'ಸೂರ್ಯನ ಪ್ರಕಾಶವು ಕಪ್ಪು, ಕೆಂಪು, ಹಸರು ಮಣಿಗಳನ್ನು ಬೆಳಗುತ್ತಾ ತಾನೂ ಅವುಗಳ ರೂಪಾಗಿಯೇ ತೋರಿದಂತೆ, ಈ ಜ್ಯೋತಿರೂಪಾತ್ಮನು ಬುದ್ಧಿಯಲ್ಲಿದ್ದು ಬುದ್ಧಿಗೆ ಸಾಕ್ಷಿಯಾಗಿ ಬೆಳಗುವಂಥವನಾಗಿಯೂ, ಆ ಬುದ್ಧಿಯು ಧ್ಯಾನವನ್ನು ಮಾಡಿದರೆ ತಾನೂ ಧ್ಯಾನಮಾಡಿದಂತೆ ಚಿಂತೆಯನ್ನು ಮಾಡಿದರೆ ತಾನೂ ಚಿಂತೆಯನ್ನು ಮಾಡುವಂತೆ ಕಂಡುಬರುವನು. ಇದೇ ಲೋಕಕ್ಕೆ ಭ್ರಾಂತಿಯಾಗಿರುವದು. ಸತ್ಯವಾಗಿ ಅವನು ಧ್ಯಾನಮಾಡುವದಿಲ್ಲ. ಹಾಗೇ ಬುದ್ಧಿಯು ಚಂಚಲವಾದರೆ, ತಾನೂ ಚಂಚಲವಾದಂತೆ ತೋರುವನು. ಅಂದರೆ ಪ್ರಾಣವಾಯು ವಶಾತ್ ಬುದ್ಧ್ಯಾದಿ ಕರಣಗಳು ಚಂಚಲವಾದರೆ, ಅವುಗಳನ್ನು ಪ್ರಕಾಶಮಾಡುವದರಿಂದ ತಾನೂ ಅವುಗಳ ಸದೃಶನಾಗಿ ಚಂಚಲನಾದಂತೆ ತೋರುವದು. ಪಾರಮಾರ್ಥಿಕದಿಂದ ನೋಡಿದರೆ ಆ ಸ್ವಯಂ ಜ್ಯೋತಿಯಲ್ಲಿ ಚಲನಧರ್ಮವಿಲ್ಲ.

ಆತ್ಮನು ಬುದ್ಧಿರೂಪಾಗಿಯೇ ಉಭಯಲೋಕಗಳಲ್ಲಿಯೂ ಮತ್ತೂ ಹೇಗೆ ಸಂಚರಿಸುತ್ತಾನೆ. ಅಂದರೆ; ಕೇಳು. ಆ ಬುದ್ಧಿಯು ಯಾವಾಗ್ಯೆ ಸ್ವಪ್ನಾವಸ್ಥೆಯನ್ನು ಹೊಂದುವದೋ ಆಗ್ಯೆ ಇವನೂ ಸ್ವಪ್ನಕ್ಕೆ ಬರುವನು. ಸ್ವಪ್ನಾವಸ್ಥೆಯಲ್ಲಿ ವೃತ್ತಿಗಳನ್ನೆಲ್ಲಾ ಪ್ರಕಾಶಮಾಡುವನು. ಬಳಿಕ ಬುದ್ಧಿಯು ಸ್ವಪ್ನಾವಸ್ಥೆಯನ್ನು ಬಿಟ್ಟು ಶರೀರಕ್ಕೆ ಬಂದು, ಲೌಕಿಕ ಶಾಸ್ತ್ರೀಯ ವ್ಯವಹಾರರೂಪ ಜಾಗ್ರತ್ ಅವಸ್ಥೆಗೆ ಬಂದರೆ, ತಾನೂ ಬರುವನು. ವ್ಯವಹರಿಸಿದಂತೆ ತೋರುವನು. ಆದಾಗ್ಯಾದರೂ ಬುದ್ಧಿಗೆ ಭಿನ್ನವಾಗಿ ಸ್ವಯಂ ಜ್ಯೋತಿರೂಪದಿಂದ ಕರ್ತೃಕ್ರಿಯಾ ಕಾರಕಾದಿ ಶೂನ್ಯನಾಗಿ ಇರುತ್ತಾನೆ. ಲೋಕಾದಿಗಳ ಸಂಚಾರವು ಭ್ರಾಂತಿರೂಪಾಗಿದೆ. ಆದ್ದರಿಂದ ಅವಿದ್ಯಾ ಕಾಮ ಕರ್ಮರೂಪ ಮೃತ್ಯುರೂಪಗಳನ್ನು ದಾಟಿರುತ್ತಾನೆ. ಅಂದರೆ; ಈ ಸ್ವಯಂಜ್ಯೋತಿಸ್ವರೂಪವೇ ಯಥಾರ್ಥ ಬೇರೆ ಯಾವದೂ ಇವನ ಸ್ವರೂಪವಲ್ಲೆಂಬ ತಾತ್ಪರ್ಯವು.

**ಶಂಕಾ:-** ಬುದ್ಧಿಯ ರೂಪಾಗಿ ಬುದ್ಧಿಗೆ ಬೇರೆಯಾಗಿ ಬುದ್ಧಿಯನ್ನು ಪ್ರಕಾಶ ಮಾಡುವಂಥಾ ಆತ್ಮ ಜ್ಯೋತಿಯು ಇಲ್ಲ. ಯಾಕಂದರೆ, ಬುದ್ಧಿಯ ವ್ಯತಿರಿಕ್ತ ಪ್ರತ್ಯಕ್ಷ ದಿಂದಾಗಲಿ ಅನುಮಾನದಿಂದಾಗಲಿ ನಾವು ಕಾಣುವದೇ ಇಲ್ಲ.

ಹೇಗಂದರೆ, ಒಂದು ಬುದ್ಧಿಯಿರುವಾಗ ಮತ್ತೊಂದು ಬುದ್ಧಿಯು ಹೇಗೆ ತೋರುವದಿಲ್ಲವೋ ಹಾಗೇ ಘಟ ಮತ್ತು ಸೂರ್ಯ ಪ್ರಕಾಶ ಇವೆರಡು ಅವಭಾಸ್ಯ ಅವಭಾಸಕತ್ವದಿಂದ ಭಿನ್ನಗಳಾಗಿದ್ದರು, ವಿವೇಕ ಮಾಡಿದರೆ ಭೇದವಾಗಿ ತೋರುವದಿಲ್ಲ. ಆದ್ದರಿಂದ ಸಾದೃಶ್ಯವಾಗಿವೆಯೆಂದು ಹೇಳೋಣವಾಯಿತು. ಪ್ರಕಾಶ ಮತ್ತು ಘಟ ಇವೆರಡು ಭಿನ್ನಗಳಾಗಿದ್ದು ಸಂಬಂಧಗಳಾದ್ದರಿಂದ ಸಾದೃಶ್ಯವಾಗಲಿ. ಆದರಂತೆ ಘಟಾದಿಗಳಂತೆ ಬುದ್ಧಿಯನ್ನು ಬೆಳಗುವ ಜ್ಯೋತಿಯನ್ನು ನಾವು ಪ್ರತ್ಯಕ್ಷ ಅನುಮಾನಗಳಿಂದ ಕಾಣುವದಿಲ್ಲ. ಜ್ಞಾನರೂಪದಿಂದ ಬೆಳಗುವದಾಗಿಯೂ ವಿಷಯರೂಪದಿಂದ ಬೆಳಗಿಸಿಕೊಳ್ಳುವದಾಗಿಯೂ ಬುದ್ಧಿಯೇ ಆಗಿರುವದು. ಆದ್ದರಿಂದ ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ ಬುದ್ಧಿಯನ್ನು ಬೆಳಗುವಂಥಾ, ಬುದ್ಧಿಗೆ ಬೇರಾಗಿರುವ ಜ್ಯೋತಿಯನ್ನು ಪ್ರತಿಪಾದಿಸುವದಕ್ಕೆ ಶಕ್ಯವಾಗುವದಿಲ್ಲ. (ಹೀಗೆಂದು **ಸೌತ್ರಾಂತಿಕ ವೈಭಾಷಿಕರ** ಅಭಿಪ್ರಾಯವನ್ನು ತಿಳಿಸಿದರು.)

ಯದ್ಯಪಿ ಭಿನ್ನಗಳಾಗಿರುವ ಅವಭಾಸ್ಯ ಅವಭಾಸಕಗಳಾದ ಘಟ ಮತ್ತು ಪ್ರಕಾಶ ಇವುಗಳು ಸಂಯುಕ್ತವಾಗುತ್ತಿರಲಿಕ್ಕೆ, ಸಾದೃಶ್ಯವು ಆಗುತ್ತದೆಂದು ನಿಮ್ಮಿಂದ ಏನು ದೃಷ್ಟಾಂತ ಕೊಡಲ್ಪಟ್ಟಿತೋ, ಅದನ್ನು ನಾವು ಅಂಗೀಕಾರ ಮಾತ್ರ ಮಾಡಿರುವೆವು. ಆದರೆ; ಅವಭಾಸ್ಯ ಅವಭಾಸಕ ಎರಡು ಪದಾರ್ಥಗಳು ಉಂಟೆಂದು ನಾವು ಒಪ್ಪುವದಿಲ್ಲ. ಯಥಾರ್ಥ ವಿಚಾರ ಮಾಡಿದರೆ, ತನ್ನನ್ನು ತಾನು ಘಟವೇ ಪ್ರಕಾಶ ಮಾಡುತ್ತದೆ ಬೇರೆಯಿಲ್ಲ. ಘಟ ಮತ್ತು ಪ್ರಕಾಶ ಇವೆಲ್ಲಾ ವಿಜ್ಞಾನ ಮಾತ್ರಗಳಾಗಿರುತ್ತವೆ. ಸರ್ವವೂ ವಿಜ್ಞಾನ ಮಾತ್ರವಾಗಿರುವದರಿಂದ ಬಾಹ್ಯದಲ್ಲಿ ಬೇರೆ ದೃಷ್ಟಾಂತವಿಲ್ಲ. ಈ ರೀತಿ ವಿಜ್ಞಾನವು ಗ್ರಹಿಸಲಿಕ್ಕೆ ಯೋಗ್ಯವಾದ ಘಟಾದಿ ಗ್ರಾಹ್ಯಾಕಾರವೂ, ಅದನ್ನು ತಿಳಿಯತಕ್ಕ ಗ್ರಾಹಕಾಕಾರವೂ ಆದರೆ ವಿಜ್ಞಾನವು ಅಶುದ್ಧವೆಂದು, ಈ ಗ್ರಾಹ್ಯಗ್ರಾಹಕ ರೂಪನ್ನು ತ್ಯಾಗ ಮಾಡಿದರೆ ಶುದ್ಧವೆಂದೂ, ಪರಿಕಲ್ಪನೆ ಮಾಡಿ ವಿಜ್ಞಾನವು ಕ್ಷಣಿಕವಾಗಿರುತ್ತದೆ (ಎಂದು **ವಿಜ್ಞಾನವಾದಿ ಹೇಳುತ್ತಾನೆ**).

ಬಾಹ್ಯದಲ್ಲಿ ತೋರುವ ಗ್ರಾಹ್ಯಕಾಕಾರವೂ ಏನೂ ಇಲ್ಲೆಂದು **ಯೋಗಾಚಾರನು** ಹೇಳುತ್ತಾನೆ. ಬಾಹ್ಯಘಟಾದಿ ಪದಾರ್ಥಗಳು ಹೇಗೆ ಇಲ್ಲವೋ, ಹಾಗೇ ಅಂತರದಲ್ಲಿ ವಿಜ್ಞಾನವೂ ಕೂಡಾ ಇಲ್ಲೆಂದು ಮಾಧ್ಯಮಿಕನಾದ **ಶೂನ್ಯವಾದಿಯು** ಹೇಳುತ್ತಾನೆ.

ಬುದ್ಧಿಗೆ ಸಾಕ್ಷಿ ಸ್ವಯಂಪ್ರಕಾಶನಾದ ಆತ್ಮನು ಇರುತ್ತಾನೆಂಬ ವೈದಿಕ ಮೋಕ್ಷ ಮಾರ್ಗಕ್ಕೆ, ಆತ್ಮನೇ ಇಲ್ಲೆಂದು ಹೇಳತಕ್ಕ ಈ ನಾಲ್ಕು ಮತಗಳು ವಿರುದ್ಧಗಳಾಗಿರುತ್ತವೆ. ಇವುಗಳಿಂದ ಮುಮುಕ್ಷುಗಳಿಗೆ ಸಂಶಯಪ್ರಾಪ್ತವಾಗುವದು.

ಅದರಿಂದ ಈ ಮತಗಳನ್ನು ವಿಚಾರಿಸುವದು ಅವಶ್ಯವಾಗಿರುವದು. ಈ ಬಾಹ್ಯ ಪ್ರಪಂಚವು ಅನುಮಾನಕ್ಕೆ ವಿಷಯವಾಗಿದೆಯೆಂದು **ಸೌತ್ರಾಂತಿಕನೂ,** ಪ್ರತ್ಯಕ್ಷ ವಿರುವುದೆಂದು **ವೈಭಾಷಿಕನೂ,** ಬಾಹ್ಯಮಾತ್ರ ಶೂನ್ಯವಾಗಿರುವುದೆಂದು **ಯೋಗಾ ಚಾರನೂ,** ಸರ್ವವೂ ಶೂನ್ಯವಾಗಿರುವುದೆಂದು **ಮಾಧ್ಯಮಿಕನು** ಹೀಗೆ ಹೇಳಿ ರುವರು. ಇವರು ನಾಲ್ವರು **ಬುದ್ಧನ** ಶಿಷ್ಯರು ಇರುವರು.

**ಸಿದ್ಧಾಂತಿ:-** ಬಾಹ್ಯ ಪದಾರ್ಥವನ್ನು ಸ್ವೀಕಾರ ಮಾಡಿದ **ಸೌತ್ರಾಂತಿಕ, ವೈಭಾಷಿಕರುಗಳಿಗೆ** ಮೊದಲು ಉತ್ತರವನ್ನು ಕೊಡುತ್ತಾರೆ. ಹೇಗಂದರೆ—ಘಟವು ತನ್ನನ್ನು ತಾನೇ ಬೆಳಗುತ್ತದೆಂದು ಹೇಳಿದಿರಿ. ಇದು ಸರಿಯಲ್ಲ. ಯಾಕಂದರೆ, ಕತ್ತಲೆಯಲ್ಲಿರಿಸಿದ ಘಟವು ತನ್ನನ್ನು ತಾನು ಬೆಳಗಬೇಕಾಗಿತ್ತು. ಕಿಂತು ಹಾಗೆ ಬೆಳಗುವದಿಲ್ಲ. ದೀಪಾದಿ ಪ್ರಕಾಶ ಸಂಯೋಗದಿಂದ ನಿಯಮವಾಗಿ ಕೂಡಿರುವ ಘಟವು ತೋರುತ್ತದೆ. ಪ್ರಕಾಶದಿಂದ ಸಹಿತವಾಗಿ ಘಟವೆಂದು ಕಂಡುಬರುತ್ತದೆ. ಪ್ರಕಾಶ ಮತ್ತು ಘಟ ಇವೆರಡು ಪರಸ್ಪರ ಮೇಲಿಂದಮೇಲೆ ಕೂಡಿದರೂ, ಅಗಲಿ ದರೂ ರಜ್ಜು ಘಟಗಳಂತೆ ಭಿನ್ನಗಳಾಗಿಯೇ ಇರುತ್ತವೆ. ಬೇರೆಯಾಗಿದ್ದರೇನೇ ಪ್ರಕಾಶವನ್ನು ಮಾಡಲಿಕ್ಕೆ ಬರುತ್ತದೆ. ಆದ್ದರಿಂದ ಘಟವು ತನ್ನನ್ನು ಕುರಿತು ತಾನು ಪ್ರಕಾಶ ಮಾಡುವದಿಲ್ಲ. ಕಿಂತು ಬೇರೆ ಪ್ರಕಾಶವು ಅವಶ್ಯ ಬೇಕಾಗುತ್ತದೆ.

**ಪೂರ್ವಪಕ್ಷೀ:-** ದೀಪವು ತನ್ನನ್ನು ತಾನು ಬೆಳಗುವದು ಕಾಣಲ್ಪಡುತ್ತದೆ. ಘಟಾದಿಗಳಂತೆದೀಪವನ್ನು ಕಾಣುವದಕ್ಕಾಗಿ ಮತ್ತೊಂದು ದೀಪವನ್ನು ಲೌಕಿಕರು ಅಪೇಕ್ಷಿಸುವದಿಲ್ಲ. ಆದ್ದರಿಂದ ದೀಪವು ತನ್ನನ್ನು ತಾನು ಬೆಳಗುವದು.

**ಸಿದ್ಧಾಂತೀ:-** ಘಟದಂತೆ ದೀಪವಾದರೂ ಪ್ರಕಾಶ ಮಾಡಿಸಿಕೊಳ್ಳುವದ ರಿಂದ ಹಾಗೆ ಹೇಳಕೂಡದು. ಯದ್ಯಪಿ ದೀಪವು ತಾನು ಪ್ರಕಾಶಾತ್ಮಕವಾದ್ದ ರಿಂದ ಅನ್ಯವನ್ನು ಬೆಳಗುತ್ತದೆ. ತಥಾಪಿ ತನಗಿಂತ ಭಿನ್ನವಾದ ಚೈತನ್ಯದಿಂದ ತಾನು ಘಟದಂತೆ ಪ್ರಕಾಶ ಮಾಡಿಸಿಕೊಳ್ಳುವದು ತಪ್ಪುವದಿಲ್ಲ. ಆದ್ದರಿಂದ ತಾನು ಬೇರೊಂದರಿಂದ ಪ್ರಕಾಶ ಮಾಡಿಸಿಕೊಳ್ಳುವದು ಅವಶ್ಯವಾಗಿರುತ್ತದೆ.

**ಪೂರ್ವಪಕ್ಷೀ:-** ಘಟವು ಚೈತನ್ಯದಿಂದ ಪ್ರಕಾಶ ಮಾಡಿಸಿಕೊಂಡರೂ ಹೇಗೆ ಬೇರೊಂದು ಪ್ರಕಾಶದ ಅಪೇಕ್ಷೆಯನ್ನು ಮಾಡುತ್ತದೆಯೋ, ಹಾಗೆ ದೀಪವು ಬೇರೊಂದು ಪ್ರಕಾಶದ ಅಪೇಕ್ಷೆಯನ್ನು ಮಾಡುವದಿಲ್ಲ. ಆದ್ದರಿಂದ ಪ್ರದೀಪವು ಚೈತನ್ಯದಿಂದ ಪ್ರಕಾಶಿಸಲ್ಪಟ್ಟರೂ ತನ್ನನ್ನು ಮತ್ತು ಘಟವನ್ನು ಬೆಳಗುತ್ತದೆ.

**ಸಿದ್ಧಾಂತಿ:-** ಹೇಗೆ ಘಟವು ಚೈತನ್ಯದಿಂದ ಪ್ರಕಾಶಿಸಲ್ಪಡುವದೋ, ಹಾಗೇ ಪ್ರದೀಪವಾದರೂ ಚೈತನ್ಯದಿಂದ ಪ್ರಕಾಶಿಸಲ್ಪಡುತ್ತದೆ. ಆದ್ದರಿಂದ ಸಮಾನವೇ ಇರುವದು. ದೀಪಕ್ಕೆ ತನ್ನಿಂದಾಗಲಿ ಬೇರೊಂದರಿಂದಾಗಲಿ ವಿಶೇಷವೇನೂ

ತೋರುವದಿಲ್ಲ. ದೀಪವು ತನ್ನನ್ನು ಘಟವನ್ನು ಬೆಳಗುತ್ತದೆಂದು ಏನು ಹೇಳಿದಿಯೋ ಅದು ಸುಳ್ಳಾಗಿರುವದು. ಯಾಕಂದರೆ, ವಿಶೇಷವೇನೂ ತೋರದ ಮೇಲೆ ದೀಪವು ತನ್ನನ್ನು ತಾನು ಬೆಳಗುವದಿಲ್ಲೆಂದು ಹೇಳಿದ್ದಾಯಿತು. ಅಂದಮೇಲೆ; ದೀಪಕ್ಕೆ ಯಾವರೂಪಾಗಿರುವದೆಂಬುದನ್ನು ನೀನೇ ನೋಡು. ದೀಪಕ್ಕೆ ತನ್ನಿಂದಾಗಲಿ ಬೇರೆಯದರಿಂದಾಗಲಿ ಏನೊಂದು ವಿಶೇಷವು ತೋರುವದಿಲ್ಲ. ವಿಶೇಷವೇನಂದರೆ- ಯಾವದು ಪ್ರಕಾಶ ಮಾಡುವದರ ಸಮೀಪದಲ್ಲಿ ಅಥವಾ ದೂರದಲ್ಲಿ ಇರುವಿಕೆಯೇ ವಿಶೇಷವಾಗಿರುವದೋ, ಅದು ಅದರಿಂದ ಪ್ರಕಾಶಮಾಡಿಸಿಕೊಳ್ಳುತ್ತದೆ. ದೀಪಕ್ಕೆ ತನಗೆ ತಾನು ಸಮೀಪ ಅಥವಾ ದೂರವೆಂದು ಪರಿಕಲ್ಪಿಸಲಿಕ್ಕೆ ಬರುವದಿಲ್ಲ. ವಿಶೇಷತ್ವವೇ ಇಲ್ಲದಮೇಲೆ; ದೀಪವು ತನ್ನನ್ನು ತಾನು ಬೆಳಗುತ್ತದೆಂದು ಹೇಳುವದು ಸುಳ್ಳಾಗಿರುತ್ತದೆ. ಚೈತನ್ಯದಿಂದ ದೀಪವಾಗಲಿ ಘಟವಾಗಲಿ ಪ್ರಕಾಶ ಮಾಡಿಕೊಳ್ಳುವದು ಸಮಾನವಾಗಿರುತ್ತದೆ. ಆದ್ದರಿಂದ ವಿಜ್ಞಾನವು ಗ್ರಾಹ್ಯಗ್ರಾಹಕತ್ವ ವಿಷಯದಲ್ಲಿ ಪ್ರದೀಪ ದೃಷ್ಟಾಂತವು ಸರಿಯಲ್ಲ. ಬಾಹ್ಯವಿಷಯಗಳಂತೆ ವಿಜ್ಞಾನವಾದರೂ ಚೈತನ್ಯದಿಂದ ಪ್ರಕಾಶ ಮಾಡಿಸಿಕೊಳ್ಳುವದು ಸಮಾನವಾಗಿರುತ್ತದೆ. ಚೈತನ್ಯದಿಂದ ವಿಜ್ಞಾನವು ಗ್ರಹಿಸಲ್ಪಡುತ್ತದೆ. (ಬೆಳಗಲ್ಪಡುತ್ತದೆ) ಎಂದು ಹೇಳುತ್ತಿರಲಿಕ್ಕೆ; ಗ್ರಾಹ್ಯವಿಜ್ಞಾನವು ಗ್ರಹಿಸಲ್ಪಡುತ್ತದೆಯೋ ಅಥವಾ ಗ್ರಾಹಕ ವಿಜ್ಞಾನವು ಗ್ರಹಿಸಲ್ಪಡುತ್ತದಯೋ,ಎಂದುಸಂಶಯ ಪಡುವ ವಸ್ತುವಿನಲ್ಲಿ; ಬೇರೆ ಕಡೆಯಲ್ಲಿ ನೋಡಿದ ನ್ಯಾಯವೇ ಇಲ್ಲಿ ಕಲ್ಪಿಸಲಿಕ್ಕೆ ಯೋಗ್ಯವಾಗಿರುವದು. ನೋಡಲ್ಪಟ್ಟದ್ದಕ್ಕೆ ವಿರೋಧವಾಗಿ ಕಲ್ಪಿಸಲಿಕ್ಕೆ ಬರುವದಿಲ್ಲ. ಹೀಗಿರುತ್ತಿರಲಿಕ್ಕೆ ಭಿನ್ನವಾಗಿರುವ ಗ್ರಾಹಕದಿಂದಲೇ ಬಾಹ್ಯಘಟ ಪ್ರದೀಪಾದಿಗಳು ಗ್ರಾಹ್ಯಗಳಾಗಿರುವದು ಕಂಡು ಬರುತ್ತದೆ. ಅದರಂತೆ ವಿಜ್ಞಾನವು ಪ್ರದೀಪದಂತೆ ಪ್ರಕಾಶಮಾನವಾಗಿದ್ದರೂ, ವ್ಯತಿರಿಕ್ತ ಚೈತನ್ಯದಿಂದ ಗ್ರಹಿಸಲ್ಪಡುತ್ತದೆಂದು ಕಲ್ಪಿಸುವದು ಯೋಗ್ಯವಾಗಿರುವದು. ತನ್ನನ್ನು ಮಾತ್ರ ತಾನು ಗ್ರಹಿಸಲಾರದು. ಅನ್ಯನಾಗಿದ್ದು ವಿಜ್ಞಾನವನ್ನು ಪ್ರಕಾಶಮಾಡುವಾತನು ಯಾವನೋ, ಅವನೇ ಸ್ವಯಂಜ್ಯೋತಿ ರೂಪ ಆತ್ಮನಿರುವನು.

**ಪೂರ್ವಪಕ್ಷ:-** ವಿಜ್ಞಾನವನ್ನು ಗ್ರಹಣಮಾಡುವವನು ಆತ್ಮನು, ಈ ಆತ್ಮನನ್ನು ಗ್ರಹಣಮಾಡುವವರು ಬೇರೆ ಯಾರೂ ಇಲ್ಲ. ಈತನು ತನ್ನನ್ನು ತಾನೇ ಗ್ರಹಣ ಮಾಡುತ್ತಾನೆಂದು ಹೇಳಿದರೆ; ಆತ್ಮಾಶ್ರಯ ದೋಷಬರುವದು. ಈ ಆತ್ಮನನ್ನು ಗ್ರಹಣ ಮಾಡುವವನು ಬೇರೊಬ್ಬನಿದ್ದಾನೆಂದು ಹೇಳಿದರೆ, ಅನ್ಯೋನ್ಯಾಶ್ರಯ ದೋಷವು. ಮೂರನೆಯವನನ್ನು ಸ್ವೀಕರಿಸಿದರೆ ಚಕ್ರಿಕಾಪತ್ತಿ, ನಾಲ್ಕನೆಯವನನ್ನು ಹೇಳಿದರೆ ಅನವಸ್ಥಾ ಈ ರೀತಿ ದೋಷಗಳು ಬರುತ್ತವೆ. ಆದ್ದರಿಂದ ವಿಜ್ಞಾನ ವ್ಯತಿರಿಕ್ತ ಗ್ರಾಹಕತ್ವವನ್ನು ಅಂಗೀಕರಿಸುವದು ಯೋಗ್ಯವಲ್ಲ.

**ಸಿದ್ಧಾಂತಿ:**— ಹಾಗಲ್ಲ. ಯಾವದು ಗ್ರಾಹ್ಯಮಾತ್ರವಾಗಿರುವದೋ, ಅದು ಗ್ರಾಹಕಕ್ಕಿಂತಲೂ ಬೇರೆಯಾಗಿರಲಿಕ್ಕೆಬೇಕೆಂದು ನ್ಯಾಯವು ತೋರಿಸಲ್ಪಟ್ಟಿತು. ಗ್ರಾಹಕವಿರುತ್ತಿರಲಿಕ್ಕೆ ಅದಕ್ಕೆ ಬೇರೊಂದು ಗ್ರಾಹಕವಿರಲಿಕ್ಕೇಬೇಕೆಂದು ನಿಯಮವಲ್ಲ. ಯಾವದೊಂದು ಚಿನ್ಹವೂ ಸಂಭವಿಸುವದಿಲ್ಲ. ಅಂದರೆ ಬುದ್ಧಿಗೆ ಸಾಕ್ಷಿಯಾದ ವಸ್ತುವನ್ನು ಗ್ರಹಿಸುವ ಗ್ರಾಹಕವುಂಟೆಂಬಲ್ಲಿ ಯಾವ ಲಿಂಗವೂ ಇಲ್ಲ. ಸಾಕ್ಷಿಗೆ ಬೇರೊಂದು ಸಾಕ್ಷಿಉಂಟೆಂಬಲ್ಲಿ ಪ್ರಮಾಣವೂ ಇಲ್ಲ. ಆದ್ದರಿಂದ ಅನವಸ್ಥಾ ದೋಷವು ಬರುವದಿಲ್ಲ.

**ಪೂರ್ವ ಪಕ್ಷೀ:**- ವಿಜ್ಞಾನವು ತಾನು ಬೇರೊಂದರಿಂದ ಗ್ರಾಹ್ಯವಿರುತ್ತಿರುವದೆಂದು ಹೇಳಿದರೆ; ಬೇರೊಂದು ಸಾಧನವು (ಕರಣವು) ಅವಶ್ಯಬೇಕಾಗುವದು. ಆ ಕರಣವನ್ನು ಗ್ರಹಿಸಬೇಕಾದರೆ ಬೇರೊಂದು ಕರಣವು ಬೇಕು. ಹೀಗೆ ಹೇಳುತ್ತಾ ಹೋದರೆ ಕರಣ ಸಂಬಂಧಿ ಅನವಸ್ಥಾ ದೋಷವು ಬರುತ್ತದೆ.

**ಸಿದ್ಧಾಂತಿ:**- ಹಾಗಲ್ಲ. ಯಾಕಂದರೆ, ಎಲ್ಲಕಡೆಯಲ್ಲಿಯೂ ಕರಣಬೇಕೆಂದು ಕರಣವಿರಬೇಕೆಂಬುದು ನಿಯಮವಲ್ಲ. ಎಲ್ಲಿ ಯಾವ ವಸ್ತು ಯಾವ ವಸ್ತುವಿನಿಂದ ಗ್ರಹಿಸಲ್ಪಡುತ್ತದೆಯೋ, ಅಲ್ಲಿ ಗ್ರಾಹ್ಯ ಗ್ರಾಹಕಗಳಿಗೆ ಭಿನ್ನವಾಗಿ ಬೇರೊಂದು ಕರಣವು ಬೇಕೆಂದು ನಿಶ್ಚಯವಾಗಿ ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ, ವೈಚಿತ್ರವು ತೋರುವದರಿಂದ; ಹೇಗಂದರೆ, ಘಟವು ತನಗಿಂತಲೂ ಭಿನ್ನವಾದ ಆತ್ಮನಿಂದ ಗ್ರಹಿಸಲ್ಪಡುತ್ತದೆ. ಅಲ್ಲಿ ಪ್ರದೀಪಾದಿಗಳ ಪ್ರಕಾಶವು ಗ್ರಾಹ್ಯಗ್ರಾಹಕ ವ್ಯತಿರಿಕ್ತವಾಗಿ ಕರಣವಾಗಿರುವದು. ಪ್ರದೀಪಾದಿಗಳ ಆಲೋಕವನ್ನೇ ನೋಡುವಲ್ಲಿ ಘಟಾಂಶವಾಗಲಿ ಚಕ್ಷುರಂಶವಾಗಲಿ ಬೇರೊಂದು ಕರಣವಿಲ್ಲ. ಘಟದಂತೆ ದೀಪವಾದರೂ ನೇತ್ರದಿಂದ ಗ್ರಹಿಸಲಿಕ್ಕೆ ಯೋಗ್ಯವಾಗಿರುತ್ತದೆ. ನೇತ್ರ ಮತ್ತು ದೀಪ ಇವುಗಳ ವ್ಯತಿರಿಕ್ತ ಬೇರೊಂದು ಕರಣವನ್ನು ಅಪೇಕ್ಷೆ ಮಾಡುವದಿಲ್ಲ. ಆದ್ದರಿಂದ ಎಲ್ಲಿ ಎಲ್ಲಿ ವ್ಯತಿರಿಕ್ತ ಗ್ರಾಹ್ಯತ್ವವುಂಟೋ, ಅಲ್ಲಿ ಅಲ್ಲಿ ಬೇರೊಂದು ಕರಣವು ಬೇಕೆಂದು ನಿಯಮನ ಮಾಡಲಿಕ್ಕೆ ಶಕ್ಯವಲ್ಲ. ಆದ್ದರಿಂದ ವಿಜ್ಞಾನಕ್ಕೆ ಭಿನ್ನವಾದ ಗ್ರಾಹಕನಾದ ಆತ್ಮನನ್ನು ಗ್ರಹಿಸುವದಕ್ಕಾಗಿ ಕರಣದ್ವಾರಾಆಗಲಿ ಅಥವಾ ಗ್ರಾಹಕದ್ವಾರಾ ಆಗಲಿ ಅನವಸ್ಥೆಯನ್ನು ಪ್ರತಿಪಾದಿಸಲಿಕ್ಕೆ ಶಕ್ಯವಾಗುವದಿಲ್ಲ. ಅದರಿಂದಲೇ ವಿಜ್ಞಾನಕ್ಕೆ ವ್ಯತಿರಿಕ್ತವಾಗಿ ಅಂತರದಲ್ಲಿ ಆತ್ಮಜ್ಯೋತಿಯು ಇರುವದೆಂಬುದು ಸಿದ್ಧವಾಯಿತು.

ಈ ರೀತಿ ಬಾಹ್ಯಾರ್ಥವಾದಿಗಳಾದ ಸೌತ್ರಾಂತಿಕ ವೈಭಾಷಿಕರು ಪರಾಭೂತರಾಗಲು; **ವಿಜ್ಞಾನವಾದಿಯು** ಪ್ರಶ್ನೆಯನ್ನು ಮಾಡುವದಕ್ಕೆ ಉದ್ಯುಕ್ತನಾದನು.

**ಪೂರ್ವಪಕ್ಷೀ:-** ವಿಜ್ಞಾನ ವ್ಯತಿರಿಕ್ತ ಬಾಹ್ಯ ಘಟಪಟಾದಿಗಳು ಯಾವೂ ಇಲ್ಲ. ಯಾವ ಯಾವ ಪದಾರ್ಥಗಳು ಕಾಣಲ್ಪಡುವವೋ ಅವು ವಿಜ್ಞಾನಕ್ಕೆ ಭಿನ್ನ ವಾಗಿರುವದಿಲ್ಲ. ಸ್ವಪ್ನ ವಿಜ್ಞಾನದಿಂದ ಗ್ರಹಿಸಲ್ಪಟ್ಟ ಘಟಪಟಾದಿ ವಸ್ತುಗಳು ಸ್ವಪ್ನ ವಿಜ್ಞಾನಕ್ಕಿಂತಲೂ ಭಿನ್ನವಾಗಿ ಹೇಗೆ ತೋರುವದಿಲ್ಲವೋ; ಅಂದರೆ, ಸ್ವಪ್ನ ದಲ್ಲಿರುವ ಘಟಪ್ರದೀಪಾದಿಗಳು ಸ್ವಪ್ನದ ಜ್ಞಾನಮಾತ್ರವಾಗಿಯೇ ಹೇಗೆ ತಿಳಿಯ ಲ್ಪಡುತ್ತವೆಯೋ, ಹಾಗೇ ಜಾಗ್ರದವಸ್ಥೆಯಲ್ಲಿ ತೋರುವ ಘಟಪ್ರದೀಪಾದಿಗಳು ಜಾಗ್ರತ್ತಿನಲ್ಲಿರುವ ಜ್ಞಾನದ ವ್ಯತಿರಿಕ್ತ ತೋರದೆ ಇರುವದರಿಂದ ವಿಜ್ಞಾನಮಾತ್ರ ಗಳಾಗಿರುವವು ಎಂದು ಹೇಳುವದು ಯುಕ್ತವಾಗಿರುತ್ತದೆ. ಆದ್ದರಿಂದ ಬಾಹ್ಯ ದಲ್ಲಿ ಘಟಪ್ರದೀಪಾದಿಗಳು ಇಲ್ಲ. ಕಿಂತು ಸರ್ವವು ವಿಜ್ಞಾನಮಾತ್ರವಾಗಿರುವದು. ಆದ್ದರಿಂದ ವಿಜ್ಞಾನ ವ್ಯತಿರಿಕ್ತವಾಗಿ ಪ್ರಕಾಶ ಮಾಡುವದರಿಂದ, ವಿಜ್ಞಾನ ವ್ಯತಿರಿಕ್ತ ಆತ್ಮಜ್ಯೋತಿಯು ಘಟಾದಿಗಳಂತೆ ಇರುವದೆಂದು ಏನು ಹೇಳಲ್ಪ ಟ್ಟಿತೋ ಅದು ಮಿಥ್ಯೆಯಾಗಿರುವದು. ಸರ್ವವು ವಿಜ್ಞಾನಮಾತ್ರವಾಗಿರುವದರಿಂದ ದೃಷ್ಟಾಂತವಿಲ್ಲ.

**ಸಿದ್ಧಾಂತೀ:-** ಹಾಗಲ್ಲ. ಯಾವತ್ತನ್ನು ಅಂಗೀಕರಿಸುವದರಿಂದ, ಹೊರಗೆ ಪದಾರ್ಥಗಳಿಲ್ಲೆಂದು ನಿನ್ನಿಂದ ನಿಶ್ಚಯವಾಗಿ ತಿಳಿಯಲ್ಪಡುವದಿಲ್ಲ. ಹೊರಗಿನ ಯಾವ ಪದಾರ್ಥವನ್ನೂ ನಾನು ಅಂಗೀಕರಿಸುವದಿಲ್ಲೆಂದು ಹೇಳಿದರೆ ಕೇಳು ವಿಜ್ಞಾನವು, ಘಟವು, ಪಟವು, ಪ್ರದೀಪವು ಎಂದು ಬೇರೆ ಬೇರೆ ಶಬ್ದಾರ್ಥಗಳನ್ನು ಹೇಳುವದರಿಂದ, ಬಾಹ್ಯಾರ್ಥಗಳನ್ನು ಅವಶ್ಯ ಅಂಗೀಕಾರ ಮಾಡುವಿ. ವಿಜ್ಞಾನ ವ್ಯತಿರಿಕ್ತ ಪದಾರ್ಥವನ್ನು ನಾನು ಒಪ್ಪುವದೇ ಇಲ್ಲೆಂದು ಹೇಳಿದರೆ, ವಿಜ್ಞಾನ, ಘಟಪಟ ಮೊದಲಾದ ಶಬ್ದಗಳಿಗೆ ಏಕಾರ್ಥವಾಯಿತು. ಆದರಿಂದ ಇವೆಲ್ಲಾ ಪರ್ಯಾಯ ಶಬ್ದಗಳೆಂದು ಹೇಳಬೇಕಾದೀತು. ಸಾಧನಗಳು ಮತ್ತು ಫಲಗಳು ಏಕವಾದರೆ ಸಾಧ್ಯಸಾಧನಗಳು ಮತ್ತು ಫಲಗಳು ಏಕವಾದರೆ ಸಾಧ್ಯಸಾಧನಗಳಿಗೆ ಭೇದವನ್ನು ಹೇಳುವ ಶಾಸ್ತ್ರಕ್ಕೆ ಆನರ್ಥಪ್ರಾಪ್ತವಾಗಬೇಕಾದೀತು. ಮತ್ತು ಆ ಶಾಸ್ತ್ರವನ್ನು ಮಾಡಿದ ಕರ್ತನಿಗೆ ಅಜ್ಞಾನ ಪ್ರಸಂಗ ಪ್ರಾಪ್ತವಾಗಬಹದು. ಮತ್ತು ವಿಜ್ಞಾನ ವ್ಯತಿರಿಕ್ತವಾಗಿಯೇ ವಾದಿ ಪ್ರತಿವಾದಿ ವಾದ ದೋಷವನ್ನು ಸ್ವೀಕಾರ ಮಾಡಿರುತ್ತೀ. ವಾದಿ ಪ್ರತಿವಾದಿ ವಾದಗಳೂ ಅದರ ದೋಷಗಳೂ ವಿಜ್ಞಾನರೂಪ ಗಳೆಂದು ಅಂಗೀಕರಿಸುವದಿಲ್ಲ. ಯಾಕಂದರೆ, ಪ್ರತಿವಾದ್ಯಾದಿಗಳನ್ನು ನಿರಾಕರಿ ಸುವದರಿಂದ; ತಾನಾಗಲಿ, ಯಾವನಾದರಾಗಲಿ ತನ್ನ ಸಂಬಂಧ ಜ್ಞಾನವನ್ನು ತಾನೇ ನಿರಾಕರಣ ಮಾಡುವದು ಸಂಭವಿಸುವದಿಲ್ಲ. ನಿರಾಕರಿಸಲು ಶಕ್ಯವು ಅಂದರೆ ಸರ್ವ ವ್ಯವಹಾರವು ಲೋಪಪ್ರಸಂಗ ಪ್ರಾಪ್ತವಾಗುವದು. ಆಗ್ಯೆ ಪ್ರತಿವಾದಿ ಮೊದಲಾದವುಗಳು ಸ್ವಾತ್ಮರೂಪಗಳಲ್ಲವೆಂದೇ ಅಂಗೀಕರಿಸಬೇಕಾಗುವದು.

ಸಾದೃಶ್ಯ ಜ್ಞಾನವಾಗುವದು. ಕ್ಷಣಿಕವಾದಿಯಾದ ನಿನ್ನ ಮತದಲ್ಲಿ ಒಂದನ್ನು ಕಂಡು ಮತ್ತೊಂದು ಕಾಣುವಷ್ಟರಲ್ಲಿ ಪೂರ್ವದ್ದು ಇರುವದಿಲ್ಲ. ಅಂದಮೇಲೆ ಸಾದೃಶ್ಯ ಜ್ಞಾನವು ಹೇಗೆ ಆಗಬೇಕು.? ವಿಜ್ಞಾನವು ಕ್ಷಣಿಕವೆಂದು ನೀನು ಒಪ್ಪದ್ದ ರಿಂದ, ಒಂದು ವಸ್ತು ಒಮ್ಮೆ ದರ್ಶನಕೊಟ್ಟು ನಾಶವಾಗುತ್ತದೆಂದು ಹೇಳಬೇಕು. ಹಾಗಾದರೆ, ಅದರಂತೆ ಇದಿರುವದು ಎಂಬ ಸಾದೃಶ್ಯಜ್ಞಾನವು ಆಗುತ್ತದೆ. ಅದ ರಂತೆ ಎಂಬಲ್ಲಿ ಮೊದಲು ನೋಡಿದ ವಸ್ತುವಿನ ಸ್ಮರಣವು. ಇದು ಎಂಬಲ್ಲಿ ವರ್ತ ಮಾನಕಾಲದ ಪ್ರತೀತಿ. ಹಿಂದೆ ನೋಡಿದ್ದನ್ನು ಸ್ಮರಿಸಿ ಇದು ಯೆಂದು ಹೇಳು ತ್ತೇನೆ. ವರ್ತಮಾನ ಕ್ಷಣಕಾಲವಿರುತ್ತದೆ. ಎಂದು ಒಪ್ಪಿದರೆ; ಕ್ಷಣಿಕವಾದವು ಹಾನಿ ಯಾಗುವದು.

ಮತ್ತು 'ಅದರಂತೆ' ಎಂಬಲ್ಲಿ ಸ್ಮೃತಿ ಜ್ಞಾನವಾಗಿ ನಾಶವಾಯಿತು. 'ಇದು' ಎಂಬಲ್ಲಿ ಅನ್ಯವಾದ ವರ್ತಮಾನ ಜ್ಞಾನವಾಗಿ ನಾಶವಾಯಿತು. ಅನಂತರ ಅದ ರಂತೆ ಇದು ಯೆಂದು ಸಾದೃಶ್ಯಜ್ಞಾನವು ಉಪಪತ್ತಿಯಾಗಲಾರದು. ಯಾಕಂದರೆ, ಜ್ಞಾನವು ಬೇರೆಬೇರೆಯಾಯಿತು ಒಂದಾಗಲಿಲ್ಲ. ವಿಜ್ಞಾನವು ಕ್ಷಣಿಕವಾದ್ದರಿಂದ ದರ್ಶನದಿಂದ ನೋಡಲ್ಪಟ್ಟ ವಸ್ತು ನಾಶವಾಗಿಯೇ ಹೋಗುತ್ತದೆ. ಅಂದಮೇಲೆ ಹಿಂದೆ ನೋಡಿದ್ದನ್ನು ಈಗ ನೋಡುತ್ತೇನೆಂದು ಹೇಳಲಿಕ್ಕೆ ಬರುವದಿಲ್ಲ; ಯಾಕಂ ದರೆ, ಹಿಂದೆ ನೋಡಿದ ವಿಜ್ಞಾನವು ಮತ್ತೊಂದು ಕ್ಷಣದಲ್ಲಿ ಇರದ್ದರಿಂದ, ಇರುತ್ತ ದೆಂದು ಹೇಳಿದರೆ, ಕ್ಷಣಿಕವಾದ ಹಾನಿಯಾಗುವದು.

ಒಳಿಕ; ಹಿಂದೆ ನೋಡದೆ ಇರುವವನಿಗೂ ಸಾದೃಶ್ಯಜ್ಞಾನವಾಗುವದೆಂದು ಒಪ್ಪಿದರೆ, ಹುಟ್ಟುಗುರುಡನಿಗೆ ರೂಪಜ್ಞಾನವಾಗಿ ಸಾದೃಶ್ಯಜ್ಞಾನವಾದರೂ ಆಗ ಬಹುದು. ಇದಕ್ಕೆ ಒಪ್ಪಿದರೆ, ಸರ್ವಕ್ಕೆ ಅಂಧಪರಂಪರ ನ್ಯಾಯವು ಪ್ರಾಪ್ತವಾಗು ವದು. ಹೀಗಾಗಿದ್ದರೆ, ಸರ್ವಜ್ಞನು ಶಾಸ್ತ್ರನಿರ್ಮಾಣವನ್ನು ಮಾಡಲಿಕ್ಕೆ ಇಚ್ಛಿಸು ತ್ತಿರಲಿಲ್ಲ. ಈ ಕ್ಷಣಿಕವಾದದಲ್ಲಿ ಮಾಡದ್ದು ಬರುವದು, ಮಾಡಿದ್ದು ಹೋಗುವದೆಂಬ ಎರಡು ಪ್ರಬಲತರ ದೋಷಗಳು ಬರುತ್ತವೆ.

**ಶಂಕಾ:-** ನೋಡಿದ್ದನ್ನು ಹೇಳುವದಕ್ಕೆ ಕಾರಣವು ಸಂಭವಿಸುತ್ತದೆ. ಪೂರ್ವೋತ್ತರ ಕಾಲದೊಡನೆ ಸಹಿತವಾದ ಒಂದು ಜ್ಞಾನವೇ ಸರಪಳಿಯಂತೆ ಉತ್ಪನ್ನವಾಗುತ್ತದೆ. ಅದರಿಂದ ಅದರಂತೆ ಇದು ಎಂಬ ಸಾದೃಶ್ಯ ಜ್ಞಾನವು ಸಂಭವಿಸುತ್ತದೆ.

**ಸಮಾಧಾನಃ-** ಭೂತ ವರ್ತಮಾನ ಕಾಲಗಳು ಭಿನ್ನವಾಗಿರುವದರಿಂದ ಹಾಗೆ ಹೇಳುವದಕ್ಕೆ ಬರುವದಿಲ್ಲ. 'ಅದರಂತೆ' ಎಂಬಲ್ಲಿ ಭೂತಕಾಲದ ವಿಷಯು.

ವಿರುವದು. 'ಇದು' ಎಂಬಲ್ಲಿ ವರ್ತಮಾನಕಾಲ ವಿರುವದು. ಭಿನ್ನ ಕಾಲಗಳ ಜ್ಞಾನವು! ಸರಪಳಿಯಂತೆ ಏಕವಾಗಬೇಕಾದರೆ, ಎರಡು ಕ್ಷಣಗಳನ್ನು ಸ್ವೀಕರಿಸ ಬೇಕಾಯಿತು. ಇದನ್ನು ಅಂಗೀಕರಿಸಿದರೆ ಕ್ಷಣಿಕವಾದವು ಹಾನಿಯಾಗುವದು. ಅಂಗೀಕರಿಸದಿದ್ದರೆ ನನ್ನದು ನಿನ್ನದು ಎನ್ನುವದು ಏನು ವಿಶೇಷವು ತೋರದೇ ಹೋದೀತು. ಮತ್ತು ಸರ್ವವ್ಯವಹಾರವು ಲೋಪಆಗುವ ಪ್ರಸಂಗ ಒದಗ ಬಹುದು. ಮತ್ತು ಸರ್ವವು (ಸ್ವಸಂವೇದ್ಯ) ತನಗೆ ತಾನೆ ಗೋಚರವಾಗುವದು. ವಿಜ್ಞಾನ ಮಾತ್ರವಾಗಿರುವದು. ವಿಜ್ಞಾನವು ಸ್ವಚ್ಛ ಜ್ಞಾನರೂಪವಾಗಿ ಪ್ರಕಾಶ ಮಾಡುವ ಸ್ವಭಾವವುಳ್ಳದ್ದಾಗಿರುವದು. ಈ ವಿಜ್ಞಾನಕ್ಕೆ ಸಾಕ್ಷಿಯಾಗಿರುವದು ಯಾವದೂ ಇಲ್ಲ. ಹೀಗೆಂದು ಒಪ್ಪಿದಮೇಲೆ, ಅನಿತ್ಯ, ದುಃಖ, ಶೂನ್ಯ, ಅನಾತ್ಮಎಂಬ ಅನೇಕ ಕಲ್ಪನೆಗಳು ಉಪಪತ್ತಿಯಾಗಬಾರದಾಗಿತ್ತು. ಉಪಪತ್ತಿ ಯಾಗುತ್ತವೆ. ಅಂದಮೇಲೆ ಶುದ್ಧ ವಿಜ್ಞಾನವು ಹೇಗೆ ಆಯಿತು?

**ಶಂಕಾ:-** ವಿಜ್ಞಾನವು ಶುದ್ಧಬೋಧರೂಪಾಗಿರುವದು ಸುಳ್ಳು. ಕಿಂತು ಡಾಳಿಂಬರ ಮೊದಲಾದ ಗಿಡಗಳಂತೆ ವಿರುದ್ಧ ನಾನಾವಿಧ ದುಃಖಾದಿ ಅಂಶಗಳಿಂದ ಕೂಡಿರುವದು. ಹೀಗೆ ಒಪ್ಪಿದರೆ, ಯಾವ ದೋಷವೂ ಬರುವದಿಲ್ಲ.

**ಸಮಾಧಾನ–** ವಿಜ್ಞಾನವು ಸ್ವಚ್ಛವಾಗಿ ಪ್ರಕಾಶಮಾಡುವ ಸ್ವಭಾವವುಳ್ಳ ದ್ದಾಗಿರುವದು. ಆದ್ದರಿಂದ ಅನಿತ್ಯ ದುಃಖ ಮೊದಲಾದವುಗಳು ವಿಜ್ಞಾನದ ಅಂಶ ಗಳೆಂದು ಹೇಳಲಿಕ್ಕೆ ಬರುವದಿಲ್ಲ. ಅಂಗೀಕರಿಸಿದರೆ, ಇವು ಅನುಭವಿಸಲ್ಪಡುವದ ರಿಂದ ಘಟದಂತೆ ವಿಜ್ಞಾನ ವ್ಯತಿರಿಕ್ತ ವಿಷಯಗಳೆಂದು ಒಪ್ಪಬೇಕಾಗುವದು. ಅನಿತ್ಯ ದುಃಖಾದಿಗಳು ವಿಜ್ಞಾನದ ಧರ್ಮಗಳಲ್ಲ. ಕಿಂತು ಸ್ವರೂಪಗಳಾಗಿರುತ್ತ ವೆಂದು ಹೇಳಿದರೆ; ಅನಿತ್ಯಾದಿಗಳಿಂದ ವಿಯೋಗವಾದರೆ ವಿಜ್ಞಾನವು ಶುದ್ಧವಾಗುವ ದೆಂಬ ಕಲ್ಪನೆಯನ್ನು ಬಿಡಬೇಕಾಗುತ್ತದೆ. ಯಾಕಂದರೆ, ದರ್ಪಣ ಮೊದಲಾದವು ಗಳಿಗೆ ಸಂಯೋಗವಾದ ಮಲವು, ವಿಯೋಗವಾಗುವದರಿಂದ ವಿಶುದ್ಧಿಯಾಗುವ ದುಂಟು. ಸ್ವಾಭಾವಿಕಗಳಾದ ಅಗ್ನಿಯ ಉಷ್ಣಪ್ರಕಾಶಗಳು ಅಗ್ನಿಯಿಂದ ವಿಯೋಗ ವಾಗುವದು ಕಂಡುಬರುವದಿಲ್ಲ. ಯದ್ಯಪಿ ಪುಷ್ಪದ ಗುಣಗಳಾದ ರಕ್ತತ್ವಾದಿಗಳಿಗೆ ದ್ರವ್ಯಾಂತರ ಸಂಯೋಗಮಾಡುವದರಿಂದ, ಆ ರಕ್ತತ್ವ ವಿಯೋಗವಾಗುವದು ಕಂಡುಬರುತ್ತದೆ. ಅಲ್ಲಿಯಾದರೂ ಸಂಯೋಗಪೂರ್ವಕವಾಗಿರುವುದೆಂದೇ ಅನು ಮಾನ ಮಾಡಲಿಕ್ಕೆ ಬರುತ್ತದೆ. ಹತ್ತಿಯಬೀಜ ಮೊದಲಾದವುಗಳಿಗೆ ದ್ರವ್ಯಾಂತರ ಸಂಯೋಗಮಾಡುವದರಿಂದ, ರಕ್ತವರ್ಣಾತ್ಮಕ ಪುಷ್ಪ ಫಲಾದಿಗಳು ಗುಣಾಂತರ ಗಳಾಗಿ ತೋರುತ್ತವೆ. ಈ ದೃಷ್ಟಾಂತಗಳಂತೆ ವಿಜ್ಞಾನಕ್ಕೆ ಹೇಳಲಿಕ್ಕೆ ಬರುವದಿಲ್ಲ. ಯಾಕಂದರೆ ದುಃಖಾದಿಗಳು ವಿಜ್ಞಾನದ ಸ್ವರೂಪಗಳನ್ನಾಗಿ ನೀವು ಅಂಗೀಕರಿಸಿ ರುವದರಿಂದ, ಆದ್ದರಿಂದ ವಿಜ್ಞಾನ ವಿಶುದ್ಧಿ ಕಲ್ಪನೆಯು ಉಪಪನ್ನವಾಗಲಾರದು.

ಮತ್ತು ವಿಷಯ ವಿಷಯೀ ಭಾವದಿಂದ ತೋರುವದೇ ವಿಜ್ಞಾನಕ್ಕೆ ಮಲ ವೆಂದು ಕಲ್ಪನಾ ಮಾಡಿರುವಿರಿ. ವಿಜ್ಞಾನಕ್ಕೆ ಬೇರೊಂದರಿಂದ ಸಂಬಂಧವಿಲ್ಲದ್ದ ರಿಂದ ಮಲಕಲ್ಪನೆಯೂ ಸಂಭವಿಸುವದಿಲ್ಲ. ಇಲ್ಲದ್ದರೊಡನೆ ಇದ್ದದ್ದಕ್ಕೆ ಸಂಬಂಧವು ಆಗಲಾರದು. ವಿಜ್ಞಾನಕ್ಕೆ ಅನ್ಯದರ ಸಂಯೋಗವಿಲ್ಲ. ಅದರಿಂದ ವಿಜ್ಞಾನವೇ ಹೇಗೆ ಆಗಿದೆಯೆಂದು ಹೇಳಬೇಕಾಯಿತು. ಹಾಗಾದರೆ, ಯಾವದಕ್ಕೆ ಯಾವ ಧರ್ಮವು ಕಾಣಲ್ಪಡುವದೋ, ಅದು ಅದರಿಂದ ವಿಯೋಗವಾಗುವದಕ್ಕೆ ಯೋಗ್ಯ ವಾಗುವದಿಲ್ಲ. ಹೇಗೆ ಅಗ್ನಿಯ ಉಷ್ಣವೋ, ಸೂರ್ಯನ ಪ್ರಕಾಶವೋ ಹಾಗೆ ವಿಜ್ಞಾನದ ಸ್ವಭಾವವೇ ಮಲವಾದರೆ, ನಿವಾರಣಮಾಡಲಿಕ್ಕೆ ಯಾರಿಂದ ಶಕ್ಯ ವಾದೀತು? ಆದ್ದರಿಂದ ಅನಿತ್ಯ ಸಂಸರ್ಗದಿಂದ ಮಲಿನತ್ವ ವಿಯೋಗವಾಗುವದ ರಿಂದ ಶುದ್ಧತ್ವ ವಿಜ್ಞಾನಕ್ಕೆ ಹೇಳುವದು ಈ ಕಲ್ಪನೆಯು ಅಂಥ ಪರಂಪರಾರೂಪ ವಾಗಿರುವದು. ಮತ್ತು ಪ್ರಮಾಣ ಶೂನ್ಯವಾಗಿ ಅಂಗೀಕರಿಸಿರುವದು ಯೋಗ್ಯವಲ್ಲ.

ಮತ್ತು ಆ ಕ್ಷಣಿಕ ವಿಜ್ಞಾನಕ್ಕೆ ಮೋಕ್ಷರೂಪ ಪುರುಷಾರ್ಥವನ್ನು ಅಂಗೀ ಕರಿಸುವರು. ಅಲ್ಲಿಯಾದರೂ ಫಲಕ್ಕೆ ಆಶ್ರಯವೇ ಉಪಪತ್ತಿಯಾಗುವದಿಲ್ಲ. ಹೇಗಂದರೆ, ಮುಳ್ಳು ತುಳಿದವನಿಗೆ ಮುಳ್ಳಿನಿಂದ ಉತ್ಪನ್ನವಾದ ದುಃಖದ ನಿವೃ ತ್ತಿಯೇ ಫಲವು. ಮುಳ್ಳು ತುಳಿದವನು ಸತ್ತುಹೋದರೆ, ಆ ಮುಳ್ಳಿನ ದುಃಖದ ನಿವೃತ್ತಿ ಫಲಕ್ಕೆ ಆಶ್ರಯವೇ ಹೇಗೆ ಇಲ್ಲವೋ, ಹಾಗೆ ಸರ್ವವೂ ಉಪಶಾಂತಿ ಯಾಗಲು ಫಲಾಶ್ರಯವೇ ಇಲ್ಲದಿರಲು, ಪುರುಷಾರ್ಥ ಕಲ್ಪನೆಯನ್ನು ಮಾಡು ವದು ವ್ಯರ್ಥವಾಗುತ್ತದೆ. ಯಾವ ಪುರುಷ ಶಬ್ದದ ವಾಚ್ಯ ಅರ್ಥವು ವಿಜ್ಞಾನಕ್ಕೆ ಪರಿಕಲ್ಪಿಸಲ್ಪಡುತ್ತದೆ. ಆ ವಿಜ್ಞಾನವೇ ನಿರ್ವಾಣವಾದ ಮೇಲೆ ಪುರುಷಾರ್ಥ ವನ್ನು ಯಾರಿಗೆ ಹೇಳಬೇಕು? ಹಾಗಾದರೆ, ವಿಜ್ಞಾನಕ್ಕೆ ವ್ಯತಿರಿಕ್ತನಾದ ಆತ್ಮನು ಅನೇಕ ವಿಷಯಗಳನ್ನು ನೋಡತಕ್ಕವನಿದ್ದಾನೆ. ಅವನಿಗೆ ನೋಡಲ್ಪಟ್ಟ ವಸ್ತುವಿನ ಸ್ಮರಣ ದುಃಖ ಸಂಯೋಗ ವಿಯೋಗಾದಿಗಳು ಸರ್ವವೂ ಉಪಪನ್ನಗಳಾಗುತ್ತವೆ. ಅವಿದ್ಯಾ ಕಾಮ ಕರ್ಮಾದಿಗಳ ಸಂಯೋಗಮೂಲಕ ಕಾಲುಷ್ಯವೂ, ಅವುಗಳ ವಿಯೋಗದಿಂದ ವಿಶುದ್ಧಿಯೂ, ಆಗುವದೆಂದು ಹೇಳಿದರೆ ಯಾವ ದೋಷವೂ ಇಲ್ಲ. ಹೀಗೆ ತಿಳಿದು ಪುರುಷಾರ್ಥವನ್ನು ಹೊಂದು ಎಂಬ ಭಾವವು.

ಶೂನ್ಯವಾದಿಯ ಪಕ್ಷವು ಸರ್ವ ಪ್ರಮಾಣಗಳಿಗೂ ವಿರುದ್ಧವಾಗಿರುವದರಿಂದ ಅದರ ನಿರಾಕರಣಕ್ಕೆ ಪ್ರೀತಿಯಿಲ್ಲ.

---

**೭ ಸಂ—೪ ಸೂ—೪ ಪ 'ಧರ್ಮಾತ್ ಸುಖಂ, ಸ್ಮೃತಿ....**

**'ಧರ್ಮಾತ್ಸುಖಂಚ ಜ್ಞಾನಂಚ ಜ್ಞಾನಾನ್ಮೋಕ್ಷೋಧಿಗಮ್ಯತೆ'**

ಧರ್ಮಾತ್=ವೇದೋಕ್ತ ಧರ್ಮದಿಂದ, ಸುಖಂಚ=ಸುಖವೂ, ಜ್ಞಾನಂಚ=ಜ್ಞಾನವೂ, ಜ್ಞಾನಾತ್=ಜ್ಞಾನದಿಂದ, ಮೋಕ್ಷಃ=ಮುಕ್ತಿಯು=ಅಧಿಗಮ್ಯತೆ=ಪ್ರಾಪ್ತವಾಗುತ್ತದೆ.

ಧರ್ಮವು ಮೋಕ್ಷಕ್ಕೆ ಸಾಕ್ಷಾತ್ ಸಾಧನವಾಗುತ್ತದೆಂದು ಹೇಳುವದಿಲ್ಲ. ಕಿಂತು ಧರ್ಮವು ಪರಂಪರಾ ಸಾಧನದಿಂದ ಜ್ಞಾನದ್ವಾರಾ ಮೋಕ್ಷಕ್ಕೆ ಸಾಧನವಾಗಿರುತ್ತದೆಂದು ಹೇಳುವಲ್ಲಿ ಈ ಸ್ಮೃತಿಯ ತಾತ್ಪರ್ಯವಿರುತ್ತದೆ. ಹೇಗಂದರೆ, ನಿತ್ಯಕರ್ಮಗಳ ಅನುಷ್ಠಾನದಿಂದ ಅದೃಷ್ಟರೂಪ ಧರ್ಮದ ಉತ್ಪತ್ತಿಯು ಆಗುವದು. ಆದರಿಂದ ಪಾಪ ನಾಶವಾಗುವದು. ಅದ್ದರಿಂದ ವಿವೇಕ ;ಸಾಮರ್ಥ್ಯರೂಪ ಚಿತ್ತಶುದ್ಧಿಯಾಗುವದು. ಅದರಿಂದ ಸಂಸಾರವು ಅನಿತ್ಯಾದಿ ದೋಷಗಳಿಂದ ಕೂಡಿದ್ದೆಂಬ ಯಥಾರ್ಥ ಜ್ಞಾನವಾಗುತ್ತದೆ. ಅದರಿಂದ ವೈರಾಗ್ಯವು, ಬಳಿಕ ಮೋಕ್ಷಾಪೇಕ್ಷೆಯು. ಅದರಿಂದ ಸರ್ವ ಕರ್ಮಗಳ ತ್ಯಾಗ,, ಅನಂತರ ಯೋಗಾಭ್ಯಾಸ, ಅದರಿಂದ ಚಿತ್ತೇಕಾಗ್ರತೆಯು. ಅನಂತರ ತತ್ವಮಸ್ಯಾದಿ ವಾಕ್ಯಾರ್ಥ ಪರಿಜ್ಞಾನವು. ಅದರಿಂದ ಅವಿದ್ಯಾ ನಾಶವು. ಬಳಿಕ ಸ್ವರೂಪಾವಸ್ಥಿತಿ ಮೋಕ್ಷವು. ಹೀಗೆ ಧರ್ಮವು ಪರಂಪರಾ ಸಾಧನದಿಂದ ಮುಕ್ತಿಗೆ ಕಾರಣವಾಗಿರುವದು. ಸಾಕ್ಷಾತ್‌ವಲ್ಲ. ಹೀಗೆ, ಸುರೇಶ್ವರಾಚಾರ್ಯರು ನೈಷ್ಕರ್ಮ್ಯ ಸಿದ್ಧಿಯಲ್ಲಿ ಹೇಳಿದ್ದಾರೆ. ಅದೇ ವಿಷಯವನ್ನು ಶ್ರೀ ಮನ್ನಿಜಗುಣರು ಕೈವಲ್ಯಪದ್ಧತಿ ಜ್ಞಾನಪ್ರತಿಪಾದನ ಸ್ಥಳದ ನಾಲ್ಕನೇ ಪದ್ಯದಲ್ಲಿಯೂ ಹೇಳಿರುವರು.

ಮೇಲಿನ ಅರ್ಧಶ್ಲೋಕವನ್ನು ನಾವು ಬಲ್ಲವರ ಮುಖದಿಂದ ಕೇಳಿ ಬರೆದಿರುತ್ತೇವೆ. ಸ್ಮೃತಿಗ್ರಂಥಗಳ ಸಹಾಯವಿಲ್ಲದ್ದರಿಂದ ಬಿಟ್ಟಿದ್ದೇವೆ. ವಾಚಕ ಮಹಾಶಯರು ಪ್ರಯತ್ನ ಮಾಡಿ ಶೋಧಮಾಡಬಹುದು; ನಮಗೆ ತಿಳಿಸಿದರೆ ಪುನರ್ಮುದ್ರಣದಲ್ಲಿ ಸರಿಪಡಿಸುತ್ತೇವೆ.

**೭ ಸಂ-೫ ಸೂ-೧ ಪ "ನಕರ್ಮಣಾ" ಕೈ-೧-೨-**

ಕರ್ಮ, ಪ್ರಜಾ, ಧನಾದಿಗಳಿಂದ ಮೋಕ್ಷವಾಗುವದಿಲ್ಲ. ಶ್ರದ್ಧಾ, ಭಕ್ತಿ, ವೈರಾಗ್ಯ, ಧ್ಯಾನಗಳಿಂದ ಬ್ರಹ್ಮಜ್ಞಾನ ಪ್ರಾಪ್ತಿ ದ್ವಾರಾ ಮೋಕ್ಷವಾಗುತ್ತದೆಂದು ಈ ಮಂತ್ರವು ಹೇಳುತ್ತದೆ.

**"ತಸ್ಮೈಸ ಹೋವಾಚ ಪಿತಾಮಹಶ್ಚ ಶ್ರದ್ಧಾಭಕ್ತಿ ಧ್ಯಾನಯೋಗಾದವೈಹಿ। ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೈನೈಕೇ ಅಮೃತತ್ವಮಾನಶುಃ"**

**ಟೀಕಾ:**- ತಸ್ಮೈ=ಋಗ್ವೇದ ಆಚಾರ್ಯನಾದ ಅಶ್ವಲಾಯನ ನಾಮಕ ಬ್ರಹ್ಮ ವಿದ್ಯಾರ್ಥಿಯಾದ ಶಿಷ್ಯನಗೋಸ್ಕರ, ಸಃ=ಆ, ಪಿತಾಮಹಃ=ಜಗದೊಡೆಯನೂ ಸರ್ವಜ್ಞನೂ, ಗುರುವೂ, ಆದ ಬ್ರಹ್ಮದೇವನು. ಹ=ನಿಶ್ಚಯವಾಗಿ, ಉವಾಚ=ಹೇಳತಕ್ಕವನಾದನು. ಅಂದರೆ (ಉಪೇಕ್ಷಾ ಮಾಡಲಿಲ್ಲೆಂಬ ಭಾವವು.) ಶ್ರದ್ಧಾ=ಆಸ್ತಿಕ್ಯ ಬುದ್ಧಿ, ಭಕ್ತಿ=ಹಲವು ವಿಧದಿಂದ ಅದನ್ನೆ ಭಜಿಸೋಣ, ಧ್ಯಾನ=ವಿಜಾತಿ ವೃತ್ತಿಗಳ ತಿರಸ್ಕಾರ ಪೂರ್ವಕ ಸಜಾತೀಯ ವೃತ್ತಿಗಳ ಪ್ರವಾಹವನ್ನು ಬೆಳಿಸುವಿಕೆ, ಯೋಗಾತ್=ಇವುಗಳ ಸಂಬಂಧದಿಂದ, ಅವೇಹಿ=ತಿಳಿ, ಬ್ರಹ್ಮವು ವಾಕ್ಕುಮನಸ್ಸಾದಿಗಳಿಗೆ ಅತೀತವಾಗಿರುವದು. ಅಂಥಾ ಬ್ರಹ್ಮವನ್ನು ಬ್ರಹ್ಮವಿದ್ಯೆಯಿಂದ ಸಾಕ್ಷಾತ್ ಹೇಳುವದಕ್ಕೆ ಶಕ್ಯವಿಲ್ಲ. ಆದ್ದರಿಂದ ಶ್ರದ್ಧಾದಿ ಸಾಧನಗಳಿಂದ ಕೂಡಿರಬೇಕು. ಇಷ್ಟೇ ಅಲ್ಲ. ಈ ಶ್ರದ್ಧಾದಿಗಳು ಬ್ರಹ್ಮ ವಿದ್ಯೆಗೆ ಸಾಧನವಾದಂತೆ, ವೈರಾಗ್ಯರೂಪ ಸಂನ್ಯಾಸವಾದರೂ ಬೇಕೆಂದು ಹೇಳುತ್ತಾನೆ. ನಕರ್ಮಣಾ=ಶ್ರೌತ ಸ್ಮಾರ್ತ ರೂಪ ಕರ್ಮಗಳಿಂದಲೂ ಮೋಕ್ಷವಾಗುವದಿಲ್ಲ, ನ ಪ್ರಜಯಾ=ಪುತ್ರರನ್ನು ಪಡೆಯುವದರಿಂದಲೂ ಆಗುವದಿಲ್ಲ. ನಧನೇನ=ದೈವ ಸಂಬಂಧವಾದ ಮನುಷ್ಯ ಸಂಬಂಧವಾದ ದ್ರವ್ಯದಿಂದಲೂ ಆಗುವದಿಲ್ಲ. ತ್ಯಾಗೇನ=ಕರ್ಮ ಪ್ರಜಾಧನಾದಿಗಳನ್ನು ತ್ಯಜಿಸಿ, ಪರಮಹಂಸರೂಪ ಆಶ್ರಮ ವೈರಾಗ್ಯದಿಂದಲೇ, ಏಕೆ=ಸಾಂಪ್ರದಾಯವನ್ನು ಬಲ್ಲ ಕೆಲರು ಮಹಾತ್ಮರು, ಅಮೃತತ್ವಂ=ಅವಿದ್ಯಾದಿ ಮರಣಭಾವ ರಹಿತವಾದ ಮೋಕ್ಷವನ್ನು, ಆನಶುಃ=ಹೊಂದಿದರು. ಆ ಬ್ರಹ್ಮರೂಪನೇ ನಾವೆಂದು ತಿಳಿದರು.

ಪದ ಪದಾರ್ಥಗಳನ್ನು ಹೇಳುವಲ್ಲಿಯೇ ತಾತ್ಪರ್ಯವನ್ನು ಕಾಣಿಸಿದ್ದರಿಂದ ಬೇರೆ ಬರೆಯುವದನ್ನು ಬಿಟ್ಟಿದ್ದೇವೆ.

---

## ೭ ಸಂ-೬ ಸೂ-೧೦ ಪ "ಆತ್ಮರತಿ" ಛಾಂ ೭-೨೫-೨

ಸರ್ವತ್ರ ಆತ್ಮಸಾಕ್ಷಾತ್ಕಾರವುಳ್ಳ ವಿದ್ವಾಂಸನು ಆತ್ಮನನ್ನು ಕುರಿತು; ಮನನ ನಿಧಿ ಧ್ಯಾಸನಮಾಡುವದರಿಂದ ಆತ್ಮನಲ್ಲಿಯೇ ರತಿಯುಳ್ಳವನಾಗಿಯೂ, ಆತ್ಮ ಜ್ಞಾನ ನಿಮಿತ್ತದಿಂದ ಕ್ರೀಡಾವುಳ್ಳವನಾಗಿಯೂ, ಆತ್ಮನಲ್ಲಿ ಚಿತ್ತವೃತ್ತಿ ಸಂಯೋಗ ನಿಮಿತ್ತದಿಂದ ಮಿಥುನಾನಂದವುಳ್ಳವನಾಗಿಯೂ, ಶಬ್ದಾದಿವಿಷಯ ನಿಮಿತ್ತವಿಲ್ಲದೆ ಆತ್ಮನಿಮಿತ್ತ ಮೂಲಕನಾದ ಆನಂದವುಳ್ಳವನಾಗಿಯೂ, ಇರುವನು, ಈ ಲಕ್ಷಣಾತ್ಮಕ ವಿದ್ವಾಂಸನು ಜೀವಂತನಿರುವಾಗಲೇ ಸ್ವರೂಪ ಸಾಮ್ರಾಜ್ಯದ ಮೇಲೆ ಪಟ್ಟಾಭಿಷಿಕ್ತನಾಗಿರುವನು. ದೇಹಪಾತವಾದಾಗ್ಯಾದರೂ ಸ್ವಯಮೇವ ಪ್ರಕಾಶಮಾನವೇ ಆಗಿರುವನು. ಸಕಲ ಲೋಕಗಳಲ್ಲಿಯೂ ಸ್ವತಂತ್ರನಾಗಿರುವನು

ಹೀಗೆ ತಿಳಿಯದಿರುವ ಭೇದದರ್ಶಿಯು ಪರಿಚ್ಛಿನ್ನ ನಾಶವಂತ ಫಲವನ್ನು ಹೊಂದು ತ್ತಾನೆಂದು ಈ ಶ್ರುತಿಯು ವಿಶೇಷವಾಗಿ ಜ್ಞಾನಿಯ ಸ್ಥಿತಿಯನ್ನು ವರ್ಣನೆ ಮಾಡಿರುತ್ತದೆ.

"ಅಥಾತ ಆತ್ಮಾದೇಶ ಏವಾಽಽತ್ಮೈವಾಧಸ್ತಾದಾತ್ಮೋಪರಿಷ್ಟಾ ದಾತ್ಮಾ ಪಶ್ಚಾದಾತ್ಮಾ ಪುರಸ್ತಾದಾತ್ಮಾ ದಕ್ಷಿಣತ ಆತ್ಮೋತ್ತರತ ಆತ್ಮೈ ವೇದಂ ಸರ್ವಮಿತಿ ಸವಾಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾ ನನ್ನಾತ್ಮರತಿ ರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಃ ಸ ಸ್ವರಾಡ್‌ಭವತಿ ತಸ್ಯಸರ್ವೇಷು ಲೋಕೇಷು ಕಾಮಚಾರೋಭವತಿ। ಅಥಯೇಽನ್ಯಥಾಽತೋ ವಿದುರನ್ಯರಾಜಾನಸ್ತೇ ಕ್ಷಯ್ಯಲೋಕಾಭವಂತಿ ತೇಷಾಂ ಸರ್ವೇಷು ಲೋಕೇಷ್ವಕಾಮಚಾರೋ ಭವತಿ"

ಟೀಕಾ:- ಅಥ=ಬಳಿಕ, ಅತಃ=ಅದರಿಂದ, ಆತ್ಮಾದೇಶಃ ಏವ=ಆತ್ಮೋಪ ದೇಶವು ಹೇಳಲ್ಪಡುತ್ತದೆ, ಅಧಸ್ತಾತ್=ಕೆಳಗೂ, ಆತ್ಮೈವ = ಆತ್ಮಸ್ವರೂಪವೇ, ಉಪರಿಷ್ಟಾತ್=ಮೇಲೆಯೂ, ಆತ್ಮಾ=ಆತ್ಮನೇ, ಪಶ್ಚಾತ್=ಹಿಂದೆಯೂ, ಆತ್ಮಾ= ತಾನೇ, ಪುರಸ್ತಾತ್=ಮುಂದೆಯೂ, ಆತ್ಮಾ=ತಾನೇ, ದಕ್ಷಿಣತಃ = ದಕ್ಷಿಣಕ್ಕೂ, ಆತ್ಮಾ=ತಾನೇ, ಉತ್ತರತಃ = ಉತ್ತರಕ್ಕೂ, ಆತ್ಮಾ = ತಾನೇ, ಇದಂ ಸರ್ವಂ = ಈ ಕಾಣುವ ಜಗತ್ತು, ಆತ್ಮೈವ=ತಾನೇಯೇ, ಸವಾಏಷಃ=ಅಂಥಾ ಜ್ಞಾನಿಯು, ಏವಂ=ಈ ರೀತಿ, ಪಶ್ಯನ್=ಅರಿಯುವಂಥವನಾಗಿ, ಏವಂ = ಪೂರ್ಣನಾಗಿಯೇ, ಮನ್ವಾನಃ = ಮನನಮಾಡುವಂಥವನಾಗಿ, ಏವಂ=ಹೀಗೆಯೇ, ವಿಜಾನನ್=ನಿಧಿ ಧ್ಯಾಸನವುಳ್ಳವನಾಗಿ, ಆತ್ಮರತಿ=ವ್ಯವಹಾರ ಕಾಲಕ್ಕಾದರೂ ಆತ್ಮನಲ್ಲಿಯೇ ಪ್ರೀತಿ ಯುಳ್ಳವನಾಗಿಯೂ, ಆತ್ಮಕ್ರೀಡಃ = ಆತ್ಮಜ್ಞಾನೋಪದೇಶವನ್ನು ಮಾಡುತ್ತಾ ಆತ್ಮನಲ್ಲಿಯೇ ಕ್ರೀಡೆವುಳ್ಳವನಾಗಿಯೂ, ಆತ್ಮಮಿಥನಃ = ಸವಿಕಲ್ಪ ಸಮಾಧಿ ಕಾಲಕ್ಕೆ ಆತ್ಮನೊಡನೆ ಸಲ್ಲಗ್ನ ಚಿತ್ತವುಳನಾಗಿಯೂ, ಆತ್ಮಾನಂದಃ = ನಿರ್ವಿಕಲ್ಪ ಸಮಾಧಿ ಕಾಲಕ್ಕೆ ಆತ್ಮನ ನಿಜಾನಂದ ಆವಿರ್ಭೂತವುಳ್ಳವನಾಗಿಯೂ ಇರುವನು, ಸಃ=ಅವನು, ಸ್ವರಾಟ್ = ಸ್ವಯಮೇವ ವಿರಾಜಿಸುವನು, ಭವತಿ = ಆಗುತ್ತಾನೆ, ತಸ್ಯ=ಅವನಿಗೆ, ಸರ್ವೇಷು=ಎಲ್ಲ, ಲೋಕೇಷು=ಲೋಕಗಳಲ್ಲಿ, ಕಾಮಚಾರಃ= ಪ್ರತಿಬಂಧಕರಾಹಿತ್ಯವು, ಭವತಿ=ಆಗುತ್ತದೆ, ಅಥ = ಬಳಿಕ, ಯೇ = ಯಾರು, ಅನ್ಯಥಾ=ಬೇರೆಯಾಗಿ, ವಿದುಃ=ತಿಳಿಯುವರು, ಅತಃ=ಅದರಿಂದ, ತೇ=ಅವರು, ಅನ್ಯ ರಾಜಾನಃ=ಬೇರೆ ಸ್ವಾಮಿಯುಳ್ಳವರಾಗಿ, ಕ್ಷಯ್ಯಲೊಕಾಃ = ಅನಿತ್ಯಗಳಾದ ಲೋಕವುಳ್ಳವರು, ಭವಂತಿ = ಆಗುತ್ತಾರೆ, ತೇಷಾಂ = ಅವರಿಗೆ, ಸರ್ವೇಷು ಲೋಕೇಷು=ಎಲ್ಲ ಲೋಕಗಳಲ್ಲಿ, ಅಕಾಮಚಾರಃ=ಅಸ್ವತಂತ್ರತೆಯು (ದುಃಖವು), ಭವತಿ=ಆಗುತ್ತದೆ.

**ತಾತ್ಪರ್ಯ:**–ಅವಿವೇಕಿಗಳಾದ ಜನರು ದೇಹಾದಿ ಸಂಘಾತವನ್ನೇನಾನೆಂದು ತಿಳಿಯುವರು, ಹೀಗೆ ಜ್ಞಾನಿಗಳು ತಿಳಿಯುವದಿಲ್ಲ, ಹೇಗೆಂದರೆ-ದೇಹಕ್ಕೆ ಭಿನ್ನನಾಗಿಯೂ ಸದ್ರೂಪನಾಗಿಯೂ ಶುದ್ಧವ್ಯಾಪಕನಾಗಿರುವನೆಂದು ಹೇಳಲ್ಪಡುತ್ತದೆ. ಆದ್ದರಿಂದ ನಾಲ್ಕು ದಿಕ್ಕುಗಳಲ್ಲಿಯೂ **ಮೇಲೆಯೂ** ಕೆಳಗೂ ಆಕಾಶದಂತೆಪೂರ್ಣವಾದ ಆತ್ಮತತ್ವವನ್ನೇ ಕಾಣುವರು. ಬೇರೆ ಏನೂ ಕಾಣುವದಿಲ್ಲ. ಈರೀತಿ ಜ್ಞಾನಿಯು ಮನನ ನಿಧಿಧ್ಯಾನಗಳನ್ನು ಮಾಡುತ್ತಾ ಆತ್ಮನಲ್ಲಿಯೇಪ್ರೀತಿಯುಳ್ಳವನಾಗಿರುತ್ತಾನೆ. **ಅದರಿಂದ ಆತ್ಮರತಿ** ಯೆನಿಸುವನು. ಲೋಕದಲ್ಲಿ ಅಜ್ಞಾನಿಯು ಸ್ತ್ರೀಯರಿಂದ ಗೆಳೆಯರಿಂದ ಕ್ರೀಡಿಸುತ್ತಾನೆಂದು ಕಂಡುಬರುವದು. ಅದರಂತೆ ಜ್ಞಾನಿಯು ಕ್ರೀಡಿಸುವದಿಲ್ಲ. ಮತ್ತೇನಂದರೆ. ಆತ್ಮನ ವಿಜ್ಞಾನ ನಿಮಿತ್ತವಾಗಿಯೇ **ಕ್ರೀಡೆಯು** ಆಗುತ್ತದೆ. ಆದ್ದರಿಂದ **ಆತ್ಮಕ್ರೀಡಾನು** ಅಜ್ಞಾನಿಗಳಿಗೆ ( ಗ್ರಾಮ್ಯಧರ್ಮ ) ಮಿಥುನದಿಂದ ಉತ್ಪನ್ನವಾದ ಸುಖವು ಆಗುತ್ತದೆ. ಅಂಥಾ ಸುಖವು, ಜ್ಞಾನಿಗೆ ದ್ವಂದರೂಪ ಮಿಥುನವಿಲ್ಲದಿದ್ದರೂ, ಪ್ರಾಪ್ತವಾಗುತ್ತದೆ. ಆದ್ದರಿಂದ **ಆತ್ಮಮಿಥುನನು.** ಹಾಗೇ ಶಬ್ದಾದಿ ವಿಷಯಗಳ ನಿಮಿತ್ತದಿಂದ ಆನಂದವು ಅಜ್ಞಾನಿಗಳಿಗೆ ತೋರುತ್ತದೆ. ಅವರಂತೆ ಜ್ಞಾನಿಗೆ ಅಲ್ಲ. ಮತ್ತೇನಂದರೆ, ಆತ್ಮನಿಮಿತ್ತವಾಗಿಯೇ ಅಂಥಾ ಸುಖವು ಸರ್ವದಾ ಇರುತ್ತದೆ. ದೇಹಸಂಬಂಧಿ ಬಾಹ್ಯ ವಿಷಯ ಭೋಗಗಳ ನಿರಪೇಕ್ಷನಾಗಿರುವನೆಂಬ ಭಾವವು. ಆದ್ದರಿಂದ **ಆತ್ಮಾನಂದನು.** ಈ ಲಕ್ಷಣಾತ್ಮಕ ಜ್ಞಾನಿಯು ಜೀವಿಸಿರುವಾಗಲೇ ಸ್ವಾರಾಜ್ಯದ ಮೇಲೆ ಪಟ್ಟಾಭಿಷಿಕ್ತನಾಗಿರುವನು. ದೇಹವು ಪಾತವಾದ ಮೇಲಾದರೂ, ಅಜ್ಞಾನಿಯಂತೆ ಬೇರೊಂದು ದೇಹವನ್ನು ಹೊಂದದೆ ಸ್ವಯಂಪ್ರಕಾಶರೂಪನಾಗಿರುತ್ತಾನೆ. ಆದ್ದರಿಂದಲೇ ಅವನಿಗೆ ಎಲ್ಲ ಲೋಕಗಳಲ್ಲಿ **ಸ್ವತಂತ್ರವು** (ಸುಖವು) ಆಗುತ್ತದೆ. ಅಂದರೆ ಪೂರ್ಣಾತ್ಮರೂಪದಿಂದ ಸರ್ವಲೋಕಗಳ ಪ್ರತ್ಯಗಾತ್ಮನಾದ್ದರಿಂದ ಸರ್ವಸುಖವುಳ್ಳವನೂ ಸ್ವತಂತ್ರನೂ ಆಗಿರುವನೆಂಬ ಭಾವವು. ಯಾರು ಹೀಗೆ ತಿಳಿಯದೆ ಇದಕ್ಕೆ ವಿರುದ್ಧವಾಗಿ ಪರಿಚ್ಛಿನ್ನವಾದ ದೇಹಾತ್ಮಭಾವವುಳ್ಳವರಾಗಿರುವರೋ; ಅವರು ಈಶ್ವರನಿಂದ ಪ್ರೇರಿಸಲ್ಪಟ್ಟವರಾಗಿ ಜನ್ಮಾಂತರಗಳನ್ನು ಹೊಂದುತ್ತಾ, ಅನಿತ್ಯಲೋಕಗಳನ್ನು ಹೊಂದುವರು. ಅವರಿಗೆ ಎಲ್ಲ ಲೋಕಗಳಲ್ಲಿ **ಸ್ವತಂತ್ರತೆ** ಇರುವದಿಲ್ಲ. ಕಿಂತು ಪರಾಧೀನರಾಗಿರುವರು. ಹೀಗೆ ಈ ಶ್ರುತಿಗೆ ಶಾಂಕರ ಭಾಷ್ಯಾರ್ಥವಿರುವದು. ಆದರೆ ಈ ಶ್ರುತಿಯಲ್ಲಿರುವ 'ಆತ್ಮರತಿ' ಎಂಬ ಪದಕ್ಕೆ ತೀವ್ರಪ್ರಾರಬ್ಧವುಳ್ಳವನು ಪಶುವಿನಂತೆಂದೂ, 'ಆತ್ಮಕ್ರೀಡಃ' ಎಂಬಲ್ಲಿ ಮಧ್ಯಪ್ರಾರಬ್ಧವುಳ್ಳವನು ಬಾಲಕನಹಾಗೆಂದೂ, 'ಆತ್ಮಮಿಥುನ' ಎಂಬಲ್ಲಿ ಮಂದಪ್ರಾರಬ್ಧವುಳ್ಳವನು ಸ್ತ್ರೀ ಪುರುಷರ ಸಂಯೋಗದಂತೆಂದೂ, 'ಆತ್ಮಾನಂದ' ಎಂಬಲ್ಲಿ ಸುಪ್ತಪ್ರಾರಬ್ಧವುಳ್ಳವನು ಸುಪ್ತನಂತೆ ಅಥವಾ ಮುಕ್ತನಂತೆಂದೂ, **ಶ್ರೀಮದ್ವಿದ್ಯಾರಣ್ಯ**

ಸ್ವಾಮಿಗಳು ಅನುಭೂತಿ ಪ್ರಕಾಶನಾಮಕ ಗ್ರಂಥದಲ್ಲಿ ಪ್ರಾರಬ್ಧವನ್ನು ನಾಲ್ಕು ಪ್ರಕಾರವಾಗಿ ವಿಭಾಗಿಸುತ್ತಾ ನಾಲ್ಕು ದೃಷ್ಟಾಂತಗಳನ್ನು ಕೊಟ್ಟು ವಿಶದವಾಗಿ ಹೇಳಿರುವರು.

ಜೀವನ್ಮುಕ್ತೋ ರತಿಕ್ರೀಡಾ ಮಿಥುನಾನಂದ ಲಕ್ಷಣಾನ್ ।
ವ್ಯವಹಾರಾನ್ ಕ್ರಮೇಣೈತಿ ಪ್ರಾರಬ್ಧಸ್ಯಾನುಸಾರತಃ ॥೧॥
ಸುಖ ದುಃಖ ಪ್ರದಾರಬ್ಧ ಕರ್ಮವೇಗ ಚತುರ್ವಿಧಃ ।
ತೀವ್ರೋ ಮಧ್ಯ ಮಂದಸುಪ್ತಾ ಶ್ಚೇತಿ ತಸ್ಯ ವಿಧಾಮತಃ ॥೨॥
ತೀವ್ರವೇಗೆ ಸ ಪಶ್ವಾದಿ ತುಲ್ಯೋಽನಾತ್ಮಾನಮೀಕ್ಷತೆ ।
ಆತ್ಮನಿ ಪ್ರೀತಿರಸ್ತೀತಿ ಭವೇದಾತ್ಮರತಿಸ್ತದಾ ॥೩॥
ಮಧ್ಯ ವೇಗೇತು ಭೋಗಾನಾಂ ಪ್ರಾಧಾನ್ಯಂ ಸ ಯದಾ ತದಾ ।
ಕೃತ್ವಾವಕಾಶ ಮಾತ್ಮಾನಂ ವದನ್ ಕ್ರೀಡತಿ ಬಾಲವತ್ ॥೪॥
ಮಂದವೇಗೆ ತಿರಸ್ಕೃತ್ಯ ಭೋಗಾನ್ ಪ್ರಾಯೇಣ ಚಿಂತಯನ್ ।
ಧಿಯಾತ್ಮಾನಂ ದ್ವಂದಸುಖಂ ಪ್ರಾಪ್ನೋತಿ ಮಿಥುನೇಯಥಾ॥೫॥
ಸುಪ್ತವೇಗೇತಿ ನಿರ್ವಿಘ್ನೋ ನಿರ್ವಿಕಲ್ಪ ಸಮಾಧಿ ಭಾಕ್ ।
ಆತ್ಮಾನಂದಾವಶೇಷ ಸನ್ನಾಸ್ತೆ ಮುಕ್ತವದದ್ವಯಃ ॥೬॥

ಈ ರೀತಿ ಜ್ಞಾನೋತ್ತರ ಕಾಲದಲ್ಲಿ ಜ್ಞಾನಿಯು ಪ್ರಾರಬ್ಧ ಮೂಲಕ ಜೀವಿಸಿಕೊಂಡಿರುವನು. ಆ ಪ್ರಾರಬ್ಧವನ್ನು ಈ ಶ್ರುತಿಯ ಆಧಾರದ ಮೇಲಿಂದ ನಾಲ್ಕು ಪ್ರಕಾರ ವಿಭಾಗಿಸಿದರು. ಅಂದರೆ ಜ್ಞಾನಿಗೆ ಒಂದು ಸಮಾಧಿ ಅವಸ್ಥೆ, ಮತ್ತೊಂದು ಉತ್ಥಾನ ಅವಸ್ಥೆ, ಹೀಗೆ ಎರಡು ಅವಸ್ಥೆಗಳು ಇರುತ್ತವೆ. ಉತ್ಥಾನ ಅವಸ್ಥೆಯಲ್ಲಿ ಲೌಕಿಕ ವ್ಯವಹಾರವೆಂದೂ ವೈದಿಕ ವ್ಯವಹಾರವೆಂದೂ ಎರಡು ಪ್ರಕಾರ ವಿಭಾಗಿಸಿದರು. ಸ್ನಾನಪಾನ ವಾಣಿಜ್ಯಾದಿ ಲೌಕಿಕ ವ್ಯವಹಾರಕ್ಕೆ ತೀವ್ರ ಪ್ರಾರಬ್ಧವೆಂದೂ, ಶಾಸ್ತ್ರ ಪ್ರತಿಪಾದನರೂಪ ವೈದಿಕ ವ್ಯವಹಾರಕ್ಕೆ ಮಧ್ಯವೆಂದೂ ಹೇಳಿ, ಬಳಿಕ ಸಮಾಧಿ ಅವಸ್ಥೆಯಲ್ಲಿ ಸವಿಕಲ್ಪ ಸಮಾಧಿಯೆಂತಲೂ, ನಿರ್ವಿಕಲ್ಪ ಸಮಾಧಿಯೆಂತಲೂ ಎರಡು ರೀತಿ ವಿಭಾಗಿಸಿದರು. ಸವಿಕಲ್ಪ ಸಮಾಧಿಗೆ ಮಂದ ಪ್ರಾರಬ್ಧವೆಂದೂ, ನಿರ್ವಿಕಲ್ಪಸಮಾಧಿಗೆ ಸುಪ್ತಪ್ರಾರಬ್ಧವೆಂದೂ ಹೇಳಿರುವರು. ಇದೇ ಶ್ರುತಿಗೆ ಹೀಗೆಯೇ ಆತ್ಮಪುರಾಣದಲ್ಲಿ ಅರ್ಥವನ್ನು ಮಾಡಿರುವರು. ಹೇಗಂದರೆ:- ಹೇ ನಾರದ! ಈ ಲೋಕದಲ್ಲಿ ಅಜ್ಞಾನಿಯಾದ ಪುರುಷನು ನೇತ್ರಾದಿಕ ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಸರ್ವ ವ್ಯವಹಾರಗಳನ್ನು ಮಾಡುವಂಥವನಾದರೂ,ನಾನು ಮನುಷ್ಯನೆಂಬುವದನ್ನು ಮರೆಯುವದಿಲ್ಲ. ಕಿಂತು ಸಂಶಯ ವಿಪರ್ಯಯರಹಿತನಾಗಿ ನಾನು ಮನುಷ್ಯನೆಂದು ಹೇಗೆ ಅನುಭವಿಸುತ್ತಾನೋ,

ಹಾಗೇ ಯಾವ ಪುರುಷನು ಗುರುಶಾಸ್ತ್ರಗಳ ಉಪದೇಶದಿಂದ ಆ ಅಹಂಕಾರ ಉಪಾಧಿಗಳನ್ನು ಮರೆತು, ಭೂಮಾರೂಪ ಆತ್ಮನೇ ನಾನೆಂದು ಸಂಶಯ ವಿಪರೀತ ರಹಿತವಾದ ಜ್ಞಾನವನ್ನು ಪಡೆಯುತ್ತಾನೆ. ಅಂಥಾ ವಿದ್ವಾಂಸ ಪುರುಷನು ಸ್ನಾನ ಭೋಜನಾದಿಕ ಕಾಲದಲ್ಲಿಯೂ ಆನಂದಸ್ವರೂಪ ಆತ್ಮವಿಷಯದಲ್ಲಿಯೇ ಚಿತ್ತಿನ ಶಕ್ತಿರೂಪರತಿಯನ್ನು ಧಾರಣಮಾಡಿರುವಂಥವನಾಗಿದ್ದಾನೆ. ಹೇಗೆ ಕಾಮಿ ಪುರುಷನು ವಿದೇಶದಲ್ಲಿದ್ದಾಗ್ಯಾದರೂ ಚಿತ್ತದ ಶಕ್ತಿರೂಪರತಿಯನ್ನು ಯಾವಾಗಲೂ ತನ್ನ ಸ್ತ್ರೀ ವಿಷಯದಲ್ಲಿಯೇ ಇಟ್ಟಿರುವನೋ, ಹಾಗೆ, ಮತ್ತು ಆ ವಿದ್ವಾಂಸನು ವೇದಾಂತ ಶಾಸ್ತ್ರದ ಚಿಂತನ ಕಾಲದಲ್ಲಿಯಾದರೂ, ಆನಂದಸ್ವರೂಪ ಆತ್ಮವಿಷಯದಲ್ಲಿಯೇ ಕ್ರೀಡಿಸುತ್ತಾ ಇರುತ್ತಾನೆ, ಬಾಲಕನು ಬಾಲಕರ ಸಮೂಹದೊಡನೆ ಕ್ರೀಡಾ ಮಾಡುತ್ತಿರುವ ಹಾಗೆ; ಹೀಗೆ ಹೇಳುವದರಿಂದ ಈ ಅರ್ಥವು ತಿಳಿಸಲ್ಪಟ್ಟಂತೆ ಆಯಿತು, ಹೇಗಂದರೆ, ಜೀವನ್ಮುಕ್ತನಿಗೆ ಎರಡು ಪ್ರಕಾರದ ಅವಸ್ಥೆಗಳಾಗುತ್ತವೆ. ಒಂದು ಸಮಾಧಿ ಅವಸ್ಥೆ, ಮತ್ತೊಂದು ಉತ್ಥಾನ ಅವಸ್ಥೆ, ಆ ಉತ್ಥಾನ ಅವಸ್ಥೆಯಲ್ಲ್ಯಾದರೂ ಒಂದು ಭೋಜನಾದಿ ವ್ಯವಹಾರ ರೂಪ ಉತ್ಥಾನ ಅವಸ್ಥೆಯುಂಟು, ಮತ್ತೊಂದು ವೇದಾಂತ ಶಾಸ್ತ್ರರೂಪ ಚಿಂತನ ಅವಸ್ಥೆಯುಂಟು. ಸ್ನಾನ ಭೋಜನಾದಿಕ ವ್ಯವಹಾರರೂಪ ಉತ್ಥಾನ ಅವಸ್ಥೆಯಲ್ಲಿ ಆ ವಿದ್ವಾನ್ ಪುರುಷನು ಯಾವ ಆತ್ಮನ ಚಿಂತನವನ್ನು ಮಾಡುತ್ತಿರುವನೋ, ಆ ಆತ್ಮಚಿಂತನವನ್ನು ಶ್ರುತಿಯು **ರತಿ—ಶಬ್ದದಿಂದ** ಪ್ರತಿಪಾದನ ಮಾಡಿರುತ್ತದೆ. ಮತ್ತೊಂದು ವೇದಾಂತ ಚಿಂತನರೂಪ ಉತ್ಥಾನ ಅವಸ್ಥೆಯಲ್ಲಿ ಆ ವಿದ್ವಾನನು ಯಾವ ಆತ್ಮನ ಚಿಂತನವನ್ನು ಮಾಡಿರುವನೋ, ಆ ಆತ್ಮ ಚಿಂತನವನ್ನು ಕುರಿತು ಶ್ರುತಿಯು, **ಕ್ರೀಡಾ** ಶಬ್ದದಿಂದ ಪ್ರತಿಪಾದನ ಮಾಡಿರುತ್ತದೆ. ಉತ್ಥಾನವಸ್ಥೆಯು ಎರಡು ಪ್ರಕಾರವಾಗಿ ಹೇಗಿರುವದೋ, ಹಾಗೆ ಸಮಾಧಿಯವಸ್ಥೆಯಾದರೂ ಎರಡು ಪ್ರಕಾರವಾಗಿರುವದು. ಒಂದು ಸವಿಕಲ್ಪ ಸಮಾಧಿಯುಂಟು. ಮತ್ತೊಂದು ನಿರ್ವಿಕಲ್ಪ ಸಮಾಧಿಯುಂಟು, . ಆ ಸವಿಕಲ್ಪ ಸಮಾಧಿಯಲ್ಲಿ ವಿದ್ವಾನನು ಯಾವ ಆತ್ಮಚಿಂತನವನ್ನು ಮಾಡುತ್ತಾನೋ ಆ ಆತ್ಮ ಚಿಂತನವನ್ನು ಕುರಿತು ಶ್ರುತಿಯು **ಮಿಥುನ**ಶಬ್ದದಿಂದ ಕಥನಮಾಡಿರುತ್ತದೆ. ಮತ್ತು ನಿರ್ವಿಕಲ್ಪಸಮಾಧಿಯಲ್ಲಿ ಆ ವಿದ್ವಾಂಸನು ಯಾವ ಆತ್ಮನನ್ನು ಚಿಂತನ ಮಾಡಿರುವನೋ, ಆ ಚಿಂತನವನ್ನು ಕುರಿತು ಶ್ರುತಿಯು **ಆನಂದ**ವೆಂಬ ಈ ಶಬ್ದದಿಂದ ಕಥನ ಮಾಡಿರುತ್ತದೆ. ಅಲ್ಲಿ ಕ್ರೀಡಾರತಿ ಈ ಎರಡು ಶಬ್ದಗಳಿಗೆ ಅರ್ಥವು ಪೂರ್ವದಲ್ಲಿ ಮಾಡಲ್ಪಟ್ಟಿತು. ಈಗ ಮಿಥುನ ಆನಂದ ಪದಗಳೆರಡಕ್ಕೆ ಅರ್ಥವು ಮಾಡಲ್ಪಡುತ್ತದೆ. ಆ ಮಿಥುನೀಭಾವವು ಹೇನಾರಥ ! ಈ ಲೋಕದಲ್ಲಿ ಗೃಹಸಂಬಂಧಿ ಸರ್ವ ವ್ಯವಹಾರವನ್ನು ತ್ಯಾಗ ಮಾಡಿ, ಏಕಾಂತ ದೇಶದಲ್ಲಿದ್ದ ಸ್ತ್ರೀಪುರುಷರಿಬ್ಬರ ಯಾವ ಮಿಥುನೀ ಭಾವವುಂಟೋ, ಆ ಮಿಥುನೀ ಭಾವವು ಅವರಿಬ್ಬರಿಗೆ ಪರಸ್ಪರ ವಿಷ

ಯಾನಂದಕ್ಕೆ ಹೇಗೆ ಹೇತುವಾಗಿರುತ್ತದೆಯೋ, ಹಾಗೇ ಯಾವಜ್ಞಾನಿಯು ಧ್ಯಾತಾ ಧ್ಯೇಯ ಭಾವದಿಂದ ಯಾವ ಆತ್ಮನಲ್ಲಿ ಮಿಥುನೀ ಭಾವವುಂಟೋ ಆ ವಿದ್ವಾಂಸನಿಗೆ ಸವಿಕಲ್ಪ ಸಮಾಧಿ ಕಾಲದಲ್ಲಿ ಆನಂದಕ್ಕೆ ಹೇತುವಾಗಿರುತ್ತದೆ. ಮತ್ತು ಹೇ ನಾರದನೇ ! ಈ ಲೋಕದಲ್ಲಿ ಗಾಂಧರ್ವಾದಿ (ಗಾಯನಾದಿ) ವಿಷಯದ ಪ್ರಾಪ್ತಿನಂತರ ಪರೀಕ್ಷಿಕ ಪುರುಷರಿಗೆ; ಯಾವ ಆನಂದರೂಪ ಫಲದ ಅನುಭವವುಂಟೋ ಆ ಆನಂದದ ಅನುಭವವು ಹೇಗೆ ನಿರ್ವಿಕಲ್ಪವೇ ಆಗಿರುತ್ತದೆಯೋ, ಹಾಗೆ ಯಾವ ವಿದ್ವಾಂಸನಿಗೆ ನಿರ್ವಿಕಲ್ಪ ಸಮಾಧಿ ಕಾಲದಲ್ಲಿ ಯಾವ ನಿರತಿಶಯ ಆನಂದದ ಅನುಭವವುಂಟೋ, ಆ ಆನಂದದ ಅನುಭವವಾದರೂ ಧ್ಯಾತಾ, ಧ್ಯಾನ, ಧ್ಯೇಯ ಇತ್ಯಾದಿಕತ್ರಿಪುಟರೂಪ ವಿಕಲ್ಪಗಳಿಂದ ರಹಿತವೇ ಆಗಿರುತ್ತದೆ. ಹೀಗೆ ಆತ್ಮ ಪುರಾಣದ ಕರ್ತರಾದ ಶ್ರೀ ಮದ್ವಿದ್ಯಾರಣ್ಯರ ಗುರುಗಳಾದ ಶಂಕರಾನಂದ ಸ್ವಾಮಿಯವರು ಹೇಳಿರುವರು. ಆದ್ದರಿಂದ ಅನುಭವಸಾರದೊಳಗಿನ ತ್ರೀವ್ರಾದಿ ಪ್ರಾರಬ್ಧಪರ ಪದಗಳಿಗೂ ಉಕ್ತ ಅರ್ಥವನ್ನೇ ಮಾಡಬೇಕು. ಇಲ್ಲದಿದ್ದರೆ ಸಾಂಪ್ರದಾಯಕ ಆಚಾರ್ಯರ ಅಭಿಪ್ರಾಯಕ್ಕೆ ವಿರುದ್ಧ ಅರ್ಥ ಮಾಡುವದು ಅನರ್ಥಕ್ಕೆ ಕಾರಣವಾಗಿರುವದು. ಶ್ರುತಿಗೂ ಅದರ ಭಾಷ್ಯಕ್ಕೂ ಗುರುಪರಂಪರಾ ಅರ್ಥಕ್ಕೂ ಸರಿಯಾಗಿದ್ದು, ಅನುಭವಕ್ಕೂ ವಿರೋಧವಾಗದಂತೆ ಹೊಸದೊಂದು ಅರ್ಥವನ್ನೇ ಮಾಡಿದರೆ ಅದನ್ನು ಸ್ವೀಕರಿಸಬಹುದು. ಶ್ರುತಿಯೆಂಬ ಭೂಮಿಯ ಮೇಲೆ ಶ್ರೀ ಮಚ್ಛಂಕರಾಚಾರ್ಯರು ರತಿಕ್ರೀಡಾದಿ ಪದಗಳಿಂದ ಅಜ್ಞಾನಿ ವಿಲಕ್ಷಣ ಜ್ಞಾನಿಯಿರುವನೆಂದು ಹೇಳುತ್ತಾ ಪಾಯಾ ಹಾಕಿದರು. ಅದರ ಮೇಲಿಂದ ಶ್ರೀ ಶಂಕರಾನಂದರು ರತಿ, ಕ್ರೀಡ, ಮಿಥುನ, ಆನಂದ ಪದಗಳಿಗೆ ಕ್ರಮವಾಗಿ ಲೌಕಿಕ, ವೈದಿಕ, ಸವಿಕಲ್ಪ ನಿರ್ವಿಕಲ್ಪಗಳೆಂಬ ನಾಲ್ಕು ಅವಸ್ಥೆಗಳಿರುವವೆಂದು ದೃಷ್ಟಾಂತ ಮೂಲಕ ತಿಳಿಸಿ, ದೇವಾಲಯವನ್ನು ನಿರ್ಮಿಸಿದರು. ಬಳಿಕ ಶ್ರೀಮದ್ವಿದ್ಯಾರಣ್ಯರು ಅವುಗಳಿಗೆ ತೀವ್ರ, ಮಧ್ಯ, ಮಂದ, ಸಪ್ತಗಳೆಂಬ ಹೆಸರಿನ ಪ್ರಾರಬ್ಧಗಳುಂಟೆಂದೂ, ಅವುಗಳಿಗೆ, ಪಶು, ಬಾಲಕ, ಸುರತ, ಸುಪ್ತಿಗಳೆಂಬ ನಾಲ್ಕುದೃಷ್ಟಾಂತಗಳನ್ನು ಸರಿಪಡಿಸಿ, ಗೋಪುರವನ್ನು ಕಟ್ಟಿದರು. ಅದರ ಮೇಲೆ, ಶ್ರೀ ಮನ್ನಿಜಗುಣ ಶಿವಯೋಗಿಗಳು ತೀವ್ರಾದಿ, ಪ್ರಾರಬ್ಧ, ದೃಷ್ಟಾಂತಗಳ ಮೇಲಿಂದ ಕ್ರಮವಾಗಿ ತಾಮಸ, ರಜ, ಸತ್ವಗುಣ, ಗುಣಗಂಧ, ಇವುಗಳ ನಿಮಿತ್ತ ಮೂಲಕ, ವಿಕ್ಷಿಪ್ತ ,ಗತಾಗತ, ಸಂಶ್ಲಿಷ್ಟ, ಸ್ವಲೀನಗಳೆಂಬ ವೃತ್ತಿಗಳಿರುತ್ತವೆಂದು ಹೇಳಿ ಕಳಸವನ್ನಿಟ್ಟಿರುವರು. ಈ ರೀತಿ ಆಚಾರ್ಯರು ಶ್ರುತಿಗೂ ಶ್ರೀ ಮಚ್ಛಂಕರಾಚಾರ್ಯರ ಭಾಷ್ಯಾರ್ಥಕ್ಕೂ ವಿರೋಧವಾಗದೆ, ಸಮ್ಮತವಾದ ನವೀನ ಅರ್ಥಗಳನ್ನು ಹೇಗೆ ಕಂಡು ಹಿಡಿದು, ಮುಮುಕ್ಷುಗಳಿಗೆ ತಿಳಿಸುತ್ತಾ ಬಂದಿರುವರೋ, ಹಾಗೆ ಇದ್ದರೆ ಅದನ್ನು ಶಿರಸಾವಹಿಸಿ ಸ್ವೀಕರಿಸಬೇಕು. ಹಾಗೇ ಈ ನಾಲ್ಕು ವ್ಯತ್ಯಾತ್ಮಕ ಅವಸ್ಥೆಗಳಿಗೆ ಕ್ರಮವಾಗಿ ನಾಲ್ಕು, ಐದು, ಆರು, ಏಳು,

ಭೂಮಿಕೆಗಳನ್ನು ಸಂಬಂಧಪಡಿಸುತ್ತಾ, ಬ್ರಹ್ಮವಿತ್ತ, ಬ್ರಹ್ಮವಿದ್ವರ, ಬ್ರಹ್ಮವಿದ್ವ ರೀಯಾನ್, ಬ್ರಹ್ಮವಿದ್ವರಿಷ್ಠರೆಂದು ಹೇಳುತ್ತಾ, ಅವಸ್ಥಾ ವೃತ್ತಿಗಳ ತಾರತಮ್ಯ ಮೂಲಕ ಪರ, ಪರತರ, ಪರತಮ, ಪರತರತಮರೂಪ, ಆನಂದ ವಿಶೇಷವುಳ್ಳವ ರೆಂದೂ, ಕ್ರಮವಾಗಿ ಇಂದ್ರಜಾಲ, ಸ್ವಪ್ನ, ಮೃಗಜಲ, ಸುಪ್ತಿ. ಈ ದೃಷ್ಟಾಂತ ಗಳಂತೆ ಒಂದಕ್ಕಿಂತ ಒಂದು ಮಿಥ್ಯಾಭೂತಗಳಾಗಿ ಅವರಿಗೆ ಜಗತ್ತು ತೋರುವ ದೆಂದೂ ಅರ್ಥ ಮಾಡಬಹುದು. ಆದ್ದರಿಂದ ಒಬ್ಬರಿಗಿಂತಲೂ ಒಬ್ಬರ ಆನಂದವು ಅಧಿಕವಾಗಿರುವದೆಂಬ ಭಾವವು. ಆ ಉಕ್ತ ಕಳಸಕ್ಕೆ ಈ ಅರ್ಥರೂಪ ಬಂಗಾ ರದ ಗಿಲಿಟನ್ನು ಶ್ರೀ ಸದ್ಗುರು ಸಿದ್ಧಾರೂಢ ಸ್ವಾಮಿಗಳವರು ಮಾಡಿರುವರು. ಆದ್ದರಿಂದ ಬಹು ಸುಂದರವಾಗಿ ಈ ಶ್ರುತ್ಯರ್ಥರೂಪ ದೇವಾಲಯವು ಶೋಭಿ ಸುತ್ತಿರುವದು. ದರ್ಶನಾದಿಗಳಿಂದ ಸಂತೋಷವನ್ನು ಹೊಂದುವದೇ ನಮ್ಮಗಳ ಕರ್ತವ್ಯವಾಗಿದೆ.

**೭ ಸಂ, ೭ ಸೂ, ೧೮ ಪ. "ಜ್ಞಾತ್ವಾದಿ" ಶ್ವೇತಾ ೪-೧೬**

ಮುಮುಕ್ಷು ವ್ಯಾಪಕವಾದ ತನ್ನ ಸ್ವರೂಪವನ್ನು ತಿಳಿದು ಅವಿದ್ಯಾ ಪಾಶ ಗಳಿಂದ ಮುಕ್ತನಾಗುತ್ತಾನೆಂದು ಹೇಳುತ್ತಾರೆ.

> **"ಘೃತಾತ್ಪರಂ ಮಂಡಮಿವಾತಿ ಸೂಕ್ಷ್ಮಂ ಜ್ಞಾತ್ವಾ ಶಿವಂ ಸರ್ವ ಭೂತೇಷು ಗೂಢಂ । ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ದೇವಂ ಮುಚ್ಯತೆ ಸರ್ವ ಪಾಶೈಃ"**

**ಟೀಕಾ:-** ಘೃತಾತ=ಘಟ್ಟಿ ತುಪ್ಪಕ್ಕಿಂತಲೂ, ಪರಂ=ಶ್ರೇಷ್ಠವಾದ, ಮಂಡ ಮಿವ=ಸ್ವಾದದಂತೆ, ಅತಿ ಸೂಕ್ಷ್ಮಂ=ಅತ್ಯಂತ ಸೂಕ್ಷ್ಮವಾದ, ಸರ್ವ ಭೂತೇಷು= ಎಲ್ಲ ಭೂತಗಳಲ್ಲಿ, ಗೂಢಂ=ಅದೃಶ್ಯವಾಗಿರುವಂಥಾ ( ಆವರಣವಾಗಿರುವಂಥಾ ), ಶಿವಂ=ಮಗಳರೂಪ ಆತ್ಮನನ್ನು, ಜ್ಞಾತ್ವಾ=ತಿಳಿದು, ವಿಶ್ವಸ್ಯೈಕಂ= ಯಾವತ್ತು ಜಗತ್ತನ್ನು ಕುರಿತು, ಪರಿವೇಷ್ಟಿತಾರಂ=ವ್ಯಾಪಿಸಿದಂಥಾ, ದೇವಂ=ಸ್ವಪ್ರಕಾ ಶಾತ್ಮನನ್ನು, ಜ್ಞಾತ್ವಾ=ತಿಳಿದು, ಸರ್ವ ಪಾಶೈಃ=ಅವಿದ್ಯಾದಿ ಸಕಲ ಪಾಶಗಳಿಂದ, ಮುಚ್ಯತೆ=ಬಿಡಲ್ಪಡುತ್ತಾನೆ.

**ತಾತ್ಪರ್ಯ:-** ಕಾಶಿದ ತುಪ್ಪವು ಘಟ್ಟಿಯಾದ ಮೇಲೆ, ಅದರ ಮೇಲ್ಭಾಗ ದಲ್ಲಿ ಆ ತುಪ್ಪದ ಸಾರವು ಹೇಗೆ ವ್ಯಾಪಕವಾಗಿರುವದೋ, ಹಾಗೇ ಸ್ಥಾವರ ಜಂಗಮ ಸರ್ವ ಪ್ರಾಣಿಗಳಲ್ಲಿ ವ್ಯಾಪಕನಾದ ಮಂಗಲರೂಪ ಆತ್ಮನನ್ನು ತಿಳಿದು ಕೃತಾರ್ಥನಾಗುತ್ತಾನೆ. ವ್ಯಾಪಕನಿದ್ದ ಮೇಲೆ ಕೈಕಾಲುಗಳಂತೆ ತೋರಬೇಕಾಗಿತ್ತು? ಅಂದರೆ, ಹಾಗಲ್ಲ. ಕಿಂತು ಗೂಢನಾಗಿರುತ್ತಾನೆ. ಮಾಯಾರೂಪ ಆವರಣದಿಂದ

ಇದ್ದರೂ ಹೊಳೆದು ತೋರುವದಿಲ್ಲ. ಹಾಗಾದರೆ, ಪರಿಚ್ಛಿನ್ನನಾಗಬೇಕಾಯಿತೆಂದು ಹೇಳಿದರೆ, ಇಲ್ಲ. ಅವನು ಈ ಜಗತ್ತನ್ನೆಲ್ಲ ವ್ಯಾಪಿಸಿಕೊಂಡಿರುವನು. ಇಂಥಾ ಸ್ವಪ್ರಕಾಶಾತ್ಮನೇ ನಾನೆಂದು ತಿಳಿದು, ಅವಿದ್ಯಾ ಕಾಮ ಕರ್ಮ ಮೊದಲಾದ ಪಾಶಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ ಎಂಬ ಭಾವವು.

---

೮ ಸಂ, ೨ ಸೂ, ೩ ಪ. "ತತ್ತ್ವಮಸಿ ತ್ವಂತದಸಿ" ಪೈಂಗಲ ೨

ಭೇದ ಮತ್ತು ಪರೋಕ್ಷಭ್ರಾಂತಿಗಳ ನಿವೃತ್ಯರ್ಥವಾಗಿ ಶ್ರುತಿಯು ಜೀವಾತ್ಮ ಪರಮಾತ್ಮರುಗಳಿಗೆ ಅನ್ಯೋನ್ಯ ಐಕ್ಯವನ್ನು ಹೇಳುತ್ತದೆ.

**"ತತ್ತ್ವಮಸಿ ತ್ವಂತದಸಿ ತ್ವಂಬ್ರಹ್ಮಾಸ್ಯಹಂ ಬ್ರಹ್ಮಾಸ್ಮೀತ್ಯನುಸಂಧಾನಂ ಕುರ್ಯಾತ್"**

**ಟೀಕಾ:-** ತತ್=ಆ ಪರಮಾತ್ಮನೇ, ತ್ವಂ=ನೀನು, ಅಸಿ=ಇದ್ದಿ, ಹೀಗೆ ಹೇಳುವದರಿಂದ ಜೀವನಿಗೆ ಪರಿಚ್ಛಿನ್ನ ಭ್ರಾಂತಿ ನಿವಾರಣವಾಯಿತು. ತ್ವಂ=ನೀನು ತತ್=ಆ ಪರಮಾತ್ಮನು, ಅಸಿ=ಇದ್ದಿ, ಹೀಗೆ ಹೇಳುವದರಿಂದ ಪರೋಕ್ಷ ಭ್ರಾಂತಿಯು ನಿವಾರಣವಾಗುವದು. ಆದ್ದರಿಂದ ಶ್ರುತಿಯು ಪರಮಾತ್ಮನನ್ನು ಜೀವಾತ್ಮನಲ್ಲಿಯೂ, ಜೀವಾತ್ಮನನ್ನು ಪರಮಾತ್ಮನಲ್ಲಿಯೂ ಐಕ್ಯವನ್ನು ಹೇಳುತ್ತದೆ. ಈ ತತ್ತ್ವಮಸಿ ಮಹಾವಾಕ್ಯದರ್ಥವನ್ನು ಛಾಂದೋಗ್ಯೋಪನಿಷತ್ತಿನಲ್ಲಿ, ಉದ್ಧಾಲಕ ಮಹರ್ಷಿಗಳು; ಶ್ವೇತಕೇತುವಿನನ್ನು ಕುರಿತು ಒಂಭತ್ತು ಸಾರೆ ಉಪದೇಶವನ್ನು ಮಾಡಿರುವರು. ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುತ್ತೇವೆ. ಹೇಶ್ವೇತಕೇತು; ಈ ಸಕಲ ಜಗತ್ತು ಸದ್ರೂಪ ಬ್ರಹ್ಮಕ್ಕೆ ಭಿನ್ನವಲ್ಲ. ಅಂಥಾ ಬ್ರಹ್ಮವನ್ನು ತಿಳಿಯದಿದ್ದರೆ ನಿನಗೆ ಜೀವತ್ವವು ಬಿಡಲಾರದು.

(೧) **ಪ್ರಶ್ನೆ** ಆ ಬ್ರಹ್ಮವನ್ನು ನಾನು ಹೇಗೆ ತಿಳಿಯಲಿ?

**ಉತ್ತರ:-** ಅದು ನಿನಗೆ ಬಿನ್ನವಿಲ್ಲ ನಿನ್ನಾತ್ಮವಾಗಿದೆ. ಸುಷ್ತಿಯಲ್ಲಿ ಅಖಂಡೈಕರಸವಾದ ಬ್ರಹ್ಮವು ಸ್ವಪ್ರಕಾಶವಾಗಿ ಹೊಳೆಯುತ್ತಿರುವದು. ಅದು ನಿನ್ನ ಅನುಭವರೂಪವೇ ಹೊರ್ತು ಬೇರೆಯಲ್ಲ.

(೨) **ಪ್ರಶ್ನೆ:-** ನಾನೇ ಪರಬ್ರಹ್ಮನಾಗಿದ್ದರೆ ನನಗೆ ಸಂಸಾರವು ಪ್ರತೀತಿಯಾಗಬಾರದಾಗಿತ್ತು ತೋರುತ್ತದೆ. ಅಂದಮೇಲೆ ನಾನು ಬ್ರಹ್ಮನು ಹೇಗೆ?

**ಉತ್ತರ:-** ನಿನ್ನಲ್ಲಿ ಸಂಸಾರವು ಮನೋಪಾಧಿಯಿಂದಲೇ ತೋರುತ್ತದೆ ಹೊರ್ತು ಬೇರೆಯಿಲ್ಲ. ಆ ಸಂಸಾರವನ್ನು ನೀನು ಆರೋಪ ಮಾಡಿಕೊಂಡು ಜೀವಿ

ಯಾಗಿರುವಿ. ಈ ಮನಸ್ಸು ಜಾಗ್ರತ್ಸ್ವಪ್ನಗಳಲ್ಲಿ ಸಂಚರಿಸಿ, ಸುಖವನ್ನು ಕಾಣದೆ ಸೂತ್ರದಿಂದ ಬಂಧಿಸಲ್ಪಟ್ಟ ಪಕ್ಷಿಯಂತೆ, ಸುಷುಪ್ತಿಯಲ್ಲಿ ವಿಶ್ರಾಂತಿಗೋಸುಗ ನಿನ್ನನ್ನೇ ಹೊಂದುವದು. ಆದ್ದರಿಂದ ಸಕಲ ಪ್ರಪಂಚಕ್ಕೆ ಮೂಲಕಾರಣವಾದ ಸದ್ರೂಪ ಬ್ರಹ್ಮವೇ ನೀನಿರುವಿ. ಇಂದ್ರಿಯಗಳಿಗೆ ವಿಷಯನಾಗದ್ದರಿಂದ ಸೂಕ್ಷ್ಮರೂಪನೂ ನೀನಿರುವಿ.

(೩) ಪ್ರಶ್ನೆ- ಸುಷುಪ್ತಿಯಲ್ಲಿ ನಾನು ಸದ್ರೂಪ ಬ್ರಹ್ಮವನ್ನು ಹೊಂದಿದರೆ, ಅಲ್ಲಿ ನಾನು ಬ್ರಹ್ಮವನ್ನು ಹೊಂದಿರುವೆನೆಂಬ ಬುದ್ಧಿಯು ಯಾಕೆ ಇಲ್ಲ?

**ಉತ್ತರ:-** ಜೇನಹುಳಗಳು ನಾನಾಪುಷ್ಪಗಳ ರಸವನ್ನು ಕೂಡಿಸಿ ಹುಟ್ಟನ್ನು ಕಟ್ಟಿರುವವು. ಆ ಜೇನತುಪ್ಪದಲ್ಲಿ ಈ ತುಪ್ಪವು ಇಂಥಾ ಹೂವಿನದೇ ಎಂದು ಬೇರೆ ಮಾಡಿ ತೋರಿಸಲಿಕ್ಕೆ ಹೇಗೆ ಬರುವದಿಲ್ಲವೋ, ಹಾಗೇ ಆ ಸುಷುಪ್ತಿಯಲ್ಲಿ ಸರ್ವವೂ ಲಯವಾದ್ದರಿಂದ ತಿಳಿಯಲಿಕ್ಕೆ ಬರುವದಿಲ್ಲ.

(೪) ಪ್ರಶ್ನೆ- ನಿದ್ರೆಯಲ್ಲಿ ಬುದ್ಧಿಯಿಲ್ಲದ್ದರಿಂದ ತಿಳಿಯಲಿಕ್ಕೆ ಬರಲಿಲ್ಲ. ಜಾಗ್ರದಲ್ಲಿ ಬುದ್ಧಿಯುಂಟು. ಅದರಿಂದ ಗ್ರಾಮಕ್ಕೆ ಹೋದ ಪುರುಷನಂತೆ, ನಾನು ಸದ್ರೂಪ ಬ್ರಹ್ಮನಿಂದ ಜಾಗ್ರಕ್ಕೆ ಬಂದಿರುವೆನೆಂದು ಯಾಕೆ ತಿಳಿಯುವದಿಲ್ಲ ?

**ಉತ್ತರ-** ಗಂಗಾಜಲವು ಸಮುದ್ರವನ್ನು ಸೇರಿ ಸಮುದ್ರರೂಪಾಗಿ ಪುನಃ ಮೇಘದ್ವಾರಾ ಭೂಮಿಗೆ ಬರುತ್ತದೆ. ಬಂದರೂ ನಾನು ಗಂಗಾ ಸಮುದ್ರದಿಂದ ಬಂದಿರುತ್ತೇನೆಂದು ಹೇಗೆ ತಿಳಿಯುವದಿಲ್ಲವೋ, ಹಾಗೇ ಬ್ರಹ್ಮದಿಂದ ಬಂದಿರುವೆನೆಂದು ತಿಳಿಯುವದಿಲ್ಲ.

(೫) ಪ್ರಶ್ನೆ- ಅನಿತ್ಯನಾದ ಜೀವನು ನಿತ್ಯವಾದ ಬ್ರಹ್ಮದೊಡನೆ ಐಕ್ಯವನ್ನು ಹೊಂದಲಾರನು ?

**ಉತ್ತರ-** ಗಿಡದ ಒಂದು ಟೊಂಗೆಯು ಒಣಗಿದರೆ ಅದರ ರಸವು ಮತ್ತೊಂದು ಟೊಂಗಿಗೆ ಹೋಗುವಂತೆ, ಜೀವನಿಂದ ವ್ಯತಿರಿಕ್ತವಾದ ದೇಹವೇ ನಾಶವಾಗುತ್ತದೆ ಹೊರ್ತು ಜೀವನು ನಾಶವಾಗುವದಿಲ್ಲ.

(೬) ಪ್ರಶ್ನೆ- ನಾಮರೂಪ ಪ್ರಪಂಚವು ಸ್ಥೂಲವಾಗಿದೆ. ಸದ್ರೂಪ ಬ್ರಹ್ಮವು ಸೂಕ್ಷ್ಮ ಅಣುವಾಗಿದೆ. ಇಂಥಾ ಅಣುವಿನಿಂದ ಈ ಸ್ಥೂಲ ಪ್ರಪಂಚವು ಹೇಗೆ ಉತ್ಪನ್ನವಾಗುವದು ?

**ಉತ್ತರ-** ಅಣುವಾದ ಆಲದ ಬೀಜದಿಂದ ಮಹತ್ತರ ಸ್ಥೂಲವಾದ ಆಲದ ಮರವು ಹೇಗೆ ಉತ್ಪನ್ನವಾಗುವದೋ, ಹಾಗೆ ಸೂಕ್ಷ್ಮವಾದ ಬ್ರಹ್ಮದಿಂದ ಸ್ಥೂಲ ಪ್ರಪಂಚವು ಉತ್ಪನ್ನವಾಗಿದೆ.

(೭) ಪ್ರಶ್ನೆ– ಸದ್ರೂಪ ಬ್ರಹ್ಮವು ಪೂರ್ಣವಿದ್ದಮೇಲೆ ಅದನ್ನು ಸರ್ವರೂ ಯಾಕೆ ತಿಳಿಯುವದಿಲ್ಲ?

ಉತ್ತರ– ನೀರಿನಲ್ಲಿ ಕರಗಿದ ಉಪ್ಪು ಸಕಲೇಂದ್ರಿಯಗಳಿಗೆ ಗೋಚರವಾಗ ದಿದ್ದರೂ, ಜಿಹ್ವೇಂದ್ರಿಗೆ ಗೋಚರವಾದಂತೆ, ಸಕಲರಿಗೂ ಅಗೋಚರವಾದ ಬ್ರಹ್ಮವು ಉಪಾಯದಿಂದ ಮುಮುಕ್ಷುವಿಗೆ ಗೋಚರವಾಗುತ್ತದೆ.

(೮) ಪ್ರಶ್ನೆ– ಹಾಗಾದರೆ ಬ್ರಹ್ಮವನ್ನು ತಿಳಿಯುವ ಮಾರ್ಗವು ಯಾವುದು?

ಉತ್ತರ- ಗಾಂಧಾರ ದೇಶದ ರಾಜಪುತ್ರನು ಕಳ್ಳರಿಂದ ಕಟ್ಟಲ್ಪಟ್ಟವನಾಗಿ ದೂರದೇಶಕ್ಕೆ ಒಯ್ಯು, ನಿರ್ಜನ ಪ್ರದೇಶವಾದ ಅಡವಿಯಲ್ಲಿ ಬಿಡಲ್ಪಟ್ಟನು. ಅವನ ರೋದನವನ್ನು ಕೇಳಿ, ಕಾರುಣಿಕ ಪುರುಷನು ಬಂದು ಬಂಧನದಿಂದ ಬಿಡಿಸಿ, ಇದೇ ದಿಕ್ಕಿಗೆ ನಿನ್ನ ಗಂಧಾರದೇಶವಿರುವದು. ಕೇಳುತ್ತಾ ಹೋಗೆಂದು ಹೇಳಿದನು. ಅವನು ಹಾಗೇ ಹೋಗಿ ಊರನ್ನು ಮುಟ್ಟಿದನು. ಅದರಂತೆ; ಅವಿದ್ಯಾ ಆವರಣ ದಿಂದ ಬಂಧ ಬಂದರೆ. ಗುರುಗಳ ಉಪದೇಶ ಮಾರ್ಗದಿಂದ ಅವಿದ್ಯಾ ನಿವೃತ್ತ ವಾದರೆ ಸ್ವರೂಪವನ್ನು ಹೊಂದುವನು.

(೯) ಪ್ರಶ್ನೆ–ಸುಷ್ತಿ ಮರಣಗಳಲ್ಲಿ ಎಲ್ಲರೂ ಸದ್ರೂಪ ಬ್ರಹ್ಮವನ್ನು ಹೊಂದಿದ ಮೇಲೆ; ಎಲ್ಲರೂ ಬ್ರಹ್ಮರೂಪವಾಗಿದ್ದರಿಂದ ಎಲ್ಲರೂ ಮುಕ್ತರೆಂದು ಹೇಳಬೇಕು. ಹೀಗೆ ಹೇಳಿದರೆ ಜ್ಞಾನಿ ಅಜ್ಞಾನಿಗೆ ವಿಲಕ್ಷಣವಿಲ್ಲದಾಯಿತು. ಜ್ಞಾನಿ ಮುಕ್ತ ನಾಗುತ್ತಾನೆ. ಅನ್ಯನು ಆಗುವದಿಲ್ಲ ಅಂದರೆ ಏನು ಕಾರಣ?

ಉತ್ತರ– ಒಬ್ಬನು ಕಳ್ಳನು. ಮತ್ತೊಬ್ಬನು ಕಳವನ್ನು ಮಾಡದವನು. ಇವರಿಬ್ಬರಮೇಲೆ ಸಂಶಯಬಂದು ರಾಜದೂತರು ಇಬ್ಬರನ್ನು ಕರೆದು; ಈ ಕಾದ ಕಬ್ಬಿಣ ಕೊಡ್ಲಿಯನ್ನು ಮುಟ್ಟಿರಿ. ಎಂದು ಹೇಳಿದರು. ಇಬ್ಬರು ಮುಟ್ಟಲು ಕಳ್ಳನ ಕೈ ಸುಟ್ಟಿತು. ಸತ್ಯವಂತನ ಕೈ ಸುಡಲಿಲ್ಲ. ಅದರಿಂದ ಕಳ್ಳನೆಂದು ಕಟ್ಟಿದರು. ಮತ್ತೊಬ್ಬನನ್ನು ಬಿಟ್ಟರು. ಇದರಂತೆ ಮರಣ ನಂತರ ಜ್ಞಾನಿ ಅಜ್ಞಾನಿಗಳಿಬ್ಬರೂ ಸದ್ರೂಪ ಬ್ರಹ್ಮವನ್ನು ಹೊಂದಿದರೂ, ನಾನು ಮನುಷ್ಯನೆಂಬ ಅಸತ್ಯ ಪುರುಷನು ತಿರಿಗಿ ಜನ್ಮಕ್ಕೆ ಬರುತ್ತಾನೆ. ನಾನು ಬ್ರಹ್ಮನೆಂಬ ಸತ್ಯಸಂಧನು ಬಿಡುಗಡೆಯಾಗು ತ್ತಾನೆ. ಜನ್ಮಕ್ಕೆ ಬರುವದಿಲ್ಲ.

ಈ ರೀತಿ ಶ್ವೇತಕೇತು ಬುದ್ಧಿಯ ದೋಷಮೂಲಕ ಒಂಭತ್ತು ಸಾರೆ ಕೇಳಿ ದನು. ಅದಕ್ಕೋಸ್ಕರ ಒಂಭತ್ತು ದೃಷ್ಟಾಂತಗಳನ್ನು ಕೊಟ್ಟು ಒಂಭತ್ತು ಸಾರೆ ತತ್ತ್ವಮಸಿ ಮಹಾವಾಕ್ಯದರ್ಥವನ್ನು ತಿಳಿಸಿದರು. ಅದರಿಂದ ಸಂಶಯರಹಿತನಾಗಿ ನಾನೇ ಅದ್ವೈತ ಬ್ರಹ್ಮನೆಂದು ತಿಳಿಯುವಂಥವನಾದನು

''ಅಹಂ ಬ್ರಹ್ಮಾಸ್ಮಿ'' ಎಂಬ ಮಹಾವಾಕ್ಯದ ಅರ್ಥವನ್ನು 'ಯೋಽನ್ಯಾಂ ದೇವತಾಮುಪಾಸತೆ'' ಎಂಬ ಮಂತ್ರಕ್ಕೆ ಅರ್ಥವನ್ನು ಹೇಳಿದಲ್ಲಿ ವಿಸ್ತೃತವಾಗಿ ಹೇಳಿರುತ್ತದೆ. ಅಲ್ಲಿ ಅವಲೋಕನ ಮಾಡಬಹುದು. ಮತ್ತು ವೇದಾಂತ ಚಂದ್ರಿಕೆ ಯಲ್ಲಿಯೂ ಮಹಾವಾಕ್ಯದರ್ಥವು ಬರೆಯಲ್ಪಟ್ಟಿದೆ. ಈ ರೀತಿ ತಿಳಿದು ಬ್ರಹಾನು ಸಂಧಾನವನ್ನು ಮಾಡತಕ್ಕದ್ದು.

**೮ ಸಂ-೩ಸೂ, ೧೦ ಪ "ಅನೇನ ಜೀವೇನಾತ್ಮನಾನು ಪ್ರವಿಶ್ಯ" ಛಾ. ೬-೩-೨**

ಸೂರ್ಯನು ದರ್ಪಣಾದಿಗಳಲ್ಲಿ ಪ್ರವೇಶಿಸಿದಂತೆ ಬ್ರಹ್ಮವು ಈ ದೇಹದಲ್ಲಿ ಉಪಾಧಿಯ ಮೂಲಕ ಜೀವರೂಪದಿಂದ ಪ್ರವೇಶಿಸಿ, ಇದು ನಾಮ ಇದು ರೂಪವೆಂದು ಸ್ಪಷ್ಟ ಮಾಡುತ್ತೇನೆ ಎಂಬರ್ಥವನ್ನು ಈ ಶ್ರುತಿಯು ಹೇಳುತ್ತದೆ.

**" ಸೇಯಂದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾಽಽತ್ಮನಾನು ಪ್ರವಿಶ್ಯ ನಾಮರೂಪೆ ವ್ಯಾಕರವಾಣೀತಿ "**

**ಟೀಕಾ:-** ಸಾ=ಆ, ಇಯಂ=ಈ, ದೇವತಾ=ಬ್ರಹ್ಮವು, ಈಕ್ಷತ್=ಬಹಳ ಪ್ರಜೆಗಳಾಗಬೇಕೆಂದು ಪೂರ್ವದಲ್ಲಿ ಸಂಕಲ್ಪ ಮಾಡಿದ್ದೆ, ಇನ್ನೂವರೆಗೂ ಆಗ ಲಿಲ್ಲೆಂದು ತಿಳಿದು ಪುನಃ ಸಂಕಲ್ಪವನ್ನು ಮಾಡಿತು. ಕಥಂ=ಹೇಗೆಂದರೆ, ಹಂತ= ಈಗ, ಅಹಂ=ನಾನು, ಇಮಾ=ಈ, ತಿಸ್ರಃ=ಮೂರಾದ, ದೇವತಾ=ತೇಜ ಜಲ ಪೃಥ್ವೀ ದೇವತೆಗಳ, ಕಾರ್ಯವಾದ ಶರೀರದಲ್ಲಿ, ಅನೇನ=ಈ, ಜೀವಾತ್ಮನಾ= ಜೀವರೂಪದಿಂದ, ಅನುಪ್ರವಿಶ್ಯ=ಪ್ರವೇಶಮಾಡಿ, ನಾಮರೂಪೇ=ನಾಮರೂಪು ಗಳನ್ನು, ವ್ಯಾಕರವಾಣಿ=ಸ್ಪಷ್ಟೀಕರಿಸುತ್ತೇನೆ. ಇತಿ=ಹೀಗೆಂದು.

**ತಾತ್ಪರ್ಯ:-** ಜಗತ್ತು ಬ್ರಹ್ಮದ ಕಾರ್ಯವೆಂದು ಪೂರ್ವದಲ್ಲಿ ಹೇಳ ಲ್ಪಟ್ಟಿತು. ಜೀವತ್ವವಾದರೂ ವಿಶಿಷ್ಟರೂಪದಿಂದ ಬ್ರಹ್ಮದ ಕಾರ್ಯವಾಗಿರು ತ್ತದೆ. ಆದರೂ ಅದು ಸ್ವರೂಪದಿಂದ ಬ್ರಹ್ಮದ ಕಾರ್ಯವಲ್ಲ. ಕಿಂತು ಬ್ರಹ್ಮವೇ ಉಪಾಧಿಯಲ್ಲಿ ಪ್ರವೇಶವಾದ್ದರಿಂದ ಜೀವರೂಪ ವ್ಯವಹಾರವು ಅಂಗೀಕರಿಸಲ್ಪಟ್ಟಿ ರುತ್ತದೆ. ಆದ್ದರಿಂದ ಬ್ರಹ್ಮವನ್ನು ತಿಳಿಯೋಣದರಿಂದ ಜೀವನನ್ನಾದರೂ ತಿಳ ದಂತಾಯಿತೆಂದು ಭೂತ ಭೌತಿಕ ನಾಮ ರೂಪುಗಳನ್ನು ಪ್ರಕಟಪಡಿಸಲಾಗಿದೆ. ಹೇಗೆಂದರೆ ಪ್ರಕೃತವಾದ ಸದ್ರೂಪ ಬ್ರಹ್ಮವು ತೇಜ, ಜಲ, ಭೂಮಿರೂಪ ದೇವತೆ ಗಳಾದ ಮೇಲೆ ಈಕ್ಷಣವನ್ನು ಮಾಡಿತು. ಏನಂದರೆ ನಾನು ಪೂರ್ವದಲ್ಲಿ ಬಹಳ ಪ್ರಜೆಗಳಾಗಬೇಕೆಂದು ಸಂಕಲ್ಪವನ್ನು ಮಾಡಿದ್ದೆ. ಅದು ಆಗಲಿಲ್ಲ ಎಂದು ತಿಳಿದು ಆ ಬಹುತ್ವ ಪ್ರಯೋಜನವನ್ನು ಲಕ್ಷಿಸಿ, ಸಂಕಲ್ಪವನ್ನು ಮಾಡುವಂಥಾದ್ದಾ ಯಿತು. ಭೂತತ್ರಯಗಳ ಸೃಷ್ಟಿಯೇನೋ ಆಗಿರುವದು. ಪೂರ್ವ ಸೃಷ್ಟಿಯಲ್ಲಿ

ಅನುಭವಿಸಲ್ಪಟ್ಟ ಪ್ರಾಣಧಾರಣ ಸಾಮರ್ಥ್ಯವುಳ್ಳ ಜೀವಾತ್ಮನನ್ನು ಸ್ಮರಿಸುತ್ತಾ, ಈಗ ನಾನು ಈ ಜೀವರೂಪದಿಂದ ಪ್ರವೇಶಿಸಬೇಕೆಂದು ಸ್ಮೃತಿಯನ್ನು ಮಾಡಿತು. (ಬ್ರಹ್ಮಕ್ಕೆ ಮಾಯೋಪಾಧಿ ವಶದಿಂದ ಸಂಕಲ್ಪ ಸ್ಮರಣಾದಿಗಳು ಸಂಭವಿಸುತ್ತವೆಂಬ ಭಾವವು) ಆದ್ದರಿಂದ ಪ್ರಾಣಧಾರಣರೂಪ ಜೀವಾತ್ಮ ಚೈತನ್ಯ ರೂಪದಿಂದ ಪ್ರವೇಶ ಮಾಡಿತು. ಅಗ್ನಿ ಜಲ ಪೃಥ್ವಿಗಳ ಮಾತ್ರಾ ಸಂಸರ್ಗದಿಂದ ವಿಶೇಷ ಜ್ಞಾನವುಳ್ಳದ್ದಾಗಿ ಇದು ದೇವದತ್ತ ನಾಮ ಇದು ರೂಪವೆಂದು ಸ್ಪಷ್ಟಮಾಡುವಂಥಾದ್ದಾಯಿತು.

**ಶಂಕಾ:-** ಅಸಂಸಾರಿ ಸರ್ವಜ್ಞ ಬ್ರಹ್ಮವು ಸ್ವತಂತ್ರವಾಗಿರುತ್ತಿರಲಿಕ್ಕೆ, ಬುದ್ಧಿಪೂರ್ವಕ ಅನೇಕ ನೂರಾರು ಸಾವಿರ ಅನರ್ಥಗಳಿಗೆ ಆಶ್ರಯವಾದ ದೇಹದಲ್ಲಿ ಪ್ರವೇಶಿಸಿ, ದುಃಖವನ್ನನುಭವಿಸುತ್ತೇನೆಂದು ಸಂಕಲ್ಪಮಾಡೋಣ ಪ್ರವೇಶಿಸೋಣ ಯೋಗ್ಯಗಳಲ್ಲ.

**ಸಮಾಧಾನ:-** ಬ್ರಹ್ಮವು ತನ್ನ ಅವಿಕಾರಸ್ವರೂಪದಿಂದಲೇ ಪ್ರವೇಶಿಸುವದನ್ನೂ ದುಃಖವನ್ನೂ ಅನುಭವಿಸುತ್ತೇನೆಂಬ ಸಂಕಲ್ಪವನ್ನು ಮಾಡಿದ್ದರೆ, ನೀನು ಹೇಳಿದಂತೆ ಸತ್ಯವಾಗಿ ಅಯೋಗ್ಯವಾಗುತ್ತಿತ್ತು. ಕಿಂತು ಹಾಗಲ್ಲ. ಮತ್ತೇನಂದರೆ, (ಸಾಕ್ಷಾತ್ ಬ್ರಹ್ಮವು ಪ್ರವೇಶಮಾಡಿಲ್ಲ.) ಜೀವಾತ್ಮರೂಪದಿಂದ ಪ್ರವೇಶಿಸಿರುವದೆಂಬ ವಚನವಿರುವದರಿಂದ, ಜೀವನೆಂಬ ಹೆಸರು ಬ್ರಹ್ಮದ ಆಭಾಸಮಾತ್ರವಾಗಿರುತ್ತದೆ. ಆಭಾಸವಂದರೆ ನಾನೆಂದು ಅಪರೋಕ್ಷವಾಗಿ(ಭಾಸತ ಇತಿ)ತೋರುತ್ತದೆಂದು ಆಭಾಸವೆಂದು ಕರೆಯುವರು. ಸ್ವತಃ ಅಪರೋಕ್ಷವಾದ ಚಿತ್ತಿನ ಪ್ರತಿಬಿಂಬಮಾತ್ರಕ್ಕೆ ಜೀವನೆಂಬ ಹೆಸರು ಬಂದಿರುವದು. ಕನ್ನಡಿಯಲ್ಲಿ ತೋರುವ ಪುರುಷನ ಪ್ರತಿಬಿಂಬದಂತೆ, ಜಲಾದಿಗಳಲ್ಲಿತೋರುವ ಸೂರ್ಯಾದಿಗಳಪ್ರತಿಬಿಂಬದಂತೆ ಬುದ್ಧ್ಯಾದಿ ಭೂತ ಮಾತ್ರಾಗಳ ಸಂಸರ್ಗದಿಂದ, ಬ್ರಹ್ಮದ ಪ್ರತಿಬಿಂಬವೇ ಜೀವವೆನಿಸುವದು. (ಜೀವನು ಸ್ವರೂಪದಿಂದ ಅನಾದಿಯಿದ್ದರೂ ವಿಶಿಷ್ಟ ರೂಪದಿಂದ ಸಾದಿಯಾಗಿರುವನೆಂಬ ಭಾವವು) ಅಸಂಗ, ಅದ್ವಿತೀಯ ಕೂಟಸ್ಥನಾದ ಚಿದಾತ್ಮನು ಬುದ್ಧ್ಯಾದಿಗಳಿಂದಲೂ ಭೂತಮಾತ್ರಾಗಳಿಂದಲೂ ಹೇಗೆ ಸಂಬಂಧನಾಗುವನು. ಅಂದರೆ, ಅಚಿಂತ್ಯಗಳಾದ ಅನೇಕ ಶಕ್ತಿಗಳುಳ್ಳ ಪರಬ್ರಹ್ಮಕ್ಕೆ, ಬುದ್ಧ್ಯಾದಿಗಳ ಸಂಬಂಧವೂ ಜೀವರೂಪ ಪ್ರತೀತಿಯೂ ಪರಬ್ರಹ್ಮ ಸ್ವರೂಪ ವಿವೇಕವನ್ನು ಮಾಡದ್ದರಿಂದಲೇ ಸುಖೀ ದುಃಖೀ ಮೂಢನೆಂದು ಇತ್ಯಾದಿ ಅನೇಕ ವಿಕಲ್ಪ ಪ್ರತೀತಿಗಳಿಗೆ ಕಾರಣವಾಗಿರುತ್ತದೆ. ಮತ್ತು ಸದಸತ್ತಾದಿ ರೀತಿಯಿಂದ ವಚಸಲಿಕ್ಕೆ ಬಾರದ್ದೂ, ಅಚಿಂತನೀಯವಾದದ್ದೂ, ಅನಾದಿಯಾಗಿಯೂ ಸಮ್ಯಗ್ಜ್ಞಾನ ವ್ಯತಿರಿಕ್ತ ನಾಶರಹಿತವಾಗಿಯೂ, ದಂಡಾಯಮಾನವಾದ ಯಾವ ಮಾಯಾ ಶಕ್ತಿಯುಂಟೋ, ಅದಕ್ಕೆ ಆಶ್ರಯವಾಗಿಯೂ ವಿಷಯವಾಗಿಯೂ ಬ್ರಹ್ಮವಿರುವದು. ತನ್ನಲ್ಲಿದ್ದ ಅಂಥಾ

ಮಾಯಾ ಶಕ್ತಿವಶಾತ್ ಆತ್ಮನಿಗೂ ಬುದ್ಧ್ಯಾದಿಗಳಿಗೂ ಸಂಬಂಧವು ಸಿದ್ಧಿಸುತ್ತದೆ. ಆವರಣ ವಿಕ್ಷೇಪ ಶಕ್ತಿದ್ವಯಾತ್ಮಕ ಮಾಯಾ ಶಕ್ತಿಯು, ದೇಶ, ಕಾಲ, ವಸ್ತುಪರಿಚ್ಛೇದ ಶೂನ್ಯವಾದ ಬ್ರಹ್ಮನೇ ನಾನೆಂದು ವಿಶೇಷವಾಗಿ ತಿಳಿಯುವದಕ್ಕೆ ಆವರಣ ಮಾಡಿದ್ದರಿಂದ, ಬುದ್ಧಿಯಲ್ಲಿ ಅಧ್ಯಾಸವಾಗಿ ನಾನು ಸುಖೀ ದುಃಖೀ ಎಂಬ ಭಾವನೆಯು ತೋರುತ್ತದೆ. ಪರಬ್ರಹ್ಮವು ಪ್ರತಿಬಿಂಬ ಮಾತ್ರ ಜೀವರೂಪದಿಂದ ಪ್ರವೇಶ ಮಾಡಿದ್ದರಿಂದ ದೇಹ ಸಂಬಂಧಗಳಾದ ಸುಖ ದುಃಖಗಳೊಡನೆ ಸ್ವತಃ ಸಂಬಂಧ ಪಡುವದಿಲ್ಲ. ಕನ್ನಡಿ ಜಲಾದಿಗಳಲ್ಲಿ ಪುರುಷ ಮತ್ತು ಸೂರ್ಯಾದಿಗಳು ಛಾಯಾ ಮಾತ್ರದಿಂದ ಪ್ರವೇಶರಾಗಿರುವರು. ಆದರೆ ಆ ಕನ್ನಡಿ ಜಲಾದಿಗಳ ಸಂಬಂಧಗಳಾದ ದೋಷಗಳಿಂದ ಸಂಬಂಧವುಳ್ಳವರಾಗುವದಿಲ್ಲ. ಅದರಂತೆ ಆ ಬ್ರಹ್ಮವು ಬುದ್ಧಿಯಲ್ಲಿ ಪ್ರತಿಬಿಂಬ ರೂಪದಿಂದ ಪ್ರವೇಶಮಾಡಿದರೂ ದೋಷವಿಲ್ಲ. ಸೂರ್ಯನು ಜಗತ್ತಿನ ಕಣ್ಣು ಆಗಿರುವನು. ಆದಾಗ್ಯಾದರೂ ನೇತ್ರಗಳ ಬಾಹ್ಯ ದೋಷಗಳಿಂದ ಹೇಗೆ ಲೇಪಾಯಮಾನನಾಗುವದಿಲ್ಲವೋ, ಹಾಗೆ ಸರ್ವಭೂತಾಂತರದಲ್ಲಿದ್ದ ಒಬ್ಬ ಆತ್ಮನು ಲೋಕ ದುಃಖಗಳಿಂದಲೂ ಲೇಪಿಸಲ್ಪಡುವದಿಲ್ಲ. ಆಕಾಶದಂತೆ ವ್ಯಾಪಕನಿದ್ದು ನಿತ್ಯನಾಗಿರುವನು. ಉಪಾಧಿವಶಾತ್ ಧ್ಯಾನಮಾಡಿದವನಂತೆ; ಚಂಚಲವಾದಂತೆ ತೋರುವನು. ಯಥಾರ್ಥವಲ್ಲೆಂದು ಶ್ರುತಿಗಳಲ್ಲಿ ಹೇಳಿರುತ್ತದೆ.

**ಶಂಕಾ**– ಜೀವನು ಪ್ರತಿಬಿಂಬ ಮಾತ್ರನೆಂದು ಹೇಳಿದರೆ ಮಿಥ್ಯೆಯಾಗಬೇಕಾಯಿತು. ಜೀವನೇ ಮಿಥ್ಯೆಯೆಂದು ಸ್ವೀಕಾರಮಾಡಿದ ಮೇಲೆ ಇಹ ಪರಲೋಕಗಳ ಫಲವೂ ಮೋಕ್ಷವೂ ಸುಳ್ಳೆಂದು ಹೇಳಬೇಕಾಗುವದು.

**ಸಮಾಧಾನಃ**— ಇದೇನು ದೋಷವಲ್ಲ. ಯಾಕಂದರೆ, ವಿಶಿಷ್ಟ ರೂಪದಿಂದ ಜೀವನು ಮಿಥ್ಯೆಯಾದಾಗ್ಯಾದರೂ, ಸ್ವರೂಪದಿಂದ ಸತ್ಯನಾಗಿರುವನು. ಅದರಿಂದ ನಾನುಬ್ರಹ್ಮನೆಂದು ತಿಳಿದು ಮುಕ್ತನಾಗುತ್ತಾನೆ. ಜೀವ ನೊಬ್ಬನೇ ಅಲ್ಲ ಸರ್ವ ನಾಮರೂಪ ಜಗತ್ತು ಕೂಡಾ ಕಾರಣವಾದ ಸದ್ರೂಪಾತ್ಮದಿಂದ ಸತ್ಯವಾಗಿರುತ್ತದೆ. ವಿಕಾರ ಸಮೂಹವು ಸ್ವತಃ ಮಿಥ್ಯೆಯೇ ಆಗಿರುವದು. ವಾಣಿ ವ್ಯವಹಾರದಿಂದ ತೋರುವವಿಕಾರವು ನಾಮಮಾತ್ರವಾಗಿರುತ್ತದೆಂದು ಹೇಳಿದ್ದೇವೆ ಅದರಂತೆ ಜೀವನಾದರೂ ಬ್ರಹ್ಮರೂಪದಿಂದ ಸತ್ಯನು ಇದ್ದಾನೆ. ಯಕ್ಷನಿದ್ದಂತೆ ಬಲಿಯೆಂಬ ಲೌಕಿಕ ನ್ಯಾಯದಂತೆ, ಸದ್ರೂಪ ಬ್ರಹ್ಮರೂಪದಿಂದ ಸರ್ವವ್ಯವಹಾರಗಳೂ ಸರ್ವ ವಿಕಾರಗಳೂ ಸತ್ಯವಾಗಿವೆ. ಸದ್ರೂಪಕ್ಕೆ ಭಿನ್ನಗಳಾಗಿದ್ದರೆ, ಮಿಥ್ಯೆಗಳಾಗಿರುತ್ತವೆ. ಈ ವ್ಯವಸ್ಥೆಯುಂಟು. ಆದ್ದರಿಂದಲೇ ಸಿದ್ಧಾಂತಿಗಳೇ! ನೀವು ಪ್ರಪಂಚಕ್ಕೆ ಮಿಥ್ಯೆಯೆಂದು ಹೇಳಿದರೆ, ಬೌದ್ಧಮತವನ್ನು ಸ್ವೀಕರಿಸಿದಂತಾಗುವದು. ಸತ್ಯವೆಂದು ಹೇಳಿದರೆ, ಅದ್ವೈತಕ್ಕೆ ಹಾನಿಬರುವದು ಎಂಬ ದೋಷವನ್ನು ತಾರ್ಕಿಕನು ಏನು

ಹೇಳಿದ್ದನೋ, ಅದೂ ಕೂಡಾ ನಿರಸನಮಾಡಿದಂತಾಯಿತು. ಈ ರೀತಿ ಅದ್ವೈತ ವಾದದಲ್ಲಿ ದೋಷ ಅಭಾವವಾಗಿರುವುದೆಂದು ಹೇಳಿದ್ದಾಯಿತು. ಹೇಗೆ ದ್ವೈತಿಗಳು ಸ್ವಬುದ್ಧಿ ವಿಕಲ್ಪ ಮಾತ್ರವುಳ್ಳವರಾಗಿರುವರೋ, ಹಾಗೆ ಅದ್ವೈತದಲ್ಲಿ ಇಲ್ಲೆಂಬ ಭಾವವು. ೨ ಸಂ, ೫ ಸೂ ೧೮ ಪದದಲ್ಲಿರುವ 'ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್' ಎಂಬ ಶ್ರುತಿಯಲ್ಲಿಯೂ ಇದೇ ಅರ್ಥವನ್ನು ಹೇಳಿರುತ್ತದೆ. ಅಲ್ಲಿ ನೋಡಬಹುದು.

**ನಿಜಗುಣರ ಶಾಸ್ತ್ರವನು ನಿಜವಾಗಿ ಬೋಧಿಸಿದ।**
**ನಿಜಸಿದ್ಧ ಗುರುವೆ-ನಿನಗಾನು ಸಲ್ಲಿಪೆನು।**
**ನಿಜದರ್ಥ ಬರೆದ ಗ್ರಂಥವನು ॥**

## — ಮಂಗಳಾರುತಿ —

ಮಂಗಳಾರುತಿ ಬೆಳಗು ಬನ್ನಿರಿ।
ತುಂಗಮಹಿಮಾರೂಢ ಗುರುವಿಗೆ।
ಲಿಂಗಭಂಗದಿ ಪೂರ್ಣ ಲಿಂಗದ ರೂಪನಾದನಿಗೆ ॥ಪಲ್ಲ॥

ಅಂಗಮೂರರ ಸಂಗ ತೊರೆಯುತ।
ಸಂಗ ಪರಮನೆಯೆಂದು ಬೋಧಿಸಿ।
ಮಂಗಲಾಂಗನ ಸಂಗ ಸುಖದೊಳಗಿರಿಸಿದಾತನಿಗೆ ॥೧॥

ಮುದ್ದಿಯಾಗಿಹ ನಾಮರೂಪದ।
ಸುದ್ದಿ ತೆಗೆಯದೆ ಶುದ್ಧಚಿನ್ಮಯ।
ನಿದ್ದಿಯೆನ್ನುತ ಮುದ್ದು ಮಗನಿಗೆ ಬೋಧವಾಡುವಗೆ ॥೨॥

ನಿದ್ದೆಯಿಲ್ಲದೆಯಿದ್ದು ಬೆಳಗುವ।
ಶುದ್ಧ ರವಿಶಶಿತಾರೆ ಬೆಳಗನು।
ಪೊದ್ದದಿಹ ತಾ ಬುದ್ಧಬೊಮ್ಮವೆಯೆಂದು ಬೋಧಿಪಗೆ ॥೩॥

ಸತ್ತುಚಿತ್ತಾನಂದ ನಿತ್ಯನು।
ಮತ್ತೆ ಪೂರ್ಣನು ಪರಮ ಬೊಮ್ಮನು।
ಸುತ್ತಯಿರುತಿರೆ ಸತ್ತು ಪುಟ್ಟುವೆನೆಂಬ ಭ್ರಮವೇಕೆ? ॥೪॥

ಎತ್ತ ನೋಡಲು ತಾನೆಯಿರುತಿರೆ।
ಮತ್ತೆಯೊಬ್ಬರ ಸುದ್ದಿಯೆತ್ತದೆ।
ಚಿತ್ತದೊಳು ತಾ ಶಾಂತನಾಗಿರುಯೆಂದು ಬೋಧಿಪಗೆ ॥೫॥

# ಜ್ಞಾನಫಲ ಚತುಷ್ಟಯಾಷ್ಟಕಂ

ಗುರುಧ್ಯಾನ ದೇವಪ್ರಸಾದೇನ ಲಬ್ಧಃ ।
ನಮೆ ಕೃತ್ಯಜಾತಂ ಸದಾಹಂ ಸುಖೋಽಸ್ಮಿ ॥೫॥

ನ ಚಾಸ್ತೀತಿ ವಿತ್ತಾದಿ ಚಿಂತಾತು ಲೋಕೇ ।
ಸದಾನಂದ ಚಿನ್ಮಾತ್ರ ನಿತ್ಯಂ ಶಿವೋಽಹಂ ॥೧॥

ನಮೆ ಯಾಗ ದಾನಾದಿ ನಾಕಾದಿ ಚಿಂತಾ ।
ಪರಿಚ್ಛಿನ್ನರೂಪಂ ಕದಾ ನಾಸ್ತಿ ಸತ್ಯಂ ॥೨॥

ನಮೆ ಪುಣ್ಯ ಕಾರ್ಯ್ಯಂ ನಮೆ ಪಾಪಹಾರ್ಯ್ಯಂ ।
ಸದಾ ನಿರ್ಮಲೋಽಹಂ ಚಿದಾಕಾಶ ರೂಪಃ ॥೩॥

ನಮೆ ಮೋಕ್ಷ ಶಾಸ್ತ್ರಾದಿ ಶ್ರೋತೃತ್ವ ಚಿಂತಾ ।
ಅವಿದ್ಯಾದಿ ಶಂಕಾ ಕಲಂಕಾದಿ ದೂರಃ ॥೪॥

ಮನುಷ್ಯಾದಿ ಬ್ರಹ್ಮಾಂತ ಸರ್ವಂಚ ಸೌಖ್ಯಂ ।
ನಿಜಾನಂದ ರೂಪೇ ವಿಲೀನಂಚ ಭಾತೀ ॥೫॥

ಶ್ರೀ ಶಿವಪುತ್ರ ಸ್ವಾಮಿ ಕೃತ ಜ್ಞಾನಫಲ ಚತುಷ್ಟಯಾಷ್ಟಕಂ ಸಮಾಪ್ತಂ

---

ಇತಿ ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಸಿದ್ಧಾರೂಢ ಸ್ವಾಮಿಗಳ ಶಿಷ್ಯರಾದ ಶ್ರೀ ಶಿವಪುತ್ರ ಸ್ವಾಮಿಗಳಿಂದ ವಿರಚಿತವಾದ ಅನುಭವಸಾರದೊಳಗಿನ ಶ್ರುತ್ಯರ್ಥ ಪ್ರಕಾಶಿಕಾ ನಾಮಕ

ಗ್ರಂಥವು ಸಮಾಪ್ತವಾದುದು

# ಶುದ್ಧಪಡೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 15 | ೧೩ | ವನಿತಲ್ಲ | ದನಿತೆಲ್ಲ |
| 16 | ೨೨ | ಜೋ | ಜ್ಯೋತಿ |
| ೨ | ೨೪ | ಅನೇಕ | ಅನೇನ |
| ೪ | ೨೯ | ಅಖಿರ್ಳಗೆ | ಅಖಿಳರ್ಗೆ |
| ೫ | ೨ | ಆಲ್ಲಿ | ಅಲ್ಲಿ |
| ೭ | ೧೩ | ಆಗಣಿತ | ಅಗಣಿತ |
| ೧೫ | ೧೧ | ಪ್ರಮಢರ | ಪ್ರಮಥರ |
| ೧೯ | ೧೦ | ಸ್ವರೂಪು | ಸ್ವರೂವು |
| ೨೧ | ೫ | ಆಧಿಷ್ಮಾನ | ಅಧಿಷ್ಠಾನ |
| ೨೮ | ೧೯ | ಆನುಭವ | ಅನುಭವ |
| ೨೯ | ೨೮ | ಶಾಸ್ತ್ರಿಕ | ಶಾಸ್ತ್ರೀಕ |
| ೩೨ | ೪೧ | ಗ್ರಂಥಡ | ಗ್ರಂಥದ |
| ೩೯ | ೧ | ಪ್ರತಿ | ಪ್ರತಿ |
| ೫೪ | ೧೬ | ಪಾರಮಾ | ಪಾರಮಾ |
| ೫೫ | ೧೩ | ಆಧಾವ | ಅಭಾವ |
| ೫೬ | ೩೦ | ವಾದವೂ | ವಾದರೂ |
| ೫೯ | ೩೦ | ಸ್ಪಥಃ | ಸ್ವಥಃ |
| ೬೨ | ೯ | ಶರಣ | ಕರಣ |
| ೬೩ | ೧೯ | ಸಾಂಖರು | ಸಾಂಖ್ಯರು |
| ೬೭ | ೧೮ | ಅಪೇಕ್ಪಿ | ಅಪೇಕ್ಷಿ |
| ೮೨ | ೨ | ಮಹೇಶತೆ | ಮಹೇಶತೆ |
| ೯೨ | ೨೨ | ಭ್ರಂಗಾಯ | ಭೃಂಗಾಯ |
| ೯೪ | ೨೮ | ರವಿಕಾ | ವಿಕಾರ |
| ೧೦೨ | ೧೭ | ತಾರ್ಕಿನು | ತಾರ್ಕಿಕನು |
| ೧೧೨ | ೭ | ನಿರಕರಿ | ನಿರಾಕರಿ |
| ,, | ೧೧ | ಕಾಣರ | ಕಾರಣ |
| ,, | ೨೮ | ಕಾರಣತಂ | ಕಾರಣತ್ವಂ |
| ೧೨೬ | ೧೭ | ಆಶ್ವಾದಿ | ಅಶ್ವಾದಿ |
| ೧೩೮ | ೧೫ | ವಿಲ್ಲಿ | ವಿಲ್ಲ |
| ೧೬೦ | ೨೧ | ಯಾರ | ಯಾವ |
| ,, | ೨೫ | ಗಳು | ಗಳ |
| ೧೮೧ | ೧೯ | ಆವಚ್ಛಿನ್ನ | ಅವಚ್ಛಿನ್ನ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೨೫ | ೪ | ಚಂದ್ರಮು | ಚಂದ್ರಮಂ |
| ೨೨೬ | ೨೩ | ಆನುಭವ (ಖಿದುಃ) | ಅನುಭವ (ದುಃಖಿ) |
| ೨೪೮ | ೨೧ | ಮುಕ್ತಿ | ಯುಕ್ತಿ |
| ೨೬೪ | ೧೫ | ಅವಿಚ್ಛಿನ್ನ | ಅವಚ್ಛಿನ್ನ |
| ೨೬೫ | ೧೪ | ತೋರುತ್ತಾರೆ | ತೋರುತ್ತಾನೆ. |
| ೨೬೯ | ೨೬ | ರಜೋ | ರಜೋ |
| ೨೭೦ | ೨೪ | ಭಿನ | ಭಿನ್ನ |
| ೨೭೯ | ೧೬ | ಅಭೇದ | ಅಭೇದ |
| ೩೪೫ | ೬ | ಆದರೆ | ಅದರ |
| ೩೪೯ | ೨೨ | ಕೊಂಡ | ಕೊಂಡು |
| ೩೬೮ | ೨೦ | ಬ್ರಹ್ಮ | ಬೃಹ |
| ೩೭೦ | ೩ | ಯಂದಲೆ | ಯಿಂದಲೆ |
| ೩೭೨ | ೨೨ | ಆ ಭಾವವು | ಅಭಾವವು |
| ೩೮೦ | ೧೦ | ಆರಹಿಕೊಂಬ | ಆರುಹಿಕೊಂಬ |
| ೩೮೯ | ೨೮ | ತಂದು | ತ್ತಂದು |
| ೪೦೧ | ೨೯ | ಬೆಳಡಿಂಗಳು | ಬೆಳದಿಂಗಳು |
| ೪೭೨ | ೧೦ | ರ್ಮವು | ಕರ್ಮವು |
| ೪೮೭ | ೭ | ಆಭೇದ | ಅಭೇದ |
| ೫೧೧ | ೯ | ಳೌಕಿಕ | ಲೌಕಿಕ |
| ೫೩೨ | ೨೫ | ವಿಸಸಕ್ಕೆ | ವಿರಸಕ್ಕೆ |
| ೫೩೮ | ೧೯ | ಕನಸಾದಿ | ಕನಕಾದಿ |
| ೫೮೧ | ೫ | ಅಖಂಡ್ಡು | ಅಖಂಡ |
| ೫೮೧ | ೧೪ | ನಿನ | ನಿನ್ನ |
| ೫೮೩ | ೧೭ | ಕೂ .... .... .... | ಡಾ ಪತನ |
| ೧೧ | ೧೫ | ಅರಿಯುಲಿಕೆ | ಅರಿಯುಲಿಕ್ಕೆ |
| ೩೦ | ೫ | ಲಕ್ಷದಿಂದ | ಲಕ್ಷಣದಿಂದ |
| ೩೩ | ೨೮ | ಜಾನ | ಜ್ಞಾನ |
| ೪೨ | ೨೧ | ಪಿಯಯಾ | ಪ್ರಿಯಯಾ |
| ೫೯ | ೧೭ | ಅ ಯ | ಅಭಯ |
| ೭೪ | ೨೮ | ತಾನೆ | ತ್ತಾನೆ |
| ೭೮ | ೨೩ | ಜ್ಯೋತಿ | ಜ್ಯೋರ್ತಿ |
| ೯೪ | ೧೦ | ಕ್ರೀಡಾನು | ಕ್ರೀಡನು |
| ೧೦೯ | ೫ | ನಿತ್ಯಂ | ನಿತ್ಯಃ |